**अधिक्षेप** (ಅಧಿಕ್ಷೇಪ್) ಪು. ಆರೋಪ, ದೂಷಣೆ,ನಿಂದೆ, ದೂರು.

**अधी** (ಅಧೀ) ಕ್ರಿ. ವಿ. ಮೊದಲು, ಮುಂಚೆ.

**अधीन** (ಅಧೀನ) ವಿ. ಕೈಕೆಳಗಿನ, ಒಳಪಟ್ಟ, ವಶದಲ್ಲಿಯ,

**–स्थ** (–ಸ್ಥ) ಪು. ಕೈಕೆಳಗಿನ ಹುದ್ದೆದಾರ.

**अधीर** (ಅಧೀರ್) ವಿ. ಸಂ.ತಾಳ್ಮೆ ಇಲ್ಲದ,ಉತ್ಕಂಠಿತ ಕುತೂಹಲವುಳ್ಳವ.

**अधीलमधील** (ಅಧೀಲ್ ಮಧೀಲ್) ವಿ. ನಡುವಿನ ನಡುನಡುವೆ ಒದಗುವ.

**अधीश** (ಅಧೀಶ್) ವಿ. ಅಧಿಪತಿ, ಪ್ರಮುಖ.

**अधुना** (ಅಧುನಾ) ಅವ್ಯಯ. ಸದ್ಯಕ್ಕೆ, ಈಗ.

**अधुरा** ( ಅಧುರಾ) ವಿ. ಅರ್ಧಮರ್ಧ, ಅಪೂರ್ಣ.

**अधुरी** (ಅಧುರೀ) ವಿ. ಉತ್ಸಾಹಿ, ಉತ್ಕಂಠಿತ.

**अधू** (ಅಧೂ) ವಿ. ವ್ಯಂಗವುಳ್ಳವ, ಊನ. ೨. ಮೃದು, ಅಶಕ್ತ.

**अधेला** (ಅಧೇಲಾ) ಪು. ಅರ್ಧದುಡ್ಡು, "ಬಿಲ್ಲಿ" ಪೈಸಾ (ಹಳೆಯ).

**अधेली** (ಅಧೇಲೀ) ಸ್ತ್ರೀ. ಅರ್ಧರೂಪಾಯಿ, ೫೦ಪೈಸೆಯನಾಣ್ಯ.

**अधोक** (ಅಧೋಕ್) ಸ್ತ್ರೀ. ವಿ: ಕುತ್ತಿಲ್ಲದ, ಸುರಕ್ಷಿತ, ನಿರ್ಭಯ.

**अधोगत** (ಅಧೋಗತ್) ವಿ. ಸಂ. ಕೆಟ್ಟ, ಅವನತ, ದುರ್ದೆಸೆಹೊಂದಿದ.

**अधोगति** (ಅಧೋಗತಿ) ಸ್ತ್ರೀ. ಸಂ. ದುರವಸ್ಥೆ, ಕೆಟ್ಟ ಸ್ಥಿತಿ, ಇಳಿತರ, ಅವನತಿ.

**अधोभाग** (ಅಧೋಭಾಗ) ಪು. ಸಂ. (ವೈಯ) ಕೆಳಗಿನ ಭಾಗ, ಬುಡ.

**अधोभुवन** (ಅಧೋಭುವನ) ಪು. ಸಂ. ಪಾತಾಳ.

**अधोमुख** (ಅಧೋಮುಖ್) ವಿ. ಸಂ. ಮೋರೆ ಕೆಳಗೆ ಹಾಕಿದವ, ದುಃಖಿತ, ಚಿಂತಾಗ್ರಸ್ತ.

**अधोली** (ಅಧೋಲೀ) ಸ್ತ್ರೀ. ಅರ್ಧಪಡಿ, (ಕಾಳಿನ ಅಳತೆ).

**अधोवात** (ಅಧೋವಾತ್) ಪು. ಸಂ. ಅಪಾನವಾಯು, ಹೂಸು.

**अध्ययन** (ಅಧ್ಯಯನ) ನ. ಸಂ. ಅಭ್ಯಾಸ, ಓದು, ಪರಿಶೀಲನ.

**अध्यवसाय** (ಅಧ್ಯವಸಾಯ) ಪು. ಸಂ. ಆತ್ಮಜ್ಞಾನ. ೨. ಪ್ರಯತ್ನ.

**अध्यस्त** (ಅಧ್ಯಸ್ತ) ವಿ. ಸಂ. (ವೇದಾಂತದಲ್ಲಿ) ಭ್ರಾಂತಿ ಪೂರ್ಣ, ಮಾಯಾಮೂಲಕ.

**अध्यक्ष** (ಅಧ್ಯಕ್ಷ) ಪು. ಸಂ. ಪ್ರಮುಖ, ಸಭಾಪತಿ, ಪ್ರಭು,.

**अध्यात्म** (ಅಧ್ಯಾತ್ಮ) ವಿ. ಸಂ. ಆತ್ಮಜ್ಞಾನಕ್ಕೆ ಒಳಪಟ್ಟ, ಲೌಕಿಕವಲ್ಲದ. ೨. ನ. ವೇದಾಂತ, ತತ್ವಜ್ಞಾನ.

**अध्यात्मा** (ಅಧ್ಯಾತ್ಮಾ) ಪು. ಸಂ. ಅಂತರಾತ್ಮ.

**अध्यात्मिक** (ಅಧ್ಯಾತ್ಮಿಕ್) ವಿ. ಸಂ. ಆತ್ಮಜ್ಞಾನಕ್ಕೆ ಸಂಬಂಧಿಸಿದ ವೇದಾಂತ.

**अध्यापक** (ಅಧ್ಯಾಪಕ್) ಪು. ಸಂ. ಶಿಕ್ಷಕ, ಕಲಿಸುವವ, ಗುರುವು.

**अध्यादेश** (ಅಧ್ಯಾದೇಶ) ಪು. ಸಂ. ಸರಕಾರೀ ಕಾನೂನು, ಕಾಯಿದೆ, ವಿಧಾನ, ವಿಧಿ.

**अध्यापन** (ಅಧ್ಯಾಪನ್) ನ. ಸಂ. ಶಿಕ್ಷಣ, ಕಲಿಸುವಿಕೆ.

**अध्याय** (ಅಧ್ಯಾಯ) ಪು. ಸಂ. ಪ್ರಕರಣ, ಅಧ್ಯಾಯ, ಸಮುಲ್ಲಾಸ, ವಿಭಾಗ.

**अध्यास** (ಅಧ್ಯಾಸ) ಪು. ಸಂ. (ವೇದಾಂತದಲ್ಲಿ) ಮಾಯಾ ಮೂಲಕ ಅಜ್ಞಾನ, ಭ್ರಮ, ಭ್ರಾಂತಿ, ತಪ್ಪು ತಿಳುವಳಿಕೆ.

**अध्याहार** (ಅಧ್ಯಾಹಾರ) ಪು. ಸಂ. (ವ್ಯಾಕರಣ) ಅಪೂರ್ಣಪದ, ಅಧ್ಯಾಹಾರ, ವಾಕ್ಯದಲ್ಲಿಯ ಬಿಟ್ಟುಹೋದ ಪದ.

**अध्याहृत** (ಅಧ್ಯಾಹೃತ್) ವಿ. ಸಂ. ಹೇಳದೆ ಉಳಿದ, ಅಧ್ಯಾಹೃತ, ಕಲ್ಪನೆಯಿಂದ ತಿಳಿದುಕೊಳ್ಳಬೇಕಾದ.

**अध्रुव** (ಅಧ್ರುವ) ವಿ. ಸಂ. ತಾಳದ, ನಾಶಹೊಂದುವ, ವಿನಾಶಿ, ಭಂಗುರ.

**अध्वर** (ಅಧ್ವರ) ಪು. ಸಂ. ಯಜ್ಞ ಯಾಗಾದಿಕರ್ಮ.

**अध्वर्यु** (ಅಧ್ವರ್ಯು) ಪು. ಸಂ. ಯಜ್ಞಪುರೋಹಿತ. ೨. ಪ್ರಮುಖ.

**अध्वा** (ಅಧ್ವಾ) ಪು. ಸಂ. ರಸ್ತೆ, ಮಾರ್ಗ, ಹಾದಿ.

**अन्** (ಅನ್) (ಪ್ರತ್ಯಯ) –ಸಂ. ನಕಾರದರ್ಶಕ ಉದಾ. (ಅನ್‌ವಾಣೀ ಕಾಲಲ್ಲಿ ಮೆಟ್ಟದೆ). (ಅರ್ಥ– ಅನರ್ಥ).

**अन्** (ಅನ್) ಅವ್ಯಯ (ಮಾತಾಡುವಾಗ) [आणि ಇದರ ಹ್ರಸ್ವರೂಪ]

**अनंग** (ಅನಂಗ್) ಪು. ಸಂ. ಕಾಮದೇವ, ಕಾಮಣ್ಣ, ಪ್ರೇಮದೇವ.

**अनघ** (ಅನಘ) ವಿ. ಸಂ. ನಿಷ್ಪಾಪ, ಒಳ್ಳೆಯವ.

**अनंत** (ಅನಂತ) ವಿ. ಸಂ. ಕೊನೆಯಿಲ್ಲದ, ಶಾಶ್ವತ, ಅನಂತ.

**अनंतर** (ಅನಂತರ) ಕ್ರಿ. ವಿ. ಆಮೇಲೆ, ನಂತರ.

**अनंदक** (ಅನಂದಕ) ವಿ. ಸಂ. ವಾಸಿಸಲಿಕ್ಕೆ ಅಯೋಗ್ಯ (ಮನೆ) ೨. ಹಾನಿಕಾರಕ, ದಕ್ಕದ.

**अनधिकारी** (ಅನಧಿಕಾರೀ) ವಿ. ಸಂ. ಅಧಿಕಾರವಿಲ್ಲದವ, ೨. ಉತ್ತರಾಧಿಕಾರಿಯಿಲ್ಲದವ.

**अनधिगत** (ಅನಧಿಗತ) ವಿ. ಸಂ. ತಿಳಿದುಕೊಳ್ಳದ. ೨. ಪಡೆಯದ, ಕೈಗೆಬಾರದ.

**अनध्याय** (ಅನಧ್ಯಾಯ) ಪು. ಸಂ. (ಅಭ್ಯಾಸ ಅಧ್ಯಯನ) ಇಲ್ಲದ ದಿವಸ.

**अननस** (ಅನನಸ್) ಪು. ಕ. ಅನಾನಸ್. ಮುಳ್ಳು ಹಲಸು.

**अनन्य** (ಅನನ್ಯ) ವಿ. ಸಂ. ಬೇರೊಂದಿಲ್ಲದ, ಅನುಪಮ, ಒಂದೇ ಒಂದು.

**–गति** (–ಗತಿ) ಸ್ತ್ರೀ. ಬೇರೆಕಡೆಗೆ ಆಶ್ರಯ ದೊರೆಯದಂತಹ ಸ್ಥಿತಿ.

**–गतिक** (–ಗತಿಕ) ವಿ. ಹಾದಿತೋಚದವ, ನಿರಾಶ್ರಿತ

**–शरण** (–ಶರಣ) ವಿ. .ಆಧಾರಹೀನ, ಪರದೇಶಿ.

**अनन्वय** (ಅನನ್ವಯ) ಪು. ಸಂ. ಸರಿಹೊಂದಿಕೆ ಇಲ್ಲದಿರುವಿಕೆ, ಅನ್ವಯ ಆಗದಿರುವಿಕೆ.

**अनन्वित** (ಅನನ್ವಿತ) ವಿ. ಸಂ. ಅಸಂಬದ್ಧ, ೨. ತೀರ ಅಯೋಗ್ಯ, ಅತಿಶಯ.

**–छळ** (–ಛಳ್) ಪು. ಅತಿಶಯ ಹಿಂಸೆ, ಕಾಟ.

**अनपत्य** (ಅನಪತ್ಯ) ವಿ. ಸಂ. ಸಂತತಿಯಿಲ್ಲದ.

**अनपराध–धी** (ಅನಪರಾಧ–ಧೀ) ವಿ. ಸಂ. ನಿರ್ದೋಷ ಅಪರಾಧ ಮಾಡದವ.

**अनपाय** (ಅನಪಾಯ) ವಿ. ಸಂ. ಸಂತತ. ೨. ನಿರ್ಭಯ ಗಂಡಾಂತರವಿಲ್ಲದ, ಕ್ಷೇಮಕರ.

**अनपेक्ष** (ಅನಪೇಕ್ಷ) ವಿ. ಸಂ. ಲಾಲಸೆ ಇಲ್ಲದವ, ದುರಾಶಾರಹಿತ.

**अनपेक्षित** (ಅನಪೇಕ್ಷಿತ) ವಿ. ಸಂ. ಒಮ್ಮೆಲೆ ಒದಗಿದ, ನಿರೀಕ್ಷಿಸದೆ ಸಂಭವಿಸದ, ಎದುರು ನೋಡದೆ ಬಂದ.

**अनभिज्ञ** (ಅನಭಿಜ್ಞ) ವಿ. ಸಂ. ಚನ್ನಾಗಿ ತಿಳಿಯದಿದ್ದವ, ಅಪ್ರವೀಣ. ೨. ಅಜ್ಞಾನಿ.

**अनभ्यस्त** (ಅನಭ್ಯಸ್ತ) ಪು. ಸಂ. ರೂಢಿ, ಅಭ್ಯಾಸವಿಲ್ಲದವ, ಹೊಸಬ, ಅನುಭವವಿಲ್ಲದವ.

**अनभ्यास** (ಅನಭ್ಯಾಸ) ಪು. ಸಂ. ರೂಢಿ ಇಲ್ಲದಿರುವಿಕೆ, ಪರಿಪಾಠ ಹೀನತೆ.

**अनमान** (ಅನಮಾನ್) ಪು. ಅನಾದರ. ೨. ಚಿಂತೆ, ಅನುಮಾನ, ಹಿಂದುಮುಂದು ನೋಡುವಿಕೆ. ೩. ತರ್ಕ.

**अनमान धबका** (ಅನಮಾನ್ ಧಬಕಾ) ಪು. ತರ್ಕ, ಕಯಾಸ ಕಟ್ಟುವಿಕೆ. ೨. ಖಂಡಿತವಲ್ಲದ ಮಾತು.

**अनमोल** (ಅನ್‌ಮೋಲ್) ವಿ. ಬಹಳ ಬೆಲೆಬಾಳುವ, ಅಮೂಲ್ಯ.

**अनय** (ಅನಯ) ಪು. ಸಂ. ನೀತಿ ಇಲ್ಲದಿರುವಿಕೆ, ಅವಿನಯ, ಹತೋಟಿ ಇಲ್ಲದಿರುವಿಕೆ.

**अनरसा** (ಅನರಸಾ) ಪು. ಹಿಂ. ಅನಾರಸ, ಒಂದು ಪಕ್ವಾನ್ನ.

**अनर्गल** (ಅನರ್ಗಲ) ವಿ. ಸಂ. ಅನಿಯಂತ್ರಿತ, ಮನಸ್ಸಿಗೆ ಬಂದಂತೆ ಮಾತನಾಡುವವ, ನಡೆಯುವವ.

**अनर्घ्य** (ಅನರ್ಘ್ಯ) ವಿ. ಸ. ಬೆಲೆಕಟ್ಟಲಿಕ್ಕೆ ಬರದ, ಅಮೌಲ್ಯ.

**अनर्थ** (ಅನರ್ಥ) ಪು. ಸಂ. ಕೇಡು, ಹಾನಿ, ಅನಾಹುತ.

**अनर्ह** (ಅನರ್ಹ) ಏ. ಸಂ. ಅಪಾತ್ರ.

**अनलस** (ಅನಲಸ) ವಿ. ಸ. ಬೇಸರಿಕೆಯಿಲ್ಲದವ, ಬೇಸರಿಯದವ, ಆಲಸ್ಯವಿಲ್ಲದವ.

**अनल्प** (ಅನಲ್ಪ) ವಿ. ಸಂ. ಸಾಕಷ್ಟಾದ, ಕಡಿಮೆಯಾಗದ

**अनवधान** (ಅನವಧಾನ್) ನ. ಸಂ. ಅಲಕ್ಷ್ಯ, ಎಚ್ಚರವಿಲ್ಲದಿರುವಿಕೆ, ಉಪೇಕ್ಷೆ, ಗಮನವಿಲ್ಲದಿರುವಿಕೆ.

**अनवधानी** (ಅನವಧಾನೀ) ವಿ. ಸಂ. ಲಕ್ಷಗೊಡದವ, ಜಾಗರೂಕನಲ್ಲದವ.

**अनवरत** (ಅನವರತ) ವಿ. ಅಖಂಡ, ಸಂತತ.

**अनवसर** (ಅನವಸರ) ಪು. ಸಂ. ಹಿ. ಅಯೋಗ್ಯಕಾಲ.

**अनवस्था** (ಅನವಸ್ಥಾ) ಸ್ತ್ರೀ. ಸಂ. (ವೇದಾಂತ) ತಪ್ಪುತರ್ಕ. ೨. ಅನಿರ್ಣಯ. ೩. ಅಸ್ಥಿರತೆ, ೪. ನಿರಾಶ್ರಿತತೆ.

**अनवस्थित** (ಅನವಸ್ಥಿತ್) ಸ್ತ್ರೀ. ಸಂ. ಆಶ್ರಯಹೀನ, ಅಸ್ಥಿರ, ಆಧಾರವಿಲ್ಲದ.

**अनवा** (ಅನವಾ) ವಿ. ತೀರಹೊಸ, ವಿಲಕ್ಷಣ.

**अनवाणा** (ಅನವಣಾ) ವಿ. ಕಾಲಲ್ಲಿ ಮೆಟ್ಟುಇಲ್ಲದವ.

**अनवाणी** (ಅನವಾಣೀ) ಕ್ರಿ. ವಿ. ಬರಿಗಾಲಿನಿಂದ.

**अनवाळ** (ಅನವಾಳ್) ವಿ. ನಿಶ್ಚಿಂತ, ಸ್ವೈರಾಚಾರಿ.

**अनवाळे** (ಅನವಾಳೆ) ನ. ಮಡಿ, ಪೂಜೆಯ ಸಮಯದ ಒಲ್ಲೆ, ವಸ್ತ್ರ.

**अनवेक्षण** (ಅನವೇಕ್ಷಣ) ನ. ಸಂ. ದುರ್ಲಕ್ಷ, ಅನಾದರ.

**अनशन** (ಅನಶನ) ನ. ಸಂ. ಉಪವಾಸ.

**अनशुध** (ಅನಶುಧ್) ಸ್ತ್ರೀ. ತುಪ್ಪ, (ಊಟಕ್ಕೆ ಕುಳಿತಾಗ ಅನ್ನದ ಮೇಲೆ ಬಡಿಸುವ) ಘೃತ 'ಅಭಿಗಾರ'

**अनश्रुत** (ಅನ್‌ಶ್ರುತ್) ವಿ. ಮುಂದೆ ಎಂದೂ ಕಿವಿಗೆ ಬೀಳದ, ಅಪರಿಚಿತ, ವಿಚಿತ್ರ ಸೋಜಿಗದ, ಅದ್ಭುತ.

**अनश्वर** (ಅನಶ್ವರ) ವಿ. ಸಂ. ಎಂದಿಗೂ ಕೆಡದ, ಶಾಶ್ವತ.

**अनसूट** (ಅನಸೂಟ್) ವಿ. ಅನುಚ್ಛಿಷ್ಟ, ಹೊಸ, ಮೂಲ, ಅಖಂಡ. ೨. ಪಾಲು ದೊರೆಯದ. ೩. ವರ್ಷಶ್ರಾದ್ಧದ ಮುನ್ನಾದಿನದ ಶ್ರಾದ್ಧ. ೪. ಭರಣೀಶ್ರಾದ್ಧ, ಪಕ್ಷ.

**अनसूया** (ಅನಸೂಯಾ) ಸ್ತ್ರೀ. ಅತ್ರಿಋಷಿಯ ಪತ್ನಿ, ವಿ. ಮಾತ್ಸರ್ಯವಿಲ್ಲದವಳು.

**अनहित** (ಅನಹಿತ್) ನ. ಕೇಡು ಅಪಾಯ, ಅಹಿತ.

**अनक्षर** (ಅನಕ್ಷರ್) ಬರೆಯಲಿಕ್ಕೆ ಬಾರದ, ನಿರಕ್ಷರ.

**अनाइकी** ( ಅನಾಯಿಕೀ) ಸ್ತ್ರೀ. ಅರಾಜಕತೆ.

**अनाक्रोश** ( ಅನಾಕ್ರೋಶ) ವಿ. ಸದ್ದುಮಾಡದ,ಸಹಜ ಶಾಂತ.

**अनागत** (ಅನಾಗತ) ವಿ. ಸಂ. ಇನ್ನೂ ಸಂಭವಿಸದ, ಭವಿಷ್ಯದಲ್ಲಿಯ.

**अनागम्य** (ಅನಾಗಮ್ಯ) ವಿ. ಸಂ. ದುರ್ಲಭ.

**अनागोंदी** (ಅನಾಗೋಂದೀ) ಸ್ತ್ರೀ. ಕರ್ನಾಟಕದಲ್ಲಿಯ ಆನೆಯಗುಂದಿ ಊರು, ಅವ್ಯವಸ್ಥಿತತನ.

**–कारभार** (–ಕಾರಭಾರ್) ಅಸ್ತಾವ್ಯಸ್ತತೆ, ಅವ್ಯವಸ್ಥೆ, ಗತಿಗೇಡು, ಅರಾಜಕ.

**–जमाखर्च** (–ಜಮಾಖರ್ಚ) ಅವ್ಯವಸ್ಥಿತವಾಗಿ ಬರೆದಿಟ್ಟ ಲೆಕ್ಕ.

**अनाघात** (ಅನಾಘಾತ್) ಕ್ರಿ. ವಿ. ಸಂ. ಅತಿಶಯ, ಲೆಕ್ಕವಿಲ್ಲದ.

**अनाचार** (ಅನಾಚಾರ್) ಪು. ಸಂ. ಕೆಟ್ಟನಡಾವಳಿ, ದುರ್ವರ್ತನೆ, ಕುಕರ್ಮ.

**अनाचारी** (ಅನಾಚಾರೀ) ವಿ. ಸಂ. ಕುಕರ್ಮಿ.

**अनाठाई** (ಅನಾಠಾಯೀ) ವಿ. ಅನಾವಶ್ಯಕ, ನಿಷ್ಪ್ರಯೋಜಕ, ವ್ಯರ್ಥ.

**अनाडी** (ಅನಾಡೀ) ವಿ. ಕೆಲಸಕ್ಕೆಬಾರದ, ಅಕುಶಲ, ಅಶಿಕ್ಷಿತ, ಹುಂಬ.

**अनाथ** (ಅನಾಥ್) ವಿ. ಸಂ. ಅನಾಥ, ದೀನ, ತಾಯಿ ತಂದೆಯಿಲ್ಲದವ.

**अनादर** (ಅನಾದರ್) ಪು. ಸಂ. ಅನಾದರ, ಅಗತ್ಯವಿಲ್ಲದಿರುವಿಕೆ, ದುರ್ಲಕ್ಷ. ೨. ಅಪಮಾನ, ಅವಹೇಲನೆ.

**अनादी** (ಅನಾದೀ) ವಿ. ಸಂ. ಆರಂಭಗೊತ್ತಿಲ್ಲದ, ಅತಿ ಪೂರ್ವಕಾಲದ. ೨. ಹುಟ್ಟದ.

**अनादृत** (ಅನಾದೃತ) ವಿ. ದುರ್ಲಕ್ಷಿಸಿದ, ಅವಹೇಲನೆ ಮಾಡಿದ.

**अनाद्यनंत** (ಅನಾದ್ಯನಂತ) ವಿ. ಹುಟ್ಟುಸಾವು ಇಲ್ಲದ, ಚಿರಸ್ಥಾಯಿ, ಪ್ರಾರಂಭ ಕೊನೆ ಇಲ್ಲದ, ಶಾಶ್ವತ, ಚಿರಂತನ.

**अनापेक्षी** (ಅನಾಪೇಕ್ಷೀ) ವಿ. ಅಪೇಕ್ಷೆಯಿಲ್ಲದ, ನಿರಿಚ್ಛ ಆಸೆಬಡದ.

**अनाप्त** (ಅನಾಪ್ತ) ವಿ. ಸಂ. ಪರಕೀಯ.

**अनाम** (ಅನಾಮ್) ವಿ. ಸಂ. ಹೆಸರಿಲ್ಲದ, ಹೆಸರು ಗೊತ್ತಿಲ್ಲದ. ೨. ಒಂದುದೇಶ. (ವಿಯತ್‌ನಾಮ.)

**अनामत** (ಅನಾಮತ್) ಸ್ತ್ರೀ. ಮುಂಚಿತವಾಗಿಕೊಟ್ಟ, ವಶದಲ್ಲಿರಿಸಿದ ಸೊತ್ತು, ಅನಾಮತಿ, ನ್ಯಾಸ.

**अनामधेय** (ಅನಾಮಧೇಯ) ವಿ.ಸಂ.अनाम ನೋಡಿರಿ.

**अनामय** (ಅನಾಮಯ) ವಿ. ಸಂ. ಆರೋಗ್ಯಕರ.

**अनामिक** (ಅನಾಮಿಕ) ವಿ. ಹೆಸರು ಉಚ್ಚರಿಸಲಿಕ್ಕೆ ಅಯೋಗ್ಯನಾದ, ಅಶುಭ.

**अनामिका** (ಅನಾಮಿಕಾ) ಸ್ತ್ರೀ. ಉಂಗುರದ ಬೆರಳು. ಕಿರಿಬೆರಳಿನ ಬದಿಯ ಬೆರಳು.

**अनायत्त** (ಅನಾಯತ್ತ) ವಿ. ಸಂ. ಸ್ವತಂತ್ರ.

**अनायास** (ಅನಾಯಾಸ್) ಕ್ರಿ. ವಿ. ಅನಾಯಾಸವಾಗಿ, ಸಹಜವಾಗಿ.

**अनाया/से–साने** (ಅನಾಯಾ/ಸೇ–ಸಾನೇ) ಕ್ರಿ. ವಿ. ಅನಾಯಾಸವಾಗಿ.

**अनार** (ಅನಾರ್) ಪು. ನ. ಫಾ. ದಾಳಿಂಬರಹಣ್ಣು, ೨. ಮದ್ದುಗುಂಡು, ಗರ್‌ನಲ್.

**अनारसा** (ಅನಾರಸಾ) ಪು. ಕ. ಅನಾರಸ, अनरसा ನೋಡಿರಿ.

**अनारिसा** (ಅನಾರಿಸಾ) ವಿ. ಬೇರೆ, ಹೊಸಮಾದರಿಯ.

**अनार्य** (ಅನಾರ್ಯ) ವಿ. ಸಂ. ಆರ್ಯನಲ್ಲದವ. ೨. ಮ್ಲೇಂಛ. ೩. ಅಸಂಸ್ಕೃತ.

**अनावड** (ಅನಾವಡ್) ಸ್ತ್ರೀ. ಸೇರದಿರುವಿಕೆ, ತುಚ್ಛ ಭಾವನೆ, ತಿರಸ್ಕಾರ.

**अनावर** (ಅನಾವರ್) ವಿ. ಸೈರಿಸಲಾಗದ. ಅಸಹ್ಯ. ೨. (ಶಕ್ತಿ, ತಾಳ್ಮೆ) ಮೀರಿದ, ಮೀರಿಹೋದ.

**अनावरण** (ಅನಾವರಣ) ನ. ಸಂ. ತೆರೆಯುವಿಕೆ (ತೈಲ ಚಿತ್ರ ಇ.) ಉದ್ಘಾಟನ.

**अनावस्था** (ಅನಾವಸ್ಥಾ) ಸ್ತ್ರೀ. अनवस्था ನೋಡಿರಿ.

**अनावृत** (ಅನಾವೃತ) ವಿ. ಸಂ. ಪ್ರಕಟ, ಸ್ಪಷ್ಟ, ಬಹಿರಂಗವಾದ.

**–पत्र** (–ಪತ್ರ) ನ. ಮುಚ್ಚುಮರೆ ಮಾಡದೆ ಬರೆದ ಪತ್ರ. ೨. ತೆರೆದ, ಅನಾವರಣಹೊಂದಿದ (ಚಿತ್ರ).

**अनावृत्त** (ಅನಾವೃತ್ತ) ವಿ. ಮತ್ತೆ ಮತ್ತೆ ಸಂಭವಿಸದ, ಒದಗದ.

**अनावृष्टि** (ಅನಾವೃಷ್ಟೀ) ಸ್ತ್ರೀ. ಮಳೆಬೀಳದಿರುವಿಕೆ, ಬರ.

**अनास्था** (ಅನಾಸ್ಥಾ) ಸ್ತ್ರೀ. ಉತ್ಸಾಹವಿಲ್ಲದಾಗುವಿಕೆ, ದುರ್ಲಕ್ಷ, ಅವಹೇಲನೆ.

**अनाहार** (ಅನಾಹಾರ) ಪು. ಸಂ. ಉಪವಾಸ.

**अनाहूत** (ಅನಾಹುತ್) ವಿ. ಸಂ. ಆಮಂತ್ರಣವಿಲ್ಲದೆ ಬಂದ, ಆಗಂತುಕ.

**अनिकट** (ಅನಿಕಟ್) ಪು. ಕಂ. ಅಣೆಕಟ್ಟು, ನದಿಗೆ ಹಾಕಿದ ಒಡ್ಡು.

**अनिगा–घा** (ಅನಿಗಾ–ಘಾ) ಸ್ತ್ರೀ. ಫಾ. ದುರ್ಲಕ್ಷ, ಉಪೇಕ್ಷೆ.

**अनिगूत** (ಅನಿಗೂತ್) ಸ್ತ್ರೀ. ಫಾ. अनिगा ನೋಡಿರಿ.

**अनिच्छ** (ಅನಿಚ್ಛ) ವಿ. ಸಂ. ಆಸೆಇಲ್ಲದವ, ಬಯಸದವ.

**अनिच्छा** (ಅನಿಚ್ಛಾ) ಸ್ತ್ರೀ. ಇಚ್ಛೆಯಿಲ್ಲದಿರುವಿಕೆ ೨. ಬೇಡಾಗಿರುವಿಕೆ, ಮನಸ್ಸಿನಲ್ಲಿ ಇಲ್ಲದಿರುವಿಕೆ.

**अनित्य** (ಅನಿತ್ಯ) ವಿ. ಅಸ್ಥಿರ, ಅಶಾಶ್ವತ, ಭಂಗುರ.

**अनिमेष** (ಅನಿಮೇಷ್) ಕ್ರಿ. ವಿ. ಸಂ. ಎವೆಯಿಕ್ಕದೆ. ವಿ. ಎವೆಯಿಕ್ಕದ (ನೋಟ)

**अनिंदित** (ಅನಿಂದಿತ) ವಿ. ಸಂ. ಯಾರೂ ನಿಂದಿಸದಿದ್ದ, ನಿರ್ದೋಷ.

**अनिंद्य** (ಅನಿಂದ್ಯ) ವಿ. ಸಂ. ನಿಂದೆಮಾಡಬಾರದಂತಹ, ಶುದ್ಧ.

**अनियत** (ಅನಿಯತ) ವಿ ಸಂ. ಅನಿಯಮಿತ, ಅನಿಯಮಿತ, ಅನಿಶ್ಚಿತ.

**अनियंत्रित** (ಅನಿಯಂತ್ರಿತ) ವಿ. ಸ. ಅನಿಯಮಿತ, ಹತೋಟಿಯಲ್ಲಿರದ.

**अनिर्णय** (ಅನಿರ್ಣಯ) ಪು. ಸಂ. ಹಿಂದುಮುಂದು ನೋಡುವಿಕೆ, ಹಿಂಜರಿಯುವಿಕೆ.

**अनिर्णित** (ಅನಿರ್ಣಿತ್) ವಿ. ಸಂ. ಗೊತ್ತುಪಡಿಸದ, ಬಗೆಹರಿಯದ, ನಿರ್ಣಯಗೊಳ್ಳದ.

**अनिर्वचनीय** (ಅನಿರ್ವಚನಿಯ) ವಿ. ಸಂ. ಬಣ್ಣಿಸಲಿಕ್ಕೆ ಬಾರದ, ಹೇಳಲಿಕ್ಕೆ ಅಸಾಧ್ಯವಾದ. ೨. ಅವರ್ಣನೀಯ.

**अनिर्वाच्य** (ಅನಿರ್ವಾಚ್ಯ) ವಿ. ಸಂ. अनिर्वचनीय ನೋಡಿರಿ.

**अनिर्वाह** (ಅನಿರ್ವಾಹ) ಪು. ಸಂ. ಕಡೆಗಾಣಿಸಲಿಕ್ಕೆ ಬಾರದೆ ಇರುವ ಪ್ರಸಂಗ, ಪೂರ್ಣಗೊಳಿಸಲಿಕ್ಕೆ ಅಸಾಧ್ಯಮಾತು, ಅನಿರ್ವಾಹ ಪ್ರಸಂಗ.

**अनिर्वाह्य** (ಅನಿರ್ವಾಹ್ಯ) ವಿ. ಸಂ. ದಾಟಿಸಿಕೊಂಡು ಹೋಗಲು ಅಸಾಧ್ಯವಾದ.

**अनिरूद्ध** (ಅನಿರುದ್ಧ) ವಿ. ಸಂ. ಶೂರ, ತಡೆಯಲಿಕ್ಕೆ ಬಾರದ. ೨. ಶ್ರೀಕೃಷ್ಣನ ಮೊಮ್ಮಗ.

**अनिल** (ಅನಿಲ್) ಪು. ಸಂ. ಗಾಳಿ.

**अनिवार** (ಅನಿವಾರ್) ವಿ. ಬಹಳ, ಅತ್ಯಂತ. ೨. ಅಪರಿಹಾರ್ಯ.

**अनिश्चित** (ಅನಿಶ್ಚಿತ್) ವಿ. ಸಂ. ನಿಶ್ಚಯಿಸಿದ, ಗೊತ್ತುಪಡದ, ಖಂಡಿತವಲ್ಲದ. ೨. ಅಸ್ಥಿರ.

**अनिष्ट** (ಅನಿಷ್ಟ) ನ. ಸಂ. ಅಪ್ರಿಯ, ಕೆಟ್ಟ, ಬೇಡಾದ, ದೂಷಿತ.

**अनीती** (ಅನೀತೀ) ಸ್ತ್ರೀ. ಅಸಭ್ಯತೆ, ದುರಾಚಾರ.

**अनीश्वरवाद** (ಅನೀಶ್ವರವಾದ್) ಪು. ಸಂ. ನಾಸ್ತಿಕತೆ.

**अनुकंपनीय** (ಅನುಕಂಪನೀಯ) ವಿ. ಸಂ. ದಯೆಬರುವಂತಹ, ದೀನ.

**अनुकंपा** (ಅನುಕಂಪಾ) ಸ್ತ್ರೀ. ಸಂ. ದಯೆ, ಕರುಣೆ.

**अनुकरण** (ಅನುಕರಣ) ನ. ಸಂ. ಅನುಕರಣ, ನಕಲು.

**अनुकूल** (ಅನುಕೂಲ) ವಿ. ಸಂ. ಅನುಕೂಲ, ಸುಖಕಾರಕ, ಹಿತಾವಹ, ಲಾಭಕಾರಕ.

**अनुकृती** (ಅನುಕೃತೀ) ಸ್ತ್ರೀ. ಸಂ. ನಕಲು, ಅನುಕರಣ.

**अनुक्रम** (ಅನುಕ್ರಮ್) ಪು. ಸಂ. ಅನುಕ್ರಮ, ಆನುಪೂರ್ವಿ, ಪರಿವಿಡಿ.

**अनुक्रमणिका** (ಅನುಕ್ರಮಣಿಕಾ) ಸ್ತ್ರೀ. ಸಂ. ಅನುಕ್ರಮಣಿಕೆ, ಪರಿವಿಡಿ.

**अनुक्रोश** (ಅನುಕ್ರೋಶ) ಪು. ಸಂ. ದಯೆ, ಕರುಣೆ.

**अनुग** (ಅನುಗ್) ಪು. ಸಂ. ಶಿಷ್ಯ, ಅನುಯಾಯಿ, ಸಹಚರ.

**अनुगत** (ಅನುಗತ್) ವಿ. ಸಂ. ಒಡನೆಬಂದ, ಹಿಂಬಾಲಿಸಿಬಂದ.

**अनुगमन** (ಅನುಗಮನ) ನ. ಸಂ. ಪತಿಯೊಂದಿಗೆ ಅಗ್ನಿಪ್ರವೇಶ, ಸತಿ.

**अनुगामी** (ಅನುಗಾಮೀ) ಪು. ಸಂ. ಶಿಷ್ಯ, ಅನುಯಾಯಿ, ಹಿಂಬಾಲಿಸುವವ.

**अनुगुण** (ಅನುಗುಣ) ವಿ. ಸಂ. ಹೊಂದಿಕೆಯಾಗುವ, ಒಪ್ಪುವ, ಶೋಭಿಸುವ, ಯೋಗ್ಯ, ಅನುಕೂಲ.

**अनुगृहीत** (ಅನುಗೃಹೀತ) ವಿ. ಸಂ. ಅನುಗ್ರಹ ಪಡೆದವ.

**अनुग्रह** (ಅನುಗ್ರಹ) ವಿ. ಸಂ. ಕೃಪೆ, ದಯೆ, ಕನಿಕರ, ವರ, ಉಪಕಾರ.

**अनुग्राह्य** (ಅನುಗ್ರಾಹ್ಯ) ವಿ. ಸಂ. ದಯೆಗೆ ಪಾತ್ರ.

**अनुचर** (ಅನುಚರ್) ಪು. ಸಂ. ಹಿಂಬಾಲಿಸುವವ, ಅನುಯಾಯಿ, ಶಿಷ್ಯ.

**अनुचित** (ಅನುಚಿತ್) ವಿ. ಸಂ. ಅಯೋಗ್ಯ.

**अनुच्चारणीय** (ಅನುಚ್ಚಾರಣೀಯ) ವಿ. ಸಂ. ಆಡಿ ತೋರಿಸದಂತಹ (ಮಾತು), ಬೀಭತ್ಸ (ಬೈಗಳು), ಅಶ್ಲೀಲ.

**अनुज** (ಅನುಜ) ಪು. ಸಂ. ತಮ್ಮ, ಬೆನ್ನುಹಿಂದೆ ಹುಟ್ಟಿದವ.

**अनुजीवी** (ಅನುಜೀವೀ) ವಿ. ಸಂ. ದಾಸ, ಆಶ್ರಿತ, ಸೇವಕ.

**अनुतप्त** (ಅನುತಪ್ತ) ವಿ. ಸಂ. ಪಶ್ಚಾತ್ತಾಪ ಹೊಂದಿದವ.

**अनुताप** (ಅನುತಾಪ್) ಪು. ಸಂ. ಪಶ್ಚಾತ್ತಾಪ.

**अनुतापी** (ಅನುತಾಪೀ) ವಿ. ಸಂ. ಪಶ್ಚಾತ್ತಾಪ ಪಡುವವ.

**अनुत्तर** (ಅನುತ್ತರ) ನ. ಸಂ. ಉತ್ತರಕೊಡದಿರುವಿಕೆ, ನಿರುತ್ತರ. ೨. ಮರುಮಾತನಾಡದೆ ಸುಮ್ಮನಿರುವಿಕೆ.

**अनुत्तरित** (ಅನುತ್ತರಿತ) ವಿ. ಸಂ. ಉತ್ತರ ಕೊಡದ (ಪತ್ರ, ಪ್ರಶ್ನೆ)

**अनुत्पादक** (ಅನುತ್ಪಾದಕ) ವಿ. ಸಂ. ಏನೂ ಉತ್ಪನ್ನ ಬರದ, ಲಾಭರಹಿತ.

**अनुत्साह** (ಅನುತ್ಸಾಹ್) ಪು. ಸಂ. ಹುರುಪು ಇಲ್ಲದಿರುವಿಕೆ, ಅನಿಚ್ಛೆ, ಬೇಸರ, ಬೇಜಾರ.

**अनुदात्त** (ಅನುದಾತ್ತ) ವಿ. ಸಂ. ಉದಾತ್ತವಲ್ಲದ, ಸಾಮಾನ್ಯ. ೨. ಹೀನ.

**अनुदान** (ಅನುದಾನ್) ನ. ಸಂ. ಸಹಾಯಾರ್ಥವಾಗಿ ಕೊಟ್ಟಹಣ, ಗ್ರಾಂಟ್.

**अनुदार** (ಅನುದಾರ) ವಿ. ಸಂ. ಕೃಪಣ, ಔದಾರ್ಯ, ದಾಕ್ಷಿಣ್ಯವಿಲ್ಲದವ.

**अनुदिन** (ಅನುದಿನ) ಕ್ರಿ. ವಿ. ಪ್ರತಿದಿವಸ, ನಿತ್ಯ.

**अनुद्भूत** (ಅನುದ್ಭೂತ್) ವಿ. ಸಂ. ಇನ್ನೂ ಪ್ರಕಟವಾಗದ, ಸುಪ್ತ, ಒದಗದ.

**अनुध्यास** (ಅನುಧ್ಯಾಸ) ಪು. ಧ್ಯಾನ.

**अनुध्वनी** (ಅನುಧ್ವನೀ) ಪು. ಸಂ. ಪ್ರತಿಧ್ವನಿ.

**अनुनय** (ಅನುನಯ) ಪು. ಸಂ. ಪ್ರಣಯ, ಪ್ರಿಯಾರಾಧನೆ, "ಮರ್ಜಿ" ಹಿಡಿಯುವಿಕೆ, ರಮಿಸುವಿಕೆ.

**अनुनासिक** (ಅನುನಾಸಿಕ) ವಿ. ಸಂ. (ವ್ಯಾಕರಣ) ಮೂಗಿನಿಂದ ಉಚ್ಚರಿಸಬೇಕಾದ, ಅನುನಾಸಿಕ. (ಉದಾ. ಅಂ. ಕಂ. ಇತ್ಯಾದಿ)

**अनुपकारी** (ಅನುಪಕಾರೀ) ವಿ. ಸಂ. ಉಪಕಾರ ಮಾಡದವ. ೨. ನಿರುಪಯುಕ್ತ.

**अनुपठन** (ಅನುಪಠನ) ನ. ಸಂ. ಹೇಳಿಕೊಟ್ಟ ಪ್ರಕಾರ ಓದುವಿಕೆ.

**अनुपपत्ति** (ಅನುಪಪತ್ತಿ) ಸ್ತ್ರೀ. ಸಂ. (ತರ್ಕಶಾಸ್ತ್ರ) ಅಸಿದ್ಧಿ, ಅಪ್ರಾಮಾಣ್ಯ.

**अनुपपन्न** (ಅನುಪಪನ್ನ) ವಿ. ಸಂ. ಸಿದ್ಧವಾಗದ, ತಲೆದೋರದ.

**अनुपम** (ಅನುಪಮ) ವಿ. ಸಂ. ಅತುಲ್ಯ, ಯಾರೂ ಸರಿಗಟ್ಟದ.

**अनुपमेय** (ಅನುಪಮೇಯ) ವಿ. ಸಂ. ಅನುಪಮ, ದೃಷ್ಟಾಂತವಿಲ್ಲದ.

**अनुपयुक्त** (ಅನುಪಯುಕ್ತ) ವಿ. ಸಂ. ಕೆಲಸಕ್ಕೆ ಬಾರದ, ಪ್ರಯೋಜನವಿಲ್ಲದ.

**अनुपान** (ಅನುಪಾನ) ನ. ಸಂ. ಔಷಧದ ಜೊತೆಗೆ ಕೊಳ್ಳುವ ಹಾಲು, ಜೇನುತುಪ್ಪ, ಇತ್ಯಾದಿ.

**अनुपाय** (ಅನುಪಾಯ) ಪು. ಸಂ. ನಿರುಪಾಯ.

**अनुबंध** (ಅನುಬಂಧ್) ಪು. ಸಂ. ಸಂಬಂಧ. ೨. ಮುಂದುವರಿಯುವಿಕೆ. ೩. ಪರಿಣಾಮ, ಫಲ.
**–ऋणानुबंध** (–ಋಣಾನುಬಂಧ್) ಪು. ಮಿತ್ರತ್ವ.

**अनुभव** (ಅನುಭವ) ಪು. ಸಂ. ಅನುಭವ, ರೂಢಿ, ಮಹಿವಾಟು, ಬಳಕೆ.
**–णे** (–ಣೇ) ಕ್ರಿ. ಧಾ. ಅನುಭವಿಸು.

**अनुभवी** (ಅನುಭವೀ) ವಿ. ಸಂ. ಅನುಭವವುಳ್ಳ, ನುರಿತ.

**अनुभूत** (ಅನುಭೂತ) ವಿ. ಸಂ. ಅನುಭವಿಸಿದ, ಕಂಡ, ಸಿದ್ಧಮಾಡಿದ.

**अनुमत** (ಅನುಮತ್) ವಿ. ಸಂ. ಅಪ್ಪಣೆ ದೊರೆತ, ಒಡಂಬಟ್ಟ, ಮಾನ್ಯತೆಹೊಂದಿದ.

**अनुमती** (ಅನುಮತೀ) ಸ್ತ್ರೀ. ಸಂ. ಮಾನ್ಯತೆ, ಒಡಂಬಡಿಕೆ, ಅನುಜ್ಞೆ.

**अनुमरण** (ಅನುಮರಣ) ನ. ಸಂ. ಸತಿಸಂಸ್ಕಾರ.

**अनुमान** (ಅನುಮಾನ್) ಪು. ಸಂ. ತರ್ಕ, ಕಯಾಸ, ಅಂದಾಜು. ೨. ಹಿಂಜರಿಯುವಿಕೆ.

**–णे** (–ಣೇ) ತರ್ಕಮಾಡು. ೨. ಅನುಮಾನಿಸು, ಹಿಂಜರಿ.

**अनुमोदक** (ಅನುಮೋದಕ್) ವಿ. ಸಂ. ಪುಷ್ಟಿಕೊಡುವವ, ಸಮರ್ಥಕ.

**अनुमोदन** (ಅನುಮೋದನ್) ನ. ಸಂ. ಪುಷ್ಟಿ, ಸಮರ್ಥನ, ಬೆಂಬಲ.

**अनुयायी** (ಅನುಯಾಯೀ) ವಿ. ಸಂ.ಹಿಂಬಾಲಿಸುವವ ಶಿಷ್ಯ.

**अनुरक्त** (ಅನುರಕ್ತ)ವಿ. ಸಂ.ಪ್ರೇಮವುಳ್ಳ,ಒಲುಮೆ, ಅಕ್ಕರವುಳ್ಳವ, ಅನುರಾಗಿ.

**अनुरक्ती** (ಅನುರಕ್ತೀ) ಸ್ತ್ರೀ. ಸಂ. ಪ್ರೀತಿ, ನಲ್ಮೆ.

**अनुरती** (ಅನುರತೀ) ಸ್ತ್ರೀ. ಸ. ಪ್ರೀತಿ, ಅನುರಾಗ.

**अनुरक्षक** (ಅನುರಕ್ಷಕ) ಪು. ಸಂ. ಹಡಗು ಇತ್ಯಾದಿಗಳನ್ನು ರಕ್ಷಿಸುವ ಹಡಗ "ಕನ್‌ವಾಯ್"

**अनुराग** (ಅನುರಾಗ) ಪು. ಪ್ರೇಮ, ನಲ್ಮೆ.

**अनुराधा** (ಅನುರಾಧಾ)ಸ್ತ್ರೀ. ಸಂ. ೧೭ನೆಯ ನಕ್ಷತ್ರ

**अनुरूप** (ಅನುರೂಪ)ವಿ. ಸರಿಹೊಂದುವ,ತಕ್ಕುದಾದ.

**अनुलक्षून** (ಅನೂಲಕ್ಷೂನ್) ಕ್ರಿ. ವಿ. ಕರಿತು, ಬಗ್ಗೆ, ಸಂಬಂಧದಿಂದ.

**अनुलोम** (ಅನುಲೋಮ್) ವಿ. ಸಂ. ಉಚ್ಚಜಾತಿಯ ಪುರುಷ, ನೀಚಜಾತಿಯ ಸ್ತ್ರೀ–ವಿವಾಹ.

**अनुवर्तन** (ಅನುವರ್ತನ) ನ. ಸಂ. ಅನುಕರಣ. ೨. ಪಾಲನ.

**अनुवाद** (ಅನುವಾದ್) ಪು. ಸಂ. ಭಾಷಾಂತರ.

**अनुवास** (ಅನುವಾಸ) ಪು. ಸಂ. ಸುಗಂಧ (ಲೇಪ)

**अनुशासन** (ಅನುಶಾಸನ್) ನ. ಸಂ. .ಆಜ್ಞೆ, ಆದೇಶ.

**अनुषंग** (ಅನುಷಂಗ್) ನ. ಸ. ಸಂಬಂಧ, ಸಂದರ್ಭ.

**अनुष्ठान** (ಅನುಷ್ಠಾನ) ನ. ಸಂ. ವ್ರತಾಚರಣೆ, ಉಪಾಸನೆ.

**अनुसंधान** (ಅನುಸಂಧಾನ) ನ. ಸಂ. ಚಿತ್ತ. ೨. ಯುತಿ. ೩. ಆಖ್ಯಾನ.

**अनुसरण** (ಅನುಸರಣೆ) ನ. ಸಂ. ಅನುಸರಣ, ಪಾಲನ

**अनुसार** (ಅನುಸಾರ್) ಕ್ರಿ. ವಿ.–ಪ್ರಕಾರ–ಅಂತೆ (ಪ್ರತ್ಯಯ)

**अनुस्वार** (ಅನುಸ್ವಾರ್) ಪು. ಸಂ. (ವ್ಯಾಕರಣ) "ಅಂ" ಅಕ್ಷರ.

**अनुज्ञा** (ಅನುಜ್ಞಾ) ಸ್ತ್ರೀ. ಸಂ. ಅಪ್ಪಣೆ, ಆಜ್ಞೆ, ಅನುಮತಿ.

**अनूढ** (ಅನೂಢ್) ವಿ. ಸಂ. ಮದುವೆಯಾಗದ, ಅವಿವಾಹಿತ.

**अनूप** (ಅನೂಪ) ವಿ. ಸಂ. ಅನುಪಮ, ಶ್ರೇಷ್ಠ.

**अनृत** (ಅನೃತ) ನ. ಸಂ. ಅಸತ್ಯ, ಸುಳ್ಳುಮಾತು.

**अनेक** (ಅನೇಕ್) ವಿ. ಸಂ. ಬಹಳ, ಬಹು.

**–वचन** (–ವಚನ್) ಬಹುವಚನ (ವ್ಯಾಕರಣ)

**अनोळखी** (ಅನೋಳಖೀ) ವಿ. ಸಂ. ಅಪರಿಚಿತ, ಗುರುತಿಲ್ಲದವ, ಹೊಸಬ.

**अनौचित्य** (ಅನೌಚಿತ್ಯ) ನ. ಸಂ. ಅಯೋಗ್ಯ ಸಂಗತಿ.

**अन्न** (ಅನ್ನ) ನ. ಸಂ. ಆಹಾರ, ಊಟ, ತಿನಿಸು. ೨. ಆಹಾರ ಪದಾರ್ಥಗಳು ೩. ಆಹಾರಧಾನ್ಯಗಳು.

**–अन्नदशा** (–ಅನ್ನದಶಾ) ಹೊಟ್ಟೆಗೆ ಏನೂ ಸಿಕ್ಕದೆ ಬಳಲುವಿಕೆ.

**–तुटणे** (–ತುಟಣೇ) ಕ್ರಿ. ಊಟ ಕಡಿಮೆ ಯಾಗುವಿಕೆ.

**अन्नाचा किडा** (ಅನ್ನಾಚಾ ಕಿಡಾ) ಹೊಟ್ಟೆಬಾಕ.

**अन्नाचा मारलेला** (ಅನ್ನಾಚಾ ಮಾರಲೇಲಾ) ಹೊಟ್ಟೆಗೆ ಹಾಕಿ ವಶಮಾಡಿಕೊಂಡ.

**अन्नास जागणे** (ಅನ್ನಾಸ ಜಾಗಣೇ) ಉಪಕಾರ ಸ್ಮರಿಸು.

**अन्नास लावणे** (ಅನ್ನಾಸ ಲಾವಣೇ) ಚರಿತಾರ್ಥ ನಡೆಯುವಂತೆ ಮಾಡು, ಕೆಲಸಕ್ಕೆ ಹಚ್ಚು.

**–अंगी लागणे** (–ಅಂಗೀ ಲಾಗಣೇ) ಶರೀರ ಪೋಷಣೆಯಾಗು.

**–दाता** (–ದಾತಾ) ಸ್ವಾಮಿ, ಸಲಹುವವ.

**–पाणी** (–ಪಾಣೀ) ನ. ಆಹಾರ.

**–वस्त्र** (–ವಸ್ತ್ರ) ನ. ಊಟ, ಉಡಿಗೆತೊಡಿಗೆ.

**–संतर्पण** (–ಸಂತರ್ಪಣ) ನ. ಔತಣದ ಊಟ, ಉತ್ಸವಪ್ರಯೋಜನ.

**–सत्र** (–ಸತ್ರ) ಬ್ರಾಹ್ಮಣ, ಬಡಬಗ್ಗರಿಗೆ ಕೊಡುವ ಊಟ.

**अन्नाच्छादन** (ಅನ್ನಾಚ್ಛಾದನ್) ನ. ಸಂ. ಊಟ ಉಡಿಗೆತೊಡಿಗೆ.

**अन्नान्नदशा** (ಅನ್ನಾನ್ನದಶಾ) ಸ್ತ್ರೀ. ಬಡತನ.

**अन्य** (ಅನ್ಯ) ವಿ. ಸಂ. ಬೇರೆ, ಬೇರೆಯುವ, ಪರಕೀಯ.

**अन्यथा** (ಅನ್ಯಥಾ) ಅವ್ಯಯ. ಇಲ್ಲದಿದ್ದರೆ, ಇಲ್ಲದೆ ಹೋದರೆ.

**अन्याय** (ಅನ್ಯಾಯ) ಪು. ಸಂ. ಅನ್ಯಾಯ.

**अन्यायी** (ಅನ್ಯಾಯೀ) ವಿ. ಸಂ. ನ್ಯಾಯಾಚರಣ ವಿಲ್ಲದವ.

**अन्यायोपार्जित** (ಅನ್ಯಾಯೋಪಾರ್ಜಿತ) ವಿ. ಸಂ. ಅನ್ಯಾಯದಿಂದ, ಪಾಪ ಮಾಡಿ, ಮೋಸದಿಂದ, ಪಡೆದ

**अन्याय्य** (ಅನ್ಯಾಯ್ಯ) ವಿ. ಸಂ. ಯೋಗ್ಯವಲ್ಲದ, ಅನ್ಯಾಯದ.

**अन्योक्ती** (ಅನ್ಯೋಕ್ತೀ) ಸ್ತ್ರೀ. ಮರೆಮಾತು. ೨. ಅರ್ಥಾಲಂಕಾರ.

**अन्योन्य** (ಅನ್ಯೋನ್ಯ) ಕ್ರಿ. ವಿ. ಒಬ್ಬರಿಗೊಬ್ಬರು.

**अन्वय** (ಅನ್ವಯ) ಪು. ಸಂ. ಸಂಬಂಧ, ಸಂದರ್ಭ.

**अन्वयी** (ಅನ್ವಯೀ) ವಿ. ಸಂ. ಸಂಬಂಧಿಸಿದ, ಅನ್ವಯಿಸುವ.

**अन्वर्थ–क** (ಅನ್ವರ್ಥ–ಕ) ವಿ. ಸಂ. ಹೆಸರಿಗೆ ತಕ್ಕ, ಯೋಗ್ಯ, ಸಫಲ.

**अन्वित** (ಅನ್ವಿತ) ಪು. ಸಂ. ಸಹಿತ, ಒಡನೆ.

**अन्वेषण** (ಅನ್ವೇಷಣ) ನ. ಸಂ. ಸಂಶೋಧನ.

**अपकार** (ಅಪಕಾರ್) ಪು. ಸಂ. ಕೇಡು, ಹಾನಿ.

**अपकीर्ति** (ಅಪಕೀರ್ತಿ) ಸ್ತ್ರೀ. ಸಂ. ಅಪಕೀರ್ತಿ, ಅಪ್ರತಿಷ್ಠೆ.

**अपंक्त** (ಅಪಂಕ್ತ) ವಿ. ಸಂ. ಪಂಕ್ತಿಗೆ ಕೂಡಿಸಿಕೊಳ್ಳಲು ಯೋಗ್ಯನಲ್ಲದವ, ಕುಲಗೆಟ್ಟವ.

**अपक्रांत** (ಅಪಕ್ರಾಂತ್) ವಿ. ಸಂ. ಮೀರಿಹೋದ.

**अपक्व** (ಅಪಕ್ವ) ವಿ. ಸಂ. ಹಣ್ಣಾಗದ. ೨. ಅನುಭವವಿಲ್ಲದ.

**अपंग** (ಅಪಂಗ್) ವಿ. ಸಂ. ಊನ, ವಿಕೃತ, ಕೈಕಾಲು, ಕಣ್ಣು, ಮುಂ. ಇಲ್ಲದವ.

**अपघात** (ಅಪಘಾತ್) ವಿ. ಸಂ. ಅಕಸ್ಮಾತ್ತಾಗಿ ಒದಗಿದ ಕೇಡು, ಪ್ರಮಾದ.

**अपचय** (ಅಪಚಯ) ಪು. ಸಂ. ಕುಂದು. ೨. ಕ್ಷಯ, ನಾಶ.

**अपचार** (ಅಪಚಾರ) ಪು. ಸಂ. ಪಥ್ಯಪಾಲಿಸದಿರುವಿಕೆ, ಅಪಥ್ಯ.

**अपजय** (ಅಪಜಯ) ಪು. ಸಂ. ಅಪಜಯ, ಪರಾಜಯ, ಅಪಯಶ.

**अपटणे** (ಅಪಟಣೇ) ಕ್ರಿ. ಧಾ. ಅಪ್ಪಳಿಸು.

**अपत्य** (ಅಪತ್ಯ) ನ. ಸಂ. ಸಂತಾನ, ಸಂತತಿ.

**अपत्रपा** (ಅಪತ್ರಪಾ) ಸ್ತ್ರೀ. ಸಂ. ಲಜ್ಜೆ, ನಾಚಿಕೆ.

**अपथ्य** (ಅಪಥ್ಯ) ವಿ. ಸಂ. ಅನಾರೋಗ್ಯಕರ, ಅಹಿತಕರ.

**अपपाठ** (ಅಪಪಾಠ) ಪು. ಸಂ. ತಪ್ಪು ನಕಲು.

**अपप्रयोग** (ಅಪಪ್ರಯೋಗ್) ಪು. ಸಂ. (ವ್ಯಾ) ತಪ್ಪು ಬಳಕೆ, ತಪ್ಪು ಅಭಿವ್ಯಕ್ತಿ.

**अपभाषण** (ಅಪಭಾಷಣ) ನ. ಸಂ. ಅಯೋಗ್ಯ ಭಾಷಣ.

**अपभ्रंश** (ಅಪಭ್ರಂಶ್) ಪು. ಸಂ. ತಪ್ಪು ರೂಪದಲ್ಲಿಯ (ಶಬ್ದ) ೨. ಅಪಭ್ರಂಶ ನುಡಿ.

**अपमान** (ಅಪಮಾನ) ಪು. ಸಂ. ಅಪಮಾನ.

**अपमृत्यु** (ಅಪಮೃತ್ಯು) ಪು. ಸಂ. ದುರದೃಷ್ಟದ ಸಾವು, ದುರಂತ, ಅಕಾಲ ಮರಣ.

**अपयश** (ಅಪಯಶ) ನ. ಸಂ. ಪರಾಜಯ, ಸೋಲು.

**अपयशी** (ಅಪಯಶೀ) ವಿ. ಅಪಕೀರ್ತಿ ಬರುವಂತಹ, ಅಕೀರ್ತಿಕರ.

**अपर** (ಅಪರ) ವಿ. ಸಂ. ಅನ್ಯ, ಬೇರೊಂದು, ಬೇರೊಬ್ಬ

**अपरंपार** (ಅಪರಂಪಾರ್) ವಿ. ಬಹಳ, ಅತಿಶಯ.

**अपराजित** (ಅಪರಾಜಿತ್) ವಿ. ಸಂ. ಸೋಲದ, ಯಶಸ್ವಿ.

**अपराजिता** (ಅಪರಾಜಿತಾ) ಸ್ತ್ರೀ. ಸಂ. ೧. ದುರ್ಗಾದೇವಿ. ೨. ಈಶಾನ್ಯದಿಕ್ಕು.

**अपरान्ह** (ಅಪರಾನ್ಹ) ಪು. ಸಂ. ಅಪರಾಹ್ನ, ನಡುಹಗಲಿನಿಂದ ಸಂಜೆಯ ವರೆಗಿನ ಪ್ರಹರ, ಕಾಲ.

**अपरात्र** (ಅಪರಾತ್ರ) ಸ್ತ್ರೀ. ಮಧ್ಯರಾತ್ರಿಯ ನಂತರದ ಕಾಲ.

**अपराध** (ಅಪರಾಧ್) ಪು. ಸಂ. ಅಪರಾಧ, ತಪ್ಪು.

**अपराधी** (ಅಪರಾಧೀ) ವಿ. ಸಂ. ತಪ್ಪು ಮಾಡಿದವ, ಅಪರಾಧಿ.

**अपरिचित** (ಅಪರೀಚಿತ್) ವಿ. ಸಂ. ಗುರುತಿಲ್ಲದ, ಪರಿಚಯವಿಲ್ಲದ.

**अपरिमित** (ಅಪರಿಮಿತ) ವಿ. ಸಂ. ಬಹಳ, ವಿಪರೀತ.

**अपरिहार्य** (ಅಪರಿಹಾರ್ಯ) ವಿ. ಸಂ. ತಪ್ಪಿಸಲಿಕ್ಕೆ ಬಾರದ, ತಪ್ಪದ.

**अपरीक्षित** (ಅಪರೀಕ್ಷಿತ್) ವಿ. ಸಂ. ಪರಿಕ್ಷೆಮಾಡದ.

**अपरूप** (ಅಪರೂಪ) ವಿ. ಸಂ. ವಿಚಿತ್ರ. ೨. ಅಪರೂಪ, ಬೆಲೆಬಾಳುವ.

**अपरोक्ष** (ಅಪರೋಕ್ಷ) ವಿ. ಸಂ.(ಮೂಲ ಸಂಸ್ಕೃತದಲ್ಲಿ) ಪ್ರತ್ಯಕ್ಷವಾಗಿ. (ಮರಾಠಿಯಲ್ಲಿ) ಬೆನ್ನುಹಿಂದೆ, ಅಪ್ರತ್ಯಕ್ಷವಾಗಿ.

**–ज्ञान** (–ಜ್ಞಾನ್) ನ. ಆಧ್ಯಾತ್ಮಿಕಜ್ಞಾನ.

**अपलाप** (ಅಪಲಾಪ) ಪು. ಸಂ. ಮಿಥ್ಯಾಚಾರ, ಅಸತ್ಯ ಭಾಷಣ, ಉಕ್ತಿ.

**अपवर्ग** (ಅಪವರ್ಗ) ಪು. ಸಂ. ಮೋಕ್ಷ.

**अपवाद** (ಅಪವಾದ) ಪು. ಸಂ. ನಿಂದೆ, ಅಸತ್ಯ ಅಭಿಪ್ರಾಯ. ೨. ನಿಯಮದ ವಿರುದ್ಧವಿದ್ದ ಸಂಗತಿ.

**अपवित्र** (ಅಪವಿತ್ರ) ವಿ. ಸಂ. ಅಪವಿತ್ರ, ಅಶುದ್ಧ, ಮೈಲಿಗೆಯುಳ್ಳ.

**अपव्यय** (ಅಪವ್ಯಯ) ಪು. ಸಂ. ವ್ಯರ್ಥವೆಚ್ಚ, ಅಯೋಗ್ಯ, ವಿನಿಯೋಗ, ದುಂದುಗಾರಿಕೆ.

**अपव्ययी** (ಅಪವ್ಯಯೀ) ವಿ. ಸಂ. ದುಂದುಗಾರ.

**अपशकुन** (ಅಪಶಕುನ) ಪು. ಸಂ. ಕೆಟ್ಟ ಶಕುನ.

**अपशब्द** (ಅಪಶಬ್ದ) ಪು. ಸಂ. ನಿಂದೆ, ಅಪಕೀರ್ತಿ, ದೋಷಾರೋಪಣೆ.

**अपसरण** (ಅಪಸರಣ) ನ. ಸಂ. ಬದಿಗೆ ಇರುವಿಕೆ, ಅಸಾಮರಸ್ಯ, ಉದಾಸೀನತೆ.

**अपसव्य** (ಅಪಸವ್ಯ) ವಿ. ಸಂ. ಬಲಬದಿಗೆ. ೨. ಜನಿವಾರವನ್ನು ಬಲದಿಂದ ಎಡಕ್ಕೆ ಹಾಕುವಿಕೆ.

**सव्यापसव्य** (ಸವ್ಯಾಪಸವ್ಯ) ಒಂದೇಮಾತನ್ನು ಹಾಗೊಮ್ಮೆ ಹೀಗೊಮ್ಮೆ ಮಾಡುವಿಕೆ, ಅನಿಯಮಿತತನ, ತೊಂದರೆ.

**अपसात** (ಅಪಸಾತ್) ಕ್ರಿ. ವಿ. ತಮ್ಮತಮ್ಮೊಳಗೆ (ಕೋರ್ಟು ಕಚೇರಿಮಾಡದೆ)

**अपसिद्धांत** (ಅಪಸಿದ್ಧಾಂತ) ಪು. ಸಂ. ತಪ್ಪು ತತ್ವ.

**अपसु–सू–क** (ಅಪಸು–ಸೂ–ಕ್) ಕ್ರಿ. ವಿ. ತಾನೇ, (ಹೇಳಿಸಿಕೊಳ್ಳದೆ)

**अपसूर** (ಅಪಸೂರ್) ಪು. ಕೆಟ್ಟದನಿ, ಅನಿಷ್ಟ ಮಾತು (ಲಾ)

**अपसृत** (ಅಪಸೃತ) ವಿ. ಸಂ. ಬದಿಗೆ ಸರಿದ, ಇಲ್ಲವಾದ.

**अपस्मार** (ಅಪಸ್ಮಾರ್) ಪು. ಸಂ. ಸನ್ನಿಪಾತ, ಮಲರೋಗ.

**अपहरण** (ಅಪಹರಣ) ನ. ಸಂ. ಸೆಳೆದುಕೊಂಡು ಹೋಗುವಿಕೆ, ಅಪಹರಣ. ೨. ಓಡಿಸಿಕೊಂಡು ಹೋಗುವಿಕೆ.

**अपहर्ता** (ಅಪಹರ್ತಾ) ಪು. ಸಂ. ಅಪಹರಣಮಾಡುವವ.

**अपहार** (ಅಪಹಾರ್) ಪು. ಸಂ. ಅಪಹರಣ. ೨. ಅನ್ಯಾಯದಿಂದ ಕೈವಶಪಡಿಸಿಕೊಳ್ಳುವಿಕೆ.

**अपह्नुती** (ಅಪಹ್ನುತೀ) ಸ್ತ್ರೀ. ಬಚ್ಚಿಡುವಿಕೆ, ೨. ಒಂದು ಅರ್ಥಾಲಂಕಾರ.

**अपळे** (ಅಪಳೇ) ವಿ. ಪ್ರಸೂತಿಯು ಗೊತ್ತಾದ ದಿನಕ್ಕಿಂತ ಮುಂಚಿತವಾಗಿ ಹುಟ್ಟಿದ.

**अपक्ष** (ಅಪಕ್ಷ) ವಿ. ಸಂ. ತಟಸ್ಥ, ಅಪಕ್ಷಪಾತಿ.

**अपक्षपाती** (ಅಪಕ್ಷಪಾತಿ) ವಿ. ಸಂ. अपक्ष ನೋಡಿರಿ.

**अपक्षय** (ಅಪಕ್ಷಯ) ಪು. ಸಂ. ಹ್ರಾಸ, ನಾಶ.

**अपा–प्पा** (ಅಪಾ–ಪ್ಪಾ) ಪು. ಕ. ಹಿರಿಯರ ಅಥವಾ ಪ್ರೀತಿಯ ಅಭಿಧಾನ.

**अपांग** (ಅಪಾಂಗ್) ವಿ. ಸಂ. ಓರೆ (ನೋಟ) ೨. ವಿಕಲ, ಊನ, ಅಪಂಗ.

**अपाड** (ಅಪಾಡ್) ವಿ. ಬಹಳ, ಅತಿಶಯ.

**अपात्र** (ಅಪಾತ್ರ) ವಿ. ಸಂ. ಅಯೋಗ್ಯ.

**अपादान** (ಅಪಾದಾನ್) ನ. ಸಂ. ಅಗಲುವಿಕೆ.

**अपान** (ಅಪಾನ್) ಪು. ಸಂ. ಗುದದ್ವಾರ. ೨. ಗುದದ್ವಾರಗತ ವಾಯು, ಹೂಸು.

**अपाप** (ಅಪಾಪ್) ವಿ. ಸಂ. ನಿಷ್ಪಾಪ, ಸಭ್ಯ.

**अपांपती** (ಅಪಾಂಪತಿ) ಸಂ. ಪು. ವರುಣ ೨. ಸಮುದ್ರರಾಜ.

**अपाय** (ಅಪಾಯ) ಪು. ಸಂ. ಕುತ್ತು, ಕೇಡು, ಹಾನಿ, ಅರಿಷ್ಟ.

**अपायू** (ಅಪಾಯೂ) ಪು. ಗುದದ್ವಾರ ಕುಂಡಿ, ಮುಕುಳಿ.

**अपार** (ಅಪಾರ್) ಬಹಳ, ಅತಿಶಯ.

**अपारदर्शक** (ಅಪಾರದರ್ಶಕ) ವಿ. ಸಂ. ಪಾರದರ್ಶಕವಲ್ಲದ, ಮಸುಕಾದ.

**अपालिपा** (ಅಪಾಲಿಪಾ) ಪು. ಕಣ್ಣು ಮುಚ್ಚಣಿಕೆಯ ಆಟ.

**अपाव** (ಅಪಾವ್) ಪು. अपाय ನೋಡಿರಿ.

**अपुत्री–क** (ಅಪುತ್ರಿ–ಕ) ವಿ. ಸಂ. ಸಂತಾನವಿಲ್ಲದ, ನಿಪುತ್ರಿಕ.

**अपुरता** (ಅಪುರತಾ) ವಿ. ಸಾಲದ, ಸಾಕಷ್ಟಿಲ್ಲದ.

**अपुरा** (ಅಪುರಾ) ಸಾಲದ, ಅಪರ್ಯಾಪ್ತ.

**अपूर्ण** (ಅಪೂರ್ಣ) ವಿ. ಅರ್ಧಮರ್ಧ. ೨. ಮುಗಿಯದ, ಕೊನೆಗಾಣದ, ಕೊನೆಗಾಣಿಸದ, ಮುಗಿಸದ.

**अपूर्णांक** (ಅಪೂರ್ಣಾಂಕ್) ಪು. ಸಂ. ಒಂದರಭಾಗ ($\frac{೧}{೨}$, $\frac{೧}{೫}$ ಇತ್ಯಾದಿ.)

**अपूर्व** (ಅಪೂರ್ವ) ವಿ. ಸಂ. ಮುಂಚೆ ಎಂದೂ ಕಂಡಿರದ, ಆಶ್ಚರ್ಯಕಾರಕ.

**अपूर्वाई** (ಅಪೂರ್ವಾಈ) ಸ್ತ್ರೀ. ಕುತೂಹಲ, ಕೌತುಕ, ಅಚ್ಚರಿ.

**अपूस** (ಅಪೂಸ್) ಪು. ಅಲ್ಫಾನ್ಸೋ ಜಾತಿಯ ಮಾವಿನಹಣ್ಣು.

**अपृष्ठवंशीय** (ಅಪೃಷ್ಠವಂಶೀಯ) ವಿ. ಸಂ. ಬೆನ್ನುಹುರಿಯಿಲ್ಲದ (ಪ್ರಾಣಿಗಳು)

**अपेश** (ಅಪೇಶ್) ನ. अपयश ನೋಡಿರಿ.

**अपेशी** (ಅಪೇಶೀ) ವಿ. ಅಕೀರ್ತಿಕಾರಕ, ಹಾಳು, ದರಿದ್ರ.

**अपेष्टा** (ಅಪೇಷ್ಟಾ) ಸ್ತ್ರೀ. ದುಃಖ, ಕಷ್ಟ, ಸಂಕಟ. **हाल–** (ಹಾಲ್–) ಸ್ತ್ರೀ. (ಬಹುವಚನ) ದುಃಖ, ಪೀಡೆ, ಕುತ್ತು, ತೊಳಲಾಟ.

**अपेक्षा** (ಅಪೇಕ್ಷಾ) ಸ್ತ್ರೀ. ಸಂ. ಆಸೆ, ಇಚ್ಛೆ, ಬಯಕೆ, ಎದುರು ನೋಡುವಿಕೆ ೨. ಹಾದಿ-ದಾರಿ-ಕಾಯುವಿಕೆ.

**अपेक्षित** (ಅಪೇಕ್ಷಿತ) ವಿ. ಸಂ. ಅನಿಸಿದ, ಇಚ್ಛಿಸಿದ, ಎದುರು ನೋಡಿದ.

**अपैशुन** (ಅಪೈಶುನ್) ನ. ಸಂ. ಸಭ್ಯತೆ, ಸದಾಚಾರ.

**अपोशन** (ಆಪೋಶನ್) ನ. ಸಂ. (ಊಟವಾದ ಬಳಿಕ ಮಾಡುವ) ಆಚಮನ.

**अपोष्णी** (ಆಪೋಷ್ಣೀ) ಸ್ತ್ರೀ. अपोशन ನೋಡಿರಿ.

**अपौरु/ष–षेय** (ಅಪೌರು/ಷ–ಷೇಯ) ವಿ. ಸಂ. ದೈವೀ, ದೇವಪ್ರಣೀತ, ಅಲೌಕಿಕ.

**अप्पाधप्पा** (ಅಪ್ಪಾಧಪ್ಪಾ) ಪು. ಒಂದು ಆಟ, ನೂಕಿಸಿ ಆಡುವ ಆಟ.

**अप्रकट** (ಅಪ್ರಕಟ್) ವಿ. ಸಂ. ಗುಪ್ತ, ಬಹಿರಂಗವಾಗದ.

**अप्रकांडकथा** (ಅಪ್ರಕಾಂಡಕಥಾ) ಸ್ತ್ರೀ. ಹುಚ್ಚುಹರಟೆ, ತಿರುಳಿಲ್ಲದ ಮಾತು.

**अप्रकृत** (ಅಪ್ರಕೃತ್) ವಿ. ಸಂ. (ಸದ್ಯದ) ವಿಷಯಕ್ಕೆ ಸಂಬಂಧಿಸದ, ಅಸಂಬದ್ಧ, ಅಬದ್ಧ.

**अप्रगल्भ** (ಅಪ್ರಗಲ್ಭ) ವಿ. ಸಂ. ಪೂರ್ಣವಾಗಿ ಬೆಳೆಯದ, ಅಪಕ್ವ. ೨. ಬಾಲಿಶ, ಹುಡುಗತನ.

**अप्रतिबंध** (ಅಪ್ರತಿಬಂಧ್) ವಿ. ಸಂ. ಯಾವ ಪ್ರತಿಬಂಧವೂ ಇರದ, ಅವ್ಯಾಹತ, ತಡೆಯಿಲ್ಲದ.

**अप्रतिम** (ಅಪ್ರತಿಮ) ವಿ. ಸಂ. ಅತ್ಯುತ್ತಮ, ಅತುಲ್ಯ, ಯಾರೂ ಸರಿಗಟ್ಟಲಾರದ.

**अप्रतिष्ठा** (ಅಪ್ರತಿಷ್ಠಾ) ಸ್ತ್ರೀ. ಸಂ. ಅಪಮಾನ, ಅವಮಾನ, ಮಾನಹಾನಿ.

**अप्रतीती** (ಅಪ್ರತೀತೀ) ಸ್ತ್ರೀ. ಸಂ. ಅನುಭವ ಪ್ರಮಾಣ ಇವು ಇಲ್ಲದಿರುವಿಕೆ.

**अप्रत्यय** (ಅಪ್ರತ್ಯಯ) ಪು. ಸಂ. अप्रतीती ನೋಡಿರಿ.

**अप्रत्यक्ष** (ಅಪ್ರತ್ಯಕ್ಷ) ವಿ. ಸಂ. ಹಿಂದಿನಿಂದ, ಮರೆಯಾಗಿ.

**अप्रबुद्ध** (ಅಪ್ರಬುದ್ಧ) ವಿ. ಸಂ. ಅಜಾಗ್ರತ, ಅಪಕ್ವ, ಅಪ್ರೌಢ, ವಯಸ್ಸಿಗೆ ಬಂದಿರದ, ತಿಳುವಳಿಕೆ ಇಲ್ಲದ.

**अप्रमत्त** (ಅಪ್ರಮತ್ತ) ವಿ. ಸಂ. ಜಾಗರೂಕ, ದಕ್ಷ.

**अप्रमाण** (ಅಪ್ರಮಾಣ) ವಿ. ಸಂ. ಆಧಾರವಿಲ್ಲದ, ಸಿದ್ಧವಾಗದ.

**अप्रमाद** (ಅಪ್ರಮಾದ್) ವಿ. ಸಂ. ನಿರ್ದೋಷ.

**अप्रमेय** (ಅಪ್ರಮೇಯ) ವಿ. ಸಂ. ಅಳೆಯಲಿಕ್ಕೆ ಬಾರದ, ಪ್ರಚಂಡ.

**अप्रयोजक** (ಅಪ್ರಯೋಜಕ) ವಿ. ಸಂ. ಪ್ರಯೋಜನವಿಲ್ಲದ, ನಿರರ್ಥಕ.

**अप्रवीण** (ಅಪ್ರವೀಣ) ವಿ. ಸಂ. ಕೆಲಸಬಾರದ, ನಿಪುಣನಲ್ಲದ.

**अप्रशस्त** (ಅಪ್ರಶಸ್ತ) ವಿ. ಸಂ. ಸರಿಯಲ್ಲದ, ಅಯೋಗ್ಯ, ಅನುಚಿತ.

**अप्रसन्न** (ಅಪ್ರಸನ್ನ) ವಿ. ಸಂ. ದುಃಖಿತ, ಅಸಂತುಷ್ಟ

**अप्रसिद्ध** (ಅಪ್ರಸಿದ್ಧ) ವಿ. ಸಂ. ಯಾರಿಗೂ ಗೊತ್ತಿರದ, ರೂಢಿಯಲ್ಲಿರದ.

**अप्रस्तुत** (ಅಪ್ರಸ್ತುತ) ವಿ. ಸಂ. (ವಿಷಯಕ್ಕೆ) ಸಂಬಂಧ ಪಡದ.

**अप्राप्त** (ಅಪ್ರಾಪ್ತ) ವಿ. ಸಂ. ಕೈಗೆಬರದ, ನಿಲುಕದ, ದೊರೆಯದ.

**अप्राप्य** (ಅಪ್ರಾಪ್ಯ) ವಿ. ಸಂ. ಸಂಪಾದಿಸಲಿಕ್ಕೆ ಅಸಾಧ್ಯವಾದ.

**अप्रामाणिक** (ಅಪ್ರಾಮಾಣಿಕ) ವಿ. ಸಂ. ವಿಶ್ವಾಸಕ್ಕೆ ಯೋಗ್ಯನಲ್ಲದ

**अप्रामाण्य** (ಅಪ್ರಾಮಾಣ್ಯ) ನ. ಸಂ. ಅಸತ್ಯತೆ.

**अप्रासंगिक** (ಅಪ್ರಾಸಂಗಿಕ) ವಿ. ಸಂ. (ಪ್ರಸ್ತುತ ವಿಷಯಕ್ಕೆ) ಸಂಬಂಧಿಸದ ಪ್ರಾಪ್ತ, ಪ್ರಸಂಗಕ್ಕೆ ಸರಿಬಾರದ.

**अप्रास्ताविक** (ಅಪ್ರಾಸ್ತಾವಿಕ್) ವಿ. ಸಂ. ಅಪ್ರಸ್ತುತ

**अप्रिय** (ಅಪ್ರಿಯ) ವಿ. ಸಂ. ಸೇರದ, ಅಪ್ರಿಯ.

**अप्रीती** (ಅಪ್ರಿತೀ) ಸ್ತ್ರೀ. ದ್ವೇಷಭಾವ, ತಿರಸ್ಕಾರ.

**अप्रौढ** (ಅಪ್ರೌಢ) ವಿ. ಸಂ. ವಯಸ್ಸಿಗೆ ಬರದ.

**अप्सरा** (ಅಪ್ಸರಾ) ಸ್ತ್ರೀ. ಸಂ. ಸ್ವರ್ಗಲೋಕದ ಸುಂದರಿ. ೨. ಲಾವಣ್ಯವತಿ.

**अफरातफर** (ಅಫರಾತಫರ್) ಸ್ತ್ರೀ. ಹಣಕಾಸಿನ ದುರ್ವ್ಯವಹಾರ, ಅಪಹಾರ.

**अफल** (ಅಫಲ್) ವಿ. ಸಂ. ನಿಷ್ಫಲ.

**अफलाक** (ಅಫಲಾಕ್) ಕ್ರಿ. ವಿ. ನಡುಆಕಾಶದಲ್ಲಿ, ನಿರಾಧಾರವಾಗಿ

**अफलाकांक्षी** (ಅಫಲಾಕಾಂಕ್ಷೀ) ವಿ. ಸಂ. ಕರ್ಮದ ಪ್ರತಿಫಲವನ್ನು ಕೋರದವ.

**अफलातून** (ಅಫಲಾತೂನ್) ಪು. ಅರ. ಅರಿಸ್ಟಾಟಲ್ ೨. (ಲಾ) ವಿದ್ವಾಂಸ.

**अफलाद** (ಅಫಲಾದ್) ಸ್ತ್ರೀ. ಮಗಳ ಬದಿಯಿಂದ ದೌಹಿತ್ರ-ಸಂತತಿ.

**अफवा** (ಅಫವಾ) ಸ್ತ್ರೀ. ಫಾ. ಕಿಂವದಂತಿ, ಕೇಳು ಮಾತು, ಹಾರುಸುದ್ಧಿ.

**अफाट** (ಅಫಾಟ್) ವಿ. ಅತಿಶಯ, ವಿಪರೀತ.

**अफिण्या** (ಅಫಿಣ್ಯಾ) ವಿ. ಅಫುಬಡಕ, ಅಫೀಮು ಸೇವನೆ ಮಾಡುವವ.

**अफीम** (ಅಫೀಮ್) ಸ್ತ್ರೀ. ಫಾ. ಅಫು, ಅಫೀಮು.

**अफू** (ಅಫೂ) ಸ್ತ್ರೀ. ಫಾ. ಆಫು, ಅಫೀಮು.

**अबकारी** (ಅಬಕಾರೀ) ವಿ. ಫಾ. ಮಾದಕ ವಸ್ತು ಗಳ ಮೇಲಿನ (ಕರ).

**अबदागिऱ्या** (ಅಬ್ದಾಗಿರ್ಯಾ) ಪು. ಫಾ. ಛತ್ರಹಿಡಿ ಯುವ ಸೇವಕ, ಅಬ್ದಾಗಿರಿ.

**अबदागीर** (ಅಬ್ದಾಗೀರ) ಪು.ಫಾ. ಛತ್ರ, ಸರದಾರರ ತಲೆಯ ಮೇಲೆ ಹಿಡಿಯುವ ಕೊಡೆ, ಆತಪತ್ರ.

**अबब** (ಅಬಬ) ಅ. ಅಬ್ಬಬ್ಬ! ಓಹೋ.

**अबलख** (ಅಬಲಖ್) ವಿ. ಅರ. ಪಂಚಕಲ್ಯಾಣಿ (ಕುದುರೆ)

**अबला** (ಅಬಲಾ) ಸ್ತ್ರೀ. ಸಂ. ಹೆಣ್ಣು, ಸ್ತ್ರೀ.

**अबादी आबाद** (ಅಬಾದೀ ಆಬಾದ್) ಸ್ತ್ರೀ. ಸುಖ, ಸಮೃದ್ಧಿ, ಸುಭಿಕ್ಷ.

**अबाधित** (ಅಬಾಧಿತ್) ವಿ. ಸಂ. ಅಡೆತಡೆಯಿಲ್ಲದ, ಸುರಕ್ಷಿತ.

**अबाशाई** (ಅಬಾಶಾಈ) ವಿ. ತಿಳಿಗೆಂಪು.

**अबोल** (ಅಬೋಲ್) ವಿ.ಮಾತನಾಡದ, ಸುಮ್ಮನಿದ್ದ.

**अबोला** (ಅಬೋಲಾ) ಪು. ಮಾತುಕತೆ ಬಿಡುವಿಕೆ, (ನಲ್ಮೆಯ) ಮೌನ.

**अबोली** (ಅಬೋಲೀ) ಸ್ತ್ರೀ. ಕಿತ್ತಳೆಯ ಬಣ್ಣದ ಒಂದು ಹೂವು. ಪು. ತಿಳಿಕಿತ್ತಳೆ ಬಣ್ಣ.

**अब्ज** (ಅಬ್ಜ) ನ. ಸಂ. ಕಮಲ ೨. ನೂರು ಕೋಟಿ.

**अब्धी** (ಅಬ್ಧೀ) ಪು. ಸಂ. ಸಮುದ್ರ.

**अब्रू** (ಅಬ್ರೂ) ಸ್ತ್ರೀ. ಫಾ. ಮರ್ಯಾದೆ, ಮಾನ.
 **–दार** (–ದಾರ್) ಮರ್ಯಾದಸ್ಥ, ಮಾನವಂತ.

**अब्रूपत्र** (ಅಭ್ರೂಪತ್ರ) ನ. ಒಳ್ಳೆಯ ನಡತೆಯ ಶಿಫಾರಸು.

**अब्रह्मण्यम्** (ಅಬ್ರಹ್ಮಣ್ಯಮ್) (ಉದ್ಗಾರ) ಸಂ. ಬ್ರಾಹ್ಮಣರಿಗೆ, ಧರ್ಮಕ್ಕೆ, ಸಂಕಟ (ಬಂದಿತು)

**अभक्ति** (ಅಭಕ್ತಿ) ಸ್ತ್ರೀ. ಸಂ. ಭಕ್ತಿ, ವಿಶ್ವಾಸ ಇಲ್ಲ ದಿರುವಿಕೆ.

**अभंग** (ಅಭಂಗ್) ಪು. ಸಂ. ಅಭಂಗ ಪದ, ಹಾಡು, ವಿ. ಅಭಂಗುರ.

**अभद्र** (ಅಭದ್ರ) ವಿ. ಸಂ. ಅಮಂಗಲ, ಅಶುಭ.

**अभय** (ಅಭಯ) ನ. ಸಂ. ನಿರ್ಭಯ, ಸಂರಕ್ಷಣ.
 **–प्रदान** (–ಪ್ರದಾನ) ನ. ಅಭಯದಾನ.
 **–मुद्रा** (–ಮುದ್ರಾ) ಸ್ತ್ರೀ. ಸಂರಕ್ಷಣೆಯ ದೃಷ್ಟಿ.
 **–हस्त** (–ಹಸ್ತ) ಪು. ಸಂರಕ್ಷಣೆಯ ಅಭಿವಚನ.

**अभयंकर** (ಅಭಯಂಕರ) ವಿ. ಸಂ. ಉಗ್ರನಲ್ಲದ, ಸೌಮ್ಯ

**अभर्तृका** (ಅಭರ್ತೃಕಾ) ಸ್ತ್ರೀ. ಸಂ. ವಿಧವೆ.

**अभक्षणीय** (ಅಭಕ್ಷಣೀಯ) ವಿ. ಸಂ. ತಿನ್ನಲಿಕ್ಕೆ ಅಯೋಗ್ಯ, ನಿಷಿದ್ಧ.

**अभक्ष्य** (ಅಭಕ್ಷ್ಯ) ವಿ. ಸಂ. ನಿಷಿದ್ಧ, ತಿನ್ನಲು ಅಯೋಗ್ಯ.

**अभव** (ಅಭವ) ವಿ. ಸಂ. ಹುಟ್ಟಿಲ್ಲದವ.

**अभव्य** (ಅಭವ್ಯ) ವಿ. ಸಂ. ಸಾಮಾನ್ಯ.

**अभागी** (ಅಭಾಗೀ) ವಿ. ಸಂ. ಭಾಗ್ಯಹೀನ, ದುರ್ದೈವಿ.

**अभाग्य** (ಅಭಾಗ್ಯ) ನ. ಸಂ. ದುರ್ದೈವ.

**अभाजन** (ಅಭಾಜನ) ವಿ. ಸಂ. ಅಪಾತ್ರ.

**अभाव** (ಅಭಾವ) ಪು. ಸಂ. ಇಲ್ಲದಿರುವಿಕೆ, ಕೊರತೆ.

**अभाविक** (ಅಭಾವಿಕ) ವಿ. ಭಕ್ತಿ, ಶ್ರದ್ಧೆ ಇಲ್ಲದವ.

**अभावितपणे** (ಅಭಾವಿತಪಣೇ) ಕ್ರಿ. ವಿ. ಮನಸ್ಸಿನಲ್ಲಿ ಪಾಪವಿಲ್ಲದೆ, ಸಹಜವಾಗಿ, ಗೊತ್ತಾಗದೆ.

**अभिकथित** (ಅಭಿಕಥಿತ) ವಿ. ಆರೋಪಮಾಡಿದ. ೨. ಹೇಳಿದ, ಹೇಳಿಕೆಯ.

**अभिगमन** (ಅಭಿಗಮನ) ನ. ಸಂ. ಎದುರು ಗೊಳ್ಳುವಿಕೆ.

**अभिघात** (ಅಭಿಘಾತ) ಪು. ಸಂ. ತಾಡನ, ತಾಕಲಾಟ.

**अभिचार** (ಅಭಿಚಾರ) ಪು. ಸಂ. ಮಾಟ, ಜಾರಣ ಮಾರಣ ಮಂತ್ರ.

**अभिचारी** (ಅಭಿಚಾರೀ) ಪು. ಸಂ. ಮಾಟಗಾರ.

**अभिजन** (ಅಭಿಜನ) ಪು. ಸಂ. ಸೇವಕ. ೨. ಕುಟುಂಬ. ೩. ಕುಲ. ೪. ಕೀರ್ತಿ.

**अभिजात** (ಅಭಿಜಾತ್) ವಿ. ಸಂ. ಶ್ರೇಷ್ಠಕುಲದ, ಶ್ರೇಷ್ಠ.

**अभिजाती** (ಅಭಿಜಾತೀ) ಸ್ತ್ರೀ. ಸಂ. ಶ್ರೇಷ್ಠಕುಲದಲ್ಲಿಯ ಜನ್ಮ.

**अभिधान** (ಅಭಿಧಾನ್) ನ. ಸಂ. ಹೆಸರು.

**अभिनंदन** (ಅಭಿನಂದನ್) ನ. ಸಂ. ಪ್ರಶಂಸೆ, ಪ್ರೋತ್ಸಾಹನ.

**अभिनय** (ಅಭಿನಯ) ಪು. ಸಂ. ನಟನೆ, ನಾಟಕ, ನಟಿಸುವಿಕೆ, ಪಾತ್ರವಹಿಸುವಿಕೆ.

**अभिनव** (ಅಭಿನವ) ವಿ. ಸಂ. ಹೊಸ, ನೂತನ.

**अभिनियुक्त** (ಅಭಿನಿಯುಕ್ತ) ವಿ. ಸಂ. ನಿಯುಕ್ತ, ನಿಯಮಿಸಿದ.

**अभिनिविष्ट** (ಅಭಿನಿವಿಷ್ಟ) ವಿ. ಸಂ. ನಿಪುಣ, ೨. ಸೊಕ್ಕಿನವ.

**अभिनिवेश** (ಅಭಿನಿವೇಶ) ಪು. ಸಂ. ಕುತೂಹಲ. ೨. ನಿಪುಣತೆ. ೩. ಅಹಂಕಾರ, ೪. ಸೊಕ್ಕು.

**अभिनिवेशी** (ಅಭಿನಿವೇಶೀ) ವಿ. ಸಂ. ನಿಪುಣ. ೨. ಅಹಂಕಾರಿ.

**अभिनीत** (ಅಭಿನೀತ) ವಿ. ಸಂ. ಪ್ರಶಿಕ್ಷಿತ, ತರಬೇತಿ ಹೊಂದಿದ.

**अभिन्न** (ಅಭಿನ್ನ) ವಿ. ಸಂ. ಭೇದರಹಿತ, ಏಕರೂಪ.

**अभिप्राय** (ಅಭಿಪ್ರಾಯ) ಪು. ಸಂ. ಸಾರ, ಅರ್ಥ, ಮತ, ವಿಚಾರ, ಸಲಹೆ.

**अभिप्रेत** (ಅಭಿಪ್ರೇತ್) ವಿ. ಸಂ. ಅರ್ಥಯುಕ್ತ, ಇಷ್ಟವಿದ್ದ, ಪು. ಉದ್ದೇಶ.

**अभिभव** (ಅಭಿಭವ) ಪು. ಸಂ. ಸೋಲು, ಮಾನಖಂಡನ. **–णे** (–ಣೇ) ಕ್ರಿ. ಧಾ. ಸೋಲಿಸು.

**अभिभूत** (ಅಭಿಭೂತ್) ವಿ. ಸಂ. ಪರಾಜಿತ, ಸೋತ.

**अभिमत** (ಅಭಿಮತ) ವಿ. ಸಂ. ಮಾನ್ಯತೆ ಹೊಂದಿದ, ಮಾನ್ಯ, ಪ್ರಿಯ.

**अभिमंत्रण** (ಅಭಿಮಂತ್ರಣ್) ನ. ಸಂ. ಸಲಹೆ, ಉಪದೇಶ. ೨. ಮಾಟಗಾರಿಕೆ.

**अभिमंत्रित** (ಅಭಿಮಂತ್ರಿತ್) ವಿ. ಸಂ. ಮಂತ್ರ, ಮಾಟಮಾಡಿದ. ೨. ಔತಣಕೊಟ್ಟ.

**अभिमर्दन** (ಅಭಿಮರ್ದನ್) ವಿ. ಸಂ. ಥಳಿಸುವಿಕೆ. ೨. ಒತ್ತುವಿಕೆ.

**अभिमान** (ಅಭಿಮಾನ್) ಪು. ಸಂ. ಅಭಿಮಾನ. ೨. ಗರ್ವ, ಅಹಂಕಾರ, ಹೆಮ್ಮೆ.

**–धरणे** (–ಧರಣೇ) ಹೆಮ್ಮೆ ತಾಳು.

**अभिमानाने मरणे** (ಅಭಿಮಾನಾನೇ ಮರಣೇ) ನ. ಅಭಿಮಾನದಿಂದ ಮರಣಹೊಂದು.

**अभिमानास पेटणे** (ಅಭಿಮಾನಾಸ ಪೆಟಣೇ) ಹಟ ಹಿಡಿ.

**अभिमानास पडणे** (ಅಭಿಮಾನಾಸ ಪಡಣೇ) ಕ್ರಿ. (ಅಭಿಮಾನಕ್ಕೆ ಬಿದ್ದು) ಆಗ್ರಹಮಾಡು, ಬಿಗಿಹಿಡಿ.

**–धन** (–ಧನ್) ವಿ. ಉದಾತ್ತ, ಮಾನವಂತ.

**अभिमानी** (ಅಭಿಮಾನೀ) ವಿ. ಸಂ. ಹೆಮ್ಮೆಯುಳ್ಳ. ೨. ಅಹಂಕಾರಿ, ಸೊಕ್ಕಿನವ.

**अभिमुख** (ಅಭಿಮುಖ) ವಿ. ಸಂ. ಸನ್ಮುಖ, ಎದುರಾದ ೨. ಅನುಕೂಲ, ಒಲವುಳ್ಳ.

**अभियुक्त** (ಅಭಿಯುಕ್ತ) ವಿ. ಸಂ. ಆರೋಪ ಹೊರಿಸಿದ, ಆರೋಪಿ. ೨. ಅಪರಾಧಿ. ೩. ಪೂಜ್ಯ, ಪವಿತ್ರ.

**अभियोग** (ಅಭಿಯೋಗ್) ಪು. ಸಂ. ಆರೋಪ, ದೋಷಾರೋಪಣ, ಫಿರ್ಯಾದೆ.

**अभिराम** (ಅಭಿರಾಮ) ವಿ. ಸಂ. ಸಂತೋಷಗೊಳಿಸುವ, ಆನಂದದಾಯಕ.

**अभिरुची** (ಅಭಿರುಚಿ) ಸ್ತ್ರೀ. ಸಂ. ಪ್ರೀತಿ, ಅಕ್ಕರ. ಒಲವು, ಸೇರಿಕೆ, ಅಭಿರುಚಿ.

**अभिरूप** (ಅಭಿರೂಪ) ವಿ. ಸಂ. ಸದೃಶ, ಹೋಲುವ, ನಾಟಕದಲ್ಲಿಯಂತಹ. ೨. ಪ್ರೇಕ್ಷಣೀಯ, ಅಂದವಾದ.

**अभिलषित** (ಅಭಿಲಷಿತ) ವಿ. ಸಂ. ಇಷ್ಟ, ಇಚ್ಛೆಯಂತಹ ಅಭಿಲಾಷೆ ಬಟ್ಟ.

**अभिलाष–ख** (ಅಭಿಲಾಷ್–ಖ್) ಪು. ಸಂ. ಅಭಿಲಾಷೆ, ಇಚ್ಛೆ.

**अभिलाषी** (ಅಭಿಲಾಷೀ) ವಿ. ಸಂ. ಇಚ್ಛಿಸುವವ.

**अभिवचन** (ಅಭಿವಚನ) ನ. ಸಂ. ವಚನ, ಖಂಡಿತ ಮಾತು, ಕೊಟ್ಟ ಮಾತು.

**अभिवादन** (ಅಭಿವಾದನ್) ಪು. ಸಂ. ನಮಸ್ಕಾರ, ಪ್ರಣಾಮ.

**अभिवृद्धी** (ಅಭಿವೃದ್ಧೀ) ಸ್ತ್ರೀ. ಸಂ. ಸಮೃದ್ಧಿ, ವೈಭವ.

**अभिव्यक्त** (ಅಭಿವ್ಯಕ್ತ) ವಿ. ಸ್ಪಷ್ಟ, ಸ್ವಚ್ಛ, ಕಣ್ಣಿಗೆ ತೋರುವ ಗೋಚರ.

**अभिव्यक्त** (ಅಭಿವ್ಯಕ್ತ್) ವಿ. ಸಂ. ವ್ಯಕ್ತಮಾಡಿದ, ಹೇಳಿದ.

**अभिव्यक्ती** (ಅಭಿವ್ಯಕ್ತಿ) ಸ್ತ್ರೀ. ಸಂ. ಉದ್ಗಾರ, ವ್ಯಕ್ತ ಗೊಳಿಸುವಿಕೆ, ಮಾತು, ಉಕ್ತಿ.

**अभिव्याप्ती** (ಅಭಿವ್ಯಾಪ್ತೀ) ಸ್ತ್ರೀ. ಸಂ. ವ್ಯಾಪ್ತಿ, ವಿಸ್ತಾರ, ಸರ್ವವ್ಯಾಪಕತೆ.

**अभिशंसन** (ಅಭಿಶಂಸನ) ನ. ಸಂ. ಪ್ರಶಂಸೆ.

**अभिशाप** (ಅಭಿಶಾಪ) ಪು. ಸಂ. ಶಾಪ, ನಿಂದೆ.

**अभिश्रवण** (ಅಭಿಶ್ರವಣ್) ನ. ಸಂ. ಶ್ರಾದ್ಧದಲ್ಲಿಯು ಬ್ರಾಹ್ಮಣರು ಊಟಕ್ಕೆ ಕೂಡುವಾಗ ಅನ್ನುವ ಮಂತ್ರ.

**अभिषिक्त** (ಅಭಿಷಿಕ್ತ್) ವಿ. ಸಂ. ಪಟ್ಟಗಟ್ಟಿದ, ಅಭಿ ಷೇಕಪಟ್ಟ.

**अभिषेक** (ಅಭಿಷೇಕ) ಪು. ಸಂ. ಅಭಿಷೇಕ. ೨. ರಾಜ್ಯಾ ರೋಹಣ. ೩. ಹನಿಹನಿಯಾಗಿ ಸುರಿಸಿದ ನೀರು, ಹಾಲು ಇತ್ಯಾದಿ.

**अभिसरण** (ಅಭಿಸರಣ್) ನ.ಸಂ.ಸರಿದಾಟ, ಸಂಚಾರ.

**अभिसारिका** (ಅಭಿಸಾರಿಕಾ) ಸ್ತ್ರೀ. ಸಂ. ಗೊತ್ತುಪಡಿಸಿದ ವೇಳೆಗೆ ಪ್ರಿಯನನ್ನು ಭೆಟ್ಟಿಯಾಗಲು ಹೊರಟ ಸ್ತ್ರೀ.

**अभिहत** (ಅಭಿಹತ್) ವಿ. ಸಂ. ಪೆಟ್ಟುತಿಂದ, ಸೋತ, ಜಯಿಸಲ್ಪಟ್ಟ.

**अभिहित** (ಅಭಿಹಿತ್) ವಿ. ಸಂ. ನಿರ್ದಿಷ್ಟ, ಠರಾಯಿಸಿದ, ಗೊತ್ತುಪಡಿಸಿದ.

**अभिज्ञ** (ಅಭಿಜ್ಞ) ವಿ. ಸಂ. ಬಲ್ಲವ,ಪಂಡಿತ, ಜ್ಞಾನಿ, ಪಟು, ನಿಪುಣ.

**अभिज्ञात** (ಅಭಿಜ್ಞಾತ್) ನ. ಸಂ. ಚನ್ನಾಗಿ ತಿಳಿದ, ಅರಿತ.

**अभिज्ञान** (ಅಭಿಜ್ಞಾನ್) ನ. ಸಂ. ಪೂರ್ಣಜ್ಞಾನ. ೨. ಗುರುತು, ಪರಿಚಯು.

**अभीप्सित** (ಅಭೀಪ್ಸಿತ್) ವಿ. ಸಂ. ಇಷ್ಟ, ಇಚ್ಛಿಸಿದ.

**अभीष्ट** (ಅಭೀಷ್ಟ) ವಿ. ಸಂ. ಶುಭ,ಕಲ್ಯಾಣ,ಒಳಿತು.

**—चिंतन** (—ಚಿಂತನ್) ನ. ಕಲ್ಯಾಣವಾಗಲೆಂದು ಹಾರೈಕೆ.

**अभुक्त** (ಅಭುಕ್ತ) ವಿ. ಸಂ.ಊಟಮಾಡದ,ಉಣ್ಣದ ಉಪಭೋಗಮಾಡದ, ಉಪವಾಸದಿಂದಿದ್ದ.

**अभेद** (ಅಭೇದ್) ಪು. ಸಂ. ಭೇದವಿಲ್ಲದಿರುವಿಕೆ, ಏಕ ರೂಪತೆ, ಏಕಾತ್ಮತೆ, ಸಾದೃಶ್ಯಭಾವನೆ.

**अभोगत** (ಅಭೋಗತ್) ವಿ. ಉಪಯೋಗಮಾಡದ, ಅನಿರ್ಣಿತ.

**अभोग्य** (ಅಭೋಗ್ಯ) ವಿ. ಸಂ. ಉಪಭೋಗ ಅಥವಾ ಉಪಯೋಗ ಮಾಡಲಿಕ್ಕೆ ಯೋಗ್ಯವಲ್ಲದ.

**अभोज्य** (ಅಭೋಜ್ಯ) ವಿ. ಸಂ. ಉಪಭೋಗ ಮಾಡ ಲಿಕ್ಕೆ ಅಯೋಗ್ಯ, ನಿಷಿದ್ಧ.

**अभ्यंग** (ಅಭ್ಯಂಗ್) ಪು. ಸಂ. ಎಣ್ಣೆಹಚ್ಚಿಕೊಂಡು ಮಾಡಿದ ಸ್ನಾನ.

**अभ्यंतर** (ಅಭ್ಯಂತರ್) ನ. ಸಂ. ಒಳಭಾಗ, ವಿ. ಒಳಗಡೆಯು, ಸಮಾವಿಷ್ಟ.

**अभ्यस्त** (ಅಭ್ಯಸ್ತ) ವಿ. ಸಂ. ಪರಿಚಿತ, ನಿಪುಣ, ವಾಡಿಕೆಯು, ರೂಢಿಯು, ಅಭ್ಯಾಸವಿದ್ದ.

**अभ्यागत** (ಅಭ್ಯಾಗತ) ಪು. ಸಂ. ಅತಿಥಿ.

**अभ्यास** (ಅಭ್ಯಾಸ್) ಪು. ಸಂ. ಓದು. ೨. ಅಭ್ಯಾಸ. ೩. ಪರಿಚಯು. ೪. ಚಟ, ವಾಡಿಕೆ, ರೂಢಿ.

**—क्रम** (—ಕ್ರಮ) ಅಭ್ಯಾಸಕ್ಕಾಗಿ ನಿಯಮಿಸಿದ ವಿಷಯುಗಳು.

**—णे** (ಣೇ) ಅಭ್ಯಾಸಮಾಡು, ಮನನಮಾಡು, ಪರಿಶೀಲನೆಮಾಡು.

**अभ्यासी** (ಅಭ್ಯಾಸೀ) ವಿ. ಸಂ. ಅಭ್ಯಾಸ, ಅಧ್ಯಯನ ಮಾಡುವವ.

**अभ्युत्थान** (ಅಭ್ಯುತ್ಥಾನ) ನ. ಸಂ. ಸನ್ಮಾನಕ್ಕಾಗಿ ಎದ್ದು ನಿಲ್ಲುವಿಕೆ.

**अभ्युदय** (ಅಭ್ಯುದಯ) ಪು.ಸಂ.ಉತ್ಕರ್ಷ,ಸಮೃದ್ಧಿ.

**अभ्र** (ಅಭ್ರ) ಪು. ಸಂ. ಮೋಡ.

**अभ्रक** (ಅಭ್ರಕ) ಪು. ನ. ಸಂ, ಅಭ್ರಕ, ಕಾಗೆ ಬಂಗಾರ.

**अभ्रा** (ಅಭ್ರಾ) ಪು. ಗವಸಣಿಗೆ, ತಲೆಗಿಂಬಿನ ಹೊದಿಕೆ, ಆಚ್ಛಾದನ.

**अमका** (ಅಮುಕಾ) ವಿ. "ಹೀಗೆಯೇ ಒಬ್ಬ ಮನುಷ್ಯ" "ಇಂಥ ಇಂಥ ಒಬ್ಬನ" ಯಾರಾದರೊಬ್ಬ.

**अमंगल** (ಅಮಂಗಲ್) ವಿ. ಸಂ. ಅಶುಭ, ಅಭದ್ರ.

**अमदानी** (ಅಮದಾನೀ) ಸ್ತ್ರೀ. ಫಾ. ಆಳಿಕೆಯ ಕಾಲ, ರಾಜವಂಶದ ಕಾಲ, ಆಳುವಿಕೆ.

**अमर** (ಅಮರ್) ವಿ. ಸಂ. ಸಾವಿಲ್ಲದ, ಶಾಶ್ವತ.

**अमराई** (ಅಮರಾಈ) ಸ್ತ್ರೀ. "अंबराई" "आंबराई" ನೋಡಿರಿ.

**अमरावती** (ಅಮರಾವತೀ) ಸ್ತ್ರೀ. ಸಂ. ಇಂದ್ರನ ರಾಜಧಾನಿ.

**अमर्याद** (ಅಮರ್ಯಾದ) ವಿ. ಸಂ. ಪರಿಸೀಮೆಯಿಲ್ಲದ, ವಿಸ್ತೀರ್ಣ.

**अमर्यादा** (ಅಮರ್ಯಾದಾ) ಸ್ತ್ರೀ. ಸಂ. ಅವಮಾನ, ಅಪಮಾನ, ಅನಾದರ.

**अमल** (ಅಮಲ್) ಪು. ಅರ. ಶಾಸನ, ಅಧಿಕಾರ, ಸ್ವಾಮಿತ್ವ. ೨. ಅಮಲು.

**–करणे** (–ಕರಣೇ) ಕ್ರಿ. ಅಮಲೇರಿಸುವ ಪದಾರ್ಥ, ಸೇವಿಸು.

**अमला** (ಅಮಲಾ) ಪು. ಹಿಂ. ಕಿವಿಯಲ್ಲಿಯ ಬಾವುಲಿ, ಡೂಲು.

**अमली** (ಅಮಲೀ) ಪು. ಅರ. ಅಮಲೇರಿಸುವ, ಮೈಮರಸುವ.

**अमसोल** (ಅಮಸೋಲ್) ನ. ಒಣಗಿಸಿದ ಮಾವಿನ ಕಾಯಿಯ ಹೋಳು, ಅ ಬಾಳಕ.

**अमळ** (ಅಮಳ್) ಕ್ರಿ, ವಿ. ಸ್ವಲ್ಪ, ತುಸು.

**अमा** (ಅಮಾ) ಸ್ತ್ರೀ. ಸಂ. ಮಾತೃಸ್ತನ, ತಾಯಿಯ ಮೊಲೆ. ೨. ಅಮವಾಸ್ಯೆ.

**अमात्य** (ಅಮಾತ್ಯ) ಪು. ಸಂ. ಅಷ್ಟ ಪ್ರಧಾನಿಗಳ ಲ್ಲೊಬ್ಬ ಮಂತ್ರಿ.

**अमानत** (ಅಮಾನತ್) ಸ್ತ್ರೀ. ಅರ. ಇಟ್ಟ, ಒಪ್ಪಿಸಿದ ಸೊತ್ತು. ೨. ಠೇವಣಿ, ಠೇವಣಾತಿ, ಇಡುಗೆ.

**अमानी** (ಅಮಾನೀ) ವಿ. ಅರ. ಸ್ಥಾನಾಪನ್ನ, (ಬದಲೀ,) ಅಧಿಕಾರಿ.

**अमानुष** (ಅಮಾನುಷ್) ವಿ. ಸಂ. ಕ್ರೂರ, ಪಶುತುಲ್ಯ, ನೀಚ. ೨. ಲೋಕೋತ್ತರ.

**अमान्य** (ಅಮಾನ್ಯ) ವಿ. ಸಂ. ಒಪ್ಪದ, ಮಾನ್ಯ ಮಾಡದ, ಮನ್ನಿಸದ.

**अमावास–स्या** (ಅಮಾವಾಸ್–ಸ್ಯಾ) ಸ್ತ್ರೀ. ಅಮಾ ವಾಸ್ಯೆ, ಅಮಾಸೆ.

**अमित** (ಅಮಿತ) ವಿ. ಸಂ. ಬಹಳ, ವಿಪುಲ.

**अमीन** (ಅಮೀನ್) ಪು. ಅರ. ಸಂರಕ್ಷಕ, ಅಧಿಕಾರಿ, ಮೇಲ್ವಿಚಾರಕ.

**अमीर** (ಅಮೀರ್) ಪು. ಅರ. ಸರದಾರ, ಧನವಂತ.

**–उमराव** (–ಉಮರಾವ್) ಪು. ಬಹು ದೊಡ್ಡ ದೊಡ್ಡ ಸರದಾರರು.

**अमुक** (ಅಮುಕ್) ವಿ. ಸಂ. ಇಂಥ, ಇಂತಹ ಒಬ್ಬ, ಯಾವನೊಬ್ಬ, ಯಾವನೇ ಒಬ್ಬ.

**अमूप** (ಅಮೂಪ್) ವಿ. ಸಂ. ಬಹಳ, ವಿಪುಲ.

**अमूर्त** (ಅಮೂರ್ತ) ವಿ. ಸಂ. ಅಸ್ಪಷ್ಟ, ರೂಪಗೊಳ್ಳದ, ರೂಪವಿಲ್ಲದ, ಆಕಾರವಿಲ್ಲದ.

**अमूल्य** (ಅಮೂಲ್ಯ) ವಿ. ಸಂ. ಬಹುಮೂಲ್ಯ, ಬೆಲೆ ಬಾಳುವ.

**अमृत** (ಅಮೃತ) ನ. ಸಂ. ೧. ಅಮರ, ಸಾವಿಲ್ಲದ. ೨. ಸಿಹಿಯಾದ, ಪೇಯ, ಅಮೃತ.

**–अमृताचे जेवण, मृताचे आंचवण** (–ಅಮೃತಾಚೇ ಜೇವಣ, ಮೃತಾಚೇ ಆಂಚವಣ್) (ನಾಣ್ಣುಡಿ) ಉತ್ತಮ ಕೆಲಸದ, ಮಾತಿನ, ಕೊನೆಗೆ ಮಾಡಿದ ಕೆಟ್ಟ ಕೆಲಸ.

**–वेळ** (–ವೇಳ್) ಸ್ತ್ರೀ. ಶುಭಗಳಿಗೆ.

**आमृतोपम** (ಅಮೃತೋಪಮ) ವಿ. ಸಂ. ಅಮೃತ ತುಲ್ಯ, ದಿವ್ಯ, ಸಿಹಿ.

**अमोघ** (ಅಮೋಘ) ವಿ. ಸಂ. ನಿಷ್ಫಲವಾಗದ, ಶ್ರೇಷ್ಠ.

**अमोल** (ಅಮೋಲ್) ವಿ. ಬಹುಮೂಲ್ಯ, ಬೆಲೆಬಾಳುವ.

**अम्ल** (ಅಮ್ಲ) ವಿ. ಸಂ. ಹುಳಿ.

**अम्ली** (ಅಮ್ಲೀ) ಸ್ತ್ರೀ. ಹಿಂ. ಹುಣಸೆ.

**अयता** (ಅಯತಾ) ಪು. ತತ್‌ಕ್ಷಣ ಮಾಡಲಿಕ್ಕೆ ಬರುವ ತಿನಿಸು, ದೋಸೆ. ೨. ತಯಾರಾದ, ಸಿದ್ಧವಾದ, ಕೈಗೆಬಂದ.

**अयथार्थ** (ಅಯಥಾರ್ಥ) ವಿ. ಸಂ. ಅಶುದ್ಧ, ಸರಿ ಯಲ್ಲದ.

**अयदी** (ಅಯದೀ) ವಿ. ಸೋಮಾರಿ, ಆಲಸ್ಯಮಾಡುವವ.

**अयन** (ಅಯನ) ನ. ಸಂ. ಸೂರ್ಯನ ಗತಿ.

**अयनक** (ಅಯನಕ್) ನ. ಅರ. ಚಾಳೀಸು, ಉಪ ನೇತ್ರ, ಕನ್ನಡಕ.

**अयना** (ಅಯನಾ) ಪು. ಅರ. ಕನ್ನಡಿ.

**अयनांत** (ಅಯನಾಂತ) ಪು. ಸಂ. (ಸೂರ್ಯನ) ಅಯನದ ಸಮಾಪ್ತಿ.

**अयब** (ಅಯಬ್) ಪು. ಅರ. ದೋಷ, ವ್ಯಂಗ, ನ್ಯೂನ.

**अयबूगयबू** (ಅಯಬೂಗಯಬೂ) ಪು. ಯಾರಾದ ರೊಬ್ಬನು, ಸಾಮಾನ್ಯ ಮನುಷ್ಯ.

**अयरान–(ण)** (ಅಯರಾನ್–(ಣ್) ಪು. ಅರಣ್ಯ. ಅಡವಿ.

**अयश** (ಅಯಶ್) ನ. ಸಂ. ಪರಾಜಯ, ಸೋಲು.

**अयस** (ಅಯಸ್) ನ. ಸಂ. ಕಬ್ಬಿಣ, ಉಕ್ಕು.

**अयस्कांत** (ಅಯಸ್ಕಾಂತ್) ಪು. ಲೋಹ ಚುಂಬಕ, ಅಯಸ್ಕಾಂತ, ಕಾಂತ.

**अय्या** (ಅಯ್ಯಾ) ಪು. ಕ. ಲಿಂಗಾಯತ, ಜಗಂಮ. (ಕೇವಲ ಹೆಣ್ಣುಮಕ್ಕಳು ಮಾಡುವ ಉದ್ಗಾರ) ಓಹೋ! ಅಬ್ಬಬ್ಬ.

**अयाचित** (ಅಯಾಚಿತ್) ವಿ. ಬೇಡದೆ ದೊರೆತ. ೨. ಅನಾಹುತ. ೩. ಅನಪೇಕ್ಷಿತ. ಪು. ಭಿಕ್ಷೆ ಬೇಡದ ಯತಿ.

**अयाल–ळ** (ಅಯಾಲ್–ಳ್) ಸ್ತ್ರೀ. (ತುರ್ಕಿ:ಯಾಲ್) ಸಿಂಹ, ಕುದುರೆಯ ಆಯಾಲ, ಕೊರಳ ಮೇಲಿನ ಕೂದಲು.

**अयालत** (ಅಯಾಲತ್) ನ. ಮಹತ್ವ.

**अयावया** (ಅಯಾವಯಾ) ಕ್ರಿ. ವಿ. ಅಂಗಲಾಚಿ (ಬೇಡಿಕೊಳ್ಳುವಿಕೆ)

**अयुक्त** (ಅಯುಕ್ತ) ವಿ. ಸಂ. ಅಯೋಗ್ಯ.

**अयुत** (ಅಯುತ್) ನ. ಸಂ. ಹತ್ತುಸಾವಿರ(೧೦,೦೦೦)

**अये** (ಅಯೇ) ಸಂಬೋಧನ (ಸಂ.) ಏನೇ! ಏನಮ್ಮ!

**अयोगसंभव** (ಅಯೋಗಸಂಭವ) ವಿ. ಸಂ. ಅಯೋನಿಜ. ಸ್ತ್ರೀ, ಪುರುಷ ಸಮಾಗಮವಾಗದೆ ಹುಟ್ಟಿದ.

**अयोग्य** (ಅಯೋಗ್ಯ) ವಿ. ಸಂ. ಅಪಾತ್ರ, ಯೋಗ್ಯ [ನಲ್ಲದ] ವಲ್ಲದ, ಅಯೋಗ್ಯ.

**अयोनिसंभव** (ಅಯೋನಿಸಂಭವ್) ವಿ. ಸಂ. अयोगसंभव ನೋಡಿರಿ.

**अयौतक** (ಅಯೌತಕ) ನ. ಸ್ತ್ರೀಧನ, 'ಸೀರೆಕುಪ್ಪಸ' ದಾನ.

**अर** (ಅರ್) ಸ್ತ್ರೀ. ಈಕಡೆಯ ಬದಿ.

**अरकस** (ಅರಕಸ್) ಪು. ಫಾ. ಕರಗಸದಿಂದ ಕೊರೆಯುವವ. ೨. ಕರಗಸ.

**–णे** (–ಣೇ) ಕರಗಸದಿಂದ ಕೊರೆ.

**अरकाट** (ಅರಕಾಟ್) ವಿ. ಧೂರ್ತ, ನೀಚ, ಜಗಳಗಂಟಿ.

**अरकान** (ಅರಕಾನ್) ಪು. ಬಹು. ಅರ. ಸದಸ್ಯ(ರು), ಕಂಬ (ಗಳು).

**अरखुडा** (ಅರಖುಡಾ) ಪು. ಘರ್ಷಣದಿಂದ ಉಂಟಾಗುವ ಗೆರೆ.(ಬಿಗಿದು ಕಟ್ಟುವುದರಿಂದ ಮೂಡಿದ)ಗೆರೆ.

**अरगजा** (ಅರಗಜಾ) ಪು. ಹಿಂಡೀ, ಸುಗಂಧದ್ರವ್ಯ.

**अरगडी** (ಅರಗಡೀ) ಸ್ತ್ರೀ. ಕ. ಜೋಳ.

**अरगळणे** (ಅರಗಳಣೇ) ಕ್ರಿ. ಧಾ. ಹತಾಶನಾಗು, ಧೈರ್ಯಗುಂದು.

**अरगाल** (ಅರಗಾಲ್) ನ. ಚಕ್ಕಡಿಯ :ಗಾಲಿಯಿಂದ ಉಂಟಾಗುವ ತಗ್ಗು.

**अरगिल** (ಅರಗಿಲ್) ಪು. ಹಿಂ. ಕಂದೀಲು, ಲಾಟೀನು' ಕೈದೀಪ.

**अरगीपारगी** (ಅರಗೀಪಾರಗೀ) ಸ್ತ್ರೀ. ಸರತಿ, ಬಾರಿ.

**अरजणे** (ಅರಜಣೇ) ಕ್ರಿ. ಧಾ. ಹೊಂದು, ಸರಿಯಾಗು.

**अरड** (ಅರಡ್) ಸ್ತ್ರೀ. ಎಣ್ಣೆಯಕಾಳು ಕುಟ್ಟಿ ಮಾಡಿದ ಉಂಡೆ. ೨. ಒದರಾಟ, ಚೀರಾಟ, ಕೋಲಾಹಲ.

**अरडणे** (ಅರಡಣೇ) ಕ್ರಿ. ಧಾ. ಒದರು, ಕೂಗು, ಅಳು.

**अरडीदरडी** (ಅರಡೀದರಡೀ) ಸ್ತ್ರೀ. ಪರ್ವತದ ಮೇಲ್ಗಡೆಯ ಬಂಡೆ.

**अरडेल** (ಅರಡೇಲ್) ನ. (ಹಿಂಡಿಯಿಂದ ತೆಗೆದ) ಎಣ್ಣೆ.

**अरणी** (ಅರಣೀ) ಸ್ತ್ರೀ. ಸಂ. ಕಟ್ಟಿ. ೨. ರಣಾಂಗಣ. ೩. ಕಮ್ಮಾರನ ಬಡಿಗಲ್ಲು. ೪. ಯಜ್ಞದಲ್ಲಿ ಬೆಂಕಿ ಹುಟ್ಟಿಸಲಿಕ್ಕೆ ಉಪಯೋಗಿಸುವ ಕಟ್ಟಿಗೆ.

**अरण्य** (ಅರಣ್ಯ) ನ. ಪು. ಅಡವಿ, ಅರಣ್ಯ.

**–पंडित** (–ಪಂಡಿತ್) ಪು. ದಡ್ಡರೊಳಗಿನ ಜಾಣ.

**–रुदन** (–ರುದನ್) ನ. ನಿಷ್ಫಲ ತಕರಾರು.

**अरता–ती–ते** (ಅರತಾ–ತೀ–ತೇ) ಕ್ರಿ. ವಿ. ಈಬದಿಗೆ.

**अरतापरता** (ಅರತಾಪರತಾ) ಕ್ರಿ. ವಿ. ಈ ಬದಿಗೆ, ಆ ಬದಿಗೆ, ಅತ್ತಿತ್ತ.

**अरती** (ಅರತೀ) ಸ್ತ್ರೀ. ಸಂ. ಬೇಸರ, ಜುಗುಪ್ಸೆ.

**अरतीर** (ಅರತೀರ) ನ. ಈ ಬದಿಯ ದಂಡೆ.

**अरत्नी** (ಅರತ್ನೀ) ಸ್ತ್ರೀ. ಒಂದು ಮೊಳ ಅಳತೆ.

**अरत्र** (ಅರತ್ರ) ವಿ. ಸಂ. ಇಹಲೋಕದ.

**अरदळ** (ಅರದಳ್) ಸ್ತ್ರೀ. ಶರೀರ ರಕ್ಷಕರ ಅರ್ಧಸಂಬಳ.

**अरंदळणे** (ಅರಂದಳಣೇ) ಕ್ರಿ. ಧಾ. ತೂಕಡಿಸು. ೨. ಅರ್ಭಟಿಸು.

**अरद्र** (ಅರದ್ರ) ವಿ. ಸಂ. ಹಸಿ, ಒದ್ದೆಯಾದ.

**अरंधे** (ಅರಂಧೇ) ನ. ನಿಪುತ್ರಿಕತೆ, ಮಕ್ಕಳಿಲ್ಲದಿರುವಿಕೆ.

**अरंबळणे** (ಅರಂಬಳಣೇ) ಕ್ರಿ. ಧಾ. ತೂಕಡಿಸು. ೨. ಚೀರಾಟಮಾಡು. ೩. ಕೈ-ಮೈ-ಸುಟ್ಟುಕೊ.

**अरबा** (ಅರಬಾ) ಪು. ಅರಬರೊಂದಿಗೆ ಕದನ. ೨. ಬೈಗಳು. ೩. ಸಾಹಸ.

**अरबाड** (ಅರಬಾಡ್) ನ. ಎದೆ, ಪಕ್ಕದ ಮೂಳೆಗಳು.

**अरबाडी** (ಅರಬಾಡೀ) ಪು. ಚೇಳು, ಹಾವು ಇವುಗಳ ದಂಶದ ಮೇಲೆ ಮಂತ್ರ ಹಾಕುವವ.

**अरबाणा** (ಅರಬಾಣಾ) ಪು. ಫಾ. ಅರ. ಪ್ರಭುತ್ವ.

**अरबी** (ಅರಬೀ) ವಿ. ಅರ. ಅರಬಸ್ತಾನದ.

**अरबुद** (ಅರಬುದ್) ವಿ. ಸಂ. ಉರುಟು, ನಯವಲ್ಲದ.

**अरमिन** (ಅರಮಿನ್) ಪು. ಇಂ. ಮುಂಗಲಿಯ ಜಾತಿಯ ಪ್ರಾಣಿ.

**अरर** (ಅರರ್) ನ. ಸಂ. ಬಾಗಿಲು, ಕದ, ಕವಾಟ, ಹಲಗೆ.

**अरव** (ಅರವ್) ವಿ. ಸಂ. ಹತ್ತುಕೋಟಿ (ಸಂಖ್ಯೆ).

**अरवळ** (ಅರವಳ್) ವಿ. ಸಂ. ತುಂಟ, ಕಿರುಕುಳದ, ಕುಚೋದ್ಯದ.

**अरवा** (ಅರವಾ) ವಿ. ನಯವಾದ, ಸೂಕ್ಷ್ಮ.

**अरवार** (ಅರವಾರ್) ವಿ. ಕುಚೋದ್ಯದ, ಕಿರುಕುಳದ.

**अरविंद** (ಅರವಿಂದ್) ನ. ಸಂ. ಕಮಲ.

**अरशिशी** (ಅರಶೀಶೀ) ಸ್ತ್ರೀ. ಅರ್ಧಶಿಶಿ, ಅರ್ಧತಲೆ ನೋವು.

**अरशी** (ಅರಶೀ) ಸ್ತ್ರೀ. ಚಾಳೀಸು, ಕನ್ನಡಕ, ಉಪ ನೇತ್ರ.

**अरस** (ಅರಸ್) ವಿ. ರಸಹೀನ, ಸಪ್ಪೆಯಾದ.

**अरसपरस** (ಅರಸಪರಸ್) ಕ್ರಿ. ವಿ. ಹಿಂದು ಮುಂದೆ. ೨. ಪರಸ್ಪರ.

**अरसिक** (ಅರಸಿಕ) ವಿ. ಸಂ. ರಸಿಕತೆ ಇಲ್ಲದವ, ಸೌಂದರ್ಯವನ್ನು ತಿಳಿಯಲಾರದವ.

**अरसेनिक** (ಅರಸೇನಿಕ್) ನ. ಇಂ. (ವಿಷಮಯ) ಔಷಧ.

**अरस्तु** (ಅರಸ್ತು) ಪು. ಗ್ರೀ. ಅರಿಸ್ಟಾಟಲ್. ೨.(ಲಾ) ವಿದ್ವಾಂಸ.

**अरळ** (ಅರಳ್) ವಿ. ಕ. ಹೂವು. ೨. ಅರಳಾದ, ಗಟ್ಟಿ ಯಲ್ಲದ, ಅಳ್ಳಕವಾದ, ಸಡಿಲಾದ.

**अरळतरळ** (ಅರಳ್‌ತರಳ್) ವಿ. ಅಷ್ಟರಮಟ್ಟಿಗೆ, ಹಾರು (ಕೆಲಸ).

**अरळी** (ಅರಳೀ) ಸ್ತ್ರೀ. ಕೂಗು, ಕರೆ, ಆವಾಹನ.

**अरक्षित** (ಅರಕ್ಷಿತ) ವಿ. ಸಂ. ಸುರಕ್ಷಿತವಾಗಿ ಇಟ್ಟಿರದ.

**आराखडा** (ಅರಾಖಡಾ) ಪು. ಅಂದಾಜು, ಯೋಜನೆ, ನಕಾಶೆ, ಮಾನಚಿತ್ರ.

**अराजक** (ಅರಾಜಕ್) ನ. ಸಂ. ದುರ್ವ್ಯವಸ್ಥೆ, ಅನ ವಸ್ಥೆ, ತಾಳತಂತ್ರವಿಲ್ಲದಿರುವಿಕೆ.

**अराटी** (ಅರಾಟೀ) ಸ್ತ್ರೀ. ಮುಳ್ಳಿದ್ದ ಗಿಡಗಂಟಿ.

**अराणूक** (ಅರಾಣೂಕ್) ಸ್ತ್ರೀ. ವಿಶ್ರಾಂತಿ, ಸ್ವಸ್ಥತೆ.

**अराबा** (ಅರಾಬಾ) ಪು. ಫಾ. ತೋಪು ಒಯ್ಯುವ ಬಂಡಿ. ೨. ಬಡಿವಾರ. ೩. ತೊಡಕು, ಬಿಕ್ಕಟ್ಟು.

**अराल** (ಅರಾಲ್) ವಿ. ಸೊಟ್ಟ. ವಕ್ರ.

**अरावा** (ಅರಾವಾ) ಪು. ತೋಪಿನ ಹೊಡೆತ, ಗುಂಡು.

**अरास** (ಅರಾಸ್) ಸ್ತ್ರೀ. ಫಾ. ಸುಂದರವಾದ ರಚನೆ, ಅಂದವಾದ ಮಾಪಾ೯ಡು, ಶೃಂಗಾರ.

**अराळफराळ** (ಅರಾಳ್‌ಫರಾಳ್) ನ. ಅಪ್ರಸ್ತುತ, ಅಸಂಬದ್ಧ ಮಾತು.

**अरि** (ಅರೀ) ಪು. ಸಂ. ಹಗೆ, ಶತ್ರು.

**अरिष्ट** (ಅರಿಷ್ಟ) ನ. ಸಂ. ಸಂಕಟ, ಕುತ್ತು, ದುರ್ದೈವ, ಅರಿಷ್ಟ.

**अरी** (ಅರೀ) ಸ್ತ್ರೀ. ಅರ. ಸಮಗಾರನ ಉಪಕರಣ, ಚರ್ಮಕಾರನ ಸಾಧನ. ೨. ಗೆರೆ.

**अरीस** (ಅರೀಸ್) ಸ್ತ್ರೀ. ಮೂಲವ್ಯಾಧಿಯ ಮುಳ್ಳು. ೨. ಮೂಲವ್ಯಾಧಿ.

**अरुच** (ಅರುಚ್) ವಿ. ರುಚಿಯಾಗಿರದ.

**अरुची** (ಅರುಚೀ) ಸ್ತ್ರೀ. ಬೇಸರ, ಜುಗುಪ್ಸೆ.

**अरुण** (ಅರುಣ) ಪು. ಸೂರ್ಯಸಾರಥಿ. ೨. ಬೆಳಕು, ಉಷಃಕಾಲ.

**अरुणोदय** (ಅರುಣೋದಯ) ಪು. ಕೆಂಪು ಮೂಡುವಿಕೆ.

**अरुता** (ಅರುತಾ) ಸ್ತ್ರೀ. ಅರ್ಹತೆ, ಪಾತ್ರತೆ. ೨. ಇಲ್ಲಿ, ಈಚೆಗೆ.

**अरुंद** (ಅರುಂದ್) ವಿ. ಕಡಿಮೆ ಅಗಲಳತೆಯ.

**अरुंधती** (ಅರುಂಧತೀ) ಸ್ತ್ರೀ. ವಸಿಷ್ಠಪತ್ನಿ. ೨. ಒಂದು ನಕ್ಷತ್ರ. ೩. ನಾಲಗೆ.

**अरूवार** (ಅರುವಾರ್) ಕೋಮಲ, ಸುಂದರವಾದ.

**अरुश** (ಅರುಶ್) ವಿ. ಮೂರ್ಖ, ದಡ್ಡ.

**अरे** (ಅರೇ) ಉದ್ಗಾರ, ಎಲೆ!

**–जारे** (–ಜಾರೇ) ಸ್ತ್ರೀ. ತುಚ್ಛತೆಯ ಉದ್ಗಾರ

**–तुरे** (–ತುರೇ) ಏಕವಚನದಲ್ಲಿಯ, ತಿರಸ್ಕಾರದ ಮಾತು.

**अरेराव** (ಅರೇರಾವ) ಪು. ತುಂಟ, ಜಂಭಕೊಚ್ಚುವವ.

**अरेरे** (ಅರೇರೇ) ಉದ್ಗಾರವಾಚಕ, ಅಯ್ಯೋ ಪಾಪ!

**अरोळी** (ಅರೋಳೀ) ಸ್ತ್ರೀ. अरोळी ನೋಡಿರಿ.

**अर्क** (ಅರ್ಕ) ಪು. ಸೂರ್ಯ. ೨. ಎಕ್ಕೆಯ ಗಿಡ. ೩. ವಿ. ಧೂರ್ತ, ಜಾಣ.

**–विवाह** (–ವಿವಾಹ) ಪು. ಮೂರನೆಯ ಮದುವೆ (ಮೊದಲು ಎಕ್ಕೆಯ ಗಿಡಕ್ಕೆ ಮದುವೆ ಮಾಡು ತ್ತಾರೆ)

**अर्गळ** (ಅರ್ಗಳ್) ಸ್ತ್ರೀ. ಸಂ. ಅಗಳಿ. ೨. ಬೇಡಿ. ೩. ಅಂಕುರ, ನಿಯಂತ್ರಣ.

**अर्घ्य** (ಅರ್ಘ್ಯ) ನಂ. ಸಂ. ಅರ್ಘ್ಯ, ನೀರು ಬಿಡುವಿಕೆ.

**–घेऊन उभा असणे** (–ಘೇಊನ್ ಉಭಾ ಅಸಣೇ) ಕ್ರಿ. ಸಂಕಲ್ಪಮಾಡು.

**–देणे** (–ದೇಣೇ) ಕ್ರಿ. ನಾಶಮಾಡು.

**अर्चणे** (ಅರ್ಚಣೇ) ಕ್ರಿ. ಧಾ. ಸಂ. ಪೂಜೆಮಾಡು.

**अर्चन** (ಅರ್ಚನ್) ನ. ಸಂ. ಪೂಜೆ.

**अर्चनीय** (ಅರ್ಚನೀಯು) ವಿ. ಸಂ. ಪೂಜ್ಯ.

**अर्ज** (ಅರ್ಜ) ಪು. ಅರ. ಅರ್ಜಿ, ಬಿನ್ನಹ. ೨. ಅಗಲಳತೆ.

**–दार** (–ದಾರ್) ಪು. ಅರ್ಜಿ ಮಾಡುವವ.

**–दास्त** (–ದಾಸ್ತ್) ಸ್ತ್ರೀ. ಅರ್ಜಿ.

**अर्जणे** (ಅರ್ಜಣೇ) ಕ್ರಿ. ಧಾ. ಸಂ. ಗಳಿಸು, ಸಂಪಾದನೆ ಮಾಡು.

**अर्जिणे** (ಅರ್ಜಿಣೇ)

**अर्जन** (ಅರ್ಜನ್) ನ. ಸಂ. ಗಳಿಕೆ, ಸಂಪಾದನೆ.

**अर्जित** (ಅರ್ಜಿತ) ವಿ. ಸಂ. ಗಳಿಸಿದ, ಸಂಪಾದಿಸಿದ.

**अर्णव** (ಅರ್ಣವ್) ಪು. ಸಂ. ಸಮುದ್ರ.

**अर्थ** (ಅರ್ಥ್) ಪು. ಸಂ. ಅರ್ಥ, ತಾತ್ಪರ್ಯ, ಅಭಿಪ್ರಾಯ. ೨. ವಸ್ತು, ಮಾತು. ೩. ತಿರುಳು, ಸಾರ, ಶಕ್ತಿ. ೪. (ಪ್ರತ್ಯಯ) ಸಲುವಾಗಿ. ೫. (ಪ್ರತ್ಯಯ) ಮೂಲಕ. (ज्या अर्थी)

**–गौरव** (–ಗೌರವ್) ಪು. ಗಾಂಭಿರ್ಯ.

**–ग्रह(ण)** (–ಗ್ರಹ(ಣ)) ಜ್ಞಾನ, ತಿಳಿದು ಕೊಳ್ಳುವಿಕೆ.

**–दास** (–ದಾಸ್) ವಿ. ಹಣದ ಸಲುವಾಗಿ ಹಂಬಿಲಿಸುವವ.

**–शास्त्र** (–ಶಾಸ್ತ್ರ) ರಾಜ್ಯ ವ್ಯವಹಾರ ಶಾಸ್ತ್ರ.

**–वाद** (–ವಾದ್) ಪು. ಫಲಶ್ರುತಿ.

**–सिद्ध** (–ಸಿದ್ಧ) ವಿ. ಸ್ಪಷ್ಟ, ಇಂಗಿತ.

**अर्थतः** (ಅರ್ಥತಃ) ಕ್ರಿ. ವಿ. ಅರ್ಥಕ್ಕೆ ಅನುಸರಿಸಿ, ಅವಶ್ಯವಾಗಿ.

**अर्थाअर्थी** (ಅರ್ಥಾಅರ್ಥೀ) ಕ್ರಿ. ವಿ. ಏನೇನೂ (ಇಲ್ಲ)

**–संबंध नाही** (–ಸಂಬಂಧ ನಾಹೀ) ಏನೂ ಸಂಬಂಧವಿಲ್ಲ.

**अर्थात्** (ಅರ್ಥಾತ್) ಕ್ರಿ. ವಿ. ಅಗತ್ಯವಾಗಿ, ಅವಶ್ಯವಾಗಿ, ಖಂಡಿತವಾಗಿ, "ಏನೂ ಅಡ್ಡಿ ಇಲ್ಲ" ಎಂಬ ಅರ್ಥ.

**अर्थानुसंधान** (ಅರ್ಥಾನುಸಂಧಾನ್) ನ. ಪೂರ್ವಾರ್ಥಕ್ಕೆ ಅನ್ವಯಿಸುವಿಕೆ.

**अर्थान्वय** (ಅರ್ಥಾನ್ವಯು) ಪು. ಸಂ. ಸಂದರ್ಭ. ೨. ಸಾಮಂಜಸ್ಯ.

**अर्थापत्ती** (ಅರ್ಥಾಪತ್ತೀ) ಸ್ತ್ರೀ. ಸಂ. ತರ್ಕ, ಅನುಮಾನ.

**अर्थालंकार** (ಅರ್ಥಾಲಂಕಾರ) ಪು. ಸಂ. ಅರ್ಥಾಲಂಕಾರ (ಕಾವ್ಯಶಾಸ್ತ್ರ).

**अर्थी** (ಅರ್ಥೀ) ವಿ. ಬೇಡುವವ, ಬೇಡಿಕೊಳ್ಳುವವ, ಯಾಚಕ. ೨. ಬೇಕಾದವ, ಬೇಕಾಗಿರುವವ, ಬಯಸುವವ.

**अर्ध** (ಅರ್ಧ) ವಿ. ಸಂ. ಅರ್ಧ, ಅಪೂರ್ಣ.

**–चंद्रदेणे** (–ಚಂದ್ರದೇಣೆ) ಕತ್ತಿಗೆ ಕೈಹಾಕಿ ಹೊರಗೆ ನೂಕುವಿಕೆ.

**–पोटी** (–ಪೋಟೀ) ಕ್ರಿ. ವಿ. ಹಸಿವೆಯಿಂದ ಬಳಲುತ್ತ.

**–बाट** (–ಬಾಟ್) ವಿ. ಕುಲಗೆಟ್ಟ.

**–मेला** (–ಮೇಲಾ) ವಿ. ನಿಶ್ಚೇಷ್ಟ, ಸಾಯಲಿಕ್ಕೆ ನಿಕಟ.

**–वट** (–ವಟ್) ವಿ. ಅಜ್ಞಾನಿ, ಹುಂಬ. ೨. ಅಪೂರ್ಣ, ಅನಿರ್ಣಿತ.

**–वेडा** (–ವೇಡಾ) ವಿ. ಅರಹುಚ್ಚ.

**–शिशी** (–ಶೀಶೀ) ಸ್ತ್ರೀ. ಅರತಲೆನೋವು, ಅರ್ಧಶಿಶಿ

**अर्धा** (ಅರ್ಧಾ) ವಿ. ಅರ್ಧ, ಅಪೂರ್ಣ. ೨. ಕೊರಗಿದ.

**अर्ध्या हळकुंडाने गोरे होणे** (ಅರ್ಧ್ಯಾ ಹಳಕುಂಡಾನೆ ಗೋರೆ ಹೊಣೆ) (ನಾಣ್ಣುಡಿ) ಸ್ವಲ್ಪ ಉಪಚಾರದಿಂದ ಪೂರ್ಣ ಫಲ ಹೊಂದುವ ಅಭಿಲಾಷೆ.

**अर्धांग** (ಅರ್ಧಾಂಗ್) ನ. ಅರ್ಧ ಶರೀರ. ಸ್ತ್ರೀ. ಹೆಂಡತಿ. ಪು. ಪಕ್ಷಘಾತ ರೋಗ, ಅರ್ಧಾಂಗವಾಯು.

**अर्धामुर्धा** (ಅರ್ಧಾಮುರ್ಧಾ) ವಿ. ಅರ್ಧದಷ್ಟು.

**अर्धॅल** (ಅರ್ಧೇಲ್) ಸ್ತ್ರೀ. ಅರ್ಧಪಾಲು.

**अर्धॅली** (ಅರ್ಧೇಲೀ) ವಿ. ಅರ್ಧಭಾಗಿ, ಅರ್ಧಪಾಲು ಹೊಂದ್ಧುವವ.

**अर्धॅवचन** (ಅರ್ಧೇವಚನ) ನ. ಸಂ. ತತ್ಪರತೆ, ಸಿದ್ಧತೆ.

**अर्ध्यावचनांत** (ಅರ್ಧ್ಯಾವಚನಾಂತ್) ಸಿದ್ಧ, ತತ್ಪರ, ಅಧೀನ.

**अर्धोत्रा** (ಅರ್ಧೋತ್ರಾ) ಪು. ತಿಂಗಳಿಗೆ ಅರ್ಧ ರೂಪಾಯಿ ಶೇಕಡದಂತೆ ಹಣವನ್ನು ಸಾಲ ಕೊಡುವ ಪದ್ಧತಿ.

**अर्धोन्मीलित** (ಅರ್ಧೋನ್ಮಿಲಿತ್) ವಿ. ಅರ್ಧ ಅರಳಿದ.

**अर्पण** (ಅರ್ಪಣ) ನ. ಸಂ. ದಾನ, ಸಮರ್ಪಣ.

**अर्प(पि)णे** (ಅರ್ಪ(ಪಿ)ಣೇ) ಕ್ರಿ. ಧಾ. ಸಂ. ಅರ್ಪಿಸು, ಒಪ್ಪಿಸು.

**अर्बुद** (ಅರ್ಬುದ) ಹತ್ತುಕೋಟಿ.

**अर्भक** (ಅರ್ಭಕ) ಪು. ನ. ಸಂ. ಕೂಸು, ಸಣ್ಣ ಹುಡುಗ. ೨. ಅಜ್ಞಾನಿ.

**अर्व** (ಅರ್ವ) ನ. ಪು. ನೂರು ಕೋಟಿ.

**अर्वाक** (ಅರ್ವಾಕ್) ಕ್ರಿ. ವಿ. ಸಂ. ಗೊತ್ತುಪಡಿಸಿದ ಸಮಯಕ್ಕೆ ಮುಂಚಿತವಾಗಿ.

**अर्वाचीन** (ಅರ್ವಾಚೀನ್) ವಿ. ಸಂ. ಆಧುನಿಕ, ಈಗಿನ ಕಾಲದ ಪ್ರಕೃತ ಸಮಯದ.

**अर्वाच्य** (ಅರ್ವಾಚ್ಯ) ವಿ. ಸಂ. ಆಡಬಾರದಂತಹ (ಮಾತು) ೨. ತುಂಟ, ಬೈಯುವವ.

**अर्श** (ಅರ್ಶ್) ಪು. ನ. ಸಂ. ಮೂಲವ್ಯಾಧಿ.

**अर्ह** (ಅರ್ಹ) ವಿ. ಸಂ. ತಕ್ಕ, ಯೋಗ್ಯ, ಪಾತ್ರ.

**अलक** (ಅಲಕ್) ಪು. ಸಂ. ಕೂದಲು.

**अलंकरण** (ಅಲಂಕರಣ) ನ. ಸಂ. ಸಿಂಗಾರ, ಶೃಂಗಾರ.

**अलकाब** (ಅಲಕಾಬ್) ಪು. ಅರ. ಉಪಾಧಿ, ಪದವಿ (ಪತ್ರವ್ಯವಹಾರದಲ್ಲಿ) ಸಂಜ್ಞಾವಿಧಾನ.

**अलंकार** (ಅಲಂಕಾರ್) ನ. ಪು. ಸಂ· ಶೃಂಗಾರ. ೨. ಒಡವೆ, ಆಭರಣ, ವಸ್ತ್ರ. ೩. ಅರ್ಥಗೌರವ.

**अलकूत** (ಅಲಕೂತ್) ವಿ. ಸೂಕ್ಷ್ಮ, ಕೋಮಲ.

**अलक्त** (ಅಲಕ್ತ) ಪು. ಸಂ. ಅರಗು, ಲಾಕ್ಷಾ.

**अलग** (ಅಲಗ್) ವಿ. ಹಿಂ. ಬೇರೆ.

**अलंग** (ಅಲಂಗ್) ಸ್ತ್ರೀ. ವಿಸ್ತೀರ್ಣ ನಡುಮನೆ. ೨. ಅಗ್ರಹಾರ.

**अलगट** (ಅಲಗಟ್) ವಿ. ಬೇರೆ, ಹೆಚ್ಚಿನ.

**अलगड** (ಅಲಗಡ್) ಸ್ತ್ರೀ. ಉದ್ಯೋಗ, ಕಷ್ಟ.

**अलगणे** (ಅಲಗಣೇ) ಕ್ರಿ. ಧಾ. ಜೋಲು, ಜೋತು ಬೀಳು.

**अलगत** (ಅಲಗತ್) ಕ್ರಿ. ವಿ. ಮೆತ್ತಗೆ, ಸಹಜವಾಗಿ, ಸಂಪೂರ್ಣವಾಗಿ.

**अलंगनौबत** (ಅಲಂಗನೌಬತ್) ಸ್ತ್ರೀ. ಅರ. ಡಂಗುರ, ಬಾವುಟ, ಕಾವಲು..

**अलगरजी** (ಅಲಗರಜೀ) ವಿ. ಅರ. ಮಂದ, ಸೋಮಾರಿ, ಅನುತ್ಸಾಹಿ.

**अलगूज** (ಅಲಗೂಜ್) ನ. ಕೊಳಲು.

**अलतमघा** (ಅಲತಮಘಾ) ಸ್ತ್ರೀ. ಅರ. ಉಂಬಳಿ, ರಾಜಸಹಾಯ.

**अलप** (ಅಲಪ್) ಪು. (ದನಗಳ ಸಲುವಾಗಿ) ಹತ್ತಿ ಕಾಳು, ಹಿಂಡಿ.

**अलंप्रतीती** (ಅಲಂಪ್ರತೀತೀ) ಸ್ತ್ರೀ. ಸಂ. ಸಮಾಧಾನ, ಸಂತೋಷ.

**अलफ** (ಅಲಫ್) ವಿ. ಅರ. ಒಂದು ಸಾವಿರ.

**अलबत्‌-त्ता** (ಅಲಬತ್-ತ್ತಾ) ಖಂಡಿತವಾಗಿ, ಖಾತ್ರಿಯಾಗಿ, ನಿಶ್ಚಿತವಾಗಿ.

**अलबत्या गलबत्या** (ಅಲಬತ್ಯಾ ಗಲಬತ್ಯಾ) ಪು. ಸಂ. ಯಾರಾದರೊಬ್ಬ ಸಾಮಾನ್ಯ ಮನುಷ್ಯ.

**अलबम** (ಅಲಬಮ್) ಪು. ಇಂ. ಫೋಟೋ, ಪಟಗಳನ್ನು ಸಂಗ್ರಹಿಸುವ ಪುಸ್ತಕ, ಅಲ್ಬಮ್.

**अलबलीत गलबलीत** (ಅಲಬಲೀತ್ ಗಲಬಲೀತ್) ವಿ. ಸಡಿಲಾದ, ಸ್ಥೈಲಾದ.

**अलंब** (ಅಲಂಬ್) ವಿ. ನಿರಾಧಾರ, ಅನಿಶ್ಚಿತ.

**अलंबुद्धी** (ಅಲಂಬುದ್ಧೀ) ಸ್ತ್ರೀ. ಸಂ. ಸಮಾಧಾನ.

**अलबेला** (ಅಲಬೇಲಾ) ಪು. ಹಿಂ. ಅಲಭ್ಯ, ಸುಂದರ. ೨. ಕ್ಷೇಮ.

**अलबेली** (ಅಲಬೇಲೀ) ಸ್ತ್ರೀ. ಹಿಂ. ಸುಂದರಿ, ವಿಲಾಸಿನಿ.

**अलभ्य** (ಅಲಭ್ಯ) ವಿ. ದುರ್ಲಭ.

**अलम** (ಅಲಮ್) ಪು. ಅರ. ಜಗತ್ತು. ೨. ಬಾವುಟ.

**-दुनिया** (-ದುನಿಯಾ) ಇಡಿ ಜಗತ್ತು.

**-पन्हा** (-ಪನ್ಹಾ) ಬಾದಶಹ, ಸುಲ್ತಾನ.

**अलमक** (ಅಲಮಕ್) ಕ್ರಿ. ವಿ. ಸರಿಯಾಗಿ, ತಪ್ಪದೆ.

**अलमदांड** (ಅಲಮ್‌ದಾಂಡ್) ವಿ. ಉದ್ಧತ, ಜಗಳಗಂಟ

**अलमारी** (ಅಲಮಾರೀ) ಸ್ತ್ರೀ. ಪೋ. ಕಪಾಟು, ಅಲ್ಮಾರು, ಬೀರು.

**अलम** (ಅಲಮ್) ಕ್ರಿ. ವಿ. ಸಂ. ಸಾಕು! ಸಾಕೇ ಸಾಕು, ಸಾಕು! ಸಾಕು!

**अलर्क** (ಅಲರ್ಕ್) ಪು. ಹುಚ್ಚು ನಾಯಿಯ ಕಡಿತದಿಂದಾಗುವ ರೋಗ. ೨. ಎಕ್ಕೆಯ ಗಿಡ.

**अललल** (ಅಲಲಲ) ಉದ್ಗಾರ. (ಆಶ್ಚರ್ಯವಾಚಕ) ಭಾಷು.

**अललडुर** (ಅಲಲ್‌ಡುರ್) ಉದ್ಗಾರ (ನಾಟಕದಲ್ಲಿ) ರಾಕ್ಷಸರ ಗರ್ಜನೆ.

**अललित** (ಅಲಲಿತ) ವಿ. ಸಂ. ಅಸ್ಥಿರ, ಅಲೆದಾಡುವ.

**अलल्हिशेबी** (ಅಲಲ್‌ಹಿಶೇಬೀ) ವಿ. ಪ್ರಕೃತ ಲೆಕ್ಕಕ್ಕೆ ಸಂಬಂಧಿಸಿದ.

**अलवण** (ಅಲವಣ್) ವಿ. ಸಂ. ಉಪ್ಪಿಲ್ಲದ, ಸಪ್ಪೆಯಾದ.

**अलवाण–न** (ಅಲವಾಣ್–ನ್) ನ. ವಿಧವೆಯರ ಕೆಂಪು ಸೀರೆ. ೨. ಕಡುಗೆಂಪು ಶಾಲು.

**अलवार** (ಅಲವಾರ್) ಸಂ. ವಿ. ಕೋಮಲ

**अलमंदा** (ಅಲಮಂದಾ) ಪು. ಅಲಸಂದಿ ಕಾಳು.

**अलसिका** (ಅಲಸಿಕಾ) ಸ್ತ್ರೀ. ಮಾರಿಬೇನೆ, ಕಾಲರಾ.

**अलक्ष** (ಅಲಕ್ಷ) ಪು. ಈಶ್ವರ, ದೇವರು, ಪರಬ್ರಹ್ಮ.

**अलक्षपण** (ಅಲಕ್ಷಪಣ) ನ. ದುರ್ಲಕ್ಷ, ಧ್ಯಾನವಿಲ್ಲದಿರುವಿಕೆ.

**अलक्षित** (ಅಲಕ್ಷಿತ) ವಿ. ಸಂ. ಅಲಕ್ಷಮಾಡಿದ, ದುರ್ಲಕ್ಷಿಸಿದ, ಲೆಕ್ಕಿಸದಿದ್ದ, ಮರೆತುಬಿಟ್ಟ.

**अलक्ष्मी** (ಅಲಕ್ಷ್ಮೀ) ಸ್ತ್ರೀ. ದುರ್ದೈವ, ದರಿದ್ರತೆ.

**अलक्ष्य** (ಅಲಕ್ಷ್ಯ) ನ. ಸಂ. ದುರ್ಲಕ್ಷ.

**अलक्ष्या** (ಅಲಕ್ಷ್ಯಾ) ಸ್ತ್ರೀ. ಜೋಗಿಗಳ ಒಂದು ಗುರುತು, ·ಸಂಕೇತ.

**अला** (ಅಲಾ) ಪು. ಅರ. ವೈಭವ, ಮೇಲ್ಮೆ.

**अलाईबलाई** (ಅಲಈಬಲಾಈ) ಸ್ತ್ರೀ. ಅರ. ತೊಂದರೆ, ಕಷ್ಟ, ಪೀಡೆ.

**अलांछन** (ಅಲಾಂಛನ್) ವಿ. ಕಲಂಕವಿಲ್ಲದ

**अलाड** (ಅಲಾಡ್) ಕ್ರಿ. ವಿ (ನದಿಯ) ಈ ಬದಿ, ಇತ್ತ, ಇತ್ತಕಡೆ.

**अलांडाबलांडा** (ಅಲಾಂಡಾ ಬಲಾಂಡಾ) ಪು. ವಿಘ್ನ, ತಡೆ.

**अलात** (ಅಲಾತ್) ನ. ಹುಟ್ಟು ಗೋಲು, ಪಂಜು, ದೀವಟಿಗೆ.

**अलाद** (ಅಲಾದ್) ಕ್ರಿ. ವಿ. ಒಮ್ಮೆಂದೊಮ್ಮೆ, ಅಕಸ್ಮಾತ್ತಾಗಿ.

**अलादा** (ಅಲಾದಾ) ಕ್ರಿ. ವಿ. ಅರ. ಬೇರೆ.

**अलाबू** (ಅಲಾಬೂ) ಪು. ಹಾಲುಗುಂಬಳ.

**अलाभ** (ಅಲಾಭ್) ಪು. ಹಾನಿ.

**अलाई** (ಅಲಾಈ) ವಿ. ಅರ. ದೊಡ್ಡ, ಘನವಂತ.

**अलावत** (ಅಲಾವತ್) ಸ್ತ್ರೀ. ಹೆಂಡತಿ.

**अलावा** (ಅಲಾವಾ) ಪು. ಮೊಹರಮ್ ಹಬ್ಬದಲ್ಲಿಯ, ಅಗ್ನಿಕುಂಡ, ಅಲಾಬಿ.

**अलाहिदा** (ಅಲಾಹಿದಾ) ವಿ. ಅರ. ಬೇರೆ.

**अलि** (ಅಲಿ). ಪು. ಭ್ರಮರ, ಗುಂಗಾಡು.

**अलिक** (ಅಲಿಕ್) ನ. ಸಂ. ಹಣೆ.

**अलिखित** (ಅಲಿಖಿತ್) ವಿ. ಬರೆದು ಇಡದ, ಬಹಿರಂಗವಾಗಿ ಗೊತ್ತುಪಡಿಸದೆ ಪ್ರಚಾರದಲ್ಲಿದ್ದ.

**अलिता** (ಅಲಿತಾ) ಪು. ಕಂದಿ ಬಣ್ಣ, ಅರ್ಧ ನೂಲು, ಅರ್ಧರೇಶ್ಮೆ ವಸ್ತ್ರ.

**अलिंद** (ಅಲಿಂದ್) ಪು. ಕಟ್ಟೆ, ಗೋಪುರ.

**अलिप्त** (ಅಲಿಪ್ತ) ವಿ. ಬೇರೆ. ೨. ಸೋಂಕದ ೩. ಅಪಕ್ಷಪಾತಿ.

**अलिशान** (ಅಲಿಶಾನ್) ವಿ. ಅರ ಸೊಬಗಿನ, ವೈಭವಶಾಲಿ, ಶ್ರೇಷ್ಠ, ಭವ್ಯ.

**अलीक** (ಅಲೀಕ) ವಿ. ಸಂ. ಅಸತ್ಯ, ಸುಳ್ಳು.

**अलीगोल** (ಅಲೀಗೋಲ್) ಪು. ಫಾ. ತೋಪಿನಗುಂಡು ಹಾರಿಸುವವ.

**अलीजाह–हा** (ಅಲೀಜಾಹ್–ಹಾ) ಪು. ಫಾ. ಬಾದಶಹ, ದೊರೆ.

**अलुका** (ಅಲುಕಾ) ಸ್ತ್ರೀ ಸಂ. ದುಃಖ.

**अलुत्या** (ಅಲುತ್ಯಾ) ಪು. ಹಳ್ಳಿಯಲ್ಲಿಯ ಕೆಲಸಗಾರ, ಉದ್ದಿಮೆಗಾರ.

**अलुबुखार** (ಅಲುಬುಖಾರ್) ಪು. ಒಂದು ಸವಿಯಾದ ಹಣ್ಣು.

**अलुमालु** (ಅಲುಮಾಲು) ಕ್ರಿ. ವಿ. ಅಲ್ಪ, ಸ್ವಲ್ಪ.

**अलैय्या** (ಅಲೈಯ್ಯಾ) ಪು. ಹಿಂ. ಒಂದು ರಾಗ.

**अलोचणे** (ಅಲೋಚಣೇ) ಕ್ರಿ. ಧಾ. ಹಿಂದೆ ನೋಡದೆ ಇರುವಿಕೆ. ೨. ಕಿವಿಯಲ್ಲಿ ಹೇಳುವಿಕೆ.

**अलोट** (ಅಲೋಟ್) ವಿ. ಅತಿಶಯ, ಬಹಳ.

**अलोभ** (ಅಲೋಭ್) ಪು. ಸಂ. ನಿಃಸ್ವಾರ್ಥವೃತ್ತಿ.

**अलोलकी** (ಅಲೋಲಕೀ) ಸ್ತ್ರೀ. ಮಹತ್ವ, ಬೆಲೆ.

**अलोलुपत्व** (ಅಲೋಲುಪತ್ವ) ನ. ಸಂ. ನಿರ್ಲಿಪ್ತತೆ, ನಿಃಸಂಗ.

**अलौकिक** (ಅಲೌಕಿಕ) ವಿ. ಸಂ. ಅದ್ಭುತ, ಲೋಕೋತ್ತರ.

**अल्काब** (ಅಲ್ಕಾಬ್) ಪು. ಅರ. ಪದವಿ, ಸಂಜ್ಞೆ, ಅಭಿಧಾನ, ಶಿಷ್ಟಾಚಾರದ ಸಂಬೋಧನೆ.

**अल्गर्जी** (ಅಲ್ಗರ್ಜೀ) ವಿ. ಅರ. ಸೋಮಾರಿ, ಸ್ವಾರ್ಥಿ.

**अल्प** (ಅಲ್ಪ) ವಿ. ಸಂ. ಸ್ವಲ್ಪ, ತುಸ.

**अल्पक** (ಅಲ್ಪಕ್) ವಿ. ಸಂ. ದರಿದ್ರ, ಕಂಗಾಲ.

**अल्पत्व** (ಅಲ್ಪತ್ವ) ನ. ಸಂ. ಕೊರತೆ. ೨. ಕೀಳುಸ್ಥಿತಿ, ಸಂಕೋಚ.

**अल्पविणे** (ಅಲ್ಪವಿಣೇ) ಕ್ರಿ. ಧಾ. ಮುಳುಗಿಸು.

**अल्पशः** (ಅಲ್ಪಶಃ) ಕ್ರಿ. ವಿ. ಸಂ. ಸ್ವಲ್ಪ ಸಲ್ಪ

**अल्पायास** (ಅಲ್ಪಾಯಾಸ್) ಪು. ಸಂ. ಅಲ್ಪ ಪರಿಶ್ರಮ.

**अल्पायू** (ಅಲ್ಪಾಯೂ) ವಿ. ಸಂ. ಆಯುಷ್ಯ ಕಡಿಮೆ ಇದ್ದ ಅಕಾಲ ಮೃತ್ಯು ಒದಗಿದ.

**अल्पाहार** (ಅಲ್ಪಾಹಾರ್) ಪು. ಸಂ. ಕಡಿಮೆ ಆಹಾರ. ೨. ತಿಂಡಿ ತಿನಿಸು, ಫರಾಳ, ಫಳಾರ, ಉಪಾಹಾರ.

**अल्बिदा** (ಅಲ್ಬಿದಾ) ಪು. ಅರ. ಕೊನೆಯ ಪ್ರಣಾಮ ಬೀಳ್ಕೊಡುವಿಕೆ, ಚಿರಕಾಲ ಅಗಲುವಿಕೆ.

**अल्लड** (ಅಲ್ಲಡ್) ವಿ. ಅಡನಾಡಿ, ಅಡಮುಟ್ಟ, ಅವಿನೀತ, ತುಂಟ.

**अल्ला–ह** (ಅಲ್ಲಾ–ಹ್) ಪು. ಅರ. ದೇವರು.

–(–**रखी** (–ರಖೀ) ವಿ. ಅನಾಥ.

–(–**रशी** (–ರಶೀ) ವಿ. ಸಡಿಲಾದ, ಅನಿಯಮಿತ.

**अल्हाद** (ಅಲ್ಹಾದ್) ಪು. ಸಂ. आल्हाद ನೋಡಿರಿ.

**अल्हे** (ಅಲ್ಹೇ) ಕ್ರಿ. ವಿ. ಬೇಗ.

**अल्होट** (ಅಲ್ಹೋಟ್) ವಿ. अलोट ನೋಡಿರಿ.

**अवकटा** (ಅವಕಟಾ) ಕ್ರಿ. ವಿ. ಒಮ್ಮೆಲೆ.

**अवंकण** (ಅವಂಕಣ್) ಸ್ತ್ರೀ. ಎರಡನೆಯ ಸರತಿಗೆ ತೂರಿದ ಧಾನ್ಯ ೨. ಅಂದಾಜು.

**अवकल** (ಅವಕಲ್) ವಿ. ತಿಳಿಯದ, ತೋಚದ.

**अवकडहा चक्र** (ಅವಕಡಹಾ ಚಕ್ರ) ನ. ಸಂ. (ಜ್ಯೋತಿಷ್ಯ) ಜನ್ಮ ನಕ್ಷತ್ರಕ್ಕೆ ಹೊಂದುವ ರಾಶಿಯನ್ನು ತಿಳಿದು ಕೊಳ್ಳುವ ಕೋಷ್ಟಕ.

**अवकळवणी** (ಅವಕಳವಣೀ) ಸ್ತ್ರೀ. ಅಕಾಲ ಮಳೆ, ಬೇಡಾದಾಗ ಬಂದ ಮಳೆ.

**अवकळा** (ಅವಕಳಾ) ಸ್ತ್ರೀ. ಸಂ. ದೀನಮುದ್ರೆ, ದುರ್ದಶೆ, ಹಾಳು ಸುರಿಯುವಿಕೆ.

**अवकात (द)** (ಅವಕಾತ್–ದ್) ಸ್ತ್ರೀ. ಅರ. ೧ ಶಕ್ತಿ, ೨. ನಿರ್ವಾಹ.

**अवकाल** (ಅವಕಾಲ) ಪು. ಸಂ. ಅಸಮಯ, ಅಯೋಗ್ಯಕಾಲ.

**अवकाश** (ಅವಕಾಶ್) ಪು. ಸಂ. ೧. ತಡ. ೨. ವೇಳೆ. ೩. ಸಂಧಿ, ಅನುವು, ೪. ಆಕಾಶ, ಶೂನ್ಯತೆ.

**अवकीर्ण** (ಅವಕೀರ್ಣ) ವಿ. ಸಂ. ಅತ್ತಿತ್ತ ಬಿದ್ದ, ಹರಡಿದ.

**अवकृपा** (ಅವಕೃಪಾ) ಸ್ತ್ರೀ. ಸಂ. ಅಸಮಾಧಾನ, ಕೋಪ.

**अवक्रिया** (ಅವಕ್ರಿಯಾ) ಸ್ತ್ರೀ. ಸಂ. ನಿಂದೆ.

**अवखंद** (ಅವಖಂದ್) ಪು. ದೊಡ್ಡ ತಗ್ಗು.

**अवखळ** (ಅವಖಳ್) ವಿ. ಚಪಲ, ಚಂಚಲ, ಕುಚೋದ್ಯದ.

**अवखळा** (ಅವಖಳಾ) ಸ್ತ್ರೀ. ನ್ಯೂನತೆ, ಕೊರತೆ.

**अवखूण** (ಅವಖೂಣ್) ಸ್ತ್ರೀ. ದೋಷ, ನ್ಯೂನ ಕಲಂಕ.

**अवखुळा** (ಅವಖುಳಾ) ಪು. ತಡೆ, ವಿಘ್ನ.

**अव–वाग** (ಅವ–ವಾಗ್) ನ. ಮೀನದ ಎದೆ, ಪುಪ್ಪುಸ.

**अवगणणे** (ಅವಗಣಣೇ) ಕ್ರಿ. ಅ. ಅನಾದರ ಮಾಡು, ತಿರಸ್ಕರಿಸು.

**अवगणन–ना** (ಅವಗಣನ–ನಾ) ೧ ನ. ಸ್ತ್ರೀ. ಅನಾದರ, ತಿರಸ್ಕಾರ.

**अवगणी** (ಅವಗಣೀ) ಸ್ತ್ರೀ. ರೂಪ, ವೇಷ.

**अवंगणी** (ಅವಂಗಣೀ) ಸ್ತ್ರೀ. ತಡ, ವಿಲಂಬ.

**अवगणे** (ಅವಗಣೇ) ಕ್ರಿ. ಅ. ತಿಳಿದುಕೊಳ್ಳು, ೨. ಸ್ವೀಕರಿಸು.

**अवगत** (ಅವಗತ್) ವಿ. ಸಂ. ಜ್ಞಾತ, ಗೊತ್ತಿದ್ದ.

**अवगती** (ಅವಗತೀ) ಸ್ತ್ರೀ. ಸಂ. ಅಧೋಗತಿ.

**अवगम** (ಅವಗಮ್) ನ. ಸಂ. ಜ್ಞಾನ,

**अवगणी** (ಅವಗಣೀ) ಸ್ತ್ರೀ. ಸೋಗು, ವೇಷ, ರೂಪ.

**अवगमणे** (ಅವಗಮಣೇ) ಕ್ರಿ. ಅ. ಅನಿಸು, ಅರಿ.

**अवगळणे** (ಅವಗಳಣೇ) ಕ್ರಿ. ಸಂ. ಎಸೆ, ಬಿಡು.

**अवगाहन** (ಅವಗಾಹನ) ನ. ಸಂ. ಮುಳುಗುವಿಕೆ, ಮಗ್ನತೆ, ಧ್ಯಾನ, ಪರಿಶೀಲನ.

**अवगाळ** (ಅವಗಾಳ್) ಪು. ಕೆಸರು

**अवगी** (ಅವಗೀ) ಸ್ತ್ರೀ. ಕುದುರೆಯ ಡಾಲಿನ ನಡೆತ.

**अवगुंठन** (ಅವಗುಂಠನ್) ನ. ಸಂ. ಸುತ್ತುವಿಕೆ, ಆಚ್ಛಾದನ.

**अवगुण** (ಅವಗುಣ್) ಪು. ಸಂ. ದುರ್ಗುಣ.

**अवग्र** (ಅವಗ್ರ) ವಿ. ಎಲ್ಲ. ಸಮಸ್ತ.

**अवग्रह** (ಅವಗ್ರಹ) ಪು. ವಿರಾಮ. ೨. "ಅ" ಲೋಪವನ್ನು ದರ್ಶಿಸುವ "ऽ" ಚಿನ್ಹ.

**अवघड** (ಅವಘಡ್) ವಿ. ಕಠಿಣ, ಬಿಕ್ಕಟ್ಟಾದ.

**अवघडणे** (ಅವಘಡಣೇ) ವಿ. (ಕೈ, ಕಾಲು, ಮುಂ) ಸೋಲು, ಶ್ರಮವಾಗು.

**अवघा** (ಅವಘಾ) ವಿ. ಸಮಸ್ತ, ಇಡಿಯ ೨. ಕೇವಲ, ಮಾತ್ರ.

**अवघ्राण** (ಅವಘ್ರಾಣ) ನ. ಸಂ. ಮೂಸಿ ನೋಡುವಿಕೆ.

**अवघ्रात** (ಅವಘ್ರಾತ್) ವಿ. ಸಂ. ಮೂಸಿನೋಡಿದ, ೨. (ಲಾ) ಉಪಯೋಗಿಸಿದ, ಅಶುದ್ಧ, ಶೀಲಭ್ರಷ್ಟ.

**अवचक** (ಅವಚಕ್) ವಿ. ಅತಿಶಯ, ಬಹಳ, ಅಶ್ಲೀಲ.

**अवंचक** (ಅವಂಚಕ) ವಿ. ಸಂ. ಪ್ರಾಮಾಣಿಕ.

**अवचट** (ಅವಚಟ್) ಕ್ರಿ. ವಿ. ಒಮ್ಮೆಲೆ, ಕೂಡಲೆ.

**अवचित** (ಅವಚಿತ್) ಕ್ರಿ. ವಿ. ಅಕಸ್ಮಾತ್ತಾಗಿ ೨. ನ. ದುರ್ಲಕ್ಷ್ಯ.

**अवचित्या** (ಅವಚಿತ್ಯಾ) ವಿ. ಅಯೋಗ್ಯ ವರ್ತನೆಯ, ಕುಚೋದ್ಯದ.

**अवचिंद** (ಅವಚಿಂದ್) ನ. ಅಪಶಕುನ, ದುಶ್ಚಿಹ್ನ.

**अवचुकून** (ಅವಚುಕೂನ್) ಕ್ರಿ. ವಿ. ತಪ್ಪಿ, ತಪ್ಪು ಮಾಡಿ, ಪ್ರಮಾದದಿಂದ.

**अवच्छिन्न** (ಅವಚ್ಛಿನ್ನ) ವಿ. ಸಂ. ಕೊಯಿದ, ಕೊರೆದ, ತುಂಡರಿಸಿದ ೨. ವಿಂಗಡಿಸಿದ, ಸ್ಪಷ್ಟಗೊಳಿಸಿದ.

**अवच्छेद** (ಅವಚ್ಛೇದ್) ಪು. ಸಂ. ಭಾಗ, ಅಂಶ, ಪ್ರಕರಣ.

**अवजड** (ಅವಜಡ್) ವಿ. ಸಂ. ಭಾರವಾದ, ಜಡವಾದ, ಭಾರಿತೂಕದ. ೨. ಬಹುಮೂಲ್ಯ, ಸೂಕ್ಷ್ಮ.

**अवजणे** (ಅವಜಣೇ) ಕ್ರಿ. ಅ. ಉಪಯೋಗವಾಗು.

**अवजतन** (ಅವಜತನ) ನ. ಸಂ. ದುರ್ಲಕ್ಷ, ಕಣ್ಮರೆ.

**अवजा** (ಅವಜಾ) ಪು. ತಡ, ವಿಲಂಬ.

**अवजार** (ಅವಜಾರ್) ನ. ಫಾ. ಸಾಧನ, ಉಪಕರಣ.

**अवजाळी** (ಅವಜಾಳೀ) ವಿ. ಸ್ಥೂಲ, ದಪ್ಪನಾದ ೨. ತುಂಟ.

**अवझा** (ಅವಝಾ) ಸ್ತ್ರೀ. ಅಸ್ತವ್ಯಸ್ತ ಬಟ್ಟೆಧರಿಸುವ ಸ್ತ್ರೀ.

**अवट** (ಅವಟ್) ಪು. ಕಟ್ಟಿಗೆಯ ರಾಶಿ.

**अवटकी** ಅವಟಕೀ) ಸ್ತ್ರೀ. ಸೇವೆ, ಚಾಕರಿ, ನೌಕರಿ, ೨. ಆಸ್ತಿ.

**अवटणे** (ಅವಟಣೇ) ಕ್ರಿ. ಅ. ಕುಂದು, ಕುಗ್ಗು, ೨. ನ. ತಿರಸ್ಕಾರ.

**अवटाळणे** (ಅವಟಾಳಣೇ) ಕ್ರಿ. ಸಂ. ದಬ್ಬಿಕೊಳ್ಳು ೨. ತಪ್ಪಿಸು, ಮುಂದೆಹಾಕು.

**अवटी** (ಅವಟೀ) ಸ್ತ್ರೀ. ಒಡವೆ, ಅಲಂಕಾರಗಳ ಮೇಲೆ ನಕ್ಷಿ ತೆಗೆಯುವ ಛಾಪ.

**अवठा** (ಅವಠಾ) ಪು. ನೆನಪು ೨. ಸೆಡವು.

**अवठाण** (ಅವಠಾಣ್) ನ. ಕುದುರೆಯ ಒಂದು ರೋಗ. ೨. ಶಕ್ತಿ, ಸಾಮರ್ಥ್ಯ.

**अवठाणू** (ಅವಠಾಣೂ) ನ. ಕುರ, ಗುಲ್ಮ.

**अवडकचवडक** (ಅವಡಕ್‌ಚವಡಕ್) ಸ್ತ್ರೀ. ಹುಡುಗರ ಒಂದು ಆಟ. ೨. ಅವ್ಯವಸ್ಥೆ.

**अवड चिवड** (ಅವಡ್‌ಚಿವಡ್) ಪು. ಅವ್ಯಸ್ಥಿತ ವಿಸ್ತಾರ, ಹಾಳು.

**अवडंबर** (ಅವಡಂಬರ್) ನ. ಸಂ. ಡೌಲು.

**अवडादेवडा** (ಅವಡಾ ದೇವಡಾ) ವಿ. ಅಡ್ಡತಿಡ್ಡ.

**अवढंगी** (ಅವಢಂಗೀ) ವಿ. ಕೆಟ್ಟ ನಡಾವಳಿಯ.

**अवंढा** (ಅವಂಢಾ) ಪು. ಸಿಟ್ಟು, ಕ್ಷೋಭವಾದಾಗ ಗಂಟಲಿನಿಂದ ಬರುವ ನುಂಗಿದ ಶಬ್ದ–ದನಿ.

**–गिळणे** (–ಗಿಳಣೇ) ರೇಗು, ಸಿಟ್ಟು ತೋರಿಸು.

**अवढा** (ಅವಢಾ) ಪು. ಜುಗುಪ್ಸೆ, ಬೇಸರ.

**अवढाण** (ಅವಢಾಣ್) ವಿ. ಹಟಮಾರಿ.

**अवंढ्या नागनाथ** (ಅವಂಢ್ಯಾನಾಗನಾಥ್) ಪು ಅವಂಢೆ (ಪರಭಣಿ) ಯಲ್ಲಿರುವ ಜೋತಿರ್ಲಿಂಗ.

**अवतण** (ಅವತಣ) ನ. ಸಂ. ಆಮಂತ್ರಣ, ಔತಣ.

**अवतरण** (ಅವತರಣ) ನ. ಸಂ. ಕೆಳಗೆ ಇಳಿಯುವಿಕೆ ಅವತಾರ. ೨. ಸಂಚಾರ.

**–चिन्ह** (–ಚಿನ್ಹ) ಉದ್ಧರಣ ("–") ಚಿನ್ಹ.

**अवतरणिका** (ಅವತರಣಿಕಾ) ಸ್ತ್ರೀ. ಸಂ. ಪ್ರಸ್ತಾವನೆ, ಮೊದಲ್ಮಾತು.

**अवतरणे** (ಅವತರಣೇ) ಕ್ರಿ. ಅ. ಅವತರಿಸು, ಅವತಾರತಾಳು, ಕೆಳಗೆ ಬಾ.

**अवतंस** (ಅವತಂಸ) ನ. ಸಂ. ಕಿರೀಟ. ೨. ಅಲಂಕಾರ.

**अवताण** (ಅವತಾಣ್) ನ. ಅಯೋಗ್ಯ ಸಮಯ.

**अवतार** (ಅವತಾರ್) ಪು. ಸಂ. ಅವತಾರ ೨. ಭಗವದಂಶ, ದೈವೀ ಸಂಪತ್ತು. ೩. ಘನವಂತ. ೪. (ವ್ಯಂಗ್ಯಾರ್ಥ) ಕುರೂಪ, ಮಹಾಘೋರ ಅಪಾತ್ರ.

**अवतारणा** (ಅವತಾರಣಾ) ಸ್ತ್ರೀ. ಸಂ. ಆಶ್ರಯ

**अवतारणे** (ಅವತಾರಣೇ) ಕ್ರಿ. ಧಾ. ಮೈಯಲ್ಲಿ ಸೇರು, ದೆವ್ವಬಡಿ.

**अवतारू** (ಅವತಾರೂ) ವಿ. ಹತ್ತು (ಸಂಖ್ಯೆ).

**अवंतिका** (ಅವಂತಿಕಾ) ಸ್ತ್ರೀ. ಉಜ್ಜಯಿನಿ. -ಒಂದು ಧಾಮ.

**अवतीर्ण** (ಅವತೀರ್ಣ) ವಿ. ಸಂ. ಅವತರಿಸಿದ, ಅವತಾರ ತಾಳಿದ.

**अवथणणे–थानणे** (ಅವಥಣಣೇ–ಥಾನಣೇ) ಕ್ರಿ. ಅ. ಮೊಲೆ ಕುಡಿಯುವುದನ್ನು ನಿಲ್ಲಿಸುವುದರಿಂದ ಮಗುವಿನ ಪ್ರಕೃತಿ) ಕೆಡು.

**अवथान** (ಅವಥಾನ್) ನ. ಮೊಲೆ ಬಿಡಿಸುವುದರಿಂದ ಕೂಸಿನ ಪ್ರಕೃತಿ ಕೆಡುವಿಕೆ.

**अवदाध** (ಅವದಾಧ್) ಪು. ಅವಧಿ, ಸಮಯ.

**अवदशा–सा** (ಅವದಶಾ–ಸಾ) ಸ್ತ್ರೀ. ಕೆಟ್ಟಕಾಲ, ೨. ದುರ್ದೈವ ೩. ಜಗಳಗಂಟಿ ಹೆಂಡತಿ.

**अवदसचिन्ह** (ಅವದಸಚಿನ್ಹ) ನ. ಸಂ. ಮುಂಬರುವ ಕೆಟ್ಟಕಾಲದ ಲಕ್ಷಣ.

**अवंदा** (ಅವಂದಾ) ಕ್ರಿ. ವಿ. ಈ ವರ್ಷ, ಪ್ರಸ್ತುತವರ್ಷದಲ್ಲಿ.

**अवदांडा** (ಅವದಾಂಡಾ) ಪು. ಹಾನಿ, ದಂಡನೆ.

**अवदान** (ಅವದಾನ್) ನ. ಸಂ. ಬಲಿ, ಆಹುತಿ. ೨. ಲಂಚ.

**अवदार** (ಅವದಾರ್) ನ. ಹಡಗಿನ ಪಟ, ಹಾಯಿ.

**अवदिवस** (ಅವದಿವಸ್) ಪು. ಸಂ. ಕೆಟ್ಟದಿವಸ.

**अवदीप्ती** (ಅವದೀಪ್ತೀ) ಸ್ತ್ರೀ. ತೇಜಸ್ಸು.

**अवध** (ಅವಧ್) ಪು. ಕೊನೆ. ೨. ಅವಧಿ.

**अवधंडा** (ಅವಧಂಡಾ) ಪು. ಸಂಕಟ.

**अवधणा–धाण** (ಅವಧಣಾ–ಧಾಣ) ಪು. ನ. ನೋವಿನಿಂದ ಏಳುವ ಗುಳ್ಳೆ, ಹದಗಡಲೆ.

**अवधात** (ಅವಧಾತ್) ವಿ. ತುಂಟ, ಹಟಮಾರಿ.

**अवधातू** (ಅವಧಾತೂ) ವಿ. ಧಾತು ರಹಿತ.

**अवधान** (ಅವಧಾನ್) ನ. ಲಕ್ಷ್ಯ, ಎಚ್ಚರಿಕೆ, ಜಾಗರೂಕತೆ.

**अवधानी** ( ಅವಧಾನೀ ) ವಿ. ಜಾಗರೂಕ, ಎಲ್ಲ ಮಾತುಗಳನ್ನು ಲಕ್ಷ್ಯದಲ್ಲಿಡುವವ.

**अवधारणा** ( ಅವಧಾರಣಾ ) ಸ್ತ್ರೀ. ನಿಶ್ಚಯ. ೨. ಶ್ರವಣ, ಮನನ.

**अवधारणे** (ಅವಧಾರಣೇ) ಕ್ರಿ. ಧಾ. ಕೇಳು, ಲಕ್ಷ್ಯಗೊಡು. ೨. ನಿಶ್ಚಯಿಸು.

**अवधी** (ಅವಧೀ) ಸ್ತ್ರೀ. ಸಂ. ಕಾಲ, ಅವಧಿ, ಅನುವು.

**अवधूत** (ಅವಧೂತ್) ವಿ. ಸಂ. ದತ್ತಾತ್ರೇಯ, ೨. ಜಾತಿಭೇದವನ್ನು ಮನ್ನಿಸದ ಸಾಧು. ೩. ನಗ್ನ.

**अवध्य** (ಅವಧ್ಯ) ಪು. ಸಂ. ಕೊಲ್ಲಬಾರದಂತಹ.

**अवंध्य** (ಅವಂಧ್ಯ) ವಿ. ಸಂ. (ಮಾತು) ಸುಳ್ಳಾಗದವ, ಫಲದಾಯಕ

**अवन** (ಅವನ್) ನ. ಸಂ. ಸಂರಕ್ಷಣೆ.

**अवनत** (ಅವನತ್) ವಿ. ಸಂ. ಬಗ್ಗಿದವ, ಮಣಿದವ, ನಮಸ್ಕಾರಮಾಡುವವ, ನಮ್ರ.

**अवनति** (ಅವನತಿ) ಸ್ತ್ರೀ. ಸಂ. ಅಪಕರ್ಷ, ದುರ್ದಶೆ, ಕೆಟ್ಟಕಾಲ.

**अवनी** (ಅವನೀ) ಸ್ತ್ರೀ. ಸಂ. ಪೃಥ್ವಿ.

**अवनिघा** (ಅವನಿಘಾ) ಸ್ತ್ರೀ. ಸಂ. ಘಾ. ಉಪೇಕ್ಷೆ ದುರ್ಲಕ್ಷ್ಯ.

**अवमान** (ಅವಮಾನ್) ಪು. ಸಂ. ಅನಾದರ, ಉಪೇಕ್ಷೆ.

**–णे** ( –ಣೇ ) ಕ್ರಿ. ಧಾ. ಅನಾದರ, ಮಾಡು ಲೆಕ್ಕಿಸದಿರು.

**अवयव** (ಅವಯವ) ಪು. ಸಂ. ಶರೀರದ ಭಾಗ, ಅಂಗಾಂಗ.

**अवर** (ಅವರ್) ವಿ. ಸಂ. ಚಿಕ್ಕ, ಕನಿಷ್ಠ, ಅಧೀನಸ್ಥ.

**अवरज** (ಅವರಜ್) ನ. ಅಪಾರ ಹಾನಿ, ಕೇಡು.

**अवरण** (ಅವರಣ) ವಿ. ಸಂ. (ವಯಸ್ಸಾಗಿದ್ದರೂ) ಮದುವೆಯಾಗದ.

**अवरसचवरस** (ಅವರಸಚವರಸ್) ಕ್ರಿ. ವಿ. ಎಲ್ಲ ಕಡೆಯಿಂದ.

**अवरूद्ध** (ಅವರುದ್ಧ) ವಿ. ಸಂ. ತಡೆದ, ಪ್ರತಿಬಂಧ ಹಾಕದ. ೨. ಸ್ತ್ರೀ. ಸೂಳೆ–ಉಪಪತ್ನಿ.

**अवरोध** (ಅವರೋಧ) ನ. ಸಂ. ತಡೆ, ಪ್ರತಿಬಂಧ.

**–णे** (–ಣೇ) ಧಾ. ಪ್ರತಿಬಂಧಿಸು.

**अवरोह** (ಅವರೋಹ) ಪು. ಕೆಳಗೆ ಬರುವಿಕೆ, ಇಳಿಯುವಿಕೆ, ಇಳಿಸುವಿಕೆ (ದನಿ).

**अवर्षण** (ಅವರ್ಷಣ) ನ. ಸಂ. ಮಳೆಯಾಗದಿರೋಣ, ಬರ.

**अव–व्वल** ( ಅವ–ವ್ವಲ್ ) ವಿ. ಘಾ. ಪ್ರಥಮ, ಮೊದಲನೆಯ, ಜ್ಯೇಷ್ಠ.

**अवलणे** (ಅವಲಣೇ) ಕ್ರಿ. ಅ. ಸಂ. ತಿರುಗು, ತಿರುಗಿಸು. ೨. ಹುಟ್ಟುಹಾಕು, ಹಾಯಿಸು.

**अवलंब** (ಅವಲಂಬ) ಪು. ಸಂ. ಆಶ್ರಯ. ಆಧಾರ.

**–णे** (–ಣೇ) ಧಾ. ಅವಲಂಬಿಸು.

**–न** ( –ನ್ ) ನ. ಅವಲಂಬನ, ಶರಣು. ೨. ಆಶ್ರಯ.

**अवलंबित** (ಅವಲಂಬಿತ್) ವಿ. ಸಂ. ಆಧಾರವಿದ್ದ, ಆಧಾರಿಸಿದ.

**अवलक्षण** (ಅವಲಕ್ಷಣ) ನ. ಸಂ. ಕೆಟ್ಟ ಲಕ್ಷಣ, ಅಶುಭ.

**अवलक्षणी** (ಅವಲಕ್ಷಣೀ) ವಿ. ಸಂ. ಅಶುಭ, ಕುರೂಪ ಕುಂದುತರುವ.

**अवलाद्** (ಅವಲಾದ್) ಸ್ತ್ರೀ. ಅರ. ಸಂತಾನ, ಸಂತತಿ ಪೀಳಿಗೆ.

**अवलिया** (ಅವಲಿಯಾ) ಪು. ಬಹು, ಅರ. ಸಾಧು.

**अवलिला(ळा)** (ಅವಲಿಲಾ–ಳಾ) ಕ್ರಿ. ವಿ. ಸಹಜವಾಗಿ ಅನಾಯಾಸಿವಾಗಿ.

**अवलुंठन** (ಅವಲುಂಠನ್) ನ. ಸ. ಉರುಳಾಡುವಿಕೆ. ೨. ಸೆಳೆಯುವಿಕೆ.

**अवले** (ಅವಲೇ) ನ. ಹುಟ್ಟುಗೋಲು.

**–करी** (–ಕರೀ) ಪು. ಹುಟ್ಟುಹಾಕುವ ಅಂಬಿಗ.

**अवलेप** (ಅವಲೇಪ) ನ. ಸಂ. ಹೆಚ್ಚುವಿಕೆ, ಹೊಸುವಿಕೆ. ಮಾರ್ಜನ, ಲೇಪ, ಬಳಿಯುವಿಕೆ.

**अवलेह** (ಅವಲೇಹ) ಪು. ಸಂ. ನೆಕ್ಕುವ ಔಷಧ.

**अवलोकणे** (ಅವಲೋಕಣೇ) ಧಾ. ಸಂ. ಅವಲೋಕಿಸು ನೋಡು, ಪರಿಶೀಲನಮಾಡು.

**अवलोकित** (ಅವಲೋಕಿತ್) ವಿ. ಸಂ. ನೋಡಿದ, ಪರಿಶೀಲಿಸಿದ.

**अवश** (ಅವಶ) ವಿ. ಸಂ. ವಶದಲ್ಲಿರದ, ಸ್ವತಂತ್ರ.

**अवशिष्ट** (ಅವಶಿಷ್ಟ) ವಿ. ಸಂ. ಉಳಿದ, ಶೇಷ.

**अवशेष** (ಅವಶೇಷ್) ಪು. ಸಂ. ಉಳಿದ ಗುರುತು. ೨. ಬಾಕಿ, ವಸೂಲಾಗಬೇಕಾದ ಹಣ. ೩. ರೋಗ ನಿವಾರಣೆಯಾದ ನಂತರ ಉಳಿದುಕೊಂಡ ಲಕ್ಷಣ ಗಳು, ಅಂಶಗಳು. ೪. (ಇತಿಹಾಸ) (ಹಾಳಾದ ಪಟ್ಟಣ ಮುಂತಾದವುಗಳಲ್ಲಿಯ) ಬಿದ್ದ ಕಟ್ಟಡಗಳು.

**अवश्य** (ಅವಶ್ಯ) ಕ್ರಿ. ವಿ. ಸಂ. ಅಗತ್ಯವಾಗಿ. ೨. ಖಂಡಿತವಾಗಿ.

**अवलोडन** (ಅವಲೋಡನ) ನ. ಸಂ. ಜಲಕ್ರೀಡೆ.

**अवश्यंभावी** (ಅವಶ್ಯಂಭಾವೀ) ವಿ. ಸಂ. ಜರುಗಲೇ ಬೇಕಾದ, ಆಗಿತೀರುವ.

**अवश्यमेव** (ಅವಶ್ಯಮೇವ) ಕ್ರಿ. ವಿ. ಅವಶ್ಯವಾಗಿ.

**अवष्टंभ** (ಅವಷ್ಟಂಭ) ಪು. ಸಂ. ತಡೆ. ೨. ದಯೆ, ಅನುಗ್ರಹ. ೩. ಮಲಬದ್ಧತೆ.

**अवस** (ಅವಸ್) ಸ್ತ್ರೀ. ಅಮಾವಾಸ್ಯೆ.

**अवसेस पुनवेस** (ಅವಸೇಸ್ ಪುನವೇಸ್) ಯಾವಾ ಗಾದರೊಮ್ಮೆ, ಅನಿಯಮಿತವಾಗಿ.

**अवसान** (ಅವಸಾನ್) ನ. ಸಂ. ಅಂತ, ಕೊನೆ. ೨. ಮರಣ. ೩. ತಡೆ, ವಿರಾಮ, ನಿಂತು ಹೋಗುವಿಕೆ. ೪. ನ. ಅರ. ಎಚ್ಚರ, ಧೈರ್ಯ, ಅವಧಾನ.

**–घात** (–ಘಾತ್) ಪು. ಘಾತ, ದ್ರೋಹ.

**अवसानी** (ಅವಸಾನೀ) ವಿ. ಅರ. ಎಚ್ಚರವುಳ್ಳವ, ಧೈರ್ಯಶಾಲಿ.

**अवसाय** (ಅವಸಾಯ್) ಪು. ಸಂ. ಕೊನೆ, ಅಂತ, ಮುಗಿತಾಯ.

**अवस्ता** (ಅವಸ್ತಾ) ಕ್ರಿ. ವಿ. ಎಂದಿಗೂ.

**अवस्था** (ಅವಸ್ಥಾ) ಸ್ತ್ರೀ. ದಶೆ, ಅವಸ್ಥೆ.

**–तीत** (–ತೀತ್) ವಿ. ಮುಕ್ತ.

**अवस्थित** (ಅವಸ್ಥಿತ್) ವಿ. ಸಂ. ಸ್ಥಾನಾಪನ್ನ,

**अवहित** (ಅವಹಿತ್) ವಿ. ಸಂ. ಲಕ್ಷ್ಯಗೊಟ್ಟು ಕೇಳು ವವ, ಗಮನಿಸುವವ.

**अवहेलन** (ಅವಹೇಲನ) ನ. ಸಂ. ತಿರಸ್ಕಾರ.

**अवळणे** (ಅವಳಣೇ) ಧಾ. ಗಟ್ಟಿಯಾಗಿ ಹಿಡಿ, ಅಪ್ಪು.

**अवळा** (ಅವಳಾ) ಪು. ನೆಲ್ಲಿಕಾಯಿ.

**अवळी** (ಅವಳೀ) ಸ್ತ್ರೀ ನೆಲ್ಲಿಗಿಡ.

**–भोजन** (–ಭೋಜನ) ಒಂದು ಹಬ್ಬ. (ವೈಕುಂಠ ಚತುರ್ದಶಿ)

**अवक्षर** (ಅವಕ್ಷರ್) ನ. ಒಂದು ಶಬ್ದಕೂಡ (ಇಲ್ಲ.)

**अवक्षारण** (ಅವಕ್ಷಾರಣ) ನ. ಸಂ. ಉಪನಯನದ ಒಂದು ವಿಧಿ.

**अवक्षिप्त** (ಅವಕ್ಷಿಪ್ತ) ವಿ. ಸಂ. ಎಸೆದ, ತೆಗೆದುಹಾಕಿದ.

**अवज्ञा** (ಅವಜ್ಞಾ) ಸ್ತ್ರೀ. ಸಂ. ಅನಾದರ, ಆಜ್ಞಾಭಂಗ.

**अवा** (ಅವಾ) ಸ್ತ್ರೀ. ಕ. ಕುಂಬಾರನ ಕುಲಿಮೆ. ೨. ಅವ್ವ. ೩. ಉಪಪತ್ನಿ.

**अवाई** (ಅವಾಈ) ಸ್ತ್ರೀ. ಕಿವದಂತಿ, ವದಂತಿ–ವಾರ್ತೆ, ಹಾರುಸುದ್ದಿ.

**–तवाई** (–ತವಾಈ) ಸ್ತ್ರೀ. ಸಂಕಟ.

**अवाक्** (ಅವಾಕ್) ಕ್ರಿ. ವಿ. ಸಂ. ಮಾತನಾಡದೆ ಸುಮ್ಮನೆ.

**अवाकणे** (ಅವಾಕಣೇ) ಕ್ರಿ. ಸಂ. ಅಂದಾಜುಮಾಡು. ೨. ಅನುಮಾನ ಮಾಡು. ೩. ಅಲ್ಲಗಳೆ.

**अवाका** (ಅವಾಕಾ) ಪು. ಹತೋಟಿ, ನಿಯಂತ್ರಣ, ವಶ.

**अवांग** (ಅವಾಂಗ್) ನ. ಸಂ. ಕೋಮಲ, ಅವಯವ, ಮೃದುಸ್ಥಾನ.

**अवागमे** (ಅವಾಗಮೆ) ಕ್ರಿ. ವಿ. ತಿಳಿಯುವ ಹಾಗೆ.

**अवाची** (ಅವಾಚೀ) ಸ್ತ್ರೀ. ದಕ್ಷಿಣದಿಕ್ಕು.

**अवाचे सवा** (ಅವಾಚೇಸವಾ) ಕ್ರಿ. ವಿ. ಅತಿಶಯ, ವಿಪರೀತ.

**अवाच्य** (ಅವಾಚ್ಯ) ವಿ. ಸಂ. ಉಚ್ಚಾರ ಮಾಡ ಬಾರದಂತಹ.

**अवाजवी** (ಅವಾಜವೀ) ವಿ. ಮ.+ಅರ. ಅಯೋಗ್ಯ.

**अवाट** (ಅವಾಟ್) ಕ್ರಿ. ವಿ. ಅಡ್ಡದಾರಿಯಿಂದ.

**अवाड** (ಅವಾಡ್) ನ. ಮನೆಯ ಸುತ್ತುಮುತ್ತಲಿನ ಬೇಲಿಹಾಕಿದ ಜಾಗೆ.

**अवाडाव** (ಅವಾಡಾವ) ಸ್ತ್ರೀ. ಕುಮಾರ್ಗ, ಕುಕರ್ಮ.

**अवाढव्य** (ಅವಾಢವ್ಯ) ವಿ. ವಿಸ್ತೀರ್ಣ, ಪ್ರಚಂಡ, ಬಹುದೊಡ್ಡ.

**अवात** (ಅವಾತ್) ವಿ. ಸಂ. ಶಾಂತ, ಗಾಳಿಯಿಲ್ಲದ.

**अवांतर** (ಅವಾಂತರ) ವಿ. ಸಂ. ಉಳಿದ, ಮಿಕ್ಕ, ಅನ್ವಯಿಸದ, ಬೇಕಿಲ್ಲದ, ಸಂಬಂಧಲ್ಲವಿದ.

**अवाप्त** (ಅವಾಪ್ತ) ವಿ. ಸಂ. ಗಳಿಸಿದ, ದೊರಕಿಸಿದ, ಸಿಕ್ಕ, ಪಡೆದುಕೊಂಡ.

**अवाप्ती** (ಅವಾಪ್ತಿ) ಸ್ತ್ರೀ. ಸಂ. ಲಾಭ, ಸಾಧನ.

**अवार** (ಅವಾರ) ವಿ.ದೊಡ್ಡ, ನ.ಖಾಲೀ (ಖುಲ್ಲಾ) ಜಾಗೆ.

**अवारा** (ಅವಾರಾ) ವಿ. ಅತಿಶಯ.

**अवारित** (ಅವಾರಿತ) ವಿ. ಸಂ. ನಿರಂಕುಶ.

**अवारू** (ಅವಾರೂ) ನ. ಉಪಕರಣ. ೨. ವಿ. ಬೇರೆ.

**अवार्य** (ಅವಾರ್ಯ) ವಿ.ಸಂ.ತಡೆಯಲು ಅವಶ್ಯಕವಾದ

**अवाहक** (ಅವಾಹಕ್) ವಿ. ಸಂ. (ಭೌತಿಕ ಶಾಸ್ತ್ರ) ಉಷ್ಣತೆಯು ಹರಿದು ಹೋಗಲಾರದಂತಹ.

**अवाही** (ಅವಾಹೀ) ವಿ. ಸಾಗುವಳಿ ಮಾಡದೆ ಬತ್ತಿದ ಪೈರು.

**अवाक्षर** (ಅವಾಕ್ಷರ) ನ.ಅವಕ್ಷರ ನೋಡಿರಿ.೨.ತಪ್ಪು, ಅಭದ್ರ ಶಬ್ದ.

**अवी** (ಅವೀ) ಪು. ಗಟರು. ೨. ಬೇಲಿ.

**अविकल** (ಅವಿಕಲ) ವಿ. ದೃಢ, ಗಟ್ಟಿಮುಟ್ಟ.

**अविकार** (ಅವಿಕಾರ) ವಿ. ಸಂ. ವಿಕಾರ ರಹಿತ, ನಿರ್ದೋಷ.

**अविकारी** ಅವಿಕಾರೀ) ವಿ. ಸಂ. ಬದಲಾಗದ, ಅವಿನಾಶಿ.

**अविकृत** (ಅವಿಕೃತ) ವಿ. ಸಂ. ಬದಲಾಗದ, ವಿಕಾರ ಹೊಂದದ.

**अविचार** (ಅವಿಚಾರ) ಪು. ಸಂ. ಅವಿವೇಕ.

**अविच्छिन्न** (ಅವಿಚ್ಛಿನ್ನ) ಕ್ರಿ. ವಿ. ಸಂ. ತುಂಡಾಗದ.

**अविट** (ಅವಿಟ್) ವಿ. ಬೇಸರಬರದ, ಮನೋರಂಜಕ, ಮಾಸದ.

**अविदग्ध** (ಅವಿದಗ್ಧ) ವಿ. ಸಂ. ಅಪಂಡಿತ, ಅವಿವೇಕ.

**अविद्य** (ಅವಿದ್ಯ) ವಿ.ಸಂ.ಕಲಿಯದ, ಶಿಕ್ಷಣ ಪಡೆಯದ

**अविद्यमान** (ಅವಿದ್ಯಮಾನ್) ವಿ. ಸಂ. ಇಲ್ಲದ. ಇಲ್ಲ ದಂತಾದ ಅಸ್ತಿತ್ವರಹಿತ.

**अविद्या** (ಅವಿದ್ಯಾ) ಸ್ತ್ರೀ. ಸಂ.(ವೇದಾಂತ) ಮಾಯೆ ಭ್ರಮೆ, ಅಧ್ಯಾಸ.

**अविंध** (ಅವಿಂಧ್) ವಿ. ೧. (ಕಿವಿ) ಚುಚ್ಚಿಕೊಳ್ಳದ ಮುಸಲಮಾನ, ಯವನ, ಮ್ಲೇಂಛ.

**अविधवा** (ಅವಿಧವಾ) ಸ್ತ್ರೀ. ಸುವಾಸಿನಿ, ಮುತ್ತೈದೆ. (ಲಾ) ಮುತ್ತೈದೆಯಾಗಿ ಸತ್ತವಳು.

**नवमी** (–ನವಮೀ) ಭಾದ್ರಪದ ವದ್ಯ ನವಮಿ.

**अविधी** ( ಅವಿಧೀ ) ಪು. ಸಂ. ನಿಯಮವಿಲ್ಲ ದಿರುವಿಕೆ. ಅಕ್ರಮತೆ.

**अविंधी** (ಅವೀಂಧೀ) ಸ್ತ್ರೀ. ಮುಸಲ್ಮಾನ ಸ್ತ್ರೀ.

**अविनाभाव** ( ಅವಿನಾಭಾವ್ ) ಪು. :ಸಂ. (ತರ್ಕ ಶಾಸ್ತ್ರ) ಅಸ್ತಿತ್ವಸಿದ್ಧವಾಗುವುದಕ್ಕೆ ಅವಶ್ಯಕ ವಿದ್ದ ಪ್ರಮಾಣ, ಸಂಗತಿ.

**अविनाश** (ಅವಿನಾಶ) ವಿ. ಸಂ. ಸ್ಥಿರ, ಚಿರ.

**अविनाशी** (ಅವಿನಾಶೀ) ವಿ. ಸಂ. ನಾಶಹೊಂದದ.

**अविनीत** (ಅವಿನೀತ) ವಿ. ಸಂ. ಉದ್ಧತ, ತುಂಟ.

**अविभक्त** ( ಅವಿಭಕ್ತ ) ವಿ. ಸಂ. ಸಂಯುಕ್ತ ಕುಟುಂಬ, ಪಾಲಾಗದ ಪರಿವಾರ.

**अविभाज्य** ( ಅವಿಭಾಜ್ಯ ) ವಿ. ಸಂ. ಭಾಗಾಕಾರ ಮಾಡಲಿಕ್ಕೆ ಬಾರದ.

**अविमुक्तक्षेत्र** (ಅವಿಮುಕ್ತಕ್ಷೇತ್ರ) ನ. ಸಂ. ಕಾಶೀಕ್ಷೇತ್ರ

**अविरजी** (ಅವಿರಜೀ) ವಿ. ಹೆಪ್ಪುಹಾಕದ.

**अविरल** (ಅವಿರಲ) ವಿ. ಸಂ. ಗಟ್ಟಿಯಾದ.

**अविलंब** (ಅವಿಲಂಬ) ಕ್ರಿ. ವಿ. ಸಂ. ಕೂಡನೆ, ತಟ್ಟನೆ.

**अविवक्षित** (ಅವಿವಕ್ಷಿತ) ವಿ. ಸಂ. ಸ್ಪಷ್ಟಗೊಳಿಸದ.

**अविवाहित** (ಅವಿವಾಹಿತ್) ವಿ. ಸಂ. ಮದುವೆಯಾಗದ

**अविवेक** (ಅವಿವೇಕ) ಪು. ಸಂ. ಅವಿಚಾರ.

**अविवेकी** ( ಅವಿವೇಕೀ ) ವಿ. ಸಂ. ಬುದ್ಧಿಯಿಲ್ಲದವ, ಅವಿವೇಕ.

**अविश्रांत** ( ಅವಿಶ್ರಾಂತ ) ವಿ. ಸಂ. ತೆರವಿಲ್ಲದ, ಅವಿರತ, ನಿಲ್ಲದ.

**अविश्वसनीय** (ಅವಿಶ್ವಸನೀಯ) ವಿ. ವಿಶ್ವಾಸವನ್ನಿ ಡಲಿಕ್ಕೆ ಅಪಾತ್ರ.

**अविश्वास** (ಅವಿಶ್ವಾಸ್) ಪು. ಸಂ. ನಂಬುಗೆಯಿಲ್ಲ ದಿರುವಿಕೆ.

**अविहित** (ಅವಿಹಿತ್) ನ. ಸಂ. ಶಾಸ್ತ್ರದಲ್ಲಿ ಹೇಳಿರದ.

**अवीक** (ಅವೀಕ್) ವಿ. ಹೆಚ್ಚಿನ, ಹೆಚ್ಚಿಗೆಯಾದ.

**अवीट** (ಅವೀಟ್) ವಿ. अविट ನೋಡಿರಿ.

**अवृष्टी** (ಅವೃಷ್ಟೀ) ಸ್ತ್ರೀ. ಸಂ. ಮಳೆ ಬೀಳದಿರುವಿಕೆ, ಬರ.

**अवेक्त** (ಅವೇಕ್ತ) ವಿ. ಅವ್ಯಕ್ತ.

**अवेग्रता** (ಅವೇಗ್ರತಾ) ಸ್ತ್ರೀ. ಚಿತ್ತ ಸಮಾಧಿ. ೨. ಅವ್ಯಗ್ರತೆ.

**अवेच** (ಅವೇಚ್) ವಿ. ಕ. ವೆಚ್ಚವನ್ನು ಉಳಿಸುವ, ಅಗ್ಗ.

**अवेल** (ಅವೇಲ್) ಪು. ಒಲೆಯ ಸಪಾಟುಭಾಗ.

**अवेव** (ಅವೇವ್) ಪು. ಅವಯವ.

**अवेळ** (ಅವೇಳ್) ಸ್ತ್ರೀ. ಅಯೋಗ್ಯ ಸಮಯ. ೨. ತಡ. ೩. ಅಪರಾತ್ರಿ.

**अवेक्षण** (ಅವೇಕ್ಷಣ್) ನ. ಸಂ. ವಿಚಾರಣೆ, ತಪಾಸು, ಸಂಶೋಧನೆ.

**अवो** (ಅವೋ) (ಉದ್ಗಾರ) ಸ್ವಾಮಿ, ಓ!

**अवोज** (ಅವೋಜ್) ಪು. ದುರ್ಲಕ್ಷ, ಅಲಕ್ಷ್ಯ.

**अवोक्षण** (ಅವೋಕ್ಷಣ) ನ. ನೀರು ಸಿಂಪಿಸುವಿಕೆ.

**अव्यक्त** (ಅವ್ಯಕ್ತ) ವಿ. ಸಂ. ವ್ಯಕ್ತವಾಗದ, ಸುಪ್ತ, ಗುಪ್ತ, ಗೂಢ, ಅಸ್ಪಷ್ಟ, ಅಮೂರ್ತ.

**अव्यंग** (ಅವ್ಯಂಗ್) ವಿ. ಸಂ. (ಶಾರೀರಿಕ), ಕುಂದು, ನ್ಯೂನವಿರದ.

**अव्यग्र** (ಅವ್ಯಗ್ರ) ವಿ. ಸಂ. ಶಾಂತ, ಸ್ವಸ್ಥ.

**अव्यभिचार** (ಅವ್ಯಭಿಚಾರ) ಪು. ಸಂ. ಏಕಾಗ್ರತೆ, ಏಕನಿಷ್ಠೆ.

**अव्यय** ( ಅವ್ಯಯ ) ವಿ. ಸಂ. ನಾಶಹೊಂದದ (ವ್ಯಾಕರಣ) ಅವ್ಯಯ.

**अव्यवस्थित** (ಅವ್ಯವಸ್ಥಿತ) ವಿ. ಸಂ. ಯೋಗ್ಯಸ್ಥಾನ ದಲ್ಲಿರದ, ಅವ್ಯವಸ್ಥಿತ, ಅಕ್ರಮ.

**अव्यवस्था** (ಅವ್ಯವಸ್ಥಾ) ಸ್ತ್ರೀ. ಸಂ. ಅವ್ಯವಸ್ಥಿತ ಸ್ಥಿತಿ.

**अव्यवहार्य** (ಅವ್ಯವಹಾರ್ಯ) ವಿ. ಸಂ. ವ್ಯಾವಹಾ ರಿಕವಲ್ಲದ, ಅಸಾಧ್ಯ.

**अव्या** (ಅವ್ಯಾ) ಪು. ತಡೆ, ಪ್ರತಿಬಂಧ.

**अव्याज** (ಅವ್ಯಾಜ) ವಿ. ಸಂ. ಸರಲ, ನಿಷ್ಕಪಟ.

**अव्यापारेषुव्यापार** (ಅವ್ಯಾಪಾರೇಷುವ್ಯಾಪಾರ) ಪು. ಮಾಡಬಾರದ ಕೆಲಸದಲ್ಲಿ ತೊಡಗುವಿಕೆ.

**अव्याहत** (ಅವ್ಯಾಹತ) ವಿ. ಸಂ. ತಡೆಯಿಲ್ಲದ, ಸತತ.

**अव्युत्पन्न** (ಅವ್ಯುತ್ಪನ್ನ) ವಿ. ಸಂ. ವಿದ್ವಾಂಸನಲ್ಲದ ಅಶಿಕ್ಷಿತ.

**अव्हेर** (ಅವ್ಹೇರ್) ಪು. ಅನಾದರ, ತಿರಸ್ಕಾರ.
**णे** (–ಣೇ) ಅನಾದರ ಮಾಡು ತಿರಸ್ಕರಿಸು.

**अशक्त** (ಅಶಕ್ತ) ವಿ. ಸಂ. ಶಕ್ತಿಯಿಲ್ಲದ.

**अशक्य** (ಅಶಕ್ಯ) ವಿ. ಸಂ. ಅಸಾಧ್ಯ ಶಕ್ಯವಲ್ಲದ, ಆಗದ.

**अशन** (ಅಶನ್) ವಿ. ಸಂ. ಊಟ, ಭೋಜನ.

**अशनी** (ಅಶನೀ) ಸ್ತ್ರೀ. ಸಂ. ಮಿಂಚು.

**अशांत** (ಅಶಾಂತ್) ವಿ. ಸಂ. ವ್ಯಾಕುಲ.

**अशिष्ट** (ಅಶಿಷ್ಟ) ವಿ. ಸಂ. ಅಸಾಮಾನ್ಯ, ಶಿಷ್ಟಚಾ ರಕ್ಕೆ ಮೀರಿದ.

**अशीतशी** (ಅಶೀತಶೀ) ವಿ. ಸಾಮಾನ್ಯ, ಕ್ಷುಲ್ಲಕ.

**अशील** (ಅಶೀಲ್) ಪು. ಅರ. ಪಕ್ಷಕಾರ.

**अशुद्ध** (ಅಶುದ್ಧ) ವಿ. ಸಂ. ತಪ್ಪು.

**अशोक** (ಅಶೋಕ್) ಪು. ಸಂ. ಸಾಮ್ರಾಟ್ ಅಶೋಕ. ೨. ಅಶೋಕವೃಕ್ಷ.

**अशोधित** (ಅಶೋಧಿತ) ವಿ. ಸಂ. ಶುದ್ಧಗೊಳಿಸದ.

**अशुश्रूषु** (ಅಶುಶ್ರೂಷು) ವಿ. ಸಂ. ಲೆಕ್ಕಿಸದವ, ಕೇಳ ದವ, ಸೇವೆಮಾಡದವ.

**अशौच** (ಅಶೌಚ) ಪು. ಸಂ. ಮೈಲಿಗೆ, ಸೂತಕ, (ವೃ) ರಿದ್ಧಿ.

**अश्मरी** (ಅಶ್ಮರೀ) ಸ್ತ್ರೀ. ಸಂ. ಮೂತ್ರಕೃಚ್ಛ್ರ.

**अश्मा** (ಅಶ್ಮಾ) ಪು. ಸಂ. ಕಲ್ಲು. ೨. ಉತ್ತರ ಕ್ರಿಯೆಯಲ್ಲಿಯ ಕಲ್ಲು.

**अश्मीभूत** (ಅಶ್ಮಿಭೂತ್) ವಿ. ಸಂ. ಕಲ್ಲಂತೆ ಆದ.

**अश्रद्ध** (ಅಶ್ರದ್ಧ) ವಿ. ಸಂ. ಶ್ರದ್ಧಾರಹಿತ.

**अश्रफ** (ಅಶ್ರಫ್) ವಿ. ಅರ. ಘನವಂತ.

**अश्रफी** (ಅಶ್ರಫೀ) ಸ್ತ್ರೀ. ಫಾ. ಹೊನ್ನು, ಸುವರ್ಣ ನಾಣ್ಯ.

**अश्राप** (ಅಶ್ರಾಪ್) ವಿ. ಅರ. (ಅಶ್ರಫ್) ಸಭ್ಯ, ಸದ್ಗುಣಿ, ಸದಾಚಾರಿ. ೨. ನಿಷ್ಪಾಪ, (ಅ) ಪಾಪ.

**अश्राव्य** (ಅಶ್ರಾವ್ಯ) ವಿ. ಸಂ. ಕೇಳಬಾರದಂತಹ. ೨. ಕೇಳಿಸದ. ೩. ಅಶ್ಲೀಲ.

**अश्रू** (ಅಶ್ರೂ) ಪು. ಸಂ. ಕಣ್ಣೀರು.

**अश्रुत** (ಅಶ್ರುತ್) ವಿ. ಸಂ. ಮುಂಚೆ ಎದೂ ಕೇಳದ, ವಿಚಿತ್ರ, ಸೋಜಿಗದ.

**अश्लाघ्य** ( ಅಶ್ಲಾಘ್ಯ ) ವಿ. ಸಂ. ಅಯೋಗ್ಯ, ಅನುಚಿತ.

**अश्लील** (ಅಶ್ಲೀಲ) ವಿ. ಸಂ. ಬೀಭತ್ಸ, ಹೇಸಿಗೆ ಅನಿಸುವ.

**अश्व** (ಅಶ್ವ) ಪು. ಸಂ. ಕುದುರೆ.
**–खाद्य** (–ಖಾದ್ಯ) ನ. ಕಡಲೆ
**–गती** (–ಗತೀ) ಸ್ತ್ರೀ. ಕುದುರೆಯ ವೇಗ.

–गंधा (–ಗಂಧಾ) ಸ್ತ್ರೀ. ವನಸ್ಪತಿ ವಿಶೇಷ.
–धाटी (–ಧಾಟೀ) ಒಂದು ವೃತ್ತ.
–भार (–ಭಾರ) ಪು. ಕುದುರೆಯ ದಂಡು.
–मेध ( – ಮೇಧ್ ) ಪು. ಚಕ್ರವರ್ತಿಯು ಮಾಡುವಯಜ್ಞ.
अश्वत्थ (ಅಶ್ವತ್ಥ) ಪು. ಸಂ. ಅರಳೆಯಗಿಡ.
अश्विनी (ಅಶ್ವಿನೀ) ಸ್ತ್ರೀ. ಸಂ. ಅಶ್ವಿನೀ ನಕ್ಷತ್ರ.
अश्विनीकुमार (ಅಶ್ವಿನಿಕುಮಾರ) ಪು. ಸಂ. ಬಹು. ದೇವ ವೈದ್ಯ.
अष्ट (ಅಷ್ಟ) ಸ್ತ್ರೀ. ಸಂ. ಎಂಟು.
–क (–ಕ್) ಸ್ತ್ರೀ. ಎಂಟರ ಗಂಟು, ಸಮುದಾಯ.
–कर्णिका (–ಕರ್ಣಿಕಾ) ಸ್ತ್ರೀ. ಕಮಲದಳ.
–गंध (–ಗಂಧ್) ನ. ಎಂಟು ಬಗೆಯ. ಸುಗಂಧ ದ್ರವ್ಯಗಳು, –पद (–ಪದ) ಪು. ಜೇಡ.
–पैल्ल (–ಪೈಲೂ) ವಿ. ಸರ್ವಶಾಸ್ತ್ರ ನಿಪುಣ, ಸರ್ವಜ್ಞ.
–पूत्री (–ಪುತ್ರಿ) ವಿ. ಮದುವೆಯ ಸಮಯ ದಲ್ಲಿ ವಧುವಿಗೆ ಉಡಿಸಿದ ಅರಿಶಿಣ ಬಣ್ಣದ ಸೀರೆ.
–म (–ಮ್) ವಿ. ಎಂಟನೆಯ.
–मांश (–ಮಾಂಶ್) ಎಂಟನೆಯ ಅಂಶ ೧/೮.
–मी (–ಮೀ) ಸ್ತ್ರೀ. ತಿಥಿ.
अष्टांग (ಅಷ್ಟಾಂಗ್) ಪು. ಸಂ. ಶರೀರದ ಎಂಟು ಅವಯವಗಳು.
अष्टादश (ಅಷ್ಟಾದಶ್) ವಿ. ಸಂ. ಹದಿನೆಂಟು.
अष्टावक्र (ಅಷ್ಟಾವಕ್ರ) ಪು. ಸಂ. ಕಹೋಲ ಋಷಿಯ ಮಗ. ೨. (ಲಾ) ಕುರೂಪ, ವಿದ್ರೂಪ.
अष्टावधानी (ಅಷ್ಟಾವಧಾನೀ) ವಿ. ಸಂ. ಒಂದೇ ಸಮಯದಲ್ಲಿ ಎಂಟು ಕಡೆಗೆ ಸಮಾನ ಲಕ್ಷ್ಯವಿದ್ದವ.
अष्टाक्षरी (ಅಷ್ಟಾಕ್ಷರೀ) ಸ್ತ್ರೀ. ಎಂಟು ಅಕ್ಷರಗಳ ಮಂತ್ರ.
अष्टौप्रहर (ಅಷ್ಟೌಪ್ರಹರ್) ಕ್ರಿ. ವಿ. ದಿನರಾತ್ರಿ.
अष्ठी (ಅಷ್ಠೀ) ಸ್ತ್ರೀ. ಗಂಟು.
असकृत् (ಅಸಕೃತ್) ಕ್ರಿ. ವಿ. ಸಂ. ಮೇಲಿಂದ ಮೇಲೆ, ಪುನಃಪುನಃ.
असक्त (ಅಸಕ್ತ) ವಿ. ಸಂ. ವಿರಕ್ತ.
असंख्य (ಅಸಂಖ್ಯ) ವಿ. ಸಂ. ಎಣಿಸಲಿಕ್ಕೆ ಬಾರದ.
असंग (ಅಸಂಗ್) ವಿ. ಸಂ. ಆಸಕ್ತಿಯಿಲ್ಲದವ. ೨. ಒಬ್ಬೊಂಟಿಗ.
असंगत (ಅಸಂಗತ) ವಿ. ಸಂ. ಹೊಂದದ, ಕೂಡದ, ವಿಸಂಗತ.
असंगती (ಅಸಂಗತೀ) ಸ್ತ್ರೀ. ಸಂ. ಅಸಂಬದ್ಧತೆ, ಅನನ್ವಯ.
असगोत्र (ಅಸಗೋತ್ರ) ವಿ. ಸಂ. ಭಿನ್ನಗೋತ್ರದ.
असगंध (ಅಸಗಂಧ) ಪು. ಅಶ್ವಗಂಧ ವನಸ್ಪತಿ.
असंगड–डी (ಅಸಂಗಡ–ಡೀ) ಸ್ತ್ರೀ. ವಿಸಂಗತಿ.
असंचळ (ಅಸಂಚಳ್) ವಿ. ಚಂಚಲವೃತ್ತಿ.
असट (ಅಸಟ್) ವಿ. ಕೃಶ, ತೆಳ್ಳನ್ನ.
असडणे (ಅಸಡಣೇ) ಕ್ರಿ. ಸಂ. ಸೆಳೆದುಕೊಳ್ಳು, ಎಳೆದುಕೊಳ್ಳು.
असणा (ಅಸಣಾ) ಪು. ಒಂದು ಗಿಡ.
असंत (ಅಸಂತ) ವಿ. ಅಸ್ಥಿರ. ೨. ಸುಳ್ಳು.
असता (ಅಸತಾ) ವಿ. ಇರುವವ.
असती (ಅಸತೀ) ಸ್ತ್ರೀ. ಅಸಭ್ಯ ಸ್ತ್ರೀ.
असंतुष्ट (ಅಸಂತುಷ್ಟ) ವಿ. ಸಂ. ಸಮಾಧಾನ ಹೊಂದದ.
असतेपण (ಅಸತೇಪಣ್) ನ. ಅಸ್ತಿತ್ವ.
असंतोष (ಅಸಂತೋಷ್) ಪು. ಸಂ. ಅಸಮಾಧಾನ.
असत (ಅಸತ್) ವಿ. ಸಂ. ನಿಜವಲ್ಲದ. ೨. ಅಸ್ತಿತ್ವ ಹೀನ.
असत्कार (ಅಸತ್ಕಾರ್) ಪು. ಸಂ. ಅನಾದರ.
असत्काळ (ಅಸತ್ಕಾಳ್) ಸ್ತ್ರೀ. ಅನಿಷ್ಟಕಾಲ.
असत्य (ಅಸತ್ಯ) ವಿ. ಸಂ. ಸುಳ್ಳು.
असंदिग्ध (ಅಸಂದಿಗ್ಧ) ವಿ. ಸಂ. ಸ್ಪಷ್ಟ, ಖಂಡಿತ.
असंपन्न (ಅಸಂಪನ್ನ) ವಿ. ಸಂ. ದರಿದ್ರ.
असंबद्ध (ಅಸಂಬದ್ಧ) ವಿ. ಸಂ. ಸಂಬಂಧವಿಲ್ಲದ.
असबाब (ಅಸಬಾಬ್) ಸ್ತ್ರೀ. ಅರ. ಸಾಮಾನು, ಒಡವೆ.
असंभव (ಅಸಂಭವ) ವಿ. ಸಂ. ಅಸಾಧ್ಯ. ೨. ಹುಟ್ಟಿಲ್ಲದ. ೩. ಸಂಭವಿಸದ.
असंभवी (ಅಸಂಭವೀ) ವಿ. ಸಂ. ದರಿದ್ರ.
असंभाव्य (ಅಸಂಭಾವ್ಯ) ವಿ. ಸಂ. ಸಂಭವಿಸದ, ಅಸಾಧ್ಯ, ಅಶಕ್ಯ.
असंभूती (ಅಸಂಭೂತೀ) ಸ್ತ್ರೀ. ಸಂ. ವಿನಾಶ ೨. ದರಿದ್ರತೆ.
असभ्य (ಅಸಭ್ಯ) ವಿ. ಸಂ. ಅಯೋಗ್ಯ, ಅನುಚಿತ, ಅಪಮಾನಕರ.
असमंजस (ಅಸಮಂಜಸ್) ವಿ. ಸಂ. ತಿಳಿಗೇಡಿ.
असंमत (ಅಸಂಮತ್) ವಿ. ಸಂ. ಅಮಾನ್ಯ.
असमर्थ (ಅಸಮರ್ಥ) ವಿ. ಸಂ. ಅಶಕ್ತ; ಸಾಮರ್ಥ್ಯವಿಲ್ಲದ.

**असमवाई** (ಅಸಮವಾಈ) ವಿ. ಸಂ. ಸಂಬಂಧವಿಲ್ಲದ. ೨. ಹೊಂದದ.

**असमाई** (ಅಸಮಾಈ) ವಿ. ಸಂ. ಹಿಡಿಸದ. ೨. ತಾಳಲಾಗದ.

**असर** (ಅಸರ್) ಪು. ಅರ. ಪರಿಣಾಮ.

**असर्फी** (ಅಸರ್ಫೀ) ಸ್ತ್ರೀ. ಹೊನ್ನು, ಸುವರ್ಣನಾಣ್ಯ.

**असल** (ಅಸಲ್) ವಿ. ಅರ. ಮೂಲ. ೨. ಶುದ್ಧ. ೩. (ಲಾ.) ಧೂರ್ತ, ಸ್ತ್ರೀ. ಅಸಲು, ಮೊಬಲಗು, ಮೂಲಧನ.

**असलग** (ಅಸಲಗ್) ವಿ. ಹೊಂದಿಕೊಂಡ, ಸಂಲಗ್ನ.

**असलफूल** (ಅಸಲ್‌ಫೂಲ್) ನ. ಪುಷ್ಪ ಸತ್ವ, ಅತ್ತರು, ಅರ್ಕ.

**असला** (ಅಸಲಾ) ವಿ. (ಪು.) ಇಂತಹ, ಈಬಗೆಯ.

**असवर्ण** (ಅಸವರ್ಣ) ವಿ. ಸಂ. ಭಿನ್ನವರ್ಣ (ಅಕ್ಷರ) ಗಳುಳ್ಳ.

**असंसक्ती** (ಅಸಂಸಕ್ತೀ) ಸ್ತ್ರೀ. ಸಂ. ವಿರಕ್ತಿ.

**असंसृष्ट** (ಅಸಂಸೃಷ್ಟ) ವಿ. ಸಂ. ಬೆರಕೆಯಾಗದ, ಶುದ್ಧ.

**असंस्कृत** (ಅಸಂಸ್ಕೃತ್) ವಿ. ಸಂ. ಸಂಸ್ಕಾರ ಹೊಂದದ, ತರಬೇತಿಯಿಲ್ಲದ.

**असहकार** (ಅಸಹಕಾರ್) ಪು. ಸಂ. ಸಹಕಾರ ಮಾಡದಿರುವಿಕೆ, ಅಸಹಕಾರ.

**असहन** (ಅಸಹನ) ನ. ಸಂ. ತಾಳ್ಮೆಯಿಲ್ಲದಿರುವಿಕೆ.

**असहाय** (ಅಸಹಾಯ) ವಿ. ಸಂ. ಸಹಾಯವಿಲ್ಲದ.

**असह्य** (ಅಸಹ್ಯ) ವಿ. ಸಂ. ಸಹಿಸಲಾಗದ, ತಾಳಲಾಗದ

**असा** (ಅಸಾ) ವಿ. ಇಂತಹ, ಹಿಗಿದ್ದ.

**असाच** (ಅಸಾಚ್) ವಿ. ಸಾಮಾನ್ಯ. ೨. ಮದುವೆಯಾಗದ.

**अ (ऐ) साजे** (ಅ (ಐ) ಸಾಜೆ) ಕ್ರಿ. ವಿ. (ಕೇಳಿಕೊಳ್ಳುವುದು) ಏನೇಂದರೆ.

**असाधारण** (ಅಸಾಧಾರಣ) ವಿ. ಸಂ. ಲೋಕೋತ್ತರ, ಶ್ರೇಷ್ಠ.

**असाधू** (ಅಸಾಧೂ) ವಿ. ಸಂ. ಒಳ್ಳೆಯನಲ್ಲದ, ಧೂರ್ತ

**असाध्य** (ಅಸಾಧ್ಯ) ವಿ. ಅಶಕ್ಯ. ೨. ಈಡೇರದ. ೩. ವಾಸಿಯಾಗದ (ರೋಗ ಮುಂ.)

**असाध्वस** (ಅಸಾಧ್ವಸ್) ವಿ. ಸಂ. ನಿರ್ಭಯ, ಕುತ್ತಿಲ್ಲದ.

**असान** (ಅಸಾನ) ನ. ಅರ. ೧. ಉಪಕಾರ. ೨. ಹಿಂ. ಸುಲಭ. ೩. ಎಚ್ಚರ.

**असांप्रत** (ಅಸಾಂಪ್ರತ್) ವಿ. ಸಂ. ಅಪ್ರಸ್ತುತ, ಪ್ರಕೃತಕ್ಕೆ ಸಂಬಂಧಿಸದ.

**असामी** (ಅಸಾಮೀ) ಪು. ಅರ. ವ್ಯಕ್ತಿ, ಮನುಷ್ಯ, ಆಳು.

**असार** (ಅಸಾರ) ವಿ. ಸಂ. ತಿರುಳಿಲ್ಲದ.

**असारणे** (ಅಸಾರಣೇ) ಕ್ರಿ. ಧಾ. ಹರಡು, ಹರಡಿಸು.

**असारी** (ಅಸಾರೀ) ಸ್ತ್ರೀ. ನೂಲು ಸುತ್ತುವ ಉರುಳೆ.

**असावध** (ಅಸಾವಧ್) ವಿ. ಜಾಗರೂಕನಲ್ಲದ, ದುರ್ಲಕ್ಷ ಮಾಡುವವ.

**अ (उ) सासा** (ಅ (ಉ) ಸಾಸಾ) ಪು. ನಿಟ್ಟುಸಿರು, ನಿಃಶ್ವಾಸ.

**असाक्ष–क्षिक** (ಅಸಾಕ್ಷ–ಕ್ಷಿಕ) ವಿ. ಸಾಕ್ಷಿಯಿಲ್ಲದ, ಯಾರೂ ಕಾಣದ.

**असि** (ಅಸಿ) ಪು. ಸಂ. ಖಡ್ಗ.

**–धारा** (–ಧಾರಾ) ಸ್ತ್ರೀ. ಖಡ್ಗದ-ಅಲಗಿನ-ಹರಿತ

**–धाराव्रत** (–ಧಾರಾವ್ರತ್) ನ. ಕಠಿಣ ಕೆಲಸ.

**असील** (ಅಸೀಲ್) ಪು. अशील ನೋಡಿರಿ.

**असुदा** (ಅಸುದಾ) ವಿ. ಫಾ. ಅನುಕೂಲ. ೨. ಸ್ವತಂತ್ರ, ಅಡ್ಡಿಯಿಲ್ಲದ.

**असुर** (ಅಸುರ್) ಪು. ಸಂ. ರಾಕ್ಷಸ.

**असुरी** (ಅಸುರೀ) ವಿ. ಸಂ. ೧. ಸ್ತ್ರೀ. ಹೆಣ್ಣು ರಾಕ್ಷಸ.

**–उपाय** (–ಉಪಾಯ) ಪು. ಘೋರ ಹಂಚಿಕೆ.

**–कर्म** (–ಕರ್ಮ) ನ. ಘೋರಕರ್ಮ.

**–खाणे** (–ಖಾಣೇ) ನ. ನಿಷಿದ್ಧ ಆಹಾರ.

**–विद्या** (–ವಿದ್ಯಾ) ಸ್ತ್ರೀ. ಮಂತ್ರ, ಮಾಟ.

**असू** (ಅಸೂ) ನ. ಕಣ್ಣೀರು.

**असूड** (ಅಸೂಡ್) ಪು. ಬಾರಕೋಲು.

**असूत** (ಅಸೂತ್) ನ. ಸಂ. ಗಂಟಲದಲ್ಲಿ (ಶ್ವಾಸನಲಿಕೆಯಲ್ಲಿ) ಅಗಳು ಹೋದರೆ ಆಗುವ ತೊಂದರೆ.

**असूया** (ಅಸೂಯಾ) ಸ್ತ್ರೀ. ಸಂ. ಮಾತ್ಸರ್ಯ.

**असे करता** (ಅಸೇ ಕರತಾ) ಕ್ರಿ. ವಿ. ಹೀಗಾದರೆ.

**असोला** (ಅಸೋಲಾ) ವಿ. ಸುಲಿಯದ, ಸಿಪ್ಪೆತೆಗೆಯದ (ತೆಂಗಿನಕಾಯಿ)

**असोशी** (ಅಸೋಶೀ) ಸ್ತ್ರೀ. ಅತೃಪ್ತಿ. ೨. ವಿ. ಅತೃಪ್ತ.

**असोशी (शि) क** (ಅಸೋಶೀ (ಶಿ) ಕ್) ವಿ. ತಾಳ್ಮೆಯಿಲ್ಲದ, ಅಸಹನಶೀಲ.

**अस्करा** (ಅಸ್ಕರಾ) ಪು. ಫಾ. ಕೀರ್ತಿ, ಖ್ಯಾತಿ.

**अस्खलित** (ಅಸ್ಖಲಿತ್) ವಿ. ಸಂ. ತಪ್ಪದೆ, ತಡವರಿಸದೆ (ಭಾಷಣದ ವಿಶೇಷಣ)

**–बुद्धी** (–ಬುದ್ಧೀ) ತಪ್ಪದ ನಿರ್ಣಯ.

**अस्त** (ಅಸ್ತ) ಪು. ಸಂ. ಕೊನೆ, ಅಂತ, (ಸೂರ್ಯ) ಮುಳುಗುವಿಕೆ.

**अस्तनी** (ಅಸ್ತನೀ) ಸ್ತ್ರೀ. ಫಾ. ತೋಳು, (ಬಟ್ಟೆಯ)
  **–तला, निखारा - विंचू, साप** (–ತಲಾ, ನಿಖಾರಾ - ವಿಂಚೂ, ಸಾಪ್) ದ್ರೋಹಿ, ವಿಶ್ವಾಸಘಾತ ಮಾಡುವವ.

**अस्तमान** (ಅಸ್ತಮಾನ) ನ. ಸಂ. (ಗ್ರಹಾದಿಗಳ) ಅಸ್ತಕಾಲ.

**अस्ताचल** (ಅಸ್ತಾಚಲ್) ಪು. ಸಂ. ಪಶ್ಚಿಮದಲ್ಲಿಯ ಗುಡ್ಡ.

**अस्तर** (ಅಸ್ತರ್) ನ.ಫಾ. ಅಸ್ತರ, ಒಳಬಟ್ಟೆ.

**अस्ताई** (ಅಸ್ತಾಈ) ಸ್ತ್ರೀ. (ಗಾಯನ) ಧ್ರುಪದ (ಪ್ರಥಮಪಾದ.)

**अस्ताव्यस्त** (ಅಸ್ತಾವ್ಯಸ್ತ) ವಿ. ಸಂ. ಅವ್ಯವಸ್ಥಿತ, ಅತ್ತಿತ್ತ ಹರಡಿದ.

**अस्तित्व** (ಅಸ್ತಿತ್ವ) ನ. ಸಂ. ಅಸ್ತಿತ್ವ, ಬದುಕು, ಸ್ಥಿತಿ, ಜೀವನ.

**अस्तु** (ಅಸ್ತು) ಅವ್ಯಯ, ಸಂ. ಇರಲಿ, ತಥಾಸ್ತು.

**अस्त्र** (ಅಸ್ತ್ರ) ನ. ಸಂ. ಮಂತ್ರಿತ ಉಪಾಯ,ಶಸ್ತ್ರ.

**अस्थायी** (ಅಸ್ಥಾಯೀ) ವಿ. ಸಂ. ಕ್ಷಣಿಕ, ಅಸ್ಥಿರ.

**अस्थि** (ಅಸ್ಥಿ) ಸ್ತ್ರೀ. ಸಂ. ಎಲುಬು, ಮೂಳೆ. ೨. ಮೃತನ ದಹನವಾದ ಮೇಲೆ ಆರಿಸಿಕೊಂಡ ಎಲುಬು.
  **–पंजर** (–ಪಂಜರ) ಪು.ಅಸ್ಥಿಪಂಜರ,ಮೂಳೆಗಟ್ಟು

**अस्थिर** (ಅಸ್ಥಿರ) ವಿ. ಸಂ. ಚಂಚಲ, ತಾಳದ, ಸ್ಥಿರ ವಲ್ಲದ.

**अस्थैर्य** (ಅಸ್ಥೈರ್ಯ) ನ. ಸಂ. ಚಂಚಲತೆ.

**अस्पर्श** (ಅಸ್ಪರ್ಶ) ಪು. ಸಂ. ಮುಟ್ಟದಿರುವಿಕೆ. ೨. ಮೈಲಿಗೆ. ೩. ವೈರಾಗ್ಯ.

**अस्पष्ट** (ಅಸ್ಪಷ್ಟ) ವಿ. ಸಂ. ಮಬ್ಬಾದ, ಮಸುಕಾದ, ಅಸ್ಪಷ್ಟ.

**अस्पृश्य** (ಅಸ್ಪೃಶ್ಯ) ವಿ. ಸಂ. ಸ್ಪರ್ಶಮಾಡಲಿಕ್ಕೆ ಅಯೋಗ್ಯ. ೨. ಅಂತ್ಯಜ, ಶೂದ್ರ.

**अस्फुट** (ಅಸ್ಫುಟ) ವಿ. ಸಂ. ಅಸ್ಪಷ್ಟ, ಅವಿಶದ.

**अस्मत्** (ಅಸ್ಮತ್) ಸರ್ವ. ಸಂ. ನಾವು. ವಿ. ನಮ್ಮ.

**अस्मादिक** (ಅಸ್ಮಾದಿಕ) ಸರ್ವ. ಸಂ. (ದಂಭ ಕೊಚ್ಚು ವಾಗ) ನಾನು, ನಾವು.
  **–जेहेत्ते** (–ಜೆಹೆತ್ತೇ) (ಪಂಟು) ನಾನು.

**अस्मान** (ಅಸ್ಮಾನ್) ನ. ಫಾ. ಆಕಾಶ.
  **–ठेंगणे होणे** (–ಠೇಂಗಣೇ ಹೋಣೇ) ಗರ್ವತಾಳು, ಸೊಕ್ಕುಮಾಡು.

**अस्मानी** (ಅಸ್ಮಾನೀ) ವಿ. ಫಾ. ಆಕಾಶದ. ೨. ದೈವೀ. ೩. ತಿಳಿನೀಲಿ (ಬಣ್ಣ)
  **–संकट** (–ಸಂಕಟ್) ದೈವೀ ಆಪತ್ತು.

**अस्मार्त** (ಅಸ್ಮಾರ್ತ) ವಿ. ಸಂ. ಅತಿ ಪ್ರಾಚೀನ. ೨. ಸ್ಮಾರ್ತವಲ್ಲದ, ಸ್ಮೃತಿಗಳಲ್ಲಿ ಹೇಳಿರದ.

**अस्वस्थ** (ಅಸ್ವಸ್ಥ) ವಿ. ಸಂ. ಅಶಾಂತ,ಸ್ವಸ್ಥತೆಯಿಲ್ಲದ, ಯೋಚನೆಮಾಡುವ, ಚಿಂತಾಕ್ರಾಂತ.

**अस्वास्थ्य** (ಅಸ್ವಾಸ್ಥ್ಯ) ನ. ಮೈಯಲ್ಲಿ ನೆಟ್ಟಗಿಲ್ಲದಿರುವಿಕೆ, ಕಾಯಿಲೆ, ಬೇನೆ. ೨. ಮನಸ್ಸಿಗೆ ಹುರುಪಿಲ್ಲದಿರುವಿಕೆ, ಅಸ್ವಸ್ಥತೆ.

**अहं** (ಅಹಂ) ಸರ್ವ. ಸಂ. ನಾನು.
  **–कार** (–ಕಾರ್) ಪು. ಹೆಮ್ಮೆ, ಅಹಂಕಾರ.
  **–कर्ता** (–ಕರ್ತಾ) ಪು- ದರ್ಪೋಕ್ತಿ, ಅಹಂಕಾರ.
  **–कृति** (–ಕೃತಿ) ಸ್ತ್ರೀ. ಅಹಂಕಾರ.
  **–पणा** (–ಪಣಾ) ಪು. ಹೆಮ್ಮೆ, ದುರಭಿಮಾನ.
  **–मन्यता** (–ಮನ್ಯತಾ) ಸ್ತ್ರೀ. ಅಹಂಕಾರ.

**अहटणे** (ಅಹಟಣೇ) ಕ್ರಿ. ಧಾ. ತೊಂದರೆಕೊಡು.

**अहमहमिका** (ಅಹಮಹಮಿಕಾ) ಸ್ತ್ರೀ. ಸಂ. ಸ್ಪರ್ಧೆ, ಪಂದ್ಯ

**अहर्निश** (ಅಹರ್ನಿಶ) ಕ್ರಿ. ವಿ. ಹಗಲಿರುಳು.

**अहवाल** (ಅಹವಾಲ್) ಪು. ಅರ. ವರದಿ, ವೃತ್ತಾಂತ.

**अहळी** (ಅಹಳೀ) ಸ್ತ್ರೀ. ಬೆಂಕಿಯ ಕಾವು, ಉಷ್ಣ, ಸುಡುವಗಾಳಿ.

**अहा** (ಅಹಾ) ಉದ್ಗಾರ. ಅಹಹ !.

**अहाणा** (ಅಹಾಣಾ) ಪು. ನಾಣ್ಣುಡಿ, ಲೋಕೋಕ್ತಿ.

**अहि** (ಅಹಿ) ಪು. ಸಂ. ಸರ್ಪ, ಹಾವು.

**अहित** (ಅಹಿತ) ವಿ. ಸಂ. ಹಿತಕರವಲ್ಲದ.೨. ಕೇಡು. ೩. ಹಗೆ.

**अहिरा** (ಅಹಿರಾ) ಪು. ಕಣ್ಣುಬೇನೆ.

**अहिरी** (ಅಹಿರೀ) ಸ್ತ್ರೀ. ಬಣ್ಣಕೊಟ್ಟ ಮಣ್ಣಿನಪಾತ್ರೆ. ೨. ಕೆಂಪು ಹರಳು.

**अहिंसक** (ಅಹಿಂಸಕ್) ವಿ.ಸಂ.ಹಿಂಸೆಮಾಡದ,ಸೌಮ್ಯ.

**अही** (ಅಹೀ) ಸ್ತ್ರೀ. ಬೆಂಕಿಯ ಜಳ, ಝಳ.

**अहीर** (ಅಹೀರ್) ಪು. ಸಂ. ಅಭೀರ–ಅಹೀರ,ಕುರುಬ. ದನಕಾಯುವ ಜನಾಂಗ. ೨. ಪಶುಪಾಲನ–ಹಾಲು ಮಾರುವ ಒಂದು ಜಾತಿ.

**अहेतुक** (ಅಹೇತುಕ್) ವಿ. ಸಂ. ಯಾವ ಉದ್ದಿಷ್ಟ ವಿಲ್ಲದೆ, ಸ್ವಾರ್ಥರಹಿತ, ನಿಷ್ಪಾಪ. ೨. ವ್ಯರ್ಥ.

**अहेर** (ಅಹೇರ್) ಪು. ಉಡುಗರೆ, ಕಾಣಿಕೆ, ಮಂಗಲ ಪ್ರಸಂಗದಲ್ಲಿ ಕೊಡುವದಾನ, ಕೊಡುಗೆ.

**अहेव** (ಅಹೇವ್) ಸ್ತ್ರೀ. ಮುತ್ತೈದೆ.

**अहो** (ಅಹೋ) ಉದ್ಗಾರ, ಸಂ. ಸ್ವಾಮಿ !.

**–रूपमहोध्वनि** (–ರೂಪಮಹೋಧ್ವನಿ) ಇಬ್ಬರು (ನ್ಯೂನವುಳ್ಳವರು) ಮಾಡುವ ಪರಸ್ಪರ ಪ್ರಶಂಸೆ.

**अहोरात्र** (ಅಹೋರಾತ್ರ) ಕ್ರಿ. ವಿ. ಸಂ. ಹಗಲಿರಳು.

**अळका, अळंका** (ಅಳಕಾ–ಅಳಂಕಾ) ವಿ. ಬೆನ್ನುಹತ್ತಿದವ, ಪ್ರಯತ್ನಶೀಲ.

**अळंग** (ಅಳಂಗ್) ಸ್ತ್ರೀ. ವಿಶಾಲ ನಡುಮನೆ, ಕಟ್ಟೆ.

**अळणी** (ಅಳಣೀ) ಉಪ್ಪಿಲ್ಲದ, ಸಪ್ಪೆಯಾದ, ಅರುಚಿಕರ.

**नावडतीचे मीठ**–(ನಾವಡತೀಚೇ ಮಿಠ್–)ನಾಣ್ಣುಡಿ ಸೇರದ ಹೆಂಡತಿಯ ಉಪ್ಪು ಸಹ ಸಪ್ಪಗೆ.

**अळता** (ಅಳತಾ) ಪು. ಅರಗಿನ ಲೇಪ, ಬಣ್ಣ.

**अळंटळं** (ಅಳಂಟಳಂ) ಸ್ತ್ರೀ ಬೇಸರ, ಉಪೇಕ್ಷೆ, ಕೆಲಸ ತಪ್ಪಿಸುವಿಕೆ, ಮುಂದೂಡುವಿಕೆ.

**अळंबे** (ಅಳಂಬೇ) ನ. ನಾಯಿಯ ಚತ್ತರಿಗೆ.

**अळशी** (ಅಳಶೀ) ಸ್ತ್ರೀ ಅಗಸೆಯ ಬೀಜ.

**अ (आळी)** (ಅ–ಆಳೀ) ಸ್ತ್ರೀ. ಬಿದಿ, ಓಣಿ.

**अळू** (ಅಳು) ನ. ಕೇಸು, ಶಾವೆಯ ಪಲ್ಲೆ.

**अळे** (ಅಳೇ) ನ.ಆಲವಾಲ, ಗಿಡದಸುತ್ತುಗಟ್ಟೆ, ಮಡಿ.

**अळेबळे** (ಅಳೇಬಳೇ) ಕ್ರಿ. ವಿ. ಜುಲ್ಮಿಯಿಂದ, ಬಲವಂತದಿಂದ, ಕಷ್ಟಪಟ್ಟು.

**अळोखा** (ಅಳೋಖಾ) ಕಿ.ಪು.ಕಂ.ಆಕಳಿಕೆ, ಮೈಮುರಿ.

**अक्ष** (ಅಕ್ಷ) ಪು. ೧. ಅಕ್ಷಾಂಶ. ೨. ಜೂಜಿನ ಕವಡೆ. ೩. ಬಂಡಿಯ ಅಚ್ಚು. ೪. ರುದ್ರಾಕ್ಷ.

**–क्रीडा** (–ಕ್ರೀಡಾ) ಸ್ತ್ರೀ. ಜೂಜಾಟ.

**अक्षत** (ಅಕ್ಷತ್) ವಿ. ಗಾಯಹೊಂದದ. ೨. ಶುದ್ಧ ೩. ಕೌಮಾರ್ಯವುಳ್ಳ.

**–माळा** (–ಮಾಲಾ) ಸ್ತ್ರೀ. ಜಪಮಾಲೆ.

**–योनि** (–ಯೋನಿ) ಸ್ತ್ರೀ. ಸಂಭೋಗವಾಗದ ಸ್ತ್ರೀ. ೨. ಅಕ್ಷತೆ, ಮಂತ್ರಾಕ್ಷತೆ, ಓತಣ ಅಕ್ಷತೆ.

**अक्षम** (ಅಕ್ಷಮ) ವಿ. ಸಂ. ಕೈಲಾಗದವ, ಅಸಮರ್ಥ.

**अक्षम्य** (ಅಕ್ಷಮ್ಯ) ವಿ. ಸಂ. ಕ್ಷಮಿಸಲಿಕ್ಕೆ ಅಯೋಗ್ಯ.

**अक्षय** (ಅಕ್ಷಯ) ವಿ. ಸಂ. ನಾಶಹೊಂದದ, ತೀರದ.

**अक्षर** (ಅಕ್ಷರ) ನ. ಸಂ. ಅಕ್ಷರ, ವರ್ಣ, ವಿ. ನಾಶ ಹೊಂದದ.

**–ओळख** (–ಓಳಖ) ಸ್ತ್ರೀ. ಸಾಕ್ಷರತೆ, ಅಕ್ಷರಜ್ಞಾನ.

**–न्यास** (–ನ್ಯಾಸ್) ಪು. ಅಕ್ಷರಯೋಜನೆ, 'ಸ್ಪೆಲಿಂಗ್'

**–परिभाषा** (–ಪರಿಭಾಷಾ) ಸ್ತ್ರೀ. ಪರಿಭಾಷೆ, ವ್ಯಾಖ್ಯೆ

**–माला** (–ಮಾಲಾ) ಸ್ತ್ರೀ. ಕಾಗುಣಿತಾಕ್ಷರಗಳು, ವರ್ಣಮಾಲೆ.

**अक्षरारंभ** (ಅಕ್ಷರಾರಂಭ) ಪು. ಸಂ. ಶಿಕ್ಷಣಪ್ರಾರಂಭ. ವರ್ಣಮಾಲೆಯ ಜ್ಞಾನ.

**अक्षरी** (ಅಕ್ಷರೀ) ವಿ. ಸಂ. ಅಕ್ಷರ ರೂಪದಿಂದ ಬರೆದ (ಸಂಖ್ಯೆ)

**अक्षांति** (ಅಕ್ಷಾಂತಿ) ಸ್ತ್ರೀ. ಸಂ. ಮಾತ್ಸರ್ಯ, ಹೊಟ್ಟೆ ಬೇನೆ ೨. ಅಸಹನ ಶೀಲತೆ.

**अक्षि** (ಅಕ್ಷಿ) ನ. ಸಂ. ಕಣ್ಣು.

**अक्षुण्ण** (ಅಕ್ಷುಣ್ಣ) ವಿ. ಸಂ. ಕ್ಷತಿಹೊಂದದ, ಕುಂದದ.

**अक्षोभ** (ಅಕ್ಷೋಭ) ವಿ. ಸಂ. ಶಾಂತ, ಸ್ಥಿರ. ೨. ಆಳವಾದ. ೩. ಗಂಭೀರ.

**अक्षोभ्य** (ಅಕ್ಷೋಭ್ಯ) ವಿ. ಸಂ. ಶಾಂತ, ಸಂಯಮವುಳ್ಳ.

**अक्षौहिणी** (ಅಕ್ಷೌಹಿಣೀ) ಸ್ತ್ರೀ ಸಂ. ಚತುರಂಗಸೇನೆ. (ಸಂಖ್ಯೆ ೧,೦೦೦,೦೦೦,೦೦೦,೦೦೦,೦೦೦,೦೦೦, ೦೦೦,

**अज्ञ** (ಅಜ್ಞ) ವಿ. ಸಂ. ಅಜ್ಞಾನಿ, ತಿಳಿಗೇಡಿ.

**अज्ञात** (ಅಜ್ಞಾತ) ವಿ. ಸಂ. ಗೊತ್ತಿಲ್ಲದ, ಅಪರಿಚಿತ, ೨. ತಿಳುವಳಿಕೆಇಲ್ಲದ. ೩. ಮುಂಚೆ ಎಂದೂ ಕೇಳಿರದ ಕಂಡಿರದ, ಸೋಜಿಗದ. ೪. ವಾಡಿಕೆಯಿಲ್ಲರದ.

**–वास** (–ವಾಸ್) ಪು. ಗುಪ್ತವಾಸ.

**अज्ञान** (ಅಜ್ಞಾನ) ನ. ಸಂ. ಅಜ್ಞಾನ, ೨. ಬುದ್ಧಿಗೇಡಿತನ. ೩. ಅಳತ್ಯಜ್ಞಾನ, ಮಾಯೆ ಭ್ರಮ.

**–तिमिर** (–ತಿಮಿರ) ನ. ಅಜ್ಞಾನದ ಕತ್ತಲೆ.

**–पटल** (–ಪಟಲ) ನ. ಅಜ್ಞಾನದ ಆವರಣ.

**–धन** (–ಧನ) ನ. ಅಜ್ಞಾನಿಯ ಆಸ್ತಿ.

**अज्ञानी** (ಅಜ್ಞಾನೀ) ವಿ. ಸಂ. ತಿಳಿವಳಿಕೆಯಿಲ್ಲದವ, ಅಲ್ಪವಯಸ್ಸಿನವ. ೨. ತಿಳಿಗೇಡಿ, ಮೂರ್ಖ, ದಡ್ಡ.

**अज्ञेय** (ಅಜ್ಞೇಯ) ವಿ. ಸಂ. ಗೂಢ, ಗಂಭೀರ, ತಿಳಿಯಲಿಕ್ಕೆ ಕಠಿಣವಾದ.

**–वाद** (–ವಾದ) ಪು. ನಿರೀಶ್ವರವಾದ, ನಾಸ್ತಿಕತೆ.

**–वादी** (–ವಾದೀ) ವಿ. ನಾಸ್ತಿಕ, (ಪ್ರತ್ಯಕ್ಷ) ಭೌತಿಕ ಅನುಭವವನ್ನು ಬಿಟ್ಟು ಮಿಕ್ಕದ್ದನ್ನು ನಂಬದವ.

# ಆ आ

**आं** (ಆ) ಅವ್ಯಯ, ಉದ್ಗಾರವಾಚಕ. (೧. ಆಶ್ಚರ್ಯ. ೨. ಪ್ರಶ್ನೆ.)

**आंकडा** (ಆಂಕಡಾ) ಪು. ಅಂಕೆ. ೨. ಜೂಜಿನ ಆಟ.

**आंकडी** (ಆಂಕಡೀ) ಸ್ತ್ರೀ. ಕೊಕ್ಕೆ.

**आंकरी** (ಆಂಕರೀ) ಸ್ತ್ರೀ. ಅಂಕುರ.

**आंकडेबाजी** (ಅಂಕಡೇಬಾಜೀ) ಸ್ತ್ರೀ. ೧. ಜೂಜಾಟ. ೨. ಅಂಕೆಗಳ ಆಡಂಬರ. ೩.

**आकडेमोड** (ಆಂಕಡೇಮೋಡ್) ಸ್ತ್ರೀ. ಲೆಕ್ಕ, ಅಂಕಿಗಳ ವಿವರಣೆ.

**आंकडेवारी** (ಆಂಕಡೇವಾರೀ) ಸ್ತ್ರೀ. ಸಂಖ್ಯಾಶಾಸ್ತ್ರ, ಸಾಂಖ್ಯಿಕ ವಿವರಣೆ.

**आंख** (ಆಂಖ್) ಪು. ಅಂಕೆ, (ಕ್ವಚಿತ್ತಾಗಿ) ಕಣ್ಣು, ಅಕ್ಷಿ.

**आंखणे** (ಆಂಖಣೇ) ಕ್ರಿ. ಸಂ. ಗೆರೆಹಾಕು. ೨. (ಯೋಜನೆ ಕಾರ್ಯಕ್ರಮ ಇತ್ಯಾದಿ) ತಯಾರು ಮಾಡು.

**आंखणी** (ಅಂಖಣೀ) ಸ್ತ್ರೀ. ಗೆರೆ ಹಾಕುವ ಪಟ್ಟಿ.

**आंघोळ** (ಅಂಘೋಳ್) ಸ್ತ್ರೀ. ಸ್ನಾನ, ಜಳಕ.

**आंच** (ಆಂಚ್) ಸ್ತ್ರೀ. ಕಾವು, ಕಾಯಿಸುವಿಕೆ. ೨. ತೊಂದರೆ, ಕಷ್ಟ.

**आंचका** (ಆಂಚಕಾ) ಸ್ತ್ರೀ. ಆಘಾತ, ತಾಕಲಾಟ, ಘರ್ಷಣ.

**आंचवणे** (ಆಂಚವಣೇ) ಕ್ರಿ. ಸಂ. (ಊಟಮಾಡಿ) ಮುಖ, ಕೈತೊಳೆದು ಕೊ.

**आंचळ** (ಆಂಚಳ್) ಸ್ತ್ರೀ. ಕೆಚ್ಚಲು.

**आंजुरली** (ಆಂಜುರಲೀ) ಸ್ತ್ರೀ. ರೆಪ್ಪೆಯ ಬಾವು, ಚಿಟ್ಟಲಿ.

**आंत** (ಆಂತ್) ಸ್ತ್ರೀ. ೧. ಒಳಗೆ, ಒಳಗಡೆ. ೨. ಕರುಳು.

**आंतडे** (ಆಂತಡೇ) ನ. ಕರುಳು.

**आंतडचाला पीळ पडणें** (ಆಂತಡ್ಯಾಲಾ ಪೀಳ ಪಡಣೇ) ಯಾವುದೊಂದು ಮಾತು ಮನಸ್ಸಿಗೆ ಹತ್ತುವಿಕೆ. ೨. ದಯೆ ಹುಟ್ಟುವಿಕೆ.

**आंतबट्टा** (ಆಂತಬಟ್ಟಾ) ಪು. ದಳ್ಳಾಳಿ, ಕಮೀಶನ್. ೨. ಹಾನಿ, ಲುಕ್ಸಾನು.

**आंतबट्टायाचा व्यवहार** (ಆಂತಬಟ್ಯಾಚಾ ವ್ಯವಹಾರ) ಪು. ಹಾನಿಕರ ವ್ಯಾಪಾರ, ವ್ಯವಹಾರ, ಲಾಭವಿಲ್ಲದ ವ್ಯವಹಾರ.

**आंतर** (ಆಂತರ) ವಿ. ಸಂ. ಒಳಗಿನ.

**आंतला** (ಆಂತಲಾ) ವಿ. ಒಳಗಿನ, ಅಂತಸ್ಥ.

**आंतल्या गाठीचा** (ಆಂತಲ್ಯಾ ಗಾಠೀಚಾ) ಮನಸ್ಸಿನಲ್ಲಿಯ ಮಾತನ್ನು ಯಾರಿಗೂ ಹೇಳದವ.

**आंतील** (ಆಂತೀಲ್) ವಿ. ಒಳಗಿನ.

**आंतून** (ಅಂತೂನ) ಕ್ರಿ. ವಿ. ಒಳಗಿಂದ.

**आंत्र** (ಆಂತ್ರ) ನ. ಅಂತ್ರ, ಕರುಳು.

**आंथर** (ಆಂಥರ್) ಪು. ಹಾಸಿಗೆ, ಚಾಪೆ.

**–णे** (–ಣೇ) ಕ್ರಿ. ಸಂ. ಹಾಸು.

**आंथरी** (ಆಂಥರೀ) ಸ್ತ್ರೀ. ಚಾಪೆ.

**आंथरूण** (ಆಂಥರೂಣ್) आंथरूण ನೋಡಿರಿ.

**आंदण** (ಆಂದಣ್) ನ. अंदण ನೋಡಿರಿ.

**आंदुळणे** ಆಂದುಳಣೇ) ಕ್ರಿ. ಧಾ. ತೂಗು, ತೂಗಿಸು.

**आंदोलन** (ಆಂದೋಲನ್) ನ. ಹಿ. ಚಳುವಳಿ, ಆಂದೋಲನ.

**आंधळा** (ಆಂಧಳಾ) ವಿ. ಕುರುಡ, ನೇತ್ರಹೀನ. ೨. ಅಜ್ಞಾನಿ.

**–कारभार** (–ಕಾರಭಾರ್) ಲೆಕ್ಕವಿಲ್ಲದ, ಅಸ್ತಾವ್ಯಸ್ತ ಕೆಲಸ, ಹೋರೆ.

**आंधळयाची काठी** (ಆಂಧಳ್ಯಾಚೀ ಕಾಠೀ) ಬಡವರ, ದೀನರ ಆಧಾರ.

**आंधळया बहिऱ्यांची गाठ** (ಆಂಧಳ್ಯಾ ಬಹೀರ್ಯಾಂಚೀ ಗಾಠ್) ಕಿವುಡ, ಕುರುಡರ (ವಿಷಮ) ಸಂಗಮ.

**आंधळी कोशींबीर** (ಆಂಧಳೀ ಕೋಶೀಂಬೀರ್) ಕಣ್ಣು ಮುಚ್ಚಣಿಕೆಯ ಆಟ.

**आंधळा मागतो एक आणि देव देतो दोन** (ಆಂಧಳಾ ಮಾಗತೋ ಏಕ್ ಆಣೀ ದೇವ ದೇತೋ ದೋನ್) ಕುರುಡನು ಒಂದು ಕಣ್ಣು ಬೇಡಿದರೆ ದೇವರು ಎರಡೂ ಕಣ್ಣುಗಳನ್ನು ಕೊಟ್ಟನಂತೆ!

**आंबट** (ಆಂಬಟ್) ವಿ. ಹುಳಿ, ದುಃಖ; ನಿರಾಶೆ.

**–चेहरा** (–ಚೆಹರಾ) ನಿರಾಶೆಯ ಮುಖ ಮುದ್ರೆ.

**–ढस–ढसाण** (–ಢಸ್–ಢಸಾಣ್) ಅತಿಹುಳಿ.

**–तोंड** (ತೊಂಡ್) ನಿರಾಶ, ದುಃಖಿತ ಮುಖ.

**–षोकी** (–ಷೋಕೀ) ವಿಚಿತ್ರ ಪ್ರಕಾರಗಳಿಂದ ಮನರಂಜನೆ ಮಾಡಿಕೊಳ್ಳುವವನು.

**–सर** (–ಸರ್) ಸ್ವಲ್ಪ ಹುಳಿ.

**आंबरस** (ಆಂಬರಸ್) ಪು. ಮಾವಿನ ಹಣ್ಣಿನ ಸಿಹಿ ಕರಣಿ, ರಸ.

**आंबराई** (ಆಂಬರಾಈ) ಸ್ತ್ರೀ. ಮಾವಿನ ಗಿಡಗಳ ತೋಪು, ಸಾಲು.

**आंबणे** (ಆಂಬಣೇ) ಕ್ರಿ. ಅ. ಹುಳಿಯಾಗು, ಹಳಸು.

**आंबा** (ಆಂಬಾ) ಪು. ಮಾವಿನಹಣ್ಣು.

**आंबाडा** (ಆಂಬಾಡಾ) ಪು. ಸುತ್ತು ಹೆರಳು, ತುರುಬು

**आंबाडी** (ಆಂಬಾಡೀ) ಸ್ತ್ರೀ. ಪುಂಡಿಯ ಪಲ್ಯ, ನಾರು

**आंबेमोहोर** (ಆಂಬೇಮೊಹರ್) ಪು. ಸುವಾಸನೆಯ ಅಕ್ಕಿ.

**आंबोण** (ಆಂಬೋಣ್) ನ. ಕಲಗಚ್ಚು, ತವಡು, ದನಗಳಿಗೆ ಹಾಕುವ ಮುಸುರೆ ನೀರು.

**आंबोळी** (ಆಂಬೋಳೀ) ಸ್ತ್ರೀ. ದೋಸೆ.

**आंव** (ಆಂವ್) ಸ್ತ್ರೀ. ಆಮಶೌಚ, ಆಮವಿಕಾರ.

**आंवकणे** (ಆಂವಕಣೇ) ಕ್ರಿ. ಅ. ಹಿಂಜರಿ.

**आंवढा** (ಆಂವಢಾ) ಪು. अवढा ನೋಡಿರಿ.

**आंस** (ಆಂಸ್) ಪು. ಅಚ್ಚು, ಅಕ್ಷ.

**आंसड** (ಆಂಸಡ್) ಪು. ಕೆಚ್ಚಲು.

**आंसडणे** (ಆಂಸಡಣೇ) ಕ್ರಿ. ಸಂ. ಕುಟ್ಟು.

**आंसू** (ಆಂಸೂ) ನ. ಕಣ್ಣೀರು.

**आइकट** (ಆಇಕಟ್) ಪು. ಕ. ಕಟ್ಟಳೆ, ಕರಾರು, ಸಂಧಿ.

**आइकणे** (ಆಇಕಣೇ) ಕ್ರಿ. ಸಂ. ಹ. ಮ. ಕೇಳು.

**आइणी** (ಆಇಣೀ) ಸ್ತ್ರೀ. ಪ್ರಾ. ಶಕ್ತಿ.

**आइतवार** (ಆಇತವಾರ) ಪು. ಭಾನುವಾರ, ಆದಿತ್ಯ ವಾರ.

**आइती** (ಆಇತೀ) ಸ್ತ್ರೀ. (ಅನಾಯಾಸ) ಸಿದ್ಧತೆ, ಸಾಮಗ್ರಿ.

**आइते** (ಆಇತೇ) ವಿ. ಸಿದ್ಧ, ತಯಾರಾದ, ಸುಲಭ ವಾದ, ಸಹಜವಾದ.

**आइतोजी** (ಆಇತೋಜೀ) ಪು. (ಕೆಲಸಕ್ಕೆ ಹಿಂದುಳಿದು) ಫಲಪ್ರಾಪ್ತಿಯ ಸಮಯಕ್ಕೆ ಬರುವವ.

**आइतोळा** (ಆಇತೋಳಾ) ಪು. ಉಡಿಕೆಯ ಹೆಂಡತಿಯ ಮೊದಲನೆಯ ಮದುವೆಯ ಸಂತಾನ.

**आइंदा** (ಆಇಂದಾ) ಕ್ರಿ. ವಿ. ಫಾ. ಇನ್ನು ಮುಂದೆ, ಮುಂದಿನ ವರ್ಷ.

**आई** (ಆಈ) ಸ್ತ್ರೀ. ತಾಯಿ, **–बाई** (–ಬಾಈ) ತಾಯಿಯಂತಹ ಸ್ತ್ರೀ.**–माई** (–ಮಾಈ) ತಾಯಿಗೆ ಸಮಾನಳೆಂದು ತಿಳಿದು ಕೊಂಡ ಸ್ತ್ರೀ.

**आईन** (ಆಈನ್) ನ. ಒಂದು ಗಿಡ.

**आईस** (ಆಈಸ್) ಸ್ತ್ರೀ. ಮಾತೆ, ಜಗದಂಬೆ, ಲಕ್ಷ್ಮಿ.

**आउख** (ಆಉಖ್) ನ. ಆಯುಷ್ಯ.

**आउठ** (ಆಉಠ್) ವಿ. ಮೂರುವರೆ.

**आउत** (ಆಉತ್) ನ. ನೇಗಿಲ.

**आउत्या** (ಆಉತ್ಯಾ) ಪು. ನೇಗಿಲ-ಬೇಸಾಯದ ಕೆಲಸ ಮಾಡಲಿಕ್ಕೆ ಯೋಗ್ಯನಾದ ಹುಡುಗ, ರೈತನ ಮಗ.

**आकंठ** (ಆಕಂಠ) ಕ್ರಿ. ವಿ. ಗಂಟಲಕ್ಕೆ ಬರುವ ವರೆಗೆ, ಹೊಟ್ಟೆ ತುಂಬ.

**–णे** (–ಣೇ) ಧಾ. ಬೆನ್ನು ಹತ್ತಿ ಹಿಡಿದು ಕೊ.

**आकण कडवे** (ಆಕಣಕಡವೇ) ನ. ಧ್ರುಪದ. ೨. ಪುನಃ ಪುನಃ ಮಾಡಿದ ಬಿನ್ನಹ.

**आकर** (ಆಕರ್) ಪು. ಸಂ. ಕಣಿ, ಗಣಿ, ಸಂಗ್ರಹ, ಸಂಚಯ.

**आकर्ण** (ಆಕರ್ಣ) ಕ್ರಿ. ವಿ. ಸಂ. ಕಿವಿಯ ವರೆಗೆ.

**–णे** (–ಣೇ) ಲಕ್ಷ್ಯಗೊಟ್ಟು ಕೇಳು.

**आकर्णन** (ಆಕರ್ಣನ್) ನ. ಸಂ. ಕೇಳುವಿಕೆ, ಶ್ರವಣ.

**आकर्षक** (ಆಕರ್ಷಕ್) ವಿ. ಸಂ. ಮನಸ್ಸನ್ನು ಸೆಳೆ ಯುವ, ಆಕರ್ಷಕ.

**आकर्षणे** (ಆಕರ್ಷಣೇ) ಕ್ರಿ. ಸಂ. ಆಕರ್ಷಿಸು, ಸೆಳೆದು ಕೊಳ್ಳು.

**आकलणे** (ಆಕಲಣೇ) ಕ್ರಿ. ಅ. ತಿಳಿದುಕೊಳ್ಳು.

**आकलन** (ಆಕಲನ್) ನ. ಸಂ. ಕಲ್ಪನೆ, ಅಂದಾಜು, ತಿಳಿದು ಕೊಳ್ಳುವಿಕೆ.

**आकल्प** (ಆಕಲ್ಪ) ಕ್ರಿ. ವಿ. ಸಂ. ಬ್ರಹ್ಮನ ದಿವಸದ ಕೊನೆಯ ವರೆಗೆ.

**आकस्मिक** (ಆಕಸ್ಮಿಕ್) ವಿ. ಸಂ. ಅಕಸ್ಮಾತ್ತಾಗಿ ಒದ ಗಿದ, ಜರಗಿದ.

**आकळणे** (ಆಕಳಣೇ) ಕ್ರಿ. ಅ. आकलणे ನೋಡಿರಿ.

**आका** (ಆಕಾ) ಸ್ತ್ರೀ. ಕ. आक्का ನೋಡಿರಿ.

**आकांत** (ಆಕಾಂತ್) ಪು. ಆಕ್ರೋಶ, ಕೋಲಹಲ, ಕುದನ.

**–वर्षणे** (–ವರ್ಷಣೇ) ಕ್ರಿ. ಅ. ವಿಪತ್ತು ಒದಗು.

**आकार** (ಆಕಾರ) ಪು. ಸಂ. ರೂಪ, ಆಕಾರ, ಆಕೃತಿ. ೨. ಲೆಕ್ಕ, ಕೊಡಬೇಕಾಗುವ ಹಣ "ಬಿಲ್".
**–मान** (–ಮಾನ್) ಅಳತೆ, ಗಾತ್ರ.
**–णी** (–ಣೀ) ಸ್ತ್ರೀ. ಅಳತೆ, ಲೆಕ್ಕ, ಬೆಲೆಪಟ್ಟಿ.
**–णे** (–ಣೇ) ಧಾ. ಲೆಕ್ಕ ಮಾಡು, ಕೊಡಬೇಕಾದ ಹಣ ಕೇಳು.

**आकालिक** (ಆಕಾಲಿಕ್) ವಿ. ಸಂ. ಅಯೋಗ್ಯ ಸಮಯದ, ಅಕಾಲದ.

**आकाश** (ಆಕಾಶ್) ನ. ಸಂ. ಮುಗಿಲು. ೨. ಒಂದು ಮಹಾಭೂತ.
**–पाताळ एक होणे** (–ಪಾತಾಳ್ ಏಕ್ ಹೋಣೇ) ಕ್ರಿ. ಸಂ. ವಿಪರೀತ ಮಳೆಯಾಗು.
**–पाताळ एक करणे** (–ಪಾತಾಳ್ ಏಕ್ ಕರಣೇ) ಕ್ರಿ. ಸಂ. ಪರಿಶ್ರಮ ಮಾಡು. ೨. ಗೊಂದಲ ಎಬ್ಬಿಸು.
**आकाशाला गवसणी घालणें** (ಆಕಾಶಾಲಾ ಗವಸಣೀ ಘಾಲಣೇ) ಕ್ರಿ. ಸಂ. ಅದ್ಭುತ ಪರಿಶ್ರಮ ಮಾಡು.
**आकाशाची कुऱ्हाड** (ಆಕಾಶಾಚೀ ಕುರ್ಹಾಡ್) ಸ್ತ್ರೀ. ವಜ್ರಾಘಾತ.
**आकाशाची साल काढणे** (ಆಕಾಶಾಚೀ ಸಾಲ್ ಕಾಢಣೇ) ಕ್ರಿ. ಸಂ. ನಿಷ್ಫಲ ಪ್ರಯತ್ನ ಮಾಡು.
**आकाशाला ठिगळ लावणे** (ಆಕಾಶಾಲಾ ಠಿಗಳ್ ಲಾವಣೇ) ಕ್ರಿ. ಸಂ. ನಿಷ್ಫಲ ಪ್ರಯತ್ನಮಾಡು.
**आकाश–दीप–दिवा** (ಆಕಾಶ್ ದೀಪ್, ದಿವಾ) ಪು. ಆಕಾಶ ಬುಟ್ಟಿ.
**आकाश नगर** (ಆಕಾಶ್ ನಗರ್) ನ. ಕಾಲ್ಪನಿಕ ಮೋಡಗಳಿಂದ ಕಲ್ಪಿಸಿದ ನಗರ.
**–पाणी** (–ಪಾಣೀ) ನ. ಸರಾಯಿ, ಹೆಂಡ.
**–यान** (–ಯಾನ್) ನ. ವಿಮಾನ.
**–मंडल** (–ಮಂಡಲ) ನ. ಆಕಾಶ ಮಂಡಲ.
**–वाणी** (–ವಾಣೀ) ಸ್ತ್ರೀ. ದೈವೀ ಉದ್ಗಾರ ೨. ರೇಡಿಯೊ, ಬಾನುಲಿ.

**आकांक्षा** (ಆಕಾಂಕ್ಷಾ) ಸ್ತ್ರೀ. ಸಂ. ಆಶೆ, ಇಚ್ಛೆ, ಅಭಿಲಾಷೆ.

**आकांक्षित** (ಆಕಾಂಕ್ಷಿತ್) ವಿ. ಸಂ. ಇಷ್ಟ ವಿದ್ದ, ಬೇಕಾದ.

**आकांक्षी** (ಆಕಾಂಕ್ಷೀ) ವಿ. ಸಂ. ಬಯಸುವವ, ಆಕಾಂಕ್ಷೆಮಾಡುವವ.

**आकीर्ण** (ಆಕೀರ್ಣ) ವಿ. ಸಂ. ಪ್ರಸಾರ ಹೊಂದಿದ, ಹರಡಿದ, ಹಬ್ಬಿದ.

**आकुंचन** (ಆಕುಂಚನ್) ನ. ಸಂ, ಕಡಮೆಯಾಗುವುದು, ಕಡಮೆ, ಕೊರತೆ.

**आकुंचित** (ಆಕುಂಚಿತ್) ವಿ. ಸಂ. ಕಡಮೆಯಾದ, ಕುಂದಿದ, ಕುಸಿಬಿದ್ದ.

**आकुल** (ಆಕುಲ್) ವಿ. ಸಂ. ವ್ಯಾಕುಲ.

**आकृति** (ಆಕೃತಿ) ಸ್ತ್ರೀ. ಸಂ. ಆಕಾರ.

**आकृष्ट** (ಆಕೃಷ್ಟ) ವಿ. ಸಂ. ಆಕರ್ಷಿತ.

**आक्का** (ಆಕ್ಕಾ) ಸ್ತ್ರೀ. अक्का ನೋಡಿರಿ.

**ऑक्टोबर** (ಆಕ್ಟೋಬರ್) ಪು. ಇಂ. ಆಕ್ಟೋಬರ್,

**आक्रंदणे** (ಆಕ್ರಂದಣೇ) ಕ್ರಿ. ಅ. ವಿಲಾಪಮಾಡು, ಅಳು

**आक्रंदन** (ಆಕ್ರಂದನ್) ಪು. ಸಂ. ವಿಲಾಪ.

**आक्रमक** (ಆಕ್ರಮಕ) ವಿ. ಸಂ. ಮೈ ಮೇಲೆ ಬರುವವ, ದಂಡೆತ್ತಿ ಬರುವವ, ಆಕ್ರಮಣ ಮಾಡುವವ.

**आक्रमण** (ಆಕ್ರಮಣ್) ನ. ಸಂ. ದಂಡೆತ್ತಿ ಬರುವಿಕೆ, ಆಕ್ರಮಣ.

**आक्रमणे** (ಆಕ್ರಮಣೇ) ಕ್ರಿ. ಸಂ. ಆಕ್ರಮಣ ಮಾಡು.

**आक्रसणे** (ಆಕ್ರಸಣೇ) ಕ್ರಿ. ಅ. ಸಿಟ್ಟು, ಸೆಡವು ಮಾಡು

**आक्रांत** (ಆಕ್ರಾಂತ್) ವಿ. ಸಂ. ಆಕ್ರಮಣ ಮಾಡಲ್ಪಟ್ಟ.

**आक्राळविक्राळ** (ಆಕ್ರಾಳ್ ವಿಕ್ರಾಳ್) ವಿ. अकराळ विकराळ ನೋಡಿರಿ.

**आक्रोश** (ಆಕ್ರೋಶ್) ಪು. ಸಂ. ವಿಲಾಪ, ರೋದನ.

**आक्साबोक्सी** (ಆಕ್ಸಾ ಬೋಕ್ಸೀ) ಕ್ರಿ. ವಿ. ओक्साबोक्सी ನೋಡಿರಿ.

**आख** (ಆಖ್) ಪು. ಕಣ್ಣು. ೨. ಕೆನ್ನೆ, ಗಂಡಸ್ಥಲ. ೩. ಅಚ್ಚು.

**आखडणे** (ಆಖಡಣೇ) ಕ್ರಿ. ಸಂ. ಕಡಿಮೆಯಾಗು, ಅಟ್ಟಿಸು, ತಡೆ, ಹಿಂತೆಗೆ.

**आखण** (ಆಖಣ) **–णी** (–ಣೀ) **आखपट्टी** (ಆಖಪಟ್ಟೀ) ಸ್ತ್ರೀ. ಗೆರೆತೆಗೆಯುವ ಪಟ್ಟಿ, ರೂಲರ್.

**आखता** (ಆಖತಾ) ಸ್ತ್ರೀ. ಅಕ್ಕಿಕಾಳು, ಅಕ್ಷತಾ, ಮಂತ್ರಾಕ್ಷತೆ.

**आखबंद** (ಆಖ್‌ಬಂದ್) ವಿ. ಇಡಿಯ, ಸಂಪೂರ್ಣ.

**आखर** (ಆಖರ್) ವಿ. ಅಕ್ಷಯ ೨. ಪು. ಸ್ತ್ರೀ. ಊರಿನ ಮೇರೆ, ೩. ದನಗಳು ವಿಶ್ರಮಿಸುವ ಜಾಗೆ.

**आखला** (ಆಖಾಲಾ) ಪು. ಹೋರಿ.

**आखा** (ಆಖಾ) ವಿ. (ಅಖ್ಖಾ ನೋಡಿರಿ), ಇಡಿಯ, ಪೂರ್ಣ, ಎಲ್ಲ.

**आखाड** (ಆಖಾಡ್) ಪು. ಆಷಾಢ.
**–सासरा** (–ಸಾಸರಾ) ಪು. ಅಧಿಕಾರವಿಲ್ಲದೆ ಪೀಡಿಸುವ ವ್ಯಕ್ತಿ.
**आखाडा** (ಆಖಾಡಾ) ಪು. अखाडा ನೋಡಿರಿ.
**आखाडी** (ಆಖಾಡೀ) ವಿ. ಆಷಾಢಮಾಸದಲ್ಲಿಯ.
**आखात** (ಆಖಾತ್) ಪು. ಉಪಸಾಗರ.
**आखुड–णे** (ಆಖುಡ–ಣೆ) ವಿ. ೨. ಕ್ರಿ. ಅ. अखुड ನೋಡಿರಿ.
**आखेर** (ಆಖೇರ್) ಸ್ತ್ರೀ. अखेर ನೋಡಿರಿ.
**आखोटा** (ಆಖೋಟಾ) ಪು. ಹಡಗದ ವಾರ್ಷಿಕ ಬಾಡಿಗೆ.
**आख्खा** (ಆಖ್ಖಾ) ವಿ. आखा ನೋಡಿರಿ.
**आख्या** (ಆಖ್ಯಾ) ಸ್ತ್ರೀ. ಸಂ. ಖ್ಯಾತಿ. ೨. ಲೋಕಾಪವಾದ.
**आख्यान** (ಆಖ್ಯಾನ್) ನ. ಸಂ. ಕತೆ, ಆಖ್ಯಾನ.
**आख्यायिका** (ಆಖ್ಯಾಯಿಕಾ) ಸ್ತ್ರೀ. ಸಂ. ಕಥೆ. ೨. ಕಿಂವದಂತಿ, ವದಂತಿ.
**आगंतुक** (ಆಗಂತುಕ್) ವಿ. ಸಂ. ಔತಣವಿಲ್ಲದೆ ಬಂದವ. ೨. ಪರಕೀಯ, ಹೆರವ. ೩. ಅನಪೇಕ್ಷಿತ.
**–खर्च** (–ಖರ್ಚ್) ಅನಪೇಕ್ಷಿತ ವೆಚ್ಚ.
**–गुण** (–ಗುಣ) ಹೊಸತಾಗಿ ಬಂದ ಗುಣ, ಸ್ವಭಾವ.
**–लाभ** (–ಲಾಭ) ತಿಳಿಯದೆ ದೊರೆತ ಲಾಭ.
**–वृत्ति–त्ती** (–ವೃತ್ತಿ–ತ್ತೀ) ಔತಣವಿಲ್ಲದೆ ಹೋಗುವ, ಅಭ್ಯಾಸ ಪ್ರವೃತ್ತಿ.
**आगंतुकी** (ಆಗಂತುಕೀ) ಸ್ತ್ರೀ. ಔತಣವಿಲ್ಲದೆ ಹೋಗುವ ಸ್ವಭಾವ.
**आग** (ಆಗ್) ಸ್ತ್ರೀ. ಬೆಂಕಿ, ಅಗ್ನಿ. ೨. ಉರಿ, ನೋವು. ೩. ಕೋಪ, ಮಾತ್ಸರ್ಯ, ೪. ತುರಿಸುವಿಕೆ, (ತಿಂಡಿ), ತೀಟೆ.
**–काडी)** (–ಕಾಡೀ) ಸ್ತ್ರೀ. ಬೆಂಕಿಯ ಕಡ್ಡಿ, ಮ್ಯಾಚಿಸ್.
**–गाडी** (–ಗಾಡೀ) ಸ್ತ್ರೀ. ರೈಲು ಬಂಡಿ.
**–पाणी** (–ಪಾಣೀ) ಸ್ತ್ರೀ. ಗಂಧಕಾಮ್ಲ.
**–पेटी** (–ಪೇಟಿ) ಸ್ತ್ರೀ. ಬೆಂಕಿಯ ಕಡ್ಡಿಯ ಪೆಟ್ಟಿಗೆ.
**–पेण** (–ಪೇಣ್) ವಿಸರ್ಪ ರೋಗ.
**–बंब** (–ಬಂಬ್) ಫೈರ್ ಇಂಜನ್, ಬೆಂಕಿ ಆರಿಸುವ ಬಂಡಿ.
**–लाव्या** (–ಲಾವ್ಯಾ) ವಿ. ಜಗಳ ಹಚ್ಚುವವ.
**–असणे** (–ಅಸಣೇ) ಕ್ರಿ. ಅ. ತೀವ್ರ ಇಚ್ಛೆ ಇರು.
**–उठणे** (–ಉಠಣೇ) ಕ್ರಿ. ಅ. ಹೊಟ್ಟೆ ಹಸಿವೆಯಾಗು.
**–ओतणे** (–ಓತಣೇ) ಕ್ರಿ. ಸಂ. ಕೋಪ ಮಾಡು.
**–झाडणे** (–ಝಾಡಣೇ) ಕ್ರಿ. ಸಂ. ಕೋಪ ಮಾಡು.
**–पाखडणे** (–ಪಾಖಡಣೇ) ಕ್ರಿ. ಸಂ. ಸಿಟ್ಟು ಮಾಡು
**–लागणे** (–ಲಾಗಣೇ) ಧಾ. ಬೆಂಕಿ ಹತ್ತು. (ಲಾ) ನಷ್ಟವಾಗು.
**–लावणे** (–ಲಾವಣೇ) ಕ್ರಿ. ಸಂ. ಬೆಂಕಿ ಹಚ್ಚು.
**आगीत उडी टाकणें** (ಆಗೀತ್ ಉಡೀ ಟಾಕಣೇ) ಕ್ರಿ. ಅ. ಕಠಿಣ ಪ್ರಸಂಗದಲ್ಲಿ ದುಮುಕು.
**आगटी** (ಆಗಟೀ) ಸ್ತ್ರೀ. ಕ. ಅಗ್ಗಿಷ್ಟಿಗೆ.
**आगत** (ಆಗತ್) ವಿ. ಸಂ. ಬಂದವ.
**–स्वागत** (–ಸ್ವಾಗತ್) ನ. ಅತಿಥಿ ಸತ್ಕಾರ.
**आगप** (ಆಗಪ್) ವಿ. ಬೇಗ ಸಿದ್ಧವಾಗುವ (ಪಯಿರು)
**आगम** (ಆಗಮ್) ಪು. ವೇದ (ವ್ಯಾಕರಣ) ಆಗಮ.
**आगमन** (ಆಗಮನ) ನ. ಸಂ. ಬರುವಿಕೆ.
**आगमाग** (ಆಗ್‌ಮಾಗ್) ಪು. ಪತ್ತೆದಾರಿ.
**आगर** (ಆಗರ್) ನ. ತೆಂಗು, ಅಡಿಕೆಯ ಬನ.
**आगरी** (ಆಗರೀ) ಪು. ತೋಟದಲ್ಲಿ ಕೆಲಸ ಮಾಡುವವ, ಆಗರೀ ಜಾತಿಯ ಮನುಷ್ಯ.
**आगवळ** (ಆಗವಳ್) ಸ್ತ್ರೀ. अगवळ ನೋಡಿರಿ. ಹೆಳಲು ಕಟ್ಟುವ ದಾರ.
**आगशी** (ಆಗಶೀ) ಸ್ತ್ರೀ. आगाशी ನೋಡಿರಿ.
**आगळा** (ಆಗಳಾ) ವಿ. ಶ್ರೇಷ್ಠ, ಲೋಕೋತ್ತರ, ಅತ್ಯುತ್ತಮ.
**आगळी–क** (ಆಗಳಿ–ಕ್) ಸ್ತ್ರೀ (ಮೊದಲನೆಯದಾಗಿ) ಆಕ್ರಮಣ, ಮಾಡಿದ ಜಗಳದ ಪ್ರಾರಂಭ.
**आगाऊ** (ಆಗಾವೂ) ಕ್ರಿ. ವಿ. अगाऊ ನೋಡಿರಿ.
**आगांतुक** (ಆಗಾಂತುಕ್) ವಿ. अगांतुक ನೋಡಿರಿ.
**आगापिच्छा** (ಆಗಾಪಿಚ್ಛಾ) ಪು. अगापिच्छा ನೋಡಿರಿ
**आगामी** (ಆಗಾಮೀ) ವಿ. ಸಂ. ಮುಂಬರುವ.
**आगाशी** (ಆಗಾಶೀ) ಸ್ತ್ರೀ. ಮ್ಹಹಡಿ, ಸೌಧ, ಮೇಲಟ್ಟ ಮಾಳಿಗೆ.
**आगिवळा** (ಆಗಿವಳಾ) ಪು. ಪಾತ್ರೆಯನ್ನು ಹಸನಾಗಿ ಮಾಡಲ್ಲಿಕ್ಕೆ ಕೊಡುವ ಕಾವು, ಕಾಸುವಿಕೆ.
**आगीदुगी** (ಆಗೀದುಗೀ) ಸ್ತ್ರೀ. ಅಪರಾಧಗಳು.
**आगीमाशी** (ಆಗೀಮಾಶೀ) ಸ್ತ್ರೀ. ಒಂದು ನೊಣ.

**आगेमागे** (ಆಗೆಮಾಗೆ) ಕ್ರಿ. ವಿ. ತಕ್ಕ ಸಮಯಕ್ಕೆ ಕೊಂಚ ಹಿಂದೆ ಅಥವಾ ಮುಂದೆ.

**आगोतली** (ಆಗೋತಲೀ) ಸ್ತ್ರೀ. ಬಾಳೆಯ ಎಲೆಯ ಕೊನೆಯ ಭಾಗ, ಕುಡಿ. (ಊಟದೆಲೆಯಭಾಗ).

**आग्नेय** ( ಆಗ್ನೇಯ ) ವಿ. ಅಗ್ನಿಗೆ ಸಂಬಂಧಿಸಿದ. ೨. ಸ್ತ್ರೀ. ದಕ್ಷಿಣ ಪೂರ್ವ ದಿಕ್ಕು.

**आग्या** ( ಆಗ್ಯಾ ) ಪು. ಕಡಿಯುವ ಹುಳ. ವಿ. ಭಯಂಕರ.

**–वेताळ** (–ವೇತಾಳ್) ಪು. ಬಯಂಕರ ಪಿಶಾಚಿ.

**आग्रह** (ಆಗ್ರಹ) ಪು. ಸಂ. ಜುಲ್ಮಿ, ಬಲವಂತ, ಆಗ್ರಹ, ಹಟ.

**आग्रही** (ಆಗ್ರಹೀ) ವಿ. ಸಂ. ಹಟಮಾರಿ. ೨. ಆಗತ್ಯವುಳ್ಳವ.

**आघवा** (ಆಘವಾ) ವಿ. ಎಲ್ಲ, ಸರ್ವ.

**आघळ** (ಆಘಳ್) ಪು. ಸ್ತ್ರೀ. ಕ. ಅಗಳಿ, ಕೊಂಡಿ.

**आघ-घाळणे** (ಆಘ–ಘಾಳಣೇ) ಕ್ರಿ. ಸಂ. (ಒಗೆಯುವಾಗ) ನೀರಲ್ಲಿ ಅದ್ದು.

**आघाडा** (ಆಘಾಡಾ) ಪು. ಒಂದು ವನಸ್ಪತಿ.

**आघाडी** (ಆಘಾಡೀ) ಸ್ತ್ರೀ. ರಣರಂಗ, ಯುದ್ಧದ ಮುಖ.

**–घेणे** (–ಘೇಣೆ) ಯುದ್ಧಮಾಡು.

**–मारणे** (–ಮಾರಣೇ) ಮುಂಚಿತವಾಗಿ ಆಕ್ರಮಣ ಮಾಡು.

**–साधणे** (–ಸಾಧಣೇ) ಕ್ರಿ. ಸಂ. ಆಕ್ರಮಿಸು, ಜಯಿಸು.

**–पिछाडी** ( –ಪಿಛಾಡೀ ) ಕ್ರಿ. ವಿ. ಹಿಂಬದಿ ಮುಂಬದಿ.

**आघात** (ಆಘಾತ್) ಪು. ಸಂ. ಆಕ್ರಮಣ, ೨. ನೋವು, ಗಾಯ, ಬಡಿತ, ತಾಕುತ, ತಾಕಲಾಟ.

**आघ्राण** (ಆಘ್ರಾಣ) ನ. ಸಂ. ಮೂಸಿನೋಡುವಿಕೆ.

**आघ्रात** ( ಆಘ್ರಾತ ) ವಿ. ಸಂ. ಮೂಸಿನೋಡಿದ, ಉಪಯೋಗಿಸಿದ, ಬಳಸಿದ.

**आचन्द्रार्क** (ಆಚಂದ್ರಾರ್ಕ) ಕ್ರಿ. ವಿ. ಸಂ. ಸೂರ್ಯ ಚಂದ್ರರಿರುವ ವರೆಗೆ ಶಾಶ್ವತವಾಗಿ.

**आचंबणे** (ಆಚಂಬಣೇ) ಕ್ರಿ. ಅ. ಆಶ್ಚರ್ಯಗೊಳ್ಳು, ಬೆರಗಾಗು.

**आचमन** (ಆಚಮನ) ನ. ಸಂ. ಆಚಮನ, ನೀರು ಮುಕ್ಕುಳಿಸುವಿಕೆ, ಅಂಗೈಯಲ್ಲಿ ಒಂದು ಸವಟು ನೀರು ತೆಗೆದು ಕೊಂಡು ಬಾಯಲ್ಲಿ ಹಾಕುವಿಕೆ.

**आचरण** (ಆಚರಣ) ನ. ಸಂ. ಆಚರಣೆ, ನಡಾವಳಿ.

**आचरणे** (ಆಚರಣೇ) ಕ್ರಿ. ಸಂ. ಆಚರಿಸು.

**आचार** (ಆಚಾರ) ಪು. ನಡಾವಳಿ, ಶ್ರುತಿಸ್ಮೃತಿಗಳಿಗನುಸರಿಸಿ ಆಚರಣ.

**–पद्धती** ( –ಪದ್ಧತೀ ) ಸಂಸ್ಕೃತಿ, ಬಾಳಿನ ಮಟ್ಟು, ವಿಧ.

**–भ्रष्ट** (–ಭ್ರಷ್ಟ) ವಿ. ದುರಾಚಾರಿ, ಪಾಪಿ.

**–विचार** (–ವಿಚಾರ) ನಡಾವಳಿಯ ವಿಧ.

**–शुद्ध** (–ಶುದ್ಧ) ವಿ. ನಡಾವಳಿಗನುಸರಿಸಿದ, ಯೋಗ್ಯವಾದ.

**आचारी** (ಆಚಾರೀ) ಪು. ಅಡಿಗೆಯವ. ೨. ಅಶಿಕ್ಷಿತ.

**आचार्य** (ಆಚಾರ್ಯ) ಪು. ಗುರು, ಸ್ವಾಮಿ.

**आचुळ–आचूळ** (ಆಚು-ಚೂಳ್) ಪು. ತುದಿ, ಕೊನೆ, ಸೆರಗು. ೨. ಮೊಲೆತೊಟ್ಟು, ಕೆಚ್ಚಲು, ಚೂಚುಕ.

**आचुन्द्रा** (ಆಚುಂದ್ರಾ) ವಿ. ಕಣ್ಣುಬೇನೆಯುಳ್ಳವ, ಮಂದದೃಷ್ಟಿಯವ.

**आच्छादणे** (ಆಚ್ಛಾದಣೇ) ಕ್ರಿ. ಸಂ. ಹೊದಿಸು, ಬಚ್ಚಿಡು.

**आच्छादन** (ಆಚ್ಛಾದನ್) ನ. ಸಂ. ಹೊದಿಕೆ, ಬಚ್ಚಿಡುವಿಕೆ.

**आज** (ಆಜ್) ಕ್ರಿ. ವಿ. ಇಂದು, ಈದಿನ.

**–उद्या करणे** (–ಉದ್ಯಾ ಕರಣೇ) ಅನುಮಾನಿಸು, ಮುಂದೂಡು.

**–काल** (–ಕಾಲ್) ಸಾಂಪ್ರತ.

**–कांळी** (–ಕಾಳೀ) ಸದ್ಯಸಮಯದಲ್ಲಿ.

**–पर्यंत** (–ಪರ್ಯಂತ್) ಕ್ರಿ. ವಿ. ಇನ್ನೂವರೆಗೆ.

**–पावेतो** (–ಪಾವೇತೋ) ಇನ್ನೂ ವರೆಗೆ.

**–वेरी** (–ವೇರೀ) ಇನ್ನೂತನಕ, ಈದಿನದ ವರೆಗೆ.

**आजन्म** (ಆಜನ್ಮ) ಕ್ರಿ. ವಿ. ಜನ್ಮದಾರಭ್ಯ, ಆಯುಷ್ಯವೆಲ್ಲ.

**आजा** (ಆಜಾ) ತಾತ, ಅಜ್ಜ.

**आजानुबाहु** (ಆಜಾನುಬಾಹು) ವಿ. ಸಂ. ದೀರ್ಘ ಬಾಹು, ಉದ್ದ ಕೈಯುಳ್ಳವ.

**आजार** (ಆಜಾರ್) ಪು. ಫಾ. ರೋಗ, ಕಾಯಿಲೆ, ಬೇನೆ

**आजारणे** (ಆಜಾರಣೇ) ಕ್ರಿ. ಅ. ಪ್ರಕೃತಿಕೆಡು.

**आजारी** (ಆಜಾರೀ) ವಿ. ಫಾ. ಬೇನೆಬಿದ್ದ, ಕಾಯಿಲೆಯಾದ.

**आजि** (ಆಜಿ) ಕ್ರಿ. ವಿ. (ಕಾವ್ಯ) ಇಂದು ಈದಿನ.

**आजिजी** (ಆಜಿಜೀ) ಸ್ತ್ರೀ. ಅರ. ದೈನ್ಯ, ನಮ್ರತೆ, ಶರಣಾಗತಿ, ಅಸಹಾಯ ಸ್ಥಿತಿ.

**आजी** (ಆಜೀ) ಸ್ತ್ರೀ. ಅಜ್ಜಿ, ದೊಡ್ಡಮ್ಮ.

**आजी** (ಆಜೀ) ವಿ. ಸದ್ಯದ, ಈಗಿರುವ.

**–माजी** (–ಮಾಜೀ) ವಿ. ಈಗಿನ ಹಾಗೂ ಹಳೆಯ (ಅಧಿಕಾರಿಗಳು.)

**आजी आजी** (ಆಜೀ ಆಜೀ) ಅವ್ಯಯ. हाजीहाजी ನೋಡಿರಿ.

**आजीज** (ಆಜೀಜ್) ವಿ. ಅರ. ಅಸಹಾಯ, ನಿರಾಶ್ರಿತ.

**आजीव** (ಆಜೀವ) ಕ್ರಿ. ವಿ. ಸಂ. ಜೀವವಿರುವತನಕ.

**–सभासद** (–ಸಭಾಸದ್) ಪು. ಸ್ಥಾಯೀ ಸದಸ್ಯ.

**आजीविका** (ಆಜೀವಿಕಾ) ಸ್ತ್ರೀ. ಸಂ. ಹೋರೆ, ಬದುಕು, ಉದರ ನಿರ್ವಾಹ.

**आजूबाजू** (ಆಜೂಬಾಜೂ) ಕ್ರಿ. ವಿ. ಅತ್ತಿತ್ತ, ಬದಿ ಬದಿಗೆ, ನೆರೆಹೊರೆಯಲ್ಲಿ.

**आजे** (ಆಜೆ) ಪ್ರತ್ಯಯ, ಅಜ್ಜನ ಸಂಬಂಧವುಳ್ಳ.

**–सासू** (–ಸಾಸೂ) ಸ್ತ್ರೀ. ಗಂಡನ–ಹೆಂಡತಿಯ ಅಜ್ಜಿ.

**–सासरा** (–ಸಾಸರಾ) ಪು. ಗಂಡನ।ಹೆಂಡತಿಯ ಅಜ್ಜ.

**आजोबा** (ಆಜೋಬಾ) ಪು. (ಸಂಬೋಧನ) ತಾತ, ಅಜ್ಜ.

**आजोळ** (ಆಜೋಳ) ನ. ತಾಯಿಯ ತವರು ಮನೆ.

**आझाद** (ಆಝಾದ್) ವಿ. ಫಾ. ಸ್ವತಂತ್ರ.

**आझादी** (ಆಝಾದೀ) ಸ್ತ್ರೀ. ಫಾ. ಸ್ವತಂತ್ರತೆ.

**आझुणी** (ಆಝುಣೀ) ಕ್ರಿ ವಿ. ಇನ್ನೂ, ಈಗಲೂ.

**आट** (ಆಟ್) ಸ್ತ್ರೀ. अट ನೋಡಿರಿ.

**आटक** (ಆಟಕ್) ಸ್ತ್ರೀ. ದಸ್ತಗಿರಿ, ಕೈದು.

**आटकमाटक** (ಆಟಕ್ ಮಾಟಕ್) ಪು. ಸ್ತ್ರೀ. ಹುಡುಗರ ಒಂದು ಆಟ.

**आटकळणे** (ಆಟಕಳಣೇ) ಕ್ರಿ. ಅ. अडखळणे ನೋಡಿರಿ.

**आटकी** (ಆಟಕೀ) ಸ್ತ್ರೀ. ಎಂಟರ ಗಂಟು, ಅಷ್ಟಕ.

**आटके** (ಆಟಕೇ) ನ. ಅಷ್ಟಕ, ಎಂಟರ ಗುಂಪು.

**आटखोर** (ಆಟ್‌ಖೋರ್) ವಿ. अटखोर ನೋ.

**आटणी** (ಆಟಣೀ) ಸ್ತ್ರೀ. अटणी ನೋ.

**आटणे** (ಆಟಣೇ) ಕ್ರಿ. ಅ. अटणे ನೋ.

**आटप** (ಆಟಪ್) ಪು. ವ್ಯವಸ್ಥೆ, ಚೊಕ್ಕಟವು, ಹತೋಟಿ.

**आटपणे** (ಆಟಪಣೇ) ಕ್ರಿ. ಸ. ಮುಗಿಸು, ಈಡೇರಿಸು. (ಲಾ) ಮಡಿ, ಸಾಯು.

**आटपशीर** (ಆಟಪ್‌ಶೀರ್) ವಿ. ಚೊಕ್ಕಟ್ಟಾದ.

**आटपाआटप** (ಆಟಪಾಆಟಪ್) ಸ್ತ್ರೀ. ಮುಗಿತಾಯ ೨. ಪೂರ್ತತೆ. ೩. ಸಿದ್ಧತೆ.

**आटवल** (ಆಟವಲ್) ಪು. ನ. ಅಕ್ಕಿಯ ಗಂಜಿ, ತಿಳುವಾದ ಅನ್ನ.

**आटा** (ಆಟಾ) ಪು. ಹಗ್ಗದ ಸುತ್ತು.

**आटापीट** (ಆಟಾಪೀಟ್) ಸ್ತ್ರೀ. ಪರಿಶ್ರಮ.

**आटापाणी** (ಆಟಾಪಾಣೀ) ನ. ಉದರ ನಿರ್ವಾಹ ಸಾಧನ, ಬಾಗಿನ.

**आटीव** (ಆಟೀವ್) ವಿ. ಕುದಿಸಿ ಗಟ್ಟಿಮಾಡಿದ (ಹಾಲು, ಪಾಯಸ).

**आटोका** (ಆಟೋಕಾ) ಪು. ಹಿಡಿತ, ಹತೋಟಿ.

**आटोकाट** (ಆಟೋಕಾಟ್) ವಿ. ಅತ್ಯಂತ, ಬಹಳ.

**–प्रयत्न** (–ಪ್ರಯತ್ನ) ಬಹು ಪ್ರಯಾಸ.

**आठ** (ಆಠ್) ವಿ. ಎಂಟು

**–आठी जेवणे मठी निद्रा** (–ಆಠೀ ಜೇವಣೇ ಮಠೀ ನಿದ್ರಾ) (ನಾಣ್ಣುಡಿ) ತಿರಿದು ಉಂಡು ಮಠ ದಲ್ಲಿ ಮಲಗುವಿಕೆ.

**–पुरभय्ये नऊ चौके** (–ಪುರಭಯ್ಯೇ ನಊ ಚೌಕೇ) ಎಂಟು ಭೈಯ್ಯಾ ಜನರಿಗೆ ಒಂಬತ್ತು ಒಲೆಗಳು. (ಸಂತೆಯ ಜನರಿಗಿಂತ ಗಂಟೆ ಚವುಡರು ಹೆಚ್ಚು ಜನ ಎಂಬಂತೆ).

**आठवडा** (ಆಠವಡಾ) ಪು. ವಾರ, ಏಳುದಿನ.

**आठवण** (ಆಠವಣ್) ಸ್ತ್ರೀ. ನೆನಪು, ಜ್ಞಾಪಕ.

**आठवर** (ಆಠವರ್) ಸ್ತ್ರೀ. (ಹಳೆಯ ಕಾಲದಲ್ಲಿ) ಎಂಟು ವರ್ಷದ, (ಮದುವೆಗೆ ತಕ್ಕವಳಾದ) ಹುಡಿಗೆ.

**आठवा** (ಆಠವಾ) ವಿ. ಎಂಟನೆಯ. ೨. ಪು. ಒಂದು ಅಳತೆ.

**आठवि** (ಆಠವಿ) ಕ್ರಿ. ನೆನಪು ಮಾಡಿಕೊ.

**आठी** (ಆಠೀ) ಸ್ತ್ರೀ. (ಹಣೆಗೆ ಹಾಕಿದ) ಗಂಟು ೨. ಹಲಸಿನ ಬೀಜ. ೩. ಮನಸ್ಸಿನಲ್ಲಿಯ ಸಿಟ್ಟು.

**आड** (ಆಡ್) ಪು. ಇಳಿಯುವ ಬಾವಿ.

**इकडे–तिकडे विहीर** (ಇಕಡೇ–ತಿಕಡೇ ವಿಹೀರ್) ಎಲ್ಲ ಕಡೆಯಿಂದಲೂ–ಎರಡು ಪರ್ಯಾಯಗಳ ಲ್ಲಿಯೂ ಉಂಟಾದ ಕುತ್ತು, ಸಂಕಟ.

**आडांत नाहीतर पोहोऱ्यात कोठून येणार?** (ಆಡಾಂತ್ ನಾಹೀ ತರ್ ಪೋಹೊರ‍್ಯಾತ್ ಕೊಠೂನ್ ಎಣಾರ್?) (ನಾಣ್ಣುಡಿ) ಗುರುವಿನಲ್ಲಿ ಜ್ಞಾನ ವಿಲ್ಲದಿದ್ದರೆ ಶಿಷ್ಯನಿಗೆ ಹೇಗೆ ಬರಬೇಕು?

**आडात घालुन दोर कापणे** ಆಡಾತ್ ಘಾಲೂನ್ ದೋರ್ ಕಾಪಣೇ ವಿಶ್ವಾಸ ಘಾತ ಮಾಡು

**आड** II (ಆಡ್) ಸ್ತ್ರೀ. ಹಟ. ೨. ವಿರೋಧ.

**आड** III (ಆಡ್) ವಿ. ಕ. ಅಡ್ಡ, ಮುಖ್ಯವಲ್ಲದ, ಚಿಲ್ಲರೆ.

**–गाव** (–ಗಾವ್) ಸಣ್ಣ ಊರು ೨. ನಡುವಿನ.

**आडवार** (ಆಡವಾರ) ಪು. ಅಡ್ಡವಾರ, ಮುಖ್ಯವಲ್ಲದ ದಿನ.

**आडकाठी** (ಆಡ್ಕಾಠೀ) ಸ್ತ್ರೀ. ತಡೆ, ಪ್ರತಿಬಂಧ.

**आडखिळी** (ಆಡ್ಖಳೀ) ಸ್ತ್ರೀ. ಅಗಳಿ, ಚಿಲಕ.

**आडगळ** (ಆಡಗಳ್) ಸ್ತ್ರೀ. ಅಸ್ತಾವ್ಯಸ್ತವಾದ ಅತ್ತಿತ್ತ ಬಿದ್ದ, ಸಾಮಾನು.

**आडनाव** (ಆಡ್ನಾವ್) ನ. ಅಡ್ಡ ಹೆಸರು, ಉಪಾಧಿ.

**आडपडदा** (ಆಡ್ಪಡದಾ) ಪು. ಮುಚ್ಚು ಮರೆ.

**आडफाटा** (ಆಡ್ಫಾಟಾ) ಪು. ಕ್ಷುಲ್ಲಕ ನಿಮಿತ್ತ, ನೆಪ ಆಕ್ಷೇಪ.

**आडंबर** (ಆಡಂಬರ್) ಪು. ಡೌಲು, ದಿಮಾಕ, ಅಲಂಕಾರ.

**आडबाजू** (ಆಡ್ಬಾಜೂ) ಸ್ತ್ರೀ. ಒಂದು ಕಡೆಗೆ (ದಾರಿಬಿಟ್ಟು).

**आडभिंत** (ಆಡ್ಭಿಂತ್) ಸ್ತ್ರೀ. ನಡುಗೋಡೆ.

**आडमाप** (ಆಡ್ಮಾಪ್) ನ. ಅಕ್ರಮ, ಅಯೋಗ್ಯ ಅಳತೆ.

**आडमार्ग** (ಆಡ್ಮಾರ್ಗ್) ಪು. ಅಡ್ಡದಾರಿ. ೨. ಕೆಟ್ಟ ನಡತೆ. ೩. ಒಳಗಿನ, ಕಷ್ಟದ ರಸ್ತೆ.

**आडमिळकत** (ಆಡ್ಮಿಳಕತ್) ಸ್ತ್ರೀ. ಮುಖ್ಯ (ಸಂಬಳ ಮುಂತಾದ) ದುಡ್ಡಿನ ಹೊರತಾಗಿ ಹೆಚ್ಚಿನ ಗಳಿಕೆ.

**आडमुठचा** (ಆಡ್ಮುಠ್ಯಾ) ವಿ, ಆಡನಾಡಿ, ತಿಳುವಳಿಕೆಯಿಲ್ಲದವ ೨. ಸ್ಥೂಲಕಾಯ.

**आडमेळे** (ಆಡ್ಮೇಳೆ) ನ. ಅಕಸ್ಮಾತ್ತಾಗಿ ಉಂಟಾದ ತಡೆ, ಅಡ್ಡಿ, ಪ್ರತಿಬಂಧ.

**आडमोरा** (ಆಡ್ಮೋರಾ) ವಿ. ಅಡ್ಡ ಬಂದವ, ನಡುವೆ ಬಂದವ.

**आडमोहरी** (ಆಡ್ಮೋಹರೀ) ಕ್ರಿ. ವಿ. ಮೂಲೆಯಲ್ಲಿ ಅಡಗಿ ಕೊಂಡು.

**आडरान** (ಆಡ್ ರಾನ್) ನ. ರಸ್ತೆಯಿಂದ ದೂರದ ಸ್ಥಳ. ೨. ವಿಷಯಾಂತರ.

**आडरानात शिरणे** (ಆಡ್ರಾನಾತ್ ಶಿರಣೇ) ಕ್ರಿ. ಅ. ಮುಖ್ಯ ವಿಷಯವನ್ನು ಬಿಟ್ಟು ಮಾತನಾಡು.

**आडवस्ती** (ಆಡ್ವಸ್ತೀ) ಸ್ತ್ರೀ. ರಹದಾರಿಯಿಲ್ಲದ, ದುರ್ಗಮ ಸ್ಥಳ.

**आडवळण** (ಅಡವಳಣ್) ನ. ಏಕಾಂತ ಸ್ಥಳ.

**आडवा** (ಆಡವಾ) ವಿ. ಕ. ೧. ಅಡ್ಡ. ೨. ಪ್ರತಿಕೂಲ ೩. (ಕೂಸು) ಅಡ್ಡ ಹುಟ್ಟಿದ.

**–येणे** (–ಏಣೇ) ೧. ಅಡ್ಡಬರು, ಅಡ್ಡಿಮಾಡು.

**–जाणे** (–ಜಾಣೇ) ಭೆಟ್ಟಿಯಾಗು.

**–होणे** (–ಹೋಣೇ) ಮಲಗು, ವಿಶ್ರಮಿಸು.

**–अडव** (–ಅಡವ್) ಸ್ತ್ರೀ. ಲಗುಬಗೆಯಿಂದ ಮುಚ್ಚುವಿಕೆ.

**–उभा** (–ಉಭಾ) ಕ್ರಿ. ವಿ. ಅಡ್ಡಉದ್ದ.

**–तिडवा** (–ತಿಡವಾ) ವಿ. ಅವ್ಯಸ್ಥಿತ.

**आडवे उभे** (ಆಡವೇ ಉಭೇ) ನ. ಕಪಟತಂತ್ರ, ಒಳಸಂಚು.

**आडसर** (ಆಡಸರ್) ನ. ಪು. ಅಗಳಿ, ೨. ಸುಲಿಯದ ತೆಂಗಿನಕಾಯಿ ೩. ಮಗ್ಗದ ಒಂದು ಭಾಗ ೪. ದಪ್ಪ ಮನುಷ್ಯ.

**आडसाठा** (ಆಡ್ಸಾಠಾ) ಪು. ಒಂದೆಡೆಗೆ ಶೇಖರಿಸಿಟ್ಟ ಸಾಮಾನು.

**आडातला बेडूक** (ಆಡಾತಲಾ ಬೇಡೂಕ್) ಪು. ಕೂಪ ಮಂಡೂಕ, ಅಜ್ಞಾನಿ.

**आडी** (ಆಡೀ) ಸ್ತ್ರೀ. ಹಲಗೆ, ಅಡ್ಡ ಕೋಲು.

**आडील** (ಆಡೀಲ್) ವಿ. ಆಶ್ರಿತ.

**आडून** (ಆಡೂನ್) ಕ್ರಿ. ವಿ. ಮರೆಯಾಗಿ, ಬದಿಗೆ ನಿಂತು.

**आडे** (ಆಡೇ) ಕ್ರಿ. ವಿ. ಬದಿಗೆ ೨. ನ. ಹೊಸ್ತಿಲು.

**आडेकरी** (ಆಡೇಕರೀ) ವಿ. ಅಡ್ಡ ಬರುವವ, ತುಡುಗ.

**आडेचे** (ಆಡೇಚೇ) ಕ್ರಿ. ವಿ. ಸದ್ಯಕ್ಕೆ, ಇತ್ತಿತ್ತಲಾಗಿ

**आंडेल** (ಆಂಡೇಲ್) ವಿ. ವಿದ್ಯೆ ಕಲಿಯದೆ ಬೆಳೆದವ.

**आडोरा** (ಆಡೋರಾ) ಪು. ವ್ಯಭಿಚಾರ, ಬಲಾತ್ಕಾರ.

**आढक** (ಆಢಕ) ವಿ. ಬಿಗಿದು ಹಿಡಿಯುವವ.

**आढकस** (ಆಢಕಸ್) ವಿ. ಗಟ್ಟಿ ಮುಟ್ಟಿಯಾದ, ಭದ್ರವಾದ.

**आढगळा** (ಆಢಗಳಾ) ಪು. ಕೊಲೆಗಾರರ ಪ್ರಮುಖ.

**आढणी** (ಆಢಣೀ) ಸ್ತ್ರೀ. अडणी ನೊಂ.

**आढन** (ಆಢನ್) ಪು. ಕೆಚ್ಚಲು.

आढमूढ (ಆಢಮೂಢ್) ವಿ. ವಿಶಾಲ. ವಿಸ್ತೀರ್ಣ.
आढवारा (ಆಢ್‌ವಾರಾ) ಪು. ಹಿಂಸೆ, ಜುಲ್ಮಿ.
आढाड (ಆಢಾಡ್) ಪು. ಸೈನಿಕ, ದಂಡಾಳು.
आढाल (ಅಢಾಲ್) ನ. ಶಸ್ತ್ರ.
आढाळ (ಆಢಾಳ್) ನ. (ಡೊಂಬರಾಟದಲ್ಲಿಯ) ಗಳ.
आढी (ಆಢೀ) ಸ್ತ್ರೀ. अढी ನೋ.
आढे (ಆಢೇ) ನ. ಚಪ್ಪರದ ನಡುವಿನ ಹಲಗೆ.
आढय (ಆಢ್ಯ) ವಿ. ಸಂ. ಧನಿಕ, ಸಿರಿವಂತ.
आढयता (ಆಢ್ಯತಾ) ಸ್ತ್ರೀ. ಸಂ. ಗರ್ವ, ಹೆಮ್ಮೆ, ಡೌಲು
आण (ಆಣ್) I. ಸ್ತ್ರೀ. ಕ. ಆಣೆ. ೨. ಉಪ್ಪಿನರಾಶಿ. ೩. ನ. ವೃಷಣ.
आण (ಆಣ್) II. ಅವ್ಯಯ, ಮತ್ತು.
आणको (ಆಣಕೋ) ಪು. ಚುಚ್ಚುಮಾತು.
आणणावळ (ಆಣಣಾವಳ್) ಸ್ತ್ರೀ. ಏನಾದರೂ ತರುವುದಕ್ಕಾಗಿಮಾಡಿದ ವೆಚ್ಚ, ಕೂಲಿ, ಮುಂ.
आणणे (ಆಣಣೇ) ಧಾ. ತರು, ತೆಗೆದುಕೊಂಡು ಬಾ.
आण प्रमाण (ಆಣ ಪ್ರಮಾಣ್) ಸ್ತ್ರೀ. ಆಣೆ.
आणभाक (ಆಣಭಾಕ್) ಸ್ತ್ರೀ. ಆಣೆಮಾಡುವಿಕೆ.
आणा (ಆಣಾ) ಪು. ಆಣೆ (ಹಳೆಯನಾಣ್ಯ) ೬ಪೈಸೆ.
—दोन आणे (—ದೋನ್‌ಆಣೆ) ಅಲ್ಪಸ್ವಲ್ಪ, ಕೊಂಚ.
आणि (ಆಣಿ) ಅವ್ಯಯ, ಮತ್ತು.
आणिक (ಆಣಿಕ್) ಅ. ಮತ್ತು.
आणियाळ (ಆಣಿಯಾಳ್) ವಿ. ಮೊನೆಯುಳ್ಳ, ಹರಿತವಾದ.
आणीक (ಆಣೀಕ್) ಅ. ಮತ್ತು.
—सारखा (—ಸಾರಖಾ) ವಿ. ಬೇರೊಬ್ಬ.
I. आत (ಆತ್) ಸ್ತ್ರೀ. ಕ. ಅತ್ತೆ.
II. आत (ಆತ್) ಕ್ರಿ. ವಿ. ಒಳಗೆ.
III. आत (ಆತ್) ನ. ಕರುಳು.
आतंक (ಆತಂಕ್) ಪು. ಸಂ. ಭಯ, ಸಂಕಟ, ಬೆದರಿಕೆ ೨. ರೋಗ, ಬಾಧೆ.
आतचाल (ಆತ್‌ಚಾಲ್) ಸ್ತ್ರೀ. ಒಂದು ಮುಹೂರ್ತ.
आतडी—डे (ಆತಡೀ—ಡೇ) ಸ್ತ್ರೀ. ಕರುಳು.
आतडे (ಆತಡೇ) ನ. ಕರುಳು. ೨. ಪ್ರೇಮ.
आतणे (ಆತಣೇ) ಧಾ. ಅರ್ಪಿಸು. ೨. ಒತ್ತು. ೩. ಅಗಲಿ.
आतताई (ಆತತಾಈ) ವಿ. ಸಂ. ಅರ್ಭಟಿಸುವವ, ಕ್ರೂರ ಕೃತ್ಯಮಾಡುವವ.

आतप (ಆತಪ್) ಪು. ಸಂ. ಬಿಸಿಲು.
—मूर्च्छा (—ಮೂರ್ಛಾ) ಸ್ತ್ರೀ. ಬಿಸಿಲು ಬಡಿತ.
आतपत्र (ಆತಪತ್ರ) ನ. ಸಂ. ಚತ್ತರಿಗೆ, ಛತ್ರ, ಅಬ್ದಾಗಿರಿ
आतबट्टा (ಆತಬಟ್ಟಾ) ಪು. (ವ್ಯವಹಾರದಲ್ಲಿಯ) ಹಾನಿ, ಲುಕ್ಸಾನು.
आतर (ಆತರ್) ಪು. ದೋಣಿಯ, ಹಡಗದ ಬಾಡಿಗೆ.
आंतर (ಆಂತರ) ವಿ. ಸಂ. ಒಳಗಿನ, ಆಂತರಿಕ.
—जातीय (—ಜಾತೀಯ) ವಿ. ಭಿನ್ನ ಭಿನ್ನ ಜಾತಿಗಳೊಳಗಿನ (ಸಂಬಂಧ)
—राष्ट्रीय (—ರಾಷ್ಟ್ರೀಯ) ಜಾಗತಿಕ.
—शालेय (—ಶಾಲೇಯ) ವಿ. ಬೇರೆ ಬೇರೆ ಶಾಲೆಗಳೊಳಗಿನ.
आंतर्भाव (ಆಂತರ್ಭಾವ್) ಪು. ಸಂ. ಪ್ರೇಮ, ನಲ್ಮೆ.
आतला (ಆತಲಾ) ವಿ. ಒಳಗಿನ.
आतल्याआत (ಆತಲ್ಯಾಆತ್) ಕ್ರಿ. ವಿ. ಒಳಗಿಂದೊಳಗೆ, ಅಂತರಂಗದಲ್ಲಿ.
आतष् (ಆತಷ್) ಪು. ಫಾ. ಅಗ್ನಿ, ಬೆಂಕಿ.
—खाना (—ಖಾನಾ) ಪು. ತೋಫುಖಾನೆ.
—बाजी (—ಬಾಜೀ) ಶೋಭೆಯ ಮದ್ದು ಹಾರಿಸುವಿಕೆ
आतस (ಆತಸ್) ಸ್ತ್ರೀ. ಕ. ಅತ್ತೆ.
आतळणे (ಆತಳಣೇ) ಕ್ರಿ. ಸ. ಹಿಡಿ, ಸ್ಪರ್ಶಮಾಡು.
आता (ಆತಾ) ಅ. ಈಗ, ಸದ್ಯಕ್ಕೆ.
आताशा—शी (ಆತಾಶಾ—ಶೀ) ಕ್ರಿ. ವಿ. ಇತ್ತೀಚೆಗೆ.
आतिथ्य (ಆತಿಥ್ಯ) ನ. ಸಂ. ಆದರಾತಿಥ್ಯ, ಅತಿಥಿ ಸತ್ಕಾರ.
आती (ಆತೀ) ಸ್ತ್ರೀ. ಕ. ಅತ್ತೆ.
आतील (ಆತೀಲ್) ಕ್ರಿ. ವಿ. ಒಳಗಿನ, ಗುಪ್ತ, ಮರೆಯಾದ.
आतुडणे (ಆತುಡಣೇ) ಕ್ರಿ. ಅ. ಸಿಗು, ಕೈಗೆಬೀಳು.
आतुणे (ಆತುಣೇ) ಕ್ರಿ. ಸ. ಕೊಡು.
आतुर (ಆತುರ) ವಿ. ಸಂ. ಉತ್ಸುಕ, ತವಕವುಳ್ಳವ.
आतुरता (ಆತುರತಾ) ಸ್ತ್ರೀ. ಸಂ. ಕೂತೂಹಲ, ಉತ್ಸುಕತೆ, ತವಕ.
आतुराय (ಆತುರಾಯ್) ವಿ. ಉತ್ಸುಕ, ಉತಾವಳ.
आतू (ಆತೂ) ಸ್ತ್ರೀ. ಕ. ಅತ್ತೆ.
आतून (ಆತೂನ್) ಕ್ರಿ. ವಿ. ಒಳಗಿನಿಂದ.
आते (ಆತೇ) ಸ್ತ್ರೀ. ಕ. ಅತ್ತೆ.
आतेगवर (ಆತೆಗವರ್) ನ. ಅತ್ತೆಗೆಕೊಟ್ಟ ಉಡುಗರೆ.
आतेस (ಆತೇಸ್) ಸ್ತ್ರೀ. ಕ. ಅತ್ತೆ.

**आतोजी** (ಆತೋಜೀ) ಸ್ತ್ರೀ. ಕ. ಅತ್ತೆ.

**आत्ता** (ಆತ್ತಾ) ಕ್ರಿ. ವಿ. ಈಗಲೇ, ಇದೀಗ.

**आत्म** (ಆತ್ಮ) ವಿ. ಸಂ. ತನ್ನ. ೨ ಆತ್ಮನಿಗೆ ಸಂಬಂಧಿಸಿದ

**आत्मा** (ಆತ್ಮಾ) ಪು. ಸಂ. ಆತ್ಮ, ಜೀವಾತ್ಮ.

**आत्मानंद** (ಆತ್ಮಾನಂದ್) ಪು. ಸಂ. ಆಧ್ಯಾತ್ಮಿಕ, ಆನಂದ.

**आत्मानुभव** (ಆತ್ಮಾನುಭವ) ಪು. ಸಂ. ಆತ್ಮತತ್ವದ ಅನುಭವ.

**आत्माराम** (ಆತ್ಮಾರಾಮ್) ಪು. ಸಂ. ವಿರಕ್ತಯೋಗಿ. ೨. ಜೀವಾತ್ಮ.

**आत्मार्पण** (ಆತ್ಮಾರ್ಪಣ) ನ. ಸಂ. ಈಶ್ವರನಿಗೆ ಶರಣು ಹೋಗುವಿಕೆ, (ಧ್ಯೇಯಪೂರ್ತಿಗಾಗಿ) ಪ್ರಾಣತ್ಯಾಗ.

**आत्माश्रय दोष** (ಆತ್ಮಾಶ್ರಯ ದೋಷ್) ಪು. ಸಂ. (ತರ್ಕಶಾಸ್ತ್ರ.) ಅನ್ಯೋನ್ಯಾಶ್ರಯ ದೋಷ.

**आत्मिक** (ಆತ್ಮಿಕ) ವಿ. ಸಂ. ಆತ್ಮನಿಗೆ ಸಂಬಂಧಪಟ್ಟ.

**आत्यंतिक** (ಆತ್ಯಂತಿಕ) ವಿ. ಸಂ. ಅತಿಶಯ, ವಿಪುಲ.

**आत्या** (ಆತ್ಯಾ) ಸ್ತ್ರೀ. ಅತ್ತೆ, ಸೋದರತ್ತೆ.

**आदत** (ಆದತ್) ಸ್ತ್ರೀ. ಅರ. ರೂಢಿ, ಅಭ್ಯಾಸ, ಚಟ.

**आदर** (ಆದರ್) ಪು. ಸಂ. ಆದರಣೆ, ಸನ್ಮಾನ.

**आदरणे** (ಆದರಣೇ) ಕ್ರಿ. ಸ. ಸನ್ಮಾನಮಾಡು.

**आदर्श** (ಆದರ್ಶ) ಪು. ಸಂ. ಕನ್ನಡಿ. ೨. ಧ್ಯೇಯ, ಗುರಿ, ಮಾದರಿ.

**आदला** (ಆದಲಾ) ವಿ. ಮುಂಚಿನ, "ಮುನ್ನಾ"–ಹಿಂದಿನ.

**आदले दिवशी** (ಆದಲೇ ದಿವಶೀ) ಕ್ರಿ.ವಿ. ಮುನ್ನಾದಿನ.

**आदले वर्ष** (ಆದಲೇ ವರ್ಷ) ನ. ಮುಂಚಿನ, ಹಿಂದಿನ ವರ್ಷ.

**आदल्या घरचा** (ಆದಲ್ಯಾ ಘರಚಾ) ವಿ. ಮೊದಲನೆಯ ಗಂಡನ (ಸಂತಾನ)

**आदळ** (ಆದಳ್) ಸ್ತ್ರೀ. ಅಪ್ಪಳಿಸುವಿಕೆ.

**–आपट** (–ಆಪಟ್) ಸ್ತ್ರೀ. ಸಿಟ್ಟಿನಿಂದ ಪಾತ್ರೆ ಮುಂತಾದುವನ್ನು ಅಪ್ಪಳಿಸುವಿಕೆ.

**आदा** (ಆದಾ) ಪು. ಅರ. ೨. ಖರ್ಚು. ೩. ದಾನ. ೪. (ಸಾಲ) ತೀರಿಸುವಿಕೆ.

I **आदान** (ಆದಾನ್) ನ. ಸಂ. ಸ್ವೀಕಾರ, ತೆಗೆದುಕೊಳ್ಳುವಿಕೆ.

II **आदान** (ಆದಾನ್) ನ. ಸಂ. ಕೆಟ್ಟ ಪ್ರಸಂಗ, ಶಕುನ, ಸಂಕಟ, ರೋಗ.

**आदाय** (ಆದಾಯ) ಪು. ಸಂ. ಲಾಭ, ಉತ್ಪನ್ನ.

**आदावत** (ಆದಾವತ್) ಸ್ತ್ರೀ. ಅರ. ಹಗೆತನ ೨. ಕುತ್ತು.

**आदि** (ಆದಿ) ಸ್ತ್ರೀ. ಸಂ. ಮೂಲ.

**आदि** (ಆದಿ) ವಿ. ಸಂ. ಎಲ್ಲಕ್ಕೂ ಮುಂಚಿನ, ಮೊದಲನೆಯ ಆದಿ, ಮೂಲ.

**आदित्य** (ಆದಿತ್ಯ) ಪು. ಸಂ. ಸೂರ್ಯ. ೨. ದೇವತೆ (ಅದಿತಿಯಪುತ್ರ).

**आदिष्ट** (ಆದಿಷ್ಟ) ವಿ. ಸಂ. ಆಜ್ಞಾಪಿಸಿದ.

**आदी** (ಆದೀ) ಕ್ರಿ. ವಿ. ಮುಂಚೆ, ಮೊದಲು.

**आदेय** (ಆದೇಯ) ವಿ. ಸಂ. ಪಡೆಯ ತಕ್ಕ, ದೊರೆಯ ತಕ್ಕ, ಬರತಕ್ಕ (ಹಣ ಮುಂ).

**आदेश** (ಆದೇಶ) ಪು. ಸಂ. ಆಜ್ಞೆ, ಅಪ್ಪಣೆ.

**आदौ** (ಆದೌ) ಕ್ರಿ. ವಿ. ಸಂ. ಮುಂಚಿತವಾಗಿ, ಮೊದಲುಮಾಡಿ, ಮೊದಲು.

**आद्य** (ಆದ್ಯ) ವಿ. ಸಂ. ಪ್ರಥಮ, ಮೊದಲನೆಯ ಮೂಲ–ಪ್ರಾಚೀನ.

**आद्यंत** (ಆದ್ಯಂತ್) ಕ್ರಿ ವಿ. ಮುಂಚಿನಿಂದ ಕೊನೆಯ ವರೆಗೆ.

**आधण** (ಆಧಣ್) ನ. ಕುದಿಯುವ ನೀರು ಮುಂ. ಎಸರು.

**आधवणी** (ಆಧವಣೀ) ಸ್ತ್ರೀ. ಎಸರು ಬರಲಿಕ್ಕೆ ಇಟ್ಟ ನೀರು.

**आधाण** (ಆಧಾಣ್) ನ. ಗಂಡಾಂತರ, ದೊಡ್ಡ ಸಂಕಟ, ಅಪಮೃತ್ಯು, ಬೆನೆ.

**आधार** (ಆಧಾರ್) ಪು. ಸಂ. ಆಧಾರ, ಬೆಂಬಲ, ಪುಷ್ಟಿ, ಸಾಕ್ಷಿ.

**आधि** (ಆಧಿ) ಸ್ತ್ರೀ. ಸಂ. ಸಂಕಟ, ಮನಸ್ಸಿಗೆ ಹಚ್ಚಿಕೊಳ್ಳುವಿಕೆ.

**आधिक्य** (ಆಧಿಕ್ಯ) ನ. ಸಂ. ಹೆಚ್ಚಳ, ಅಧಿಕತೆ.

**आधिदैविक** (ಆಧಿದೈವಿಕ) ವಿ. ಸಂ. ದೇವತೆಗಳಿಗೆ ಸಂಬಂಧಿಸಿದ. ೨. ದೈವದಿಂದ ಒದಗಿದ,

**आधिपत्य** (ಆಧಿಪತ್ಯ) ನ. ಸಂ. ಸ್ವಾಮಿತ್ವ, ಒಡೆತನ.

**आधिभौतिक** (ಆಧಿಭೌತಿಕ) ವಿ. ಸಂ. ಜಡ, ಪಾರ್ಥಿವ.

**आधी** (ಆಧೀ) ಕ್ರಿ. ವಿ. ಮೊದಲು, ಮುಂಚಿತವಾಗಿ.

**आधीच उल्हास त्यात आला फाल्गुनमास** (ಆಧೀಚ್ ಉಲ್ಹಾಸ್ ತ್ಯಾತ್ ಆಲಾ ಫಾಲ್ಗುನ ಮಾಸ್) (ನಾಣ್ಣುಡಿ) ಕೆಟ್ಟ ಮನುಷ್ಯನಿಗೆ ದೊರೆತ ಸುಸಂಧಿ.

**आधी पोटोबा मग विठोबा** ( ಆಧೀ ಪೋಟೋಬಾ ಮಗ್ ವಿಠೋಬಾ) ನಾಂ. ಮೊದಲು ಹೊಟ್ಟೆಯ ಚಿಂತೆ, ಆನಂತರ ದೇವರ ವಿಚಾರ.

**आधी जाते बुद्धी मग जाते भांडवल** ( ಆಧೀ ಜಾತೇ ಬುದ್ಧೀ ಮಗ್ ಜಾತೇ ಭಾಂಡವಲ್ ) ನಾಂ. ಮೊದಲು ಬುದ್ಧಿಕೆಡುತ್ತದೆ ನಂತರ ದುಡ್ಡು ಹಾಳಾಗುತ್ತದೆ.

**आधीचा** (ಆಧೀಚಾ) ವಿ. ಮುಂಚಿನವ.

**आधुनिक** (ಆಧುನಿಕ) ವಿ. ಸಂ. ಹೊಸಮಾದರಿಯ, ಈಗಿನ ಸಮಯದ ಆಧುನಿಕ.

**आध्यात्मिक** ( ಆಧ್ಯಾತ್ಮಿಕ್ ) ವಿ. ಸಂ. ಆತ್ಮ ಜ್ಞಾನಕ್ಕೆ ಸಂಬಂಧಿಸಿದ.

**आन** (ಆನ್) ವಿ. ಬೇರೆ ಪ್ರಕಾರದ.

**आनखशिख** (ಆನಖಶಿಖ) ಕ್ರಿ. ವಿ. ಸಂ. ಸಂಪೂರ್ಣವಾಗಿ ಕೆಳಗಿನಿಂದ ಮೇಲಿನ ವರೆಗೆ.

**अनंतर्य** (ಆನಂತರ್ಯ) ನ. ಸಂ. ಕ್ರಮದ ಪ್ರಕಾರ ನಂತರ ಬರುವಿಕೆ. ೨. ಅಖಂಡತ್ವ.

**आनंत्य** (ಆನಂತ್ಯ) ನ. ಸಂ. ಅನಂತತೆ, ಕೊನೆಯಿಲ್ಲದಿರುವಿಕೆ.

**आनंद** (ಆನಂದ) ಪು. ಸಂ. ಹಿಗ್ಗು, ಸಂತೋಷ, ಹರ್ಷ.

**आनंदणे** (ಆನಂದಣೇ) ಕ್ರಿ. ಅ. ಸಂತೋಷ ಪಡು.

**आनंदाश्रु** ( ಆನಂದಾಶ್ರು ) ಪು. ಸಂ. ಆನಂದದ ಮೂಲಕ ಬರುವ ಕಣ್ಣೀರು.

**आनंदित** (ಆನಂದಿತ) ವಿ. ಸಂ. ಸಂತೋಷ ಭರಿತ, ಸಂತುಷ್ಟ.

**आनंदी** (ಆನಂದೀ) ವಿ. ಸಂ. ನಗೆ ಮೊಗದ ಆನಂದ ಬಡುವ.

**–आनंद** (–ಆನಂದ್) ಪು. ಅತ್ಯಾನಂದ.

**आनन** (ಆನನ್) ನ. ಸಂ. ಮುಖ, ಮೋರೆ.

**आनयन** (ಆನಯನ) ನ. ಸಂ. ತರುವಿಕೆ ೨. ನಡೆಸುವಿಕೆ.

**आनर्थक्य** (ಆನರ್ಥಕ್ಯ) ನ. ಸಂ. ನಿಷ್ಫಲತೆ.

**आनसा** (ಆನಸಾ) ವಿ. ಇತರ, ಬೇರೆ.

**आनाकानी** (ಆನಾಕಾನೀ) ಸ್ತ್ರೀ. ದುರ್ಲಕ್ಷ, ಅನವಧಾನ, ಮುಂದೂಡುವಿಕೆ.

**आनाह** (ಆನಾಹ್) ಪು. ಸಂ. ಮೂತ್ರಾವರೋಧ.

**आनुकूल्य** (ಆನುಕೂಲ್ಯ) ನ. ಸಂ. ಅನುಕೂಲತೆ.

**आनुगुण्य** (ಆನುಗುಣ್ಯ) ನ. ಸಂ. ಹೊಂದಿಕೆ, ಸರಿಹೋಗುವಿಕೆ.

**आनुचित्य** (ಆನುಚಿತ್ಯ) ನ. ಸಂ. ಅನುಚಿತತೆ ೨. ಸರಿಯಾಗಿಲ್ಲದಿರುವಿಕೆ.

**आनुपम्य** (ಆನುಪಮ್ಯ) ನ. ಸಂ. ಉತ್ಕೃಷ್ಟತೆ, ಅನುಪಮತೆ.

**आनुपूर्वी** (ಆನುಪೂರ್ವಿ) ಸ್ತ್ರೀ. ಸಂ. ಕ್ರಮ, ಯಥಾಯೋಗ್ಯ ಕ್ರಮ.

**आनुभविक** (ಆನುಭವಿಕ್) ವಿ. ಸಂ. ಅನುಭವ ಜನ್ಯ ೨. ಅನುಭವವುಳ್ಳ.

**आनुमत्य** (ಆನುಮತ್ಯ) ನ. ಸಂ. ಸಮ್ಮತಿ, ಪ್ರಶಸ್ತಿ.

**आनुमानिक** (ಆನುಮಾನಿಕ) ವಿ. ಸಂ. ತರ್ಕಸಂಗತ. ೨. ಕಲ್ಪಿಸಿ ಕೊಂಡ.

**आनुरूप्य** (ಆನುರೂಪ್ಯ) ನ. ಸಂ. ಅನುರೂಪತೆ.

**आनुलोम्य** (ಆನುಲೋಮ್ಯ) ನ. ಸಂ. ಯೋಗ್ಯ ಕ್ರಮ.

**आनुवंशिक** (ಆನುವಂಶಿಕ್) ವಿ. ಸಂ. ಮನೆತನದಲ್ಲಿಯ ತಲೆಮಾರುಗಳಿಂದ ಬಂದ. ( ಬೇನೆ, ಕುಂದು, ಇತ್ಯಾದಿ.)

**आनुषंगिक** ( ಆನುಷಂಗಿಕ್ ) ವಿ. ಸಂ. ಸಹಸ್ಥಿತ, ಜೊತೆಯಲ್ಲಿ ಬರುವ, ಒಂದು ಮಾತಿನ ಸಂಬಂಧದಿಂದ ಉಂಟಾಗುವ. ೨. ಗೌಣ, ಬದಿಯ ೩. ಸದೃಶ.

**आनृण्य** ( ಆನೃಣ್ಯ ) ನ. ಸಂ. ಋಣಮುಕ್ತತೆ, ಕರ್ತವ್ಯ ಪೂರ್ತಿ.

**आन्वयिक** (ಆನ್ವಯಿಕ್) ವಿ. ಸಂ. ಒಳ್ಳೆಯ ಮನೆತನದ, ಕುಲೀನ.

**आन्वीक्षिकी** (ಆನ್ವಿಕ್ಷಿಕೀ) ಸ್ತ್ರೀ. ಸಂ. ತರ್ಕಶಾಸ್ತ್ರ. ೨. ಆಧ್ಯಾತ್ಮ ಜ್ಞಾನ.

**आप** (ಆಪ್)' ನ. ಸಂ. ನೀರು.

**आप** (ಆಪ್) ಪ್ರತ್ಯಯ, ಸ್ವಂತ, ಸ್ವಂತದ. ೨. ತಾನು.

**आप सुखी तर जग सुखी** (ಆಪ್ ಸುಖೀ ತರ್ ಜಗ್ ಸುಖೀ) ನಾಂ. ತಾನು ಸುಖದಿಂದ್ದರೆ ಜಗವೆಲ್ಲ ಸೌಖ್ಯ ವಾಗಿರುವುದು.

**–आपला** (–ಆಪಲಾ) ತನ್ನ ತನ್ನ, ತಮ್ಮ ತಮ್ಮ.

**आपोआप** (ಆಪೋ ಆಪ್) ಕ್ರಿ. ವಿ. ತನ್ನಿಂದ ತಾನೇ.

**–खुषीने** (–ಖುಷೀನೇ) ಕ್ರಿ. ವಿ. ತನ್ನ ಇಷ್ಟದಿಂದ.

**–गरजी** (–ಗರಜೀ) ವಿ. ಸ್ವಾರ್ಥ ಬುದ್ಧಿಯುಳ್ಳ.

**आपई** (ಆಪಈ) ಸ್ತ್ರೀ. ದೂರಸ್ಥ ನೆಂಟರಿಗೆ ಕಳಿಸಿದ ಹಣ್ಣು ಮುಂತಾದ ಪದಾರ್ಥಗಳು.

**आपका** (ಆಪಕಾ) ಪು. ನೀರಲ್ಲಿ ಮಾಡಿದ ಆಘಾತ.

**आपखरा** (ಆಪ್‌ಖರಾ) ಪು. ಫಾ. ನೀರಿನ ಪಾತ್ರೆ.

**आपंगणे** (ಆಪಂಗಣೇ) ಕ್ರಿ. ಸ. ಸಲಹು, ಜೊತೆ ಮಾಡು.

**आपटणे** (ಆಪಟಣೇ) ಕ್ರಿ. ಸಂ. ಅಪ್ಪಳಿಸು, ತಾಕಲಾಡಿಸು ೨. ಪರಾಜಯ ಹೊಂದು.

**आपटा आपट** (ಆಪಟಾ ಅಪಟ್) ಸ್ತ್ರೀ. (ಸಿಟ್ಟಿನಿಂದ) ಅಪ್ಪಳಿಸುವಿಕೆ.

**आपटा** (ಆಪಟಾ) ಪು. ಒಂದು ಗಿಡ.

**आपटी** (ಆಪಟೀ) ಸ್ತ್ರೀ. ಹೊಡೆತ, ಏಟು ೨. ಪರಾಜಯ.

**–खाणे** (–ಖಾಣೇ) ಕ್ರಿ. ಅ. ಸೋಲು.

**आपढंग** (ಆಪ್‌ಢಂಗ್) ಪು. ಹುಚ್ಚಾಟ.

**आपढंगी** (ಆಪ್‌ಢಂಗೀ) ವಿ. ಕುಚೋದ್ಯದ.

**आपण** (ಆಪಣ್) ಸರ್ವನಾಮ ೧. ತಾನು. ೨. ತಾವು (ಆದರಾರ್ಥ).

**आपत्** (ಆಪತ್) ಸ್ತ್ರೀ. ಆಪತ್ತು, ಸಂಕಟ.

**आपत** (ಆಪತ್) ವಿ. ಸಂಬಂಧಿತ.

**आपत्ती** (ಆಪತ್ತೀ) ಸ್ತ್ರೀ. ಸಂ. ಆಪತ್ತು.

**आपदा** (ಆಪದಾ) ಸ್ತ್ರೀ. ಸಂ. ಆಪತ್ತು.

**आपद्धर्म** (ಆಪದ್ಧರ್ಮ) ಪು. ಆಪತ್ತು ಬಂದಾಗ ಮಾಡಲು ಅಡ್ಡಿಯಿಲ್ಲದ ಕಾರ್ಯ.

**आपमतलबी** (ಆಪ್‌ಮತಲಬೀ) ವಿ. ಫಾ. ಸಂ. ಸ್ವಾರ್ಥಪರಾಯಣ.

**आपमुखत्यार** (ಆಪ್‌ಮುಖ್ತ್ಯಾರ್) ವಿ. ಫಾ. ಸಂ. ಶಕ್ತಿಶಾಲಿ, ಸ್ವತಃಸಿದ್ಧ.

**आपला** (ಆಪಲಾ) ವಿ. ತನ್ನ, ಸ್ವಂತದ.

**आपला तो बाब्या दुसऱ्यांचे ते कारटे** (ಆಪಲಾ ತೋ ಬಾಬ್ಯಾ ದುಸರ್ಯಾಂಚೇ ತೇ ಕಾರಟೆ) ನಾಣ್ಣುಡಿ ತನ್ನದು ಮಾತ್ರ ಚಂದ, ಹೆರವರದು ಸುಮಾರು.

**आपले नाक कापून दुसऱ्यास अपशकुन करणे** (ಆಪಲೇ ನಾಕ್ ಕಾಪೂನ್ ದುಸರ್ಯಾಸ ಅಪಶಕುನ್ ಕರಣೇ) ನಾ. ತನ್ನ ಮೂಗು ಕೊಯಿದುಕೊಂಡಾದರೂ ಹೆರವರಿಗೆ ಅಪಶಕುನ ಮಾಡುವುದು.

**आपलेपणा** (ಆಪಲೇಪಣಾ) ಪು. ಪ್ರೇಮ, ಅಕ್ಕರ.

**आपसूक–ख** (ಆಪಸೂಕ್–ಖ್) ಕ್ರಿ. ವಿ. ತನ್ನಷ್ಟಕ್ಕೆ ತಾನೆ.

**आपस्वार्थी** (ಆಪಸ್ವಾರ್ಥಿ) ವಿ. ಸ್ವಾರ್ಥ ಪರಾಯಣ.

**आपहस्ते** (ಆಪಹಸ್ತೆ) ಕ್ರಿ. ವಿ. ತನ್ನ ಕೈಯಿಂದ.

**आप्पलपोटचा** (ಆಪ್ಪಲ್‌ಪೋಟ್ಯಾ) ವಿ. ಸ್ವಾರ್ಥಪರಾಯಣ.

**आपाततः** (ಆಪಾತತಃ) ಕ್ರಿ. ವಿ. ಸಂ. ಅನಿಮಿತ್ತವಾಗಿ, ಅನಪೇಕ್ಷಿತವಾಗಿ.

**आपादमस्तक** (ಆಪಾದಮಸ್ತಕ್) ಕ್ರಿ. ವಿ. ಸಂ. ಕಾಲಿನಿಂದ ತಲೆಯವರೆಗೆ ಸಂಪೂರ್ಣವಾಗಿ.

**आपुलकी** (ಆಪುಲಕೀ) ಸ್ತ್ರೀ. ಪ್ರೇಮ, ಅಕ್ಕರ.

**आपोआप** (ಆಪೋಆಪ್) ಕ್ರಿ.ವಿ. ತನ್ನಷ್ಟಕ್ಕೆ ತಾನೇ.

**आपोशन** (ಆಪೋಶನ್) ನ. ಸಂ. ಊಟ ಮುಗಿಯುವಾಗ ಮಾಡುವ ಆಚಮನ.

**आपोष्णी** (ಆಪೋಷ್ಣೀ) ಸ್ತ್ರೀ. आपोशन ನೋ.

**आप्त** (ಆಪ್ತ) ವಿ. ಸಂ. ನೆಂಟರು.

**आप्तवाक्य** (ಆಪ್ತವಾಕ್ಯ) ನ. ಸಂ. ಹಿತವಾದ, ಅಧಿಕಾರವಾಣಿಯಿಂದಮಾಡಿದ ಉಪದೇಶ.

**आप्तमित्र** (ಆಪ್ತಮಿತ್ರ) ಪು. ಸಂ. ಬಹುವಚನ, ನೆಂಟರು, ಬಳಗದವರು.

**आप्तेष्ट** (ಆಪ್ತೇಷ್ಟ) ಪು. ಬಹು ಸಂ. आप्तमित्र ನೋ.

**आप्य** (ಆಪ್ಯ) ವಿ. ಸಂ. ಜಲ ಸಂಬಂಧದ ೨. ಪ್ರಾಪ್ಯ ದೊರೆಯ ಬಹುದಾದ.

**आफत** (ಆಫತ್) ಸ್ತ್ರೀ. ಫಾ. ಆಪತ್ತು.

**आब** (ಆಬ್) ಪು. ಫಾ. ತೇಜಸ್ಸು, ಗೌರವ.

**आबकार** (ಆಬಕಾರ್) ಪು- ಫಾ. ಸರಾಯಿ ಮಾಡುವವ, ಕಲಾಲ.

**आबकारी** (ಆಬ್‌ಕಾರೀ) ವಿ. ಫಾ. ಮದ್ಯಮುಂತಾದವುಗಳ ಮೇಲೆ ಹಾಕಿದ ಕರ.

**आबता–दा–ब** (ಆಬ್‌ತಾ–ದಾ–ಬ್) ಪು. ಫಾ. ಗೌರವ, ವರ್ಚಸ್ಸು.

**आबदागिरी** (ಆಬದಾಗಿರೀ) ಸ್ತ್ರೀ. ಫಾ. अबदागिरी ನೋ.

**आबाद** (ಆಬಾದ್) ವಿ. ಫಾ. ಉತ್ಕರ್ಷಹೊಂದಿದ.

**आबादी–** (ಆಬಾದೀ–) ಪರಮ ಸೌಖ್ಯ.

**आबादानी** (ಆಬಾದಾನೀ) ಸ್ತ್ರೀ. ಫಾ. ಉತ್ಕರ್ಷ, ಏಳ್ಗೆ.

**अबालवृद्ध** (ಆಬಾಲ ವೃದ್ಧ) ಕ್ರಿ. ವಿ. ಸಂ. ಸಣ್ಣ ಹುಡುಗರಿಂದ ಮೊದಲು ಮಾಡಿ ವೃದ್ಧರ ವರೆಗೆ, ಎಲ್ಲರೂ.

**आबाशाई** (ಆಬಾಶಾಈ) ಸ್ತ್ರೀ. ಫಾ. अबाशाही ನೋ.

**आबाळ** (ಆಬಾಳ್) ಸ್ತ್ರೀ. ಉಪೇಕ್ಷೆ, ದುರ್ಲಕ್ಷ.

**आबाळणे** (ಆಬಾಳಣೇ) ಕ್ರಿ. ಅ. ದುರ್ಲಕ್ಷವಾಗು.

**आबोली** (ಆಬೋಲೀ) ಸ್ತ್ರೀ. अबोली ನೋ.

**आब्रू** (ಆಬ್ರೂ) ಸ್ತ್ರೀ. ಫಾ. ಮಾನ, ಮರ್ಯಾದೆ, ಪ್ರತಿಷ್ಠೆ.

**आभरण** ( ಆಭರಣ ) ನ. ಸಂ. ಅಲಂಕಾರ, ವಸ್ತ್ರ ಒಡವೆ.

**आभा** (ಆಭಾ) ಸ್ತ್ರೀ ಸಂ. ಪ್ರಕಾಶ, ತೇಜ.

**आभार** (ಆಭಾರ್) ಪು. ಬಹುವ. ಆಭಾರ, ಕೃತಜ್ಞತೆಯ ಪ್ರಕಟನ.

**आमराई** (ಆಮರಾಈ) ಸ್ತ್ರೀ. ಮಾವಿನ ತೋಪು.

**आमांश** (ಆಮಾಂಶ) ಪು, ಆಮಶಾಂಚ, ಆಂವು.

**आमिष** (ಆಮಿಷ) ನ. ಮಾಂಸ. ೨. ಪ್ರಲೋಭನ, ಲಂಚ, ಧನದ ಆಶೆ. ೩ಚದುರಂಗದಲ್ಲಿಯ ಒಂದು ವ್ಯೂಹ.

**आमुचा** (ಆಮುಚಾ) ಸರ್ವ. ನಮ್ಮ.

**आमेन** (ಆಮೆನ್) ಉದ್ಗಾರ. ತಥಾಸ್ತು.

**आमोद** (ಆಮೋದ್) ಪು. ಸಂ. ಆನಂದ.

**आम्ही** (ಆಮ್ಹೀ) ಸರ್ವ. ನಾವು.

**आय** (ಆಯ) ಪು.ಸಂ. ಉತ್ಪನ್ನ, ಗಳಿಕೆ, ಸಂಪತ್ತು.

**आयणी** (ಆಯಣೀ) ಸ್ತ್ರೀ. ಇಚ್ಛೆ.

**आयत** (ಆಯತ) ವಿ. ಸಂ. ಉದ್ದ, ಲಂಬಾಕಾರ.

**आयता** ( ಆಯತಾ ) ಕ್ರಿ. ವಿ. ಅನಾಯಾಸವಾಗಿ, ತಯಾರಾಗಿ.

**आयत्या वेळी** (ಆಯತ್ಯಾ ವೇಳೀ) ಕ್ರಿ ವಿ. ಒಳ್ಳೆ ಸಮಯದಲ್ಲಿ, ಐನ ಸಮಯದಲ್ಲಿ.

**अयत्या पिठावर रेघा ओढणे** (ಆಯತ್ಯಾ ಪಿಠಾವರ್ ರೇಘಾ ಓಢಣೇ) ಕ್ರಿ. ಸಂ. ಪರರ ಪರಿಶ್ರಮದ ಲಾಭ ಪಡೆದುಕೊ.

**आयत्या पिठावर नागोबा** (ಆಯತ್ಯಾ ಪಿಠಾವರ್ ನಾಗೋಬಾ ) ಪರಧನವನ್ನು ಅನಾಯಾಸವಾಗಿ ಪಡೆ.

**आयतोजी** (ಆಯತೋಜೀ) ಪು. ಶ್ರಮಪಡದೆ ಲಾಭ ಹೊಂದುವವ.

**आयतोळा** (ಆಯತೋಳಾ) ವಿ. ಶ್ರಮಪಡದೆ ದೊರೆತ.

**आयब** (ಆಯಬ್) ಸ್ತ್ರೀ. ಅರ. ದೋಷ, ನ್ಯೂನ.

**आयला** (ಆಯಲಾ) ಉದ್ಗಾರ. ತಾಯಿಯ ಹೆಸರಿನಿಂದ ಬೈಯುವಿಕೆ.

I **आया** (ಆಯಾ) ಸ್ತ್ರೀ. ಪರಿಚಾರಿಕೆ, ಧಾತ್ರೀ, ದಾದಿ.

II **आया** (ಆಯಾ) ಸ್ತ್ರೀ. ಬಹುವ. आई ಇದರ ಬಹುವಂ.

**आयात** (ಆಯಾತ್) ವಿ. ತರಿಸಿಕೊಂಡ, ಆಯಾತು ಮಾಡಿದ.

**–जकात** ( –ಜಕಾತ್ ) ಸ್ತ್ರೀ. ಆಯಾತಿಕರ ಕಸ್ಟಮ್ಸ ಡ್ಯೂಟಿ.

**आयाबाया** (ಆಯಾಬಾಯಾ) ಸ್ತ್ರೀ. ಬಹುವ. ಹೆಣ್ಣು ಮಕ್ಕಳು, ಹೆಂಗಸರು.

**आयास** (ಆಯಾಸ್) ಪು. ಸಂ. ಶ್ರಮ.

**–प्रयास** (–ಪ್ರಯಾಸ್) ಪು. ಕಷ್ಟ.

**–सायास** (–ಸಾಯಾಸ್) ಪು. ಕಷ್ಟ ಶ್ರಮ.

**आयासी** (ಆಯಾಸೀ) ವಿ. ಸಂ. ಶ್ರಮಪಡುವವ. ೨. ದುಃಖಿತ.

**आयाळ** (ಆಯಾಳ್) ಸ್ತ್ರೀ. ತು. (ಯಾಲ್) ಸಿಂಹದ ಆಯಾಲು, ಕತ್ತಿನ ಮೇಲಿನ ಕೂದಲು.

**आयिता** (ಆಯಿತಾ) ಕ್ರಿ. ವಿ. अयता ನೋಂ.

**आयु** (ಆಯು) ಸ್ತ್ರೀ. ಸಂ. ಆಯುಷ್ಯ.

**आयुरारोग्य** (ಆಯುರಾರೋಗ್ಯ) ನ. ಸಂ. ಆಯುಷ್ಯ ಮತ್ತು ಆರೋಗ್ಯ.

**आयुर्मर्यादा** ( ಆಯುರ್ಮರ್ಯಾದಾ ) ಸ್ತ್ರೀ. ಸಂ. ಆಯುಷ್ಯದ ಮೇರೆ, ಮಿತಿ.

**आयुष्य** (ಆಯುಷ್ಯ) ನ. ಸಂ. ಆಯುಷ್ಯ, ಆಯು.

**आयुष्याची दोरी** (ಆಯುಷ್ಯಾಚೀ ದೋರೀ) ಸ್ತ್ರೀ. ಆಯುಷ್ಯದ ಮಿತಿ, ಜೀವ, ಜೀವನ.

**आरंधे** (ಆರಂಧೆ) ನ. ಮಕ್ಕಳಿಲ್ಲದ ದುಃಖ.

**आरंबळणे** (ಆರಂಬಳಣೇ) ಕ್ರಿ. ಅ. ಅಳುವಿಕೆ, ಅಳು.

**आरंभ** (ಆರಂಭ) ಪು. ಸಂ. ಪ್ರಾರಂಭ.

**–शूर** (–ಶೂರ) ವಿ. ಮೊದಲು ಮೊದಲು ಬಹಳ ಉತ್ಸಾಹ ತೋರಿಸುವವ.

**आरंभणे** (ಆರಂಭಣೇ) ಕ್ರಿ. ಸಂ. ಪ್ರಾರಂಭಿಸು.

**आर** (ಆರ್) ಸ್ತ್ರೀ. ಆವಶ್ಯಕತೆ ೨. ಅಭಿಮಾನ. ೩. ಅಚ್ಚು ಅಕ್ಷ. ೪. ಪು. ಅಜಗರ ೫. ಪು. (ಚೆಣಿಫಣಿ ಆಟದಲ್ಲಿ) ಆರು. ೬. ಪು. ಹತೋಟ

**आरांतला** (ಆರಾಂತಲಾ) ವಿ. ವಶದಲ್ಲಿರುವ.

**आरडणे** (ಆರಡಣೇ) ಕ್ರಿ ಅ. ಒದರು, ಕೊಗು.

**आरडा** (ಆರಡಾ) ಪು. ಒದರುವಿಕೆ.

**–ओरड** (–ಓರಡ್) ಸ್ತ್ರೀ. ಒದರಾಟ ಚೀರಾಟ.

**आरण–णी** ( ಆರಣ–ಣೀ ) ಸ್ತ್ರೀ. ಸಮರ ಭೂಮಿ. ಯುದ್ಧದ ಅಜ್ಞೆ.

**आरणूक** (ಆರಣೂಕ್) ಸ್ತ್ರೀ. ವಿಶ್ರಾಂತಿ.

**आरणे** (ಆರಣೇ) ಕ್ರಿ. ಅ. (ಕೋಳಿ) ಕೂಗು ೨. ಸನ್ನದ್ಧನಾಗು.

**आरती** (ಆರತೀ) ಸ್ತ್ರೀ. ಆರತೀ, ದೀಪಾರಾಧನ.

**आरपणे** (ಆರಪಣೇ) ಕ್ರಿ. ಅ. ನಾಶಹೊಂದು.

**आरपार** (ಆರಪಾರ್) ಅವ್ಯಯ. ಒಂದು ತುದಿಯಿಂದ ಮತ್ತೊಂದು ತುದಿಯ ವರೆಗೆ. ೨. ಆರುಪಾರಾಗಿ.

**आरबळणे** (ಆರಬಳಣೇ) ಕ್ರಿ. ಅ. ಕ್ಷೀಣನಾಗು ೨. ಅಶಕ್ತನಾಗು.

**आरबी** (ಆರಬೀ) ವಿ. ಅರ. ಅರಬಸ್ತಾನದ ೨. ಸ್ತ್ರೀ. ಅರಬೀ ಭಾಷೆ.

**आरभटी** (ಆರಭಟೀ) ಸ್ತ್ರೀ. ಆರ್ಭಾಟ, ಗೊಂದಲ.

**आरमार** (ಆರಮಾರ) ನ. ಸ್ಪಾನಿಶ್. ಹಡಗುಪಡೆ, ನಾಸೈನ್ಯ.

**आरमारी** (ಆರಮಾರೀ) ವಿ. ಸ್ಪಾನಿಶ್. ಹಡಗು ಪಡೆಗೆ ಸಂಬಂಧಿಸಿದ ನಾಸೈನ್ಯದ.

**आरव** (ಆರವ್) ಪು. ಶಬ್ದ, ಸಪ್ಪಳ.

**आरवणे** (ಆರವಣೇ) ಕ್ರಿ. ಅ. (ಕೋಳಿ) ಕೂಗು.

**आरसपान** (ಆರಸಪಾನ್) ಪು. ಸಂಗಮುರವರಿ.

**आरसपानी** (ಆರಸ್‌ಪಾನೀ) ವಿ. ಸಂಗಮುರವರಿಯ.

**आरसा** (ಆರಸಾ) ಪು. ಕನ್ನಡಿ.

**आरसी** (ಆರಸೀ) ಸ್ತ್ರೀ. ಕನ್ನಡಿ, ಕನ್ನಡಕ.

**आरळ** (ಆರಳ್) ವಿ. ಕ. ಮೃದು, ಮೆತ್ತನ್ನ.

**आराखडा** (ಆರಾಖಡಾ) ಪು. अराखडा ನೋ.

**आराजी** (ಆರಾಜೀ) ಸ್ತ್ರೀ. ಅರ. ಹೊಲ, ಭೂಮಿ.

**आराटी** (ಆರಾಟೀ) ಸ್ತ್ರೀ. ಮುಳ್ಳು, ಕಂಟಿ.

**आरातणे** (ಆರಾತಣೇ) ಕ್ರಿ. ಅ. ಹುಟ್ಟು.

**आराधक** ಆರಾಧಕ್) ವಿ. ಸಂ. ಪೂಜಕ.

**आराधणूक** (ಆರಾಧಣೂಕ್) ಸ್ತ್ರೀ. ಆರಾಧನೆ.

**आराधणे** (ಆರಾಧಣೇ) ಕ್ರಿ. ಧಾ. ಆರಾಧಿಸು; ಪೂಜಿಸು.

**आराधन-ना** (ಆರಾಧನ-ನಾ) ನ. ೨. ಸ್ತ್ರೀ. ಪೂಜೆ, ಅರ್ಚನ, ಮನ ಒಲಿಸುವಿಕೆ. ೨. ಬ್ರಾಹ್ಮಣ ಭೋಜನ. ೩. ಸಾಧುವಿನ ಪುಣ್ಯತಿಥಿ.

**आराध्य** (ಆರಾಧ್ಯ) ವಿ. ಸಂ. ಪೂಜೆಗೆ ತಕ್ಕ, ಪಡೆಯಲಿಕ್ಕೆ ಯೋಗ್ಯ.

**-दैवत** (-ದೈವತ್) ನ. ಕುಲದೇವತೆ, ಇಷ್ಟದೇವತೆ.

**आराम** (ಆರಾಮ್) ಪು. ಸುಖ, ವಿಶ್ರಾಂತಿ.

**-खुर्ची** (-ಖುರ್ಚೀ) ಸುಖಾಸನ ಈಸಿಛೇಯರ್.

**-शीर** -(ಶೀರ್) ಅನುಕೂಲ, ಸುಖದ.

**आरारूट** (ಆರಾರೂಟ್) ಪು. ನ. ಇಂ. ಆರಾರೂಟ್.

**आराव** (ಆರಾವ್) ಪು. ಶಬ್ದ, ದನಿ, ಕೂಗು.

**आरास** (ಆರಾಸ್) ಸ್ತ್ರೀ. ಫಾ (ಆರಾಇಶ್) ಸಿಂಗಾರ, ಅಲಂಕಾರ, ಶೋಭೆ.

**अरिसा** (ಆರಿಸಾ) ಪು. ಕನ್ನಡಿ, ಕನ್ನಡಕ.

**आरी** (ಆರೀ) ಸ್ತ್ರೀ. ಅರ, ಅಚ್ಚು, ಅಕ್ಷ, ತಂಬೋರಿಯ ತಂತಿಪಟ್ಟಿ.

**आरीदोरी** (ಆರೀದೋರೀ) ಸ್ತ್ರೀ. ಗಿಡಗಂಟಿ.

**आरुता** (ಆರುತಾ) ಸ್ತ್ರೀ. ಅರ್ಹತೆ, ಯೋಗ್ಯತೆ.

**आरूढ** (ಆರೂಢ) ವಿ. ಸಂ. ಏರಿದ, ಏರಿಕುಳಿತ, ಆರೂಢ, ಸಿದ್ಧ.

**आरे** (ಆರೇ) ಉದ್ಗಾರ. अरे ನೋ.

**आरेकस** (ಆರೇಕಸ್) ಪು. अरेसक ನೋ.

**आरेख** (ಆರೇಖ್) ಪು. ರೇಖಾಂಕನ, ಪ್ರಾರೂಪ, ಕರಡು.

**आरेखणे** (ಆರೇಖಣೇ) ಕ್ರಿ. ಧಾ. ಚಿತ್ರಿಸು, ಕರಡು ತಯಾರಿಸು.

**आरेखन** (ಆರೇಖನ್) ನ. ಸಂ. ಸ್ಥೂಲಚಿತ್ರ, ರೇಖಾಂಕನ.

**आरोगण** (ಆರೋಗಣ) ನ. ಕ. ಭೋಜನ, ಸೇವನ, ಊಟ.

**आरोगणे** (ಆರೋಗಣೇ) ಕ್ರಿ. ಧಾ. ತಿನ್ನು, ಊಟ ಮಾಡು.

**आरोग्य** (ಆರೋಗ್ಯ) ನ. ಸಂ. ನಿರೋಗ, ಸ್ವಾಸ್ಥ್ಯ, ಆರೋಗ್ಯ.

**आरोप** (ಆರೋಪ್) ಪು. ಸಂ. (ದೋಷ) ಹೊರಿಸುವಿಕೆ, ನಿಂದೆ, ಆರೋಪ. ೨. ದೋಷ.

**आरोपण** (ಆರೋಪಣ್) ನ. ಸಂ. ದೋಷ ಹೊರಿಸುವಿಕೆ, ನಿಂದೆ.

**आरोपणे.** (ಆರೋಪಣೇ) ಕ್ರಿ. ಸಂ. ದೋಷ ಹೊರಿಸು, ತಪ್ಪುಹೊರಿಸು, ಆರೋಪಹೊರಿಸು. ೨. (ವೇದಾಂತ) ಭ್ರಮ ಮೂಲಕವಾಗಿ ಒಂದರಲ್ಲಿ ಬೇರೊಂದು ಸತ್ಯವನ್ನು ಹುಡುಕುವಿಕೆ.

**आरोपित** (ಆರೋಪಿತ) ವಿ. ಸಂ. ದೋಷಕ್ಕೆ ಗುರಿ ಮಾಡಲ್ಪಟ್ಟ.

**आरोपी** (ಆರೋಪೀ) ವಿ. ಸಂ. ಅಪರಾಧಿಯೆಂದು ದೋಷ ಹೊರಿಸಿದ.

**आरोशा पारोशाने** (ಆರೋಶಾ ಪಾರೋಶಾನೇ) ಕ್ರಿ.ವಿ. ಮುಖ-ಮೊರೆತೊಳೆದು ಕೊಳ್ಳದೆ,ಸ್ನಾನಮಾಡದೆ, ಮೈಲಿಗೆಯಿಂದ.

**आरोह** (ಆರೋಹ) ಪು. ಸಂ. (ಸಂಗೀತ) ದನಿ ಏರಿ ಸುವಿಕೆ. (ಸಾರೆ ಗ ಮ ಪ ದ ನಿ ಸ )

**आरोहण** (ಆರೋಹಣ) ನ. ಸಂ. ಏರುವಿಕೆ.

**आरोळी** (ಆರೋಳೀ) ಸ್ತ್ರೀ. ಕೂಗು, ಚೀತ್ಕಾರ.

**आर्जव** (ಆರ್ಜವ) ನ. ಸಂ. ಸರಳ ಸ್ವಭಾವ. ೨. ನಮ್ರತೆ.

**आर्जव** (ಆರ್ಜವ್) ನ. ಫಾ. ಅಸಹಾಯತೆ, ಮೊರೆ ಇಡುವಿಕೆ, ದೈನ್ಯ.

**आर्जवी** (ಆರ್ಜವೀ) ವಿ. ಫಾ. ಅಸಹಾಯ,ನಮ್ರ, ದೀನ.

**आर्त** (ಆರ್ತ) ವಿ. ಸಂ. ದೀನ, ದುಃಖಿತ,ಬೇನೆಬಿದ್ದ ನೆಳಲುವ.

**आर्तव** (ಆರ್ತವ) ಪು.ಸಂ. ರಜೋದರ್ಶನ,'ಮುಟ್ಟು' ದೋಷ.

**आर्थिक** (ಆರ್ಥಿಕ) ವಿ. ಸಂ.ಧನ ಸಂಬಂಧದ,ಆರ್ಥಿಕ ದುಡ್ಡಿನ, ಸಾಪಂತ್ತಿಕ.

**—स्थिती** (—ಸ್ಥಿತೀ) ಸಾಂಪತ್ತಿಕ ಸ್ಥಿತಿ.

**आर्द्र** (ಆರ್ದ್ರ) ವಿ. ಸಂ. ಹಸಿಯಾದ, ಒದ್ದೆಯಾದ, ತೊಯ್ದ, ದ್ರವಿತ.

**दयार्द्र** (ದಯಾರ್ದ್ರ) ಕರುಣೆಯಿಂದ ಕರಗಿದ.

**आर्द्रता** (ಆರ್ದ್ರತಾ) ಸ್ತ್ರೀ. ಸಂ. ಹಸಿತನ, ಒದ್ದೆತನ. ೨. ಹವೆಯಲ್ಲಿಯ ನೀರಿನ ಅಂಶ.

**आवळ्या जावळ्या** (ಆವಳ್ಯಾ ಜಾವಳ್ಯಾ) ವಿ. ಕ. ಅವಳಿ ಜವಳಿ, ಒಂದೇ ಸಮಯಕ್ಕೆ ಹುಟ್ಟಿದ.

**आवाका** (ಆವಾಕಾ) ಪು. ಹತೋಟಿ, ಅಧಿಕಾರ, ನಿಯಂತ್ರಣ.

**आवा** (ಆವಾ) ಸ್ತ್ರೀ. ಕ. ಸಭ್ಯ ಸ್ತ್ರೀ. ೨. ಸೂಳೆ, ಉಪಪತ್ನಿ.

**आवाई** (ಆವಾಈ) ಸ್ತ್ರೀ.ವದಂತಿ,ಸುದ್ದಿ, ಹಾರುಸುದ್ದಿ.

**आवाज** (ಆವಾಜ್) ಪು. ಫಾ. ಶಬ್ದ. ಧ್ವನಿ, ದನಿ.

**—काढणे** (—ಕಾಢಣೇ) ಕ್ರಿ. ಅ. ಅಡ್ಡಿಮಾಡು. ೨. ಅಳು.

**आवाजी** (ಆವಾಜೀ) ಸ್ತ್ರೀ. ಫಾ. ಸುಸ್ವರ, ಇಂಚರ, ವಿ. ಮಾತಿನ ಮೂಲಕ ಮತದಾನ.

**आवाड** (ಆವಾಡ್) ನ. ಪ್ರಾಕಾರ, ಮನೆಯ ಸುತ್ತಲಿನ ಖಾಲೀ ಜಾಗೆ, ಕಾಂಪಾವುಂಡ್.

**आवार** (ಆವಾರ್) ಪು. ನ. ಪ್ರಾಕಾರ.

**आवास** (ಆವಾಸ್) ಪು. ಸಂ. ನಿಲಯ, ವಸತಿಸ್ಥಾನ

**आवाहन** (ಆವಾಹನ್) ನ. ಸಂ. ಆವಾಹನಮಾಡುವುದು, ಕರೆಯುವುದು.

**आविर्भवणे** (ಆವಿರ್ಭವಣೇ) ಕ್ರಿ. ಸಂ. ಪ್ರಕಟವಾಗು, ಕಾಣಿಸು.

**आविर्भाव** (ಆವಿರ್ಭಾವ) ಪು. ಪ್ರಕಟವಾಗುವಿಕೆ, ಆವಿರ್ಭಾವ, ಹಾವಭಾವ.

**आविर्भूत** (ಆವಿರ್ಭೂತ) ವಿ. ಸಂ. ಕಾಣಿಸಿಕೊಂಡ, ಪ್ರಕಟವಾದ, ವ್ಯಕ್ತಮಾಡಿದ.

**आविर्भूति** (ಆವಿರ್ಭೂತಿ) ಸ್ತ್ರೀ. ಸಂ. ಅಭಿವ್ಯಕ್ತಿ.

**आविष्करण** (ಆವಿಷ್ಕರಣ) ನ. ಸಂ. ಆವಿಷ್ಕಾರ ಮಾಡುವಿಕೆ, ತೋರಿಕೆ.

**आविष्कार** (ಆವಿಷ್ಕಾರ) ಪು. ಸಂ. ತೋರಿಸುವಿಕೆ. ೨. ಕಂಡು ಹಿಡಿಯುವಿಕೆ. ೩. ಸಂಶೋಧನ.

**आविष्कृत** (ಆವಿಷ್ಕೃತ) ವಿ. ಸಂ. ಕಂಡುಹಿಡಿದ.

**आविष्ट** (ಆವಿಷ್ಟ) ವಿ. ಸಂ. ಮೈಯಲ್ಲಿ ಸೇರಿದ, ಹೊಕ್ಕ, ಗ್ರಸ್ತ.

**आवृत** (ಆವೃತ) ವಿ. ಸಂ.ಆವರಣವುಳ್ಳ, ಮುಚ್ಚಿದ.

**आवृत्त** (ಆವೃತ್ತ) ವಿ. ಸಂ. ತಿರುಗಿದ, ತಿರುಗಿಸಿದ. ೨. ಮರಳಿದ. ೩. ಪುನಃ ಪುನಃ ಮಾಡಿದ.

**आवृत्ति** (ಆವೃತ್ತಿ) ಸ್ತ್ರೀ. ಸಂ. ಸಂಸ್ಕರಣ, ಪುನರಾವೃತ್ತಿ.

**आवेग** (ಆವೇಗ್) ಪು. ಸಂ. ಭರ, ರಭಸ, ವೇಗ.

**आवेदन** (ಆವೇದನ್) ನ. ಸಂ. ಹೇಳಿಕೆ, ಬಿನ್ನಹ.

**आवेव** (ಆವೇವ್) ಪು. ಅವಯವ, ಅಂಗ.

**आवेश** (ಆವೇಶ್) ಪು.ಸಂ. ಆವೇಶ, ಶಕ್ತಿ,ಸಾಮರ್ಥ್ಯ. ೨. ಸಿಟ್ಟು, ಪ್ರಬಲಭಾವನೆ,ಹುರುಪು. ೩.ಸ್ಫೂರ್ತಿ. ೪. ಕೆರಳುವಿಕೆ. ೫. ಮೂರ್ಛೆ.

**आवेशणे** (ಆವೇಶಣೇ) ಕ್ರಿ. ಅ. ಆವೇಶಯುಕ್ತನಾಗು.

**आवेशी** (ಆವೇಶೀ) ವಿ. ಸಂ. ಹುರುಪಿನ, ಉತ್ಸಾಹವುಳ್ಳ.

**आवो** (ಆವ್ಹೋ) ಉದ್ಗಾರ. ಅಹೋ ನೋಡಿರಿ.

**आव्हाट** (ಆವ್ಹಾಟ್) ಸ್ತ್ರೀ. ವಾಮಮಾರ್ಗ. ೨. ಕಳ್ಳ ಮಾರ್ಗ, ಗುಪ್ತಮಾರ್ಗ.

**आशंकणे** (ಆಶಂಕಣೇ) ಕ್ರಿ. ಅ. ಸಂಶಯಪಡು, ಭಯಪಡು.

**आशंका** (ಆಶಂಕಾ) ಸ್ತ್ರೀ. ಸಂ. ಸಂಶಯ, ಭಯ.

**आशंकित** (ಆಶಂಕಿತ್) ವಿ. ಸಂ. ಸಂಶಯಗೊಂಡ, ಭಯಪಟ್ಟ.

आश (ಆಶ್) ಸ್ತ್ರೀ. ಆಶೆ, ಇಚ್ಛೆ.

आशक (ಆಶಕ್) ಪು. ಅರ. ಪ್ರೇಮಿ.

आशय (ಆಶಯ) ಪು. ಸಂ. ಸಾರ. ೨. ಅರ್ಥ, ತಾತ್ಪರ್ಯ, ಅಭಿಪ್ರಾಯ.

आशय (ಆಶಯ) ಪ್ರತ್ಯಯ)–ಪು–ಸ್ಥಳ, ಸ್ಥಾನ, ಕೇಂದ್ರ. (ಜಲಾಶಯ ಇತ್ಯಾದಿ.)

आशा (ಆಶಾ) ಸ್ತ್ರೀ. ಆಸೆ, ಬಯಕೆ. ೨. ದಿಕ್ಕು.

–पाल (–ಪಾಲ್) ಪು. ದಿಕ್ಪಾಲ.

–जनक–दायक (–ಜನಕ ದ್ಾಯಕ) ಆಸೆಯನ್ನು ಉಂಟುಮಾಡುವ, ಉತ್ಸಾಹವರ್ಧಕ.

–वाद (–ವಾದ್) ಪು. ಹುರುಪು, ಉತ್ಸಾಹ.

आशावणे (ಆಶಾವಣೇ) ಕ್ರಿ. ಅ. ಆಸೆಪಡು, ಇಚ್ಛೆ ಮಾಡು, ಬಯಸು.

आशाविणे (ಆಶಾವಿಣೇ) ಕ್ರಿ. ಸ. ಆಸೆ ತೋರಿಸು, ಹುರುಪು ಗೊಳಿಸು.

आशाळ-ळू (ಆಶಾಳ್–ಳೂ) ವಿ. ಆಸೆಬುರುಕ, ಲೋಭಿ.

आशाळभूत (ಆಶಾಳಭೂತ್) ವಿ. ಅತ್ಯಾಸೆಯುಳ್ಳವ.

आशिष (ಆಶಿಷ್) ಪು. ಸಂ. ಆಶೀರ್ವಾದ.

आशीपाशी (ಆಶೀಪಾಶೀ) ವಿ. ನೆರೆಹೊರೆಯಲ್ಲಿ. ಅದಿ ಬದಿಯಲ್ಲಿ.

आशीर्वचन (ಆಶೀರ್ವಚನ) ನ. ಸಂ. ಆಶೀರ್ವಾದ, ಹರಕೆ.

आशीर्वाद (ಆಶೀರ್ವಾದ) ಪು. ಸಂ. ಆಶೀರ್ವಾದ.

आशीर्वादणे (ಆಶೀರ್ವಾದಣೇ) ಕ್ರಿ. ಸ. ಆಶೀರ್ವಾದ ಮಾಡು.

आशीष (ಆಶೀಷ್) ಪು. ಆಶಿರ್ವಾದ.

आशु (ಆಶು) ಕ್ರಿ. ವಿ. ಸಂ. ಬೇಗ.

आशौच (ಆಶೌಚ್) ಪು. ಸಂ. ಮೈಲಿಗೆ. (ವೃದ್ಧಿ ಸೂತಕ ಮುಂತಾದ.)

आश्चर्य (ಆಶ್ಚರ್ಯ) ನ. ಸಂ. ಬೆರಗಾಗುವಿಕೆ, ಸೋಜಿಗ, ಆಶ್ಚರ್ಯ, ಚಮತ್ಕಾರ. ೨. ವಿಸ್ಮಯ.

आश्रम (ಆಶ್ರಮ) ಪು. ಸಂ. ನಿಲಯ; ಬೀಡು, ಬೀಡಾರ, ತಪೋವನ.

आश्रय (ಆಶ್ರಯ) ಪು. ಸಂ. ಆಧಾರ, ಶರಣ, ಸಂರಕ್ಷಣೆ.

आश्राप (ಆಶ್ರಾಪ್) ವಿ. अश्राप ನೋ.

आश्रित (ಆಶ್ರಿತ) ವಿ. ಸಂ. ಸಲಹಿದ, ಸಾಕಿದ, ಆಶ್ರಿತ.

आश्लिष्ट (ಆಶ್ಲಿಷ್ಟ) ವಿ. ಸಂ. ಕೂಡಿಕೊಂಡ. ಅಪ್ಪಿಕೊಂಡ.

आश्लेषा (ಆಶ್ಲೇಷಾ) ಸ್ತ್ರೀ. ಸಂ. ಆಶ್ಲೇಷಾ ನಕ್ಷತ್ರ.

आश्वास (ಆಶ್ವಾಸ್) ಪು. ಸಂ. ಸಮಾಧಾನ.

आश्वासन (ಆಶ್ವಾಸನ) ನ. ಸಂ. ೧. ವಚನ, ಮಾತು. ೨. ಸಮಾಧಾನ ಹೇಳುವಿಕೆ. ೩. ಭರವಸೆ. ೪. ಭಯ ನಿವಾರಣ.

आश्विन (ಆಶ್ವಿನ) ಪು. ಸಂ. ಆಶ್ವಿನ ಮಾಸ.

आषक (ಆಷಕ್) ಪು. ಅರ. ಪ್ರೇಮಿ, ಅನುರಾಗಿ.

आषाढ (ಆಷಾಢ್) ಪು. ಸಂ. ಆಷಾಢ ಮಾಸ.

आषाढी (ಆಷಾಢೀ) ವಿ. ಆಷಾಢ ಮಾಸದಲ್ಲಿಯ.

आस (ಆಸೆ) ಸ್ತ್ರೀ. ಆಸೆ.

आसकड (ಆಸ್‌ಕಡ್) ನ. ದುರ್ಗಮ ಸ್ಥಾನ.

आसका (ಆಸಕಾ) ಕ್ರಿ. ವಿ. ಎಲ್ಲ.

आसक्त (ಆಸಕ್ತ) ವಿ. ಸಂ. ಅನುರಕ್ತ, ಅಕ್ಕರವುಳ್ಳ.

आसक्ति (ಆಸಕ್ತಿ) ಸ್ತ್ರೀ. ಸಂ. ಭಕ್ತಿ, ಅನುರಾಗ.

आसखा (ಆಸಖಾ) ಕ್ರಿ. ವಿ. ಎಲ್ಲ.

आसडा (ಆಸಡಾ) ಪು. ಜೋರಿನಿಂದ ಕೊಸರಿಕೊಳ್ಳುವಿಕೆ.

आसणी (ಆಸಣೀ) ಸ್ತ್ರೀ. ಮಜ್ಜಿಗೆಯ ಕಡುಗೋಲಿನ ಹಗ್ಗ.

आसन (ಆಸನ) ನ. ಸಂ. ಪೀಠ. ಸ್ಥಾನ. ಕೂಟ. ೨. ಯೋಗದ ಕ್ರಿಯೆ. ೩. ರತಿ ಕ್ರೀಡೆಯ ಮಾದರಿ.

–ठोकणे (–ಠೋಕಣೇ) ಕ್ರಿ. ಧಾ. (ಅತಿಥಿ ಮುಂತಾದವರು) ಉಳಿದುಕೊ, ತೊಲಗದಿರು.

–डळमळणे (–ಡಳಮಳಣೇ) ಕ್ರಿ. ಅ. (ಪರಿಸ್ಥಿತಿ) ಅಸ್ಥಿರವಾಗು.

–बसविणे (–ಬಸವಿಣೆ) ಕ್ರಿ. ಸ. ಸ್ಥಿರಗೊಳಿಸು.

आसनी (ಆಸನೀ) ಸ್ತ್ರೀ. ಸಣ್ಣ ಮಣೆ, ಆಸನ ೨. ಆಶ್ವಿನ ಪೌರ್ಣಿಮೆಗೆ ಹಿರಿಯ ಮಗನಿಗೆ ಮಾಡುವ ಆರತಿ.

आसन्न (ಆಸನ್ನ) ವಿ. ಸಂ. ಹತ್ತಿರದಲ್ಲಿದ್ದ, ಸಮೀಪಿಸಿದ.

–मरण (–ಮರಣ) ವಿ. ಮರಣಕಾಲ ಒದಗಿದ, ಸಾಯಲಿಕ್ಕಾದ.

आसपास (ಆಸ್‌ಪಾಸ್) ಅವ್ಯಯ, ಹತ್ತಿರದಲ್ಲಿ, ನೆರೆಹೊರೆಯಲ್ಲಿ, ಅದಿಬದಿಗೆ.

आसमंत (ಆಸಮಂತ್) ಪು. ಸಂ. ಸುತ್ತುಮುತ್ತಲಿನ ನೆಲೆ.

आसमंतात्-न (ಆಸಮಂತಾತ್–ನ್) ಕ್ರಿ. ವಿ. ಸುತ್ತುಮುತ್ತಲು.

**आसर** (ಆಸರ್) ಪು. ಅರ. ಪ್ರಭಾವ, ಸಾಮರ್ಥ್ಯ.
**आसरा** (ಆಸಾರ) ಪು. ಆಶ್ರಯ, ಶರಣ, ಭರವಸೆ.
**आसव** (ಆಸವ್) ನ. ಸಂ. ರಸ, ಮದ್ಯ ಅರ್ಕ.
**आसामी** (ಆಸಾಮೀ) ಪು. ಆರ. ವ್ಯಕ್ತಿ, ಮನುಷ್ಯ.
**आसावणे** (ಆಸಾವಣೇ) ಕ್ರಿ. ಸ. ಹುರುಪುಗೊಳ್ಳು.
**आसुड** (ಆಸುಡ್) ನ. ಬಾರಕೋಲು, ಹಂಟರ್.
**असुडणे** (ಆಸುಡಣೇ) ಕ್ರಿ. ಸ. ಎಳೆ, ಜಗ್ಗು.
**आसुरी** (ಆಸುರೀ) ವಿ. ಸಂ. ಕ್ರೂರ, ಘೋರ.
 **–उपाय** (–ಉಪಾಯ್) ಪು. ಸಂ. ಘೋರ ಚಿಕಿತ್ಸೆ.
**आसूड** (ಆಸೂಡ್) ನ. ಬಾರಕೋಲು.
**आस्कंद** (ಆಸ್ಕಂದ್) ಪು. ಆಶ್ವಗಂಧ.
**आस्तिक** (ಆಸ್ತಿಕ) ವಿ. ಸಂ. ದೇವ, ಧರ್ಮ ಮುಂತಾದವುಗಳಲ್ಲಿ ನಂಬುವವ. ೨. ಆಸ್ತಿಕ ಋಷಿ.
**आस्तिक्य** (ಆಸ್ತಿಕ್ಯ) ನ. ಸಂ. ನಂಬುಗೆ, ಶ್ರದ್ಧೆ.
**आस्ते** (ಆಸ್ತೇ) ಕ್ರಿ. ವಿ. ಫಾ. ನೆಲ್ಲಗೆ.
 **–कदम** (–ಕದಮ್) ಪು. ಮಂದಗತಿ.
**आस्था** (ಆಸ್ಥಾ) ಸ್ತ್ರೀ. ಸಂ. ಪ್ರೀತಿ–ಅಕ್ಕರ, ಹುಮ್ಮಸ, ಪಾಮಾಣಿಕತೆ.
**आस्थान** (ಆಸ್ಥಾನ್) ನ. ಸಂ. ಸಭಾಗೃಹ, ಸ್ಥಾನ.
**आस्थेवाईक** (ಆಸ್ಥೇವಾಯಿಕ್) ವಿ. ನಂಬುಗೆಯುಳ್ಳವ, ಭಾವಿಕ.
**आस्मान** (ಆಸ್ಮಾನ್) ನ. ಫಾ. ಆಕಾಶ.
**आस्वाद** (ಆಸ್ವಾದ್) ಪು. ಸಂ. ರುಚಿ, ಸ್ವಾದ.
**आहा** (ಆಹಾ) ಉದ್ಗಾರ ಅಹಹ.
**आहाणा** (ಆಹಾಣಾ) ವಿ. ಆತ್ಮಘಾತಕ ೨. ನಾಣ್ಣುಡಿ
**आहार** (ಆಹಾರ) ಪು. ಸಂ. ಭೋಜನ. ೨. ತಿನ್ನುವ ಪದಾರ್ಥ.
 **आहारी जाणे** (ಆಹಾರೀ ಜಾಣೇ) ವಶದಲ್ಲಿ ಹೋಗು, ಸೋಲು.
**आहिताग्नि** (ಆಹಿತಾಗ್ನಿ) ವಿ. ಸಂ. ಸತತವಾಗಿ ಅಗ್ನಿಯ ಪೂಜೆ ಮಾಡುವ ವೈದಿಕ.
**आहुति** (ಆಹುತಿ) ಸ್ತ್ರೀ. ಸಂ. ಬಲಿ, ಆಹುತಿ.
**आहे** (ಆಹೇ) ಕ್ರಿ. ಇದೆ, ಇದ್ದೇನೆ, ಇದ್ದಾನೆ, ಇದ್ದಾಳೆ.
**आहेर** (ಆಹೇರ್) ಪು. ಉಡುಗರೆ.
**आन्हिक** (ಆಹ್ನಿಕ್) ವಿ. ನಿತದ, ೨. ನ. ನಿತ್ಯ ಪೂಜೆ, ಕರ್ಮ.
**आल्हाद** (ಆಹ್ಲಾದ್) ಪು. ಸಂ. ಸಂತೋಷ, ಸುಖ.
**आल्हादक** (ಆಹ್ಲಾದಕ್) ವಿ. ಸಂ. ಸುಖಕಾರಕ.
**आह्लादित** (ಆಹ್‌ಲಾದಿತ್) ವಿ. ಸಂ. ಸಂತುಷ್ಟ.
**आव्हान** (ಆಹ್ವಾನ್) ನ. ಸಂ. ಕರೆ, ಆಮಂತ್ರಣ ೨. ಸಡ್ಡು ಹೊಡೆಯುವಿಕೆ, ಯುದ್ಧಕ್ಕೆ ಕರೆಯುವಿಕೆ.
 **–देणे** (–ದೇಣೇ) ಕ್ರಿ. ಧಾ. ಯುದ್ಧಕ್ಕೆ ಕರೆ.
**आळंगणे** (ಆಳಂಗಣೇ) ಕ್ರಿ. ಸ. ತಬ್ಬಿಕೊಳ್ಳು, ಅಪ್ಪಿಕೊ.
**आळ** (ಅಳ್) ಪು. ಸುಳ್ಳು ಪ್ರವಾದ, ಆರೋಪ.
**आळणी** (ಆಳಣೀ) ವಿ. अळणी ನೋಂ.
**आळवण** (ಆಳವಣ್) ಸ್ತ್ರೀ. ಮೊರೆ, ಶರಣು, ಪ್ರಾರ್ಥನೆ.
**आळवाळ** (ಆಳವಾಳ್) ನ. ಮಡಿ, ಬೊಡ್ಡೆಯ ಸುತ್ತಲಿನ ಗೋಡೆ.
I **आळशी** (ಆಳಶೀ) ವಿ. ಸೋಮಾರಿ, ಮೈಗಳ್ಳ.
II **आळशी** (ಆಳಶೀ) ಸ್ತ್ರೀ. ಅತಸೀ, ಅಗಸೆ ಬೀಜ.
**आळस** (ಆಳಸ್) ಪು. ಆಲಸ್ಯ, ಸೋಮಾರಿತನ.
**आळसट** (ಆಳಸಟ್) ವಿ. ಸೋಮಾರಿ.
**आळसणे** (ಆಳಸಣೇ) ಕ್ರಿ. ಅ. ವಿಶ್ರಮಿಸು ಸೋಮಾರಿತನ ಮಾಡು.
**आळसावणे** (ಆಳಸಾವಣೇ) ಕ್ರಿ. ಅ. ವಿಶ್ರಮಿಸು ಶ್ರಮ ಪರಿಹಾರ ಮಾಡು.
**आळसुंदा** (ಆಳಸುಂದಾ) ವು. ಕ. ಅಲಸಂದಿ ಕಾಳು.
**आळा** (ಆಳಾ) ಪು. ಕ. ಅಡ್ಡಿ, ಪ್ರತ್ಯವಾಯ ನಿರ್ಬಂಧ.
 **–घालणे** (–ಘಾಲಣೇ) ಕ್ರಿ. ಸಂ. ನಿಲ್ಲಿಸು.
 **–बसणे** (–ಬಸಣೆ) ಕ್ರಿ. ಅ. ನಿಲ್ಲು ನಿಂತುಹೋಗು.
**आळीव** (ಆಳೀವ್) ಪು. अहळीव ನೋಡಿರಿ.
**आळीपाळीने** (ಆಳೀಪಾಳೀನೆ) ಕ್ರಿ. ವಿ. ಸರತಿಯಿಂದ.
**आळू** (ಆಳೂ) ವು. "अळू" ನೋ.
**आळें** (ಆಳೇ) ನ. अळे ನೋ.
**आळोखे पिळोखे** (ಆಳೋಖೆ ಪಿಳೋಖೆ) ಪು. अळोखे पिळोखे ನೋಡಿರಿ.
**आक्षिप्त** (ಆಕ್ಷಿಪ್ತ) ವಿ. ಸಂ. ಆಕ್ಷೇಪಣೆ ಮಾಡಿದ, ದೂರಿಕೊಂಡ.
**आक्षेप** (ಆಕ್ಷೇಪ) ಪು. ಸಂ. ಸಂಶಯ, ದೂಷಣ, ಅಡ್ಡಿ, ತಡೆ.
**आक्षपक** (ಆಕ್ಷೇಪಕ) ವಿ. ಸಂ. ದೂರಿಕೊಳ್ಳುವವ.
**आक्षेपणे** (ಆಕ್ಷೇಪಣೇ) ಕ್ರಿ. ಧಾ. ಆಕ್ಷೇಪಿಸು, ದೂಷಿಸು.

**आक्षेपार्ह** (ಆಕ್ಷೇಪಾರ್ಹ) ವಿ. ಸಂ. ಆಕ್ಷೇಪ ಮಾಡು ವಂತಹ, ದೂಷಣೆತಕ್ಕದಾದ.

**आक्षेपून** (ಆಕ್ಷೇಪೂನ್) ಕ್ರಿ. ವಿ. ಬೇಕೆಂದು, ಖಂಡಿತ ವಾಗಿ, ಆಗ್ರಹಪೂರ್ವಕ.

**आक्षै** (ಆಕ್ಷೈ) ಕ್ರಿ. ವಿ. ಅಕ್ಷಯ, ಅವಿನಾಶಿ.

**आज्ञप्त** (ಆಜ್ಞಪ್ತ) ವಿ. ಸಂ. ಅಪ್ಪಣೆ ಪಡೆದವ.

**आज्ञा** (ಆಜ್ಞಾ) ಸ್ತ್ರೀ. ಸಂ. ಆಜ್ಞೆ, ಹುಕುಂ, ಆದೇಶ, ಕಟ್ಟಳೆ, ಅಪ್ಪಣೆ.

**–धारक** (–ಧಾರಕ) ವಿ. ಮಾತು ಕೇಳುವವ, ನಮ್ರ

**आज्ञातिक्रमण** (ಆಜ್ಞಾತಿಕ್ರಮಣ) ನ. ಸಂ. ಆಜ್ಞೆ ಯನ್ನು ಮೀರುವಿಕೆ.

**आज्ञाप–पि–णे** (ಆಜ್ಞಾಪ–ಪಿ–ಣೇ) ಕ್ರಿ. ಧಾ. ಆಜ್ಞೆ ಮಾಡು, ಕೊಡು.

**आज्ञापक** (ಆಜ್ಞಾಪಕ) ವಿ. ಸಂ. ಆಜ್ಞೆ ಕೊಡುವವ, ಅಧಿಕಾರಿ.

**आज्ञापत्र** (ಆಜ್ಞಾಪತ್ರ) ನ. ಸಂ. ಸರಕಾರೀ ಆಜ್ಞೆಯ ಪತ್ರ, ಕಾಗದ.

**आज्ञापत्रिका** (ಆಜ್ಞಾಪತ್ರಿಕಾ) ಸ್ತ್ರೀ. ಸಂ. ಸರಕಾರೀ ಕಾನೂನುಗಳ ಪತ್ರಕ.

**आज्ञापन** (ಆಜ್ಞಾಪನ್) ನ. ಸಂ. ಆಜ್ಞೆ ಮಾಡುವಿಕೆ

**आज्ञापालक** (ಆಜ್ಞಾಪಾಲಕ್) ವಿ. ಸಂ. ಆಜ್ಞಾಧಾರಕ

**आज्ञार्थी** (ಆಜ್ಞಾರ್ಥೀ) ವಿ. (ವ್ಯಾಕರಣ) ಆಜ್ಞಾರ್ಥ ರೂಪ.

**आज्ञासिद्ध** (ಆಜ್ಞಾಸಿದ್ಧ) ವಿ. ಸಂ. ತನ್ನ ಆಜ್ಞೆ ಯನ್ನು ಸಿದ್ಧ ಪಡಿಸುವವ.

## इ ಇ

**इ** (ಇ) ಮರಾಠಿಯಲ್ಲಿಯ ಮೂರನೆಯ ಸ್ವರ. ಇದರ ಉಪಯೋಗವು ತೀರ ಕಡಿಮೆ. ಸಂಸ್ಕೃತದಲ್ಲಿಯ इ (ಹ್ರಸ್ವ) ವನ್ನು ದೀರ್ಘವಾಗಿಯೇ ಉಚ್ಚಾರಿ ಸುತ್ತಾರೆ. ಆದುದರಿಂದ ಅವುಗಳನ್ನು ದೀರ್ಘ (ಅಂತ್ಯದಲ್ಲಿ ಮಾತ್ರ) ರೂಪದಲ್ಲಿಯೇ ಬರೆಯು ತ್ತಾರೆ. ಉದಾ. : ख्याति–ಖ್ಯಾತಿ–ख्याती [ಈ ಕೋಶದಲ್ಲಿ ಬಹುಶಃ ಸಂಸ್ಕೃತ ರೂಪದಲ್ಲಿಯ इ ಕಾರವನ್ನು ಹ್ರಸ್ವ ರೂಪದಲ್ಲಿಯೇ ಉಪಯೋಗಿಸ ಲಾಗಿದೆ. ಕೆಲವೆಡೆಗೆ ಮಾತ್ರ ई (ದೀರ್ಘ) ರೂಪ ವನ್ನು ಕೊಟ್ಟಿದೆ.

**इकडचा–ला** (ಇಕಡಚಾ–ಲಾ) ವಿ. ಕ. ಇತ್ತಕಡೆಯ.

**इकडून** (ಇಕಡೂನ್) ಕ್ರಿ. ವಿ. ಇಲ್ಲಿಂದ.

**इकडे** (ಇಕಡೇ) ಕ್ರಿ. ವಿ. ಇತ್ತ, ಇತ್ತಕಡೆ, ಈಕಡೆ.

**इकडेतिकडे** (ಇಕಡೇತಿಕಡೇ) ಕ್ರಿ. ವಿ. ಇತ್ತ ಅತ್ತ, ಅತ್ತಿತ್ತ. ೨. ಲಾ. ಎಲ್ಲ ಕಡೆಗೆ.

**इकरार** (ಇಕರಾರ್) ಪು. ಅರ. ಒಪ್ಪಂದ, ಮಾತು, ಕುಬುಲಾಯತಿ.

**इकळी** (ಇಕಳೀ) ಸ್ತ್ರೀ. ವಾಂತಿ.

**इक्तीदार** (ಇಕ್ತಿದಾರ್) ಸ್ತ್ರೀ. ಅರ. ಅಧಿಕಾರ.

**इक्बाल** (ಇಕಬಾಲ್) ಪು. ಅರ. ಸುದೈವ, ಅದೃಷ್ಟ.

**इख** (ಇಖ್) ಪು. ವಿಷ.

**इखण** (ಇಖಣ್) ನ. ಸಾಧನ, ಉಪಕರಣ.

**इखलास** (ಇಖಲಾಸ್) ಪು. ಅರ. ಮಿತ್ರತ್ವ. ೨. ಪ್ರಾಮಾಣಿಕತೆ.

**इखलासी** (ಇಖಲಾಸೀ) ವಿ. ಅರ. ಮಿತ್ರತ್ವದ (ಸಂಬಂಧ).

**इखळा** (ಇಖಳಾ) ಪು. ಕ. ಇಕ್ಕಳ, ಮೊಳೆ ಕಿತ್ತುವ ಸಾಧನ.

**इंगणे** (ಇಂಗಣೇ) ಕ್ರಿ. ಧಾ. ಪರಿಶ್ರಮ ಪಡು.

**इगत** (ಇಗತ್) ಸ್ತ್ರೀ. (ಗ್ರಾಮ್ಯ) ಯುಕ್ತಿ, ಹಂಚಿಕೆ.

**इगरेज** (ಇಂಗರೇಜ್) ವಿ. ಇಂಗ್ಲಿಷ ಮನುಷ್ಯ, ಯುರೋಪಿಯನ್.

**इंगरेजी** (ಇಂಗರೇಜೀ) ವಿ. ಇಂಗ್ಲಿಷ್ ಭಾಷೆ.

**इगर्ज** (ಇಗರ್ಜ) ಸ್ತ್ರೀ. ಕ್ರಿಶ್ಚನ್ ದೇವಸ್ಥಾನ, ಚರ್ಚ್

**इंगळा** (ಇಂಗಳಾ) ಪು. ೧. ಕೆಂಡ. ೨. ಗೊದ್ದ. (ಕೆಂಪು)

**इंगळी** (ಇಂಗಳೀ) ಸ್ತ್ರೀ. ಕ. ಒಂದು ಬಗೆಯ ಚೇಳು. ೨. ಇಕ್ಕಳ.

**इंगा** (ಇಂಗಾ) ಪು. ಸಮಗಾರ (ಚರ್ಮಕಾರ) ನ ಉಪಕರಣ (ಲಾ) ಸಾಮರ್ಥ್ಯ, ಕಸಬು.

**–दाखविणे** (–ದಾಖವಿಣೇ) ನಾಂ. ಸಾಮರ್ಥ್ಯ ವನ್ನು ತೋರಿಸು, ಫಜೀತಿ ಮಾಡು.

**इंगित** (ಇಂಗಿತ್) ನ. ಸಂ. ಅರ್ಥ. ಅಭಿಪ್ರಾಯ, ತಾತ್ಪರ್ಯ, ಗುರುತು.

**इघड** (ಇಘಡ್) ಪು. (ಗ್ರಾಮ್ಯ) बिघाड ನೋಡಿರಿ.

**इंच** (ಇಂಚ್) ಪು. ಒಂದು ಫೂಟಿನ ೧/೧೨ ಭಾಗ, ಇಂಚು.

**इचकोबा** (ಇಚಕೋಬಾ) ಪು. ನಾಶ, ಧ್ವಂಸ.

**इचर** (ಇಚರ್) ವಿ. ವಿರಲ, ಅಪರೂಪ.

**इचा–ची** (ಇಚಾ–ಇಚೀ) ಸರ್ವ हिचा–ची ನೋ.

**इंज–जि–न** (ಇಂಜ–ಜಿ–ನ್) ನ. ಇಂ. ಶಕ್ತಿಯನ್ನು ಹುಟ್ಟಿಸುವ ಯಂತ್ರ.

**इजबळ** (ಇಜಬಳ್) ಸ್ತ್ರೀ. ಒಂದು ಬಗೆಯ ಹಲ್ಲಿ.

**इजलास** (ಇಜಲಾಸ್) ಸ್ತ್ರೀ. ಅರ. ರಾಜ್ಯರೋಹಣ, ಸಭೆ.

**इजा** (ಇಜಾ) ಸ್ತ್ರೀ. ಅರ. ಘಾತ, ಅಪಘಾತ, ಗಾಯ.

**इजाफत** (ಇಜಾಫತ್) ಸ್ತ್ರೀ. ಅರ. ಉಂಬಳಿಯಾಗಿ ಕೊಟ್ಟಗ್ರಾಮ.

**इजाफा** (ಇಜಾಫಾ) ಪು. ಅರ. ನಿಯುಕ್ತಿ.

**इजा बिजा तिजा** (ಇಜಾ ಬಿಜಾ ತಿಜಾ) ಒಂದೇ ಸವನೆ ಮೂರು ಸಲ ಸಂಭವಿಸಿದ ಸಂಗತಿ.

**इजारत** (ಇಜಾರತ್) ಸ್ತ್ರೀ. ಅರ. ಗುತ್ತಿಗೆ, ಕಂತ್ರಾಟ ಮಕ್ತೆ.

**इजारतदार** (ಇಜಾರತ್‌ದಾರ) ಪು. ಅರ. ಗುತ್ತಿಗೆದಾರ.

**इजारा** (ಇಜಾರಾ) ಪು. ಅರ. ಗುತ್ತಿಗೆ.

**इजारी** (ಇಜಾರೀ) ಸ್ತ್ರೀ. ಫಾ. ಬಿಳಿಯ ಕಾಲಿನ ಕುರಿ.

**इंजनियर** (ಇಂಜನಿಯರ್) ಪು. ಇಂ. ಸ್ಥಾಪತ್ಯ ಶಾಸ್ತ್ರಿ, ಯಂತ್ರಜ್ಞ.

**इज्जत** (ಇಜ್ಜತ್) ಸ್ತ್ರೀ. ಅರ. ಮರ್ಯಾದೆ, ಪ್ರತಿಷ್ಠೆ.

**इट** (ಇಟ್) ಸ್ತ್ರೀ. वीट ನೋಂ,

**इटकुली मिटकुली** (ಇಟಕುಲೀ ಮಿಟಕುಲೀ) ವಿ. ಸಣ್ಣ, ಪುಟ್ಟ.

**इटकोर** (ಇಟಕೋರ್) ವಿ. ಹಟಮಾರಿ.

**इटाळ** (ಇಟಾಳ್) ಪು. विटाळ ನೋಂ.

**इटीदांडू** (ಇಟೀದಾಂಡೂ) ಪು. विटीदांडू ನೋಂ.

**इटीमिटी** (ಇಟೀಮಿಟೀ) ಸ್ತ್ರೀ. ಕ. ದೃಷ್ಟಿಯಾಗ ಬಾರದೆಂದು ಮಾಡುವ ಕೃತಿ.

**इटेकर** (ಇಟೇಕರ್) ಪು. ಶಸ್ತ್ರಧಾರಿ ದಂಡಾಳು.

**इडकणे** (ಇಡಕಣೇ) ಕ್ರಿ. ಧಾ. ನಟಿಸು. ೨. ಡೌಲು. ದಿಮಾಕ ಮಾಡು.

**इडगंड** (ಇಡಗಂಡ್) ನ. ಕ. ಇಡುಗಂಟು, ಗುಪ್ತ ಧನ. ೨. ಮೂಲಧನ.

**इडगळला** (ಇಡಗಳಲಾ) ವಿ. ಹೊಲಸು. ಮಾಸಿದ.

**इडपाड** (ಇಡ್‌ಪಾಡ್) ಪು. ಆವೇಶ, ಸಾಮರ್ಥ್ಯ ಹುಮ್ಮಸ.

**इडली** (ಇಡಲಿ) ಸ್ತ್ರೀ. ಕ. ಇಡಲಿ, (ಅಕ್ಕಿ ಉದ್ದಿನ ಖಾದ್ಯ.)

**इडा** (ಇಡಾ) ಸ್ತ್ರೀ. ಸಂ. (ಯೋಗ ಶಾಸ್ತ್ರ) ಚಂದ್ರ ನಾಡಿ.

**–पिडा** (–ಪಿಡಾ) ಸ್ತ್ರೀ. ಎಲ್ಲ ಬಗೆಯ ಸಂಕಟ.

**इंडिया** (ಇಂಡಿಯಾ) ಪು. ಇಂ. ಹಿಂದುಸ್ಥಾನ, ಭಾರತ

**इडी** (ಇಡೀ) ಸ್ತ್ರೀ. ಬೀಡಿ. (ಗ್ರಾಮ್ಯ विडी ನೋಂ.

**इंडोचायना** (ಇಂಡೊಚಾಯನಾ) ಪು. ಥಾಯಲ್ಯಾಂಡ್, ಲಾಓಸ್, ಕಂಬೋಡಿಯಾ ವಿಎತ್‌ನಾಮ್ ದೇಶಗಳ ಸಾಮೂಹಿಕ ಸಂಜ್ಞೆ.

**इंडोजर्मानिक** (ಇಂಡೋಜರ್ಮಾನಿಕ್) ವಿ. ಇಂ. ಯುರೋಪದಲ್ಲಿಯ ಆರ್ಯಭಾಷಾ ಸಮೂಹ.

**इंडोनेशिया** (ಇಂಡೋನೆಶಿಯಾ) ಸ್ತ್ರೀ. ಇಂ. ಜಾವಾ ಸುಮಾತ್ರಾ ದ್ವೀಪಗಳ ರಾಜ್ಯ.

**इणा** (ಇಣಾ) ಸ್ತ್ರೀ. वीणा ನೋಡಿರಿ.

**इतउपर** (ಇತಉಪರ್) ಕ್ರಿ. ವಿ. ಇದರ ಮೇಲೆ, ಇನ್ನು ಮೇಲೆ, ಇನ್ನು ಮುಂದೆ.

**इतका** (ಇತಕಾ) ವಿ. ಇಷ್ಟು.

**इंतकाल** (ಇಂತಕಾಲ್) ಪು. ಅರ. ಮರಣ.

**इंतजाम** (ಇಂತಜಾಮ್) ಪು. ಅರ. ವ್ಯವಸ್ಥೆ.

**इंतजारी** (ಇಂತಜಾರೀ) ಸ್ತ್ರೀ. ಅರ. ದಾರಿಕಾಯುವಿಕೆ, ಪ್ರತೀಕ್ಷೆ.

**इतपत** (ಇತಪತ್) ಕ್ರಿ. ವಿ. ಇಷ್ಟರ ಮಟ್ಟಿಗೆ, ಇಷ್ಟು.

**इतःपर** (ಇತಃಪರ) ಕ್ರಿ. ವಿ. ಸಂ. ಇನ್ನು ಮುಂದೆ, (ಎಂದಿಗೂ).

**इतफाक** (ಇತಫಾಕ್) ಪು. ಅರ. ಏಕಮತ, ಏಕ ವಿಚಾರ, ಸಹಮತಿ.

**इतबार** (ಇತಬಾರ್) ಪು. ಅರ. ವಿಶ್ವಾಸ, ನಂಬುಗೆ.

**–इमाने इतबारे** (ಇಮಾನೆ ಇತಬಾರೇ) ಪ್ರಾಮಾಣಿಕತೆಯಿಂದ, ನಿಷ್ಕಪಟವಾಗಿ.

**इतबारात** (ಇತಬಾರಾತ್) ಸ್ತ್ರೀ. ಅರ. ಆದರಾತಿಥ್ಯ, ಸರಬರಾಜು.

**इतबारी** (ಇತಬಾರೀ) ವಿ. ಅರ. ವಿಶ್ವಾಸದ, ಭರವಸೆಯ

**इतमाम** (ಇತಮಾಮ್) ಪು. ಅರ. ಪರಿಜನ, ಅಭಿಜನ, ಪರಿವಾರ.

**इतमाम्या** (ಇತಮಾಮ್ಯಾ) ಪು. ಅರ+ಮರಾಠಿ ವ್ಯವಸ್ಥಾಪಕ.

**इतर** (ಇತರ) ವಿ. ಸಂ. ಬೇರೆ, ಇತರ, ಅನ್ಯ.

**इतरणे** (ಇತರಣೇ) ಕ್ರಿ. ಸ. ಚೇಷ್ಟೆಮಾಡು.

**इतरत्र** (ಇತರತ್ರ) ಕ್ರಿ. ವಿ. ಸಂ. ಬೇರೊಂದು ಕಡೆಗೆ.

**इतरथा** (ಇತರಥಾ) ಕ್ರಿ. ವಿ. ಸಂ. ಪರ್ಯಾಯದಿಂದ, ಬೇರೆ ಬಗೆಯಿಂದ.

**इतराज** (ಇತರಾಜ್) ವಿ. ಅರ. ಕೋಪಗೊಂಡ, ಕೆರಳಿದ.

**इतराजी** (ಇತರಾಜೀ) ಸ್ತ್ರೀ. ಅರ. ಕೋಪ, ಅಸಮಾಧಾನ.

**इतरायल** (ಇತರಾಯಲ್) ಸ್ತ್ರೀ. ಹಿಂ. ಕುಚೋದ್ಯದ, ತುಂಟ.

**इतरेजन** (ಇತರೇಜನ್) ಪು. ಸಂ. ಇತರರು, ಬೇರೆಯವರು.

**इतरेतर** (ಇತರೇತರ) ವಿ. ಸಂ. ಪರಸ್ಪರ(ವ್ಯಾಕರಣ) ದ್ವಂದ್ವ ಸಮಾಸದ ಒಂದು ಬಗೆ.

**इतिल तितल** (ಇತಿಲ್ ತಿತಲ್) ವಿ. ಚಂಚಲ.

**इतला** (ಇತಲಾ) ವಿ. ಇಷ್ಟು, ಇಷ್ಟೊಂದು.

**इतलाक-ख** (ಇತಲಾಕ್–ಖ್) ಸ್ತ್ರೀ. ಅರ. ಉಂಬಳಿ, ಸಂಬಳ, ರಾಜ ಸಹಾಯ.

**इतलाकी** (ಇತಲಾಕೀ) ಸ್ತ್ರೀ. ಅರ. ಮಿತ್ರತ್ವ.

**इतल्ला** (ಇತಲ್ಲಾ) ಸ್ತ್ರೀ. ಅರ. ಸುದ್ದಿ, ವೃತ್ತಾಂತ.

**इतल्ले–पत्रक** (ಇತಲ್ಲೆ–ಪತ್ರಕ್) ನ. ಅರ+ಸಂ. ಸಮಾಚಾರ ಸಂಗ್ರಹ, ಪತ್ರ, ಬುಲೆಟಿನ್.

**इतवार** (ಇತವಾರ್) ಪು. ಆದಿತ್ಯವಾರ, ಭಾನುವಾರ.

**इतस्ततः** (ಇತಸ್ತತಃ) ಕ್ರಿ. ವಿ. ಸಂ. ಇತ್ತಿಂದತ್ತ, ಅಲ್ಲಿ ಇಲ್ಲಿ.

**इति** (ಇತಿ) ಅವ್ಯಯ. ಸಂ. ಇಂತು, ಹೀಗೆ, 'ಇಂತಿ'. ೨. ಕೊನೆ.

**–कर्तव्य** (–ಕರ್ತವ್ಯ) ಸ್ತ್ರೀ. ಕರ್ತವ್ಯ, ಪರಿಸೀಮೆ.

**–श्री** (–ಶ್ರೀ) ಸ್ತ್ರೀ. ಕೊನೆ, ಸಮಾಪ್ತಿ.

**–वृत्त** (–ವೃತ್ತ) ನ. ವೃತಾಂತ, ವರದಿ.

**इतिहास** (ಇತಿಹಾಸ್) ಪು. ಸಂ. ಚರಿತ್ರೆ, ಇತಿಹಾಸ.

**इतुका** (ಇತುಕಾ) ಕ್ರಿ. ವಿ. ಇಷ್ಟು.

**इत्तदाय** (ಇತ್ತದಾಯ್) ಪು. ಅರ. (ಇಬ್ತದಾ) ಪ್ರಾರಂಭ.

**इत्तिफाक** (ಇತ್ತಿಫಾಕ್) ಪು. ಸಮ್ಮತಿ, ಸಹಮತ, ಐಕಮತ್ಯ.

**इत्तिहाद** (ಇತ್ತಿಹಾದ್) ಪು. ಅರ. ಒಕ್ಕಟ್ಟು, ಮಿತ್ರತ್ವ.

**इत्थंभूत** (ಇತ್ಥಂಭೂತ) ಕ್ರಿ. ವಿ. ಸಂ. ವಿಸ್ತರಶಃ, ಇತಿವೃತ್ತ, ವಿಶದ, (ವರದಿ) ಸಮಗ್ರ.

**इत्यर्थ** (ಇತ್ಯರ್ಥ) ಪು. ಸಂ. ತಾತ್ಪರ್ಯ, ಅಭಿಪ್ರಾಯ.

**इदगा** (ಇದಗಾ) ಪು. ಅರ+ಫಾ (ಈದ್‌ಗಾಹ್) ಈದ್ ಪ್ರಾರ್ಥನಾ ಮಂದಿರ, ಮಂಟಪ.

**इदबार** (ಇದಬಾರ್) ಪು. ಅರ. इतबार ನೋ.

**इदमपि** (ಇದಮಪಿ) ಕ್ರಿ. ವಿ. ಸಂ. ಇದುಸಹ.

**इदमित्थ** (ಇದಮಿತ್ಥ) ಕ್ರಿ. ವಿ. ಸಂ. ಸರ್ವ, ಸಮಗ್ರ, (ಸಂಗತಿ)

**इदळ** (ಇದಳ್) ನ. ಮಳೆಗಾಲದ ಅನಂತರದ ಪೈರು.

**इदळस** (ಇದಳಸ್) ವಿ. ಮಬ್ಬು, ಅಜ್ಞಾನಿ.

**इंदिरा** (ಇಂದಿರಾ) ಸ್ತ್ರೀ. ಸಂ. ಲಕ್ಷ್ಮಿ **–वर** (–ವರ್) ಪು. ವಿಷ್ಣು.

**इंदी** (ಇಂದೀ) ಸ್ತ್ರೀ. ಅರ. (ಈದೀ)ಹಬ್ಬದ (ಈದ್) ಕಾಣಿಕೆ, ಆಳುಗಳಿಗೆ ಕೊಡುವ ಬಕ್ಷೀಸ್.

**इंदीवर** (ಇಂದೀವರ್) ನ. ಸಂ. ಕಮಲ.

**इंदु-दू** (ಇಂದು–ದೂ) ಪು. ಸಂ. ಚಂದ್ರ, **–वासर** (–ವಾಸರ) ಸೋಮವಾರ.

**–वदना** (–ವದನಾ) ಸ್ತ್ರೀ. ಚಂದ್ರಮುಖಿ, ಸುಂದರಿ.

**इंद्र** (ಇಂದ್ರ) ಪು. ಸಂ. ದೇವೇಂದ್ರ. (ಪ್ರತ್ಯಯ) ಶ್ರೇಷ್ಠ, ಉತ್ತಮ.

**–कल्याणी** (–ಕಲ್ಯಾಣೀ) ವಿ. ಕುರೂಪ.

**–कापशी** (–ಕಾಪಶೀ) ಒಂದು ಬಗೆಯ ಅರಳೆ.

**–कीट** (–ಕೀಟ್) ಪು. ಮೃಗ ನಕ್ಷತ್ರದ ನಂತರ ಕಾಣಿಸಿಕೊಳ್ಳುವ ಹುಳ.

**–कील** (–ಕೀಲ್) ಪು. ಮಂದರಾಚಲ ಪರ್ವತ.

**–चाप** (–ಚಾಪ) ಇಂದ್ರಧನುಷ್ಯ, ಮಳೆಯಲ್ಲಿ ಸೂರ್ಯಪ್ರಕಾಶದಿಂದುಂಟಾದ ಕಾಮನ ಬಿಲ್ಲು.

**–जाल** (–ಜಾಲ್) ನ. ಮಂತ್ರ ವಿದ್ಯೆ.

**–ध्वज** (–ಧ್ವಜ್) ಯುಗಾದಿಯಲ್ಲಿ ಕಟ್ಟುವ ಬಾವುಟ.

**–नील** (–ನೀಲ್) ಪು. ಒಂದು ರತ್ನ.

**–फणी** (–ಫಣೀ) ಪು. ಮಂತ್ರದಿಂದ ಮಾಡಿದ, ಮಾಟದ ಹಾವು, ಇತ್ಯಾದಿ.

**–भवन** (–ಭವನ್) ನ. ವಿಸ್ತೀರ್ಣ ರಾಜಗೃಹ.

**–मढे** (–ಮಢೇ) ವಿ. ತೀರಬಡಕ.

**–लोक** (–ಲೋಕ) ಪು. ಸ್ವರ್ಗದಲ್ಲಿಯ ಇಂದ್ರನ ಲೋಕ.

**–वज्रा** (–ವಜ್ರಾ) ಸ್ತ್ರೀ. (ಛಂದಸ್ಸು) ಒಂದುವೃತ್ತ.

—वंशा (—ವಂಶಾ) ಸ್ತ್ರೀ. ಒಂದು ವೃತ್ತ.
—सभा (—ಸಭಾ) ಪು. ಇಂದ್ರ ಸಭೆ. ೨. (ಲಾ) ರಾತ್ರಿಯ ಉಪವಾಸ. (ರಾಯಪ್ಪ ನಾಯಕರ ಫಲಹಾರ.)
इंद्राणी (ಇಂದ್ರಾಣೀ) ಸ್ತ್ರೀ. ಸಂ. ಇಂದ್ರಪತ್ನಿ. ಶಚಿ.
इंद्रायणी (ಇಂದ್ರಾಯಣೀ) ಸ್ತ್ರೀ. ಇಂದ್ರಪತ್ನಿ. ೨. ಒಂದು ನದಿ.
इंद्रावण (ಇಂದ್ರಾವಣ್) ನ. ವೃಂದಾವನ.
इंद्रावणी (ಇಂದ್ರಾವಣೀ) ಸ್ತ್ರೀ. ವೃಂದಾವನ.
इंद्राक्ष (ಇಂದ್ರಾಕ್ಷ) ಪು. ಸಂ. ಕುದುರೆಯ ಒಂದು ಲಕ್ಷಣ.
इंद्रिय (ಇಂದ್ರಿಯ) ನ. ಸಂ. ಇಂದ್ರಿಯ, ಜ್ಞಾನ ಸಾಧನ.
—गम्य (—ಗಮ್ಯ) ವಿ. ಇಂದ್ರಿಯ ಗೋಚರ.
—ग्राम (—ಗ್ರಾಮ) ಪು. ಇಂದ್ರಿಯ ಸಮೂಹ.
—दमन (—ದಮನ್) ನ. ಇಂದ್ರಿಯ ನಿಗ್ರಹ.
—विज्ञानशास्त्र (—ವಿಜ್ಞಾನ ಶಾಸ್ತ್ರ) ನ. ಶರೀರ ಶಾಸ್ತ್ರ.
इंद्रियार्थ (ಇಂದ್ರಿಯಾರ್ಥ) ಪು. ಸಂ. ಇಂದ್ರಿಯ ವಿಷಯ, ಕಾಮವಿಷಯ.
इंधक (ಇಂಧಕ್) ಪು. ಈಥರ್.
इंधन (ಇಂಧನ್) ನ. ಸಂ. ಸೌದೆ, ಸುಡುವ ಕಟ್ಟಿಗೆ, ಇದ್ದಲಿ, ಮುಂ.
इंधा (ಇಂಧಾ) ಪು. ಬಾಣಂತಿ ಮುಟ್ಟಾಗುವುದರೊಳಗಾಗಿ ಗರ್ಭಧಾರಣೆಯಾದ ಮೂಲಕಹುಟ್ಟಿದಕೂಸು.
इध्मा (ಇಧ್ಮಾ) ಪು. ಸಂ. ಸಮಿಧಾ ಸಮೂಹ.
इनई (ಇನಈ) ಸ್ತ್ರೀ. ಒಂದು ರೋಗ.
इनसाफ (ಇನ್‌ಸಾಫ್) ಪು.ಅರ.ನ್ಯಾಯ, ನಿರ್ಣಯ, ತೀರ್ಪು.
इनाई (ಇನಾಈ) ಸ್ತ್ರೀ. ಮಾದಿಗರ ದೇವಿ.
इनाम (ಇನಾಮ್) ನ. ಅರ. ಉಂಬಳಿ, ಉಡುಗರೆ, ಕಾಣಿಕೆ.
—दार (—ದಾರ್) ಇನಾಮು ಗ್ರಾಮದ ಒಡೆಯ.
इनामत (ಇನಾಮತ್) ಸ್ತ್ರೀ. ಅರ. ಉಂಬಳಿ, ಇನಾಮು ಗ್ರಾಮ.
इनायत (ಇನಾಯತ್) ಸ್ತ್ರೀ. ಅರ. ಕೃಪೆ, ಅನುಗ್ರಹ.
इन्कार (ಇನ್ಕಾರ) ಪು. ಅರ ಅಲ್ಲಗಳೆಯುವಿಕೆ.
इन्किलाब (ಇನ್ಕಿಲಾಬ್) ಸ್ತ್ರೀ. ಅರ. ಕ್ರಾಂತಿ.
इन्फंटी (ಇನಫಂಟೀ) ಸ್ತ್ರೀ.ಇಂ. ಪ್ರಾಥಮಿಕ ಶಾಲೆಯ ಪ್ರಾರಂಭದ ವರ್ಗ.
इन्फन्ट्री (ಇನ್‌ಫಂಟ್ರೀ) ಸ್ತ್ರೀ. ಇಂ. ಭೂ ಸೈನ್ಯ, ಪದಾತಿ ಸೈನ್ಯ.
इनफिसाल (ಇನ್ ಫಿಸಾಲ್) ಪು. ಅರ. ನಿರ್ಣಯ, ತೀರ್ಪು.
इनशा अल्लाताला (ಇನ್‌ಶಾ ಅಲ್ಲಾತಾಲಾ) ಉದ್ಗಾರ ಅರ. ದೇವರ ಇಷ್ಟವಿದ್ದರೆ.
इन्साफ (ಇನ್ಸಾಫ್) ಪು. ಅರ. ನ್ಯಾಯ, ನಿರ್ಣಯ.
इन्साफी (ಇನ್ಸಾಫೀ) ವಿ. ಅರ. ನ್ಯಾಯ ಬುದ್ಧಿಯುಳ್ಳವ. ೨. ನ್ಯಾಯ ಪ್ರವೃತ್ತಿ.
इफाजत (ಇಫಾಜತ್) ಸ್ತ್ರೀ. ಅರ. (ಹಿಫಾಜತ್) ಸಂರಕ್ಷಣೆ.
इबत्ती (ಇಬತ್ತಿ) ಸ್ತ್ರೀ. ಕ+ಸಂ. ವಿಭೂತಿ, ಈಬತ್ತಿ.
इबादत (ಇಬಾದತ್) ಸ್ತ್ರೀ. ಅರ. ಪ್ರಾರ್ಥನೆ, ನಮಾಜು
इबादती (ಇಬಾದತೀ) ಸ್ತ್ರೀ. ಅರ. ಧಾರ್ಮಿಕ.
इबारत (ಇಬಾರತ್) ಸ್ತ್ರೀ. ಅರ. ವಾಕ್ಯ, ಅಭಿವ್ಯಕ್ತಿ, ಶಬ್ದ ಪ್ರಯೋಗ.
इबीन-इब्ब (ಇಬೀನ್-ಬ್ನ) ಪು. ಅರ. ಮಗ, ಪುತ್ರ.
इब्लाग (ಇಬ್ಲಾಗ್) ಸ್ತ್ರೀ. ಅರ. ರವಾನಗಿ.
इब्लिस् (ಇಬ್ಲಿಸ್) ವಿ. ಅರ. ದುಷ್ಟ, ಕುಚೋದ್ಯ.
इभ (ಇಭ) ಪು. ಸಂ. ಆನೆ.
इभ्रत (ಇಭ್ರತ್) ಸ್ತ್ರೀ. ಅರ. ಮರ್ಯಾದೆ, ಪ್ರತಿಷ್ಠೆ.
इमला (ಇಮಲಾ) ಪು. ಅರ. ಕಟ್ಟಡ, ಮಂದಿರ, ವಾಸ್ತು.
इमली (ಇಮಲಿ) ಸ್ತ್ರೀ, ಹಿಂ. ಹುಣಸೆ.
इमान (ಇಮಾನ್) ನ. ಅರ. ನಂಬುಗೆ, ವಿಶ್ವಾಸ, ೨ ವಚನ ಪ್ರಾಮಾಣಿಕತೆ ಧಾರ್ಮಿಕತೆ
इमानी (ಇಮಾನೀ) ವಿ. ಅರ. ಪ್ರಾಮಾಣಿಕ, ವಿಶ್ವಾಸವುಳ್ಳವ
इमारत (ಇಮಾರತ್) ಸ್ತ್ರೀ. ಅರ. ಕಟ್ಟಡ
इयत् (ಇಯತ್) ಕ್ರಿ. ವಿ. ಇಷ್ಟು.
इयत्ता (ಇಯತ್ತಾ) ಸ್ತ್ರೀ. ಸಂ. ಮಟ್ಟ. ೨. ತರಗತಿ.
इरली (ಇರಲೀ) ಸ್ತ್ರೀ. ಗಳದ, ಸಿಬರಿನ, ಕೊಪ್ಪೆ (ಮಳೆಗಾಲದಲ್ಲಿ ರೈತರು ತಲೆಯಮೇಲೆ ಹಾಕಿಕೊಳ್ಳುತ್ತಾರೆ).
इरले (ಇರಲೇ) ನ. ಇರಲಿ ನೋಡಿರಿ.
इरसाल (ಇರಸಾಲ್) ವಿ. ಅರ. ಅಚ್ಚು, ಉತ್ಕೃಷ್ಟ ೨ 'ಬೆರಕಿ' ಧೂರ್ತ, ಚಾಣಾಕ್ಷ ೩. ಮೋಸಗಾರ.

**इरळ** (ಇರಳ) ನ. ಬೇರೆ ಧಾನ್ಯಗಳೊಡನೆ ಬಿತ್ತಿದ ಧಾನ್ಯ.

**इरळा** (ಇರಳಾ) ಪು. इरळ ನೋಡಿರಿ.

**इराक–ख-त्** (ಇರಾಕ-ಖ-ತ್) ಸ್ತ್ರೀ. ಅರ. ಮೂತ್ರ ವಿಸರ್ಜನ (ಲಾ.) ತುಚ್ಛತೆ ತೋರಿಸುವಿಕೆ.

**इरादा** (ಇರಾದಾ) ಪು. ಅರ. ಉದ್ದೇಶ, ಅಭಿಪ್ರಾಯ

**इर्साल** (ಇರ್ಸಾಲ್) ಪು. ಅರ. ರವಾನೆ, ಹಣ ಕಳುಹಿಸುವಿಕೆ ೨ इरसाल ನೋಡಿರಿ.

**इलम्** (ಇಲಮ್) ಪು. ಅರ. ಜ್ಞಾನವಿಜ್ಞಾನ.

**– बाज** ( – ಬಾಜ್ ) ವಿ. ಜಾಣ, ಪಂಡಿತ ೨ ಮಾಟಗಾರ.

**इलाखा** (ಇಲಾಖಾ) ಪು. ಅರ. ಪ್ರಾಂತ ೨ ವಿಷಯ ೩ ಸಂಬಂಧ.

**इला(य)ची** (ಇಲಾ(ಯ)ಚೀ) ಸ್ತ್ರೀ. ಹಿ. ಏಲಕ್ಕಿ.

**इलाज** (ಇಲಾಜ್) ಪು. ಅರ. ಉಪಾಯ, ಹಂಚಿಕೆ ೨ ಚಿಕಿತ್ಸೆ ಆರೈಕೆ.

**इलाही** (ಇಲಾಹೀ) ಪು. ಅರ. ಅಲ್ಲಾ, ದೇವರು, ೨ ವಿ. ದೈವೀ, ಈಶ್ವರೇಚ್ಛೆಯು.

**इल्ला** (ಇಲ್ಲಾ) ಪು. ಕ. ಇಲ್ಲ ಅನ್ನುವಿಕೆ, ಅಲ್ಲಗಳೆಯುವಿಕೆ, ಖಂಡನ.

**इवला** (ಇವಲಾ) ವಿ. ಸಣ್ಣ, ಚಿಕ್ಕ, ಪುಟ್ಟ.

**इवळणे** (ಇವಳಣೇ) ಕ್ರಿ. ಅ. विवळणे ನೋಡಿರಿ.

**इश्** (ಇಶ್) ಉದ್ಗಾರ ( ಹಳೆಯ ರೀತಿ ) ಹೆಣ್ಣು ಮಕ್ಕಳು ತಿರಸ್ಕಾರ ತೋರಿಸುವ ಬಗೆ, ಛೀ, ಛೀ.

**इशारत** (ಇಶಾರತ್) ಸ್ತ್ರೀ. ಅರ. ಸನ್ನೆ, ಗುರುತು, ಲಕ್ಷಣ.

**इशी** (ಇಶೀ) ಸ್ತ್ರೀ. ಚಿಕ್ಕಮಕ್ಕಳ ಮಲ ವಿಸರ್ಜನ

**इशीम** (ಇಶೀಮ್) ಸ್ತ್ರೀ. ಅರ. ( ಇಸ್ಮ್ ) ಅಭಿಮಾನ, ಹೆಮ್ಮೆ.

**इश्क** (ಇಶ್ಕ್) ಪು. ಅರ. ಪ್ರೇಮ, ಪ್ರೀತಿ, ಅನುರಾಗ.

**इष्क** (ಇಷ್ಕ್) ಪು. ಅರ. इश्क ನೋಡಿರಿ.

**इष्ट** (ಇಷ್ಟ) ವಿ. ಸಂ. ಬೇಕಾದ, ಬೇಕಿದ್ದ, ವಾಂಛಿತ, ಒಳ್ಳೆಯ, ಯೋಗ್ಯ, ೨ ಸ್ನೇಹದ ಬಳಗದ.

**–देवता** (ದೇವತಾ) ಸ್ತ್ರೀ. ಕುಲದೇವತೆ

**–मित्र** (–ಮಿತ್ರ) ಪು. ಬಹುವಚನ ಗೆಳೆಯರು ನೆಂಟರು

**–आप्तेष्ट** (ಆಪ್ತೇಷ್ಟ) ಪು. ಬಹುವಚನ ನೆಂಟರು ಬಳಗದವರು.

**इष्टत्व** (ಇಷ್ಟತ್ವ) ಪು. ಸಂ. ಹಿತ, ಸ್ನೇಹ, ಅಭಿರುಚಿ

**इष्टानिष्ट** (ಇಷ್ಟಾನಿಷ್ಟ) ವಿ. ಸಂ. ಬೇಕಾದ-ಬೇಡಾದ ಲಾಭಹಾನಿ, ಒಳ್ಳೆಯ ಹಾಗೂ ಕೆಟ್ಟ.

**इष्टापत्ती** (ಇಷ್ಟಾಪತ್ತೀ) ಸ್ತ್ರೀ. ಸಂ. ಲಾಭಕರವಾಗಿ ಪರಿಣಮಿಸಿದ ಅನಿಷ್ಟ ಸಂಗತಿ.

**इष्टि** (ಇಷ್ಟಿ) ಸ್ತ್ರೀ. ಸಂ. ಯಜ್ಞ, ಯಾಗ.

**इष्टिका** (ಇಷ್ಟಿಕಾ) ಸ್ತ್ರೀ. ಸಂ. ಇಟ್ಟಂಗಿ.

**इसकाड** (ಇಸಕಾಡ್) ನ. ನೇಗಿಲದ ಗಣಿ

**इसब** (ಇಸಬ್) ನ. ಇಸಬು, ವಿಷರ್ಪ, ಚರ್ಮರೋಗ

**–गोल** (–ಗೋಲ್) ಪು. ಔಷಧಿ ಬೀಜ

**इसम** (ಇಸಮ್) ನ. ಅರ. ಹೆಸರು. ೨. ಮನುಷ್ಯ, ವ್ಯಕ್ತಿ. ೩. ವಿಷಯ.

**–मजकूर** (–ಮಜಕೂರ್) ವಿ. ಮೇಲೆ ಹೇಳಿದ ಮನುಷ್ಯ.

**–वार** (–ವಾರ್) ಕ್ರಿ. ವಿ. ಹೆಸರಿನ ಅನುಕ್ರಮದಿಂದ.

**–वारी** (–ವಾರೀ) ಹೆಸರುಗಳ ಅನುಕ್ರಮ. ೨. ೨. ಕ್ಯಾಟಲಾಗು.

**इसवी** (ಇಸವೀ) ಸ್ತ್ರೀ. ಅರ. ಈಸಾ (ಕ್ರಿಸ್ತ) ನಿಗೆ ಸಂಬಂಧಿಸಿದ. ೨. ಕ್ರಿಸ್ತಶಕದ.

**–सन** (–ಸನ್) ನ. ಕ್ರಿಸ್ತಶಕದ ವರ್ಷ.

**इसाड** (ಇಸಾಡ್) ನ. ನೇಗಿಲದ ಗಣಿ.

**इसाळ** (ಇಸಾಳ್) ಪು. ಸ್ಪರ್ಧೆ, ಪಂದ್ಯಾಟ.

**इस्तकबील** (ಇಸ್ತಕಬೀಲ್) ಅವ್ಯಯ. ಅರ. ಮೊದಲು ಮಾಡಿ.

**–त्तागायत** (–ತಾಗಾಯತ್) (ಒಂದು ತಿಥಿಯಿಂದ) ಮೊದಲು ಮಾಡಿ (ಬೇರೊಂದರ) ವರೆಗೆ.

**इस्तमालत** (ಇಸ್ತಮಾಲತ್) ಸ್ತ್ರೀ. ಅರ. ಉತ್ತೇಜನ, ಪ್ರೋತ್ಸಾಹನ.

**इस्तमाली** (ಇಸ್ತಮಾಲೀ) ವಿ. ಅರ. ವಾಡಿಕೆಯ, ಮಾಮೂಲಿ.

**इस्तमेल** (ಇಸ್ತಮೇಲ್) ಸ್ತ್ರೀ. ಅರ. ( ಜಮಾಖರ್ಚಿನ ಅಂಕೆಯಲ್ಲಿ) ಬದಲಾವಣೆ.

**इस्ताद** (ಇಸ್ತಾದ್) ಸ್ತ್ರೀ. ಫಾ. ಸ್ಥಾವರ ಆಸ್ತಿ.

**इस्तरी** (ಇಸ್ತರೀ) ಸ್ತ್ರೀ. ಹಿಂ. ಇಸ್ತರಿ ಪೆಟ್ಟಿಗೆ, ಇಸ್ತರಿ.

**इह** (ಇಹ) ಕ್ರಿ. ವಿ. ಇಲ್ಲಿ, ಈ ಲೋಕದಲ್ಲಿ,

**–पर** (–ಪರ) ಈ ಲೋಕದ, ಪರಲೋಕದ.

**–जन्मी** (–ಜನ್ಮೀ) ಕ್ರಿ. ವಿ. ಈ ಜನ್ಮದಲ್ಲಿ.

**–वृत्त** (–ವೃತ್ತ) ನ. ಸ್ಥಾನಿಕ ಸಮಾಚಾರ.

**इळा** (ಇಳಾ) ಪು. ೧. विळा ನೋಂ. ೨. ಮನೆಯಲ್ಲಿಯ ಜಂಗಮ ಆಸ್ತಿ.

**–खिळा** (–ಖಿಳಾ) ಪು. ಮನೆಯಲ್ಲಿಯ ಎಲ್ಲ ಸಾಮಾನು.

**–मोड्न खिळा करणे** (–ಮೋಡೂನ್ ಖಿಳಾ ಕರಣೇ) ಕ್ರಿ. ಧಾ. ಹಾಳುಮಾಡು ದೊಡ್ಡ ವಸ್ತುವನ್ನು ಮುರಿದು ಕ್ಷುಲ್ಲಕವಸ್ತುವನ್ನು ತಯಾರಿಸು.

**इळी** (ಇಳೀ) ಸ್ತ್ರೀ. विळी ನೋಂ.

**–मिळीगुपचिळी** (–ಮಿಳೀಗುಪಚಿಳೀ) ಉದ್ಗಾರ, ಸಣ್ಣ ಹುಡುಗರನ್ನು ಸುಮ್ಮನಿರಿಸಲಿಕ್ಕೆ ಅನ್ನುವ ಶಬ್ದ.

**इक्षु** (ಇಕ್ಷು) ಪು. ಸಂ. ಕಬ್ಬು.

**–दंड** (–ದಂಡ್) ಪು. ಕಬ್ಬು.

**–रस** (–ರಸ್) ಪು. ಕಬ್ಬಿನ ಹಾಲು.

# ई ಈ

**ई** ಈ. ಮರಾಠಿಯಲ್ಲಿಯ ನಾಲ್ಕನೆಯ ಸ್ವರ 'ಇ'ಕಾರ ದರ್ಶಕ ಸ್ವರ. ಇದರ ವಿಶೇಷ ಉಪಯೋಗ ಸಂಬಂಧ ದರ್ಶಕ ಪ್ರತ್ಯಯ.

**–धारवाड-धारवाडी** ಧಾರವಾಡ – ಧಾರವಾಡದ. ೨. ಅಣಕಿಸುವ ಉದ್ಗಾರ.

**–ई** ಈಈ. ಚಿಕ್ಕ ಮಕ್ಕಳ ಹಲ್ಲು ಉಜ್ಜುವುದಕ್ಕೆ ಸನ್ನೆ.

**ईट** (ಈಟ್) ಸ್ತ್ರೀ. वीट ನೋಂ.

**ईड** (ಈಡ್) ನ. ದೊಡ್ಡ ನಿಂಬೆ ಕಾಯಿ.

**ईद** (ಈದ್) ಸ್ತ್ರೀ. ಅರ. ರಮಜಾನ್ ತಿಂಗಳ ಕೊನೆಗೆ ಬರುವ ಮುಸಲ್ಮಾನರ ಹಬ್ಬ–ಕುತ್ಬೀಹಬ್ಬ. ೨. ಜೀಲ್ಹೆಜ್ ತಿಂಗಳಲ್ಲಿ ಬರುವ "ಬಕ್ರೀ ಈದ್"

**ईदी** (ಈದೀ) ಸ್ತ್ರೀ. ಅರ. ಈದ್ ದಿವಸದ ಸಮಾರಂಭದಲ್ಲಿ ಆಳು ಹೋಳುಗಳಿಗೆ ಕೊಡುವ ಬಕ್ಷೀಸು.

**ईदृश** (ಈದೃಶ) ಕ್ರಿ. ವಿ. ಸಂ. ಈ ಬಗೆಯ.

**ईन मीन तीन** (ಈನ್ ಮೀನ್, ತೀನ್) ಉದ್ಗಾರ, ತೀರ ಕಡಿಮೆ ಜನರು "ಎಂಕ–ನೊಣ– ಸೀನ"

**ईप्सित** (ಈಪ್ಸಿತ) ವಿ. ಸಂ. ಬೇಕಾದ, ಬಯಸಿದ.

**ईर** (ಈರ್) ಸ್ತ್ರೀ. (ವೀರ್ಯ) ಶಕ್ತಿ, ಸಾಮರ್ಥ್ಯ ಸತ್ವ. ೨. ಪಣ, ಪಂದ್ಯಾಟ, ಸ್ಪರ್ಧೆ.

**ई–इरेस घालणे** ( –ಈ–ಇ–ರೇಸ್ ಘಾಲಣೇ ) ಯುದ್ಧದಲ್ಲಿ ಶ್ರೇಷ್ಠ ವ್ಯಕ್ತಿಯನ್ನು ನೂಕು.

**–पडणे** (–ಪಡಣೇ) ಕ್ರಿ. ಅ. ಆಹ್ವಾನ ಸ್ವೀಕರಿಸು.

**–पेटणे** (–ಪೇಟಣೇ) ಕ್ರಿ.ಅ. ಕೆರಳು, ಸಾಮರ್ಥ್ಯ ವನ್ನು ಉಪಯೋಗಿಸು.

**ईर्षा–र्ष्या** (ಈರ್ಷಾ–ರ್ಷ್ಯಾ) ಸ್ತ್ರೀ. ಸಂ. ಹೇವ, ಹೊಟ್ಟೆಕಿಚ್ಚು, ಈರ್ಷೆ.

**ईश** (ಈಶ) ಪು. ಸಂ. ಒಡೆಯ, ದೇವರು.

**ईशान्य** (ಈಶಾನ್ಯ) ಸ್ತ್ರೀ. ಸಂ. ಈಶಾನ್ಯ ದಿಕ್ಕು ಉತ್ತರ ಪೂರ್ವ ದಿಕ್ಕು.

**ईश्वर** (ಈಶ್ವರ್) ಪು. ಸಂ. ಒಡೆಯ, ಸ್ವಾಮಿ, ಶಿವ.

**ईश्वरी** (ಈಶ್ವರೀ) ವಿ. ಸಂ. ಈಶ್ವರನ, ದೇವರ, ದೈವೀ.

**–देणे** (–ದೇಣೇ) ನ. ದೇವರಿಂದ ಪಡೆದ ಗುಣ.

**–पुरुष** (–ಪುರುಷ) ಪು. ಸಾಧು ಪುರುಷ.

**–संकेत** (–ಸಂಕೇತ್) ಪು. ಈಶ್ವರೀ ತಂತ್ರ, ಕೃತ್ಯ.

**–क्षोभ** (–ಕ್ಷೋಭ್) ಪು. ದೇವರ ಕೋಪ, ಆಪತ್ತು.

**ईश्वरेच्छा** (ಈಶ್ವರೇಚ್ಛಾ) ಸ್ತ್ರೀ. ಸಂ. ದೇವರ ಇಚ್ಛೆ.

**ईषणा** (ಈಷಣಾ) ಸ್ತ್ರೀ. ಸಂ. ಇಚ್ಛೆ, ಬಯಕೆ, ಉತ್ಸುಕತೆ.

**ईषत्** (ಈಷತ್) ಕ್ರಿ. ವಿ. ಸಂ. ಕೊಂಚ, ತುಸು, ಸಲ್ಪ

**ईहा** (ಈಹಾ) ಸ್ತ್ರೀ. ಸಂ. ಇಚ್ಛೆ, ಬಯಕೆ.

**ईहित** (ಈಹಿತ್) ವಿ. ಸಂ. ಬಯಸಿದ, ಇಚ್ಛಿಸಿದ.

**ईक्षण** (ಈಕ್ಷಣ) ವಿ. ಸಂ. ನೋಡುವಿಕೆ, ಅಲೋಕನ, ಕಾಪಾಡುವಿಕೆ. ೨. ನೇತ್ರ, ಕಣ್ಣು.

**ईक्षित** (ಈಕ್ಷಿತ) ವಿ. ಸಂ. ಕಂಡ, ಅಪೇಕ್ಷಿತ, ದಾರಿ ಕಾಯ್ದ.

# ಉ उ

उ ಮರಾಠೀ ವರ್ಣಮಾಲೆಯ ಐದನೆಯ ಅಕ್ಷರ (ಸ್ವರ)

**उकट** (ಉಕಟ್) ಸ್ತ್ರೀ. उकड ನೋಂ.

**उकटणे** (ಉಕಟಣೇ) ಕ್ರಿ. ಸ. ಕೊರೆ, ಟಾಕೀ ಹಾಕು (ಬೀಸುವ ಕಲ್ಲು ಮುಂ). ೨. (ಮೈಲಿ ಬೇನೆಯಿಂದ) ಮುಖದಲ್ಲಿ ಮೈಲಿ ಏಳು. ೩. ಹಂಚಿನ ಮೇಲಿನ ರೊಟ್ಟಿ ಮುಂತಾದವುಗಳನ್ನು ತಿರಿವಿ ಹಾಕು.

**उकड** (ಉಕಡ್) ಸ್ತ್ರೀ. ಬೇಯಿಸಿದ ಹಿಟ್ಟು. ೨. ಬೇಯಿಸಿದ ಪದಾರ್ಥ.

**–हंडी** (ಹಂಡೀ) ಹರವೆಯನ್ನು ತಿರುವಿ ಇಟು ಬೇಯಿಸಿದ ತಿಂಡಿ, ಖಾದ್ಯ.

**उकडणे** (ಉಕಡಣೇ) ಕ್ರಿ. ಅಕರ್ಮಕ ಸೆಕೆಯಾಗು, ಉಷ್ಣತೆಯಿಂದ ಬಳಲು ೨. ಕ್ರಿ. ಸ. ಬೇಯಿಸು.

**उकडा** (ಉಕಡಾ) ಪು. ಬೇಯಿಸಿದ ಕಾಯಿಪಲ್ಯ.

**उकर** (ಉಕರ) ಸ್ತ್ರೀ. ಕೆದರಿ ತೆಗೆದ ಮಣ್ಣು.

**उकरडा** (ಉಕರಡಾ) ಪು. ತಿಪ್ಪೆ.

**उकरणे** (ಉಕರಣೇ) ಕ್ರಿ. ಸ. ಕೆರೆ, ಕೆದರು, ಅಗಿ. उकरून काढणे (ಉಕರೂನ್ ಕಾಢಣೇ) ಧಾ. ಹಳೆಯ ವ್ಯಾಜ್ಯವನ್ನು ಪ್ರಾರಂಭಿಸುವಿಕೆ.

**उकल** (ಉಕಲ) ಪು. (ತೊಡಕು) ಬಿಡಿಸುವಿಕೆ, ಶಂಕಾಸಮಾಧಾನ, ಹಂಚಿಕೆ, ಯುಕ್ತಿ, ಕಠಿಣ ಪ್ರಶ್ನೆಯ ಉತ್ತರ, ಸ್ಪಷ್ಟೀಕರಣ, ಕಷ್ಟಪರಿಹಾರ, ಯೋಗ್ಯ ನಿರ್ಣಯ.

**उकलणे** (ಉಕಲಣೇ) ಕ್ರಿ. ಸ. ಬಿಡುಗಡೆ ಮಾಡು, ಬಿಡಿಸು, ಬಗೆಹರಿಸು, ಸ್ಪಷ್ಟೀಕರಿಸು.

**उकलाउकल** (ಉಕಲಾ ಉಕಲ್) ಸ್ತ್ರೀ. ಪುನಃ ಪುನಃ ಕಟ್ಟಿ ಬಿಡಿಸುವುದು. ೨. (ಲಾ) ಚರ್ವಿತ ಚರ್ವಣ.

**उकळ** (ಉಕಳ್) ಪು. ಎಸರು, ಕುದಿ.

**उकळणे** (ಉಕಳಣೇ) ಕ್ರಿ. ಅ. ಕುದಿ, ಕುದಿಸು, ಎಸರಿಗೆ ಇಡು–ಬೇಯಿಸು, ಎಸರು ಬರುವಂತೆ ಕಾಯಿಸು.

**उकळी** (ಉಕಳೀ) ಸ್ತ್ರೀ. ಕುದಿ, ಎಸರು.

**–फुटणे** (–ಫುಟಣೇ) ಧಾ. ಕುದಿಯಲಿಕ್ಕೆ ಹತ್ತು. ೨. ಮನೋವಿಕಾರಗಳಿಗೆ ಗತಿ ಬರು, ಉತ್ಕಂಠೆಯುಂಟಾಗು.

**उकाडा** (ಉಕಾಡಾ) ಪು. ಸೆಕೆ, ಉಷ್ಣತೆ, ಕಾವು ೨. ಬೆಳ್ಳಿಯ ಪಾತ್ರೆಗಳನ್ನು ತಿಕ್ಕಲಿಕ್ಕೆ ಮಾಡಿದ ಮಿಶ್ರಣ. ೩. ಪ್ರತಿನಿತ್ಯ ಕೊಳ್ಳುವ ಪರಿಪಾಠ, ಒಬ್ಬಗಿರಾಕಿಗೆ ನಿಯಮಿತವಾಗಿ ಪ್ರತಿ ದಿನ ಕೊಡುವ ಜಿನಸು (ಹಾಲು, ಮೊಸರು ಮುಂ.)

**उकिडवा** (ಉಕಿಡವಾ) ವಿ. ಅವ್ಯವಸ್ಥಿತವಾಗಿ ಕುಳಿತ.

**उकिरडा** (ಉಕಿರಡಾ) ಪು. उकरडा ನೋಂ.

**उकीर** (ಉಕೀರ) ಪು. ಕೆದರಿ ತೆಗೆದ ಮಣ್ಣಿನರಾಶಿ. ೨. ಕಣ್ಣಿನಲ್ಲಿಯ ಪಿಚ್ಚು.

**उक्त** (ಉಕ್ತ) ವಿ. ಸಂ. ಹೇಳಿದ, ಮಾತನಾಡಿದ, ತೋರಿಸಿದ, ಉಲ್ಲೇಖಿಸಿದ.

**उक्ता** (ಉಕ್ತಾ) ವಿ. ತಯಾರಾದ, ಸಿದ್ಧವಾದ (ಬಟ್ಟೆ, ಪಕ್ವಾನ್ನ ಮುಂ.) ೨. ಕ್ರಿ. ವಿ. ಗುತ್ತಿಗೆಯಿಂದ, ಅಳೆಯದೇ, ಎಣಿಸದೆ.

**उक्ति,(उक्ती)** (ಉಕ್ತೀ) ಸ್ತ್ರೀ. ಸಂ. ಹೇಳಿಕೆ, ವಚನ, ಮಾತು, ಬೋಧೆ.

**उक्साबुक्शी** (ಉಕ್ಸಾಬುಕ್ಸೀ) ಕ್ರಿ. ವಿ. ओक्साबोक्शी ನೋ.

**उखडणे** (ಉಖಡಣೇ) ಕ್ರಿ. ಸ. ಕಿತ್ತು, ಕೀಳು, ಉಚ್ಚಾಟನಮಾಡು.

**उखणणे** (ಉಖಣಣೇ) ಕ್ರಿ. ಸ. ಅಗಿ, ಉತ್ಖನನ ಮಾಡು.

**उखर** (ಉಖರ) ವಿ. ಸ. ಬೆಳೆಯಾಗದ (ಭೂಮಿ) ಗೊಡ್ಡು.

**–पाखर** (ಪಾಖರ್) ವಿ. ಹುರುಬರಕಾದ.

**उखळ** (ಉಖಳ್) ನ. ಒರಳು, (ಕಲಬತ್ತು)

**–ण** (–ಣ) ಸ್ತ್ರೀ. ಸವಕಳಿ.

**–णी** (–ಣೀ) ಸ್ತ್ರೀ. ಮೊದಲನೆಯ ಬಾರಿ ಹೊಲ ಹರಗುವಿಕೆ.

**–णे** (–ಣೆ) ಸ. (ಹೊಲ) ಮೊದಲನೆಯ ಸಲ ಹರಗು.

**–पांढरे होणे** (–ಪಾಂಢರೇ ಹೋಣೇ) ಕ್ರಿ. ಅ. ಉತ್ಕರ್ಷಹೊಂದು, ಧನಲಾಭಹೊಂದು.

**–बेर** (–ಬೇರ್) ಸ್ತ್ರೀ. ಅಡ್ಡ ಉದ್ದವಾಗಿ ಹೊಲ ಹರಗುವಿಕೆ.

**–बेरीज** (–ಬೇರಿಜ್) ಸ್ತ್ರೀ. ತನ್ನ ತರಲೆ ಗಳನ್ನು ಹೇಳಿಕೊಳ್ಳುವುದು. ೨. ದೂರಿ ಕೊಳ್ಳು ವುದು. ಛಿದ್ರಾನ್ವೇಷಣ.

**उखळांत डोके असणे** (ಉಖಳಾತ್ ಡೋಕೇ ಅಸಣೇ) ಕ್ರಿ. ಅ. ಪ್ರತಿನಿತ್ಯ ಜಗಳವಾಡು.

**उखाडपछाड** (ಉಖಾಡ್‌ಪಛಾಡ್) ಸ್ತ್ರೀ. ಹಿ. ಪರಿ ಶ್ರಮ, ಸಾಹಸ.

**उखाणा** (ಉಖಾಣಾ) ಪು. ಒಗಟ, ಕೂಟ ಪ್ರಶ್ನೆ- ೨. ವಧೂವರರು ಗಂಡನ–ಹೆಂಡತಿಯ ಹೆಸರನ್ನೊ ಡಗೊಂಡು ಅನ್ನುವ ಒಗಟ.

**उखार** (ಉಖಾರ್) ಸ್ತ್ರೀ. ಕಚ್ಚಾ ರೇಶ್ಮೆಯ ಗಂಜಿ. ೨. ವಿ. ಬಂಜೆ, ಗೊಡ್ಡ, ಬೆಳೆಬರದ.

**उखाळ** (ಉಖಾಳ್) ಪು. ವಾಂತಿಬರುವ ಔಷಧ. ೨. ವಾಂತಿ.

**उखाळी** (ಉಖಾಳೀ) ಸ್ತ್ರೀ. ಜಗಳ, ದೂರುವಿಕೆ.

**उगण** (ಉಗಣ್) ಸ್ತ್ರೀ- (ಮೈಲಿ, ಸಿಡುಬು, ಮುಂ) ಹೊರಗೆ ಬರುವಿಕೆ.

**उगणा** (ಉಗಣಾ) ಪು. ಸಂಚಗಾರ, ಮುಂಗಡಕೊಟ್ಟ ಹಣ.

**उगम** (ಉಗಮ) ಪು. ಸಂ. ಉಗಮ, ಮೂಲಸ್ಥಾನ, ಉತ್ಪತ್ತಿ ಸ್ಥಾನ.

**उगरण** (ಉಗರಣ) ಸ್ತ್ರೀ. ಹಣದ ವಸೂಲಿ, ಚಂದಾ ಸಂಗ್ರಹ, ನಿಧಿಯನ್ನು ಕೂಡಿಸುವಿಕೆ.

**उगरा बागरा** (ಉಗರಾ ಬಾಗರಾ) ವಿ.ಉಗ್ರ, ಕ್ರೂರ.

**उगरावणे** (ಉಗರಾವಣೇ) ಕ್ರಿ. ಸ. **उगरणे** ನೋಡಿರಿ.

**उगला** (ಉಗಲಾ) ವಿ. ಸ್ತಬ್ಧ, ಶಾಂತ. ೨. ಕ್ರಿ. ವಿ. ಸುಮ್ಮನೆ.

**उगव** (ಉಗವ) ಪು. ಉಗಮ, ಉತ್ಪತ್ತಿ.

**उगवण** (ಉಗವಣ) ಸ್ತ್ರೀ. (ಮೈಲಿ,ಸಿಡಬು, ಮುಂ) ಮೇಲೆ ಬರುವಿಕೆ, ಮೂಡುವಿಕೆ.

**उगवणे** (ಉಗವಣೇ) ಕ್ರಿ. ಅ. ೧. ಬೆಳೆ, ಹುಟ್ಟು. ೨. ಉದಯ ಹೊಂದು. ೩. ಅಕಸ್ಮಾತ್ತಾಗಿ ಕಾಣಿಸಿ ಕೊಳ್ಳು. ೪. ಹಣ ವಸೂಲುಮಾಡು. ೫. ತಿಳಿದು ಬರು, ಸ್ಪಷ್ಟವಾಗು.

**उगवत** (ಉಗವತ್) ಸ್ತ್ರೀ. ಪೂರ್ವದಿಕ್ಕು,ಮೂಡಣ.

**उगवता** (ಉಗವತಾ) ವಿ. ಉದಯವಾಗುವ, ಘನ ತೆಗೇರುವ.

**–मावळता** (–ಮಾವಳತಾ) ಉದಯಿಸುವ–ಅಸ್ತ ಹೊಂದುವ.

**उगवणे** (ಉಗವಣೇ) ಕ್ರಿ. ಅ. ಹುಟ್ಟು, ಬೆಳೆ. ೨ ಬಾಚಿಕೊ, ಹೆರಳುಹಾಕಿಕೊ. ೩. ಕ್ರಿ. ಸ. ಹಣ ಬಾಕಿ ವಸೂಲುಮಾಡು.

**उगवीत पागवीत** (ಉಗವೀತ್–ಪಾಗವೀತ್) ಕ್ರಿ.ವಿ. ಮೆಲ್ಲ ಮೆಲ್ಲನೆ, ಸಾವಕಾಶವಾಗಿ.

**उगळ** (ಉಗಳ್) ಸ್ತ್ರೀ. ಉಗಳು, ಬಾಯಿಂದ ಹೊರಗೆ ಹಾಕುವ ದ್ರವ.

**उग-गा-ळणे** (ಉಗ-ಗಾ-ಳಣೆ) ಕ್ರಿ.ಸ. ತೇಯು, ಅರೆ ೨ ಉಗಳು, ಬಾಯಿಂದ ಹೊರಗೆ ಹಾಕು, ವಾಂತಿ ಮಾಡು.

**उगा–गी** (ಉಗಾ-ಗೀ) ಕ್ರಿ. ವಿ. ಸುಮ್ಮನೆ, ನಿಷ್ಕಾ ರಣವಾಗಿ, ವ್ಯರ್ಥವಾಗಿ.

**उगाणा** (ಉಗಾಣಾ) ಪು. उगणा ನೋಡಿರಿ.

**उगारणे** (ಉಗಾರಣೆ) ಕ್ರಿ. ಧಾ. (ಶಸ್ತ್ರ ಇಂ) ಹಿರಿ, ೨ ದಂಡೆತ್ತಿ ಹೋಗು.

**उगीच** (ಉಗೀಚ್) ಕ್ರಿ. ವಿ. ಸುಮ್ಮನೆ, ೨ ಏನೂ ಉದ್ದೇಶವಿಲ್ಲದೆ, ಮಹತ್ವದ ಕಾರಣವಿಲ್ಲದೆ.

**–च्याउगीच** (–ಚ್ಯಾಉಗೀಚ್) ಕ್ರಿ. ವಿ. ನಿಷ್ಕಾ ರಣವಾಗಿ.

**उगीदुगी** (ಉಗೀದುಗೀ) ಸ್ತ್ರೀ. ನಿಷ್ಕಾರಣ ಹಸ್ತ ಕ್ಷೇಪ. ೨ ದೂರು, ನಿಂದೆ.

**उगीर** (ಉಗೀರ್) ವಿ. ಉಗ್ರವಾಸನೆ ಬರುವ.

**उग्र** (ಉಗ್ರ) ವಿ.ಸಂ. ಘೋರ, ಭಯಂಕರ,ಕಠೋರ, ೨ ದರ್ಪಯುಕ್ತ, ಪು. ಶಿವ, ರುದ್ರ.

**–ट** (–ಟ) ತಲೆ ಹಿಡಿಯುವ (ವಾಸನೆ)

**–टाण** (–ಟಾಣ್) ಸ್ತ್ರೀ. ಉಗ್ರವಾಸನೆ, ನಾತ.

**उग्रम** (ಉಗ್ರಮ್) ಪು. ೧ ಪ್ರಾರಂಭ ೨ ಸಾಮರ್ಥ್ಯ, ಶಕ್ತಿ, ವೇಗ.

**उग्राणी** (ಉಗ್ರಾಣೀ) ಸ್ತ್ರೀ. उगरण ನೋಡಿರಿ.

**उघड** (ಉಘಡ್) ಕ್ರಿ. ವಿ. ಬಹಿರಂಗವಾಗಿ, ಸ್ಪಷ್ಟ ವಾಗಿ.

**–उघड** (–ಉಘಡ) ಪ್ರತ್ಯಕ್ಷವಾಗಿ, ಬಹಿರಂಗ ವಾಗಿ.

**उघडणे** (ಉಘಡಣೇ) ಕ್ರಿ. ಸ. ತೆರೆ, ತೆಗೆ, ಹೊರಗೆ ಹಾಕು, ಹೊರಗೆಡವು. ೨ (ಆಕಾಶ ಇಂ) ನಿರಭ್ರ ವಾಗು, ೩ (ದೈವ) ಊರ್ಜಿತವಾಗು.

**उघडदोरा** (ಉಘಡದೋರಾ) ಪು. (ಹಮ್ಮಿಣಿ, ಚೀಲ ಮುಂ) ಮುಚ್ಚುವ-ಬಿಚ್ಚುವ ದಾರ.

**उघडमाथा** (ಉಘಡಮಾಥಾ) ಕ್ರಿ. ವಿ. ಬಹಿರಂಗವಾಗಿ ೨ ಮೋರೆ ಮೇಲೆ ಮಾಡಿಕೊಂಡು ೩ ನಾಚಿಕೆಯಿಲ್ಲದೆ.

**उघडमीट** (ಉಘಡ್-ಮೀಟ್) ಸ್ತ್ರೀ. (ಕಣ್ಣು) ತೆರೆಯುವಿಕೆ ಮುಚ್ಚುವಿಕೆ.

**उघडवागड** (ಉಘಡ್ವಾಗಡ್) ಕ್ರಿ. ವಿ. ಬಹಿರಂಗವಾಗಿ, ದಾಕ್ಷಿಣ್ಯವಿಲ್ಲದೆ, ಮುಚ್ಚುಮರೆ ಮಾಡದೆ

**उघडवासरा** (ಉಘಡ್ವಾಸರಾ) ಪು. ಖಾಲಿ ಬಿದ್ದ ಸ್ಥಳ, ಬಯಲು.

**उघडा** (ಉಘಡಾ) ವಿ. ಬರಿಮೈಯ, ಬಟ್ಟೆಯಿಲ್ಲದ ನಗ್ನ, ಅಲ್ಪ ಬಟ್ಟೆ ಉಟ್ಟ.

**–पाडणे** (–ಪಾಡಣೆ) ದೋಷವನ್ನು ಬಹಿರಂಗ ಪಡಿಸು.

**उघडकीस–उघडयावर आणणे** (ಉಘಡ್‌ಕೀಸ್, ಉಘಡ್ಯಾವರ ಆಣಣೆ) (ತಪ್ಪುಗಳನ್ನು) ಬಹಿರಂಗ ಪಡಿಸು.

**उघडया डोळयाने** (–ಉಘಡ್ಯಾ ಡೋಳ್ಯಾನೆ) ಕಣ್ಣು ತೆರೆದು, ಅಸಹಾಯನಾಗಿ (ನೋಡು)

**उघडया डोळयाने प्राण जात नाही** (ಉಘಡ್ಯಾ ಡೋಳ್ಯಾನೇ ಪ್ರಾಣ ಜಾತ್ ನಾಹೀ) ಕಣ್ಣು ಮುಚ್ಚದೆ ಪ್ರಾಣ ಹೋಗಲಾರದು (ಎಂದರೆ ಜೀವವಿರುವ ತನಕ ಸಂಕಟದ ಪ್ರತಿಕಾರ ನಡೆಯಬೇಕು.)

**–उघडा-नागडा** (ಉಘಡಾ-ನಾಗಡಾ) ಕ್ರಿ. ವಿ. ಬರಿಮೈಯಿಂದ, ಬತ್ತಲೆಯಾಗಿ.

**उघडा बोडका** (ಉಘಡಾ ಬೋಡಕಾ) ಕ್ರಿ. ವಿ. ಷರ್ಟು, ಟೊಪ್ಪಿಗೆ ಇಲ್ಲದೆ.

**उघडया माथ्याने** (ಉಘಡ್ಯಾ ಮಾಥ್ಯಾನೇ) ಕ್ರಿ. ವಿ. ಸಂಕೋಚ ವಿಲ್ಲದೆ, ಅಂಜದೆ, ಅನುಮಾನಿಸದೆ.

**उघडी-मराठी** (ಉಘಡೀ–ಮರಾಠೀ) ಸ್ತ್ರೀ. ಮುಚ್ಚು ಮರೆಯಿಲ್ಲದ, ಪ್ರಾಮಾಣಿಕವಾದ ವ್ಯವಹಾರ, ನಡಾವಳಿ.

**उघडीक-प** (ಉಘಡೀಕ್–ಪ್) ಸ್ತ್ರೀ. ಮಳೆನಿಂತು ಹೋದ ಮೇಲಿನ ಸ್ಥಿತಿ, ನಿರಭ್ರ ಆಕಾಶ.

**उघडी मांडी करणे–टाकणे** (ಉಘಡೀ ಮಾಂಡೀ ಕರಣೇ –ಟಾಕಣೇ) ಅಸಭ್ಯ ವ್ಯವಹಾರ ಮಾಡು.

**उघडयावर** (ಉಘಡ್ಯಾವರ) ಕ್ರಿ. ವಿ. ಆವರಣ ವಿಲ್ಲದೆ, ಹೊರಗೆ. ೨. ಬಹಿರಂಗವಾಗಿ.

**उघाडी** (ಉಘಾಡೀ) ಸ್ತ್ರೀ. ಮಳೆನಿಂತ ಸ್ಥಿತಿ, ಸ್ವಚ್ಛ ಸೂರ್ಯ ಪ್ರಕಾರ.

**उचकटणे** (ಉಚಕಟಣೆ) ಕ್ರಿ. ಸ. ಬಿಚ್ಚಿ ಬೀಸಾಡು ಅವ್ಯವಸ್ಥಿತವಾಗಿ ಹರಡು. ೨. ಬಗೆಹರಿಸಿದ ವ್ಯಾಜ್ಯವನ್ನು ಕೆದರಿ ತೆಗೆ.

**उचकणे** (ಉಚಕಣೆ) ಕ್ರಿ. ಸ. ಕಳ್ಳತನ ಮಾಡು, ಹೊತ್ತುಹಾಕು, ಕದಿ. ೨. ಸಾಲ-ಉದ್ದರಿ ಮುಟ್ಟಿಸದೆ ಇರು.

**उचकळचा बुचकळचा** (ಉಚಕಳ್ಯಾ ಬುಚಕಳ್ಯಾ) ಸ್ತ್ರೀ. ಬಹುವಚನ. ಮುಳುಗುವ ಮನುಷ್ಯನ ಪೀಕಲಾಟ.

**उचका** (ಉಚಕಾ) ಪು. ಕನಸು, ಕಣ್ಣುಮುಂದೆ ಬರುವ ಭ್ರಾಂತಿ ಮೂಲ ರೂಪ. ೨. ಸ್ತ್ರೀ. ಕಳ್ಳತನ.

**–उचक** (–ಉಚಕ) ಸ್ತ್ರೀ. ಲಗುಬಗೆಯಿಂದ ಹಿರಿದುಕೊಳ್ಳುವಿಕೆ.

**उचकी** (ಉಚಕೀ) ಸ್ತ್ರೀ. ಬಿಕ್ಕು.

**–लागणे** (–ಲಾಗಣೆ) ಧಾ. ಮರಣ ಸಮಯ ಒದಗು.

**उचक्या** (ಉಚಕ್ಯಾ) ಪು. ಜೇಬು ಕತ್ತರಿಸುವವ, ಕಳ್ಳ. ೨. ಮಿತಿಮೀರಿ ಸಾಲ ಬೇಡುವವ.

**उचंडळणे** (ಉಚಂಡಳಣೇ) ಕ್ರಿ. ಸ. ಚಲ್ಲು, ಸುರಿ, ಪಾತ್ರೆಯಿಂದ ಹೊರಗೆ ಬರು.

**उचंबळणे** (ಉಚಂಬಳಣೇ) ಕ್ರಿ. ಸ. ಹೊರಬೀಳು, ಹೊರಸೂಸು. ೨. ವಾಂತಿಯಾಗು. ೩. ವಿಕಾರದ ಉದ್ರೇಕವಾಗು. ೪. (ಪ್ರೇಮ) ಉಕ್ಕಿಬರು.

**उचंबळा** (ಉಚಂಬಳಾ) ಪು. ಭಾವನೆಯ ಉದ್ರೇಕ. ೨. ವಿಕಾರವಶತೆ.

**उचमपचम** (ಉಚಮ ಪಚಮ್) ಸ್ತ್ರೀ. ನಿಷ್ಕಾರಣ ಹಸ್ತಕ್ಷೇಪ. ೨. ದೂರಿಕೊಳ್ಳುವಿಕೆ. ೩. ಗೋಜಿಗೆ ಹೋಗುವಿಕೆ.

**उचल** (ಉಚಲ್) ಸ್ತ್ರೀ. ಎತ್ತುವಿಕೆ. ೨. ಪ್ರೋತ್ಸಾಹನ. ೩. ಸಾಹಸ. ೪. ಬೇರೆ ಬೇರೆ ಜನರಿಂದ ತೆಗೆದು ಕೊಂಡ ಸಾಲ. ೫. ಹೆಚ್ಚಿನ (ಸಂಬಳದ ಹೊರತಾಗಿ) ಹಣ.

**–णे** (–ಣೇ) ಕ್ರಿ. ಸ. ಎತ್ತು, ಎಬ್ಬಿಸು, ಎತ್ತಿಕೊ, ಕಳವು ಮಾಡು.

**–मावन्दे** (–ಮಾವಂದೇ) ವ. ಉಚ್ಚಾಟನ, ಹೊರಗೆ ಹಾಕುವಿಕೆ, ತಳ್ಳುವಿಕೆ.

**–ला** (–ಲಾ) ವಿ. ಮೇಲೆ ಬಂದ, ಗರ್ವಿಷ್ಠ.

**–गिरी** (–ಗಿರೀ) ಕಳ್ಳತನ, ಮೋಸಗಾರಿಕೆ.

**उचल्या** (ಉಚಲ್ಯಾ) ಪು. ಕಳ್ಳ, ಜೇಬು ಕತ್ತರಿಸುವವ.

**उचाट** (ಉಚಾಟ್) ಪು. ಬೇಸರಿಕೆ, ಜಿಗುಪ್ಸೆ.

**–णे** (–ಣೇ) ಕ್ರಿ. ಅ. ಬೇಸರಪಡು.

**उचापत** (ಉಚಾಪತ್) ಸ್ತ್ರೀ. ಮೇಲಿಂದಮೇಲೆ ತೆಗೆದುಕೊಂಡ ಸಾಲ, ಉದ್ದರಿಮಾಲು.

**–खाणे** (–ಖಾಣೇ) ಕ್ರಿ. ಸ. ಸಾಲಮಾಡಿ ಸುಖಭೋಗಿಸು. ೨. ಸಂಬಂಧವಿಲ್ಲದ ಕೆಲಸಗಳನ್ನು ಮೈಮೇಲೆ ತೆಗೆದುಕೊ.

**उचापतीचा कारभार** (ಉಚಾಪತೀಚಾ ಕಾರಭಾರ್) ಪು. ಸಾಲಮಾಡಿ, ಕಡ ತೆಗೆದುಕೊಂಡು ಮಾಡಿದ ಉದ್ದಿಮೆ.

**उचित** (ಉಚಿತ) ವಿ. ಸಂ. ಯೋಗ್ಯ, ತಕ್ಕ. ೨. ಕಾಣಿಕೆ, ಪುಕ್ಕಟೆಯಾಗಿ ಕೊಟ್ಟ ವಸ್ತು, ಉಚಿತವಾಗಿ ಕೊಟ್ಟ ಸಾಮಾನು.

**उचितास येणे** (ಉಚಿತಾಸ್ ಏಣೇ) ಕ್ರಿ. ಅ. ಯೋಗ್ಯವೆಂದು ಕಾಣು.

**उच्च** (ಉಚ್ಚ) ವಿ. ಸಂ. ಎತ್ತರದಲ್ಲಿದ್ದ, ಶ್ರೇಷ್ಠ, ಅಸಾಮಾನ್ಯ.

**उजविणे** (ಉಜವಿಣೇ) ಕ್ರಿ. ಸ. ನೆರವೇರಿಸು, ಕೊನೆಗಾಣಿಸು.

**उजळ** (ಉಜಳ್) ವಿ. ಉಜ್ವಲ, ಬಿಳಿಯ, ಶುಭ್ರ

**–माथा** (–ಮಾಥಾ) ಪು. ದೋಷಾರೋಪದಿಂದ ಮುಕ್ತಾಯ.

**–माथ्याने हिंडणे** (–ಮಾಥ್ಯಾನೇ ಹಿಂಡಣೇ) ಮರ್ಯಾದೆಯಿಂದ, ಸಂಕೋಚವಿಲ್ಲದೆ, ಅಡ್ಡಾಡುವಿಕೆ.

**उजळणी** (ಉಜಳಣೀ) ಸ್ತ್ರೀ. ಪುನರೀಕ್ಷಣೆ, ತಿದ್ದುಪಡಿ ಪರಿಷ್ಕಾರ, ಮತ್ತೊಮ್ಮೆ ಓದಿ ನೋಡುವಿಕೆ, ಸರಿಹೊಂದಿಸುವಿಕೆ.

**उजळणे** (ಉಜಳಣೇ) ಕ್ರಿ. ಸ. ಪ್ರಕಾಶಮಾನವಾಗು, ಮಿಂಚು. ೨. ಮಿಂಚುವಂತೆ ಮಾಡು. ೩. ಹೊತ್ತಿಸು. ೪. ಸ್ಪಷ್ಟಗೊಳಿಸು. ೫. ಚೆಂದಕಾಣಿಸು.

**भाग्य–** (ಭಾಗ್ಯ–) ಕ್ರಿ. ಸ. ಊರ್ಜಿತಾವಸ್ಥೆ ಬರು.

**उजळा** (ಉಜಳಾ) ಪು. ಹೊಳೆಯುವಿಕೆ, ಲಕಲಕ ಮಿಂಚುವಿಕೆ. ೨. ವಿ. ಸ್ವಚ್ಛ, ಶುಭ್ರ, ಮಿಂಚುವ

**–पाजळ** (ಪಾಜಳ್) ವಿ. ಸ್ವಚ್ಛ, ತೇಜಸ್ವಿ.

**उजळाई** (ಉಜಳಾಈ) ಸ್ತ್ರೀ. ಒಪ್ಪಕೊಡುವದಕ್ಕಾಗಿ ಕೊಟ್ಟಕೂಲಿ. ೨. ಒಪ್ಪಕೊಡುವಿಕೆ.

**उजागर** (ಉಜಾಗರ) ಕ್ರಿ. ವಿ. ಬಹಿರಂಗವಾಗಿ, ಸ್ಪಷ್ಟವಾಗಿ, ಮುಚ್ಚುಮರೆಯಿಲ್ಲದೆ. ೨. ಪು. ನಿರ್ಭಯತೆ, ಎಚ್ಚರದಿಂದ ಇರುವಿಕೆ.

**उजागिरी** (ಉಜಾಗಿರೀ) ಸ್ತ್ರೀ. ನಿರ್ಭಯತೆ, ಅಂಜಿಕೆ ಇಲ್ಲದಿರುವಿಕೆ. ೨. ದಾಕ್ಷಿಣ್ಯವಿಲ್ಲದಿರುವಿಕೆ. ೩. ನಾಚಿಕೆಯಿಲ್ಲದಿರುವಿಕೆ.

**उजागीर** (ಉಜಾಗೀರ್) ವಿ. ಅಂಜಿಕೆಯಿಲ್ಲದವ, ನಾಚಿಕೆಯಿಲ್ಲದವ.

**उजागिरीस आणणे** (ಉಜಾಗಿರೀಸ್ ಆಣಣೇ) ಕ್ರಿ. ಸ. (ದೋಷಗಳನ್ನು) ಬಹಿರಂಗಪಡಿಸುವಿಕೆ.

**उजाड** (ಉಜಾಡ್) ವಿ. ನಿರ್ಜನ, ಹಾಳುಬಿದ್ದ.

**उजाडणे** (ಉಜಾಡಣೇ) ಕ್ರಿ. ಅ. ಬೆಳಗಾಗು, ನಸುಕುಹರಿ. ೨. ಊರ್ಜಿತಾವಸ್ಥೆಬರು.

**उजू** (ಉಜೂ) ವಿ. ಸರಳ, ನ್ಯಾಯ. ೨. ಅರ. ಪು. ಆದರ, ಸನ್ಮಾನ.

**उजूर** (ಉಜೂರ್) ಪು. ಅರ. ನೆಪ, ನಿಮಿತ್ತ ೨. ಆಕ್ಷೇಪ, ಅಡ್ಡಿ.

**उजेड** (ಉಜೇಡ್) ಪು. ಬೆಳಕು, ಪ್ರಕಾಶ.

**उज्वल** (ಉಜ್ವಲ) ವಿ. ಸಂ. ಹೊಳೆಯುವ, ಉಜ್ವಲ.

**उज्ज्वलन** (ಉಜ್ವಲನ್) ನ. ಸಂ. ಸುಡುವಿಕೆ. ೨. ಹೊತ್ತಿಸುವಿಕೆ ೩. ಮಿಂಚುವಂತೆ ಮಾಡುವಿಕೆ.

**उज्वलित** (ಉಜ್ವಲಿತ್) ವಿ. ಸಂ. ಹೊತ್ತಿಸಿದ. ೨. ಹಸನಮಾಡಿದ.

**उटकर–ळ** (ಉಟಕರ-ಳ್) ವಿ. ಹೊಯಿದಾಡುವ, ಅಸ್ಥಿರ, ತೂಗಾಡುವ, ಜೋತುಬಿದ್ದ.

**उटकळी** (ಉಟಕಳೀ) ಸ್ತ್ರೀ. ಬಾಯಲ್ಲಿ ಹುಣ್ಣಾಗುವಿಕೆ, ಬೊಕ್ಕೆಬರುವಿಕೆ.

**उटक्कर** (ಉಟಕ್ಕರ) ವಿ. ಉದ್ಧತ, ಗರ್ವಿಷ್ಠ, ಅವಿವೇಕಿ.

**उटंगर** (ಉಟಂಗರ್) ನ. ಸಣ್ಣ ಬೆಟ್ಟ, ದಿನ್ನೆ.

**उटज** (ಉಟಜ) ನ. ಸಂ. ಗುಡಿಸಲ, ಕುಟಿ.

**उटणे** (ಉಟಣೇ) ನ. ಕಂ. ಪರಿಮಳದ್ರವ್ಯ, "ಉರುಟಣಿ" ೨. ಕ್ರಿ. ಸ. ಹಚ್ಚು, ಬಳಿ, ತಿಕ್ಕು.

**उटंबर** (ಉಟಂಬರ್) ನ. **उटंगर** ನೋಡಿರಿ.

**उटारेटी** (ಉಟಾರೇಟೀ) ಕ್ರಿ. ವಿ. ಕೆಲಸವಿಲ್ಲದೆ ಏನಾದರೂ ಮಾಡುತ್ತ.

**उटारेठा** (ಉಟಾರೇಠಾ) ಸ್ತ್ರೀ. ಉಸಾಬರಿ, ಗೋಜು, ನಿಷ್ಕಾರಣಪ್ರಸ್ತಾಪ, ಪಂಟು, ಹೆಮ್ಮೆ.

**उटाळणी** (ಉಟಾಳಣೀ) ಸ್ತ್ರೀ. ಕೆಣಕುವಿಕೆ. ೨. ಸ್ಪಷ್ಟವಾಗಿ ಉಚ್ಚರಿಸುವಿಕೆ.

**–काढणे** (–ಕಾಢಣೇ) ಕ್ರಿ. ಸ. ಮುಯ್ಯಿತೀರಿಸು.

**उटाळणे** (ಉಟಾಳಣೇ) ಕ್ರಿ. ಸ. ಬುಡಮೇಲು ಮಾಡು.

**उटाळा** (ಉಟಾಳಾ) ಪು. ಮೀಟುಗೋಲು, ಸನ್ನೆ ಕೋಲು "ಲಿವ್ಹರ್" ೨. ಸ್ಪಷ್ಟವಾದ ಉಚ್ಚಾರ.

**उटी** (ಉಟೀ) ಸ್ತ್ರೀ. ಚಂದನ, ಸುಗಂಧ ದ್ರವ್ಯ. ೨. ಗಾಲಿಗೆ ಆನಿಸಿದ ಕಲ್ಲು.

**उट्टे** (ಉಟ್ಟೇ) ನ. ಮುಯ್ಯಿ, ಸೇಡು.

**–काढणे** (–ಕಾಢಣೇ) ಕ್ರಿ. ಸ. ಸೇಡುತೀರಿಸು.

**उठकळा** (ಉಠಕಳಾ) ಸ್ತ್ರೀ. ಪ್ರಯಾಣ, ಹೊರಡುವಿಕೆ

**उठकळे** (ಉಠಕಳೇ) ನ. ತಳ್ಳುವಿಕೆ, ಹೊರಗೆ ಹಾಕುವಿಕೆ.

**उठणे** (ಉಠಣೇ) ಕ್ರಿ. ಸ. ಏಳು, ಎಚ್ಚರಾಗು.

**उठून जाणे** (ಉಠೂನ್ ಜಾಣೇ) ಕ್ರಿ. ಅ. ಹೊರಟು ಹೋಗು.

**उठून दिसणे** (ಉಠೂನ್ ದಿಸಣೇ) ಕ್ರಿ. ಅ. ಶೋಭಿಸು, ಚೆಂದಕಾಣು.

**उठत बसत** (ಉಠತ್ ಬಸತ್) ಕ್ರಿ. ವಿ. ಯಾವಾಗಲೂ, ಕೂಡುವಾಗ, ನಿಲ್ಲುವಾಗ, ಅಸರಂತವಾಗಿ.

**उठपळ** (ಉಠಪಳ್) ಸ್ತ್ರೀ. ಓಡಾಟ, ಎಡತಾಕುವಿಕೆ.

**उठपाय** (ಉಠಪಾಯ್) ಕ್ರಿ. ವಿ. ಒಂದೇ ಸವನೆ.

**उठबैस** (ಉಠಬೈಸ್) ಸ್ತ್ರೀ. ಕೂಡುವಿಕೆ, ಎದ್ದೇಳುವಿಕೆ. (ಲಾ) ಪರಿಶ್ರಮ, ಕಷ್ಟ. ೨. ಒಂದು ವ್ಯಾಯಾಮ, ಪ್ರಕಾರ.

**उठवण** (ಉಠವಣ್) ಸ್ತ್ರೀ. ಅಶಕ್ತತೆ, ಬೇರೊಬ್ಬರ ನೆರವಿನಿಂದ ನಿಲ್ಲುವಿಕೆ. ೨. ಎಬ್ಬಿಸುವಿಕೆ.

**–कर, करू** (–ಕರ್-ಕರೂ) ಬಹಳ ದಣಿದ, ತೀರ ಅಶಕ್ತ.

**उठवळ** (ಉಠವಳ್) ವಿ. ಸೋಮಾರಿ, ಅವ್ಯವಸ್ಥಿತ.

**उठविणे** (ಉಠವಿಣೇ) ಕ್ರಿ. ಸ. ಎಬ್ಬಿಸು. ೨. ಹುಟ್ಟಿಸು. ೩. ಪುನರುಜ್ಜೀವನ ಮಾಡು. ೪. (ಸುಳ್ಳು ಸುದ್ದಿ ಮುಂ.) ಹರಡಿಸು.

**–डोके** (ಡೋಕೇ) ತಲೆಶೂಲೆ ಎಬ್ಬಿಸು.

**जागत्याला कोण उठवील?** (ಜಾಗತ್ಯಾಲಾ ಕೋಣ ಉಠವೀಲ್?) ಎಚ್ಚರದಿಂದಿದ್ದವನನ್ನು ಎಬ್ಬಿಸುವುದೆಂತು?

**उठाउठी** (ಉಠಾಉಠೀ) ತತ್‌ಕ್ಷಣ, ಒಮ್ಮೆಲೆ, ಕೂಡಲೆ.

**उठागीर** (ಉಠಾಗೀರ್) ವಿ. ಪ್ರಯಾಣಿಕ, ಪ್ರವಾಸಿ, ೨. ಜೇಬು ಕತ್ತರಿಸುವವ.

**उठाठेव** (ಉಠಾ–ಠೇವ್) ಸ್ತ್ರೀ. ನಿಷ್ಕಾರಣವಾಗಿ ಎಬ್ಬಿಸಿದ ವಾದ, ಪಂಚಾಯತಿ. ೨. ಬೇಕೆಂದು ಎಬ್ಬಿಸಿದ ತರಲೆ, ಕಾಯಕ.

**उठाण–णे** (ಉಠಾಣ–ಣೇ) ನ. ಹುಮ್ಮಸ, ರಭಸ. ೨. ದಿಮಾಕ.

**उठाणू** (ಉಠಾಣೂ) ನ. ಕುರು, ಗುಳ್ಳೆ, ವ್ರಣ, ಹುಣ್ಣು.

**उठाव** (ಉಠಾವ) ಪು. (ಶರೀರದ) ರೂಪ, ತೋರಿಕೆ, ಮೈಕಟ್ಟು. (ಕೊರೆದ) ಆಕೃತಿ. ೨. ಸೊಬಗು.

**–दार** (ದಾರ್) ವಿ. ಆಕರ್ಷಕವಾದ.

**उठावणी** (ಉಠಾವಣೀ) ಸ್ತ್ರೀ. ಪ್ರೋತ್ಸಾಹನ. ೨. ಜಾಗೃತಿ. ೩. ದಂಗೆ ಮಾಡುವಿಕೆ, ದಂಡೆತ್ತಿ ಹೋಗುವಿಕೆ. ೪. ನಷ್ಟವನ್ನು ಸಹಿಸಿ ಪುನಃ ಊರ್ಜಿತಾವಸ್ಥೆಗೆ ಬರುವಿಕೆ, ಪುನರುತ್ಥಾನ. ೫. ಪ್ರಯಾಣ ಬೆಳೆಸುವಿಕೆ.

**उठावणे** (ಉಠಾವಣೇ) ಕ್ರಿ. ಅ. ಮುಂದಾಗು, ಸಾಹಸ ತೋರಿಸು, ಆಕ್ರಮಣ ಮಾಡು.

**उठावा** (ಉಠಾವಾ) ಪು. (ಪ್ರಯಾಣ ಬೆಳೆಸಲಿಕ್ಕೆ) ಏಳುವಿಕೆ, ಹೊರಡುವಿಕೆ. ೨. ಆಕರ್ಷಕತೆ.

**उडणे** (ಉಡಣೇ) ಕ್ರಿ. ಅ. ಹಾರು, ಜಿಗಿ (ಬಣ್ಣ ಮುಂ.) ಕುಂದು. (ಹಣ ಮುಂ.) ಖರ್ಚಾಗು, ಇಲ್ಲದಾಗು. (ಜಗಳ ಮುಂ.) ಪ್ರಬಲವಾಗು. ೨. ಗರ್ವ, ಅಹಂಕಾರ ತೋರಿಸು. ೩. ಓಡಿಹೋಗು, ಮಾಯವಾಗು.

**उडून जाणे** (ಉಡೂನ್ ಜಾಣೇ) ಹಾರಿ ಹೋಗು.

**उडत जाणे** (ಉಡತ್ ಜಾಣೇ) (ವಾಕ್ಪ್ರಚಾರ)

**उडत गेला** (ಉಡತ ಗೇಲಾ) (ಯಾರ ಬಗ್ಗೆ ನನಗೆ) ಪರಿವೆ ಇಲ್ಲ, ಚಿಂತೆಯಿಲ್ಲ, ಯೋಚನೆ ಇಲ್ಲ.

**उडत उडत** (ಉಡತ್ ಉಡತ್) ಕ್ರಿ. ವಿ. ಹಾರು ಸುದ್ದಿಯಂತೆ. ೨. ಚಂಚಲತೆಯಿಂದ.

**उडतबातमी** (ಉಡತ್‌ಬಾತಮೀ) ಸ್ತ್ರೀ. ಹಾರು ಸುದ್ದಿ, ವದಂತಿ.

**उडते पाखरू** (ಉಡತೇ ಪಾಖರೂ) ನ. ಚಂಚಲ ಸ್ವಭಾವದ ಮನುಷ್ಯ.

**उडदा मुहूर्त** (ಉಡದಾ ಮುಹೂರ್ತ) ಪು. ಲಗ್ನ ಸಮಾರಂಭಕ್ಕೆ ಮುಂಚಿತವಾಗಿ ಮಾಡುವ ವಿಧಿ.

**उडपाल** (ಉಡಪಾಲ್) ಸಣ್ಣ ಡೇರೆ.

**उडवणी** (ಉಡವಣೀ) ಸ್ತ್ರೀ. ಹರಡುವಿಕೆ, ಚದರಿಸುವಿಕೆ, ಹಾರಿಸುವಿಕೆ. ೨. ಅನಾದರ ತೋರಿಸುವಿಕೆ.

**उडवणे** (ಉಡವಣೇ) ಕ್ರಿ. ಸ. ಹಾರಿಸು. ೨. ಖರ್ಚು ಮಾಡು. ೩. ತಪ್ಪಿಸು. ೪. ನೆರವೇರಿಸು, ಈಡೇರಿಸು.

**उडवा उडवी** (ಉಡವಾ ಉಡವೀ) ಸ್ತ್ರೀ. ಮಾತು ತಿರುಗಿಸುವಿಕೆ. ೨. ದುರ್ಲಕ್ಷ್ಯ ಮಾಡುವಿಕೆ, ತಪ್ಪಿಸಿಕೊಳ್ಳುವಿಕೆ, ಮುಂದೂಡುವಿಕೆ. ೩. ಅಲ್ಲಗಳೆಯುವಿಕೆ.

**उडवागी** (ಅಡವಾಗೀ) ಸ್ತ್ರೀ. ಅನಾದರ, ತಿರಸ್ಕಾರ.

**उडवी** (ಉಡವೀ) ಸ್ತ್ರೀ. ಕ. ಗುಡ್ಡೆ, ರಾಶಿ.

**उडव्या** (ಉಡವ್ಯಾ) ಪು. ಮೀತಿಮೀರಿ ಖರ್ಚು ಮಾಡುವವ.

**उडाउडी** (ಉಡಾಉಡೀ) ಕ್ರಿ. ವಿ. ಅಹಮಹಮಿಕೆಯಿಂದ, ಸ್ಪರ್ಧೆಯಿಂದ.

**उडाऊ** (ಉಡಾಊ) ವಿ. ಮಿತಿಮೀರಿ ಖರ್ಚುಮಾಡುವ

**उडाणटप्पू** (ಉಡಾಣಟಪ್ಪೂ) ವಿ. ಪುಂಡ, ಅನಿಯಂತ್ರಿತ, ಸ್ವೇಚ್ಛಾಚಾರಿ. ೨. ಯಾವ ಚಿಂತೆಯಿಲ್ಲದವ.

**उडी** (ಉಡೀ) ಸ್ತ್ರೀ. ಜಿಗಿತ, ಹಾರುವಿಕೆ. ೨.ಮುಟ್ಟು. ೩. ಮಹಾತ್ವಾಕಾಂಕ್ಷೆ. ೪. ಕೈಗಡ ತೆಗೆದುಕೊಂಡ ಎತ್ತಿನ ಸಲುವಾಗಿ ಕೊಡಬೇಕಾದ ಹಣ, ಕಾಳು.

**उडीद** (ಉಡೀದ್) ಪು. ಉದ್ದು, ಮಾಷ.

**उडु** (ಉಡು) ನ. ಸಂ. ಚಿಕ್ಕೆ, ನಕ್ಷತ್ರ.

**उड्डाण** (ಉಡ್ಡಾಣ) ನ. ಸಂ. ಜಿಗಿತ, ಉಡ್ಡಾಣ, ಹಾರುವಿಕೆ, ವಿಮಾನ ಪ್ರವಾಸ.

**उडचा** (ಉಡ್ಯಾ) ವಿ. ಚಂಚಲ, ಹಾರಾಡುವವ, ಅಸ್ಥಿರ.

**उणखु–खूण** (ಉಣಖು–ಖೂಣ್) ಸ್ತ್ರೀ. ಅಂತರಂಗ, ಗುಟ್ಟು, ರಹಸ್ಯ, ಮನದಲ್ಲಿಯ ಮಾತು.

**उणा** (ಉಣಾ) ವಿ. ಕಡಿಮೆ, ಕಮ್ಮಿ, ನ್ಯೂನ, (ಗಣಿತ) ಕಳೆದರೆ–'ಮೈನಸ್'

**–दुणा** (–ದುಣಾ) ವಿ. ಅಪಮಾನಕಾರಕ.

**–पुरा** (–ಪುರಾ) ಕ್ರಿ. ವಿ. ಸುಮಾರು, ಹೆಚ್ಚು ಕಡಿಮೆ.

**उणावणे** (ಉಣಾವಣೇ) ಕ್ರಿ. ಸ. (ಒಂದು ಸಂಖ್ಯೆಯೊಳಗಿಂದ ಮತ್ತೊಂದನ್ನು ಕಳೆ.

**उणीव** (ಉಣೀವ) ಸ್ತ್ರೀ. ಕೊರತೆ, ನ್ಯೂನ, ಇಲ್ಲದಿರುವಿಕೆ, ಅಭಾವ.

**उणें** (ಉಣೇ) ಕ್ರಿ. ವಿ. (ಗಣಿತ) ಕಳೆದರೆ, ಮೈನಸ್ ಮಾಡಿದರೆ. ೨. ನ. ನ್ಯೂನ, ಅಪೂರ್ಣತೆ.

**–पणा** (–ಪಣಾ) ಪು. ನ್ಯೂನ, ಕೊರತೆ.

**उतटणे** (ಉತಟಣೇ) ಕ್ರಿ. ಅ. ಒಡೆದು ಹೋಗು, ಹರಿದು ಹೋಗು, ಬಿರಿ.

**उतणे** (ಉತಣೇ) ಕ್ರಿ. ಅ. (ಹಾಲು ಮುಂ.) ಕುದಿದು ಹೊರಚಲ್ಲು, ಉಕ್ಕೇರು. ೨. ಸಿಟ್ಟಿಗೇಳು.

**उतू जाणे** (ಉತೂ ಜಾಣೇ) ಕ್ರಿ. ಅ. ಉಕ್ಕೇರು, (ಭಾವನೆ ಮುಂ.) ಉದ್ರೇಕ ಹೊಂದು, ಹೊರಚಿಮ್ಮು. ೩. ವ್ಯರ್ಥವಾಗು.

**उतरंड** (ಉತರಂಡ್) ಸ್ತ್ರೀ. (ಕೊಡ, ಮಣ್ಣಿನ ಪಾತ್ರೆ ಮುಂ.) ಒಂದರ ಮೇಲೊಂದು ಇಟ್ಟು ಮಾಡಿದ ರಾಶಿ.

**उतरड** (ಉತರಡ್) ಸ್ತ್ರೀ. ಇಳಿತರ, ಎತ್ತರದ ಸ್ಥಾನದಿಂದ ಸಮಪಾತಳಿಯ ವರೆಗಿನ ದಾರಿ, ಇಳುಕಲು, ಓರೆ.

**उतरण** (ಉತರಣ್) ಸ್ತ್ರೀ. ಓರೆ, ಇಳುಕಲು. ೨. ಕಡಿಮೆ ಆಳವಾದ ನದಿಯ ಭಾಗ.

**उतरणे** (ಉತರಣೇ) ಕ್ರಿ. ಅ. ಇಳಿ. ೨. उतरून घेणे (ಉತರೂನ್‌ಘೇಣೇ) ಬರೆದು ಕೊ. ೩. ಕಡಿಮೆಯಾಗು (ಜ್ವರ ಮುಂ.)

**नक्षा–** (ನಕ್ಷಾ–) ಕ್ರಿ. ಸ. ಅವಮಾನಮಾಡು.

**उतरती** (ಉತರತೀ) ವಿ. ಇಳಿತರದ, ಹ್ರಾಸಹೊಂದುವ.

**उतरपराई** (ಉತರಪರಾಈ) ಸ್ತ್ರೀ. ಮುಪ್ಪಿನಕಾಲ.

**उतरवट** (ಉತರವಟ್) ವಿ. ಇಳಿತರದ, ಇಳುಕಲಿನ.

**उतरवटा** (ಉತರವಟಾ) ಪು. ಇಳುಕಲು, ಜಾರುಗುಂಡಿ.

**उतरवण** (ಉತರವಣ್) ನ. ಇಳುಕಲು.

**उतरवणी** (ಉತರವಣೀ) ಸ್ತ್ರೀ. ಇಳುಕಲು. ೨. ಗಂಜಿ ಮುಂ.

**उतरवाट** (ಉತರವಾಟ) ಸ್ತ್ರೀ. ಇಳುಕಲಿನ ಹಾದಿ.

**उतरवि (व) णे** (ಉತರವಿ (ವ) ಣೇ) ಕ್ರಿ. ಸ. ಇಳಿಸು, ಕೆಳಗೆ ಬಿಡು. ೨. ಕಡಿಮೆ ಮಾಡು (ಬೆಲೆ ಮುಂ.) ೩. ಕಳೆ (ಬಟ್ಟೆ ಮುಂ.) ೪. ಮುಟ್ಟಿಸು (ದಂಡೆಗೆ)

**उतराई** (ಉತರಾಈ) ವಿ. ಕೃತಾರ್ಥ, ಋಣಮುಕ್ತ. **–होणे** (ಹೋಣೇ) ಕ್ರಿ. ಅ. ಸ. ಉಪಕಾರ ತೀರಿಸು.

**उतराई** (ಉತರಾಈ) ಸ್ತ್ರೀ. ೧. ಗುಡ್ಡಕ್ಕೆ ಕೆಳಗೆ ಸಾಮಾನು ಒಯ್ಯುವ ಕೂಲಿ. ೨. ದಸ್ತೈವಜು ಬರೆದು ಕೊಡುವುದಕ್ಕಾಗಿ ಕೊಡುವ ಹಣ. ೩. ಹಣ್ಣು ಇಳಿಸುವುದಕ್ಕಾಗಿ ಕೊಡುವ ಕೂಲಿ. ೪. ಮುಪ್ಪಿನ ಕಾಲ.

**उतराण** (ಉತರಾಣ್) ನ. ಉತ್ತರಾಯಣ, ಸೂರ್ಯನ ಉತ್ತರದ ಬದಿಗೆ ಮೂಡುವಿಕೆ.

**उतरीव** (ಉತರೀವ್) ವಿ. ಕೆಳಗೆಇ ಳಿಸಿದ (ಹಂಣು ಹಂಪಲ)

**उतव** (ಉತವ್) ಪು. ನದಿಗೆ ಬರುವ ನೆರೆ.

**उतवणे** (ಉತವಣೇ) ಕ್ರಿ. ಉಕ್ಕೇರು, ಮೇಲೆಬರು.

**उतळपातळ** (ಉತಳ್ ಪಾತಳ್) ಸ್ತ್ರೀ. ನಿರರ್ಥಕ ಮಾತು, ಪಂಟು.

**उताणा** (ಉತಾಣಾ) ವಿ. ಮೋರೆ ಆಕಾಶದ ಕಡೆಗೆ ಮಾಡಿ ಬಿದ್ದುಕೊಂಡ.

**उतार** (ಉತಾರ) ಪು. ಇಳುಕಲು. ೨. ತೀವ್ರ ಔಷಧದ ಪರಿಣಾಮವನ್ನು ಕಡಿಮೆ ಮಾಡುವ ಬೇರೆ ಉಪಾಯ, ದೋಷ ನಿವಾರಣ. ೩. (ಹಾವಳಿ, ರೋಗ ಮುಂ.) ಇಳಿತರ ಕಡಿಮೆಯಾಗುವಿಕೆ ವಾಸಿಯಾಗುವಿಕೆ.

**उतारा** (ಉತಾರಾ) ಪು. ೧. ಫಲ. ೨. ನಕಲು, ಉದ್ಧರಣ. ೩. ಒಗಟದ ಉತ್ತರ. ೩. (ಬಾಧೆಯ) ನಿವಾರಣ.

**उतारू** (ಉತಾರೂ) ಪು. ಪ್ರವಾಸಿ, ಪ್ರಯಾಣಿಕ.

**उताऱ्या** (ಉತಾರ್ಯಾ) ಪು. ಅಂಬಿಗ ೨. ಹಣ್ಣು ಇಳಿಸುವವ.

**उतावळ** (ಉತಾವಳ್) ಸ್ತ್ರೀ. ಲಗಬಗಿ, ಉತ್ಸಾಹ, ತಳಮಳಿಕೆ, ಅವಸರ.

**उतावळचा** (ಉತಾವಳ್ಯಾ) ವಿ. ಉತಾವಳಿ, ಅವಸರ ಪಡುವವ.

**उतुतणे** (ಉತುತಣೇ) ಕ್ರಿ. ಅ. ಮೈಮೇಲೆ ಬೊಕ್ಕೆ, ಹುಣ್ಣು ಉಂಟಾಗು.

**उते** (ಉತೇ) ನ. ಭೂಮಿಯನ್ನು ಕಾಯಿಸದೆ ತೆಗೆದ ಪೈರು.

**उतोटी** (ಉತೋಟೀ) ಸ್ತ್ರೀ. ಬತ್ತದ ಸಸಿಗಳನ್ನು ಕಿತ್ತಿಹಚ್ಚುವ ಭೂಮಿ.

**उत्कट** (ಉತ್ಕಟ) ವಿ. ಸಂ. ತೀವ್ರ, ಕಳಕಳಿಯ.

**उत्कंठा** (ಉತ್ಕಂಠಾ) ಸ್ತ್ರೀ. ಸಂ. ಕುತೂಹಲ, ಆಸ್ಥೆ ಆತುರತೆ.

**उत्कंठित** (ಉತ್ಕಾಂಠಿತ್) ವಿ. ಕುತೂಹಲವುಳ್ಳ, ಆತುರ.

**उत्कर्ष** (ಉತ್ಕರ್ಷ) ಪು. ಸಂ. ಏಳ್ಗೆ, ಉತ್ಕರ್ಷ, ಅಭಿವೃದ್ಧಿ.

**उत्कलिका** (ಉತ್ಕಲಿಕಾ) ಸ್ತ್ರೀ. ಸಂ. ಮೊಗ್ಗೆ. ೨. ತೀವ್ರ ಇಚ್ಛೆ.

**उत्कळ** (ಉತ್ಕಳ್) ಸ್ತ್ರೀ. ಉತ್ಕಂಠೆ, ಆತುರತೆ.

**उत्किरणे** (ಉತ್ಕಿರಣೆ) ನ. ಸಂ. ಕೆದರುವಿಕೆ, ಕದಲುವಿಕೆ.

**उत्कीलन** (ಉತ್ಕೀಲನ್) ನ. ಸಂ. ಕಿತ್ತುವಿಕೆ (ತೊಡರು ಮುಂ) ಬಿಡಿಸುವಿಕೆ.

**उत्कृष्ट** (ಉತ್ಕೃಷ್ಟ) ವಿ. ಸಂ. ಅತ್ಯುತ್ತಮ.

**उत्क्रम** (ಉತ್‌ಕ್ರಮ) ಪು. ಸಂ. (ವಿರುದ್ಧ, ವಿಪರೀತ) ಪದ್ಧತಿ, ಅವ್ಯವಸ್ಥೆ.

**उत्क्रमण** (ಉತ್‌ಕ್ರಮಣ್) ನ. ಸಂ. ಹೊರಟು ಹೋಗುವಿಕೆ, ಮೇಲೆ ಹೋಗುವಿಕೆ.

**प्राणोत्क्रमण** (ಪ್ರಾಣೋತ್‌ಕ್ರಮಣ್) ನ. ಸಾವು, ಮೃತ್ಯು.

**उत्क्रांत** (ಉತ್‌ಕ್ರಾಂತ) ವಿ. ಸಂ. ಮೇಲೆ ಸರಿದ.

**उत्क्रांती** (ಉತ್‌ಕ್ರಾಂತೀ) ಸ್ತ್ರೀ. ಸಂ. ನಿಸರ್ಗದ ಉತ್‌ಕ್ರಾಂತಿ, ವಿಕಾಸ.

**उत्खात** (ಉತ್ಖಾತ) ವಿ. ಸಂ. ಕಿತ್ತುಹಾಕಿದ, ನಿರ್ಮೂಲಗೊಳಿಸಿದ.

**उत्तप** (ಉತ್ತಪ) ವಿ. ಸಂ. ಪ್ರಕಾಶವುಳ್ಳ ಬಯಲುಸೀಮೆ.

**उत्तप्त** (ಉತ್ತಪ್ತ) ವಿ. ಸಂ. ಬಹಳ ಕಾಯ್ದ.

**उत्तंभित** (ಉತ್ತಂಭಿತ) ವಿ. ಸಂ. ಮೇಲೆ ಬಂದ, ಸೆಟೆದು ನಿಂತ, ಮೇಲೆ ಕಾಣುವ (ಮೊಲೆ ಮುಂ)

**उत्तम** (ಉತ್ತಮ) ವಿ. ಉತ್ತಮ, ಒಳ್ಳೆಯ.

**उत्तमर्ण** (ಉತ್ತಮರ್ಣ) ಪು. ಸಂ. ಸಾಲ ಕೊಡುವವ ಧನಕೋ.

**उत्तमांग** (ಉತ್ತಮಾಂಗ) ನ. ಸಂ. ಮುಖ, ಮೋರೆ, ತಲೆ.

**उत्तर** (ಉತ್ತರ) ನ. ಸಂ. ಉತ್ತರ, ಜವಾಬು, ಪ್ರತ್ಯುತ್ತರ. ೨. ಸ್ತ್ರೀ. ಉತ್ತರ ದಿಕ್ಕು. ೩. ವಿ. ಮೇಲಿನ, ಮುಂದಿನ, ಉತ್ತರ ದಿಕ್ಕಿನಲ್ಲಿಯ.

**–क्रिया** (–ಕ್ರಿಯಾ) ಮರಣೋತ್ತರ ಕರ್ಮ.

**उत्तरण** (ಉತ್ತರಣ) ನ. ಸಂ. ಕೆಳಗೆ ಇಳಿದು ಬರುವಿಕೆ, ಅವತರಣ. ೨. ದಾಟುವಿಕೆ, ತರಣ

**उत्तरत्र** (ಉತ್ತರತ್ರ) ಕ್ರಿ. ವಿ. ಸಂ. ಆಮೇಲೆ.

**उत्तरा** (ಉತ್ತರಾ) ಸ್ತ್ರೀ. ಸಂ. ಹನ್ನೆರಡನೆಯ ನಕ್ಷತ್ರ.

**उत्तरांग** (ಉತ್ತರಾಂಗ್) ನ. ಸಂ. ನಂತರ ಬರುವ ಭಾಗ.

**उत्तराण** (ಉತ್ತರಾಣ್) ನ. ಸಂ. ಉತ್ತರದ ಗಾಳಿ.

**उत्तराधिकारी** (ಉತ್ತರಾಧಿಕಾರೀ) ಪು. ಸಂ. ವಾರಸದಾರ, ಆಸ್ತಿಯುಹಕ್ಕು ಹೇಳುವವ.

**उत्तराभास** (ಉತ್ತರಾಭಾಸ್) ಪು. ಸಂ. ಅಸಂಬದ್ಧ ಉತ್ತರ.

**उत्तराभिमुख** (ಉತ್ತರಾಭಿಮುಖ) ವಿ. ಸಂ. ಉತ್ತರ ದಿಕ್ಕಿಗೆ ಮೋರೆ ಮಾಡಿದ.

**उत्तरायण** (ಉತ್ತರಾಯಣ) ನ. ಸಂ. ಉತ್ತರದ ಬದಿಗೆ ಸೂರ್ಯನ ಗತಿ, ಉತ್ತರಾಯಣ.

**उत्तरार्ध** (ಉತ್ತರಾರ್ಧ) ಪು. ಸಂ. ಅ ನಂತರದ ಭಾಗ, ಕೊನೆಯ ಭಾಗ.

**उत्तरी** (ಉತ್ತರೀ) ಸ್ತ್ರೀ. ಸಂ. ರೇಶ್ಮೆಯ ಒಲ್ಲೆ, ಉತ್ತರೀಯ.

**उत्तरीय** (ಉತ್ತರೀಯ) ನ. ಸಂ. ಉತ್ತರೀಯ, ಮೈಮೇಲೆ ಹೊದ್ದುಕೊಳ್ಳುವ ವಸ್ತ್ರ

**उत्तरोत्तर** (ಉತ್ತರೋತ್ತರ) ಕ್ರಿ. ವಿ. ಸಂ. ಹೆಚ್ಚು ಹೆಚ್ಚಾಗಿ.

**उत्तान** (ಉತ್ತಾನ) ವಿ. ಸಂ. ವಿಸ್ತೀರ್ಣ, ಮೋರೆ ಮೇಲೆಮಾಡಿ ಬಿದ್ದುಕೊಂಡ. ೨. ಸ್ಪಷ್ಟ, ಮುಚ್ಚು ಮರೆಯಿಲ್ಲದ, ತರವಲ್ಲದ. (ಶೃಂಗಾರ ಇ.)

**–उत्तानार्थ** (–ಉತ್ತನಾರ್ಥ) ಪು. ಸ್ಪಷ್ಟವಾದ ಅರ್ಥ.

**उत्तीर्ण** (ಉತ್ತೀರ್ಣ) ವಿ. ಸಂ. ತೇರ್ಗಡೆ ಹೊಂದಿದ, ಪಾರಾದ, ಪಾಸಾದ.

**उत्तुंग** (ಉತ್ತುಂಗ) ವಿ. ಸಂ. ಶ್ರೇಷ್ಠ. ೨. ಬಹಳ ಎತ್ತರದಲ್ಲಿದ್ದ.

**उत्तेजक** (ಉತ್ತೇಜಕ) ವಿ. ಸಂ. ಹುರುಪು ಕೊಡುವ, ಅಮಲು ತರುವ ಪ್ರೋತ್ಸಾಹಿಸುವ.

**उत्तेजन** (ಉತ್ತೇಜನ) ನ. ಸಂ. ಪ್ರೋತ್ಸಾಹನ, ಹುರುದುಂಬಿಸುವಿಕೆ.

**उत्थान** (ಉತ್ಥಾನ) ನ. ಸಂ. ಪುನರುತ್ಥಾನ, ನಷ್ಟಹೊಂದಿ ಮತ್ತೆ ಊರ್ಜಿತಾವಸ್ಥೆಯನ್ನು ಪಡೆಯುವಿಕೆ, ಉದ್ಧಾರ.

**उत्थापक** (ಉತ್ಥಾಪಕ) ಪು. ಸಂ. ಮೇಲೆತರುವವ, ದ್ಧಾರಕ.

**उत्थापन** (ಉತ್ಥಾಪನ್) ನ. ಸಂ. ಉದ್ಧಾರ. ೨. ಆದರದಿಂದ ಎದ್ದು ನಿಲ್ಲುವಿಕೆ. ೩. ತೆಗೆದು ಹಾಕುವಿಕೆ. ತಳ್ಳುವಿಕೆ.

**उत्थापित** (ಉತ್ಥಾಪಿತ) ವಿ. ಸಂ. ತೆಗೆದು ಹಾಕಿದ, ತಳ್ಳಿದ.

**उत्थित** (ಉತ್ಥಿತ) ವಿ. ಸಂ. ನಿಂತ, ಎದ್ದುನಿಂತ, ಮೇಲೆಬಂದ.

**उत्पत्ति-त्ती** (ಉತ್ಪತ್ತಿ–ತ್ತೀ) ಸ್ತ್ರೀ. ಸಂ. ಹುಟ್ಟು, ಜನನ, ಉತ್ಪತ್ತಿ.

**उत्पन्न** (ಉತ್ಪನ್ನ) ವಿ. ಸಂ. ಹುಟ್ಟಿದ, ಒದಗಿದ, ಜನಿಸಿದ. ೨. ನ. ಆದಾಯ, ಲಾಭ, ಪ್ರಾಪ್ತಿ.

**उत्पल** (ಉತ್ಪಲ) ನ. ಸಂ. ಕಮಲ.

**उत्पाटन** (ಉತ್ಪಾಟನ) ನ. ಸಂ. ಕಿತ್ತುಹಾಕುವಿಕೆ.

**उत्पाटित** (ಉತ್ಪಾಟಿತ) ವಿ. ಸಂ. ತೆಗೆದುಹಾಕಿದ, ತಳ್ಳಿದ.

**उत्पात** (ಉತ್ಪಾತ) ಪು. ಸಂ. ಭಯಪ್ರದ ಸಂಗತಿ, ಪೀಡೆ, ಸಂಕಟ, ದಂಗೆ, ಕಲಹ, ಉಪದ್ರವ.

**उत्पाती** (ಉತ್ಪಾತೀ) ವಿ. ಸಂ. ಉಪದ್ರವ ಕೊಡುವ, ಕುಚೋದ್ಯದ.

**उत्पादक** (ಉತ್ಪಾದಕ) ಪು. ಸಂ. ನಿರ್ಮಿಸುವವ, ಜನಕ.

**उत्पादन** (ಉತ್ಪಾದನ) ನ. ಸಂ. ನಿರ್ಮಾಣ, ಹುಟ್ಟಿಸುವಿಕೆ. ೨. ಬೆಳೆ, ಪೈರು, ಲಾಭ, ಉತ್ಪನ್ನ.

**उत्पादित** (ಉತ್ಪಾದಿತ) ವಿ. ಸಂ. ನಿರ್ಮಿಸಿದ, ಹುಟ್ಟಿಸಿದ, ಉತ್ಪನ್ನಮಾಡಿದ.

**उत्प्रेक्षण** (ಉತ್ಪ್ರೇಕ್ಷಣ) ನ. ಸಂ. ದೃಷ್ಟಾಂತ, ಉದ್ಗಾರ. ೨. ಕಾಯಾಸ, ತರ್ಕ.

**उत्प्रेक्षा** (ಉತ್ಪ್ರೇಕ್ಷಾ) ಸ್ತ್ರೀ. ಸಂ. (ಕಾವ್ಯಶಾಸ್ತ್ರ) ಒಂದು ಅಲಂಕಾರ ದೃಷ್ಟಾಂತ, ಉಪಮೆ.

**उत्प्रेक्षित** (ಉತ್ಪ್ರೇಕ್ಷಿತ) ವಿ. ಸಂ. ತುಲನೆಮಾಡಿದ, ಸರಿಹೋಲಿಸಿದ.

**उत्फुल्ल** (ಉತ್ಫುಲ್ಲ) ವಿ. ಸಂ. ಅರಳಿದ, ವಿಕಾಸ ಹೊಂದಿದ.

**उत्संकळ** (ಉತ್‌ಸಂಕಳ್) ವಿ. ಉತಾವಳಿ, ಅವಸರ ಮಾಡುವವ, ಅನಿಯಂತ್ರಿತ.

**उत्संग** (ಉತ್ಸಂಗ್) ಪು. ಸಂ. ತೊಡೆ. ೨. ಸಾನ್ನಿಧ್ಯ

**उत्सन्न** (ಉತ್ಸನ್ನ) ವಿ. ಸಂ. ನಷ್ಟಹೊಂದಿದ.

**उत्सर्ग** (ಉತ್ಸರ್ಗ) ಪು. ಬಿಡುಗಡೆ, ತ್ಯಾಗ, ಒಗೆಯುವಿಕೆ. ೨. ನಿಯಮ. ೩. ಅಧ್ಯಾಯ.

**उत्सर्जन** (ಉತ್ಸರ್ಜನ್) ನ. ಸಂ. (ಮೂರ್ತಿ ಮುಂ) ಮುಳುಗಿಸುವಿಕೆ, ತ್ಯಾಗ, ಹೊರಗೆ ಹಾಕುವಿಕೆ.

**उत्सर्जित** (ಉತ್ಸರ್ಜಿತ) ವಿ. ಸಂ. ಬಿಟ್ಟುಕೊಟ್ಟ, ತ್ಯಜಿಸಿದ, ಮುಕ್ತಾಯಮಾಡಿದ, ಬಗೆಹರಿಸಿದ.

**उत्सव** (ಉತ್ಸವ) ಪು. ಸಮಾರೋಹ, ಉತ್ಸವ, ವಿಜೃಂಭಣೆ. ೨. ಹಬ್ಬ.

**–मूर्ति** (ಮೂರ್ತೀ) ಸ್ತ್ರೀ. ಉತ್ಸವದಲ್ಲಿ ಕೂಡಿಸುವ ಮೂರ್ತಿ.

**उत्सादन** (ಉತ್ಸಾದನ್) ನ. ಸಂ. ನಾಶ. ೨. ಮೇಲೇರುವಿಕೆ. ೩. ಹೊಲ ಹರಗುವಿಕೆ.

**उत्साह** (ಉತ್ಸಾಹ) ಪು. ಸಂ. ಹುರುಪು, ಉತ್ಸಾಹ, ಆನಂದ.

**उत्सुक** (ಉತ್ಸುಕ್) ವಿ. ಸಂ. ಆತುರ, ಬಯಸುವವ.

**उत्साहित** (ಉತ್ಸಾಹಿತ) ವಿ. ಸಂ. ಹುರಿದುಂಬಿಸಿದ, ಹಿಗ್ಗಿದ, ಉತ್ಸಾಹಹೊಂದಿದ.

**उत्सिक्त** (ಉತ್ಸಿಕ್ತ) ವಿ. ಸಂ. ಗರ್ವಹೊಂದಿದ. ೨. ಉಕ್ಕಿ ಮೇಲೆ ಬಂದ.

**उत्सृष्ट** (ಉತ್ಸೃಷ್ಟ) ವಿ. ಸಂ. ವಿಸರ್ಜನಮಾಡಿದ, ಬಿಟ್ಟುಕೊಟ್ಟ.

**उत्सेक** (ಉತ್ಸೇಕ) ಪು. ಸಂ. ಉಕ್ಕಿಹೊರಸೂಸುವಿಕೆ.

**उत्क्षिप्त** (ಉತ್‌ಕ್ಷಿಪ್ತ) ವಿ. ಸಂ. ಹೊರಗೆ ಚಲ್ಲಿದ, ಬಿಸುಡಿದ.

**उथव** (ಉಥವ್) ಸ್ತ್ರೀ. (ಸಮುದ್ರದ) ಭರತಿ

**उथळ** (ಉಥಳ್) ವಿ. ಆಳವಲ್ಲದ, ಸಾಮಾನ್ಯ. ೨. ವಿಶೇಷ ಜ್ಞಾನವಿಲ್ಲದ.

**–पाण्याला खळखळ फार** (–ಪಾಣ್ಯಾಲಾ ಖಳಖಳ್ ಫಾರ್) ತುಂಬದ ಕೊಡದ ಸಪ್ಪಳ ಹೆಚ್ಚು.

**उथळवट** (ಉಥಳ್‌ವಟ್) ವಿ. ಆಳವಲ್ಲದ, ತೆಟ್ಟೆಯಾದ

**उथळा** (ಉಥಳಾ) ಪು. ಕಂಬದ ಆಧಾರ, ಬುಡದ ಕಲ್ಲು.

**उथाण** (ಉಥಾಣ್) ನ. ಸೆಕೆ, ಉಸಿರುಗಟ್ಟುವಿಕೆ.

**उदई–य** (ಉದಈ-ಯ) ಸ್ತ್ರೀ. ಗೆದ್ದಲು.

**उदईक** (ಉದಈಕ್) ಕ್ರಿ. ವಿ. ನಾಳೆ.

**उदक** (ಉದಕ್) ನ. ಸಂ. ನೀರು.

**–सोडणे** (–ಸೋಡಣೆ) ಕ್ರಿ. ಅ. ನೀರು ಬಿಡು, ನಿರಾಶನಾಗು.

**–क्रिया** (–ಕ್ರಿಯಾ) ಸ್ತ್ರೀ. ಉತ್ತರಕ್ರಿಯೆ.

**–शांत** (–ಶಾಂತ್) ಸ್ತ್ರೀ. ಮಂತ್ರದ ನೀರನ್ನು ಚಿಮುಕಿಸುವಿಕೆ.

**उदकाडी–ढी** (ಉದಕಾಡೀ-ಢೀ) ಸ್ತ್ರೀ. ಊದಿನಕಡ್ಡಿ

**उदकुंभ** (ಉದಕುಂಭ) ಪು. ಸಂ. ನೀರು ತುಂಬಿದ ಕೊಡ (ಬ್ರಾಹ್ಮಣರಿಗೆ ದಾನಮಾಡುವ)

**उदगयन** (ಉದಗಯನ) ನ. ಸಂ. ಉತ್ತರಾಯಣ.

**उदगामादगा** (ಉದಗಾಮಾದಗಾ) ವಿ. ಸೊಕ್ಕಿನ, ಗರ್ವಿಷ್ಠ.

**उदंड** (ಉದಂಡ್) ವಿ. ಸಂ. ಬಹಳ, ದೀರ್ಘ.

**–आयुष्य** (–ಆಯುಷ್ಯ) ನ. ಪೂರ್ಣಾಯುಷ್ಯ.

**उदधि** (ಉದಧಿ) ಪು. ಸಂ. ಸಮುದ್ರ.

**उदबत्ती** (ಉದಬತ್ತೀ) ಸ್ತ್ರೀ. ಊದಿನಕಡ್ಡಿ.

**उदमस्त** (ಉದಮಸ್ತ) ವಿ. ಉದ್ದಾಮ, ಸೊಕ್ಕಿನ, ಗರ್ವಿಷ್ಠ.

**उदमी** (ಉದಮೀ) ಪು. ಉದ್ದಿಮೆಗಾರ, ವ್ಯಾಪಾರಸ್ಥ.

**–चाल** (–ಚಾಲ್) ಸ್ತ್ರೀ. ವ್ಯಾಪಾರಸ್ಥರ ನಡತೆ.

**उदमेख** (ಉದಮೇಖ್) ಪು. ಉತ್ಸಾಹ, ಉತ್ಸುಕತೆ ಆತುರತೆ.

**उदमेखी** (ಉದಮೇಖೀ) ವಿ. ಉತ್ಸಾಹಿತ, ಆತುರ.

**उदमेखून** (ಉದಮೇಖೂನ್) ಕ್ರಿ. ವಿ. ಬೇಕಾಗಿ, ಉತ್ಸಾಹದಿಂದ.

**उदय** (ಉದಯ) ಪು. ಸಂ. ೧. ಮೂಡುವಿಕೆ (ಸೂರ್ಯ ಚಂದ್ರ ಮುಂ) ೨. ಉತ್ಕರ್ಷ.

**–गिरि** (–ಗಿರಿ) ಪು. ಉದಯಾಚಲ.

**उदयीक** (ಉದಯೀಕ್) ಕ್ರಿ. ವಿ. ನಾಳೆ, ನಾಳೆಗೆ.

**उदर** (ಉದರ್) ಪು. ಸಂ. ಹೊಟ್ಟೆ. ೨. ಜಲೋದರ ರೋಗ.

**–निर्वाह** (–ನಿರ್ವಾಹ) ಪು. **–भरण** (–ಭರಣ) ನ. ಹೊಟ್ಟೆ ತುಂಬಿಕೊಳ್ಳುವಿಕೆ.

**–सूत्र** (–ಸೂತ್ರ) ನ. ವ್ಯಾಸ.

**उदरी** (ಉದರೀ) ವಿ. ೧. ಜಲೋದರವಾದವ. ೨. ಕ್ರಿ. ವಿ. ಹೊಟ್ಟೆಯಿಂದ ಹುಟ್ಟಿದ.

**उदर्क** (ಉದರ್ಕ) ಪು. ಭವಿಷ್ಯತ್ಕಾಲ.

**उदव** (ಉದವ್) ಉದ್ಗಾರ ಕ. 'ಉಧೋ - ಉಧೋ' ಎಂಬ ಘೋಷ.

**–करणे** (–ಕರಣೇ) ಕ್ರಿ. ಸ. ಉಧೋ- ಉಧೋ ಅನ್ನು, ಸುತ್ತಿಮಾಡು.

**उदात्त** (ಉದಾತ್ತ) ವಿ. ಸಂ. ಶ್ರೇಷ್ಠ, ದೊಡ್ಡ ಮನಸ್ಸಿನ.

**उदान** (ಉದಾನ) ಪು. ಸಂ. ಒಂದು ವಾಯು. ೨. ಬಿಕ್ಕು. ೩. ಮರಣಸಮಯ.

**उदार** (ಉದಾರ) ವಿ. ಸಂ. ಕೊಡುಗೈಯ, ದಾನ ಶೂರ, ವಿಶಾಲದೃಷ್ಟಿಯುಳ್ಳ.

**–मतवादी** (–ಮತವಾದೀ) ವಿ. ಉದಾರಮತವುಳ್ಳವ, "ಲಿಬರಲ್"

**–उदराचे पोते** (ಉದಾರಾಚೇ ಪೋತೇ) ನಾಂ. ಬೇರೆಯವರ ಸೊತ್ತಿನ ಮೇಲೆ ಉದಾರನಾಗುವವ.

**उदास** (ಉದಾಸ್) ವಿ. ನಿರಾಶ, ಹತಾಶ.

**उदासी** (ಉದಾಸೀ) ವಿ. ಉದಾಸೀನ. ೨. ಪು. ಉದಾಸೀನಪಂಥದ ಸಾಧು.

**उदासीन** (ಉದಾಸೀನ್) ವಿ. ಸಂ. ಅನಾಸಕ್ತ, ಕಾಮ ಕ್ರೋಧಗಳಿಂದ ಮುಕ್ತನಾದ, ಅಪಕ್ಷಪಾತಿ, ತಟಸ್ಥ

**उदासीनता** (ಉದಾಸೀನತಾ) ಸ್ತ್ರೀ. ಸಂ. ಅನಾಸಕ್ತಿ ಪಕ್ಷಪಾತವಿಲ್ಲದಿರುವಿಕೆ.

**उदाहरण** (ಉದಾಹರಣ) ನ. ಸಂ. ಉದಾಹರಣೆ, ಮಾದರಿ, ದೃಷ್ಟಾಂತ.

**उदाहृत** (ಉದಾಹೃತ್) ವಿ. ಸಂ. ದೃಷ್ಟಾಂತಕೊಟ್ಟು ತಿಳಿಸಿಹೇಳಿದ.

**उदित** (ಉದಿತ್) ವಿ. ಸಂ. ಉದಯಿಸಿದ, ಏರಿದ, ಉತ್ಕರ್ಷಪಡೆದು ಮನಸ್ಸಿನಲ್ಲಿಮಾಡಿದ.

**–कार्य** (ಕಾರ್ಯ) ನ. ಒಮ್ಮೆಲೆ ಮಾಡಬೇಕಾಗಿ ಬಂದ ಕಾರ್ಯ.

**उदिमी** (ಉದಿಮೀ) ಪು. ವ್ಯಾಪಾರಸ್ಥ, ಉದ್ದಿಮೆಯುಳ್ಳವ.

**उदी** (ಉದೀ) ವಿ. ಅರ. ಊದೀಬಣ್ಣದ. ೨. ಅಂಗಾರ, ಪವಿತ್ರ ಬೂದಿ, ವಿಭೂತಿ.

**उदीची** (ಉದೀಚೀ) ಸ್ತ್ರೀ. ಸಂ. ಉತ್ತರದಿಕ್ಕು.

**उदीचीन** (ಉದೀಚೀನ) ವಿ. ಉತ್ತರದಿಕ್ಕಿನ, ಉದೀಚ್ಯ

**उदीम** (ಉದೀಮ್) ಪು. ವ್ಯಾಪಾರ, ಉದ್ದಿಮೆ.

**–धंदा** (–ಧಂದಾ) ಪು. ವ್ಯವಸಾಯ.

**–पट्टी** –(ಪಟ್ಟೀ) ಸ್ತ್ರೀ. ಉದ್ದಿಮೆಕರ.

**उदुंबर** (ಉದುಂಬರ್) ಪು. ಔದುಂಬರ, ಅತ್ತೀಗಿಡ.

**उदेउदे** (ಉದೇಉದೇ) ಉದ್ಗಾರ, ಉಧೋ-ಉಧೋ (ದೇವಿಯ ದೇವತೆಯ ಜಯಜಯಕಾರ).

**उदेणे** (ಉದೇಣೇ) ಕ್ರಿ. ಉದಯಹೊಂದು, ಉದಯಿಸು, ಏಳ್ಗೆಹೊಂದು.

**उदेल** (ಉದೇಲ್) ನ. ಅರ+ಮ. (ಊದ್+ಲೇಲ್) ಸುಗಂಧದ ಎಣ್ಣೆ.

I **उदो** (ಉದೋ) ಪು. ೧. ಉತ್ಕರ್ಷ, ೨. ಜಯಜಯಕಾರ.

**–उदोकरणे** (–ಉದೋಕರಣೇ) ಜಯಜಯಕಾರ ಮಾಡು, (ಲಾ) ಮುಖಸ್ತುತಿಮಾಡು.

II **उदो** (ಉದೋ) ಪು. ನಾಶ, ವಿನಾಶ.

**उद्गत** (ಉದ್ಗತ್) ವಿ. ಸಂ. ನಿಷ್ಪನ್ನ, ಉತ್ಪನ್ನ, ಹುಟ್ಟಿತ, ಹೊರಗೆಬಂದ.

**उद्गम** (ಉದ್ಗಮ) ಪು. ಸಂ. ಮೂಲ, ಜನ್ಮ, ಪ್ರಾರಂಭ.

**उद्गाता** (ಉದ್ಗಾತಾ) ಪು. ಸಂ. ಸಾಮವೇದಪಾಠಕ ಸಾಮವೇದ ಋತ್ವಿಜ.

**उद्गार** (ಉದ್ಗಾರ) ಪು. ಸಂ. ನುಡಿ, ಮಾತು, ದ್ಗಾರ.

**–णे** (–ಣೇ) ಕ್ರಿ. ಉದ್ಗಾರತೆಗೆ, ನುಡಿ, ಆವೇಶದಿಂದ ಮಾತನಾಡು.

**उद्गीरण** (ಉದ್ಗೀರಣ) ನ. ಸಂ. ಕಾರಿಕೊಳ್ಳುವಿಕೆ, ವಾಂತಿ.

**उद्गीर्ण** (ಉದ್ಗೀರ್ಣ) ವಿ. ಸಂ. ಕಾರಿಕೊಂಡ, ಹೊರಗೆಚೆಲ್ಲಿದ. ೨. ನ. ತುಚ್ಛ ಉದ್ಗಾರ.

**उद्घाटन** (ಉದ್ಘಾಟನ) ನ. ಸಂ. ತೆರೆಯುವಿಕೆ, ಉದ್ಘಾಟನೆ. ೨. ಬಹಿರಂಗಪಡಿಸುವಿಕೆ, (ಗುಟ್ಟು ಮುಂ.)

**उद्घोष** (ಉದ್‌ಘೋಷ್) ಪು. ಘೋಷಣೆ, ಜಯಜಯಕಾರ. ೨. ಡಂಗುರ ಸಾರುವಿಕೆ, ಘೋಷಣೆ.

**उद्याम** (ಉದ್ದಾಮ) ವಿ. ಸಂ. ಆವೇಶಯುಕ್ತ. ೨. ಅನಿಯಂತ್ರಿತ. ೩. ಸೊಕ್ಕಿನ. ೪. ಅವಮಾನ ಮಾಡುವವ. ೫. ದರ್ಪವುಳ್ಳವ, ಉಗ್ರ, ತೀವ್ರ.

**–पणा** (–ಪಣಾ) ಪು. ಉದ್ಧತತನ, ಅವನೀತ ನಡಾವಳಿ.

**उद्दिष्ट** (ಉದ್ದಿಷ್ಟ) ನ. ಸಂ. ಉದ್ದೇಶ, ಸಂಕಲ್ಪ.

**उद्दीपन** (ಉದ್ದೀಪನ) ನ. ಸಂ. ಉರಿಸುವಿಕೆ. ೨. ಚೇತರಗೊಳಿಸುವಿಕೆ. (ಹಸಿವೆ ಮುಂ.) ಬೆಳೆಸುವಿಕೆ. ೩. ಬೆಳಕು ತೋರುವಿಕೆ. ೪. ಹುರುಪು ಗೊಳಿಸುವಿಕೆ, ಕಾಮವಿಕಾರವನ್ನು ಹೆಚ್ಚಿಸುವಿಕೆ.

**उद्देश** (ಉದ್ದೇಶ) ಪು. ಸಂ. ಉದ್ದೇಶ, ಮನಸ್ಸಿನಲ್ಲಿಯ ಮಾತು, ಸಂಕಲ್ಪ. ೨. ಸಾರಾಂಶ.

**उद्देशणे** (ಉದ್ದೇಶಣೇ) ಕ್ರಿ. ಉದ್ದೇಶವನ್ನು ಇಟ್ಟುಕೊ, ಸಂಕಲ್ಪ ಮಾಡು.

**उद्देश्य** (ಉದ್ದೇಶ್ಯ) ನ. ಸಂಕಲ್ಪಿತ ಕಾರ್ಯ, ಗೊತ್ತು ಪಡಿಸಿದ ಕೆಲಸ, ಮನಸ್ಸಿನಲ್ಲಿದ್ದ ಯೋಜನೆ.

**उद्धट** (ಉದ್ಧಟ್) ವಿ. ಉದ್ಧತ, ಸೊಕ್ಕಿನವ, ಅವಿನೀತ.

**उद्धटाई** (ಉದ್ಧಟಾಈ) ಸ್ತ್ರೀ. ಸೊಕ್ಕು, ಅವಿನಯ, ಉದ್ಧತತನ.

**उद्धत** (ಉದ್ಧತ) ವಿ. ಸಂ. ಸೊಕ್ಕಿನ, ಉದ್ಧತ.

**उद्धरण** (ಉದ್ಧರಣ) ನ. ಸಂ. ಮೇಲೆ ತೆಗೆಯುವಿಕೆ. ೨. (ಪುಸ್ತಕ, ವ್ಯಾಖ್ಯಾನದಿಂದ) ನಕಲು ಮಾಡಿದ ಭಾಗ.

**उद्धरणे** (ಉದ್ಧರಣೇ) ಕ್ರಿ. ಉದ್ಧರಿಸು, ಉದ್ಧಾರ ಮಾಡು. ೨. (ವ್ಯಂಗ್ಯ) ಬೈಯು. ೩. ಉದ್ಧರಣೆಯನ್ನು ತೋರಿಸು.

**उद्धळण** (ಉದ್ಧಳಣ್) ಕ್ರಿ. ಪುಡಿಮಾಡು. ೨. ಹರಡು.

**उद्धर्ता** (ಉದ್ಧರ್ತಾ) ಪು. ಸಂ. ಉದ್ಧಾರಕ.

**उद्धार** (ಉದ್ಧಾರ) ಪು. ಸಂ. ಉದ್ಧಾರ, ಏಳ್ಗೆ.

**उद्धारक** (ಉದ್ಧಾರಕ) ಪು. ಸಂ. ಉದ್ಧಾರಮಾಡುವವ.

**उद्धारगत** (ಉದ್ಧಾರಗತ್) ಸ್ತ್ರೀ. ಸದ್ಗತಿ, ಮೋಕ್ಷ.

**उद्धृत** (ಉದ್ಧೃತ್) ವಿ. ಸಂ. ಎತ್ತಿಹಿಡಿದ. ೨. ಉದ್ಧರಣೆ ಮಾಡಿದ (ವಾಕ್ಯ, ಪಾಠ ಮುಂ.)

**उद्बंधन** (ಉದ್ಬಂಧನ್) ನ. ಸಂ. ಜೋತಾಡಿಸುವಿಕೆ, ಅಸ್ಥಿರವಾಗಿ ಇಡುವಿಕೆ.

**उद्बुद्ध** (ಉದ್ಬುದ್ಧ) ವಿ. ಸಂ. ಜಾಗ್ರತ, ಎಚ್ಚತ್ತ.

**उद्बोध** (ಉದ್ಬೋಧ) ವಿ. ಸಂ. ಪಾಠ, ಬೋಧೆ.

**उद्बोधक** (ಉದ್ಬೋಧಕ) ವಿ. ಎಚ್ಚರ ಗೊಳಿಸುವ, ಬೋಧೆಯುಳ್ಳ.

**उद्भट** (ಉದ್ಭಟ) ವಿ. ಸಂ. ಸಾಹಸಿಗ. ೨. ಕಠಿಣ.

**उद्भव** (ಉದ್ಭವ) ಪು. ಸಂ. ಜನನ, ಹುಟ್ಟು.

**–णे** (–ಣೇ) ಕ್ರಿ. ಅ. ಹುಟ್ಟು.

**उद्भिज्ज** (ಉದ್ಭಿಜ್ಜ) ನ. ಸಂ. ವನಸ್ಪತಿ ಸೃಷ್ಟಿ

**उद्भूत** (ಉದ್ಭೂತ) ವಿ. ಸಂ. ಹುಟ್ಟಿದ, ಉತ್ಪನ್ನವಾದ.

**उद्भेद** (ಉದ್ಭೇದ) ಪು. ಸಂ. ಭಂಗ. ೨. ಅಂಕುರ

**उद्यत** (ಉದ್ಯತ್) ವಿ. ಸಂ. ಸಿದ್ಧ, ಉತ್ಸುಕ, ತೊಡಗಿದ.

**उद्यम** (ಉದ್ಯಮ) ಪು. ಸಂ. ಉದ್ಯೋಗ, ಕೈಗಾರಿಕೆ, ಉದ್ದಿಮೆ.

**उद्यमी** (ಉದ್ಯಮೀ) ವಿ. ಸಂ. ಪರಿಶ್ರಮ ಪಡುವವ.

**उद्या** (ಉದ್ಯಾ) ಕ್ರಿ. ವಿ. ನಾಳೆ, ನಾಳೆಗೆ.

**उद्यान** (ಉದ್ಯಾನ್) ನ. ಸಂ. ತೋಟ, ಉಪವನ.

**उद्यापन** (ಉದ್ಯಾಪನ್) ನ. ಸಂ. ವ್ರತದ ಪರಿಹಾರ, ಉದ್ಯಾಪನ.

**उद्युक्त** (ಉದ್ಯುಕ್ತ) ವಿ. ಸಂ. ತೊಡಗಿದ.

**उद्योग** (ಉದ್ಯೋಗ) ಪು. ಸಂ. ಕೆಲಸ, ಬದುಕು, ಉದ್ಯೋಗ (ವ್ಯಂಗ್ಯ) ಕಾಯಕ, ಕುಚೇಷ್ಟೆ.

**उद्योगी** (ಉದ್ಯೋಗೀ) ವಿ. ಸಂ. ಕೆಲಸದಲ್ಲಿರುವವ, ಶ್ರಮಪಡುವವ, (ವ್ಯಂಗ್ಯ) ಕುಚೋದ್ಯತನ ಮಾಡುವವ.

**उद्रेक** (ಉದ್ರೇಕ) ಪು. ಸಂ. ಹೆಚ್ಚಳ. ೨. ವೇಗ. ೩. ಪೀಡೆ.

**उद्वर्तन** (ಉದ್ವರ್ತನ) ನ. ಸಂ. (ಮೂರ್ತಿ ಮುಂ.) ಸ್ವಚ್ಛಗೊಳಿಸುವಿಕೆ. ೨. (ಕೆಲಸದಿಂದ) ತೆಗೆದು ಹಾಕುವಿಕೆ.

**उद्वासन** (ಉದ್ವಾಸನ) ನ. ಸಂ. ತಳ್ಳಿಹಾಕುವಿಕೆ, ಅಟ್ಟಿಹಾಕುವಿಕೆ.

**उद्वाह** (ಉದ್ವಾಹ) ಪು. ಸಂ. ವಿವಾಹ, ಮದುವೆ.

**उद्विग्न** (ದ್ವಿಗ್ನ) ವಿ. ಸಂ. ಚಿಂತಾಕ್ರಾಂತ, ಯೋಚನೆ ಮಾಡುವವ.

**उद्वृत्त** (ಉದ್ವೃತ್ತ) ವಿ. ಸಂ. ವ್ಯಭಿಚಾರಿ, ದುರ್ವರ್ತನ ಮಾಡುವವ.

**उद्वेग** (ಉದ್ವೇಗ) ಪು. ಸಂ. ಖೇದ, ಕೋಪ, ಆವೇಶ, ಚಿಂತೆ.

**उधई–य** (ಉಧಈ–ಯ) ಸ್ತ್ರೀ. ಗೆದ್ದಲು.

**उधड–डा** (ಉಧಡ್–ಡಾ) ವಿ. ಅಳತೆಗೆಟ್ಟ. ೨. ಅಂದಾಜಿನಿಂದ (ಕೊಟ್ಟ).

**उधडणे** (ಉಧಡಣೇ) ಕ್ರಿ. ಹರಿ, ಚೂರುಮಾಡು, ಹಾಳುಮಾಡು.

**उधळ** (ಉಧಳ್) ಸ್ತ್ರೀ. ಮಿತಿಮೀರಿ ಮಾಡಿದ ವೆಚ್ಚ.

**–पट्टी** (ಪಟ್ಟೀ) ಸ್ತ್ರೀ ಮಿತಿಮೀರಿ ಮಾಡಿದ ಖರ್ಚು.

**उधळण** (ಉಧಳಣ) ಸ್ತ್ರೀ. ಹರಡುವಿಕೆ, ಚಲ್ಲುವಿಕೆ, ಹಾಳು.

**उधळणे** (ಉಧಳಣೇ) ಕ್ರಿ. ಸ. ಚಲ್ಲು, ತೂರು, ಹಾರಿಸು. ೨. ಮಿತಿಮೀರಿ ಖರ್ಚುಮಾಡು. ೩. ಅಟ್ಟಿಹಾಕು.

**मुक्ताफळे–** (ಮುಕ್ತಾಫಳೇ–) ಕ್ರಿ. ಮನಸ್ಸಿಗೆ ಬಂದಂತೆ ಮಾತನಾಡು.

**उधळा** (ಉಧಳಾ) ಪು. उधळ ನೋಡಿರಿ.

**उधळ्या** (ಉಧಳ್ಯಾ) ವಿ. ಮಿತಿಮೀರಿ ಖರ್ಚು ಮಾಡುವವ.

**उधाण** (ಉಧಾಣ) ನ. ಭರತಿ, ಆವೇಶ, ಅತಿರೇಕ. ೨. (ಪಶುಗಳ) ಬೆದಿಗೆ.

**–णे** (–ಣೇ) ಆವೇಶ ಹೊಂದು, ಕಾಮೋದ್ದೀಪನ ಹೊಂದು.

**उधार** (ಉಧಾರ) ವಿ. ಕೈಗಡ ತಂದ, ಕಡತೆಗೆದುಕೊಂಡ, ಉದ್ದರಿಯ. ೨. ಪು. ಕೈಗಡ, ಉದ್ದರಿ.

**उधारी** (ಉಧಾರೀ) ಸ್ತ್ರೀ. ಕೈಗಡ ತರುವಿಕೆ, ಉದ್ದರಿ ಮಾರಾಟ. ೨. ಉದ್ದರಿ, ಸಾಲ.

**–उसनवारी** (–ಉಸನವಾರೀ) ಸ್ತ್ರೀ. ಕೈಗಡ, ಸಾಲ ಮಾಡಿ ಕೈಕೊಂಡ ವ್ಯವಹಾರ.

**उधाळी** (ಉಧಾಳೀ) ಸ್ತ್ರೀ. ಜಗಿತ, ಹಾರಾಟ.

**उधी** (ಉಧೀ) ಸ್ತ್ರೀ. ನಿರ್ಣಯ, ತೀರ್ಪು.

**उधेल** (ಉಧೇಲ್) ವಿ. ಮೈಲಿಎದ್ದ.

**–तोंड** (–ತೋಂಡ್) ನ. ಮೈಲಿಎದ್ದ ಮುಖ.

**उध्वस्त** (ಉಧ್ವಸ್ತ) ವಿ. ಸಂ. ಹಾಳಾದ, ನಾಶಹೊಂದಿದ

**उनाड** (ಉನಾಡ್) ವಿ, ತುಂಟ, ಅವಿನೀತ, ಅಭ್ಯಾಸ ಮಾಡದವ, ಕುಚೋದ್ಯದ. ೨. ಅನಿಯಂತ್ರಿತ.

**–मैना** (ಮೈನಾ) ಸ್ತ್ರೀ- ಕೆಟ್ಟನಡತೆಯ ಹೆಂಗಸು.

**उनाडकी** (ಉನಾಡಕೀ) ಸ್ತ್ರೀ. ಕುಚೋದ್ಯತನ, ತುಂಟತನ.

**उनाडणे** (ಉನಾಡಣೇ) ಕ್ರಿ. ಕುಚೋದ್ಯತನಮಾಡು, ಅಭ್ಯಾಸ ಮಾಡದಿರು. ೨. ತಿರುಗಾಡು.

**उनू–(न्हू)–न** (ಉನೂ (–ನ್ಹೂ–)ನ್) ವಿ. ಬಿಸಿಬಿಸಿ.

**उन्नत** (ಉನ್ನತ) ವಿ. ಸಂ. ಎತ್ತರವಾದ, ಶ್ರೇಷ್ಠ, ಉನ್ನತಿ ಪಡೆದ.

**उन्नति** (ಉನ್ನತಿ) ಸ್ತ್ರೀ. ಸಂ. ಉತ್ಕರ್ಷ, ಬೆಳಿಗೆ, ಎತ್ತರ.

**उन्नद्ध** (ಉನ್ನದ್ಧ) ವಿ. ಸಂ. ಗರ್ವಿತ, ಸೊಕ್ಕಿದ, ಕೊಬ್ಬಿದ.

**उन्नयन** (ಉನ್ನಯನ) ನ. ಸಂ. ಉನ್ನತಿಗೆಏರಿಸುವಿಕೆ. ೨. ಅಪಹರಣ.

**उन्मत्त** (ಉನ್ಮತ್ತ) ವಿ. ಸಂ. ಸೊಕ್ಕೇರಿದ. ೨. ಕುಡಿದ, ಅಮಲೇರಿದ.

**उन्मन** (ಉನ್ಮನ) ವಿ. ಸಂ. ನಿರಾಶೆಗೊಂಡ, ಖಿನ್ನ, ವಿರಕ್ತ.

**उन्मळणे** (ಉನ್ಮಳಣೇ) ಕ್ರಿ. ಕಿತ್ತುಹಾಕು.

**उन्माद** (ಉನ್ಮಾದ) ಪು. ಸಂ. ಹುಚ್ಚು, ಭ್ರಮೆ. ೨. ಉದ್ಧತತನ.

**उन्मादक** (ಉನ್ಮಾದಕ) ವಿ. ಸಂ. ಅಮಲೇರಿಸುವ.

**उन्मान** (ಉನ್ಮಾನ) ನ. ಸಂ. ತೂಕ.

**उन्मार्ग** (ಉನ್ಮಾರ್ಗ) ಪು. ಸಂ. ಕೆಟ್ಟಮಾರ್ಗ, ಕುಪಂಥ

**उन्मीलन** (ಉನ್ಮೀಲನ) ನ. ಸಂ. ಅರಳುವಿಕೆ.

**उन्मुख** (ಉನ್ಮುಖ) ವಿ. ಸಂ. ಆಕೃಷ್ಟ, ಉದ್ಯತ, ಸಿದ್ಧ.

**उन्मूलन** (ಉನ್ಮೂಲನ್) ನ. ಸಂ. ಉಚ್ಛೇದ, ನಾಶ, ಕಿತ್ತು ಹಾಕುವಿಕೆ.

**उन्ह–** (ಉನ್ಹ) ऊन ನೋಡಿರಿ.

**उन्हाळा** (ಉನ್ಹಾಳಾ) ಪು. ಬೇಸಿಗೆ, ಗ್ರೀಷ್ಮ.

**उन्हाळे** (ಉನ್ಹಾಳೇ) ನ. ಬಿಸಿನೀರಿನ ಬುಗ್ಗೆ, ಪು. ಬಹುವಚನ, ಬಿಸಿಲಿನ ಬಾಧೆ.

**उप** (ಉಪ) ಪ್ರತ್ಯಯ, ಸಂ. ಹತ್ತಿರ, ಕೆಳಗಿನ.

**उपकथा** (ಉಪಕಥಾ) ಸ್ತ್ರೀ. ಸಂ. ಉಪಾಖ್ಯಾನ.

**उपकरण** (ಉಪಕರಣ) ನ. ಸಂ. ಸಾಧನ, ಸಲಕರಣೆ.

**उपकर्ता** (ಉಪಕರ್ತಾ) ಪು. ಸಂ. ಉಪಕಾರ ಮಾಡುವವ.

**उपकार** (ಉಪಕಾರ್) ಪು. ಸಂ. ನೆರವು, ಸಹಾಯ, ಪಕಾರ.

**उपकारक** (ಉಪಕಾರಕ್) ವಿ. ಸಂ. ನೆರವಾಗುವ, ಅನುಕೂಲ.

**उपकारी** (ಉಪಕಾರೀ) ವಿ. ಸಂ. ಉಪಕಾರಮಾಡುವವ, ಪರೋಪಕಾರಿ.

**उपकृत** (ಉಪಕೃತ) ವಿ. ಸಂ. ಉಪಕಾರ ಪಡೆದವ, ಸಹಾಯ ಪಡೆದವ.

**उपक्रम** (ಉಪಕ್ರಮ) ಪು. ಸಂ. ಪ್ರಾರಂಭ, ಹಂಚಿಕೆ, ಹೊಸರೀತಿ.

**उपग्रह** (ಉಪಗ್ರಹ) ಪು. ಸಂ. ಕೃತ್ರಿಮ ಗ್ರಹ. ಸ್ಪುಟನಿಕ್.

**उपघात** (ಉಪಘಾತ್) ಪು. ಸಂ. ಆಪತ್ತು.

**उपचय** (ಉಪಚಯ) ಪು. ವೃದ್ಧಿ, ಉನ್ನತಿ.

**उपचार** (ಉಪಚಾರ) ಪು. ಸಂ. ಉಪಾಯ, ಚಿಕಿತ್ಸೆ, ಉಪಚಾರ. ೨. ಸೇವೆ. ೩. ಸಾಧನ.

**उपज** (ಉಪಜ್) ಪು. ಉತ್ಪತ್ತಿ, ಉತ್ಪನ್ನ, ಬೆಳೆ, ಹುಟ್ಟುವಳಿ.

**उपजत** (ಉಪಜತ್) ಕ್ರಿ. ವಿ. ಜನ್ಮದಾರಭ್ಯ.

**–आंधळा** (–ಆಂಧಳಾ) ಪು. ಹುಟ್ಟುಗುರುಡ.

**–गुण** (–ಗುಣ) ಬಾಲ್ಯದಿಂದ ಬಂದ ಸ್ವಭಾವ.

**उपजविणे** (ಉಪಜವಿಣೆ) ಕ್ರಿ. ಹುಟ್ಟಿಸು.

**उपजाति** (ಉಪಜಾತಿ) ಸ್ತ್ರೀ. ಸಂ. ಒಳಜಾತಿ. ೨. ಒಂದು ವೃತ್ತ.

**उपजीवन** (ಉಪಜೀವನ) ನ. ಸಂ. ಹೊಟ್ಟೆ ಹೊರೆಯುವಿಕೆ, ಉದರ ಭರಣ. ೨. ವ್ಯವಸಾಯ ಬಾಳು.

**उपजीविका** (ಉಪಜೀವಿಕಾ) ಸ್ತ್ರೀ. ಸಂ. ಬಾಳು, ಬದುಕು, ಉಪಜೀವನ.

**उपट** (ಉಪಟ್) ಸ್ತ್ರೀ. ಸಮೃದ್ಧಿ. ೨. ತೃಪ್ತಿ.

**–सुंभ** (–ಸುಂಭ) ವಿ. ಚಂಚಲ.

**उपटणे** (ಉಪಟಣೇ) ಕ್ರಿ. ಸ. ಕಿತ್ತು, ಕೀಳು. ೨. ತೆಗೆದುಕೊ. ೩. ವಶಪಡಿಸಿಕೊ. ೪. ಮೋಸದಿಂದ ಸಂಪಾದಿಸು.

**उपटचा** (ಉಪಟ್ಯಾ) ಪು. ಮೋಸದಿಂದ ಕಸಿದುಕೊಳ್ಳುವವ.

**उपडणे** (ಉಪಡಣೇ) ಕ್ರಿ. ಅ. ಹೊರಸೂಸು, (ಪಾತ್ರೆಯಿಂದ) ಹೊರಗೆ ಬರು.

**उपडा** (ಉಪಡಾ) ವಿ. ತಿರುವಿದ, ತಲೆ ಕೆಳಗಾದ, ಡಬ್ಬುಹಾಕಿದ.

**उपणणी** (ಉಪಣಣೀ) ಸ್ತ್ರೀ. (ಧಾನ್ಯ ಮುಂ) ತೂರುವಿಕೆ, ಹಸನಾಗಿ ಮಾಡುವಿಕೆ.

**उपणणे** (ಉಪಣಣೇ) ಕ್ರಿ. ಧಾ. (ಗಾಳಿಯಲ್ಲಿ) ತೂರಿಕೊ.

**उपदंश** (ಉಪದಂಶ) ಪು. ಸಂ. ಪರಂಗಿ ಹುಣ್ಣು, ಉಪದಂಶ.

**उपदेश** (ಉಪದೇಶ) ಪು. ಸಂ. ಸಲಹೆ, ಬುದ್ಧಿಯ ಮಾತು. ಉಪದೇಶ.

**–णे** (–ಣೇ) ಕ್ರಿ. ವಿ. ಉಪದೇಶಮಾಡು.

**उपदेशकर्ता** (ಉಪದೇಶಕರ್ತಾ) ಪು. ಉಪದೇಶಕ.

**उपद्रव** (ಉಪದ್ರವ) ಪು. ಸಂ. ತೊಂದರೆ, ಕಷ್ಟ, ಕುಚೋದ್ಯತನ.

**उपद्रवी** (ಉಪದ್ರವೀ) ವಿ. ಸಂ. ತೊಂದರೆ ಕೊಡುವ.

**उपद्रष्टा** (ಉಪದ್ರಷ್ಟಾ) ಪು. ಸಂ. ಯಜ್ಞದಲ್ಲಿಯ ಹೋತಾರ.

**उपद्वीप** (ಉಪದ್ವೀಪ) ಪು. ಸಂ. ದ್ವೀಪಕಲ್ಪ.

**उपद्व्याप** (ಉಪದ್‌ವ್ಯಾಪ) ಪು. ತರಲೆ, ತುಂಟತನ, ಕುಚೋದ್ಯತನ, ಪೀಡೆ, ನಿರರ್ಥಕವಾದ ಉದ್ಯೋಗ.

**उपद्व्यापी** (ಉಪದ್‌ವ್ಯಾಪೀ) ವಿ. ಸುಮ್ಮನೆ ಕೂಡದವ, (ನಿರರ್ಥಕವಾಗಿ) ಶ್ರಮಪಡುವವ.

**उपधातु** (ಉಪಧಾತು) ಪು. ಸಂ. ಮಿಶ್ರಧಾತು. ೨. ಶರೀರದಿಂದ ಹೊರಬೀಳುವ ದ್ರವ.

**उपधान** (ಉಪಧಾನ) ನ. ಸಂ. ಒಬ್ಬನ ಗುಣ ಬೇರೊಬ್ಬನಿಗೆ ತಗಲುವಿಕೆ.

**उपधान्य** (ಉಪಧಾನ್ಯ) ನ. ಸಂ. (ಬತ್ತ, ಜೋಳ ಮುಂ. ಬಿಟ್ಟು) ಉಳಿದ ಧಾನ್ಯ (ರಾಗಿ ಮುಂ.)

**उपनगर** (ಉಪನಗರ್) ನ. ಸಂ. ದೊಡ್ಡ ಪಟ್ಟಣದ ಬಳಿಯಲ್ಲಿಯ ಚಿಕ್ಕ ವಸತಿ, ಊರು.

**उपनदी** (ಉಪನದೀ) ಸ್ತ್ರೀ. ಸಂ. (ಮುಖ್ಯ ನದಿಗೆ ಕೂಡುವ) ಚಿಕ್ಕ ನದಿ.

**उपनयन** (ಉಪನಯನ) ನ. ಸಂ. ಮುಂಜಿ, ಮುಂಜಿವೆ, ಮೌಂಜೀ ಬಂಧನ.

**उपनाम** (ಉಪನಾಮ) ನ. ಸಂ. ಅಡ್ಡಹೆಸರು, ಕುಲನಾಮ.

**उपनेत्र** (ಉಪನೇತ್ರ) ಪು. ಸಂ. ಕನ್ನಡಕ, ಚಾಳೀಸು.

**उपन्यास** (ಉಪನ್ಯಾಸ್) ಪು. ಸಂ. ಸಾನ್ನಿಧ್ಯ. ೨. ಮಂಡನ, ಪ್ರಸ್ತಾವನೆ, ಪೀಠಿಕೆ.

**उपपती** (ಉಪಪತೀ) ಪು. ಸಂ. ಜಾರ, ಮಿಂಡ.

**उपपत्ती** (ಉಪಪತ್ತೀ) ಸ್ತ್ರೀ. (ಶಬ್ದದ) ಮೂಲ. ೨. ಸಂಶೋಧನೆ. ೩. ಪ್ರತಿಪಾದನ, ಮನವರಿಕೆಯಾಗುವಂತೆ ಹೇಳಿದ ಅರ್ಥ.

**उपपत्नी** (ಉಪಪತ್ನೀ) ಸ್ತ್ರೀ. ಸಂ. ಇಟ್ಟುಕೊಂಡ ಹೆಣ್ಣು, ಸೂಳೆ.

**उपपद** (ಉಪಪದ) ನ. ಸಂ. ನಾಮಾಭಿಧಾನ (ವ್ಯಾಕರಣದಲ್ಲಿ) ಉಪಪದ. ೨. ಪದವಿ, ಬಹುಮಾನ.

**उपपन्न** (ಉಪಪನ್ನ) ವಿ. ಸಂ. ಪ್ರಾಪ್ತವಾದ, ಆಗಮಿಸಿದ, ದೊರೆತ.

**उपपादन** (ಉಪಪಾದನ) ನ. ಸಂ. ಪ್ರತಿಪಾದನ, ಹೇಳುವಿಕೆ.

**उपभुक्त** (ಉಪಭುಕ್ತ) ವಿ. ಸಂ. ಉಪಯೋಗಿಸಿದ, ಉಪಭೋಗಿಸಿದ.

**उपभोक्ता** (ಉಪಭೋಕ್ತಾ) ಪು. ಸಂ. ಉಪಭೋಗಿಸುವವ, ತಿಳಿಸುವವ.

**उपभोग** (ಉಪಭೋಗ) ಪು. ಸಂ. ಬಳಿಕೆ, ಉಪಭೋಗ, ಉಪಯೋಗ.

**–णे** (–ಣೇ) ಕ್ರಿ. ಉಪಭೋಗಿಸು.

**उपभोग्य** (ಉಪಭೋಗ್ಯ) ವಿ. ಸಂ. ಉಪಭೋಗಿಸಲಿಕ್ಕೆ ಯೋಗ್ಯವಾದ, ಬಳಕೆಯ.

**उपमर्द** (ಉಪಮರ್ದ) ಪು. ಸಂ. ಅಪಮಾನ, ಅವಗಣನೆ.

**उपमा** (ಉಪಮಾ) ಸ್ತ್ರೀ. ಸಂ. ಉದೃಷ್ಟಾಂತ, ಉಪಮೆ, ಹೋಲಿಕೆ. ೨. ಪು. ಉಪ್ಪಿಟ್ಟು.

**उपमान** ( ಪಮಾನ) ನ. ಸಂ. ಹೋಲಿಕೆಯ ವಸ್ತು.

**उपमेय** (ಉಪಮೇಯ) ನ. ಸಂ. ಹೋಲಿಸುವ ವಸ್ತು.

**उपयुक्त** (ಉಪಯುಕ್ತ) ವಿ. ಸಂ. ಕೆಲಸಕ್ಕೆ ಬರುವ, ಉಪಯುಕ್ತ.

**उपयोग** (ಉಪಯೋಗ) ಪು. ಸಂ. ಬಳಕೆ, ಉಪಯೋಗ.

**उपयोगी** (ಉಪಯೋಗೀ) ವಿ. ಸಂ. ಉಪಯೋಗಕ್ಕೆ ಬರುವ, ನೆರವಾಗುವ.

**उपर** (ಉಪರ್) ಅವ್ಯಯ. ಹಿಂ. ಮೇಲೆ (ಇನ್ನು) ಮುಂದೆ.

**या–** (ಯಾ–) ಇನ್ನು ಮುಂದೆ.

**–टपका** (–ಟಪಕಾ) ನಿಷ್ಕಾರಣ, ದೋಷಾರೋಪಣ.

**उपरंडणे** (ಉಪರಂಡಣೇ) ಕ್ರಿ. ಸ. ತಿರುವಿ ಇಡು, ಡಬ್ಬುಹಾಕು.

**उपरणे** (ಉಪರಣೇ) ನ. ಹೊರುವ ವಸ್ತ್ರ, ಒಲ್ಲಿ, ಸೆಲ್ಲೆ.

**उपरत** (ಉಪರತ್) ವಿ. ಸಂ. ನಿರಾಶೆ ಹೊಂದಿದವ.

**उपरती** (ಉಪರತೀ) ಸ್ತ್ರೀ. ಸಂ. ಮೋಹವಿಲ್ಲದಾಗುವಿಕೆ.

**उपराम** (ಉಪರಾಮ) ಪು. ಸಂ. ನಿಲ್ಲುವಿಕೆ, ವೈರಾಗ್ಯ ೨. ಮರಣ.

**उपराग** (ಉಪರಾಗ) ಪು. ಗ್ರಹಣ. ೨. ವೈರಾಗ್ಯ. ೩. ರಾಗಿಣಿ.

**उपराठणे** (ಉಪರಾಠಣೇ) ಕ್ರಿ. ಸ. उफराठणे ನೋ.

**उपरांत** (ಉಪರಾಂತ್) ಅವ್ಯಯ. ಮೇಲೆ, ಮುಂದೆ.

**या–** (ಯಾ–) ಇನ್ನು ಮುಂದೆ.

**उपराळा** (ಉಪರಾಳಾ) ಪು. (ಭಾರ ವಾಹಕ ಪಶುವಿನ ಮೇಲೆ ಹೇರಿದ) ಸಮಾನ ಭಾಗ. ೨. ಸಂತುಲನ. ೩. ಸಹಾಯ. ೪. ಲುಕ್ಸಾನು ತುಂಬಿಕೊಡುವಿಕೆ. ೫. ಸುಳ್ಳು ದೋಷಾರೋಪಣ.

**उपरी** (ಉಪರೀ) ಅ. ಸಂ. ಮೇಲೆ.

**–निर्दिष्ट** (–ನಿರ್ದಿಷ್ಟ) ಅ. ಮೇಲೆ ಹೇಳಿದ.

**उपरी** (ಉಪರೀ) ವಿ. ಹಿಂ. ಮೇಲಿನ, ತೋರಿಕೆಯ.

**उपरोध** (ಉಪರೋಧ) ಪು. ಸಂ. ವ್ಯಂಗ್ಯ, ಚುಚ್ಚುಮಾತು.

**उपल** (ಉಪಲ್) ಕಲ್ಲು.

**उपलब्ध** (ಉಪಲಬ್ಧ) ವಿ. ಸಂ. ದೊರೆತ.

**उपलब्धि** (ಉಪಲಬ್ಧಿ) ಸ್ತ್ರೀ. ಸಂ. ಪ್ರಾಪ್ತಿ, ಅರ್ಜನ, ಸಾಧನೆ.

**उपलभ्य** (ಉಪಲಭ್ಯ) ವಿ. ಸಂ. ದೊರಕುವ, ಸಿಗುವ, ಅಸ್ತಿತ್ವದಲ್ಲಿದ್ದ.

**उपलक्षण** (ಉಪಲಕ್ಷಣ) ನ. ಸಂ. ತರಹ, ಬಗೆ, ಲಕ್ಷಣ.

**उपलक्षित** (ಉಪಲಕ್ಷಿತ) ವಿ. ಸಂ. ಅಪ್ರತ್ಯಕ್ಷವಾಗಿ ಹೇಳಿದ.

**उपलक्षून** (ಉಪಲಕ್ಷೂನ್) ಕ್ರಿ. ವಿ. ಉದ್ದೇಶಿಸಿ, ಕುರಿತು.

**उपलाणा** (ಉಪಲಾಣಾ) ವಿ. ಜೀನು ಹಾಕದ (ಕುದುರೆ).

**उपलेप** (ಉಪಲೇಪ) ಪು. ಸಂ. ಸವರುವಿಕೆ, ಲೇಪ.

**उपवन** (ಉಪವನ್) ನ. ಸಂ. ತೋಟ.

**उपवर** (ಉಪವರ್) ವಿ. ಸಂ. ಲಗ್ನದ ಸಲುವಾಗಿ ವಯಸ್ಸಿಗೆ ಬಂದ –ವಯಸ್ಸು ಮೀರಿದ (ಕನ್ಯೆ)

**उपवस्त्र** (ಉಪವಸ್ತ್ರ) ನ. ಸಂ. ವಸ್ತ್ರ, ಅಂಗವಸ್ತ್ರ. ೨. ಸೂಳೆ.

**उपवासी** (ಉಪವಾಸೀ) ವಿ. ಸಂ. ಉಣ್ಣದವ.

**उपविष्ट** (ಉಪವಿಷ್ಟ) ವಿ. ಸಂ. ಕುಳಿತ.

**उपवीत** (ಉಪವೀತ್) ನ. ಸಂ. ಜನಿವಾರ.

**उपशम** (ಉಪಶಮ್) ಪು. ಸಂ. ಶಾಂತಿ. ೨. ಕೊನೆ, ವಿರಾಮ.

**उपशमन** (ಉಪಶಮನ) ನ. ಸಂ. ವಾಸಿಯಾಗುವಿಕೆ, (ಪೀಡೆ) ಕಡಿಮೆಯಾಗುವಿಕೆ.

**उपसणे** (ಉಪಸಣೇ) ಕ್ರಿ. ಸ. ತೆರವು ಮಾಡು, (ಸಾಮಾನು) ಹೊರಗೆ ತೆಗೆ.

**उपसर्ग** (ಉಪಸರ್ಗ) ಪು. ಸಂ. ಪೀಡೆ, ತೊಂದರೆ. ೨. (ವ್ಯಾಕರಣ) ಉಪಸರ್ಗಾವ್ಯಯ, (ಪ್ರಿಪೋಜಿಶನ್).

**उपसंहार** (ಉಪಸಂಹಾರ) ಪು. ಸಂ. ಕೊನೆ, ಅಂತ, ಕೊನೆಯಮಾತು, ಸಿಂಹಾವಲೋಕನ.

**उपसळा** (ಉಪಸಳಾ) ವಿ. ತೊಂದರೆಕೊಡುವ.

**उपसागर** (ಉಪಸಾಗರ್) ಪು. ಸಂ. ಸಣ್ಣ ಸಮುದ್ರ, ದೊಡ್ಡ ಆಖಾತ.

**उप–ब–साण** (ಉಪ-ಬ-ಸಾಣ್) ಸ್ತ್ರೀ. ಕೆಟ್ಟವಾಸನೆ, ನಾತ.

**उपसारा** (ಉಪಸಾರಾ) ಪು. ಮನೆಯಲ್ಲಿಯ ಚಿಕ್ಕ ಪುಟ್ಟ ಸಾಮಗ್ರಿ.

**उपसावणे** (ಉಪಸಾವಣೇ) ಕ್ರಿ. ಅ. ಸಹಿಸು, ತಾಳು.

**उपसूचक** (ಉಪಸೂಚಕ್) ಪು. ಸಂ. ಗೊತ್ತುವಳಿಯನ್ನು ತಿದ್ದುವವ.

**उपसूचना** (ಉಪಸೂಚನಾ) ಸ್ತ್ರೀ. ಸಂ. ಗೊತ್ತುವಳಿಯನ್ನು ತಿದ್ದುವ ಸೂಚನೆ.

**उपस्कर** (ಉಪಸ್ಕರ್) ನ. ಸಂ. ಪೂರಕ ದ್ರವ್ಯ, ಘಟಕ.

**उपस्थ** (ಉಪಸ್ಥ) ನ. ಸಂ. ಜನನೇಂದ್ರಿಯ.

**उपस्थान** (ಉಪಸ್ಥಾನ) ನ. ಸಂ. ಗುಪ್ತಮಂತ್ರ.

**उपस्थापन** (ಉಪಸ್ಥಾಪನ) ನ. ಸಂ. ಸೇವೆ. ೨. ಹುಟ್ಟಿಸುವಿಕೆ, ನೆರವೇರಿಸುವಿಕೆ.

**उपस्थित** (ಉಪಸ್ಥಿತ್) ವಿ. ಸಂ. ಸನ್ನಿಧ, ಎದ್ದ, ಹತ್ತಿರ ಇದ್ದ, ಹಾಜರ ಇದ್ದ.

**उपस्थिति** (ಉಪಸ್ಥಿತಿ) ಸ್ತ್ರೀ. ಸಂ. ಸನ್ನಿಧಾನ, ಸಾನ್ನಿಧ್ಯ, ಹತ್ತಿರ ಇರುವಿಕೆ, ಹಾಜರಿ.

**उपहत** (ಉಪಹತ್) ವಿ. ಸಂ. ನಿರಾಶಗೊಳಿಸಿದ, ಗಾಯಗೊಳಿಸಿದ.

**उपहसित** (ಉಪಹಸಿತ) ವಿ. ಸಂ. ನಗೆಗೇಡಾದ, ಉಪಹಾಸಕ್ಕೆ ಗುರಿಯಾದ.

**उपहार** (ಉಪಹಾರ್) ಪು. ಸಂ. ಕಾಣಿಕೆ, ಉಡುಗರೆ

**उपहास** (ಉಪಹಾಸ್) ಪು. ಸಂ. ನಗೆ, ಚೇಷ್ಟೆ. ೨. ಅಪಮಾನ.

**उपहासास्पद** (ಉಪಹಾಸಾಸ್ಪದ್) ವಿ. ಸಂ. ಹಾಸ್ಯಾಸ್ಪದ, ನಗೆಗೇಡಾದ.

**उपहास्य** (ಉಪಹಾಸ್ಯ) ವಿ. ಸಂ. ನಗೆಯ, ಚೇಷ್ಟೆಯ

**उपळी** (ಉಪಳೀ) ಸ್ತ್ರೀ. ಮಳೆಯಿಂದ ಉಂಟಾಗುವ ಭೂಮಿಯಲ್ಲಿಯ ಬಿರುಕು.

**उपळणे** (ಉಪಳಣೇ) ಕ್ರಿ. ಅ. ಹರಿ, ಹೊರಸೂಸು

**उपाकर्म** (ಉಪಾಕರ್ಮ) ನ. ಸಂ. ಹೊಸ ಜನಿವಾರ ಹಾಕುವ ವಿಧಾನ.

**उपाख्यान** (ಉಪಾಖ್ಯಾನ) ನ. ಸಂ. ಚಿಕ್ಕ ಆಖ್ಯಾನ, ನಡುಗತೆ, ಅಡ್ಡಕತೆ.

**उपांग** (ಉಪಾಂಗ್) ನ. ಸಂ. ಭಾಗ, ಅವಯವ.

**उपांत** (ಉಪಾಂತ್) ವಿ. ಸಂ. ಮುಗಿಯಲಿಕ್ಕೆಬಂದ, ಮುಗಿಯುವ.

**उपांत्य** (ಉಪಾಂತ್ಯ) ವಿ. ಸಂ. ಕೊನೆಯ, ಮುಂಚಿನ

**–फेरी** (–ಫೇರೀ) ಸ್ತ್ರೀ. ಕೊನೆಯ ಪಂದ್ಯಾಟದ ಮುಂಚಿನ ಆಟ, "ಸೆಮಿ ಫಾಯನಲ್"

**उपादान** (ಉಪಾದಾನ) ನ. ಸಂ. ಸ್ವೀಕಾರ.

**उपादेय** (ಉಪಾದೇಯ) ವಿ. ಸಂ. ಪಡೆಯತಕ್ಕ.

**उपाधि** (ಉಪಾಧಿ) ಸ್ತ್ರೀ. ಸಂ. ಬಿರುದು. ೨. ಪ್ರಸಂಗ. ೩. ಬಿಕ್ಕಟ್ಟು, ತೊಂದರೆ, ಅಡ್ಡಿ.

**उपाध्यक्ष** (ಉಪಾಧ್ಯಕ್ಷ) ಪು. ಸಂ. ಅಧ್ಯಕ್ಷನ ಕೆಳಗಿನವ.

**उपाध्याय** (ಉಪಾಧ್ಯಾಯ) ಪು. ಸಂ. ಶಿಕ್ಷಕ, ಗುರು.

**उपाय** (ಉಪಾಯ) ಪು. ಸಂ. ಯುಕ್ತಿ, ಹಂಚಿಕೆ. ೨. ಆರೈಕೆ.

**उपार्जन** (ಉಪಾರ್ಜನ್) ನ. ಸಂ. ಗಳಿಕೆ, ಪ್ರಾಪ್ತಿ, ಸಂಪಾದನೆ.

**उपार्जित** (ಉಪಾರ್ಜಿತ್) ವಿ. ಸಂ. ಗಳಿಸಿದ, ದೊರಕಿಸಿದ, ಸಂಪಾದಿಸಿದ.

**–वडिलोपार्जित** (–ವಡಿಲೋಪಾರ್ಜಿತ್) ವಿ. ಹಿರಿಯರು ಗಳಿಸಿದ, ಪೈತೃಕ.

**उपाशी** (ಉಪಾಶೀ) ವಿ. ಉಣ್ಣದ, ಹಸಿದ.

**उपास** (ಉಪಾಸ್) ಪು. ಉಪವಾಸ, ಉಣ್ಣದಿರುವಿಕೆ, ವ್ರತ.

**–तापास** (–ತಾಪಾಸ್) ಪು. ಅನಶನವ್ರತ.

**उपासना** (ಉಪಾಸನಾ) ಸ್ತ್ರೀ. ಸಂ. ಆರಾಧನೆ, ಪೂಜೆ

**उपासमार** (ಉಪಾಸ್‌ಮಾರ್) ಸ್ತ್ರೀ. ಸಂ. ಹೊಟ್ಟೆಗೆ ಏನೂ ಸಿಕ್ಕದಿರುವಿಕೆ, ಬಡತನ.

**उपास्य** (ಉಪಾಸ್ಯ) ವಿ. ಸಂ. ಪೂಜೆಗೆ ಯೋಗ್ಯವಾದ, ಆರಾಧ್ಯ.

**उपाहार** (ಉಪಾಹಾರ) ಪು. ಅಲ್ಪಾಹಾರ, ಉಪಾಹಾರ ಫರಾಳ, ಫಳಾರ.

**उपेग** (ಉಪೇಗ್) ಪು. ಉಪಯೋಗ, ಉದ್ದೇಶ, ಲಾಭ

**उपेक्षणीय** (ಉಪೇಕ್ಷಣೀಯ) ವಿ. ಸಂ. ಮರೆತುಬಿಡಲಿಕ್ಕೆ ಯೋಗ್ಯವಾದ, ದುರ್ಲಕ್ಷ್ಯಮಾಡಬಹುದಾದ.

**उपेक्षा** (ಉಪೇಕ್ಷಾ) ಸ್ತ್ರೀ. ಸಂ. ದುರ್ಲಕ್ಷ, ಲಕ್ಷಗೊಡದಿರುವಿಕೆ.

**उपेक्षित** (ಉಪೇಕ್ಷಿತ್) ವಿ. ಸಂ. ದುರ್ಲಕ್ಷ್ಯಮಾಡಿದ, ಮನಸ್ಸುಗೊಡದ.

**उपोद्घात** (ಉಪೋದ್‌ಘಾತ್) ಪು. ಸಂ. ಪ್ರಸ್ತಾವನೆ, ಪೀಠಿಕೆ, ಮೊದಲು ಮಾತು.

**उपोषण** (ಉಪೋಷಣ) ನ. ಸಂ. ಉಪವಾಸ, ಉಣ್ಣದಿರುವಿಕೆ.

**उफणणे** (ಉಫಣಣೇ) ಕ್ರಿ. ಸ. (ಧಾನ್ಯವನ್ನು) ತೂರಿಕೊ, ಹಸನು ಮಾಡು.

**उफराटणे** (ಉಫರಾಟಣೇ) ಕ್ರಿ. ಸ. ತಿರುವು, ಬುಡ ಮೇಲುಮಾಡು, ತಿರುವು ಮುರುವಾಗಿ ಮಾಡು.

**उफराट–सुफराट** (ಉಫರಾಟ್–ಸುಫರಾಟ್) ತಿರುವು ಮರುವು, ಅವಿನಯದಿಂದ (ಮಾತುನಾಡುವಿಕೆ)

**उफराटा** (ಉಫರಾಟಾ) ವಿ. ತಿರುವು ಮುರವಾದ, ಅಪಕ್ರಮ ಹೊಂದಿದ, ವಿರುದ್ಧಕ್ರಮದ,

**उफळणे** (ಉಫಳಣೇ) ಕ್ರಿ. ಸ. ಉಕ್ಕೇರಿಬರು, ಹುಮ್ಮಸಪಡು, ಆವೇಶಯುಕ್ತನಾಗು.

**उफाट–ड** (ಉಫಾಟ್–ಡ್) ಪು. ಶಕ್ತಿ, ಸಾಮರ್ಥ್ಯ, ಕಸುವು.

**उफाळणे** (ಉಫಾಳಣೇ) ಕ್ರಿ. ಸ. ಉಕ್ಕಿಬರು, ಹುಮ್ಮಸಪಡು.

**उबग** (ಉಬಗ್) ಪು. ಬೇಸರ, ಜಿಗುಪ್ಸೆ. ೨. ವಾಂತಿ. **–णे** (–ಣೇ) ಕ್ರಿ. ಅ. ಬೇಸರಪಡು, ಹತಾಶನಾಗು.

**उबट** (ಉಬಟ್) ವಿ. ಕೆಟ್ಟವಾಸನೆಯ, ಕೆಟ್ಟುಹೋದ.

**उबटाण** (ಉಬಟಾಣ) ಸ್ತ್ರೀ. ಕೆಟ್ಟವಾಸನೆ, ನಾತ.

**उबणे** (ಉಬಣೇ) ಕ್ರಿ. ಅ. ಬಿಸಿಯಾಗು, ಕಾಯು, ಬೆಚ್ಚಗಾಗು. ೨. ಬೇಸರು ಪಡು.

**उबदार** (ಉಬದಾರ) ಬೆಚ್ಚನ್ನ.

**उबविणे** (ಉಬವಿಣೆ) ಕ್ರಿ. ಸ. ಕಾಯಿಸು, ಕಾವು ಕೊಡು.

**उबळ** (ಉಬಳ್) ಸ್ತ್ರೀ. ಕೆಮ್ಮು.

**उबळणे** (ಉಬಳಣೇ) ಕ್ರಿ. ಅ. ತೆಳ್ಳಗಾಗು. ೨. ಗರ್ಭಸ್ರಾವವಾಗು.

**उबार** (ಉಬಾರ್) ಸ್ತ್ರೀ. ಹೆಚ್ಚಿನ ಹಣ. ೨. ಬರ ಬೇಕಾದ ಹಣ.

**उबारा** (ಉಬಾರಾ) ಪು. ಕಾವು, ಸೆಕೆ.

**उबाळा** (ಉಬಾಳಾ) ಪು. ಸೆಕೆ, ಕಾವು.

**उबाळू** (ಉಬಾಳೂ) ನ. ಬೇಸಿಗೆಯಲ್ಲಿ ಆಗುವ ಕುರು.

**उभट** (ಉಭಟ್) ವಿ. ಉದ್ದನ್ನ.

**उभड** (ಉಭಡ್) ವಿ. ಹೊರಗೆ ಬಂದ, ಹೊರ ಚೆಲ್ಲಿದ.

**उभय** (ಉಭಯ) ಕ್ರಿ. ವಿ. ಇಬ್ಬದಿಯ, ಎರಡೂ ಬದಿಯ.

**उभयता** (ಉಭಯತಾ) ಕ್ರಿ. ವಿ. ಇಬ್ಬರೂ, ಇಬ್ಬರೂ ಕೂಡಿ, (ನೀವು) ಇಬ್ಬರು.

**उभयान्वयी** (ಉಭಯಾನ್ವಯೀ) ವಿ. ಎರಡು ಪಕ್ಷಗಳಿಗೂ ಸರಿಹೋಗುವ, ಅನ್ವಯಿಸುವ.

**उभयार्थ** (ಉಭಯಾರ್ಥ) ವಿ. ಸಂ. ಎರಡು ಅರ್ಥವುಳ್ಳ, ಶ್ಲೇಷ್ಮವುಳ್ಳ.

**उभरा** (ಉಭರಾ) ·ವಿ. ಮಾಸಿದ, ಬಣ್ಣಹಾರಿಹೋದ.

**उभवणे** (ಉಭವಣೇ) ಕ್ರಿ. ಸ. ಎಬ್ಬಿಸು, ಎದ್ದುನಿಲ್ಲಿಸು.

**उभळ** (ಉಭಳ್) ಸ್ತ್ರೀ. (ಕೆಮ್ಮು ಮುಂ) ಜೋರು, ಆಘಾತ.

**उभा** (ಉಭಾ) ವಿ. ಎದ್ದುನಿಂತ, ನೆಟ್ಟಗೆನಿಂತ, ಉದ್ದವಾದ. ೨. ಬೆಳೆದುನಿಂತ, ನಿಗರಿನಿಂತ. ೩. ಎಲ್ಲ.
**–करणे** (–ಕರಣೇ) ಕ್ರಿ. ಸ. ಎದ್ದುನಿಲ್ಲಿಸು, (ಹಣ ಮುಂ) ಸಲ್ಲಿಸು.
**–दावा** (–ದಾವಾ) ಪು. ಯಾವಾಗಲೂ ನಡೆದ ಜಗಳ.
**–राहणे** (–ರಾಹಣೇ) ಕ್ರಿ. ಅ. ನಿಲ್ಲು, ಎದ್ದುನಿಲ್ಲು.
**–उभी** (–ಉಭೀ) ಕ್ರಿ. ವಿ. ತತ್‌ಕ್ಷಣ, ತ್ವರೆಯಿಂದ.

**उभारणे** (ಉಭಾರಣೆ) ಕ್ರಿ. ಸ. ನಿಲ್ಲಿಸು, ಸ್ಥಾಪಿಸು, ನ. ೨. ನಿಲ್ಲು.

**उभारा** (ಉಭಾರಾ) ಪು. (ನಾಲುಕಟ್ಟುವವನ) ಬಡಿಗಲ್ಲು.

**उभी** (ಉಭೀ) ವಿ. उभा ನೋ.

**उभ्याउभ्या** (ಉಭ್ಯಾಉಭ್ಯಾ) ಕ್ರಿ. ವಿ. उभाउभी ನೋಡಿರಿ.

**उभ्याने** (ಉಭ್ಯಾನೇ) ಕ್ರಿ. ವಿ. ಎದ್ದುನಿಂತು, ನಿಂತುಕೊಂಡು.

**उमग** (ಉಮಗ್) ಸ್ತ್ರೀ. ಜ್ಞಾನ, ತಿಳುವಳಿಕೆ, ಅರಿವು.

**उमज** (ಉಮಜ್) ಸ್ತ್ರೀ. ತಿಳುವಳಿಕೆ, ಅರ್ಥಗ್ರಹಣ.
**–णे** (–ಣೇ) ತಿಳಿ, ತಿಳಿದು ಕೊ.

**उमटणे** (ಉಮಟಣೇ) ಕ್ರಿ. ಅ. ಮೂಡು, ಛಾಪಹಾಕು, ಸ್ಪಷ್ಟವಾಗಿ ಕಾಣು, ಎದ್ದು ಕಾಣು.

**उमदळणे** (ಉಮದಳಣೇ) ಕ್ರಿ. ಅ. ವಾಂತಿಯ ಭಾವನೆಯಾಗು.

**उमदा** (ಉಮದಾ) ವಿ. ಅರ. ಉತ್ತಮ, ಉತ್ಕೃಷ್ಟ.

**उमाप** (ಉಮಾಪ್) ವಿ. ಬಹಳ ಅತಿರೇಕದಿಂದ.

**उमर-उम्मर** (ಉಮರ್–ಉಮ್ಮರ್) ಸ್ತ್ರೀ. ಅರ. ವಯಸ್ಸು, ಆಯುಷ್ಯ.

**उमराव** (ಉಮರಾವ್) ಪು. ಅರ. ಬಹುವಚನ, ಸರದಾರರು, ಅಮಲ್‌ದಾರರು.

**उमलणे** (ಉಮಲಣೇ) ಕ್ರಿ. ಅ. ಅರಳು, ಹೂವಾಗು. ೨. ಸಿಪ್ಪೆ ಸುಲಿದು ಹಸನು ಮಾಡು.

**उमळ** (ಉಮಳ್) ಸ್ತ್ರೀ. ವಾಂತಿಯಾಗುವ ಭಾವನೆ, ಕಾರಿಕೆ.
**–णे** (–ಣೇ) ಕ್ರಿ. ಅ. ವಾಂತಿಯಾಗುವಂತೆ ಅನಿಸು.

**उमासा** (ಉಮಸಾ) ಪು. उमसा ನೋ.

**उमाळा** (ಉಮಾಳಾ) ಪು. ಭಾವನೆಯ ಉದ್ರೇಕ, ಕುತೂಹಲ, ಲವಲವಿಕೆ.

**उमेद** (ಉಮೇದ್) ಸ್ತ್ರೀ. ಫಾ. ಆಸೆ, ಹುಮ್ಮಸ, ವಿಶ್ವಾಸ, ಭರವಸೆ. ೨. ಹರೆ, ಪ್ರಾಯ.
**–वार** (–ವಾರ್) ಪು. ಉಮೇದುವಾರ, ಸ್ಥಾನಾನ್ವೇಷಿ.
**–उमेदीवर पाणी फिरणे** (–ಉಮೇದೀವರ್ ಪಾಣೀ ಫಿರಣೇ) ಕ್ರಿ. ಅ. ನಿರಾಶೆಹೊಂದು.

**उमोप** (ಉಮೋಪ್) ಕ್ರಿ.ವಿ. ಬಹಳಷ್ಟು, ಬೇಕಾದಷ್ಟು

**उरक** (ಉರಕ್) ಪು. ಕಾರ್ಯ ಕುಶಲತೆ, ಚೊಕ್ಕಟ್ಟು.
**–णे** (–ಣೇ) ಕ್ರಿ. ಸ. ನೆರವೇರಿಸು, ಸಾಧಿಸು, ಮುಗಿಸಿಕೊ.

**उरग** (ಉರಗ್) ಪು. ಸಂ. ಹಾವು.

**उरजा** (ಉರಜಾ) ಸ್ತ್ರೀ. ಚೊಕ್ಕಟ್ಟು, ಸುವ್ಯವಸ್ಥೆ, ಮಾರ್ಪಾಡು.

**उरणे** (ಉರಣೇ) ಕ್ರಿ. ಅ. ಉಳಿ, ಉಳಿದುಹೋಗು. ೨. ಬದುಕು.

**उरता** (ಉರತಾ) ಸ್ತ್ರೀ. ಸನ್ಮಾನ, ಮರ್ಯಾದೆ.

**उरफाटा** (ಉರಫಾಟಾ) ವಿ. तफराटा ನೋ.

**उर(स)फोड** (ಉರ(ಸ್)ಫೋಡ್) ಸ್ತ್ರೀ. ಪ್ರಯತ್ನ, ಕಷ್ಟ, ಪರಿಶ್ರಮ.

**उरमट(ठ)** (ಉರಮಟ್–ಠ್) ವಿ. ಸೊಕ್ಕಿನ, ಅವಿನೀತ.

**उरवणे** (ಉರವಣೇ) ಕ್ರಿ. ಸ. ಉಳಿಸು, ಉಳಿತಾಯ ಮಾಡು.

**उरी** (ಉರೀ) ಸ್ತ್ರೀ. ಉಳಿತಾಯ.

**उरूस** (ಉರೂಸ್) ಪು. ಅರ. ಮುಸಲ್ಮಾನ ಸಾಧುವಿನ ಉರುಸು, ಜಾತ್ರೆ.

**उर्वरित** (ಉರ್ವರಿತ) ವಿ. ಸಂ. ಉಳಿದ, ಮಿಕ್ಕ, ಶೇಷ.

**उर्वी** (ಉರ್ವೀ) ಸ್ತ್ರೀ. ಸಂ. ಪೃಥ್ವಿ, ಜಗತ್ತು.

**उलकटणे** (ಉಲ್‌ಕಟಣೇ) ಕ್ರಿ. ಸ. ಬಿಚ್ಚು, ಬಿಚ್ಚಿ ನೋಡು, ಮುಗಿಸು.

**उलगडणे** (ಉಲ್‌ಗಡಣೇ) ಕ್ರಿ. ಸ. ಬಿಡಿಸು, ಹಾಸು, ಪಸರಿಸು, ಮುಗಿಸು.

**उलगडा** (ಉಲ್‌ಗಡಾ) ಪು. ತೀರ್ಪು. ೨. ಸ್ಪಷ್ಟೀಕರಣ.

**उलगणे** (ಉಗಲಣೇ) ಕ್ರಿ. ಸ. ದಾಟು, ದಾಟಿ ಹೋಗು. ೨. ಮುಗಿಸು.

**उलट** (ಉಲಟ್) ಕ್ರಿ. ವಿ. ವಿರುದ್ಧವಾಗಿ, ಪ್ರತ್ಯುತ್ತರವಾಗಿ.
**–जवाब** (–ಜವಾಬ್) ಪ್ರತ್ಯುತ್ತರ, ಮರುತ್ತರ.
**–पालट** (–ಪಾಲಟ್) ಸ್ತ್ರೀ. ಬುಡಮೇಲು.
**–सुलट** (–ಸುಲಟ್) ವಿ. ಅಸಂಬದ್ಧ. ಕ್ರಿ. ವಿ. ಮನಸ್ಸಿಗೆ ಬಂದಂತೆ.

**उलटणे** (ಉಲಟಣೇ) ಕ್ರಿ. ಅ. ಮರಳು, ಬುಡಮೇಲಾಗು, ಮೈಮೇಲೆ ಬರು.

**उलटा** (ಉಲಟಾ) ವಿ. ವಿರುದ್ಧ, ನ್ಯಾಯವಿರುದ್ಧ ರೂಢಿಯ ವಿರುದ್ಧ, ಲೋಕ ವಿರುದ್ಧ.

**उलटी** (ಉಲಟೀ) ಸ್ತ್ರೀ. ವಾಂತಿ, ಕಾರಿಕೆ.

**उलटे** (ಉಲಟೇ) ಕ್ರಿ. ವಿ. उलट ನೋ.

**उलंडणे** (ಉಲಂಡಣೇ) ಕ್ರಿ. ಅ. ಚೆಲ್ಲು, ಹೊರಚೆಲ್ಲು, ಹೊರಸೂಸು.

**उलंडी** (ಉಲಂಡೀ) ಸ್ತ್ರೀ. ದೋಣಿಯನ್ನು ಭದ್ರಪಡಿಸುವ ಹಲಗೆ.

**उलथणे** (ಉಲಥಣೇ) ನ. ಮುಗಿಚುವ ಕೈ, ೨. ರೊಟ್ಟಿಮುಂತಾದವುಗಳನ್ನು ತಿರುವಿ ಹಾಕುವ ಕಬ್ಬಿಣದ ಸಾಟು.

**उलथा** (ಉಲಥಾ) ವಿ. ಉದ್ದಕ್ಕೂ ಬಿದ್ದಿರುವ. ೨. ಮುಖ ಮೇಲೆ ಮಾಡಿ ಬಿದ್ದಿರುವ.
**–पालथ** (–ಪಾಲಥ್) ಸ್ತ್ರೀ. ಬುಡಮೇಲು. ೨. ಬದಲಾವಣೆ.

**उलूक** (ಉಲೂಕ್) ಪು. ಸಂ. ಗೂಗೆ.

**उलूखल** (ಉಲೂಖಲ್) ನ. ಸಂ. ಒರಳು.

**उलाढाल** (ಉಲಾಢಾಲ್) ಸ್ತ್ರೀ. ಮಾರ್ಪಾಟು, ಕಾರಭಾರ. ಕಾರ್ಯಕಲಾಪ. ೨. ಬದಲಾವಣೆ. ೩. ಪರಿಶ್ರಮ.

**उलाढाली** (ಉಲಾಢಾಲೀ) ವಿ. ನಾನಾಬಗೆಯ ಹಂಚು ಹಾಕುವವ.

**उलेमा** (ಉಲೇಮಾ) ಪು. ಅರ. ಮುಸಲ್ಮಾನ ಧರ್ಮ ಶಾಸ್ತ್ರಿ.

**उल्का** (ಉಲ್ಕಾ) ಸ್ತ್ರೀ. ಆಕಾಶದಿಂದ ಬೀಳುವಚಿಕ್ಕೆ. ಉಲ್ಕೆ.

**उल्ब** (ಉಲ್ಬ) ಪು. ಸಂ. ಗರ್ಭದ ಆವರಣ.

**उल्बण** (ಉಲ್‌ಬಣ್) ನ. ಸಂ. ಸಂಕಟ, ಅನರ್ಥ. ೨. ಕಫ, ವಾತ, ಮುಂ. ಗಳ, ಅತಿರೇಕ.

**उल्मुक** (ಉಲ್ಮುಕ್) ನ. ಸಂ. ಪಂಜು, ದೀವಿಟಿಗೆ.

**उल्लंघणे** (ಉಲ್ಲಂಘಣೇ) ಕ್ರಿ. ಅ. ಉಲ್ಲಂಘಿಸು, ಮೀರು, ದಾಟು.

**उल्लसित** (ಉಲ್ಲಸಿತ್) ವಿ. ಸ. ಆನಂದಿತ, ಸಂತೋಷ ಭರಿತ.

**उल्लास** (ಉಲ್ಲಾಸ್) ಪು. ಸ. ಆನಂದ, ಸಂಭ್ರಮ.

**उल्लू** (ಉಲ್ಲೂ) ವಿ. ಅವಿಚಾರಿ, ಅವಿವೇಕ, ಚಂಚಲ, ಉತಾವಳಿ ಸ್ವಭಾವದವ.

**उल्लेख** (ಉಲ್ಲೇಖ) ಪು. ಸಂ. ನಿರ್ದೇಶ, ಉಲ್ಲೇಖ.

**उल्हास** (ಉಲ್ಹಾಸ್) ಪು. ಸ. ಆನಂದ.

**उवळणे** (ಉವಳಣೇ) ಕ್ರಿ. ಸ. (ದಾರವನ್ನು) ಸರಿ ಪಡಿಸು, ತೊಡಕುಬಿಡಿಸು

**उशागत** (ಉಶಾಗತ) ಸ್ತ್ರೀ. ತಲೆಗಿಂಬಿನ ಕಡೆಯ ಭಾಗ.

**उ:शाप** (ಉಃಶಾಪ್) ಪು. ಸಂ. ಶಾಪದಿಂದ ಮುಕ್ತಾಯ

**उशिरा** (ಉಶಿರಾ) ಕ್ರಿ. ವಿ. ತಡಮಾಡಿ.

**उशी** (ಉಶೀ) ಸ್ತ್ರೀ. ತಲೆಗಿಂಬು.

**उशीर** (ಉಶೀರ್) ಪು. ತಡ, ವಿಲಂಬ.

**उश्वास** (ಉಶ್ವಾಸ್) ಪು. ನಿಟ್ಟುಸಿರು.

**उष:काल(ळ)** (ಉಷಃಕಾಲ್-ಳ್) ಪು. ಸಂ. ಬೆಳಗು, ಉಷಃಕಾಲ.

**उष:पान** (ಉಷಃಪಾನ್) ನ. ಸಂ. ಬೆಳಗಿನಲ್ಲಿ ಕುಡಿದ ನೀರು.

**उषा** (ಉಷಾ) ಸ್ತ್ರೀ. ಸಂ. ನಸುಕು, ಉಷಾದೇವಿ.

**उष्टर** (ಉಷ್ಟರ್) ಪು. ಸಂ. ಫಾ. (ಶತುರ್) ಒಂಟೆ

**उष्ट–ष्टा–वण** (ಉಷ್ಟ-ಷ್ಟಾ-ವಣ್) ನ. ಚಿಕ್ಕಮಕ್ಕಳಿಗೆ ಊಟಮಾಡಿಸುವ ಸಂಸ್ಕಾರ.

**उष्टा** (ಉಷ್ಟಾ) ವಿ. ಎಂಜಲಾದ, ಉಚ್ಛಿಷ್ಟ.

**–वणे** (–ವಣೇ) ಕ್ರಿ. ಸ. ಎಂಜಲಮಾಡು, ಬಾಯಿಗೆಹಚ್ಚು, ಸವಿನೋಡು.

**–वळ** (ವಳ್) ಸ್ತ್ರೀ. ಊಟವಾದಮೇಲೆ ಎಲೆಯಲ್ಲಿ ಉಳಿದ, ಚಲ್ಲಿದ ಪದಾರ್ಥಗಳು. ೨. ಎಂಜಲ.

**उष्टे** (ಉಷ್ಟೇ) ನ. ಎಂಜಲು, ಚಲ್ಲಿದ, ತಿಂದು ಉಳಿಸಿದ ಆಹಾರ ಪದಾರ್ಥಗಳು.

**–खळी** (–ಖಳೀ) ಸ್ತ್ರೀ. ಎಂಜಲು ಒಗೆಯುವ ಸ್ಥಳ.

**उष्ट्र** (ಉಷ್ಟ್ರ) ಪು. ಸಂ. ಒಂಟೆ.

**उष्ण** (ಉಷ್ಣ) ವಿ. ಸಂ. ಕಾಯ್ದ, ತಪ್ತ, ಬೆಚ್ಚಗಾದ.

**उष्णता** (ಉಷ್ಣತಾ) ಸ್ತ್ರೀ. ಸಂ. ಕಾವು, ಉಷ್ಣತೆ.

**उष्मा** (ಉಷ್ಮಾ) ಪು. ಸಂ. ಸೆಕೆ, ನಿದಾಘ, ಉಷ್ಣತೆ.

**उसकटणे** (ಉಸಕಟಣೇ) ಕ್ರಿ. ಸ. ಅಸ್ತಾವ್ಯಸ್ತಗೊಳಿಸು, ಚಲ್ಲಿಹಾಕು.

**असण** (ಉಸಣ್) ಸ್ತ್ರೀ. ಸ್ನಾಯುವಿನ ಆಕುಂಚನದಿಂದುಂಟಾದ, ನೋವು, ದುಃಖ, ಬೇನೆ.

**उसंत** (ಉಸಂತ್) ಸ್ತ್ರೀ. ವಿಶ್ರಾಂತಿ, ಪುರಸತ್ತು, ಬಿಡಗಡೆ.

**उसनवारी** (ಉಸನ್‌ವಾರೀ) ಸ್ತ್ರೀ. ಕೈಗಡ, ಸಾಲ.

**उसना** (ಉಸನಾ) ಕೈಗಡ ತಂದ, ಬೇಡಿತಂದ. ೨. ಕಡದಿಂದ ತಂದ.

**उसने** (ಉಸನೇ) ನ. ಕಡ, ಕೈಗಡ. ೨. ಮುಯ್ಯಿ, ಸೇಡು.

**उसपण** (ಉಸಪಣ್) ನ. ತೆಗೆದುಹಾಕುವಿಕೆ.

**–पाणी** (–ಪಾಣೀ) (ಸ್ನಾನಕ್ಕೆ) ನೀರು ಕೊಡುವಿಕೆ.

**उसपणे** (ಉಸಪಣೇ) ಕ್ರಿ. ಸ. ತೆಗೆ, ತೆಗೆದುಹಾಕು ಬರಿದುಮಾಡು.

**उसपाउसपी** (ಉಸಪಾಉಸಪೀ) ಸ್ತ್ರೀ. ಒಂದುಪಾತ್ರೆಯಿಂದ ಮತ್ತೊಂದರಲ್ಲಿ ಸುರಿಯುವಿಕೆ. ೨. ಅನಾವಶ್ಯಕ ಉದ್ಯೋಗ.

**उसर** (ಉಸರ್) ಸ್ತ್ರೀ. ಒಣಗಿಸಿದ ಪಲ್ಯ, ಬಾಳಕ.

**उसवण** (ಉಸವಣ್) ಸ್ತ್ರೀ. **उसण** ನೋಡಿರಿ.

**उसवणे** (ಉಸವಣೇ) ಕ್ರಿ. ಸ. (ಹೊಲಿಗೆಯನ್ನು) ಬಿಚ್ಚು, ಬಿಡಿಸು.

**उसवास** (ಉಸ್‌ವಾಸ್) ಪು. उश्वास, उच्छ्वास ನೋ.

**उसळ** (ಉಸಳ) ಸ್ತ್ರೀ. ಕಡಲೆ, ಹೆಸರು ಮುಂತಾದ ವುಗಳನ್ನು ಬೇಯಿಸಿ ಮಾಡಿದ ಒಣಪಲ್ಯ, 'ಉಸಳಿ'

**उसळणे** (ಉಸಳಣೇ) ಕ್ರಿ. ಅ. ಸಿಡಿ. ೨. ರೇಗು, ಸಿಟ್ಟಿಗೇಳು.

**उसळी** (ಉಸಳೀ) ಸ್ತ್ರೀ. ಸೆಳೆತ, ಸಿಡಿತ.

**उसासा** (ಉಸಾಸಾ) ಪು. ನಿಟ್ಟುಸಿರು. ೨. ವಿಶ್ರಾಂತಿ

**उसे** (ಉಸೇ) ನ. **उशागत** ನೋಡಿರಿ.

**उस्तरणे** (ಉಸ್ತರಣೇ) ಕ್ರಿ. ಸ. (ಹಂಚು ಮುಂ) ಸರಿಪಡಿಸು.

**उस्तुवारी** (ಉಸ್ತುವಾರೀ) ಸ್ತ್ರೀ. ಫಾ. ಸರಿಪಡಿಸುವಿಕೆ, ರಿಪೇರಿ ಮಾಡುವಿಕೆ.

**उळकंबा** (ಉಳಕಂಬಾ) ಪು. ಅಸ್ಥಿರಸ್ಥಿತಿ, ಜೋತಾಡುವಸ್ಥಿತಿ.

**उळकंबणे** (ಉಳಕಂಬಣೇ) ಕ್ರಿ. ಅ. ಜೋತಾಡು.

**उळंबणे** (ಉಳಂಬಣೇ) ಕ್ರಿ. ಅ. ತುಂಬು, ತುಂಬಿ ಹೋಗು.

**उळा** (ಉಳಾ) ಪು. ಸುಟ್ಟ ಕಡಲೆ, ಕಡಲೆಯ ಬೆಳಸಿ

**उळीग** (ಉಳೀಗ್) ನ. ಕ. ಉಪಕಾರ. ೨. ಋಣಾನುಬಂಧ, ನೆಂಟತನ.

## ऊ ಊ

**ऊ:** (ಊ) ಆರನೆಯ ಸ್ವರ.

**ऊ:** (ಊ) ಸ್ತ್ರೀ. ಹೇನು.

**ऊट** (ಊಟ್) ಸ್ತ್ರೀ. ಗಾಲಿಯನ್ನು ತಡೆಯಲಿಕ್ಕೆ ಆನಿಸಿದ ಕಲ್ಲು.

**ऊठपाय** (ಊಠಪಾಯ್) ಕ್ರಿ. ವಿ. ಮೇಲಿಂದ ಮೇಲೆ.

**ऊत** (ಊತ್) ಪು. ಉಕ್ಕೇರುವಿಕೆ, ಉದ್ರೇಕ.

**ऊद** (ಊದ್) ಪು. ಅರ. ಸುಗಂಧ ದ್ರವ್ಯ.

**–काडी** (–ಕಾಡೀ) ಊದಬತ್ತಿ, ಅಗರುಬತ್ತಿ.

**ऊन–न्ह** (ಊನ್–ನ್ಹ) ನ. ಬಿಸಿಲು, ಸೂರ್ಯ ಪ್ರಕಾಶ.

**ऊब** (ಊಬ್) ಸ್ತ್ರೀ. ಉಷ್ಣತೆ, ಕಾವು.

**–दार** (ದಾರ್) ವಿ. ಬೆಚ್ಚನ್ನ.

**–जिरविणे** (–ಜಿರವಿಣೇ) ಕ್ರಿ. ಸ. ಸೊಕ್ಕು ಇಳಿಸು.

**ऊर** (ಊರ್) ಪು. ಎದೆ.

**–बडविणे** (–ಬಡವಿಣೇ) ಕ್ರಿ. ಅ. ಬಡಬಡಕೊಂಡು ಅಳು.

**उरावबर बसणे** (ಉರಾವರ್ ಬಸಣೇ) ಕ್ರಿ. ಸ. ಒತ್ತಾಯ ಪಡಿಸು, ಹಿಂಸೆಗೊಳಿಸು.

**उराशी धरणे** (ಉರಾಶೀ ಧರಣೇ) ಕ್ರಿ. ಅ. ಪ್ರೇಮ ಮಾಡು, ಅಕ್ಕರಮಾಡು, ಪ್ರೀತಿಸು.

**IIऊर** (ಊರ್) ಸ್ತ್ರೀ.ಉ ಳಿತಾಯ, ಶೇಷ.

**ऊरू** (ಊರು) ಪು. ಸಂ. ತೊಡೆ.

**ऊर्जित** (ಊರ್ಜಿತ) ವಿ. ಸಂ. ಮೇಲೆಬಂದ, ಏಳ್ಗೆ ಹೊಂದಿದ.

**–दशा** (–ದಶಾ) ಸ್ತ್ರೀ. ಸಂ. ಏಳ್ಗೆ.

**ऊर्णनाभी** (ಊರ್ಣನಾಭೀ) ಪು. ಸಂ. ಜೇಡ.

**ऊर्णा** (ಊರ್ಣಾ) ಸ್ತ್ರೀ. ಸಂ. ಉಣ್ಣೆ.

**ऊर्ध्व** (ಊರ್ಧ್ವ) ಕ್ರಿ.ವಿ.ಸಂ. ಮೇಲಿನಮೇಲ್ಭಾಗದ.

**–देहिक** (ದೇಹಿಕ್) ನ. ಸತ್ತಮೇಲಿನ ಉತ್ತರ ಕ್ರಿಯೆ.

**–रेता** (–ರೇತಾ) ಪು. ಮೈಥುನ ಮಾಡದವ.

**–वात** (–ವಾತ್) ಪು. ಬಿಕ್ಕು, ಮರಣ ಸಮಯ.

**ऊर्फ** (ಊರ್ಫ) ಅವ್ಯಯ. ಅರ. ಅಂದರೆ, ಅಥವಾ. ೨. ಹೆಸರಾದ.

**ऊर्मी** (ಊರ್ಮಿ) ಸ್ತ್ರೀ. ಸಂ. ತೆರೆ, ತರಂಗ. ೨. ಹುಮ್ಮಸ, ಉತ್ಸಾಹ.

**ऊस** (ಊಸ್) ಪು. ಕಬ್ಬು.

**ऊह** (ಊಹ್) ಪು. ಸಂ. ತರ್ಕ, ಊಹೆ.

**ऊहापोह** (ಊಹಾಪೋಹ್) ಪು. ಚರ್ಚೆ, ಸಾಂಗೋಪಾಂಗ್ ವಿಚಾರ, ಪ್ರತಿಪಾದನ.

## ऋ ಋ

**ऋ** (ಋ) ಮರಾಠಿಯಲ್ಲಿಯ ಏಳನೇಯ ಸ್ವರ.

**ऋग्वेद** (ಋಗ್ವೇದ್) ಪು. ಸಂ. ಋಗ್ವೇದ.

**ऋग्वेदी** (ಋಗ್ವೆದೀ) ವಿ. ಸಂ. ದೇಶಸ್ಥ, ಬ್ರಾಹ್ಮಣ ರಲ್ಲಿಯ ಒಂದು ಉಪ ೧. ಜಾತಿ.

**ऋचा** (ಋಚಾ) ಸ್ತ್ರೀ. ಸಂ. ಋಗ್ವೇದದ ಸೂತ್ರ ದಲ್ಲಿಯ ಮಂತ್ರ.

**ऋजु** (ಋಜು) ವಿ. ಸಂ. ಸರಳ ಸ್ವಭಾವದವ.

**ऋण** (ಋಣ) ನ. ಸಂ. ಸಾಲ, ಉಪಕಾರ.

**–को** (–ಕೋ) ಪು. ಸಾಲಗಾರ.

**ऋणानुबंध** (ಋಣಾನುಬಂಧ) ಪು. ಸಂ. (ಪೂರ್ವ ಜನ್ಮದ ಅಥವಾ ದೇವರ ಇಚ್ಛೆಯ ಮೇರೆಗೆ ಉಂಟಾದ) ಗೆಳೆತನ, ಸೌಹಾರ್ದ.

**ऋणी** (ಋಣೀ) ವಿ. ಸಂ. ಸಾಲಪಡೆದವ, ಆಭಾರಿ, ಉಪಕೃತ.

**ऋतु** (ಋತು) ಪು. ಸಂ. ಎರಡು ತಿಂಗಳುಗಳ ಕಾಲ. ೨. ಮಾಸಿಕ ಧರ್ಮ–ಮುಟ್ಟು.

**–मती** –ಮತೀ) ವಿ. ಮೈನೆರೆತವಳು, ಪ್ರಾಯಕ್ಕೆ ಬಂದವಳು.

**ऋत्विज्** (ಋತ್ವಿಜ್) ಪು. ಸಂ. ಯಜ್ಞದೀಕ್ಷಿತ.

**ऋद्धि** (ಋದ್ಧೀ) ಸ್ತ್ರೀ. ಅಭಿವೃದ್ಧಿ, ಉತ್ಕರ್ಷ.

**ऋषभ** (ಋಷಭ) ಪು. ಸಂ. ಎತ್ತು, ಹೋರಿ ವಿ. ಬಲಿಷ್ಠ, ಶ್ರೇಷ್ಠ. ೨. (ಸಂಗೀತ) ಪು. 'ರೆ'ಋಷಭ.

**ऋषि** (ಋಷಿ) ಪು. ಸಂ. ಸಾಧು, ತಪಸ್ವಿ.

**–धान्य** (ಧಾನ್ಯ) ಪು. ಕೀಳು ಧಾನ್ಯ.

**–पंचमी** (–ಪಂಚಮೀ) ಸ್ತ್ರೀ. ಭಾದ್ರಪದಶುಕ್ಲ ಪಂಚಮಿ.

**ऋक्ष** (ಋಕ್ಷ) ಪು. ಸಂ. ಕರಡಿ.

## ए ಏ

**ए** (ಏ) ಏಳನೆಯ ಸ್ವರ.

**ए:** (ಏ:) ಉದ್ಗಾರ, ಎಲವೋ! ಎಲೆ.

**एक** (ಏಕ) ವಿ. ಒಂದು.

**–टा** (–ಟಾ) ವಿ. ಒಬ್ಬ, ಒಬ್ಬೊಂಟಿಗ.

**–एकटा** (–ಏಕಟಾ) ಕ್ರಿ. ವಿ. ಒಬ್ಬೊಬ್ಬನಂತೆ.

**–कल्ली** (–ಕಲ್ಲೀ) ವಿ. ಒಂದೇ ಮಾತಿನ ಹಟ ಹಿಡಿಯುವವ.

**–चित्त** (–ಚಿತ್ತ) ಕ್ರಿ. ವಿ. ಸಂ. ಲಕ್ಷಗೊಟ್ಟು, ಗಮನಿಸಿ.

**–छत्र** (–ಛತ್ರ) ವಿ. ಒಬ್ಬನೇ ಅರಸನ) ವಿಸ್ತ್ರತರಾಜ್ಯ.

**–जातीय** (–ಜಾತೀಯ) ವಿ. ಒಂದೇ ಬಗೆಯ.

**–जिन्नस** (–ಜಿನ್ನಸ್) ವಿ. ಒಂದೇ ಬಗೆಯ.

**–जिनसी** (–ಜೀನಸೀ) ವಿ. ಬೆರಕೆ ಇಲ್ಲದ.

**–जीव** (–ಜೀವ್) ವಿ. ಒಂದಾಗಿ ಹೋದ, ಸಮ್ಮಿ ಲಿತ.

**–जूट** (–ಜೂಟ್) ಸ್ತ್ರೀ. ಒಕ್ಕಟ್ಟು.

**–टक** (–ಟಕ್) ಕ್ರಿ. ವಿ. ಎವೆ ಇಕ್ಕದೆ.

**–टाकी** (–ಟಾಕೀ) ವಿ. ಒಂದೇ ಬಗೆಯ, ಮಾದರಿಯ.

**एकटा दुकटा** (ಏಕಟಾ ದುಕಟಾ) ವಿ. ಒಬ್ಬನೇ, ಸಂಗಡಿಗರಿಲ್ಲದೆ (ನಡೆದವ).

**–ठोक** (–ಠೋಕ್) ವಿ. ಒಂದೇ ಸಲ, ಒಟ್ಟಿಗೆ ಸೇರಿದ.

**–तंत्र** (–ತಂತ್ರ) ವಿ. ಒಬ್ಬನ ಅಧಿಕಾರದ.

**एकतंत्री** (ಏಕತಂತ್ರೀ) ವಿ. ಸಂ. ಒಬ್ಬನ ಇಷ್ಟದಂತೆ ನಡೆದ.

**एकतरफी** (ಏಕತರಫೀ) ವಿ. ಅರ+ಮು. ಪಕ್ಷಪಾತವಿದ್ದ, ಒಂದೇ ಪಕ್ಷಕ್ಕೆ ಅನುಕೂಲವಾದ.

**एक तऱ्हा** (ಏಕ ತರ್ಹಾ) ವಿ. ಒಂದು ಬಗೆಯ, ವಿಚಿತ್ರ, ಸೋಜಿಗದ.

**एकतान** (ಏಕತಾನ್) ವಿ. ಮನಸ್ಸು ೧.. ಗೊಟ್ಟು ಮಾಡಿದ, ಏಕಾಂಗ.

**एकतारा--री** (ಏಕತಾರಾ–ರೀ) ಪು. ಸ್ತ್ರೀ. ಒಂದೇ ತಂತಿಯ ವಾದ್ಯ.

**एकतीस** (ಏಕತೀಸ್) ವಿ. ಮೂವತ್ತೊಂದು (೩೧)

**एकत्र** (ಏಕತ್ರ) ಕ್ರಿ. ವಿ. ಒಟ್ಟಿಗೆ, ಒಂದು ಕಡೆಗೆ. ೨. ವಿ. ಒಟ್ಟುಗೂಡಿದ.

**–कुटुंब** (–ಕುಟುಂಬ) ನ. ಸಂಯುಕ್ತ ಕುಟುಂಬ.

**एकथाट** (ಏಕಥಾಟ್) ಪು. ಒಂದೇ ಬಗೆ–ಮಾದರಿ.

**एकथोक** (ಏಕಥೋಕ್) ಕ್ರಿ. ವಿ. ಒಮ್ಮೆಲೆ.

**एकदम** (ಏಕದಮ್) ಕ್ರಿ. ವಿ. ಕೂಡಲೆ, ಒಮ್ಮೆಲೆ, ತತ್‌ಕ್ಷಣ.

**एकंदर** (ಏಕಂದರ್) ಸ್ತ್ರೀ. ಒಟ್ಟು ಸಂಖ್ಯೆ, ಬೇರಿಜು. ೨. ಕ್ರಿ. ವಿ. ಒಟ್ಟಿನಲ್ಲಿ.

**एकंदरी** (ಏಕಂದರೀ) ಸ್ತ್ರೀ. ಒಟ್ಟು ಸಂಖ್ಯೆ.

**एकंदरीत** (ಏಕಂದರೀತ್) ಕ್ರಿ. ವಿ. ಒಟ್ಟಿನ ಮೇಲೆ, ಕೊನೆಯದಾಗಿ.

**एकदा** (ಏಕದಾ) ಕ್ರಿ. ವಿ. ಸ. ಒಮ್ಮೆ, ಒಂದು ಸಲ.

**–चा** (–ಚಾ) ಕ್ರಿ. ವಿ. ಹಾಗೂ ಹೀಗೂ ಮಾಡಿ.

**एकदिल** (ಏಕದಿಲ್) ವಿ. ಫಾ. ಒಕ್ಕಟ್ಟುಳ್ಳ.

**एकदाणी** (ಏಕದಾಣೀ) ಸ್ತ್ರೀ. ಒಂದು ಪದರಿನ ಸರ, ಕಂಠಿ, ಆಭರಣ.

**एकधा** (ಏಕಧಾ) ಸ್ತ್ರೀ. ಒಂದು ವಿಧವಾಗಿ.

**एकधान्य** (ಏಕಧಾನ್ಯ) ವಿ. ಸಂ. ಒಂದೇ ಧಾನ್ಯದಿಂದ ಮಾಡಿದ (ವ್ರತಾಹಾರ)

**एकधोरणी** (ಏಕಧೋರಣೀ) ವಿ. ಒಂದೇ ಮತವುಳ್ಳ.

**एकनाड–डी** (ಏಕನಾಡ–ಡೀ) ವಿ. ಸಂ. (ಜಾತಕದಲ್ಲಿ) ಒಂದೇ ನಾಡಿಯುಳ್ಳ.

**एकनिष्ठ** (ಏಕನಿಷ್ಠ) ವಿ. ಸಂ. (ಒಬ್ಬನ, ಒಂದೇ ತತ್ವದ) ನಿಷ್ಠಾವಂತ.

**एकनिष्ठा** (ಏಕನಿಷ್ಠಾ) ಸ್ತ್ರೀ. ಸಂ. (ಒಬ್ಬನ, ಒಂದೇ ತತ್ವದ) ನಿಷ್ಠೆ.

**एकपंगत** (ಏಕಪಂಗತ್) ವಿ. ಒಂದೇ ಪಂತಿಯಲ್ಲಿ ಕೂಡುವ.

**एकपत्नी** (ಏಕಪತ್ನೀ) ವಿ.ಸಂ. ಒಬ್ಬಳನ್ನು ಮದುವೆಯಾಗಿ ಪ್ರಾಮಾಣಿಕತನದಿಂದ ಬಾಳುವ.

**–व्रत** (–ವ್ರತ್) ನ. ಒಂದೇ ಸಲ ಮದುವೆ ಮಾಡಿಕೊಂಡು ಬಾಳುವ ವ್ರತ.

**एकपक्षी** (ಏಕಪಕ್ಷೀ) ವಿ. ಸಂ. ಒಂದೇ ಪಕ್ಷಕ್ಕೆ ಅನುಕೂಲವಾದ, ಪಕ್ಷಪಾತವುಳ್ಳ.

**एकपाठी** (ಏಕಪಾಠೀ) ವಿ. ಒಂದೇ ಸಲ ಓದಿ ನೆನಪಿನಲ್ಲಿಡುವವ.

**एकपुती** (ಏಕ್‌ಪುತೀ) ಸ್ತ್ರೀ. ಒಬ್ಬನೇ ಮಗ ಇದ್ದ (ತಂದೆ–ತಾಯಿ)

**एकफरमा** (ಏಕಫರಮಾ) ವಿ. ಒಂದರಂತೆಯೇ ಕಾಣುವ.

**एकफसली** (ಏಕಫಸಲೀ) ವಿ. ಅರ. ಒಂದೇ ಬೆಳೆಯನ್ನು ಕೊಡುವ (ಭೂಮಿ).

**एकबुरजी** (ಏಕಬುರಜೀ) ವಿ. ಫಾ. ಅರ. ಒಂದೇ ಆಧಾರವುಳ್ಳ. ೨. (ಲಾ) ಒಬ್ಬನ ಮೇಲೆಯೇ ಅವಲಂಬಿಸಿದ.

**एकबेरजी** (ಏಕ್‌ಬೇರಜೀ) ಸ್ತ್ರೀ.ಫಾ. ಒಟ್ಟುಗೂಡಿಸಿದ ಸಂಖ್ಯೆ, ಒಟ್ಟಿನ ಬೇರೀಜು.

**एकभक्त** (ಏಕಭಕ್ತ) ವಿ. ಸಂ. ಒಬ್ಬ ದೇವರನ್ನೇ ನಂಬುವ.

**एकभाव** (ಏಕಭಾವ್) ಪು. ೧. ಏಕಾಗ್ರತೆ. ೨. ಏಕಾತ್ಮತೆ. ೩. ಒಂದೇ ಬೆಲೆ.

**एकमजली** (ಏಕಮಜಲೀ) ವಿ. ಒಂದು ಅಂತಸ್ತಿನ (ಕಟ್ಟಡ).

**एकमत** (ಏಕಮತ್) ನ. ಸಂ. ಒಂದೇ ಮತ, ಏಕಮತ.

**एकमार्गी** (ಏಕಮಾರ್ಗೀ) ವಿ. ಸಂ. ಒಂದೇ ನಿಯಮದಿಂದ ನಡೆಯುವವ.

**एकमुखी** (ಏಕಮುಖೀ) ವಿ. ಸಾರ್ವಾನುಮತ, ಎಲ್ಲರೂ ಬಯಸಿದ.

**एकमुठी** (ಏಕಮುಠೀ) ವಿ. ಒಂದೇಸಲ ಕೊಟ್ಟ, ಒಟ್ಟು ಮೊತ್ತ.

**एकमेक** (ಏಕಮೇಕ್) ಕ್ರಿ. ವಿ. ಒಬ್ಬರನ್ನೊಬ್ಬರು.

**एकमेळी** (ಏಕಮೇಳೀ) ವಿ. ಎಲ್ಲರೂ, ಒಟ್ಟುಗೂಡಿ.

**एकर** (ಏಕರ್) ಪು. ಇಂ. ಎಕರೆ(ಭೂಮಿಯ ಅಳತೆ)

**एकरकम** (ಏಕರಕಮ್) ಕ್ರಿ.ವಿ.ಫಾ. ಒಟ್ಟು ಮೊತ್ತ.

**एकलकोंडा** (ಏಕಲಕೋಂಡಾ) ವಿ. ಒಬ್ಬೊಂಟಿಗ, ಸಂಗಡಿಗರಿಲ್ಲದ.

**एकला** (ಏಕಲಾ) ವಿ. ಗುಜರಾತಿ. ಒಬ್ಬನೆ.

**एकवचन** (ಏಕವಚನ್) ನ. ಸಂ. (ವ್ಯಾಕರಣ) ಏಕವಚನ. ೨. (ಲಾ) ಅನಾದರ (ನೀವು ಅನ್ನದೆ ನೀನು ಅನ್ನುವಿಕೆ) ಪ್ರೀತಿ.

**एकवटणे** (ಏಕವಟಣೇ) ಕ್ರಿ. ಅ. ಒಟ್ಟುಗೂಡು.

**एकवर्ण** (ಏಕವರ್ಣ) ವಿ. ಸಂ. ಒಂದೇ ಬಣ್ಣದ, ಒಂದೇ ಅಕ್ಷರವುಳ್ಳ.

**एकवसा** (ಏಕವಸಾ) ಪು. ಏಕಾಂತ ಸ್ಥಳ.

**एकवळा** (ಏಕವಳಾ) ಪು. ಒಕ್ಕಟ್ಟು.

**एकवाक्यता** (ಏಕವಾಕ್ಯತಾ) ಸ್ತ್ರೀ. ಸಂ. ಒಂದೇಮತವಾಗುವಿಕೆ, ಸರ್ವಸಮ್ಮತ ಅಭಿಪ್ರಾಯ.

**एकविधाभक्ती** (ಏಕವಿಧಾಭಕ್ತೀ) ಸ್ತ್ರೀ. ಸಂ. ಒಂದೇ ಬಗೆಯ ಆರಾಧನೆ.

**एकवीस** (ಏಕವೀಸ್) ವಿ. ಇಪ್ಪತ್ತೊಂದು (೨೧)

**एकवेळ** (ಏಕವೇಳ್) ಕ್ರಿ.ವಿ. ಒಂದುಸಲ. ೨. ಒಂದು ವೇಳೈ (ಹೀಗಾದರೆ, ಹಾಗಾದರೆ)

**एकसंध** (ಏಕಸಂಧ್) ವಿ. ಅಖಂಡ, ಒಂದೇ ಧಾತುವಿನಿಂದ, ಜೋಡಿಸದೆ ಮಾಡಿದ (ಪಾತ್ರೆ)

**एकसमयावच्छेदेकरून** (ಏಕಸಮಯಾವಚ್ಛೇದೇಕರೂನ್) ಕ್ರಿ. ವಿ. ಒಂದೇ ವೇಳೆಗೆ (ಜರುಗುವ, ಆಗುವ).

**एकसष्ट** (ಏಕ್‌ಸಷ್ಟ) ವಿ. ಅರವತ್ತೊಂದು (೬೧) ೨. ವಯಸ್ಸಿಗೆ ೬೦ ವರ್ಷ ಪೂರ್ಣವಾದ ಮೇಲೆ ಮಾಡುವ ಸಂಸ್ಕಾರ.

**एकसारखा** (ಏಕಸಾರಖಾ) ವಿ. ಒಂದರಂತೆ ಕಾಣುವ. ಕ್ರಿ. ವಿ. ಒಂದೇಸವನೆ.

**एकहाती** (ಏಕಹಾತೀ) ವಿ. ಒಬ್ಬನೇ ಮಾಡುವ (ವ್ಯವಹಾರ)

**एका—क्का** (ಏಕಾ-ಕ್ಕಾ) ಪು. (ಇಸ್ಪೀಟಾಟದಲ್ಲಿ) ಆಸು, ಎಕ್ಕ.

**एकाएकी** (ಏಕಾಏಕೀ) ಕ್ರಿ. ವಿ. ಒಮ್ಮಿಂದೊಮ್ಮೆಲೆ.

**एकाकी** (ಏಕಾಕೀ) ಕ್ರಿ.ವಿ. ಸಂ. ಒಬ್ಬನೆ, ಒಬ್ಬೊಂಟಿಗ.

**एकांगी** (ಏಕಾಂಗೀ) ವಿ. ಒಬ್ಬನೇ ಮಾಡಿದ. ೨. ಒಂದೇ ಪಕ್ಷದ, ಒಂದೇ ಪಕ್ಷವಿದ್ದ.

**एकाग्र** (ಏಕಾಗ್ರ) ವಿ.ಸಂ. ಒಂದೇ ವಿಷಯದಮೇಲೆ ತಂದ, ಏಕಾಗ್ರ (ಚಿತ್ತ)

**एकांड्या** (ಏಕಾಂಡ್ಯಾ) ಪು. ಒಬ್ಬನೇ ತಿರುಗಾಡುವವ, ಕೆಲಸಮಾಡುವವ.

**एकांत** (ಏಕಾಂತ್) ಪು.ಸಂ. ಏಕಾಂತಸ್ಥಳ. ೨. ಗಂಡ ಹೆಂಡತಿಯರ ಸಮಾಗಮ.

**एकादशी** (ಏಕಾದಶೀ) ಸ್ತ್ರೀ. ಸಂ. ಏಕಾದಶಿ. **—चे घरी शिवरात्र** (—ಚೇ ಘರೀ ಶಿವರಾತ್ರ) ನಾಣ್ಣುಡಿ. ಒಬ್ಬ ಬಡವನ ಮನೆಗೆ ಬೇರೊಬ್ಬ ಬಡವ ಹೋದಹಾಗೆ.

**एका नावेत असणे** (ಏಕಾನಾವೇತ್ ಅಸಣೇ) ಕ್ರಿ. ಅ. ಒಂದೇಬಗೆಯ ವಿಪತ್ತಿನಲ್ಲಿ ಸಿಗು.

**एका पायावर तयार असणे** (ಏಕಾ ಪಾಯಾವರ್ ತಯಾರ್ ಅಸಣೇ) ಕ್ರಿ.ಅ. ಮನಸ್ಸಿನಿಂದ (ಮೆಚ್ಚಿ) ಸಿದ್ಧನಾಗು.

**एका पिसाने मोर होणे** (ಏಕಾ ಪಿಸಾನೇ ಮೋರ್ ಹೋಣೇ) ಕ್ರಿ.ಅ. ಒಂದು ಗರಿಯನ್ನು ಪಡೆದು ನವಿಲಿನಂತೆ ಜಂಭಮಾಡು.

**एका माळेचे मणी** (ಏಕಾ ಮಾಳೇಚೇ ಮಣೀ) ಪು. ಬಹು. ಒಂದೇ ಸ್ವಭಾವದವರು.

**एकावन** (ಏಕಾವನ್) ವಿ. ಐವತ್ತೊಂದು (೫೧)

**एकांशी** (ಏಕಾಂಶೀ) ಕ್ರಿ. ವಿ. ಒಂದೇ ಬಗೆಯಿಂದ.

**एकाह—हा—त्तर** (ಏಕಾಹ-ಹಾ-ತ್ತರ್) ವಿ. ಎಪ್ಪತ್ತೊಂದು (೭೧)

**एका हाताने टाळी वाजत नाही** (ಏಕಾ ಹಾತಾನೇ ಟಾಳೀ ವಾಜತ್ ನಾಹೀ) ನಾಣ್ಣುಡಿ. ಒಬ್ಬನಿಂದಲೇ ಜಗಳಕ್ಕೆ ಪ್ರಾರಂಭವಾಗಲಾರದು.

**एकाहिशेबी** (ಏಕಾಹಿಶೇಬೀ) ಕ್ರಿ. ವಿ. ಒಂದು ಬಗೆಯಿಂದ ವಿಚಾರಮಾಡಿದರೆ.

**एकाक्ष** (ಏಕಾಕ್ಷ) ವಿ. ಸಂ. ಒಂದು ಕಣ್ಣಿನವ. ೨. ಪು. ಕಾಗೆ.

**एकी** (ಏಕೀ) ಸ್ತ್ರೀ. ಒಕ್ಕಟ್ಟು.

**एकीकडील** (ಏಕೀಕಡೀಲ್) ವಿ. ಒಂದೇ ನಿಟ್ಟಿನಲ್ಲಿದ್ದ.

**एकीकडे** (ಏಕೀಕಡೇ) ಕ್ರಿ. ವಿ. ಒಂದೆಡೆಗೆ.

**एकीकरण** (ಏಕೀಕರಣ್) ನ.ಸಂ. ಏಕೀಕರಣ, ಒಟ್ಟುಗೂಡಿಸುವಿಕೆ.

**एकु—को—ण** (ಏಕು-ಕೋ-ಣ್) ಕ್ರಿ. ವಿ. ಒಂದು ಕಡಿಮೆ ಇದ್ದ (ಸಂಖ್ಯೆ) ಉದಾ. **एकूणचाळीस** (ಏಕೂಣ್ ಚಾಳೀಸ್) ಮೂವತ್ತೊಂಬತ್ತು (ನಾಲ್ವತ್ತಕ್ಕೆ ಒಂದು ಕಡಿಮೆ) ೨. ಒಟ್ಟಿನ ಮೇಲೆ ಸಾರಾಂಶವೇನೆಂದರೆ.

**एकुलता (एक)** (—ಏಕುಲತಾ [ಏಕ್]) ವಿ. ಒಬ್ಬನೆ ಒಬ್ಬ (ಮಗ ಮುಂ.)

**एकूण** (ಏಕೂಣ್) ಕ್ರಿ. ವಿ. ಹಾಗೆಂದರೆ, ಹಾಗಾದರೆ ಒಟ್ಟಿನಮೇಲೆ.

**एकेरी** (ಏಕೇರೀ) ವಿ. ಒಂದೇ ವಸ್ತುವುಳ್ಳ. **—वर येणे** (—ವರ್ ಏಣೇ) ರೀತಿಬಿಟ್ಟು ಜಗಳಾಡು (ನೀವು ಅನ್ನದೆ ನೀನು ಅನ್ನು)

**एकोत्रा** (ಏಕೋತ್ರಾ) ಪು. ತಿಂಗಳಿಗೆ ಶೇಕಡ ಒಂದು ರೂಪಾಯಿ ದರದ ಬಡ್ಡಿ.

**एकोपा** (ಏಕೋಪಾ) ಪು. ಒಕ್ಕಟ್ಟು.

**एक्का** (ಏಕ್ಕಾ) ಪು. (ಇಸ್ಪೇಟಿನಲ್ಲಿಯ) ಆಸು, ಎಕ್ಕ

**एका (खा) दा** (ಏಕಾ-ಖಾ-ದಾ) ವಿ. ಯಾವನಾದರೊಬ್ಬನು.

**एखाददुसरा** (ಏಖಾದದುಸರಾ) ವಿ. ಯಾರಾದರೊಬ್ಬನು, ಒಂದಿಲ್ಲೊಂದು.

**एड** (ಏಡ್) ಸ್ತ್ರೀ. ಕುದುರೆಗೆ ಹಿಂಗಾಲಿನಿಂದ ಕೊಟ್ಟ ಗತಿ.

**एडका** (ಏಡಕಾ) ಪು. ಟಗರು.

**एणें** (ಏಣೇ) ನ. **येणे** ನೋಡಿರಿ.

**एतद्देशीय** (ಏತದ್ದೇಶೀಯ) ಇದೇ (ಒಂದೇ) ದೇಶದ.

**एतादृश** (ಏತಾದೃಶ) ವಿ. ಸಂ. ಈ ಬಗೆಯ-ಮಾದರಿಯ

**एतावता** (ಏತಾವತಾ) ಕ್ರಿ. ವಿ. ಸಂ. ಇಷ್ಟರಿಂದ.

**एथचा–ला** (ಏಥಚಾ-ಏಥಲಾ) ವಿ. ಇಲ್ಲಿಯ.

**एथपर्यंत** (ಏಥಪರ್ಯಂತ್) ಕ್ರಿ. ವಿ. ಇಲ್ಲಿಯವರೆಗೆ.

**एथील** (ಏಥಿಲ್) ವಿ. ಇಲ್ಲಿಯ.

**एथे** (ಏಥೇ) ಕ್ರಿ. ವಿ. ಇಲ್ಲಿ.

**एथून–एथोन** (ಏಥೂನ್-ಏಥೂನ್) ಕ್ರಿ. ವಿ. ಇಲ್ಲಿಂದ

**एधवा** (ಏಧವಾ) ಕ್ರಿ. ವಿ. (ಹಳೆಯ ಮರಾಠಿ) ಈಗ

**एरझारा** (ಏರಝಾರಾ) ಪು. ಎಡತಾಕುವಿಕೆ.

**एरंड–डी** (ಏರಂಡ್-ಡೀ) ಪು. ಸ್ತ್ರೀ. ಔಡಲ.

**एरंडेल** (ಏರಂಡೇಲ್) ನ. ಔಡಲ ಎಣ್ಣೆ.

**एरव्हा** (ಏರವ್ಹಾ) ಕ್ರಿ. ವಿ. ನಾಡಿದ್ದಿನ, ಮುಂದಿನ ದಿವಸ.

**एरवी–व्ही** (ಏರವೀ-ವ್ಹೀ) ಕ್ರಿ.ವಿ. ಸಾಮಾನ್ಯವಾಗಿ ೨. ವಿಶೇಷವೇನೂ ಇಲ್ಲದೆ. ೩. ಸುಮ್ಮನೆ.

**एलगार** (ಏಲಗಾರ್) ಪು. ಫಾ. ದಂಡೆತ್ತಿಹೋಗುವಿಕೆ ಆಕ್ರಮಣ, ದಿಗ್ವಿಜಯ.

**एल–ला–ची** (ಏಲ-ಲಾ-ಚೀ) ಸ್ತ್ರೀ. ಏಲಕ್ಕಿ.

**एवं** (ಏವಂ) ಕ್ರಿ. ವಿ. ಸಂ. ಈರೀತಿಯಾಗಿ.

–**च** (–ಚ) ಕ್ರಿ. ವಿ. ಒಟ್ಟಿನಮೇಲೆ.

**एवढा** (ಏವಢಾ) ವಿ. ಇಷ್ಟು.

**एवीतेवी** (ಏವೀತೇವೀ) ಕ್ರಿ.ವಿ. ಹೇಗಾದರೂ, ಇಲ್ಲದೆ ಇದ್ದರೂ.

**एव्हा–ना** (ಎವ್ಹಾ-ನಾ) ಕ್ರಿ. ವಿ. ಇಷ್ಟು ಹೊತ್ತಿನ ತನಕ.

**एळकोट** (ಏಳ್‌ಕೋಟ್) ಪು. ಕ. ಏಳಕೋಟ್ ಎಂಬ ಜಯಜಯಕಾರ, ಎಲ್ಲಮ್ಮ - ಖಂಡೋಬನ ಜಯಜಯಕಾರ. ೨. ಅವ್ಯವಸ್ಥೆ.

**एळचाबोळ** (ಏಳ್ಯಾಬೋಳ್) ಪು. ಲೋಳಿಸರ, ಒಂದು ವನಸ್ಪತಿ.

## ऐ ಐ

**ऐ** : (ಐ:) ಒಂಬತ್ತನೆಯ ಸ್ವರ.

**ऐकणे**: (ಐಕಣೇ) ಕ್ರಿ. ಸಂ. ಕೇಳು, ಒಪ್ಪು, ಮನ್ನಿಸು

**ऐकमत्य** (ಐಕಮತ್ಯ) ನ. ಸಂ. ಏಕಮತ, ಸರ್ವಾನುಮತಿ, ಎಲ್ಲರ ಒಪ್ಪಿಗೆ.

**ऐकीव** (ಐಕೀವ) ವಿ. ಕೇಳಿಕೆಯ, ಕೇಳಿದ (ಸುದ್ದಿಮುಂ.)

**ऐक्य** (ಐಕ್ಯ) ನ. ಸಂ. ಒಕ್ಕಟ್ಟು.

**ऐच्छिक** (ಐಚ್ಛಿಕ) ವಿ. ಸಂ. ಮನಸ್ಸಿಗೆ ಬಂದ, ಮೆಚ್ಚಿಕೆ, ಮೆಚ್ಚುಗೆ.

**ऐट** (ಐಟ್) ಸ್ತ್ರೀ. ಸಡಗರ, ಜಂಭ, ಡಂಭ.

–**बाज** (–ಬಾಜ್) ವಿ. ಡೌಲು ಮಾಡುವವ, ಸಡಗರ ಮಾಡುವವ.

**ऐतखाऊ** (ಐತಖಾಊ) ವಿ. ಶ್ರಮಪಡದೆ ಉಪಭೋಗ ಮಾಡುವವ, ಪರೋಪಜೀವಿ.

**ऐंद्रजालिक** (ಐಂದ್ರಜಾಲಿಕ) ಪು. ಸಂ. ಮಾಟಗಾರ, ಮೋಸಗಾರ, ಯಾತುಕಾರ, ಜಾದೂಗಾರ.

**ऐना** (ಐನಾ) ಪು. ಫಾ. ಕನ್ನಡಿ.

**ऐना–ने–महाल** (ಐನಾ–ನೇ–ಮಹಾಲ್) ಪು. ಫಾ+ಅರ. ಕನ್ನಡಿಯ ಅರಮನೆ, ಶೀಸ್ ಮಹಲ್.

**ऐपत** (ಐಪತ್) ಸ್ತ್ರೀ. ಶಕ್ತಿ, ದುಡ್ಡಿನ ಬಲ, ಸಂಪತ್‌ಸಾಮರ್ಥ್ಯ.

–**दार** (–ದಾರ್) ಪು. ಕೊಳ್ಳುವ ಶಕ್ತಿ ಇದ್ದವ.

**ऐब** (ಐಬ್) ಪು. ಅರ. ಕುಂದು, ಕೊರತೆ.

**ऐरण–णी** (ಐರಣ್–ಣೀ) ಸ್ತ್ರೀ. ಬಡಿಗಲ್ಲು, ಅಡಿಗಲ್ಲು

**ऐरावत** (ಐರಾವತ್) ಪು. ಸಂ. ಐರಾವತ, ಸ್ವರ್ಗದ ಆನೆ.

**ऐल** (ಐಲ್) ಕ್ರಿ. ವಿ. (ಹೊಳೆಯ) ಈ ಬದಿಗೆ, ಈಚೆಗೆ.

–**पैल** (–ಪೈಲ್) ಕ್ರಿ. ವಿ. ಇತ್ತಕಡೆ, ಅತ್ತಕಡೆ, ಹೊಳೆಯ ಎರಡೂ ಬದಿಗೂ.

**ऐवज** (ಐವಜ್) ಪು. ಅರ. ಒಂದರ ಬದಲಾಗಿ ದೊರೆತ ವಸ್ತು, ಪ್ರತಿಫಲ. ೨. ಸಂಪತ್ತು. ೩. ಬೆಲೆಬಾಳುವ ಒಡವೆ.

**ऐवजी** (ಐವಜೀ) ಕ್ರಿ. ವಿ. ಅರ. ಬದಲಾಗಿ.

**ऐषाराम** (ಐಷಾರಾಮ್) ಪು. ಅರ+ಫಾ. ಸುಖ ವಿಲಾಸ.

**ऐ–ऐंशी** (ಐ–ಐಂಶೀ) ವಿ. ಎಂಬತ್ತು (೮೦)

**ऐश्वर्य** (ಐಶ್ವರ್ಯ) ನ. ಸಂ. ಸಂಪತ್ತು. ೨. ದೊರೆತನ. ಆಧಿಪತ್ಯ.

**–वान** (–ವಾನ್) ವಿ. ಸಿರಿವಂತ.

**ऐसपैस** (ಐಸ್‌ಪೈಸ್) ಕ್ರಿ. ವಿ. ವಿಸ್ತೃತ, ವಿಸ್ತೀರ್ಣ (ಮನೆ, ಸಭಾಗೃಹ ಮುಂ.)

**ऐसा** (ಐಸಾ) ವಿ. ಈ ಬಗೆಯು.

**ऐसाजे** (ಐಸಾಜೇ) ಕ್ರಿ. ವಿ. (ಅರ್ಜಿಯಲ್ಲಿ) ಏನೆಂದರೆ, ಏಕೆಂದರೆ. ೨. ಈ ಪ್ರಕಾರ.

**ऐहिक** (ಐಹಿಕ್) ವಿ. ಸಂ. ಈ ಜಗತ್ತಿನಲ್ಲಿಯ, ಪ್ರಪಂಚದ, ಭೌತಿಕ.

# ओ ಓ

**ओ** (ಓ) ಹತ್ತನೆಯ ಸ್ವರ.

**ओका** (ಓಕಾ) ವಿ. ಜನರಿಲ್ಲದ, ಹಾಳು ಸುರಿಯುವ, ಭಣಭಣ.

**ओके वाटणे** (ಓಕೇ ವಾಟಣೇ) ಯಾರೂ ಇಲ್ಲ ಎಂಬ ಭಾವನೆಯಾಗು, ಭಣಭಣಿಸು.

**ओकारी** (ಓಕಾರೀ) ಸ್ತ್ರೀ. ವಾಂತಿ, ಕಾರಿಕೆ.

**ओक्साबोक्सी** (ಓಕ್ಸಾ ಬೋಕ್ಸೀ) ಕ್ರಿ.ವಿ. ತಾಳಲಾಗದೆ (ಅಳುವಿಕೆ)

**ओखटा** (ಓಖಟಾ) ವಿ. ಜಿಗುಪ್ಸೆಯಾಗುವ, ಬೇಸರ ಬರುವ, ಅಸಹ್ಯವಾದ.

**ओंगण** (ಓಂಗಣ್) ನ. ಗಾಲಿ, ಅಚ್ಚು ಮುಂತಾದವುಗಳಿಗೆ ಹಾಕುವ ಎಂಣೆ, ಕೀಲೆಣ್ಣೆ.

**ओगराळे** (ಓಗರಾಳೇ) ನ. ಸೌಟು.

**ओंगळ** (ಓಂಗಳ್) ವಿ. ಅಶುಭ,ಅಭದ್ರ,ಹೇಸಿಯಾದ.

**–वाणा** (–ವಾಣಾ) ವಿ.ಅಸಹ್ಯವಾದ,ಅಶುಭವಾದ.

**ओघ** (ಓಘ್) ಪು. ಸಂ. ಪ್ರವಾಹ, (ನೀರಿನ–ಮಾತಿನ ಗತಿ.

**–वती–** (ವತೀ) ವಿ. ಪ್ರವಾಹಿ, ರಭಸವುಳ್ಳ.

**ओघळ** (ಓಘಳ್) ಪು. (ನೀರು, ಹಾಲು, ಮುಂತಾದವುಗಳು) ಹರಿದುದರ ಗುರುತು.

**ओघळणे** (ಓಘಳ್‌ಣೇ) ಕ್ರಿ.ಅ.ಹರಿ,ದ್ರವಿಸು, ಸೋರು.

**ओज** (ಓಜ) ನ. ಸಂ. ಓಜಸ್ಸು, ತೇಜಸ್ಸು.

**ओजस्विता** (ಓಜಸ್ವಿತಾ) ಸ್ತ್ರೀ.ಸಂ. ತೇಜ, ತೇಜಸ್ಸು.

**ओजस्वी** (ಓಜಸ್ವೀ) ವಿ. ಸಂ. ತೇಜಸ್ವಿ,ಭವ್ಯ,ದಿವ್ಯ.

**ओंजळ** (ಓಂಜಳ್) ಸ್ತ್ರೀ. ಬೊಗಸೆ, ಹಿಡಿ.

**ओझर** (ಓಝುರ್) ಪು. ಪ್ರವಾಹ, ಹನಿಹನಿಯಾಗಿ ಹೊರಸೂಸುವಿಕೆ, ದ್ರವಣ.

**ओझरणे** (ಓಝುರಣೇ) ಕ್ರಿ. ಅ. ಸುರಿದುಹೋಗು, ಹರಿದುಹೋಗು, ಹೊರಸೂಸು.

**ओझरता** (ಓಝುರತಾ) ವಿ. ಅಸ್ಪಷ್ಟವಾದ, ನೆಟ್ಟಗೆ ಕಾಣದ, ನೋಡದಿದ್ದ.

**ओझे** (ಓಝೇ) ನ. ಹಿಂ. ೧. ಭಾರ. ೨.ಒಜ್ಜೆ,ವಜ್ಜೆ. ೩. (ಕರ್ತವ್ಯ, ಸಾಲ, ಮುಂ) ಭಾರ.

**–करी** (–ಕರೀ) ಪು. ಒಜ್ಜೆಹೊರುವವ, ಹಮಾಲ, ಕೂಲಿಯವ.

**ओटा** (ಓಟಾ) ಪು. ೧. ಅಂಕ (ತೊಡೆ) ೨. ಅಡುಗೆಯ ಕಟ್ಟೆ–ಕಟ್ಟೆ. ೩. ಒಂದು ಸಣ್ಣಹುಳ.

**ओटी** (ಓಟೀ) ಸ್ತ್ರೀ. ಉಡಿ, ೨. ಕೆಚ್ಚಲು. ೩. ಕಟ್ಟೆ, ಹೊಟ್ಟೆ, ನಾಭಿ.

**–भरणे** (ಭರಣೇ) ಕ್ರಿ. ಸ. ಉಡಿತುಂಬು.

**ओठंगण** (ಓಠಂಗಣ್) ನ. ಆಧಾರ.

**ओठंगणे** (ಓಠಂಗಣೇ) ಕ್ರಿ. ಅ. ಆನು, ಒರಗು.

**ओठ** (ಓಠ) ಪು. ತುಟಿ.

**ओड** (ಓಡ್) ಸ್ತ್ರೀ. **आढ** ನೋಡಿರಿ.

**ओढ** (ಓಢ) ಸ್ತ್ರೀ. ಆಕರ್ಷಣ, ಎಳೆತ, ಸೆಳೆತ.

**–ग–घ–स्त–** (–ಗ–ಘ–ಸ್ತ) ಸ್ತ್ರೀ.ಹಣದ ಕೊರತೆ.

**–गस्ती** (–ಗಸ್ತೀ) ಸ್ತ್ರೀ. ಹಣದ ಕೊರತೆ.

**–ण** (–ಣ) ಸ್ತ್ರೀ. ಪ್ರಥೆ, ರೂಢಿ, **–णी** (–ಣೀ) ಸ್ತ್ರೀ. ಸೆಲ್ಲೆ.

**ओढणे** (ಓಢಣೇ) ಕ್ರಿ. ಸ. ಎಳೆ, ಸೆಳೆ.

**ओढवणे** (ಓಢವಣೇ) ಕ್ರಿ.ಅ. ಒದಗು, (ಸಂಕಟ ಮು) ಪ್ರಾಪ್ತವಾಗು.

**ओढा** (ಓಢಾ) ಪು. ಹಳ್ಳ. ೨. ಆಕರ್ಷಣ. ೩. ಸೆಳೆತ, ಪ್ರವಾಹ.

**–ओढ** (–ಓಢ್) ಸ್ತ್ರೀ. ಪೀಕಲಾಟ, ಸೆಳೆತ.

**–ताण** (–ತಾಣ್) ಸ್ತ್ರೀ. ಹಣದ ಕೊರತೆ.

**–वारा** (–ವಾರಾ) ಪು. ಅಡ್ಡಿ, ಪ್ರತಿಬಂಧ.

**ओढाळ** (ಓಢಾಳ್) ವಿ. ಅಡನಾಡಿ, ಅಲೆದಾಡುವವ, ತಿರುಗುವವ, ಓಡಿ ಹೋಗುವವ, ಪು. ತಿರುಕಳಿ.

**–की** (–ಕೀ) ಸ್ತ್ರೀ. ತಿರುಗಾಟ, ಭ್ರಮಣ.

**ओढिस्त** (ಓಢಿಸ್ತ್) ಕ್ರಿ. ಹಣದ ಅಡಚಣಿ ಇದ್ದವ.

**ओढी** (ಓಢೀ) ಸ್ತ್ರೀ. ಎಳೆತ, ಸೆಳೆತ, ಆಕರ್ಷಣ.

**ओढीक** (ಓಢೀಕ್) ಪು. ತನ್ನಮಾತನ್ನೇ ಸಾಧಿಸುವವ. ೨. ಜಿಪುಣ, ಜಿಬುಟ.

**ओढून** (ಓಢೂನ್) ಕ್ರಿ. ವಿ. ಎಳೆದುಕೊಂಡು.

**–ताणून** (–ತಾಣೂನ್) ಕ್ರಿ.ವಿ. ಮನಸ್ಸಿನಲ್ಲಿಲ್ಲದೆ, ಬೇರೆಯವರ ಜುಲುಮೆಯಿಂದ.

**–ताणून् चन्द्रबळ** (–ತಾಣೂನ್ ಚಂದ್ರಬಳ್) ಸ್ತ್ರೀ. ತೋರಿಕೆಯ ಸಾಮರ್ಥ್ಯ.

**–चन्द्रबळ आणणे** (–ಚಂದ್ರಬಳ್ ಆಣಣೇ) ಕ್ರಿ.ಸ. ಅಂಜುತ್ತ ಅಂಜುತ್ತ ಶೌರ್ಯ ತೋರಿಸು, ನಟನೆ ಮಾಡು.

**ओणवणे** (ಓಣವಣೇ) ಕ್ರಿ. ಅ. ಒರಗು, ಬಗ್ಗು.

**ओणवा** (ಓಣವಾ) ವಿ. ಬಗ್ಗಿದ, ಸೊಟ್ಟಾದ.

**ओत** (ಓತ್) ಪು. ಉಕ್ಕಿಬರುವಿಕೆ, ರಭಸ.

**ओत** (ಓತ್) ಪು. (ವಸ್ತ್ರದ, ಮಗ್ಗದ) ಉದ್ದೆಳೆ.

**–प्रोत** (–ಪ್ರೋತ್) ಕ್ರಿ. ವಿ. ಸಂಪೂರ್ಣವಾಗಿ.

**ओतकाम** (ಓತಕಾಮ್) ನ.ಎರಕದಲ್ಲಿ ಹೊಯ್ಯುವಿಕೆ. ೨. ಅಚ್ಚಿನಲ್ಲಿ ಧಾತುವಿನ ರಸವನ್ನು ಸುರಿದು ಮಾಡಿದ ಸಾಮಾನು, ಅಚ್ಚಿನ ಪಾತ್ರೆ.

**ओतणी** (ಓತಣೀ) ಸ್ತ್ರೀ.ಅಚ್ಚು,ಎರಕೆ, ಸುರಿಯುವಿಕೆ.

**ओतणे** (ಓತಣೇ) ಕ್ರಿ. ಸ. ಸುರಿ, ಹೊಯ್ಯು,ಹಾಕು, ಸುರುವು.

**ओतशाळा** (ಓತಶಾಳಾ) ಸ್ತ್ರೀ. ಧಾತುವನ್ನು ಕರಗಿಸಿ ಎರಕ ಹೊಯ್ಯುವ ಕಾರ್ಖಾನೆ. ೨. ಫೌಂಡ್ರಿ.

**ओतारी** (ಓತಾರೀ) ಪು. ಎರಕ ಹಾಕುವವ, ಅಚ್ಚಿನ ಪಾತ್ರೆಗಳನ್ನು ಮಾಡುವವ, ಮೂರ್ತಿಗಳನ್ನು ಮಾಡುವವ.

**ओतीव** (ಓತೀವ್) ವಿ. ಎರಕ ಹೊಯ್ದುಮಾಡಿದ, ಅಚ್ಚಿನಲ್ಲಿ ತಯಾರಿಸಿದ.

**ओथंबणे** (ಓಥಂಬಣೇ) ಕ್ರಿ. ಅ. ತುಂಬಿಹೋಗು, ತುಂಬಿ ತುಳುಕು.

**ओथंबा** (ಓಥಂಬಾ) ಪು. ಆಧಾರ.

**ओनामा** (ಓನಾಮಾ) ಪು. ಬರೆಯಲಿಕ್ಕೆ ಪ್ರಾರಂಭ, ಶಿಕ್ಷಣಾರಂಭ, ಮೂಲಾಕ್ಷರದ ಶಿಕ್ಷಣ.

**–सीधम्** (–ಸೀಧಂ) ಪು. ಓಂ ನಮಃ ಸಿದ್ಧಮ್, ಶಿಕ್ಷಣಾರಂಭದಲ್ಲಿ ದೇವರ ವಂದನೆ.

**ओनाम्या** (ಓನಾಮ್ಯಾ) ಪು. ಹೊಸತಾಗಿ ಕಲಿಯುವವ, ಕಲಿಯುವುದಕ್ಕೆ ಪ್ರಾರಂಭ ಮಾಡುವವ.

**ओप** (ಓಪ್) ಪು. ಒಪ್ಪ, ಮಿರಗು.

**–णी** (–ಣೀ) ಸ್ತ್ರೀ- ಒಪ್ಪ ಕೊಡುವಿಕೆ.

**–णे** (–ಣೇ) ಕ್ರಿ. ಸ. ಒಪ್ಪಹಾಕು, ಮಿಂಚುವಂತೆ ಮಾಡು.

**ओपा** (ಓಪಾ) ಪು. ಒಪ್ಪ, ಮಿಂಚುವಿಕೆ.

**ओबडधोबड** (ಓಬಡಧೋಬಡ) ವಿ. ಹುರುಬರಕಾದ ೨. ಅವಿನೀತ.

**ओंबी** (ಓಂಬೀ) ಸ್ತ್ರೀ. ಗೋಧಿಯ ತೆನೆ.

**ओरखडणे** (ಓರಖಡಣೇ) ಕ್ರಿ. ಸ. ಕೆರೆ, ತುರಿಸು, ಉಗುರು ಮೂಡಿಸು, ಚಿವುರು.

**ओरखाडा** (ಓರಖಾಡಾ) ಪು. ಕೆರೆದು ಉಗುರು ಮೂಡಿಸುವಿಕೆ, ಗೀಚುವಿಕೆ, ಚಿವುರುವಿಕೆ.

**ओरड** (ಓರಡ) ಸ್ತ್ರೀ. ಒದರಾಟ. ೨. ಕೊರತೆ. ೩. ತಕ್ರಾರು.

**आरडा–** (ಆರಡಾ–) ಸ್ತ್ರೀ. ಚೀರಾಟ, ಒದರಾಟ.

**ओरडणे** (ಓರಡಣೇ) ಕ್ರಿ. ಸ. ಒದರು, ಕೂಗು.

**ओरपणे** (ಓರಪಣೇ) ಕ್ರಿ. ಸ. ಹಿರಿದುಕೊ, ಹರಿದುಕೊ, (ಸಾರು, ಮುಂ.) ಸುರಿದುಕೊ.

**ओरफणे** (ಓರಫಣೇ) ಕ್ರಿ. ಸ. **ओरपणे** ನೋಂ.

**ओरबाडणे** (ಓರಬಾಡಣೇ) ಕ್ರಿ. ಸ. ಕೆರೆ, ತುರಿಸು, ಚಿವುರು.

**ओरवा** (ಓರವಾ) ಪು. ಹಡಗದ ಲಾಂಗಲ, ನೇಗಿಲ.

**ओल** (ಓಲ್) ಸ್ತ್ರೀ. ಹಸಿ, ಒದ್ದೆ, ತೇವು.

**ओलसर** (ಓಲಸರ್) ವಿ. ಹಸಿಯಾದ, ತೇವುವುಳ್ಳ.

**ओला** (ಓಲಾ) ವಿ. ಹಸಿಯಾದ, ಒದ್ದೆಯಾದ.

**ओलाचिंब** (ಓಲಾಚಿಂಬ್) ವಿ. ಒದ್ದೆಯಾದ, ನೀರು ಹೊರಸೂಸುವ.

**ओलांडणे** (ಓಲಾಂಡಣೇ) ಕ್ರಿ. ಅ. ದಾಟು, ದಾಟಿ ಹೋಗು. ಉಲ್ಲಂಘಿಸು.

**ओलावणे** (ಓಲಾವಣೇ) ಕ್ರಿ. ಅ. ಹಸಿಯಾಗು, (ಕಣ್ಣಿಗೆ) ನೀರುಬರು. ೨. ಕರುಣೆ ಉಂಟಾಗು.

**ओलावा** (ಓಲಾವಾ) ಪು. ಆರ್ದ್ರತೆ, ಆದರ, ಕರುಣೆ.

**ओले** (ಓಲೆ) ನ. ಒದ್ದೆ, ಹಸಿಬಟ್ಟೆ. ೨. ವಿ. ಹಸಿ, ಒದ್ದೆಯ.

ओलेता (ಓಲೇತಾ) ವಿ. ಒದ್ದೆಉಟ್ಟವ, ತೊಯಿದ ಬಟ್ಟೆಯುಳ್ಳವ.

ओवणे (ಓವಣೇ) ಕ್ರಿ. ಸ. ಪೋಣಿಸು, ಸೂಜಿಯಲ್ಲಿ ಸೇರಿಸು, (ಹೂ) ಪೋಣಿಸು.

ओवरी (ಓವರೀ) ಸ್ತ್ರೀ. ಪಡಸಾಲೆ.

ओवळा (ಓವಳಾ) ವಿ. ಮೈಲಿಗೆಯಲ್ಲಿದ್ದ.

ओवा (ಓವಾ) ಪು. ಅಜವಾನ, ಅಜಮೋದ.

पोट दुखेल तो–मागेल (ಪೊಟ್ ದುಖೇಲ್ ತೋ ಓವಾ ಮಾಗೇಲ್) ನಾಣ್ಣುಡಿ ಗರಜು ಇದ್ದವನು ಬೇಡುವನು. (ಹೊಟ್ಟೆಕಡಿದರೆ ಅಜವಾನ ಬೇಡುವನು).

ओवाळणी (ಓವಾಳಣೀ) ಸ್ತ್ರೀ. ಆರತಿಯ ತಟ್ಟೆಯಲ್ಲಿ ಹಾಕಿದ ಹಣ. ೨. ದೀಪಾವಳಿಯ (ಬಿದಿಗೆಗೆ) ಅಕ್ಕತಂಗಿಯರಿಗೆ ಕೊಟ್ಟ ಉಡುಗರೆ.

ओवाळणे (ಓವಾಳಣೇ) ಕ್ರಿ. ಸ. ಆರತಿ ಬೆಳಗು ದೃಷ್ಟಿಯನ್ನು (ದೋಷವನ್ನು) ತೆಗೆ, ನಿವಾಳಿಸಿ ಹಾಕು.

ओवी (ಓವೀ) ಸ್ತ್ರೀ. ದ್ವಿಪದಿ, ಕಾವ್ಯದಲ್ಲಿಯ ವೃತ್ತ.

ओशट (ಓಶಟ್) ವಿ. ಎಣ್ಣೆ ಬಸಿಯುವ, ಎಣ್ಣೆ ಬಳಿದ.

ओशाळणे (ಓಶಾಳಣೇ) ಕ್ರಿ. ಅ. ನಾಚು, ನಾಚಿಕೆ ಪಡು ಸಂಕೋಚಪಡು.

ओशाळी–ओशाळगत (ಓಶಾಳೀ–ಓಶಾಳಗತ್) ಸ್ತ್ರೀ. ನಾಚಿಕೆ, ಸಂಕೋಚ.

ओष्ठ (ಓಷ್ಠ) ಪು. ಸಂ. ತುಟಿ.

ओस (ಓಸ್) ವಿ. ನಿರ್ಜನ, ಹಾಳುಬಿದ್ದ.

ओसंडणे (ಓಸಂಡಣೇ) ಕ್ರಿ. ಅ. ಸ. ಚಲ್ಲು, ಸುರುವು, ಸೋರು.

ओसरणे (ಓಸರಣೇ) ಕ್ರಿ. ಅ. ಕಡಿಮೆಯಾಗು ೨. ವಾಸಿಯಾಗು.

ओसरी (ಓಸರೀ) ಸ್ತ್ರೀ. ಪಡಸಾಲೆ.

भटाला दिली––भट हातपाय पसरी (ಭಟಾಲಾ ದಿಲೀ ಓಸರೀ ಭಟ್ ಹಾತ್ ಪಾಯ್ ಪಸರೀ) ನಾಣ್ಣುಡಿ. ಪುರೋಹಿತರಿಗೆ ಕೂಡ ಹೇಳಿದರೆ ಅವರು ಅಲ್ಲಿಯೇ ಉಳಿದು ಕೊಳ್ಳುವರು.

ओसाड (ಓಸಾಡ್) ವಿ. ನಿರ್ಜನ, ಹಾಳುಬಿದ್ದ.

ओहटी–ओहोटी (ಓಹಟೀ–ಓಹೋಟೀ) ಸ್ತ್ರೀ. ಸಮುದ್ರ ತರಂಗದ ಇಳಿತ. ೨. ಹ್ರಾಸ.

ओहळ (ಓಹಳ್) ಪು. ಹಳ್ಳ, ಪ್ರವಾಹ.

ओळ (ಓಳ್) ಸ್ತ್ರೀ. ಸಾಲು, ಪಂಕ್ತಿ, ಗೆರೆ.

ओळख (ಓಳಖ್) ಸ್ತ್ರೀ. ಗುರುತು, ಪರಿಚಯ.

–देख (–ದೇಖ್) ಗರುತು, ಪರಿಚಯ.

–पत्र (–ಪತ್ರ) ನ. ಪರಿಚಯ ಪತ್ರ.

ओळखीचा (ಓಳಖೀಚಾ) ವಿ. ಪರಿಚಯದ, ಗುರುತಿನ.

ओळंबा (ಓಳಂಬಾ) ಪು. ನೂಲುಗುಂಡು, ಸಮತಲವನ್ನು ತೋರಿಸುವ ಗುಂಡು.

## औ ಔ

औ ಔ ಮರಾಠೀ ವರ್ಣಮಾಲೆಯ ಹನ್ನೆರಡನೆಯ ಸ್ವರ.

औंदा (ಔಂದಾ) ಅವ್ಯ. ಫಾ. ಈ ವರ್ಷ.

औखळ (ಔಖಳ್) ವಿ. ಕುಚೋದ್ಯದ, ಅವಿನೀತ.

औचट (ಔಚಟ್) अवचट ನೋ.

औचित (ಔಚಿತ್) ವಿ. अवचित ನೋ.

औचित्य (ಔಚಿತ್ಯ) ನ. ಸಂ. ಉಚಿತತೆ, ಉಪಯುಕ್ತತೆ.

औजड (ಔಜಡ್) ವಿ. ಕಠಿಣವಾದ, ಭಾರವಾದ.

औजार (ಔಜಾರ್) ನ. ಫಾ. ಸಾಧನ, ಸಲಕರಣೆ.

औट (ಔಟ್) ವಿ. ಮೂರೂವರೆ.

–घटकेचे राज्य (–ಘಟಕೇಚೇರಾಜ್ಯ) ಅಸ್ಥಿರ ಐಶ್ವರ್ಯ.

औटकी (ಔಟಕೀ) ಸ್ತ್ರೀ. ಮೂರೂವರೆಯ ಮಗ್ಗಿ, ಗುಣಿತ.

औटी (ಔಟೀ) ಸ್ತ್ರೀ. ಕಟ್ಟಿಗೆಯ ಭೇದವುಳ್ಳ ಹಲಗೆ.

औडकचौडक (ಔಡಕ್ ಚೌಡಕ್) ಪು. ಮಕ್ಕಳ ಆಟ.

औत (ಔತ್) ನ. ನೇಗಿಲ.

करी– (–ಕರೀ) ಪು. ಒಕ್ಕಲಿಗ.

–काठी (–ಕಾಠೀ) ಸ್ತ್ರೀ. ಒಕ್ಕಲತನದ ಸಲಕರಣೆ.

–धरणे (–ಧರಣೇ) ಕ್ರಿ. ಸ. ಹೊಲದ ಕೆಲಸ ಮಾಡು.

**–सुटणे** (–ಸುಟಣೇ) ಕ್ರಿ. ಅ. ಹೊಲಮನೆಯ ಕೆಲಸ ನಿಂತುಹೊಗು.

**–सोडणे** (–ಸೋಡಣೇ) ಕ್ರಿ. ಅ. ಹೊಲಮನೆಯ ಕೆಲಸವನ್ನು ಬಿಟ್ಟುಕೊಡು.

**औत्या** (ಔತ್ಯಾ) ಪು. ಒಕ್ಕಲಿಗ.

**औत्सुक्य** (ಔತ್ಸುಕ್ಯ) ನ. ಸಂ. ಉತ್ಸುಕತೆ.

**औदंड** (ಔದಂಡ್) ವಿ. ಬಹಳ, ವಿಪುಲ.

**औदार्य** (ಔದಾರ್ಯ) ನ.ಸಂ. ಉದಾರತೆ, ಔದಾರ್ಯ.

**औदासीन्य** (ಔದಾಸೀನ್ಯ) ನ. ಸಂ. ಉದಾಸೀನತೆ, ಅನಾಸಕ್ತಿ.

**औदुंबर** (ಔದುಂಬರ್)ಪು. ಸಂ. ಅತ್ತಿಯಗಿಡ, ಹಣ್ಣು.

**औद्धत्य** (ಔದ್ಧತ್ಯ) ನ.ಸಂ. ಉದ್ಧತತನ, ಸೊಕ್ಕು.

**औद्योगिक** (ಔದ್ಯೋಗಿಕ) ವಿ. ಸಂ. ಉದ್ಯೋಗಕ್ಕೆ ಸಂಭಂಧಿಸಿದ.

**औपचारिक** (ಔಪಚಾರಿಕ) ವಿ. ಸಂ. ಉಪಚಾರದ, ರೂಢಿಗೆ ಅನುಸರಿಸುವ.

**औपरोधिक** (ಔಪರೋಧಿಕ್) ವಿ. ಸಂ. ವ್ಯಂಗ್ಯಾತ್ಮಕ ವಕ್ರೋಕ್ತಿಯುಳ್ಳ.

**और** (ಔರ್) ವಿ. ಹಿಂ. ವಿಲಕ್ಷಣ, ಶ್ರೇಷ್ಠ. ೨. ವಿಚಿತ್ರ.

**औरत** (ಔರತ್) ಸ್ತ್ರೀ. ಅರ. ಸ್ತ್ರೀ. ಹೆಂಗಸು. ೨. ಹೆಂಡತಿ. ೩. ಉಪಪತ್ನಿ.

**औरस** (ಔರಸ್) ವಿ. ಅರ. ವಿವಾಹಜನ್ಯ (ಸಂತಾನ) ಸಕ್ರಮ.

**–चौरस** (–ಚೌರಸ್) ಕ್ರಿ. ವಿ. ಉದ್ದಗಲವಾಗಿ.

**और्ध्वदेहिक** (ಔರ್ಧ್ವದೇಹಿಕ್) ವಿ. ಸಂ. ಉತ್ತರ ಕ್ರಿಯೆಗೆ ಸಂಬಂಧಿಸಿದ.

**औलाद** (ಔಲಾದ್) ಸ್ತ್ರೀ. ಅರ. ಸಂತತಿ.

**औलिया** (ಔಲಿಯಾ) ಪು. ಅರ. ಮುಸಲ್ಮಾನ ಸಾಧು

**औषध** (ಔಷಧ್) ನ. ಸಂ. ಔಷಧ, ಮದ್ದು.

**–पाणी** (–ಪಾಣೀ) ಸ್ತ್ರೀ. ಶುಶ್ರೂಷೆ, ಆರೈಕೆ.

**औषधाला नसणे** (ಔಷಧಾಲಾ ನಸಣೇ) ಕ್ರಿ. ಅ. ಸ್ವಲ್ಪಸಹ ಇಲ್ಲದಿರುವಿಕೆ.

**औषधी** (ಔಷಧೀ) ವಿ. ಔಷಧದ. ೨. ಸ್ತ್ರೀ. ವನಸ್ಪತಿ

**औषधोपचार** (ಔಷಧೋಪಚಾರ್) ಪು. ಸಂ. ಆರೈಕೆ.

**औष्णिक** (ಔಷ್ಣಿಕ್) ವಿ. ಸಂ. ಉಷ್ಣತೆಗೆ ಸಂಬಂಧಿಸಿದ. ೨. ಉಷ್ಣತೆಯನ್ನು ಹುಟ್ಟಿಸುವ ಯಂತ್ರ ಸಾಮಗ್ರಿ.

**औक्ष** (ಔಕ್ಷ) ನ. ಆಯುಷ್ಯ.

**–वंत** (–ವಂತ್) ವಿ. ಆಯುಷ್ಯವಂತ.

**औक्षण** (ಔಕ್ಷಣ) ನ. ಆರತಿ ಬೆಳಗುವಿಕೆ, ನಿವಾಳಿಸುವಿಕೆ.

## अं ಅಂ

**अं अनुस्वार** ಅನುಸ್ವಾರ

**उच्चार** ಉಚ್ಚಾರ. **मंद** – ಮಂದ; **कंस**–ಕಾಂಸ್ (ಕನ್ನಡ–ಕನ್ಸ) **अंश**–ಔಂಶ್ (ಕನ್ನಡ–ಅನ್ಶ)

**अंक** (ಅಂಕ್)ಪು. ಸಂ. ಅಂಕೆ. ೨. ತೊಡೆ. ೩. ನಾಟಕದ ಭಾಗ.

**अंकगणित** (ಅಂಕಗಣಿತ) ನ. ಸಂ. ಅಂಕೆಗಳ ಲೆಕ್ಕ, ಅರಿತ್‌ಮೆಟಿಕ್.

**अंकजाल** (ಅಂಕಜಾಲ) ನ.ಸಂ. ಅಂಕೆಗಳ ಕೋಷ್ಟಕ, "ಟೇಬಲ್"

**अंकणी** (ಅಂಕಣೀ)ಸ್ತ್ರೀ. ಫೂಟ್‌ಪಟ್ಟಿ, ರೂಲರ್.

**अंकन** (ಅಂಕನ) ನ. ಸಂ. ಗುರುತು (ಅಂಕೆ) ಹಾಕುವಿಕೆ.

**–लिपिक** (–ಲಿಪಿಕ) ಪು. ಸಂ. ಅಂಕೆ ಬರೆಯುವ ಗುಮಾಸ್ತ.

**अंकपाश** (ಅಂಕಪಾಶ) ಪು. ಸಂ. ಒಂದು ಅಂಕೆಗೆ ಅದರಿಂದಲೆ ಗುಣಿಸುತ್ತ ಮಾಡಿದ ಬಳ್ಳಿ, ಪರ್‌ಮ್ಯುಟೇಶನ್.

**अंक मोडणी** (ಅಂಕಮೋಡಣೀ) ಸ್ತ್ರೀ. ಸಂಖ್ಯೆ–ಅಂಕೆಗಳ ಕೆಲಸ, ಲೆಕ್ಕ.

**अंक राशि** (ಅಂಕರಾಶಿ) ಸ್ತ್ರೀ. ಸಂ. ಅಂಕೆಗಳ ಜಾಲ, ವಿಸ್ತಾರ.

**अंकसळ** (ಅಂಕಸಳೂ) ಪು. ಚಿನ್ನ, ಬೆಳ್ಳಿ, ಇತ್ಯಾದಿಗಳನ್ನು ಪರೀಕ್ಷಿಸುವ.

**अंकित** (ಅಂಕಿತ)ವಿ.ಸಂ. ಗುರುತು ಹಾಕಿದ. ೨. ವಶಪಟ್ಟವ.

**अंकी** (ಅಂಕೀ) ವಿ. ಗುರುತುಹಾಕಿದ. ೨. ಅಂಕೆಯ ರೂಪದಲ್ಲಿದ್ದ.

**अंकुर** (ಅಂಕುರ್) ಪು. ಸಂ. ಚಿಗುರು, ಮೊಳಕೆ.

**अंकुरणे** (ಅಂಕುರಣೇ) ಕ್ರಿ. ಅ. ಚಿಗುರು, ಮೊಳಕೆ ಒಡೆಯುವಿಕೆ.

**अंकुरित** (ಅಂಕುರಿತ) ವಿ. ಮೊಳಕೆ ಒಡೆದ.

**अंकुश** (ಅಂಕುಶ್) ಪು. ಸಂ. ೧. ಅಂಕುಶ. ೨. ಬಿಗಿ ಹಿಡಿತ, ಆನೆಯನ್ನು ನಡೆಸುವ ಉಕ್ಕಿನ ಸಾಧನ.

**अंग** (ಅಂಗ್) ನ. ಸಂ. ಶರೀರ, ಮೈ, ಅವಯವ, (ವಹಿಸಿದ ಭಾಗ).

**–असणे** (–ಅಸಣೇ) ಭಾಗವಹಿಸು.

**–काढणे** (–ಕಾಢಣೇ) ಕ್ರಿ. ಸ. ಬಿಟ್ಟುಕೊಡು, ಪರಾಙ್ಮುಖನಾಗು.

**–धरणे** (–ಧರಣೇ) ಕೈಕಾಲು, ಸಂಧಿವಾತದಿಂದ ಹಿಡಿಯುವಿಕೆ, ೨. ಕೊಬ್ಬು, ಮೈಬಿಡು.

**–चोरणे** (–ಚೋರಣೇ) ಬೇಸರಮಾಡು, ಕೆಲಸ ತಪ್ಪಿಸು, ಮೈಗಳ್ಳತನ ಮಾಡು.

**अंग–धुणे** (ಅಂಗ–ಧುಣೇ) ಸ್ನಾನಮಾಡು (ಸ್ತ್ರೀಯರು)

**–मोडून काम करणे** (–ಮೋಡುನ್ ಕಾಮ್‌ಕರಣೇ) ಶ್ರಮಪಟ್ಟು ದುಡಿ.

**–मोडून येणे** (–ಮೋಡೂನ್‌ಯೇಣೇ) ಜ್ವರ ಬಂದಂತೆ ಅನಿಸು.

**–वळणी पडणे** (–ವಳಣೀ ಪಡಣೇ) ರೂಢಿಯಾಗು. ಅಭ್ಯಾಸವಾಗು.

**(–अंगा) चा तिळपापड होणे** (–ಅಂಗಾಚಾ ತಿಳ್ ಪಾಪಡ್ ಹೋಣೇ) ಸಿಟ್ಟು–ಕೋಪಬರು.

**(–अंगा) वर काटा उभा राहणे** (–ಅಂಗಾವರ್ ಕಾಟಾ ಉಭಾ ರಾಹಣೇ) ನ. ಮೈಮೇಲೆ ಮುಳ್ಳು ಬರುವಿಕೆ.

**अंगावर तुटणे** (ಅಂಗಾವರ್ ತುಟಣೇ) ಕ್ರಿ. ಸ. ರೇಗಿ ಮೈಮೇಲೆ ಬರು.

**अंगावर पडणे** (ಅಂಗಾವರ್ ಪಡಣೇ) ಕ್ರಿ. ಅ. ಮೈಮೇಲೆ (ಭಾರ) ಬೀಳು.

**अंगावर शेकणे** (ಅಂಗಾವರ್‌ಶೇಕಣೇ) ಕ್ರಿ. ಅ. ನಷ್ಟ ಒದಗು.

**अंगकंप** (ಅಂಗ ಕಂಪ್) ಪು. ಸಂ. ಮೈನಡುಗು.

**अंगकाठी** (ಅಂಗಕಾಠೀ) ಸ್ತ್ರೀ. ಶರೀರ ಸೌಂದರ್ಯ, ದೇಹಯಷ್ಟಿ, ಗಾತ್ರ.

**अंगकांती** (ಅಂಗಕಾಂತೀ) ಸ್ತ್ರೀ. ಸಂ. ಮೈಹೊಳಪು, ತೇಜಸ್ಸು.

**अंगचा** (ಅಂಗಚಾ) ವಿ. ಮೂಲ, ಸ್ವಾಭಾವಿಕ.

**अंगचापल्य** (ಅಂಗಚಾಪಲ್ಯ) ನ. ಸಂ. ಚುರುಕುತನ.

**अंग चुकवणे** (ಅಂಗ ಚುಕವಣೇ) ಕ್ರಿ. ಸ. ಮೈಗಳ್ಳತನ ಮಾಡು.

**अंगचोर** (ಅಂಗಚೋರ್) ವಿ. ಮೈಗಳ್ಳ.

**अंगच्छेद** (ಅಂಗಚ್ಛೇದ) ಪು. ಸಂ. ಅವಯವಭೇದನ, ಕೆಟ್ಟ–ಕೊಳೆತ ಗಾತ್ರವನ್ನು ತೆಗೆದುಹಾಕುವಿಕೆ.

**अंगज** (ಅಂಗಜ) ಪು. ಸಂ. ಆತ್ಮಜ, ಮಗ. ೨. ಮಂದ ಬುದ್ಧಿಯವ. ೩. ಸೋಮಾರಿ.

**अंगजा** (ಅಂಗಜಾ) ಸ್ತ್ರೀ. ಸಂ. ಮಗಳು.

**अंगजोर** (ಅಂಗಜೋರ್) ಪು. ಮೈಯಲ್ಲಿಯ ಶಕ್ತಿ.

**अंगठा** (ಅಂಗಠಾ) ಪು. ಹೆಬ್ಬೆಟ್ಟು.

**–उठवणे** (–ಉಠವಣೆ) ಹೆಬ್ಬೆಟ್ಟು ಮೂಡಿಸು.

**–दाखवणे** (–ದಾಖವಣೇ) ನಿಕಾರಿಸು, ಒಪ್ಪದಿರು.

**–देणे** (–ದೇಣೇ) ಕ್ರಿ. ಸ. ಸಮ್ಮತಿಸು.

**अंगठ्याची आग मस्तकात जाणे** (ಅಂಗಠ್ಯಾಚೀ ಆಗ ಮಸ್ತಕಾತ ಜಾಣೆ) ಸಿಟ್ಟಿಗೇಳು, ರೊಚ್ಚಿಗೇಳು.

**अंगठी** (ಅಂಗಠೀ) ಸ್ತ್ರೀ. ಉಂಗುರ.

**अंगठेवण** (ಅಂಗಠೇವಣ್) ಸ್ತ್ರೀ. ಶರೀರದ ಆಕಾರ, ಮೈಕಟ್ಟು.

**अंगडे** (ಅಂಗಡೇ) ನ. ನಿಲುವಂಗಿ, ಮಕ್ಕಳ ಉದ್ದನ್ನ ಅಂಗಿ.

**अंगण** (ಅಂಗಣ್) ನ. ಅಂಗಳ, ರಂಗ.

**अंगतोल** (ಅಂಗತೋಲ್) ಪು. ಜೋಲಿ, ಮೈತೂಕ.

**अंगत्राण** (ಅಂಗತ್ರಾಣ್) ನ. ಸಂ. ಕವಚ, ಚಿಲಖತ್ತು.

**अंगदनीती–ति** (ಅಂಗದ ನೀತಿ) ಸ್ತ್ರೀ. ಸಂ. ಒಳ್ಳೆಯ ವ್ಯವಹಾರ, ನಡತೆ.

**अंगद शिष्टाई** (ಅಂಗದ ಶಿಷ್ಟಾಈ) ಸ್ತ್ರೀ. ಜಗಳ ತೀರಿಸುವ ನಿಷ್ಫಲ ಪ್ರಯಾಸ.

**अंगदेवता** (ಅಂಗದೇವತಾ) ಸ್ತ್ರೀ. ಸಂ. ಮುಖ್ಯ ದೇವತೆಯ ಜೊತೆಯ ದೇವತೆ.

**अंगधट** (ಅಂಗಧಟ) ವಿ. ಉದ್ಧತ, ಸೊಕ್ಕಿನ.

**अंगधटाई** (ಅಂಗಧಟಾಈ) ಸ್ತ್ರೀ. ಸೊಕ್ಕು.

**अंगधिटाई** (ಅಂಗಧಿಟಾಈ) ಸ್ತ್ರೀ. **अंगधटाई** ನೋಡಿರಿ.

**अंगना** (ಅಂಗನಾ) ಸ್ತ್ರೀ. ಸಂ. ಹೆಂಗಸು.

**अंगपात** (ಅಂಗಪಾತ) ಪು. ಸೊರಗುವಿಕೆ.

**अंगपिळा** (ಅಂಗಪಿಳಾ) ಸ್ತ್ರೀ. ಮೈಮುರಿಯುವಿಕೆ, ಆಲಸ್ಯ ಪ್ರದರ್ಶನ.

**अंगप्रत्यंग** (ಅಂಗಪ್ರತ್ಯಂಗ) ನ. ಸಂ. ಪೂರ್ಣ ಶರೀರ.

**अंगबळ** (ಅಂಗಬಳ್) ನ. ಮೈಯಲ್ಲಿಯ ಶಕ್ತಿ.

**अंगबाधा** (ಅಂಗಬಾಂಧಾ) ಪು. ಮೈಕಟ್ಟು.

**अंगभंग** (ಅಂಗಭಂಗ) ಪು. ಸಂ. ಹಾವಭಾವ.

**अंगभर** (ಅಂಗಭರ್) ವಿ. ಮೈಗೆ ಹಾಳತವಾಗುವ, ಸಾಲುವ.

**अंगभूत** (ಅಂಗಭೂತ) ವಿ.ಸಂ. ಮೂಲ ಘಟಕವಾದ, ನೈಸರ್ಗಿಕ.

**अंगमर्दन** (ಅಂಗಮರ್ದನ) ನ. ಸಂ. ಮೈತಿಕ್ಕುವಿಕೆ, ಮೈಒತ್ತುವಿಕೆ.

**अंगमस्ती** (ಅಂಗಮಸ್ತೀ) ಸ್ತ್ರೀ. ಮ + ಫಾ. ಮೈಸೊಕ್ಕು.

**अंगमार्दव** (ಅಂಗಮಾರ್ದವ) ನ.ಸಂ. ಶರೀರದ ಕೋಮಲತ್ವ.

**अंगमेहनत** (ಅಂಗಮೆಹನತ್) ಸ್ತ್ರೀ.ಫಾ. ಮೈದುಡಿತ, ಶಾರೀರಿಕ ಶ್ರಮ.

**अंगमोडून** (ಅಂಗಮೋಡುನ್) ಕ್ರಿ. ವಿ. ಶ್ರಮಪಟ್ಟು, ಮನಃಪೂರ್ವಕ.

**अंगयष्टि** (ಅಂಗಯಷ್ಟಿ) ಸ್ತ್ರೀ. ಸಂ. ಮೈಕಟ್ಟು.

**अंगरखा** (ಅಂಗರಖಾ) ಪು. ಹಿಂ. ಅಂಗಿ, ನಿಲುವಂಗಿ, ಕಮೀಸು.

**अंगरस** (ಅಂಗರಸ್) ಪು. ಫಲದ ಸ್ವಾಭಾವಿಕ ರಸ.

**अंगराग** (ಅಂಗರಾಗ) ಪು. ಸಂ. ಸುಗಂಧ ದ್ರವ್ಯ.

**अंगलट** (ಅಂಗಲಟ್) ಮೈಕಟ್ಟು.

**—येणे** (—ಯೇಣೇ) ಕ್ರಿ.ಅ. ಫಜಿತಿ ಪಡು, ತೊಂದರೆ ಸಹಿಸು.

**अंगवस्त्र** (ಅಂಗವಸ್ತ್ರ) ನ. ಒಲ್ಲಿ ಸೆಲ್ಲೆ. ೨. ಇಟ್ಟುಕೊಂಡ ಹೆಣ್ಣು, ಮಿಂಡೆ, ಉಪಪತ್ನಿ.

**अंगवळण** (ಅಂಗವಳಣ್) ನ. ಶರೀರ ಸ್ವರೂಪ, ಮೈಕಟ್ಟು. ೨. (ಶರೀರದ) ಅಭ್ಯಾಸ.

**अंगवळणी पडणे** (ಅಂಗ್‌ವಳಣೀ ಪಡಣೇ) ಅಭ್ಯಾಸವಾಗು, ಸ್ವಭಾವ, ಧರ್ಮವಾಗು.

**अंगविक्षेप** (ಅಂಗ್‌ವಿಕ್ಷೇಪ) ಪು. ಹಾವಭಾವ, ಅಂಗಭಂಗಿ.

**अंगवैकल्य** (ಅಂಗವೈಕಲ್ಯ) ನ. ಶರೀರದ ನ್ಯೂನತೆ, ವಿಕೃತಿ.

**अंगसंवाहन** (ಅಂಗ ಸಂವಾಹನ) ನ. ಮೆತ್ತಗೆ ಮೈ ಒತ್ತುವಿಕೆ.

**अंगसंग** (ಅಂಗಸಂಗ) ಪು.ಸಂ. ಮೈಥುನ, ಸಂಭೋಗ.

**अंगसौष्ठव** (ಅಂಗಸೌಷ್ಠವ) ನ. ಸಂ. ಶರೀರದ ಸೊಬಗು.

**अंगस्वभाव** (ಅಂಗಸ್ವಭಾವ) ಪು. ನ. (ಶರೀರದ) ಸ್ವಭಾವ, ಅಭ್ಯಾಸ.

**अंगाई** (ಅಂಗಾಈ) ಸ್ತ್ರೀ. (ಮಕ್ಕಳ) ನಿದ್ದೆ. ೨. ಜೋಗುಳ ಪದ.

**—गीत** (—ಗೀತ ಜೋಗುಳ ಪದ).

**अंगाखांद्यावर खेळविणे** (ಅಂಗಾ ಖಾಂದ್ಯಾವರ ಖೇಳವಣೇ) ಕ್ರಿ. ಸ. ಕೂಸನ್ನು ಎತ್ತಿಕೊಂಡು ಆಡಿಸು.

**अंगापिंडाने** (ಅಂಗಪಿಂಡಾನೇ) ಕ್ರಿ. ವಿ. ಮೈಕಟ್ಟಿನ ದೃಷ್ಟಿಯಿಂದ, ಮೈಕೈಯಿಂದ.

**—दांडगा** (—ದಾಂಡಗಾ) ಮೈಕೈಯಿಂದ ಆಳೆತ್ತರ.

**अंगापेक्षा बोंगा मोठा** (ಅಂಗಾಪೇಕ್ಷಾ ಬೋಂಗಾ ಮೋಠಾ) (ನಾಣ್ಣುಡಿ) ಮೂಗಿಗಿಂತ ಮೂಗತಿ ದೊಡ್ಡದು.

**अंगार** (ಅಂಗಾರ್) ಪು. ಅನಾವಶ್ಯಕ ಆಡಂಬರ.
(ಅಂಗಾರ್) ಪು. ಕೆಂಡ.

**अंगारा** (ಅಂಗಾರಾ) ಪು. ಅಂಗಾರ, ಧೂಪ.

**अंगाराधुपारा** (ಅಂಗಾರಾ ಧುಪಾರಾ) ಪು. ಅರಿಷ್ಟವನ್ನು ತೊಲಗಿಸುವ ಉಪಾಯ.

**अंगीकार** (ಅಂಗೀಕಾರ್) ಪು.ಸ. ಅಂಗೀಕಾರ, ಸ್ವೀಕಾರ.

**अंगीकारणे** (ಅಂಗೀಕಾರಣೇ) ಕ್ರಿ. ಸಂ. ಅಂಗೀಕರಿಸು.

**अंगीकृत** (ಅಂಗೀಕೃತ) ವಿ. ಸಂ. ಹೊರೆಹೊತ್ತ, ಸ್ವೀಕರಿಸಿದ.

**अंगुलि(ळि)** (ಅಂಗುಲಿ—ಳಿ) ಸ್ತ್ರೀ. ಬೊಟ್ಟು, ಬೆರಳು.

**—निर्देश** (—ನಿರ್ದೇಶ) ಬೊಟ್ಟುಮಾಡಿತೋರಿಸುವಿಕೆ.

**अंगुस्तान** (ಅಂಗುಸ್ತಾನ್) ನ. ಫಾ. ಅಂಗುಸ್ತಾನಿ, ಚಿಪ್ಪಿಗರು, ಬೊಟ್ಟಿನಲ್ಲಿ ಹಾಕುವ ಕವಚ.

**अंगुळ** (ಅಂಗುಳ) ನ. ಅಂಗುಲ.

**अंगूर** (ಅಂಗೂರ್) ನ. ಫಾ. ದ್ರಾಕ್ಷೆ.

**अंचल (ळ)** (ಅಂಚಲ್-ಳ್) ಪು. ಅಂಚು. ೨. ಸೆರಗು. ೩. ಸ್ತನ, ಮೊಲೆ.

**अंचवण** (ಅಂಚವಣ್) ನ. ಮುಖಪ್ರಕ್ಷಾಲನ, ಮುಕ್ಕುಳಿಸುವಿಕೆ.

**अंचवणे** (ಅಂಚವಣೇ) ಕ್ರಿ.ಸ. ಉಂಡಮೇಲೆ ಬಾಯಿ ತೊಳೆದುಕೊ, ಬಾಯಿ ಮುಕ್ಕುಳಿಸು.

**अंजन** (ಅಂಜನ) ನ. ಸಂ. ನೇತ್ರಾಂಜನ, ಕಾಡಿಗೆ, (ಮೊನೆಮಾತು) ಕಣ್ಣು ತೆರೆಯುವ ಉಪಾಯ, ಸತ್ಯದರ್ಶನ.

**अंजना** (ಅಂಜನಾ) ಸ್ತ್ರೀ. ಹನುಮಂತನ ತಾಯಿ.

**अंजलि** (ಅಂಜಲಿ) ಸ್ತ್ರೀ. ಸಂ. ಅಂಜಲಿ, ಎರಡೂ ಕೈಗಳನ್ನು ಒಡ್ಡುವಿಕೆ. ೨. ಬೊಗಸೆ.

**अंजीर** (ಅಂಜೀರ್) ಪು. ಅಂಜೂರಿ ಹಣ್ಣು.

**अंड** (ಅಂಡ) ನ. ವೃಷಣ, ತರಡು ಬೀಜ.

**–गाळणे** (–ಗಾಳಣೇ) ಗರ್ಭಪಾತವಾಗು, ಹಲಿವುಳಿ

**–वृद्धि** (–ವೃಧ್ಧಿ) ಅಂತರ್ಗಳ, ತರಡುಬಾಯುವಿಕೆ

**अंडे** (ಅಂಡೇ) ನ. ತತ್ತಿ, ಕೋಳಿ ಮೊಟ್ಟೆ.

**अंडाकार** (ಅಂಡಾಕಾರ್) ವಿ. ಸಂ. ಅಂಡಾಕೃತಿ.

**अंडीपिल्ली** ( ಅಂಡೀಪಿಲ್ಲೀ ) ಸ್ತ್ರೀ. ಬಹುವಚನ, ಗುಪ್ತ ಸಂಗತಿ, ಮರ್ಮ, ಗುಟ್ಟು.

**अंडलि** (ಅಂಡೀಲ್) ವಿ. ಬೀಜ ಬಡಿಯದ ಹೋರಿ.

**अंडेल** (ಅಂಡೇಲ್) ವಿ. **अंडील** ನೋಡಿರಿ.

**अंत** (ಅಂತ್) ಪು. ಸಂ. ತುದಿ, ಕೊನೆ. ೨. ಸಾವು, ಮರಣ.

**–पाहणे** (ಪಾಹಣೇ) ಕ್ರಿ. ಸಂ. ತೊಂದರೆ ಕೊಡು, ಸತ್ವ ಪರೀಕ್ಷೆ ಮಾಡು.

**अंतक** (ಅಂತಕ್) ಪು. ಸಂ. ಯಮ, ಮೃತ್ಯುದೇವತೆ.

**अंतःकरण** (ಅಂತಃಕರಣ) ನ. ಸಂ. ಸದಸದ್ ವಿವೇಕ ಬುದ್ಧಿ, ದಯೆ, ಭಾವನೆ.

**अंतकाल–ळ** (ಅಂತಕಾಲ್-ಳ್) ಪು. ಸಂ. ಮರಣ ಸಮಯ.

**अंतःचक्षु** (ಅಂತಃಚಕ್ಷು) ಪು. ಸಂ. ಒಳಗಣ ದೃಷ್ಟಿ, ಮನಶ್ಚಕ್ಷು.

**अंतःकोन** (ಅಂತಃಕೋನ್) ಪು. ಸ. ಆಂತರಿಕ ಕೋನ.

**अंतःपुर** (ಅಂತಃಪುರ್) ನ. ಸಂ. ಅರಸನ ಸ್ತ್ರೀಯರ ಅರಮನೆ.

**अंतर** (ಅಂತರ್) ನ. ಸಂ. ಅಭ್ಯಂತರ, ವ್ಯತ್ಯಾಸ. ೨. ಅಂತರ, ಮಧ್ಯಾವಕಾಶ. ೩. ಅಲ್ಪ ಬಿಡುವು, ವಿಶ್ರಾಮ. ೪. ಅಂತರಂಗ.

**अंतरदेणे** (ಅಂತರ್‌ದೇಣೆ) ಬಿಟ್ಟುಕೊಡು, ತ್ಯಜಿಸು.

**–कळा** (–ಕಳಾ) ಸ್ತ್ರೀ. ಗುಪ್ತವಿದ್ಯೆ.

**–खूण** (–ಖೂಣ್) ಸ್ತ್ರೀ. ಗುಪ್ತ ಗುರುತು.

**–णे** (ಅಂತರಣೇ) ಕಳೆದುಕೊ.

**–दृष्टि** (ಅಂತರದೃಷ್ಟಿ) ಸ್ತ್ರೀ. ಅಂತರಂಗ, ಅಂತರ್ಜ್ಞಾನ.

**–पाट** (ಅಂತರಪಾಟ್) ಪು. ಅಂತಃಪಟ, ವಧೂವರರ ನಡುವೆ ಹಿಡಿದ ತೆರೆ.

**–गंगा** (–ಗಂಗಾ) ಸ್ತ್ರೀ. ಗುಪ್ತ ಗಂಗೆ.

**–सुती** (–ಸುತೀ) ವಿ. ಅರ್ಧರೇಶ್ಮೆ (ಬಟ್ಟೆ)

**–स्थ** (–ಸ್ಥ) ಮನಸ್ಸಿನಲ್ಲಿಯ, ಅಂತರಂಗದ.

**अंतरंग** (ಅಂತರಂಗ) ವಿ. ಸಂ. ಒಳಗಣ, ಮನಸ್ಸಿನಲ್ಲಿಯ. ೨. ಅಂತರಂಗ, ಗುಟ್ಟು, ಮನಸ್ಸು.

**अंतरा** (ಅಂತರಾ) ಪು. ಸಂ. ಮಧ್ಯಾವಕಾಶ, ಬಿಡುವು (ಗಾಯನ) ಅಂತರಾ, ವಿರಾಮ.

**अंतरात्मा** (ಅಂತರಾತ್ಮಾ) ಪು. ಸಂ. ಅಂತರಾತ್ಮ, ಮನೋದೇವತೆ, ಅಂತಃಕರಣ.

**अंतराय** (ಅಂತರಾಯ) ಪು. ಅಡ್ಡಿ, ತಡೆ, ಆತುರೆ.

**अंतराल** (ಅಂತರಾಲ್) ಪು. ಸಂ. ಮಧ್ಯಾವಧಿ, ಮಧ್ಯಂತರ, ಮಧ್ಯಾಕಾಶ.

**अंतराळ** (ಅಂತರಾಳ್) ನ. ಆಕಾಶ, 'ಕಾಸ್‌ಮಾಸ್' ಅಂತರಿಕ್ಷ.

**–विमान** (–ವಿಮಾನ್) ನ. ಅಂತರಿಕ್ಷದಲ್ಲಿಯ ಗ್ರಹಗಳ ಪರ್ಯಟನ ಮಾಡುವ ವಿಮಾನ.

**–वीर** (–ವೀರ್) ಅಂತರಿಕ್ಷದಲ್ಲಿ ಅತಿದೂರ ಉಡ್ಡಾಣಮಾಡುವ ಬಂಟ.

**अंतरिक्ष** (ಅಂತರಿಕ್ಷ) ನ. ಸಂ. ಆಕಾಶ.

**अंतरीप** (ಅಂತರೀಪ್) ನ. ಸ. ಭೂಶಿರ, ಸಮುದ್ರದಲ್ಲಿಯ ಭೂಮಿಯ ತುದಿ.

**अंतर्गत** (ಅಂತರ್ಗತ) ವಿ. ಆಂತರಿಕ, ಒಳಗಣ. ೨. ಒಳಪಟ್ಟ, ಅಂಶಭೂತ. ೩. ಗುಪ್ತಕಾರಣ, ಗುಟ್ಟು

**अंतर्गळ** (ಅಂತರ್ಗಳ್) ಪು. ಅಂಡವೃದ್ಧಿ.

**अंतर्ग्रह** (ಅಂತರ್ಗ್ರಹ) ನ. ಸಂ. ಉಪಗ್ರಹ.

**अंतर्गृह** (ಅಂತರ್ಗೃಹ) ನ. ಸಂ. ಮನೆಯ ಒಳಭಾಗ.

**अंतर्जठर** (ಅಂತರ್ಜಠರ) ಪು. ಹೊಟ್ಟೆ, ಉದರ.

**अंतर्दाह** (ಅಂತರ್ದಾಹ) ಪು. ಸಂ. ಶರೀರದಲ್ಲಿಯ ಪೀಡೆ, ಕಾವು. ೨. ಹೊಟ್ಟೆಕಿಚ್ಚು.

**अंतर्दृष्टि** (ಅಂತರ್‌ದೃಷ್ಟಿ) ಸ್ತ್ರೀ. ಸಂ. ಒಳನೋಟ, ಜ್ಞಾನಚಕ್ಷು.

**अंतर्द्वार** (ಅಂತರ್ದ್ವಾರ್) ನ. ಸಂ. ಒಳಬಾಗಿಲ.

**अंतर्धान** (ಅಂತರ್ಧಾನ್) ನ. ಒಮ್ಮೆಲೆ ಕಾಣದಂತಾಗುವಿಕೆ, ಮಾಯವಾಗುವಿಕೆ.

**–पावणे** (–ಪಾವಣೇ) ಕ್ರಿ. ಅ. ಮರೆಯಾಗು ಕಾಣದಂತಾಗು.

**अन्तर्ध्यान** (ಅಂತರ್ಧ್ಯಾನ್) ನ. ಸಂ. ಸಮಾಧಿ, ಯೋಗ.

**अंतर्पाट** (ಅಂತರ್ಪಾಟ್) ಪು. **अंतरपाट** ನೋಡಿರಿ.

**अंतर्बाह्य** (ಅಂತರ್ಬಾಹ್ಯ) ಕ್ರಿ. ವಿ. ಅಂತರಂಗ ಬಹಿರಂಗ ಹೀಗೆ ಎಲ್ಲ ರೀತಿಯಿಂದ.

**अंतर्भाव** ( ಅಂತರ್ಭಾವ ) ಪು. ಸ. ಸಮಾವೇಶ, ಸೇರ್ಪಡೆ. ೨. ಅಂತರಂಗ.

**अंतर्भूत** (ಅಂತರ್ಭೂತ್) ವಿ. ಸ. ಸಮಾವಿಷ್ಟ, ಒಳಪಟ್ಟ.

**अंतर्भेद** (ಅಂತರ್ಭೇದ) ಪು. ಸಂ. ಗುಟ್ಟು, ಮರ್ಮ.

**अंतर्भेदी** (ಅಂತರ್ಭೇದೀ) ವಿ. ಗುಟ್ಟುಬಲ್ಲವ.

**अंतर्मुख** (ಅಂತರ್ಮುಖ) ವಿ. ಸ್ವಂತದ ಆಚರಣೆ, ಸ್ವಭಾವ ಇವುಗಳವಿಷಯದಲ್ಲಿಮನನಮಾಡುವವ.

**अंतर्याम** (ಅಂತರ್ಯಾಮ್) ನ. ಹೃದಯ, ಭಾವನೆ, ಆತ್ಮ.

**अंतर्यामी** ( ಅಂತರ್ಯಾಮೀ ) ಪು. ಮನಸ್ಸನ್ನು ತಿಳಿಯುವವ, ಹೃದಯಸ್ಥಪರಮಾತ್ಮ. ೨. ಕ್ರಿ. ವಿ. ಮನಸ್ಸಿನಲ್ಲಿ.

**–कळवळणे** (–ಕಳವಳಣೇ) ವ್ಯಥೆಪಡು, ಮನಸಿನಲ್ಲಿ ಕೊರಗು.

**अंतर्युति** (ಅಂತರ್ಯುತಿ) ಸ್ತ್ರೀ. ಸಂ. ರಹಸ್ಯ ಒಕ್ಕೂಟ, ಗುಪ್ತಸಂಧಾನ.

**अंतर्लापिका** (ಅಂತರ್ಲಾಪಿಕಾ) ಸ್ತ್ರೀ. ಸಂ. ತಿಳಿಯದ ಮಾತು, ಗೂಢಸಮಸ್ಯೆ, ಪರಿಹಾರವಾಗದ ಪ್ರಶ್ನೆ.

**अंतर्लीन** (ಅಂತರ್ಲೀನ) ವಿ. ಗುಪ್ತ ಸಮಾವಿಷ್ಟ, ಅಂಶಭೂತ ಅಂಗಭೂತ.

**अंतर्वर्त्नी** (ಅಂತರ್ವರ್ತ್ನೀ) ವಿ. ಸ. ಬಸಿರು ಹೆಂಗಸು.

**अंतर्वर्ती** (ಅಂತರ್ವರ್ತೀ) ವಿ. ಒಳಗಿರುವ, ಸೇರಿದ, ಒಳಪಟ್ಟ.

**अंतर्वास** (ಅಂತರ್ವಾಸ) ಪು. ಒಳಗಡೆಯ (ಏಕಾಂತ)

**अंतर्वृद्धि** (ಅಂತರ್ವೃದ್ಧಿ) ಸ್ತ್ರೀ. **अंतर्गळ** ನೋಡಿರಿ.

**अंतर्वेदी** (ಅಂತರ್ವೇದೀ) ಸ್ತ್ರೀ. ಗಂಗಾ ಯಮುನಾ ನದಿಗಳ ಮಧ್ಯದಲ್ಲಿರುವ ಪ್ರದೇಶ.

**अंतर्वैर** (ಅಂತರ್ವೈರ) ನ. ಗುಪ್ತ ಶತ್ರುತ್ವ.

**अंतर्हित** (ಅಂತರ್ಹಿತ) ವಿ. ಸಂ. ಸುಪ್ತ, ಕಾಯ್ದಿಟ್ಟ.

**अंतर्ज्ञान** (ಅಂತರ್ಜ್ಞಾನ) ನ. ಬಾಹ್ಯ ಸಾಧನಗಳ ವಿನಃ ತಿಳಿದುಕೊಳ್ಳುವ ಪ್ರಜ್ಞೆ.

**अंतर्ज्ञानी** (ಅಂತರ್ಜ್ಞಾನೀ) ವಿ. ಸಂ. ಯೋಗಜ್ಞಾನಿ. ೨. ಪು. ಸಿದ್ಧಪುರುಷ.

**अंतवंत** (ಅಂತವಂತ) ವಿ. ಸಂ. ಕೊನೆಯುಳ್ಳ, ಅಶಾಶ್ವತ.

**अंतस्थ** (ಅಂತಸ್ಥ) ವಿ. ಸಂ. ಮನಸ್ಸಿನಲ್ಲಿಯ, ಗುಪ್ತ.

**अंतःस्फूर्ती** (ಅಂತಃಸ್ಫೂರ್ತೀ) ಸ್ತ್ರೀ. ಸಂ. ದೈವೀ ಪ್ರೇರಣೆ.

**अंतिक** (ಅಂತಿಕ) ಕ್ರಿ. ವಿ. ಸಂ. ಹತ್ತಿರ.

**अंतिम** (ಅಂತಿಮ) ವಿ. ಸಂ. ಕೊನೆಯ, ಕಟ್ಟಕಡೆಯ.

**अंती** (ಅಂತೀ) ಕ್ರಿ. ವಿ. ಕೊನೆಗೆ, ಕಡೆಗೆ.

**अंत्य** (ಅಂತ್ಯ) ವಿ. ಸಂ. ಕೊನೆಯ.

**–क्रिया** (–ಕ್ರಿಯಾ) ಸ್ತ್ರೀ. ಉತ್ತರಕ್ರಿಯೆ.

**–ज** (–ಜ) ಶೂದ್ರ.

**अंत्यावस्था** (ಅಂತ್ಯಾವಸ್ಥಾ) ಸ್ತ್ರೀ. ಸಂ. ಮರಣ ಸಮಯ' ಆಸನ್ನಮರಣ ಸ್ಥಿತಿ.

**अंत्येष्टि** ( ಅಂತ್ಯೇಷ್ಟಿ ) ಸ್ತ್ರೀ. ಸಂ. ಉತ್ತರ ಕ್ರಿಯೆ, ಪಿಂಡದಾನಾದಿ ವಿಧಿ.

**अंत्र** (ಅಂತ್ರ) ನ. ಕರುಳು.

–ವೃದ್ಧಿ– ಹರ್ನಿಯಾ, ವೃಷಣವೃದ್ಧಿ.

**अंथरणे** (ಅಂಥರಣೇ) ಕ್ರಿ. ಸ. ಹಾಸು, ಪಸರಿಸು.

**अंथरूण** (ಅಂಥರೂಣ್) ನ. ಹಾಸಿಗೆ, ಶಯ್ಯೆ.

**–पाहून पाय पसरणे** (–ಪಾಹೂನ್ ಪಾಯ್ ಪಸರಣೇ) ಮಿತವ್ಯಯ ಮಾಡು.

**–पांघरूण** (–ಪಾಂಘರೂಣ್) ಹಾಸಿಗೆ ಹೊದಿಕೆ.

**अंदण** (ಅಂದಣ್) ನ. ಸ್ತ್ರೀಧನ.

**अंदाज** (ಅಂದಾಜ್) ಪು. ಫಾ. ಅಂದಾಜು.

**अंदाजें** (ಅಂದಾಜೆ) ಕ್ರಿ. ವಿ. ಸುಮಾರು.

**अंदाधुंदी** (ಅಂದಾಧುಂದೀ) ಸ್ತ್ರೀ. ಅವ್ಯವಸ್ಥೆ, ಅರಾಜಕ.

**अंदू** (ಅಂದೂ) ಪು. ಆನೆಯನ್ನು ಬಂಧಿಸುವ ಸರಪಳಿ. ೨. ಕಲ್ಲುಗಳನ್ನು ಜೋಡಿಸುವ ಮೊಳೆ.

**अंदेशा** (ಅಂದೇಶಾ) ಪು. ಫಾ. ಸಂಶಯ, ಅಂಜಿಕೆ.

**अंध** (ಅಂಧ) ವಿ. ಕುರುಡ. ೨. ವಿಚಾರಮಾಡದ.

**अंधत्व** (ಅಂಧತ್ವ) ನ. ಸಂ. ಕುರುಡು, ಕುರುಡುತನ, ನೇತ್ರಹೀನತೆ.

**अंध (धः) कार** (ಅಂಧ(ಧಃ)ಕಾರ) ಪು. ಕತ್ತಲೆ.

**अंधकूप** (ಅಂಧಕೂಪ) ಪು. ಒಣಗಿದ, ಗಿಡಗಂಟೆಗಳಿಂದ ಮುಚ್ಚಿದ ಬಾವಿ, ಹಾಳುಬಾವಿ.

**अंधगजन्याय** (ಅಂಧಗಜನ್ಯಾಯ) ಪು. ಕುರುಡನು ಆನೆಯನ್ನು ಅರಿತು ಕೊಳ್ಳುವ ನ್ಯಾಯ– ಅಪೂರ್ಣಜ್ಞಾನ.

**अंधदर्पणन्याय** (ಅಂಧದರ್ಪಣನ್ಯಾಯ) ಪು. ಕುರುಡನ ಕೈಯಲ್ಲಿಯ ಕನ್ನಡಿ.

**अंधपंगुन्याय** (ಅಂಧಪಂಗುನ್ಯಾಯ) ಪು. ಕುರುಡ ಹೆಳವ ಯುಕ್ತಿ.

**अंधपरंपरा** (ಅಂದಪರಂಪರಾ) ಸ್ತ್ರೀ. ಕುರುಡನಿಗೆ ಕುರುಡನು ದಾರಿತೋರಿಸುವ ನ್ಯಾಯ–ಅನವಸ್ಥೆ.

**अंधळा** (ಅಂಧಳಾ) ವಿ. ಕುರುಡ, ಕಣ್ಣಿಲ್ಲದವ.

**–दळतो कुत्रे पीठ खाते** (–ದಳತೋ ಕುತ್ರೇ ಪೀಠ್ ಖಾತೆ) ಕುರುಡನು ಬೀಸಿದ ಹಿಟ್ಟನ್ನು ನಾಯಿ ತಿಂದುಹಾಕುತ್ತದೆ (ಗಾದೆಯ ಮಾತು).

**अंधळी कोशिंबीर** ( ಅಂಧಳೀಕೋಶಿಂಬೀರ್ ) ಸ್ತ್ರೀ. ಕಣ್ಣು ಕಟ್ಟಿಕೊಂಡು ಹುಡುಕುವುದು. ೨. ಕಣ್ಣು ಮುಚ್ಚಣಿಕೆಯ ಆಟ.

**अंधारी** (ಅಂಧಾರೀ) ಸ್ತ್ರೀ. ಕಣ್ಣಮುಂದೆ ಕತ್ತಲೆ ಬರುವುದು.

**अंधुक** (ಅಂಧುಕ್) ಕ್ರಿ. ವಿ. ಮಸುಕಾಗಿ, ಅಸ್ಪಷ್ಟವಾಗಿ, ವಿ. ಅಸ್ಪಷ್ಟ, ಮಸುಕಾದ.

**अंधेर** (ಅಂಧೇರ್) ಪು. ಕತ್ತಲೆ. ೨. ಅವ್ಯವಸ್ಥೆ, ಅರಾಜಕ.

**–नगरी** (–ನಗರೀ) ಗತಿಗೆಟ್ಟಸ್ಥಿತಿ, ತಾಳತಂತ್ರವಿಲ್ಲದ ಕಾರಭಾರ.

**अंधेरी** (ಅಂಧೇರೀ) ಸ್ತ್ರೀ. ಕಣ್ಣಿಗೆ ಕತ್ತಲೆ ಬರುವಿಕೆ. अंधारी ನೋಡಿರಿ.

**अं (आं) बट** ( ಅ(ಆಂ)ಬಟ್ ) ವಿ. ಹುಳಿಯಾದ.

**अंबणे** (ಅಂಬಣೇ) ಕ್ರಿ. ಅ. ಹುಳಿಯಾಗು. ೨. ಕೆಡು. ೩. ಹಳಸು.

**अंबर** (ಅಂಬರ್) ನ. ಹೊದಿಕೆ. ೨. ಆಕಾಶ.

**अंबरस** (ಅಂಬರಸ್) ಪು. ಮಾವಿನ ಹಣ್ಣಿನ ಸಿಹಿಕರಣೆ, ರಸ.

**अंबराई** (ಅಂಬರಾಈ) ಸ್ತ್ರೀ.ಮಾವಿನಗಿಡದ ತೋಪು, ಸಾಲು.

**अंबा** (ಅಂಬಾ) ಸ್ತ್ರೀ. ತಾಯಿ, ಅಂಬೆ.

**अंबाडा** (ಅಂಬಾಡಾ) ಪು. ಸುತ್ತುಹೆರಳು, ತುರುಬು

**अंबारी** (ಅಂಬಾರೀ) ಸ್ತ್ರೀ. ಅರ. ಅಂಬಾರಿ, ಆನೆಯ ಮೇಲಿನ ಆಸನ.

**अंबु** (ಅಂಬು) ನ. ಸಂ. ನೀರು.

**अंबील** (ಅಂಬೀಲ್) ನ. ಕ. ಅಂಬಲಿ.

**अंबुज** (ಅಂಬುಜ) ನ. ಸಂ. ಕಮಲ.

**अंबुजाक्ष–क्षी** (ಅಂಬುಜಾಕ್ಷ-ಕ್ಷೀ) ವಿ. ಸಂ. ಸುಂದರ.

**अंबुद** (ಅಂಬುದ) ·ಪು. ಸಂ. ಮೋಡ.

**अंबुधर** (ಅಂಬುಧರ) ಪು. ಸ. ಮೋಡ.

**अंबुधि** (ಅಂಬುಧಿ) ಪು. ಸಂ. ಸಮುದ್ರ.

**अंबुस** (ಅಂಬುಸ್) ವಿ. ಹುಳಿ, ಹಳಸಿದ (ವಾಸನೆ)

**–णे** (–ಣೇ) ಕ್ರಿ. ಅ. ಹುಳಿಯಾಗು, ಹಳಸು.

**अंबे-मोहोर** (ಅಂಬೇಮೊಹೋರ್) ವಿ. ಸುವಾಸಿಕ ಅಕ್ಕಿಯ ಜಾತಿ.

**अंबेहळद** (ಅಂಬೇಹಳದ್) ಸ್ತ್ರೀ. ಒಂದು ಔಷಧಿ ದ್ರವ್ಯ.

**अंबोण** (ಅಂಬೋಣ್) ನ. (ಹಿಂಡುವ ದನಗಳಿಗೆ ಹಾಕುವ) ತೌಡು, ಕಲಗಚ್ಚು.

**अंबोशी** ( ಅಂಬೋಶೀ ) ಸ್ತ್ರೀ. ಮಾವಿನಕಾಯಿಯ ಬಾಳಕ, ಒಣಗಿದ ಮಾವಿನ ಹೋಳು.

**अंबोळी** (ಅಂಬೋಳೀ) ಸ್ತ್ರೀ. ದೋಸೆ.

**अंभो–ज–जात** (ಅಂಭೋ–ಜ-ಜಾತ) ನ. ಸಂ.ಕಮಲ.

**अंमल** (ಅಂಮಲ್)ಪು. ಅರ. ಅಧಿಕಾರ. ೨. ಕೃತಿ. ೩. ಮದ, ಅಮಲು.

**–दार** (–ದಾರ್) ಪು. ಅಧಿಕಾರಿ.

**–बजावणी** (–ಬಜಾವಣೀ) ಸ್ತ್ರೀ. ಕಾರ್ಯಸಿದ್ಧಿ

**अंश** (ಅಂಶ್) ಪು. ಸಂ. ಭಾಗ, ಕಣ, ಅಂಶ.

**–कालिक** (–ಕಾಲಿಕ್) ಅರ್ಧಸಮಯದ (ಕೆಲಸ, ಹೋರೆ)

**–तः** (–ತಃ) ಅವ್ಯಯ. ಕೆಲಮಟ್ಟಿಗೆ, ಸ್ವಲ್ಪ.

**अंशांतर** (ಅಂಶಾಂತರ್) ನ. ಸ. ಎರಡು ಕೋನಗಳಲ್ಲಿಯ ಅಂತರ.

**अंशु** (ಅಂಶು) ಪು. ಸಂ. ಕಿರಣ **–धर** (ಧರ) ಸೂರ್ಯ

**–माली** (–ಮಾಲೀ) ಪು. ಸೂರ್ಯ.

**–विक्षेप** (–ವಿಕ್ಷೇಪ) ಪು. ಕಿರಣ ವಿಸ್ತಾರ.

**अंशुक** (ಅಂಶುಕ್) ನ. ಸಂ. ವಸ್ತ್ರ, ರೇಷ್ಮೆ ಬಟ್ಟೆ.

**अंशुमतफळ** (ಅಂಶುಮತ್‌ಫಳ) ನ. ಬಾಳೆಯಹಣ್ಣು

**अंस** (ಅಂಸ್) ಪು. ಸಂ. ಹೆಗಲು.

**–कूट** (–ಕೂಟ್) ಪು. ಎತ್ತಿನ ಇಣಿ.

**अंसल** (ಅಂಸಲ್) ವಿ. ಭುಜಬಲಶಾಲಿ, ವೀರ, ವೃಷಸ್ಕಂಧ.

**अंह** (ಅಂಹ) ನ. ಪಾಪ, ದುಷ್ಕೃತ್ಯ.

**अंहति** (ಅಂಹತಿ) ಸ್ತ್ರೀ. ಸಂ. ರೋಗ.

# क ಕ

क (ಕ) ಮೊದಲನೆಯ ವ್ಯಂಜನ.

कईवारी (ಕೈವಾರೀ) ವಿ. ಸಮರ್ಥಕ, ಅಭಿಮಾನಿ, ಪಕ್ಷಪಾತಿ, ಸಹಾಯಕ.

कच (ಕಚ್) ಸ್ತ್ರೀ. ಬಿಕ್ಕಟ್ಟು. –खाऊ (–ಖಾಊ) ವಿ. ಅಂಜುವವ. ೨. (ಧಾನ್ಯದಲ್ಲಿಯ ಹರಳು) ೩. ಜಗಳ. ೪. ಬಕಪಕ್ಷಿ. ೫. ಪು. ಸಂ. ಕೂದಲು.

कचक (ಕಚಕ್) ಸ್ತ್ರೀ. ಆಘಾತ.

कचकच (ಕಚ್‌ಕಚ್) ಸ್ತ್ರೀ. ಕರ್ಕಶ ಸದ್ದು, ಸಪ್ಪಳ.

कचकचणें (ಕಚಕಚಣೇ) ಕ್ರಿ. ಅ. ಹಲ್ಲುಮಸೆ, ಹಲ್ಲಿನಿಂದ ಸದ್ದುಮಾಡು.

कचकचाट (ಕಚಕಚಾಟ್) ಪು. ಸಪ್ಪಳ, ಸದ್ದು.

कचकचीत (ಕಚ್‌ಕಚೀತ್) ವಿ. ಹಂಜಕ್ಕಿ, ಚನ್ನಾಗಿ ಬೇಯದ (ಅನ್ನ) ೨. ಒಳಿತಾಗಿ.

कचकडा (ಕಚಕಡಾ) ಪು. ಬೈಕ್‌ಲೈಟ್, ಪ್ಲಾಸ್ಟಿಕ್, ಕಪ್ಪುರದಿಂದ ತಯಾರಿಸಿದ ಪದಾರ್ಥ.

कचकणे (ಕಚಕಣೇ) ಕ್ರಿ. ಅ. ಹಿಂಜರಿ, ಸೋಲು, ಶರಣಾಗತನಾಗು. ೨. ಬೆದರು.

कचकन् (ಕಚಕನ್) ಕ್ರಿ. ವಿ. ರಭಸದಿಂದ, ಸಿಟ್ಟಿನಿಂದ, ಅವಿಚಾರದಿಂದ,

कचकल (ಕಚಕಲ್) ಪು. ನ. ಫಾ. ಒಡೆದ ಪಾತ್ರೆಯ ತಳ.

कचका (ಕಚಕಾ) ಪು. ಹೊಡೆತ, ಸೆಳೆತ.

कचकाऊन (ಕಚಕಾಊನ್) ಕ್ರಿ. ವಿ. ಜೋರಾಗಿ, ರಭಸದಿಂದ, ಒಳಿತಾಗಿ.

कचकोल (ಕಚ್‌ಕೋಲ್) ಪು. ಫಾ. कचकोल ನೋ.

कचक्या (ಕಚಕ್ಯಾ) ವಿ. ಹುಷಾರಿ, ಬಲಶಾಲಿ.

कचणे (ಕಚಣೇ) ಕ್ರಿ. ಅ. ಅಂಜು, ಬೆದರು.

कचंबणे (ಕಚಂಬಣೇ) / कचमणे (ಕಚಮಣೇ) ಕ್ರಿ. ಸ. ಕಲೆಸು, ರಾಡಿಮಾಡು, ಹೊಲಸುಮಾಡು.

कचरट (ಕಚರಟ್) ವಿ. ಒಡೆಯುವ, ಭಂಗುರ.

कचरा (ಕಚರಾ) ಪುಃಹಿಂ. ಕಸ. ೨. ಬಡಿಗನ ಸಾಧನ.

कचाकच (ಕಚಾಕಚ್) ಕ್ರಿ. ವಿ. ಪೂರ್ಣವಾಗಿ, ತುಂಬಾ, ತುಂಬಿ.

कचाकची (ಕಚಾಕಚೀ) ಸ್ತ್ರೀ. ಜಗಳ.

कचाट (ಕಚಾಟ್) ಪು. ಹೊಂಚು, ಒಳಸಂಚು. ೨. ಜಾಲ, ಪ್ರಭುತ್ವ.

कचाटी (ಕಚಾಟೀ) ಸ್ತ್ರೀ. ಬಿಕ್ಕಟ್ಟು, ತೊಂದರೆ.

कचाटीत सापडणे (ಕಚಾಟೀತ್ ಸಾಪಡಣೇ) ಕ್ರಿ. ಅ. ಸಂಕಟಕ್ಕೆ ಗುರಿಯಾಗು.

कचेरी (ಕಚೇರೀ) ಸ್ತ್ರೀ. ಹಿಂ. ಕಚೇರಿ, ಕಾರ್ಯಾಲಯ,

कचोरी (ಕಚೋರೀ) ಸ್ತ್ರೀ. ಹಿಂ. ಪಲ್ಲೆ ಹಾಕಿದಕಡುಬು.

कचोळें (ಕಚೋಳೇ) ನ. ಅರಿಷಣ, ಕುಂಕುಮ ಇಡುವ ಸಣ್ಣ ಪಾತ್ರೆ.

कच्चा (ಕಚ್ಚಾ) ವಿ. ಹಿಂ. ಅಪಕ್ವ, ಅಪೂರ್ಣ, ಕಚ್ಚಾ, ಅಕ್ರಮ. ೨. (ಅಭ್ಯಾಸದಲ್ಲಿ) ಹಿಂದುಳಿದ. ೩. (ವ್ಯವಹಾರದಲ್ಲಿ) ಅನಧಿಕೃತ, ಅಕ್ರಮ.

कच्ची (ಕಚ್ಚೀ) ಸ್ತ್ರೀ. ಮಾನಹಾನಿ.

–बच्ची (–ಬಚ್ಚೀ) ಸ್ತ್ರೀ. ಬಹುವ. ಚಿಕ್ಕಮಕ್ಕಳು.

कच्छ (ಕಚ್ಛ) ಪು. ಸಂ. ಕಚ್ಚೆ, ಧೋತರದ ಮಡಿಕೆ, (ಹಿಂಭಾಗದ.)

कच्छप (ಕಚ್ಛಪ್) ಪು. कच्छ ನೋ.

कच्छपी लागणे (ಕಚ್ಛಪೀ ಲಾಗಣೇ) ಕ್ರಿ. ಅ. ಬೆನ್ನುಹತ್ತು. ೨. ದುಂಬಾಲ ಬೀಳು, ಮೋಹಿತನಾಗು. ೩. ತೊಂದರೆ ಕೊಡು.

कजाख (ಕಜಾಖ್) ವಿ. ತುರ್ಕೀ. ದುಷ್ಟ, ಕೆಟ್ಟ ಸ್ವಭಾವದವ, ಜಗಳಗಂಟ.

कजेल (ಕಜೇಲ್) ಸ್ತ್ರೀ. ಬಾಳೆ.

कजेलीवर येणे (ಕಜೇಲೀವರ್ ಯೇಣೇ) ಕ್ರಿ. ಅ. ಜಗಳಮಾಡು.

कज्जा (ಕಜ್ಜಾ) ಪು. ಅರ. ನ್ಯಾಯ, ಜಗಳ, ಮೊಕದ್ದಮೆ,

–खोकला (–ಖೋಕಲಾ) ಪು. ಜಗಳ, ಕಲಹ.

कज्जेखोर (ಕಜ್ಜೇಖೋರ್) ವಿ. ಅರ. ಫಾ. ಜಗಳಗಂಟ.

कज्जेदलाल (ಕಜ್ಜೇದಲಾಲ್) ಪು. ಅರ. ವಕೀಲರಿಗೆ ವ್ಯಾಜ್ಯಗಳನ್ನು ಪೂರೈಸುವವ, ದಳ್ಳಾಳ.

कट (ಕಟ್) ಪು. ಒಳಸಂಚು, ಹೊಂಚು, ಘಾತ. ೨. ನ. ಕ. ಕಟ್ಟಿನ ಸಾರು.

कटक (ಕಟಕ್) ನ. ಸಂ. ದಂಡು, ಛಾವಣಿ. ೨. ಕೈಯಲ್ಲಿಯ ಕಡಗ.

कटकट (ಕಟಕಟ್) ಸ್ತ್ರೀ. ತೊಂದರೆ, ಸಂಕೋಚ, ಜಿಗುಪ್ಸೆ, ಪೀಡೆ. ೨. ತಕರಾರು.

**कटकटचा** (ಕಟಕಟ್ಯಾ) ವಿ. ತೊಂದರೆ ಕೊಡುವವ, ಪೀಡಿಸುವವ.

**कटका** (ಕಟಕಾ) ಪು. ತುಂಡು, ಭಾಗ.

**कटंजन** (ಕಟಂಜನ್) ಪು.ಕ. ಮಾಳಿಗೆಯ ಕಟಾಂಜನ, ಬಾಲ್‌ಕನಿ, ವ್ಹರಾಂಡ.

**कटदोरा** (ಕಟದೋರಾ) ಪು. ಕ. ಉಡದಾರ, ಚಿಕ್ಕಮಕ್ಕಳ ನಡಕ್ಕೆ ಹಾಕುವ ಬೆಳ್ಳಿಯ ಇಲ್ಲವೆ ಬಂಗಾರದ ಸರ ಪಣಿ. ೨. ಕಟ್ಟುದಾರ.

**कटवणी** (ಕಟವಣೀ) ಸ್ತ್ರೀ. ಕಲ್ಲುಕಟಕನ ಸಲಕರಣೆ.

**कटवणे** (ಕಟವಣೇ) ಕ್ರಿ. ಸ. ತಪ್ಪಿಸು. ೨. ಮೋಸ ಗೊಳಿಸು.

**कटाकटी** (ಕಟಾಕಟೀ) ಸ್ತ್ರೀ. ಸಿಬ್ಬಂದಿಯನ್ನು ಕಡಿಮೆ ಮಾಡುವಿಕೆ. ೨. ವಿ. ಬಿಕ್ಕಟ್ಟಿನ,

**–ने** (–ನೇ) ಕ್ರಿ. ಹೇಗಾದರೂಮಾಡಿ, ಅಂತು ಇಂತು.

**कटा–टचा–र** (ಕಟಾ–ಟ್ಯಾ–ರ್) ಸ್ತ್ರೀ. ಕಟಾರಿ, ಸಣ್ಣಕತ್ತಿ.

**कटाव** (ಕಟಾವ್) ಪು. ಹಿಂ. ಸಡಗರ, ದಿಮಾಕ.

**–णे** (–ಣೇ) ಕ್ರಿ. ಸ. ಕಷ್ಟಸಹಿಸು.

**कटावणी** (ಕಟಾವಣೀ) ಸ್ತ್ರೀ. ಬಡ್ಡಿಯ ಲೆಕ್ಕ.

**कटास** (ಕಟಾಸ್) ಪು. ಹಿಂ. ಕಷ್ಟ, ತೊಂದರೆ.

**कटासन** (ಕಟಾಸನ್) ನ. ಸಂ. ದರ್ಭದ ಆಸನ.

**–घालून बसणे** (–ಘಾಲೂನ್ ಬಸಣೇ) ಕ್ರಿ. ಅ. ಧಾರ್ಮಿಕತೆಯ ಜಂಬಕೊಚ್ಚು.

**कटाह** (ಕಟಾಹ) ಪು. ಸಂ. ಹರಿವಾಣ, ತವೆ.

**कटाक्ष** (ಕಟಾಕ್ಷ) ಪು. ಸಂ. ಓರೆನೋಟ, (ಲಾ) ಕುನುಸು, ಸಿಟ್ಟು.

**कटी** (ಕಟೀ) ಸ್ತ್ರೀ. ಸಂ. ನಡ, ಸೊಂಟ.

**कटु** (ಕಟು) ವಿ. ಸಂ. ಕಹಿ, ಅಪ್ರಿಯ.

**कटुकी** (ಕಟುಕೀ) ಸ್ತ್ರೀ. ಸಂ. ಒಂದು ವನಸ್ಪತಿ.

**कटुता** (ಕಟುತಾ) ಸ್ತ್ರೀ. ಸಂ. ವೈಮನಸ್ಯ, ಮನಸ್ಸಿನಲ್ಲಿ ಉಂಟಾಗುವ ಅಪ್ರಿಯ ಭಾವನೆ.

**कटुळते** (ಕಟುಳತೇ) ನ. ಚಿನಿವಾಲರ ಚೀಲ.

**कटोरा** (ಕಟೋರಾ) ಪು. ಸಂ. ಲೋಟ, ನೀರು ಕುಡಿಯುವ ಪಾತ್ರೆ.

**कट्टर** (ಕಟ್ಟರ) ವಿ. ಸಂ. ಪಕ್ಕಾ, ನಿಷ್ಠಾವಂತ, ದೃಢ ನಿಷ್ಠೆಯುಳ್ಳ.

**कट्टा** (ಕಟ್ಟಾ) ಪು. ಕ. ಕಟ್ಟೆ. ೨. ವಿ. ದೃಢವಾಗಿ ನಂಬುವವ, ಏಕನಿಷ್ಠ.

**कठडा** (ಕಠಡಾ) ಪು. ಹಿಂ. ಮಾಳಿಗೆಯ, ಬಾಲ್ಕನಿಯ ಅಡ್ಡಕಂಬಿ, ಕಟಾಂಜನ.

**कठि–ठी–ण** (ಕಠಿ–ಠೀ–ಣ್) ವಿ. ಕಠಿಣವಾದ, ಗಡಚಾದ. ೨. ಕ್ರೂರ.

**–त्व** (–ತ್ವ) ನ. ಬಿರುಸುತನ.

**कठोर** (ಕಠೋರ) ವಿ. ನಿರ್ದಯ, ಕಠೋರ.

**कड** (ಕಡ್) ಸ್ತ್ರೀ. ೧. ನಡ, ಕಟಿ, ೨. ಕ. ಬದಿ, ಎಡೆ, ಕಡೆ.

**कडे** (ಕಡೇ) ಕ್ರಿ. ವಿ. ಕಡೆಗೆ.

**कडक** (ಕಡಕ್) ವಿ. ಬಿರುಸಾದ. ೨. ಬಿಸಿಯಾದ. ೩. ಸೆಟೆದ.

**कडकडणे** (ಕಡಕಡಣೇ) ಕ್ರಿ. ಅ. ಬಿಸಿಯಾಗು, ಬೇಯ ಹತ್ತು, ಕುದಿಯ ಹತ್ತು.

**कडकडाट** (ಕಡಕಡಾಟ್) ಪು. ಘನಘೋರ ಶಬ್ದ, ಸಪ್ಪಳ, ಗರ್ಜನೆ.

**कडकडीत** (ಕಡಕಡೀತ್) ವಿ. ಅತಿಶಯ. ೨. ಸ್ಪಷ್ಟ, ವಿಶದ.

**कडकडून** (ಕಡಕಡೂನ್) ಕ್ರಿ. ವಿ. ಭಾವನೆಯಿಂದ, ಪ್ರೀತಿಯಿಂದ, ಲಾಲಸೆಯಿಂದ.

**–भूक लागणे** (–ಭೂಕ್‌ಲಾಗಣೇ) ಚನ್ನಾಗಿಹೊಟ್ಟೆ ಹಸಿವೆಯಾಗು.

**कडकणी** (ಕಡಕಣೀ) ಸ್ತ್ರೀ. ಕೊರಗುವಿಕೆ, ಬಳಲುವಿಕೆ.

**कडकणे** (ಕಡಕಣೇ) ಕ್ರಿ. ಅ. (ಬಿಸಿಲಿನಿಂದ) ಒಡೆ, ಸೀಳು. ೨. ಗರ್ಜಿಸು, ಒದರು.

**कडका** (ಕಡಕಾ) ಸ್ತ್ರೀ. ತೀವ್ರತೆ. ೨. ಕೊರತೆ.

**कडकावणी** (ಕಡಕಾವಣೀ) ಸ್ತ್ರೀ. ಆಘಾತ.

**कडकावणे** (ಕಡಕಾವಣೇ) ಕ್ರಿ. ಸ. ಸಿಟ್ಟುಮಾಡು, ಗರ್ಜಿಸು, ಬೆದರಿಸು.

**कडकी** (ಕಡಕೀ) ಸ್ತ್ರೀ. ಉಷ್ಣತೆ. ೨. ಜ್ವರ.

**कडंग** (ಕಡಂಗ್) ವಿ. ಬಿರುಸಾದ, (ರೊಟ್ಟಿ, ದೋಸೆ, ಮುಂ.) ೨. ಸ್ತ್ರೀ. ಜ್ವರ.

**कडगुले** (ಕಡಗುಲೇ) ನ. ಕ. ಬಳೆ. ೨. ವಲಯ, ದುಂಡಾದ ಆಕೃತಿ.

**कडचा** (ಕಡ್‌ಚಾ) ಪ್ರತ್ಯಯ. ಕ. –ಕಡೆಯ–ಬದಿಯವ–ದೇಶದವ.

**इकडचा** (ಇಕಡಚಾ) ವಿ. ಇಲ್ಲಿಯವ.

**कडची** (ಕಡಚೀ) ಸ್ತ್ರೀ. ಸಣ್ಣ ಹರಿವಾಣ, ತವೆ.

**कडण** (ಕಡಣ) ಸ್ತ್ರೀ. ತುದಿ, ಕೊನೆ. ೨. ಗುರುತು.

**कड–दण–धण–धान्य** (ಕಡ್–ದಣ್–ಧಣ್–ಧಾನ್ಯ) ಹೆಸರು, ಅಲಸಂದಿ, ಬಟ್ಟಗಡಲೆ, ಮಡಿಕೆ, ಮುಂತಾದ ದ್ವಿದಲ ಧಾನ್ಯ.

**कडदोरा** (ಕಡದೋರಾ) ಪು. ಕ. **कटदोरा** ನೋ.

**कडप** (ಕಡಪ್) ನ. (ಕಡಲೆಯು ಗಿಡ, ಮು. ಗಳ) ಗಡ್ಡೆ, ಗಂಟು.

**कडप्या** (ಕಡಪ್ಯಾ) ಸ್ತ್ರೀ. ಬಹುವ. ಚಿತ್ರಾ ನಕ್ಷತ್ರದ ಮಳೆ.

**कडबा** (ಕಡಬಾ) ಪು. ದಂಟು, ದನಗಳಿಗೆ ಹಾಕುವ ಮೇವು.

**कडवट** (ಕಡವಟ್) ವಿ. ಕಹಿಯಾದ.

**कडबू** (ಕಡಬೂ) ಪು. ಕ. ಕಡುಬು.

**कडबोळे** (ಕಡಬೋಳೆ) ನ. ಕ. ಕೋಡಬಳೆ, ಮಿಶ್ರ ಧಾನ್ಯದಿಂದ ಮಾಡಿದ ತಿಂಡಿ.

**कडमडणे** (ಕಡಮಡಣೇ) ಕ್ರಿ. ಅ. (ಸಂಬಂಧವಿಲ್ಲದೆ) ನಡುವೆ ಬಾಯಿಹಾಕು, ಸದ್ದುಮಾಡು. ೨. ಕಾಹಿಲೆಬರು.

**कडवा** (ಕಡವಾ) ವಿ. ಕಹಿಯಾದ, ಅಪ್ರಿಯ. ೨. ಕಠೋರ. ೩. ಏಕನಿಷ್ಠ.

**कडवे** (ಕಡವೇ) ನ. ಕವಿತೆಯ ಪಂಕ್ತಿ, ಭಾಗ, ನುಡಿ.

**कडस** (ಕಡಸ್) ಕ್ರಿ. ವಿ. ಬಿಗಿಯಾಗಿ, ಎಳೆದು (ಕಟ್ಟಿದ)

**कडसणी** (ಕಡಸಣೀ) ಸ್ತ್ರೀ. ಷರಾಯಿಯ ನಾಡಿ. ೨. ಸಾಮಾನು ಬಿಗಿದು ಕಟ್ಟುವ ಹಗ್ಗ. ೩. ಸೊಂಟಕ್ಕೆ ಸಿಕ್ಕಿಸಿದ ಧೋತರ, ಸೀರೆ.

**कडसणे** (ಕಡಸಣೇ) ೧. ಕ್ರಿ. ಸ. ಬಿಗಿದು ಕಟ್ಟು. ೨. ಕರಗಿಸು. ಶುದ್ಧಪಡಿಸು.

**कडसरी** (ಕಡಸರೀ) ಸ್ತ್ರೀ. ಬಟ್ಟೆಯ ಅಂಚು. ೨. ಗುಡ್ಡದ ಕೆಳಗಿನ ಭಾಗ, ಏರು.

**कडसूर** (ಕಡಸೂರ್) ನ. ಕೊಯ್ಲಾದ ಮೇಲೆ ಉಳಿದ ಪೈರಿನ ಮೋಟು, ಉಳಿಕೆ.

**कडा** (ಕಡಾ) ಪು. (ಬಂಡೆಯ, ಬೆಟ್ಟದ) ಕಡಿದಾದ ಮುಖ.

**कडाकोट** (ಕಡಾಕೋಟ್) ವಿ. ಕಡಿದಾದ, ಭದ್ರವಾದ, (ಕೋಟೆ, ಸಂರಕ್ಷಣ.)

**कडाचूर** (ಕಡಾಚೂರ್) ಪು. ವಿನಾಶ, ಒಡಕು.

**कडाडणे** (ಕಡಾಡಣೇ) ಕಿ. ಅ. ಗರ್ಜಿಸು. ೨. ಗದ್ದರಿಸು. ೩. (ಬೆಲೆ ಮು.) ವಿಪರೀತವಾಗಿ ಏರು.

**कडिया** (ಕಡಿಯಾ) ಪು. ಉಪ್ಪಾರ.

**कडी** (ಕಡೀ) ಸ್ತ್ರೀ. ಚಿಲಕ, ಕೊಂಡಿ, ಸರಪಣಿಯ ಒಂದು ಭಾಗ.

**—कुलूप लावणे** (—ಕುಲೂಪ್ ಲಾವಣೇ) ಕ್ರಿ. ಸ. ಭದ್ರಪಡಿಸು, ಬೀಗಹಾಕು.

**कडील** (ಕಡೀಲ್) ಪ್ರತ್ಯಯ, ವಿ. ಕ. ಕಡೆಯ,—ದಲ್ಲಿಯ, ದೇಶದ.

**कडू—डू** (ಕಡು—ಡೂ) ವಿ. ಕಹಿಯಾದ, ಅಪ್ರಿಯ.

**कडून** (ಕಡೂನ್) ಕ್ರಿ. ವಿ. ಕ. ಕಡೆಯಿಂದ, ಬದಿಯಿಂದ.

**कडे** (ಕಡೆ) ಕ್ರಿ. ವಿ. ಕ. ಕಡೆಗೆ, ಬದಿಗೆ, ಬಳಿಗೆ. ೨. ನ. ದುಂಡಾದ ಆಕೃತಿ, ವಲಯ.

**कडेकोट** (ಕಡೇಕೋಟ್) ಕ್ರಿ. ವಿ. ಭದ್ರವಾಗಿ.

**कडलोट** (ಕಡೇಲೋಟ್) ಪು. ಬೆಟ್ಟದ ಮೇಲಿಂದ ಉರುಳಿಸುವ ಶಿಕ್ಷೆ.

**कडेशेवट** (ಕಡೇಶೇವಟ್) ಪು. ಕ+ಮ, ಅಂತ, ಕೊನೆ.

**—चा** (—ಚಾ) ಕಟ್ಟಕಡೆಯ, ಕೊನೆಗೆ ಹುಟ್ಟಿದ.

**कडेस** (ಕಡೇಸ್) ಕ್ರಿ. ವಿ. ಕ. ನಿಟ್ಟಿಗೆ, ಬದಿಗೆ, ದಿಕ್ಕಿಗೆ.

**कडोसरी** (ಕಡೋಸರೀ) ಸ್ತ್ರೀ. ಧೋತರ ಅಥವಾ ಸೀರೆಯ ಮುಡಿ.

**कडोसा** (ಕಡೋಸಾ) ಪು. **कवडसा** ನೋ.

**कड्या** (ಕಡ್ಯಾ) ಪು. ಬೆಸೆಗಂಬಿ.

**कड्याळ** (ಕಡ್ಯಾಳ್) ನ. ದನಗಳ ಮೇವು, ದಂಟು.

**—दांती धरणे** (—ದಾತೀ ಧರಣೇ) ಕ್ರಿ. ಸ. ಶರಣು ಹೋಗು.

**कड्याळे** (ಕಡ್ಯಾಳೇ) ನ. ಬಹುದೊಡ್ಡ ಲಾಭ.

**कढ** (ಕಢ್) ಕುದಿ, ಉಕ್ಕು. ೨. ಪ್ರೀತಿ, ಭಾವನೆಯ ಉದ್ರೇಕ.

**कढई** (ಕಢಈ) ಸ್ತ್ರೀ. ಹರಿವಾಣ, ತವೆ, ಕರಿಯುವ ಪಾತ್ರೆ, ಹಂಚು.

**कढण** (ಕಢಣ್) ನ. ಕುದಿಸಿತೆಗೆದ ಸಾರ, ಕಷಾಯ.

**कढणे** (ಕಢಣೇ) ಕಿ. ಅ. ಕುದಿ. ೨. ಸಿಟ್ಟಿಗೇಳು. ೩. ಶೋಕಿಸು.

**कढत** (ಕಢತ್) ವಿ. ಬಿಸಿಯಾದ, ಬಿಸಿಬಿಸಿ.

**कढतवणी** (ಕಢತವಣೀ) ಸ್ತ್ರೀ. ಎಸರುಬಂದ ನೀರು. ೨. ಬಿಸಿನೀರು.

**कढविणे** (ಕಢವಿಣೇ) ಕಿ. ಸ. ಕುದಿಸು, ಕಾಯಿಸು, ಕರಗಿಸು.

**कढी** (ಕಢೀ) ಸ್ತ್ರೀ. ಪಳದೆ, ಮಜ್ಜಿಗೆ ಮುಂತಾದವುಗಳ ಸಾರು, 'ಕೊಳಂಬು'

**—खाऊ** (—ಖಾಊ) ವಿ. ನಿಃಸತ್ವ ಆಹಾರವನ್ನು ಉಣ್ಣುವವ, (ಲಾ.) ಹೇಡಿ.

**कण** (ಕಣ್) ಪು. ಸಂ. ಕಣ, ಸೂಕ್ಷ್ಮ ಭಾಗ.

**कणक** (ಕಣಕ್) ಸ್ತ್ರೀ. ನೋವು, ಬೇನೆ.

**कणकण–णी** (ಕಣಕಣ್–ಣೀ) ಸ್ತ್ರೀ. ಜ್ವರ ಬರುವ ಲಕ್ಷಣ.

**कणकणणे** (ಕಣಕಣಣೇ) ಕ್ರಿ. ಅ. ಜ್ವರ ಬರುವ ಲಕ್ಷಣ ತೋರು.

**कणखर** (ಕಣಖರ್) ವಿ. ದೃಢ, ಗಟ್ಟಿಮುಟ್ಟಿಯಾದ. ೨. ಕಠೋರ, ಪ್ರಖರ.

**कणंग** (ಕಣಂಗ್) ಸ್ತ್ರೀ. ಕ. ಕಣಗ, ಧಾನ್ಯಸಂಗ್ರಹ.

**कणगा** (ಕಣಗಾ) ಪು. ಕ. ಕಣಗ, ಕಾಳಿನ ಸಂಗ್ರಹ.

**कणगी** (ಕಣಗೀ) ಪು. ಕ. ಸಣ್ಣ ಕಣಗ.

**कणणे** (ಕಣಣೇ) ಕ್ರಿ. ಅ. ನೆಳಲು, ಕಷ್ಟಪಡು, ನಿಟ್ಟುಸಿರು ಬಿಡು.

**कणदार** (ಕಣದಾರ್) ವಿ. ರವೆಯುಳ್ಳ, ದುಂಡು ಕಣ ಗಳುಳ್ಳ.

**कणव** (ಕಣವ್) ಸ್ತ್ರೀ. ಕರುಣೆ, ದಯೆ, ದಾಕ್ಷಿಣ್ಯ.

**कणवटी** (ಕಣವಟೀ) ಸ್ತ್ರೀ. ನಡಕ್ಕೆ ಸಿಕ್ಕಿಸುವ ಧೋತರದ ಭಾಗ, (ಇದರಲ್ಲಿ ಹಣವನ್ನೂ ಇಟ್ಟುಕೊಳ್ಳುತ್ತಾರೆ)

**कणवाळा–ळू–** ಕಣವಾಳಾ–ಳೂ) ವಿ. ದಯೆಯುಳ್ಳವ. ಕೃಪಾಲು.

**कणशः** (ಕಣಶಃ) ಕ್ರಿ. ವಿ. ಕಣಕಣವಾಗಿ, ಸೂಕ್ಷ್ಮವಾಗಿ,

**कणस** (ಕಣಸ್) ನ. ತೆನೆ.

**कणा** (ಕಣಾ) ಪ್ರ. ಬೆನ್ನೆಲುಬು, (ರಂ) ಆಧಾರ.

**कणाळी** ಕಣಾಳೀ) ಸ್ತ್ರೀ. ಚೀಲದಿಂದ ಸುರುವುವಾಗಿನ ಧಾನ್ಯದ ಧಾರೆ.

**कणि–णी–क** (ಕಣಿ–ಣೀ–ಕ) ಸ್ತ್ರೀ. ಗೋದಿಯ ಹಿಟ್ಟು ನಾದಿದ ಗೋದಿಯ ಹಿಟ್ಟು.

**कणिका** (ಕಣಿಕಾ) ಸ್ತ್ರೀ. ಸಣ್ಣ ಕಣ.

**कणिंग** (ಕಣಿಂಗ್) ಸ್ತ್ರೀ. **कणगी** ನೋಂ.

**कणी** (ಕಣೀ) ಸ್ತ್ರೀ. ನುಚ್ಚು.

**–कण्या** (–ಕಣ್ಯಾ) ಸ್ತ್ರೀ. ಬಹುವ. (ಕುದಿಸಿದ) ನುಚ್ಚು, ಅಂಬಲಿ, ಗಂಜಿ.

**दाताच्या कण्या करणे** (ದಾತಾಚ್ಯಾ ಕಣ್ಯಾ ಕರಣೇ) ಕ್ರಿ. ಸ. ದೈನ್ಯದಿಂದ ಬೇಡಿಕೊಳ್ಳು (ವ್ಯರ್ಥವಾಗಿ)

**कण्या खाऊन मिशास तूप लावणे** (ಕಣ್ಯಾ ಖಾಊನ್ ಮಿಶಾಸ್.ತೂಪ ಲಾವಣೇ) ಕ್ರಿ. ತೋರಿಕೆಯ ಐಶ್ವರ್ಯದ ಪಂಟು ಬಡಿ.

**कण्या टाकून कोंबडी झुंजविणे** (ಕಣ್ಯಾ ಟಾಕೂನ್ ಕೋಂಬಡೀ ಝುಂಜವಿಣೇ) ಕ್ರಿ. ಆಶೆ ತೋರಿಸಿ ಜಗಳ ಹಚ್ಚು. ೨. ಕಣ್ಣಾಲ್ಲಿಯ ಗೊಂಬೆ, ಕನೀನಿಕೆ.

**कणेर–री** (ಕಣೇರ್–ರೀ) ಸ್ತ್ರೀ. ಕ. ಕಣಗಿಲ ಹೂವು.

**कणीस** (ಕಣೀಸ್) ನ. ತೆನೆ. ೨. (ಕೇದಗೆ ಅಥವಾ ಕಬ್ಬಿನ) ತುರಾಯಿ.

**कण्हेरी** (ಕಣ್ಹೇರೀ) ಸ್ತ್ರೀ. ಅಕ್ಕಿಯ ಗಂಜಿ.

**कण्हणे** (ಕಣ್ಹಣೇ) ಕಿ. ಅ. ಬೇನೆಯಿಂದ ನೆರಳು, ಆಯಾಸಪಡು, ಶೋಕಿಸು (ಲಾ) ಕಷ್ಟವನ್ನು ಹೇಳಿಕೊಳ್ಳು.

**कतक** (ಕತಕ್) ನ. ಒಂದು ಸಸ್ಯ.

**कतबा** (ಕತ್‌ಬಾ) ಪು. ಅರ. ಪಂಚಾಯತ್ತಿನ ಮುಂದೆ ವಾದಿ ಪ್ರತಿವಾದಿಗಳು ಬರೆದುಕೊಟ್ಟ ಪ್ರತಿಜ್ಞಾಪತ್ರ, ಸರಕಾರೀ ಸಾಲಪತ್ರ, ಬಾಂಡು, ಕಬುಲಾಯತಿ, ಕರಾರುಪತ್ರ.

**कतवार** (ಕತವಾರ್) ನ. ದಂಡಿನ ಹಿಂದಿನಿಂದ ನಡೆದ ಸಾಮುಗ್ರಿ ಸೇವಕರು ಇತ್ಯಾದಿ.

**कतार** (ಕತಾರ) ಸ್ತ್ರಿ). ಪು. ಅರ. ಗೆರೆ. ೨. ಪಂಕ್ತಿ, ಸಾಲು.

**कत्तल** (ಕತ್ತಲ್) ಸ್ತ್ರೀ. ಅರ. ವಧೆ, ಸಂಹಾರ, ಖೂನಿ, ಕೊಲೆ.

**–रात्र** (–ರಾತ್ರ) ಸ್ತ್ರೀ. ಮೊಹರಮ್ಮಿನ ದಶಮಿಯ ರಾತ್ರಿ.

**–खाना** (–ಖಾನಾ) ಕಸಾಯಿಖಾನೆ.

**कथणे** (ಕಥಣೇ) ಕ್ರಿ. ಸ. ಸಂ. ಹೇಳು.

**कथन** (ಕಥನ್) ಸ್ತ್ರೀ. ಸಂ. ಹೇಳಿಕೆ. ೨. ಆಖ್ಯಾನ.

**कथनीय** (ಕಥನೀಯ) ವಿ. ಸಂ. ಹೇಳುವಂತಹ.

**कथली** (ಕಥಲೀ) ಸ್ತ್ರೀ. ತವರದ ಪಾತ್ರೆ.

**–व्याध** (ವ್ಯಾಧ್) ಸ್ತ್ರೀ. ಒಂದು ತರಹದ ಪಿರಂಗೀ ಬೇನೆ.

**कथले** (ಕಥಲೇ) ನ. ತವರದ ದೊಡ್ಡ ಪಾತ್ರೆ.

**कथल्या देवी** (ಕಥಲ್ಯಾದೇವೀ) ಸ್ತ್ರೀ. ಬಹುವ. ಸಿಡುಬು, ವೈಲಿ ಬೇನೆ.

**कथा** (ಕಥಾ) ಸ್ತ್ರೀ. ಸಂ. ಕತೆ, ಕಥೆ.

**कथानक** (ಕಥಾನಕ್) ನ. ಸಂ. ಕಥಾವಸ್ತು, ನಾಟಕ, ಕಾವ್ಯದಲ್ಲಿರುವ ಕತೆಯ ಸಾರಾಂಶ.

**कथित** (ಕಥಿತ) ವಿ. ಸಂ. ಹೇಳಿದ, ನುಡಿದ.

**कथील** (ಕಥೀಲ್) ನ. ತವರ.

नाव सोनूबाई पायात कथलाचे वाळे (ನಾವ್ ಸೋನೂಬಾಈ ಪಾಯಾತ್ ಕಥಲಾಚೇ ವಾಳೇ) ನಾಣ್ಣುಡಿ. ಹೆಸರು ಹೊನ್ನಮ್ಮ ಕಾಲಲ್ಲಿ ಮಾತ್ರ ತವರವ ಪೈಜಣ.

**कथेकरी** (ಕಥೇಕರೀ) ಪು. ಕೀರ್ತನಕಾರ.

**कद** (ಕದ್) ಪು. ಗಂಡಸರು ಉಡುವ ರೇಶ್ಮೆಯ ಮಡಿ, ಮಡಿಯ ವಸ್ತ್ರ.

**क–कं–दन** (ಕ–ಕಂ–ದನ್) ನ. ಸಂ. ಕದನ, ಕಾಳಗ, ಸಂಹಾರ.

**कदन्न** (ಕದನ್ನ) ನ. ಸಂ. ಹಳಸಿದ ಅನ್ನ. ೨. ಕೀಳು ತರಗತಿಯ ಊಟ.

**कदंब** (ಕದಂಬ) ಪು. ಸಂ. ಕದಂಬ ವೃಕ್ಷ.

**कदम** (ಕದಮ್) ಪು. ಅರ. ಅಡಿ, ಹೆಜ್ಜೆ.

**आगे–** (ಆಗೇ–) ಮುನ್ನಡೆ.

**कदर** (ಕದರ್) ಸ್ತ್ರೀ. ಅರ. ಬೆಲೆ, ಕಿಮ್ಮತ್ತು. ಮಹತ್ವ, ರಸಗ್ರಾಹಕತೆ.

**–दान** (–ದಾನ್) ವಿ. ರಸಗ್ರಹಣ ಮಾಡಬಲ್ಲವ.

**कदर्य** (ಕದರ್ಯ) ವಿ. ಸಂ. ಜಿಪುಣ.

**कदली** (ಕದಲೀ) ಸ್ತ್ರೀ. ಸಂ. ಬಾಳೆಯ ಗಿಡ.

**कदाचित** (ಕದಾಚಿತ್) ಕ್ರಿ. ವಿ. ಬಹುತೇಕ, ಬಹುಶಃ

**कदान्न** (ಕದಾನ್ನ) ನ. ಸಂ. **कदन्न** ನೋಂ.

**कदापि** (ಕದಾಪಿ) ಕ್ರಿ. ವಿ. ಸಂ. ಎಂದಿಗೂ, ಎಂದೂ, ಎಂದೆಂದಿಗೂ.

**कधी** (ಕಧೀ) ಕ್ರಿ. ವಿ. ಯಾವಾಗ? ಎಂದು?

**–कधी** (ಕಧೀ) ಒಮ್ಮೊಮ್ಮೆ, ಎಂದಾದರೊಮ್ಮೆ,

**–काळी** (–ಕಾಳೀ) ಕ್ರಿ. ವಿ. ಎಂದೋ ಒಮ್ಮೆ.

**–तरी** (–ತರೀ) ಕ್ರಿ. ವಿ. ಎಂದಾದರೊಮ್ಮೆ.

**—ब–बि–धी** (–ಬ–ಬಿ–ಧೀ) ತಪ್ಪಿ ಎಂದಾದರೂ

**कनक** (ಕನಕ) ನ. ಸಂ. ಬಂಗಾರ.

**कनका** (ಕನಕಾ) ಪು. ಸಿಟ್ಟಿನ ಸ್ವಭಾವ.

**कनव** (ಕನವ್) ಸ್ತ್ರೀ. ದಯೆ, ಕರುಣೆ.

**कनवट** (ಕನವಟ್) ಸ್ತ್ರೀ. ಸೊಂಟಕ್ಕೆ ಸಿಕ್ಕಿಸಿದ ಧೋತರ ಅಥವಾ ಸೀರೆಯ ಭಾಗ.

**कनवाळू** (ಕನವಾಳೂ) ವಿ. ದಯೆಯುಳ್ಳವ.

**कनात** (ಕನಾತ್) ಸ್ತ್ರೀ. ಅರ. ಡೇರೆಯ ಮರೆ, ಪಟಲ.

**कनिष्ठ** (ಕನಿಷ್ಠ) ವಿ. ತೀರ ಚಿಕ್ಕವ, ೨. ಅತ್ಯಲ್ಪ.

**–पक्षी** (–ಪಕ್ಷೀ) ಕ್ರಿ. ವಿ. ಏನಿಲ್ಲೆಂದರೂ, ತೀರ ಕಡಿಮೆ ಎಂದರೂ.

**कनिष्ठिका** (ಕನಿಷ್ಠಿಕಾ) ಸ್ತ್ರೀ. ಸಂ. ಕಿರಿಬೆರಳು, ಕಿರಿ ಬೊಟ್ಟು.

**कनीनिका** (ಕನೀನಿಕಾ) ಸ್ತ್ರೀ. ಸಂ. ಕಣ್ಣಾಲಿಯ ಗೊಂಬೆ, ಕಣ್ಣಿನ ಪಾಪೆ, ಕನೀನಿಕೆ.

**कन्यका** (ಕನ್ಯಕಾ) ಸ್ತ್ರೀ. ಸಂ. ಕನ್ಯೆ, ಬಾಲಿಕೆ.

**कन्या** (ಕನ್ಯಾ) ಸ್ತ್ರೀ. ಸಂ. (ಮದು) ಮಗಳು, ಹುಡುಗಿ. ೨. ಕನ್ಯಾರಾಶಿ.

**–दान** (–ದಾನ್) ನ. ಮಗಳ ಮದುವೆಯಲ್ಲಿಯ ಪಿತನ ಕಾರ್ಯ.

**–दूषण** (–ದೂಷಣ) ನ. ಶೀಲವನ್ನು ಕೆಡಿಸುವಿಕೆ.

**–धन** (–ಧನ್) ನ. ಸ್ತ್ರೀ ಧನ. ೨. ಮದುಮಗಳ ತಂದೆಗೆ ಕೊಡುವ ಧನ.

**कपचा** } (ಕಪಚಾ) ಪು. } ಕಲ್ಲು ಕಡಿಯುವಾಗ
**कपची** } (ಕಪಚೀ) ಸ್ತ್ರೀ } ಹಾರುವ ತುಂಡು.

**कपट** (ಕಪಟ) ನ. ಸಂ. ಕಪಟ, ಮೋಸ. ೨. ಕೆಟ್ಟ ಉದ್ದೇಶ.

**कपटा** (ಕಪಟಾ) ಪು. ಕಾಗದದ ತುಣುಕು.

**कपटी** (ಕಪಟೀ) ವಿ. ಸಂ. ಮೋಸಗಾರ, ಧೂರ್ತ, ದುರುದ್ದೇಶವುಳ್ಳವ.

**कपडा** (ಕಪಡಾ) ಪು. ಬಟ್ಟೆ, ಅರಿವೆ.

**–लत्ता** (–ಲತ್ತಾ) ಪು. ಹಿಂ. ಅರಿವೆ ಅಂಚಡಿ.

**कपडे** (ಕಪಡೇ) ಪು. ಬಹುವಚನ. ಉಡುತೊಡುವ ಬಟ್ಟೆಗಳು, ಹೊಲಿದ ವಸ್ತ್ರಗಳು.

**कपदरी** (ಕಪದರೀ) ಸ್ತ್ರೀ. ಗುಹೆ, ಗವಿ.

**कपर** (ಕಪರ್) ಸ್ತ್ರೀ. ಕಲ್ಲಿನ ತುಂಡು, ತುಣುಕು, ಚೂರು.

**कपर्दिक** (ಕಪರ್ದಿಕ್) ಪು. ಕವಡಿ. –(ಲಾ) ದುಡ್ಡು.

**कपा** (ಕಪಾ) ಪು. ತುಣುಕು, ಚೂರು, ಚೀಲದ ಒಳಪದರುಗಳು.

**कपाट** (ಕಪಾಟ್) ನ. ೧. ಬಾಗಿಲ ೨. ಬಾಗಿಲದ ಹಲಗೆ ೩. ಪೋ. ಕಪಾಟು ಅಲಮಾರು.

**कपात** (ಕಪಾತ್) ಸ್ತ್ರೀ. ಕಡಿಮೆ ಮಾಡುವಿಕೆ, (ಸಿಬ್ಬಂದಿಯನ್ನು) ತೆಗೆದು ಹಾಕುವಿಕೆ. ೨. ನ. (ಖಜ್ಜೂರ ಮುಂ. ಗಳ) ಸಿಂದಿಯ ಚೀಲ, ಚಾಪೆ.

**कपार** (ಕಪಾರ್) ಸ್ತ್ರೀ. ವಿವರ, ಛಿದ್ರ, ತೂತು, ಬಿರುಕು

**कपाल** (ಕಪಾಲ್) ನ. ಸಂ. ಹಣೆ, ೨ ತಲೆಬುರುಡೆ.

**कपाळ** (ಕಪಾಳ್) ಹಣೆ, ೨ (ಉದ್ಗಾರ) ದುರ್ದೈವ ನಿರಾಶೆಗಳನ್ನು ವ್ಯಕ್ತಪಡಿಸುವ ಶಬ್ದ (ಹಣೆಬರಹ!)

**–फुटणे** (–ಫುಟಣೇ) ಕ್ರಿ. ಅ. ದುರ್ದೈವ ಒದಗು.

**कपाळावर हात मारणे** (ಕಪಾಳಾವರ್ ಹಾತ್ ಮಾರಣೆ) ಕ್ರಿ. ಅ. ಶೋಕ ಪಡು, ಹಣೆಹಣೆ ಗಟ್ಟಿಸಿಕೊ, ದೇವರಿಗೆ ಮೊರೆ ಹೋಗು.

**दुखी–** (ದುಖೀ–) ಸ್ತ್ರೀ. ಚಿಂತೆ. ತಲೆಶೂಲೆ.

**–मोक्ष** (–ಮೋಕ್ಷ) ಪು. ದುರ್ದೈವ, ಸಾವು. (ಚಿತೆಯಲ್ಲಿಯ ತಲೆಬುರುಡೆ ಒಡೆಯುವಿಕೆ)

**–मोक्ष करणे** (–ಮೋಕ್ಷ ಕರಣೇ) ಕ್ರಿ. ಸ. ಕೊಲ್ಲು.

**–मोक्ष होणे** (–ಮೋಕ್ಷ ಹೋಣೇ) ಕ್ರಿ. ಅ. ಸಾಯು ನಾಶಹೊಂದು.

**–लेख** (ಲೇಖ) ಪು. ದೈವ. ಹಣೆಬರಹ. ಲಲಾಟ ಲೇಖ.

**–शूळ** (ಶೂಳ್) ನ. ತಲೆ ಶೂಲೆ. ೨ ಚಿಂತೆ.

**कपाली** (ಕಪಾಲೀ) ಪು. ಸಂ. ಶಂಕರ, ಶಿವ.

**कपाशी** (ಕಪಾಶೀ) ಸ್ತ್ರೀ. ಹಿಂ. ಹತ್ತಿ, ಅರಳೆ.

**कपास** (ಕಪಾಸ್) ಪು. ಹಿಂ. ಹತ್ತಿ.

**कपिला** (ಕಪಿಲಾ) ಸ್ತ್ರೀ. ಸಂ. ೧. ಆಕಳು. ೨. ಹುರಮಂಜು.

**–षष्ठी** (–ಷಷ್ಠೀ) ಸ್ತ್ರೀ. ಆರು ಪ್ರಮುಖ ತಿಥಿ ನಕ್ಷತ್ರಗಳು, ಬರುವ ಭಾದ್ರಪದ ಷಷ್ಠಿ. (ವದ್ಯ) (೧ ಮಂಗವಾರ. ೨. ರೋಹಿಣೀ ನಕ್ಷತ್ರ. ೩. ಹಸ್ತ ಇವುಗಳೊಡನೆ ಬರುವ ಭಾದ್ರಪದ ಬಹುಳ ಷಷ್ಠಿ

**–योग** (–ಯೋಗ್) ಪು. (ಲಾ) ಅಪರೂಪವಾಗಿ ಬರುವ ಅನಕೂಲ ಪ್ರಸಂಗ.

**कपी** (ಕಪೀ) ಪು. ಸಂ. ಮಂಗ. ೨. ಉಡಾಳಮನುಷ್ಯ. ೩. ಖದೀಮ, ಅನುಭವಿಕ.

**कप्पा** (ಕಪ್ಪಾ) ಪು. ಗೂಡು, ಖಾನೆ, ರಕಾನೆ, ಚೀಲದ ಪದರು, ಕಣ.

**कप्पी** (ಕಪ್ಪೀ) ಸ್ತ್ರೀ. ರಾಟಿ, ಕಪ್ಪಿ, ಗಡಗಡೆ. ೨. ಇವುಗಳನ್ನೊಡಗೊಂಡ ಪಟ್ಟಿ.

**कफ** (ಕಫ್) ಪು. ಕಫ, ಶ್ಲೇಷ್ಮ.

**कफण–न** (ಕಫಣ್–ನ್) ನ. ಅರ. ಮುಸಲ್ಮಾನರ ಪ್ರೇತದ ಆವರಣ.

**कफणी–नी** (ಕಫಣೀ–ನೀ) ಸ್ತ್ರೀ. ಸಾಧುಗಳ ವೇಷ.

**कफल्लक** (ಕಫಲ್ಲಕ್) ವಿ. ನಿರ್ಧನ, ಬಡವ, ದರಿದ್ರ.

**कबकबीत** (ಕಬಕಬೀತ್) ವಿ. ಸಪ್ಪೆಯಾದ, ಅಳ್ಳಕವಾದ.

**कबज** (ಕಬಜ್) ನ. ಅರ. ೧. ಪಾವತಿ, ರಸೀದಿ. ೨. ಬಂಧನ, ಅಡ್ಡಿ: ೩. ಮಲಬದ್ಧತೆ.

**कबजा** (ಕಬಜಾ) ಪು. ಅರ. ವಶ, ಸಾಮಿತ್ವ, ಪ್ರಭುತ್ವ.

**कबन्ध** (ಕಬಂಧ್) ಪು. ಸಂ. ತಲೆಯಿಂದ ಬೇರ್ಪಡಿಸಿದ ಶರೀರ.

**–नाचले** (–ನಾಚಲೇ) (ಉದ್ಗಾರ). ಸಂಹಾರವಾಯಿತು, ಕೊಲೆ ಸುಲಿಗೆಯಾಯಿತು.

**कबर** (ಕಬರ್) ಸ್ತ್ರೀ. ಅರ. ಮುಸಲ್ಮಾನರ ಸಮಾಧಿ.

**–स्तान** (–ಸ್ತಾನ್) ನ. ಮುಸಲ್ಮಾನರ ಸ್ಮಶಾನ, ಮಸಣ.

**कबरी** (ಕಬರೀ) ಸ್ತ್ರೀ. ಬುಚಡ, ಹೆಳಲು.

**कबरा** (ಕಬರಾ) ವಿ. ಬಣ್ಣಬಣ್ಣದ, ಮಿಶ್ರಬಣ್ಣದ.

**कबलायत** (ಕಬಲಾಯತ್) ಸ್ತ್ರೀ. ಅರ. **कबुलायत** ನೋ.

**कबाड** (ಕಬಾಡ್) ನ. ಕುದುರೆ, ಒಂಟೆಗಳ ಮೇಲೆ ಹೇರುವ ಭಾರ, ಒಜ್ಜೆ.

**–कष्ट** (–ಕಷ್ಟ) ಪು. ಬಹು ವ. ಪರಿಶ್ರಮ.

**कबाडी** (ಕಬಾಡೀ) ವಿ. ಸರಕುಗಳನ್ನು ಸಾಗಾಣೆ ಮಾಡುವವ. ೨. ವ್ಯಾಪಾರಸ್ಥ.

**–गलबत** (–ಗಲಬತ್) ನ. ಕಲ್ಲು ಮಣ್ಣು ಮುಂ. ಗಳನ್ನು ಒಯ್ಯುವ ದೋಣಿ, ನೌಕೆ.

**कबाला** (ಕಬಾಲಾ) ಪು. ಅರ. ಮಾರಾಟದ ದಸ್ತೈವಜು, ಬಿಕರಿಪತ್ರ.

**कबिला** (ಕಬಿಲಾ) ಪು. ಅರ. ತಂಡ. ೨. ಕುಟುಂಬ. ೩. ಹೆಂಡತಿ.

**कबु–बूतर** (ಕಬು–ಬೂತರ್) ನ. ಕಪೋತ, ಪಾರಿವಾಳ.

**कबुली** (ಕಬುಲೀ) ಸ್ತ್ರಿ. ಅರ. ಒಪ್ಪಿಗೆ, ಸಮ್ಮತಿ.

**कबूल** (ಕಬೂಲ್) ವಿ. ಅರ. ಸಮ್ಮತ, ಸ್ವೀಕೃತ, ಒಪ್ಪಿಕೊಂಡ.

**–करणे** (–ಕರಣೇ) ಕ್ರಿ. ಸ. ಒಪ್ಪು.

**कब्बू** (ಕಬ್ಬೂ) ವಿ. ಸಾಲ ತೆಗೆದುಕೊಂಡವ, ಸಾಲಗಾರ. ೨. ಜಿಬುಟಿ.

**कम** (ಕಮ್) ಪ್ರತ್ಯಯ. ಫಾ. ಕಡಿಮೆ–ಕಮ್ಮಿ.

**–असल** (–ಅಸಲ್) ವಿ. ನೀಚ.

**–कुवत** (–ಕುವತ್) ವಿ. ಅಶಕ್ತ. ೨. ತಿರುಳಿಲ್ಲದ.

**–जोर** (–ಜೋರ್) ವಿ. ಅಶಕ್ತ.

**–तोल** (–ತೋಲ್) ವಿ. ತೂಕಕ್ಕೆ ಕಡಿಮೆಯಾದ.

**–नशीब** (–ನಶೀಬ್) ವಿ. ದುರ್ದೈವಿ.

**–बक्त** (–ಬಕ್ತ್) ವಿ. ದುರ್ದೈವಿ.

**–बक्ती** (–ಬಕ್ತೀ) ಸ್ತ್ರೀ. ದುರ್ದೈವ.

**कमचा** (ಕಮಚಾ) ಪು. ಹಿಂ. ಬೆತ್ತ.

**कमटा** (ಕಮಟಾ) ಪು. ಸಂ. ಬಿಲ್ಲು, ಧನುಷ್ಯ.

**कमंडलु** (ಕಮಂಡಲು) ಪು. ನ. ಸಂ. ಸನ್ಯಾಸಿಗಳ ನೀರು ಕುಡಿಯುವ ಪಾತ್ರೆ.

**कमतरता** (ಕಮತರತಾ) ಸ್ತ್ರಿ. ಫಾ+ಮ. ಕುಂದು ಕೊರತೆ, ತ್ರುಟಿ.

**कमता** (ಕಮತಾ) ಸ್ತ್ರೀ. ಕೊರತೆ.

**कमताई** (ಕಮತಾಈ) ಸ್ತ್ರೀ. ಕೊರತೆ, ದೋಷ.

**कमतावा** (ಕಮತಾವಾ) ಪು. ಫಾ. ನಾಣ್ಯ ಬದಲಾವಣೆ. ೨.ನಾಣ್ಯ ಬದಲಿಸುವುದಕ್ಕೆ ಕೊಡುವ ಹಣ, ಕಮಿಶನ್.

**कमती** (ಕಮತೀ) ಸ್ತ್ರೀ. ಕಡಿಮೆ ಇರುವಿಕೆ, ತ್ರುಟಿ, ಕೊರತೆ.

**कमर** (ಕಮರ್) ಸ್ತ್ರೀ. ಫಾ. ನಡ, ಟೊಂಕ, ಸೊಂಟ.

**–पट्टा** (–ಪಟ್ಟಾ) ನಡಪಟ್ಟಿ, ಬೆಲ್ಟ್.

**–बंद** (–ಬಂದ್) ನಡಕ್ಕೆ ಕಟ್ಟುವ ವಸ್ತ್ರ.

**कमल–ळ** (ಕಮಲ್–ಳ್) ನ. ಸಂ. ಕಮಲ, ತಾವರೆ.

**कमला** (ಕಮಲಾ) ಸ್ತ್ರೀ. ಸಂ. ಲಕ್ಷ್ಮೀದೇವಿ.

**कमवणे** (ಕಮವಣೇ) ಕ್ರಿ. ಸ. ಗಳಿಸು, ಸಂಪಾದಿಸು. ೨. ಹದಮಾಡು.

**कमाई** (ಕಮಾಈ) ಸ್ತ್ರೀ. ಹಿಂ. ಗಳಿಕೆ. ೨. ಸಂಪಾದನೆ. ೩. ಹಿಟ್ಟು ನಾದುವಿಕೆ, ಹದಮಾಡುವಿಕೆ.

**कमान** (ಕಮಾನ್) ಸ್ತ್ರೀ. ಫಾ. ಬಿಲ್ಲು, ಧನುಷ್ಯ. ೨. ಕಮಾನು, ಮಹಿರಾಬು.

**कमाल** (ಕಮಾಲ್) ಸ್ತ್ರೀ. ಅರ. ಸಾಧನೆ, ಪೂರ್ಣತೆ, ಹೆಚ್ಚಳ, ಅತಿರೇಕ. ೨. ವಿ. ಅತಿ ಹೆಚ್ಚಿಗೆಯಾದ ೩. ಆಶ್ಚರ್ಯಕಾರಕ.

**–तपमान** (–ತಪಾಮಾನ್) ನ. ಹೆಚ್ಚಿನ ಉಷ್ಣತೆ,

**–करणे** (–ಕರಣೇ) ಕ್ರಿ. ಸ. ಅದ್ಭುತ, ಕೆಲಸವನ್ನು ಮಾಡು. ೨. (ವ್ಯಂಗ್ಯ) ವಿಚಿತ್ರ ವ್ಯವಹಾರ ಮಾಡು.

**–आहे** (–ಆಹೇ) (ಉದ್ಗಾರ) ಧನ್ಯ, ಭಲೆ, (ವ್ಯಂಗಾರ್ಥದಲ್ಲಿ) ವಿಚಿತ್ರ.

**कमावता** (ಕಮಾವತಾ) ವಿ. ಗಳಿಸುವವ, ಸಂಪಾದನೆ ಮಾಡುವವ, (ಲಾ.) ಕುಟುಂಬದ ಹಿರಿಯ.

**कमावणे** (ಕಮಾವಣೇ) ಕ್ರಿ. ಸ. **कमवणे** ನೋ.

**कमावीसदारे** (ಕಮಾವೀಸ್‌ದಾರ್) ಪು. ಮಹಸೂಲನ್ನು ವಸೂಲಮಾಡುವವ ಅಧಿಕಾರಿ, ಕಲೆಕ್ಟರ್.

**कमी** (ಕಮೀ) ಸ್ತ್ರೀ. ಫಾ. ಕೊರತೆ, ದೋಷ. ೨. ವಿ. ಕಡಿಮೆ.

**–जास्त** (–ಜಾಸ್ತ್) ವಿ. ಹೆಚ್ಚು ಕಡಿಮೆ.

**–करणे** (–ಕರಣೇ) ಕ್ರಿ. ಸ. ಕಡಿಮೆಮಾಡು. ೨. ಕೆಲಸದಿಂದ ತೆಗದು ಹಾಕು.

**–पणा** (–ಪಣಾ) ಪು. ಅಪಕೀರ್ತಿ. ೨. ಕೀಳುಸ್ಥಿತಿ. ೩. ದೈನ್ಯ.

**–पणा घेणे** (–ಪಣಾ ಘೇಣೇ) ಕಿ. ಸ. ತನ್ನ ದೋಷಗಳನ್ನು ಒಪ್ಪು.

**कमोद** (ಕಮೋದ್) ಪು. ಅಕ್ಕಿಯ ಒಂದು ಜಾತಿ.

**कयास** (ಕಯಾಸ್) ಪು. ಅರ. ಅಂದಾಜು, ತರ್ಕ, ಊಹೆ.

**कर** (ಕರ್) ಪು. ಸಂ.ಕೈ–೨. ಕರ, ಸುಂಕ. ೩. ಸ್ತ್ರೀ. (ಪಂಚಾಂಗ) ಕರಿದಿನ (ಗ್ರಹಣ, ಸಂಕ್ರಮಣಗಳ ಮುಂದಿನ ದಿನ) ೪. ಸ್ತ್ರೀ. ಕೃತಿ.

**–नाही तर डर कशाला** (–ನಾಹೀ ತರ ಡರ್ ಕಶಾಲಾ) ನಾಣ್ನುಡಿ, (ಕೆಟ್ಟ) ಕೆಲಸಮಾಡದಿದ್ದರೆ ಏಕೆ ಅಂಜಬೇಕು.

**–कर** (–ಕರ್) ಪ್ರತ್ಯಯ. ಸಂ. ಕಾರಕ, ದಾಯಕ.

**समाधान–** (ಸಮಾಧಾನ–) ವಿ. ಸಂತೋಷಗೊಳಿಸುವ. ೨. ಮ. (ಪ್ರಾಂ) ಇಂಥ) ಊರಿನವ, ಉಳ್ಳವ, ಒಡೆಯ.

**काशी–** (ಕಾಶೀ–) ಪು. ಕಾಶಿಯವ.

**टोपी–** (ಟೋಪೀ–) ಪು. ಬ್ರಿಟಿಶ, ಯುರೋಪಿಯನ್.

**करक** (ಕರಕ್) ಪು. (ಪರಟೆಯ) ಕಮಂಡಲು. ೨. ಆಣೆಕಲ್ಲು. ೩. ಸ್ತ್ರೀ. ಪೀಡೆ, ದುಃಖ.

**करकचणे** (ಕರಕಚಣೇ) ಕ್ರಿ. ಅ. (ಬಿಗಿದ ವಸ್ತ್ರದ ಗೆರೆ) ಮೂಡು.

**करक (ख) टणे** (ಕರಕ(ಖ)ಟಣೇ) ಕ್ರಿ. ಅ. ಕ. ಮುಸುರೆಯಾಗು.

**करक (ख) टे** (ಕರಕ(ಖ)ಟೇ) ವಿ. ಕ. ಮುಸುರೆಯಾದ.

**करकर** (ಕರಕರ್) ಸ್ತ್ರೀ. ಜಗಳ. ೨. ಕರ್ಕಶಸಪ್ಪಳ.

**करकरणे** (ಕರ ಕರಣೇ) ಕ್ರಿ. ಅ. 'ಕರ್-ಕರ್' ಎಂದು ಸಪ್ಪಳವಾಗು.

**करकराट** (ಕರಕರಾಟ್) ಸ್ತ್ರೀ. ಪು. 'ಕರ್-ಕರ್' ಶಬ್ದ.

**करकरीत** (ಕರಕರೀತ್) ವಿ. ಅಚ್ಚ, ಶುದ್ಧ, ಹೊಸ.

**कोरा–** (ಕೋರಾ–) ವಿ. ಅಚ್ಚಹೊಸ, ತೀರಹೊಸ.

**करकोचा** (ಕರಕೋಚಾ) ಪು. ೧. ಬಕಪಕ್ಷಿ. ೨.ಬಿಗಿದು ಕಟ್ಟಿದ ವಸ್ತ್ರದಿಂದ ಮೂಡುವ ಗೆರೆ.

**करंग(गु)ळी** (ಕರಂಗ(ಗು)ಳೀ) ಸ್ತ್ರೀ. ಕ. ಕಿರಿ ಬೆರಳು, ಕಿರಿಬೊಟ್ಟು.

**करगोटा** (ಕರಗೋಟಾ) ಪು. ಉಡದಾರ.

**करछा** (ಕರಛಾ) ಪು. ಸಣ್ಣ ಸೌಟು, ಮುಗಿಚುವ ಕೈ.

**करंज** (ಕರಂಜ್) ಪು. ಒಂದು ಗಿಡ, ಹಲಗಲಿ.

**करंजेल** (ಕರಂಜೇಲ್) ನ. ಹಲಗಲಿ ಎಣ್ಣೆ.

**करट** (ಕರಟ್) ನ. ಕುರು, ವ್ರಣ.

**करंट** (ಕರಂಟ್) ವಿ. ದುರ್ದೈವಿಯಾದ.

**–लक्षण** (–ಲಕ್ಷಣ) ವಿ. ದುರ್ದೈವದ ಲಕ್ಷಣ, ಕುಲಕ್ಷಣ.

**करंटा** (ಕರಂಟಾ) ವಿ. ದುರ್ದೈವಿ, ದರಿದ್ರ, ಬಡವ.

**करटी** (ಕರಟೀ) ಸ್ತ್ರೀ. ಪರಟೆ, ತೆಂಗಿನಕಾಯಿಯ ಕವಚ. ೨. ತಲೆ ಬುರುಡೆ. ೩. ಲಾ. ಬಡತನ.

**करड** (ಕರಡ್) ಸ್ತ್ರೀ. ಕ. ಅರ್ಧತಯಾರಿಸಿದ ಅಕ್ಕಿ, ಕುಟ್ಟಿದ ಅಕ್ಕಿ.

**करडई** (ಕರಡಈ) ಸ್ತ್ರೀ. ಕುಸುಂಬೆ.

**करडणे** (ಕರಡಣೇ) ಕ್ರಿ. ಸ. ಅಗಿ, ಕಚ್ಚು.

**करडा** (ಕರಡಾ) ವಿ. ೧. ಬೂದಿಯ ಬಣ್ಣ. ೨. ಕುಟ್ಟಿದ (ಅಕ್ಕಿ) ೩. ಹುರುಬರಕಾದ. ೪. ಕಠೋರ, ದರ್ಪಯುಕ್ತ.

**–अंमल** (–ಅಂಮ್ಮಲ್) ಪು. ಶಿಸ್ತಿನ ಆಡಳಿತ, ದಕ್ಷತೆ, ಭದ್ರಶಾಸನ.

**करंडा** (ಕರಂಡಾ) ಪು. ಬುಟ್ಟಿ, ಪೆಟ್ಟಿಗೆ. ೨. ಸಣ್ಣ ಡಬ್ಬಿ.

**करंडी** (ಕರಂಡೀ) ಪು. ಗಳದ ಬುಟ್ಟಿ, ಹಣ್ಣುಹಂಪಲ ಹಾಕಿದ ಪೆಟ್ಟಿಗೆ.

**करडेल** (ಕರಡೇಲ್) ನ. ಕುಸುಂಬೆಯ ಎಣ್ಣೆ.

**करण** (ಕರಣ) ನ. ಸಂ. ಇಂದ್ರಿಯ. ೨. ಸಾಧನ ಸಲಕರಣೆ. ೩. (ಪಂಚಾಂಗ) ದಿನದ ಅಂಶ, ಕರಣ.

**करणावळ** (ಕರಣಾವಳ್) ಸ್ತ್ರೀ. ತಯಾರಿಸುವ ಕೂಲಿ.

**करणा** (ಕರಣಾ) ಪು. ಕಹಳೆ, ಶಂಖ, ಶಂಖನಾದ.

**करणी** (ಕರಣೀ) ಸ್ತ್ರೀ. ಗಿಲಾಯಿಮಾಡುವ ಸಾಧನ. ೨ ಕೃತಿ, ೩ ಮಾಟ, ಮೋಸ.

**करणे** (ಕರಣೇ) ಕ್ರಿ.ಸ. ಮಾಡು, ಈಡೇರಿಸು, ನಿರ್ವಹಿಸು. ೨ ನ. ಕೃತಿ, ಕೆಲಸ, ಕಾಯಕ.

**करणेर** (ಕರಣೇರ್) ನ. ಮದುಮಗನಿಗೆ ಕೊಡುವ ಉಡುಗರೆ.

**करतल** (ಕರತಲ್) ನ. ಸಂ. ಅಂಗೈ.

**–आमलक** (–ಆಮಲಕ್) ನ. ಸಹಜಸಾಧ್ಯಸಂಗತಿ.

**–करता** (–ಕರತಾ) / **–करिता** (ಕರಿತಾ) } ಪ್ರತ್ಯಯ. ಸಲುವಾಗಿ, ಗೋಸ್ಕರ.

**करताल** (ಕರತಾಲ್) ಪು. ನ. ಸಂ. ಅಂಗೈ, ೨ ವಾದ್ಯ ವಿಶೇಷ.

**करंद** (ಕರಂದ್) ಸ್ತ್ರೀ. **करवंद** ನೋಡಿರಿ.

**करदनकाळ** (ಕರದನ್‌ಕಾಳ್) ವಿ. ಅಕ್ರಾಳ ವಿಕ್ರಾಳ, ಕ್ರೂರ, ಕಠೋರ.

**करनकर** (ಕರನಕರ್) ವಿ. ಮಾಡಬಾರದ್ದನ್ನು ಮಾಡುವವ, ಮಾಡಬೇಕಾದುದನ್ನು ಮಾಡದವ.

**करनाटक** (ಕರನಾಟಕ್) ನ. ಕರ್ನಾಟಕ, ಕನ್ನಡ ನಾಡು.

**–ओसपडणे** (–ಓಸ್‌ಪಡಣೇ) ಕ್ರಿ.ಅ. ಕಿವುಡನಾಗು.

**कर्नाटक** (ಕರ್ನಾಟಕ್) ನ. ಕನ್ನಡನಾಡು.

**कर्नाटकी** (ಕರ್ನಾಟಕೀ) ವಿ. ಕನ್ನಡನಾಡಿನವ, ಕನ್ನಡಿಗ.

**करप** (ಕರಪ್) ಸ್ತ್ರೀ. ಬಿಸಿಲಿನಿಂದ ಕಮರಿದ, ಸುಟ್ಟು ಹೋದ ಧಾನ್ಯ, ಪೈರು.

**करपट** (ಕರಪಟ್) ವಿ. ಹೊತ್ತಿದ, ಸುಟ್ಟ, ಕರಿದಾದ (ಅನ್ನ). ೨ ಹುಳಿ (ತೇಗು).

**करपणे** (ಕರಪಣೇ) ಕ್ರಿ. ಅ. ಕರಿದಾಗು, ಸುಟ್ಟು ಹೋಗು, ಹೊತ್ತು ಕಮರು.

**करपल्लवी** (ಕರಪಲ್ಲವೀ) ಸ್ತ್ರೀ. ಸಂ. ಕೈಸನ್ನೆಯಿಂದ ಸೂಚನೆ ಕೊಡುವ ಪದ್ಧತಿ.

**करपविणे** (ಕರಪವಿಣೇ) ಕ್ರಿ.ಸ. (ಸುಟ್ಟು) ಕರಿದು ಮಾಡು, ಕಮರಿಸು.

**करपा** (ಕರಪಾ) ಪು. ಸುಟ್ಟ ಅಥವಾ ಕರಿದಾದ ಭಾಗ ೨ ಒಂದು ಹುಳ.

**करपेल** (ಕರಪೇಲ್) ವಿ. ನಯವಾದ, ಕೋಮಲವಾದ ಮೇವು.

**करंबट** (ಕರಂಬಟ್) ಸ್ತ್ರೀ. ಕ. ಕಮ್ಮಗಾದ ಚಟ್ನಿ.

**करबड** (ಕರಬಡ್) ಸ್ತ್ರೀ. ನ. ತಿಂದುಳಿದ, ತುಳಿದು ಹಾಕಿದ್ದ ಮೇವು.

**करबडणे** (ಕರಬಡಣೇ) ಕ್ರಿ. ಸ. **करवडणे** ನೋ.

**कर–बंदी** (ಕರ–ಬಂದೀ) ಸ್ತ್ರೀ. ಕರನಿರಾಕರಣೆಯ ಚಳುವಳಿ.

**करंबुटी** (ಕರಂಬುಟಿ) ಸ್ತ್ರೀ. ಮಾವಿನಕಾಯಿ.

**करंबे** (ಕರಂಬೇ) ನ. ಕಾಯಿರಸ, ಗೊಜ್ಜು.

**करभाग** (ಕರಭಾಗ) ಪು. ಕರ, ಕಪ್ಪ, ಕಾಣಿಕೆ.

**करमणूक** (ಕರಮಣೂಕ್) ಸ್ತ್ರೀ. ಮನೋರಂಜನೆ, ಉಲ್ಲಾಸ.

**करमणे** (ಕರಮಣೇ) ಕ್ರಿ. ಅ. (ಸುಖದಿಂದ) ಹೊತ್ತು ಹೋಗು, (ಬೇಸರ ಬರದೆ) ಕಾಲಕ್ಷೇಪವಾಗು. ೨. ಮುದುಡು.

**करमर** (ಕರಮರ್) ಸ್ತ್ರೀ. ಒಂದುಗಿಡ.

**करमाळा** (ಕರಮಾಳಾ) ಪು. (ಎಣಿಸುವುದಕ್ಕಾಗಿ) ಬೊಟ್ಟುಹಾಕುವಿಕೆ.

**करव–वं–टी** (ಕರವ–ವಂಟೀ) ಸ್ತ್ರೀ. ಪರಟೆ, ಚಿಪ್ಪು.

**करवडणे** (ಕರವಡಣೇ) ಕ್ರಿ. ಸ. ತಿಕ್ಕು, ಕೆದರು.

**करवत** (ಕರವತ್) ಪು. ಸ್ತ್ರೀ. ಕರಗಸ.

**–काठी** (–ಕಾಠೀ) ವಿ. ಒಂದು ಚಿತ್ರಾಕೃತಿಯುಳ್ಳ (ಒಲ್ಲೆ.)

**करवती** (ಕರವತೀ) ಸ್ತ್ರಿ. ಸಣ್ಣ ಕರಗಸ.

**करवंद** (ಕರವಂದ್)<br>**करवंदी** (ಕರವಂದೀ) } ಸ್ತ್ರೀ. ಕವಳೆಕಾಯಿ, ಗಿಡ.

**करवंदणे** (ಕರವಂದಣೇ) ಕ್ರಿ. ತಣ್ಣಗಾಗು.

**करवल-ळ** (ಕರವಲ್-ಳ್) ಪು. ತು. ರಕ್ಷಕ, ಕಾವಲುಗಾರ.

**करवला** (ಕರವಲಾ) ಪು. ಮದುಮಗನ ಸಂಗಡಿಗ.

**करवली** (ಕರವಲೀ) ಸ್ತ್ರೀ. ಮದುಮಗನ ಸಂಗಡಿತಿ.

**करवस्त्र** (ಕರವಸ್ತ್ರ) ಪು. ಕರವಸ್ತ್ರ.

**करवा** (ಕರವಾ) ಪು. ತುಂಡರಿಸಿದ ಕಬ್ಬು, ಸಿಪ್ಪೆ ಸುಲಿದು ಸೀಳಿದ ಕಬ್ಬು.

**करवाद** (ಕರವಾದ್) ಪು. ಪೀಡೆ, ಬೇಸರ, ಜಿಗುಪ್ಸೆ.

**करवादणे** (ಕರವಾದಣೆ) ಕ್ರಿ. ಅ. ಪೀಡೆಯಾಗು ೨. ಗೊಣಗುಟ್ಟು.

**करवाल** (ಕರವಾಲ್) ಸ್ತ್ರೀ. ಪು. ಸಂ. ಕತ್ತಿ, ಖಡ್ಗ.

**–करवी** (–ಕರವೀ) ಅ. (ಪ್ರತ್ಯಯ)–ಮುಖಾಂತರವಾಗಿ.

**दुसऱ्या–** (ದುಸರ್ಯಾ–) ಕ್ರಿ. ವಿ. ಬೇರೆಯವರ ಮುಖಾಂತರವಾಗಿ.

**करवीर** (ಕರವೀರ) ಪು. ೧. ಕಣಗಿಲ ಗಿಡ, ಹೂ. ೨. ಕೊಲ್ಲಾಪುರ ಪಟ್ಟಣ, ಕೋಲ್ಹಾಪುರ.

**करळ** (ಕರಳ್) ಪು. ಒಂದು ಬಗೆಯ ಕಲ್ಲು. ೨. ನ. ಛಿದ್ರ, ವಿರಲಭಾಗ.

**करळी** (ಕರಳೀ) ಸ್ತ್ರೀ. ವಾತದಿಂದಾಗುವ ನೋವು.

**करांगळी–करांगुळी** (ಕರಾಂಗಳೀ–ಕರಾಂಗುಳೀ) ಸ್ತ್ರೀ. **करंगळी** ನೋ.

**कराड** (ಕರಾಡ್) ಪು. ಜ್ವರ ಮುಂತಾದವುಗಳ ಜೋರು ವಿಕೋಪ. ೨. ದಂಡೆ.

**कराडी** (ಕರಾಡೀ) ಸ್ತ್ರೀ. ಕಸುವು. ೨. ನರಗಳ ಕಸಬು ಸೇದಿಕೆ.

**कराणा** (ಕರಾಣಾ) ಪು. ಒಂದು ಬಗೆಯ ಪಲ್ಲೆ.

**करामत** (ಕರಾಮತ್) ಸ್ತ್ರೀ. ಅರ. ಮಹತ್ಕಾರ್ಯ, ಅದ್ಭುತ ಕೆಲಸ, ಮಾಯ ಮಾಟ.

**करामती** (ಕರಾಮತೀ) ವಿ. ಅರ. ಚತುರ, ಕಾರ್ಯ ಕುಶಲ.

**करार** (ಕರಾರ) ಪು. ಅರ. ನಿಶ್ಚಯ, ಒಡಂಬಡಿಕೆ, ಸಂಧಿ.

**–नामा** (–ನಾಮಾ) ಪು. **–मदार** (–ಮದಾರ್) ಪು. ಬಹು ವ. ಒಪ್ಪಂದ–ಒಡಂಬಡಿಕೆ.

**करारी** (ಕರಾರೀ) ವಿ. ಅರ+ಫಾ ಏಕನಿಷ್ಠ, ವಚನ ಪಾಲಿಸುವವ, ದೃಢನಿಶ್ಚಯವುಳ್ಳವ.

**–पणा** (–ಪಣಾ) ಪು. ದೃಢ ನಿಶ್ಚಯ.

**कराळ** (ಕರಾಳ್) ವಿ. ಘೋರ, ಅಕರಾಳ ವಿಕರಾಳ.

**कराळी** (ಕರಾಳೀ) ಸ್ತ್ರೀ. ನರಗಳ ಸೇದಿಕೆ, ನರ ಸೋಲುವಿಕೆ.

**कराष्टमी** (ಕರಾಷ್ಟಮೀ) ಸ್ತ್ರೀ. ಅಶ್ವಯುಜ ಬಹುಳ ಅಷ್ಟಮಿ.

**करी** (ಕರೀ) ಪು. ಆನೆ. ೨. (ಪ್ರತ್ಯಯ) ಉಳ್ಳವ, ಮಾಡುವವ.

**गाव–** (ಗಾವ್–) ಪು. ಗ್ರಾಮಸ್ಥ.

**शेत–** (ಶೇತ್–) ಪು. ಒಕ್ಕಲಿಗ.

**करुण** (ಕರುಣ) ವಿ. ಸಂ. ದೀನ, ಕರುಣೆ ಬರುವಂತಹ.

**करुणा** (ಕರುಣಾ) ಸ್ತ್ರೀ. ಸಂ. ಕರುಣೆ, ದಯೆ.

**–कर** (–ಕರ) ವಿ. ದಯೆಯುಳ್ಳವ.

**–स्पद** (–ಸ್ಪದ್) ವಿ. ದಯೆ ಬರುವಂತಹ, ಕೀಳು.

**–करू** (–ಕರೂ) ಪ್ರತ್ಯಯ–ಉಳ್ಳವ, ಒಡೆಯ.

**भाडे–** (ಭಾಡೇ–) ಪು. ಬಾಡಿಗೆ ಕೊಡುವವ.

**यात्रे–** (ಯಾತ್ರೇ–) ಪು. ಯಾತ್ರಿಕ.

**–करून** (–ಕರೂನ್) ಕ್ರಿ. ವಿ. (ಪ್ರತ್ಯಯ)–ಇಂದ, ಮೂಲಕ.

**करे–ऱ्हे** (ಕರೇ–ರ್ಹೇ) ಪು. ಒಂಟೆ, ಒಂಟೆಯ ಮರಿ.

**करेणु** (ಕರೇಣು) ಸ್ತ್ರೀ. ಸಂ. ಹೆಣ್ಣು ಆನೆ.

**करेला** (ಕರೇಲಾ) ಪು. ಎರಡೂ ಕೈಗಳಿಂದ ತಿರುವುವ ದೊಣ್ಣೆ, ಗದೆ.

**करोटी** (ಕರೋಟೀ) ಸ್ತ್ರೀ. ತೆಂಗಿನಕಾಯಿಯ ಪರಟೆ, ಚಿಪ್ಪು.

**करोड** (ಕರೋಡ್) ವಿ. ಹಿಂ. ಕೋಟಿ.

–गिरी (–ಗಿರೀ) ಹಿಂ+ಫಾ ಸ್ತ್ರೀ. (ನಿಜಾಂ ರಾಜ್ಯದಲ್ಲಿಯ) ಸುಂಕ.

करोळा (ಕರೋಳಾ) ಪು. ತು. ಸಶಸ್ತ್ರ ಸವಾರ, ಕಾವಲುಗಾರ,

कर्क (ಕರ್ಕ) ಪು. ಸಂ. ಏಡಿ. ೨. (ಪಂಚಾಂಗ) ಕರ್ಕ ರಾಶಿ. ೩. ಕರ್ಕವೃತ್ತ.

–रोग (–ರೋಗ್) ಪು. ಕ್ಯಾನ್ಸರ

कर्कट (ಕರ್ಕಟ) ಪು. ಕಂಪಾಸ್ ಪೆಟ್ಟಿಗೆ.

कर्कश (ಕರ್ಕಶ) ವಿ. ಕೇಳಲಿಕ್ಕಾಗದ, ಕರ್ಕಶ.

कर्कशा (ಕರ್ಕಶಾ) ಸ್ತ್ರೀ. ಜಗಳಗಂಟ ಹೆಂಗಸು.

कर्कोटक (ಕರ್ಕೋಟಕ್) ಪು. ಸಂ. ನಾಗ. ೨. ಕರ್ಹಾಡಾ ಬ್ರಾಹ್ಮಣ (ವ್ಯಂಗ) ೩. ಸೇಡು ಹಿಡಿಯುವವ, ದೀರ್ಘ ದ್ವೇಷ ಮಾಡುವವ.

कर्ज (ಕರ್ಜ) ನ. ಅರ. ಸಾಲ.

–लागणे (–ಲಾಗಣೇ) ಕ್ರಿ. ಅ. ಸಾಲವಾಗು.

–करी (–ಕರೀ) ಪು. ಸಾಲ ತೆಗೆದುಕೊಳ್ಳುವವ. ೨. ಕೊಡುವವ.
–दार (ದಾರ್) ,, ,, ,,

–खत (ಖತ್) ನ. ಸಾಲದ ಪತ್ರ.

–बाजारी (–ಬಾಜಾರೀ) ವಿ. ಸಾಲ ಮಾಡುವವ, ಮಿತಿಮೀರಿ ಖರ್ಚು ಮಾಡುವವ.

–रोखा (ರೋಖಾ) ಪು. ಸರಕಾರೀ ಸಾಲದ ಪತ್ರ, ಬಾಂಡು.

कर्जाऊ (ಕರ್ಜಾಊ) ವಿ. ಅರ+ಮ. ಸಾಲವೆಂದು ಕೊಟ್ಟ.

कर्जी (ಕರ್ಜೀ) ವಿ. ಅರ. ಸಾಲವೆಂದು ದೊರೆತ.

कर्ण (ಕರ್ಣ) ಪು. ಸಂ. ೧. ಅಂಗರಾಜ ಕರ್ಣ, (ಉದಾರ) (ಉಪರೋಧ) ಜಬುಟ. ೨ ಕಿವಿ.

–कटु (–ಕಟು), कठोर (–ಕಠೋರ) ವಿ. ಕೇಳಲಿಕ್ಕೆ ಕರ್ಕಶವಾದ.

–जप (–ಜಪ್) ಪು. ಚಾಡಿ ಹೇಳುವವ.

–धार(–ಧಾರ್) ಪು. ಹಿರಿಯ, ಪ್ರಮುಖ(ಕ್ರಿಕೆಟ್) ಕ್ಯಾಪ್ಟನ್.

–परंपरा (–ಪರಂಪರಾ) ಸ್ತ್ರೀ. ಕೇಳುಸುದ್ದಿ, ವದಂತಿ.

–पिशाच (–ಪಿಶಾಚ್) ಪು. ಜನರ ಗುಟ್ಟು ಹೇಳುವ ಪಿಶಾಚಿ. (ಚಾಡಿ ಹೇಳುವವ.)

–पिशी (–ಪಿಶೀ) ಸ್ತ್ರೀ. ಚಾಡಿ.

कर्णा (ಕರ್ಣಾ) ಪು. ಕಹಳೆ, ಶಂಖ ಧ್ವನಿ.

कर्णी (ಕರ್ಣೀ) ಸ್ತ್ರೀ. ಕರಣೀ ನೋ.

कर्णोपकर्णी (ಕರ್ಣೋಪಕರ್ಣೀ) ಕ್ರಿ. ವಿ. ಒಬ್ಬರಿಗೆ ಮತ್ತೊಬ್ಬರು ಹೇಳಿದ ಪ್ರಕಾರ, ಕೇಳಿಕೆಯ ಮೂಲಕವಾಗಿ.

कर्तक (ಕರ್ತಕ್) ವಿ. ಸಂ. ಕೊಯ್ಯುವವ ೨. ಚಿಪ್ಪಿಗ.

कर्तन (ಕರ್ತನ್) ನ. ಸಂ. ಕೊಯ್ಯುವಿಕೆ.

कर्तबगार (ಕರ್ತಬಗಾರ್) ವಿ. ಕಾರ್ಯಕ್ಷಮ, ಕುಶಲ.

कर्तरि (ಕರ್ತರಿ) ವಿ. ಸಂ. (ವ್ಯಾಕರಣ) ಕರ್ತರಿ ಪ್ರಯೋಗ.

कर्तव्य (ಕರ್ತವ್ಯ) ನ. ಸಂ. ಮಾಡತಕ್ಕ ಕೆಲಸ, ಧರ್ಮ,

लग्न–असणे / ಲಗ್ನ ಕರ್ತವ್ಯ ಅಸಣೇ } ಕ್ರಿ. ಅ. ಲಗ್ನದ ವಿಚಾರ ಮಾಡು. ಮದುವೆಯ ಸಿದ್ಧತೆಯನ್ನು ಸಾರು.

कर्ता (ಕರ್ತಾ) ಪು. ಸಂ. ಕರ್ತೃ, ಕರ್ತಾರ, ಮಾಡುವವ ಸೃಷ್ಟಿಸುವವ.

–माणूस (–ಕರ್ತಾ ಮಾಣೂಸ್) ಪು. ಹಿರಿಯ, ಕುಟುಂಬ ಪ್ರಮುಖ.

कर्तृत्व (ಕರ್ತೃತ್ವ) ನ. ಸಂ. ಕಾರ್ಯಕುಶಲತೆ, ಸಾಮರ್ಥ್ಯ.

कर्दनकाळ (ಕರ್ದನ್‌ಕಾಳ್) ವಿ. ಭಯಂಕರ, ಘೋರ.

कर्दम (ಕರ್ದಮ್) ಪು. ಸಂ. ಕೆಸರು.

कर्दळ–ळी (ಕರ್ದಳ್–ಳೀ) ಸ್ತ್ರೀ ಬಾಳೆಯ ಗಿಡ.

कर्पट (ಕರ್ಪಟ) ವಿ. ಹುಳಿ (ತೇಗು)

कर्पूर (ಕರ್ಪೂರ್) ಪು. ಸಂ. ಕಪ್ಪುರ, ಕರ್ಪೂರ.

कर्बूर (ಕರ್ಬೂರ್) ವಿ. ಸಂ. ಬೂದಿಯ ಬಣ್ಣದ. ೨. ಚಿತ್ರ ವಿಚಿತ್ರ.

कर्म (ಕರ್ಮ) ನ. ಸಂ. ಕೆಲಸ. ೨. ಕಾಯಕ, ೩. (ಅಂ) (ಪೂರ್ವ ಜನ್ಮದ) ಕರ್ಮ.

–कहाणी (–ಕಹಾಣೀ) ಸ್ತ್ರೀ. ದುಃಖ ದುರಂತ.

–धर्म (–ಧರ್ಮ) ಪು. ವೃತ್ತಿ, ನಡಾವಳಿ.

–धर्मसंयोग (–ಧರ್ಮಸಂಯೋಗ) ಪು. ಅಕಸ್ಮಾತ್ತಾಗಿ ಒದಗಿದ ಪ್ರಸಂಗ.

–फुटका (–ಫುಟಕಾ) ವಿ. ದುರ್ದೈವಿ.

–भूमी (–ಭೂಮೀ) ಸ್ತ್ರೀ. ಕಾರ್ಯಕ್ಷೇತ್ರ. ೨. ದೊಡ್ಡ ಮನುಷ್ಯರು ಮಹತ್ಕಾರ್ಯ ಮಾಡಿದ ಸ್ಥಳ.

–लंड (–ಲಂಡ್) ವಿ. ನಾಸ್ತಿಕ, ಅಧರ್ಮಿ.

कर्मठ (ಕರ್ಮಠ) ಜಪತಪ ಮಾಡುವವ, ಧರ್ಮಭಕ್ತ.

कर्मणि (ಕರ್ಮಣಿ) ವಿ. ಸಂ. ಕರ್ಮಣಿ ಪ್ರಯೋಗ.

कर्मांतर (ಕರ್ಮಾಂತರ್) ನ. ಸಂ. ಉತ್ತರ ಕ್ರಿಯೆ.

**कर्मांतऱ्या** (ಕರ್ಮಾಂತರ್‍ಯಾ) ಪು. ಉತ್ತರ ಕ್ರಿಯೆ ಮಾಡಿಸುವ ಬ್ರಾಹ್ಮಣ.

**कर्मेंद्रिय** (ಕರ್ಮೇಂದ್ರಿಯ) ನ. ಸಂ. ಕೈಕಾಲು ಮುಂತಾದ ಸ್ಥೂಲ (ಬಾಹ್ಯ) ಇಂದ್ರಿಯಗಳು.

**कऱ्हा** (ಕರ್‍ಹಾ) ಪು. ನೀರಿನ ಗಡಿಗೆ, ಪಾತ್ರೆ.

**कऱ्हाडा** (ಕರ್‍ಹಾಡಾ) ಪು. ಕರ್‍ಹಾಡಾ ಬ್ರಾಹ್ಮಣ.

**कऱ्ह्या** (ಕರ್‍ಹ್ಯಾ) ಒಂದು ಜಾತಿಯ ಕಲ್ಲು.

**कल** (ಕಲ್) ಪು. ಒಲವು, ಪ್ರೀತಿ, ಮೆಚ್ಚುಗೆ.

**कलंक** (ಕಲಂಕ್) ಪು. ಸಂ. ಕಲೆ, ಕೊಳೆ, ಮಲಿನತೆ, ಕಳಕ.

**कलकल** (ಕಲ್‌ಕಲ್) ಸ್ತ್ರೀ. ಕೋಲಾಹಲ, ಕರ್ಕಶ ಸಪ್ಪಳ.

**–णे** (–ಣೇ) ಕ್ರಿ. ಅ. ಅಸ್ಪಷ್ಟತೆಯುಂಟಾಗು. ಕ್ರಿ. ಸ. ಕೋಲಾಹಲ ಮಾಡು.

**कलकलाट** (ಕಲಕಲಾಟ್) ಪು. ಕೋಲಾಹಲ.

**कलंकित** (ಕಲಂಕಿತ) ವಿ. ಸಂ. ಕಲೆಬಿದ್ದ, ಕಳಂಕ ವುಂಟಾದ.

**कलंकी** (ಕಲಂಕೀ) ಪು. ವಿಷ್ಣುವಿನ ಭಾವೀ ಅವತಾರ ೨. (ಲಾ) ಜಗಳ.

**कलंगडे** (ಕಲಂಗಡೇ) ನ. ಹಿಂ. ಕಲ್ಲಂಗಡಿ.

**कलगी** (ಕಲಗೀ) ಸ್ತ್ರಿ. ತು. ತುರಾಯಿ.

**–तुरा** (–ತುರಾ) ಪು. ಶೃಂಗಾರಿಕ ಲಾವಣಿಯ ಒಂದು ಬಗೆ.

**कडलंणे** (ಕಲಂಡಣೇ) ಕ್ರಿ. ಅ. ಬಾಗು, ಒರಗು. (ಲಾ.) ಮಲಗು.

**कलंडी** (ಕಲಂಡೀ) ಸ್ತ್ರೀ. ಜೋಲಿ ಹೋಗುವಿಕೆ.

**कलणे** (ಕಲಣೇ) ಕ್ರಿ. ಅ. ಹೊರಳು, ಬಾಗು, ಬಗ್ಗು. ೨. ಪ್ರೀತಿಸು. ಮೆಚ್ಚು.

**कलता** (ಕಲತಾ) ವಿ.ಬಾಗಿದ, ಬಗ್ಗಿದ, ೨.ಮನಸೋತ. ೩. ಪು. ಮುಗಿಚುವ ಕೈ.

**कलत्र** (ಕಲತ್ರ) ನ. ಹೆಂಡತಿ.

**कलथणे** (ಕಲಥಣೇ) ಕ್ರಿ. ಸ. ಹೊರಳಿಸು, ಡಬ್ಬು ಹಾಕು.

**कलथा** (ಕಲಥಾ) ಪು. ಮುಗಿಚುವ ಕೈ.

**कलथी** (ಕಲಥೀ) ಸ್ತ್ರೀ. ಮುಗಿಚುವ ಕೈ.

**कलंदर** (ಕಲಂದರ್) ಪು. ಅರ. ಫಕೀರ, ೨. ರೇಶ್ಮೆಯ ಅಸ್ತರ.

**कलप** (ಕಲಪ್) ಪು. ಹಿಂ. ಕೂದಲು ಕಪ್ಪು ಮಾಡುವ ಬಣ್ಣ, ಅಂಜನ, ಕಲ್ಪ.

**कलभांड** (ಕಲಭಾಂಡ್) ವಿ. ಜಗಳಗಂಟ.

**कलम** (ಕಲಮ್) ನ. ಅರ. ಪೇನಾ, ಟಾಕು,ಲೇಖನಿ, ೨, ಪರಿಚ್ಛೇದ. ೩. (ಕಾನೂನು) ನಿಯಮ, ಗೊತ್ತುವಳಿ, ಕಲಮು.

**कलमी** (ಕಲಮೀ) –ವಿ. ಕಲಮುಗಳುಳ್ಳ. ೨. ಬರೆಹ ಮೂಲಕವಾದ. ೩. ಕಲಮಿ (ಮಾವಿನ ಹಣ್ಣು.)

**कलश** (ಕಲಶ) ಪು. ಸಂ. ಕೊಡ, ಬಿಂದಿಗೆ, ತಂಬಿಗೆ. ೨. ಕಳಸ.

**कलह** (ಕಲಹ) ಪು. ಸಂ. ಜಗಳ.

**कलहंस** (ಕಲಹಂಸ) ಪು. ಸಂ. ಹಂಸ, ೨. ನೀರುಗೋಳಿ.

**कला** (ಕಲಾ) ಸ್ತ್ರೀ. ಸಂ. ಕೌಶಲ್ಯ, ಕಲೆ, ವಿದ್ಯೆ. ೨. ಚಂದ್ರನ ಅಂಶ.

**कलागत** (ಕಲಾಗತ್) ಸ್ತ್ರೀ. ಜಗಳ.

**कलागत्या** (ಕಲಾಗತ್ಯಾ) ಪು. ಜಗಳಗಂಟ, ತುಂಟ, ಜಗಳ ಹಚ್ಚುವವ.

**कलाटणी** (ಕಲಾಟಣೀ) ಸ್ತ್ರಿ. ಲಾಗ, ಲಗಾಟ, ಪಟ್ಟಿ, ಬುಡಮೇಲು. ೨. (ಲಾ.) (ಮುಂಚಿನ ವಿಚಾರ ದಲ್ಲಿಯ) ಬದಲಾವಣೆ. ೩. (ಪರಿಸ್ಥಿತಿಗೆ ಬರುವ) ಹೊಸ ಸ್ವರೂಪ.

**कलाप** (ಕಲಾಪ) ಪು. ಸಂ. ಸಮುದಾಯ,ಸಮೂಹ, ಗುಂಪು, ಗೊಂಚಲು.

**कलाबतू** (ಕಲಾಬತೂ) ಪು. ನ. ಹಿಂ. ಜರತಾರಿಯ ಇಲ್ಲವೆ ರೇಶ್ಮೆಯ ದಾರ.

**कलाल** (ಕಲಾಲ್) ಪು.ಹಿಂ. ಸರಾಯಿ ತಯಾರಿಸುವವ.

**कलाली** (ಕಲಾಲೀ) ಸ್ತ್ರೀ ಹಿಂ. ಮದ್ಯದ ವ್ಯವಸಾಯ. ೨. ವಿ. ಕಪಟ, ಮೋಸ ಮುಂತಾದವುಗಳಲ್ಲಿ ತೊಡ ಗಿದವ, ಧೂರ್ತ.

**कलावंत** (ಕಲಾವಂತ) ಪು. ಕಲಾಕಾರ, ಕುಶಲ.

**कलावंतीण** (ಕಲಾವಂತೀಣ್) ಸ್ತ್ರೀ. ನರ್ತಕಿ, ವೇಶ್ಯೆ.

**कली** (ಕಲೀ) ಪು. ಕಲಿಪುರುಷ. ೨. ಜಗಳ. ೩. ಕಲಿ ಯುಗ.

**कलिका** (ಕಲಿಕಾ) ಸ್ತ್ರೀ. ಮೊಗ್ಗೆ.

**कलिंगड** (ಕಲಿಂಗಡ್) ನ. ಹಿಂ. ಕಲ್ಲಂಗಡಿ ಹಣ್ಣು.

**कलिजा** (ಕಲಿಜಾ) ಪು. ಹಿಂ. ಧೈರ್ಯ. ೨. ಹೃದಯ. ಎದೆ.

**कलिंदर** (ಕಲಿಂದರ್) ಪು. ಅರ+ಫಾ) ಮುಸಲ್ಮಾನ ಸಾಧು.

–रा (–ರಾ) ೨. (ಲಾ) ಘಟಿಂಗ, ಸ್ವೈರಾಚಾರಿ, ದುರಾಚಾರಿ.

**कलुष** (ಕಲುಷ) ವಿ. ನ. ಪಾಪ, ದುರ್ಮಾರ್ಗ.

**कलुषित** (ಕಲುಷಿತ) ವಿ. ಸಂ. ಕಲೆಬಿದ್ದ, ಕೆಟ್ಟ, ದೋಷವುಳ್ಳ. ಕಳಂಕಿತ.

**कलेवर** (ಕಲೇವರ್) ನ. ಸಂ. ಶರೀರ. ೨. ಮೃತ ಶರೀರ, ಹೆಣ.

**कल्क** (ಕಲ್ಕ್) ಪು. ಚನ್ನಾಗಿ ಅರೆದ ಔಷಧ.

**कल्प** (ಕಲ್ಪ) ಪು. ಬ್ರಹ್ಮನ ದಿನರಾತ್ರಿ. ೨. ಸಂಶಯ. ೩. ಬಗೆ, ಮಾದರಿ. ವಿ. –ಅಂಥ, ಅಂತಹ.

**कल्पक** (ಕಲ್ಪಕ್) ವಿ. ಸಂ. ಯೋಜಕ, ಹಂಚಿಕೆಯುಳ್ಳವ, ಜಾಣ.

**कल्पतरू** (ಕಲ್ಪತರು) ಪು. ಸಂ. ಬಯಸಿದುದನ್ನು ಕೊಡುವ ಗಿಡ. ಕಲ್ಪ ವೃಕ್ಷ.

**कल्पना** (ಕಲ್ಪನಾ) ಸ್ತ್ರೀ. ಸಂ. ವಿಚಾರ, ಕಲ್ಪನೆ, ಯೋಚನೆ. ೨. ಮನಸ್ಸಿನಲ್ಲಿಯ ಮಾತು. ಕಲ್ಪಿಸಿದ ವಿಚಾರ.

**–शक्ती** (–ಶಕ್ತೀ) ಸ್ತ್ರೀ. ವಿಚಾರ ಮಾಡುವ ಸಾಮರ್ಥ್ಯ, ಊಹಿಸುವ ಶಕ್ತಿ.

**कल्पलता** (ಕಲ್ಪಲತಾ) ಸ್ತ್ರೀ. ಸಂ. ಬಯಸಿದುದನ್ನು ಒದಗಿಸುವ ಬಳ್ಳಿ.

**कल्पवृक्ष** (ಕಲ್ಪವೃಕ್ಷ) ಪು. ಸಂ. ಕಲ್ಪತರು.

**कल्पांत** (ಕಲ್ಪಾಂತ್) ಪು. ಸಂ. ಯುಗದ ಸಮಾಪ್ತಿ, ಪ್ರಲಯ

**कल्पांतरी–ती–तरी** (ಕಲ್ಪಾಂತ–ಂತೀ–ಂತರೀ) ಕ್ರಿ. ವಿ. ಎಂದೆಂದಿಗೂ (ಇಲ್ಲ.)

**कल्पिणे** (ಕಲ್ಪಿಣೇ) ಕ್ರಿ. ಸ. ಕಲ್ಪಿಸು, ವಿಚಾರಮಾಡು, ತಿಳಿದುಕೊ.

**कल्पित** (ಕಲ್ಪಿತ) ವಿ. ಸಂ. ಕಲ್ಪನೆಯಲ್ಲಿಯ (ವಸ್ತುಸ್ಥಿತಿಯಲ್ಲದ) ೨. ವಿಚಾರ ಮಾಡಿದ.

**कल्मष** (ಕಲ್ಮಷ) ಪು. ಸಂ. ಪಾಪ, ದುರ್ಮಾರ್ಗ.

**कल्याण** (ಕಲ್ಯಾಣ) ನ. ಸಂ. ಒಳಿತು, ಉತ್ಕರ್ಷ.

**कल्ला** (ಕಲ್ಲಾ) ಪು. ಫಾ. ಕಲ್ಲೀ ಮೀಸೆ, ಕೆನ್ನೆ ಗೂದಲು, ಗಲ್ಲದ ಮೇಲಿನ ಮೀಸೆ. ೨. ಹುಂಜದ ತುರಾಯಿ. ೩. ಒದರಾಟ, ಚೀರಾಟ ಕೋಲಾಹಲ.

**कल्लोळ** (ಕಲ್ಲೋಳ್) ಪು. ಒದರಾಟ, ಚೀರಾಟ, ಕೋಲಾಹಲ.

**हल–** (ಹಲ–) ಪು. ಕೋಲಾಹಲ.

**कल्हई–कल्हे** (ಕಲ್ಹಈ; ಕಲ್ಹೇ) ಸ್ತ್ರೀ. ೨. ಕಲಾಯಿ.

**–करणे** (–ಕರಣೇ) ಕ್ರಿ. ಸ. ಕಲಾಯಿ ಮಾಡು. ೨. (ಲಾ.) ಹೊರಗಿನ, ಮೋಸದ, ರೂಪ.

**–गार** (–ಗಾರ್) ಪು. ಕಲಾಯಿ ಮಾಡುವವ.

**कव** (ಕವ್) ಸ್ತ್ರೀ. ಆಲಿಂಗನ. ೨. ಸಾಮರ್ಥ್ಯ, ಹತೋಟಿ.

**कवकवीत** (ಕವಕವೀತ್) ವಿ. ಸಪ್ಪನ್ನ, ರುಚಿಯಾಗಿರದ.

**कवच** (ಕವಚ) ನ. ಸಂ. ಸಿಪ್ಪೆ, ಚಿಪ್ಪು. ೨. ಸಂರಕ್ಷಣೆಯ ಸಾಧನ, ಕವಚಕುಂಡಲ. ೩. ಮಂತ್ರಿಸಿದ ರಕ್ಷಣೆ, ತಾಯಿತ. ೪. ಸಂರಕ್ಷಣೆಯ ಸಲುವಾಗಿ ಅನ್ನುವ ಮಂತ್ರ.

**कवटी** (ಕವಟೀ) ಸ್ತ್ರೀ. ಚಿಪ್ಪು ಪರಟಿ, ತಲೆಬುರುಡೆ. ೨. **कव** ನೋ.

**कवठ** (ಕವಠ್) ನ. ಬೆಳವಲಕಾಯಿ-ಹಣ್ಣು.

**कवठी** (ಕವಠೀ) ಸ್ತ್ರೀ. ತಲೆಬುರುಡೆ.

**कवठेल** (ಕವಠೇಲ್) ನ. ಬೆಳವಲಕಾಯಿಯ ಸತ್ವ. ಅರ್ಕ.

**कवड** (ಕವಡ್) ಸ್ತ್ರೀ. ಒಡೆದ ತೆಂಗಿನಕಾಯಿಯ ಒಂದು ಹೋಳಿಕೆ, ಭಾಗ.

**कवडसा** (ಕವಡಸಾ) ಪು. ಹಂಚಿನೊಳಗಿಂದ ಅಥವಾ ಬೇರೆ ಛಿದ್ರದಿಂದ ಬರುವ ಬಿಸಿಲಿನ ಅಥವಾ ಪ್ರಕಾಶದ ಕಿರಣ ಗುಚ್ಛ ೨. ನೆಳಲು.

**कवडा** (ಕವಡಾ) ಪು. ಕವುಜುಗ ಹಕ್ಕಿ, ತಿತ್ತಿರ ಪಕ್ಷಿ, ೨. ದೊಡ್ಡ ಕವಡಿ. ೩. ಕಣ್ಣಿನಲ್ಲಿಯ ಹೂವು, ಬಿಂದು.

**मन–** (ಮನ್–) ಬೇರೆಯವರ ಮನಸ್ಸಿನಲ್ಲಿಯ ಮಾತನ್ನು ಊಹಿಸುವವ.

**कवडी** (ಕವಡೀ) ಸ್ತ್ರೀ. ಕವಡಿ. ೨. ಕರಣೆ. ೩. ಅತ್ಯಲ್ಪ ಬೆಲೆಯ ನಾಣ್ಯ.

**–किमतीचा** (–ಕಿಮತೀಚಾ) ವಿ. ತುಚ್ಛ, ಹೀನ.

**–चुंबक** (–ಚುಂಬಕ್) ವಿ. ಜಿಪುಣ, ಜೀನ.

**कवडयाऊद** (ಕವಡ್ಯಾಊದ್) ಪು. ಲೋಭಾನದ ಒಂದು ಬಗೆ.

**कवडयाघोणस** (ಕವಡ್ಯಾಘೋಣಸ್) ಪು. ಚಿತ್ರಾಕೃತಿಯ ಒಂದು ಹಾವು.

**कवण** (ಕವಣ) ಸರ್ವ. (ಹಳೆಯ ಮರಾಠಿ) ಯಾರು

**कवति–तु–क** (ಕವತಿ–ತು–ಕ್) ನ. **कौतुक** ನೋ.

**कवंदी** (ಕವಂದೀ) ಸ್ತ್ರೀ. ಒಣಗಿದ ವ್ರಣ, ಪದರು, ಆವರಣ.

**कवन** (ಕವನ್) ನ. ಸಂ. ಕಾವ್ಯ, ಕವಿತೆ, ಹಾಡು.
**कवळ** (ಕವಳ್) ಪು. ತುತ್ತು, ಗ್ರಾಸ. ೨. ನ. ಟೊಂಗೆ, ಕಡ್ಡಿ, ೩. ಸ್ತ್ರೀ. ಆಲಿಂಗನ. ೪. ಕಾಮಲಾ, ಕಾಮಿಣಿ, ೫. ಹಿಂಬಡ, ಹಿಂಗಾಲು.
**कवळटा–ठा** (ಕವಟಾ–ಠಾ) ನ. ೨ ಪು. ಸಾಗುವಳಿ ಮಾಡದ ಹೊಲದ ಭಾಗ. (ಹುಲ್ಲು ಕತ್ತಿಯ ಸಲುವಾಗಿ ಇಟ್ಟ).
**कवळणे** (ಕವಳಣೇ) ಕ್ರಿ. ಸ. ದಬ್ಬಿಕೊ, ಅಪ್ಪಿಕೊ, ಆಲಿಂಗಿಸು. ೨ ರಾಶಿಹಾಕು, ಸಂಗ್ರಹಿಸು. ೩ ನುಂಗು. ೪ ವ್ಯಾಪಿಸು. ೫ ತಿಳಿದುಕೊ.
**कवळा** (ಕವಳಾ) ವಿ. **कोवळा** ನೋ.
**कवळासणे** (ಕವಳಾಸಣೆ) ಕ್ರಿ.ಸ. ಮೂರ್ತಿಯ ವಿಸರ್ಜನಮಾಡು.
**कवळी** (ಕವಳೀ) ಸ್ತ್ರೀ. ಹತೋಟಿಯಲ್ಲಿರುವ ಭಾಗ. ೨ ದಂತಪಂಕ್ತಿ. ೩ ಕೃತ್ರಿಮ ಹಲ್ಲುಗಳು.
**कवा** (ಕವಾ) ಪು. ಅರ. (ಕಾಫಿಯ) ಕಷಾಯ.
**कवाईत–द** (ಕವಾಯಿತ್) ಸ್ತ್ರೀ. ಅರ. ಸಂಚಲನ, ಕವಾಯತಿ, ಡ್ರಿಲ್.
**कवाड** (ಕವಾಡ್) ನ. ಬಾಗಿಲ.
**कवाडी** (ಕವಾಡೀ) ಸ್ತ್ರೀ. ಕಿರುಬಾಗಿಲ.
**कवाणी** (ಕವಾಣೀ) ಸ್ತ್ರೀ. ಮರುಕುಟ್ಟಿಗ ಪಕ್ಷಿ.
**कवाता** (ಕವಾತಾ) ಪು. ತೆಂಗಿನ ಸಸಿ.
**कवायत** (ಕವಾಯತ್) ಸ್ತ್ರೀ. **कवाइत** ನೋ.
**कवाल** (ಕವಾಲ್) ಪು. ಅರ. ಕವಾಲೀ ಪದಗಳನ್ನು ಹಾಡುವ ಗಾಯಕ.
**कवाली** (ಕವಾಲೀ) ಸ್ತ್ರೀ. ಅರ. ಕವಾಲೀ ಪದ, ಸೂಫೀ ಪದ್ಧತಿಯ ಭಜನೆ, ಗಾಯನ.
**कवि** (ಕವಿ) ಪು. ಸಂ. ಕವಿ. ೨. ಶುಕ್ರಾಚಾರ್ಯ.
**कविजा** (ಕವಿಜಾ) ಪು. ಮುಗಿಚುವ ಕೈ.
**कविता** (ಕವಿತಾ) ಸ್ತ್ರೀ. ಸಂ. ಕವಿತೆ, ಪದ.
**कवित्व** (ಕವಿತ್ವ) ನ. ಸಂ. ಕವಿಯ ಕೌಶಲ್ಯ, ಕಾವ್ಯಸಾರ.
**कव्य** (ಕವ್ಯ) ನ. ಸಂ. ಪಿತೃಗಳಿಗೆ ಅರ್ಪಿಸಿದ ಅನ್ನ (ಪಿಂಡ). ೨. ಶುಕ್ರಾಚಾರ್ಯ.
**कशा** (ಕಶಾ) ಸ್ತ್ರೀ. ಬಾರಕೋಲು.
**कशाचा** (ಕಶಾಚಾ) ಪು. ಸರ್ವ. ಏತರ, ಯಾತರ.
**कशाला** (ಕಶಾಲಾ) ಪು. ಸರ್ವ. ಏತಕ್ಕೆ, ಯಾತಕ್ಕೆ.
**कशास** (ಕಶಸ್) ಪು. ಸ. ಏತಕ್ಕೆ, ಏಕೆ.
**कशिदा** / **कशीदा** (ಕಶಿ–ಶೀ–ದಾ) ಪು. ಫಾ. ಕಸೂತಿ.
**कशी** (ಕಶೀ) ಸ್ತ್ರೀ. ಬರಿದಾದ ತೆನೆ.
**कश्मल** (ಕಶ್ಮಲ್) ನ. ಹೊಲಸು, ಕೊಳೆ, ದೋಷ, ಕಳಂಕ.
**कषाय** (ಕಷಾಯ) ಪು. ಸಂ. ಕುದಿಸಿದ ವನಸ್ಪತಿ, ಕಷಾಯ.
**कष्ट** (ಕಷ್ಟ) ನ. ಪು. ಬಹು ವ. ಪರಿಶ್ರಮ. ೨. ದಣಿವು.
**काबाड–** (ಕಾಬಾಡ್–) ಪು. ದುಡಿತ, ಪರಿಶ್ರಮ, ಆಯಾಸ.
**–णे** (–ಣೇ) ಕ್ರಿ.ಸ. ಕಷ್ಟಪಡು, ಪರಿಶ್ರಮಮಾಡು.
**–साध्य** (–ಸಾಧ್ಯ) ವಿ. ಕಷ್ಟದ (ಕೆಲಸ.
**कष्टार्जित** (ಕಷ್ಟಾರ್ಜಿತ) ವಿ. ದುಡಿದು ಸಂಪಾದಿಸಿದ.
**कष्टाळू** (ಕಷ್ಟಾಳೂ) ವಿ. ಶ್ರಮಪಡುವವ, ದುಡಿಯುವವ.
**कष्टी** (ಕಷ್ಟೀ) ವಿ.ಸ. ಖಿನ್ನ, ಖತಿಗೊಂಡ, ದುಃಖಿತ.
**कस** (ಕಸ್) ಪು. ಸಾಮರ್ಥ್ಯ, ಶಕ್ತಿ, ಸ್ವಾರಸ್ಯ, ಸಾರ, ಗುಣ. ೨ ಪರೀಕ್ಷೆ, ಹೋಲಿಕೆ, ಸತ್ವ ಪರೀಕ್ಷೆ. ೩ ನರಗಳಲ್ಲಿಯ ನೋವು.
**–कस** (–ಕಸ್) ಸ್ತ್ರೀ. ಮೈಮುರಿಯುವಿಕೆ, ಜ್ವರ ಬರುವ ಲಕ್ಷಣ.
**कसचा** (ಕಸಚಾ) ಪು.ಸ. ಎಂತಹ, ಎಲ್ಲಿಯ, (ಏನೂ ಇಲ್ಲ ಎಂಬರ್ಥ).
**कसणी** (ಕಸಣೀ) ಸ್ತ್ರೀ. ಒತ್ತಿಕಟ್ಟುವ ದಾರ, ಹಗ್ಗ.
**कसणे** (ಕಸಣೇ) ಕ್ರಿ. ಸ. ಹರಗು, ಬೇಸಾಯಮಾಡು, ೨ ಎಳೆ, ಒತ್ತು. ೩ ಬಿಗಿ.
ಕ್ರಿ. ಅ. ತರಬೇತಿಹೊಂದು, ಅಭ್ಯಾಸವಿರು.
**कसदार** (ಕಸದಾರ್) ವಿ. ಸತ್ವಯುಕ್ತ, ಶಕ್ತಿಯುಳ್ಳ.
**कसपट** (ಕಸಪಟ್) ನ. ತುಚ್ಛ, ಹೇಯವಾದ ಸಂಗತಿ.
**– मानणे** (–ಮಾನಣೇ) ಕ್ರಿ. ಸ. ತುಚ್ಛತೆ ವ್ಯಕ್ತಪಡಿಸು.
**कसब** (ಕಸಬ್) ಪು. ಅರ. ಕೌಶಲ್ಯ, ಚತುರತೆ, ಕಲೆ.
**कसबा** (ಕಸಬಾ) ಪು. ಅರ. ದೊಡ್ಡ ಊರು. ೨ ಊರಿನ ಮುಖ್ಯ ವಸತಿ.
**कसबी** (ಕಸಬೀ) ವಿ. ಅರ. ಕುಶಲ, ಧೂರ್ತ, ಖದೀಮ.
**कसबीण** (ಕಸಬೀಣ್) ಸ್ತ್ರೀ. ವೇಶ್ಯೆ, ಸೂಳೆ.

**कसम** (ಕಸಮ್) ಸ್ತ್ರೀ. ಅರ. ಆಣೆ, ಪ್ರತಿಜ್ಞೆ, ಪಣ.
**कसमसाट** (ಕಸಮಸಾಟ್) ಪು. ಪರಿಶ್ರಮ, ಒದ್ದಾಟ.
**कसमळ** (ಕಸಮಳ್) ಸ್ತ್ರೀ. **कश्मल** ನೋ.
**कसर** (ಕಸರ್) ಸ್ತ್ರೀ. ಅರ. ಕುಂದು, ಕೊರತೆ, ದೋಷ. ೨ ಜ್ವರ. ೩ ಹೆಚ್ಚಿನ ಮಾಲು, ಗಳಿಕೆ.
**काट–** (ಕಾಟ್–) ಸ್ತ್ರೀ. ಉಳಿತಾಯ, ಮಿತವ್ಯಯ.
**–काढणे** (– ಕಾಡಣೇ) ಕ್ರಿ. ಸ. ಹಾನಿಯನ್ನು ತುಂಬಿಕೊ.
**–लागणे** (–ಲಾಗಣೇ) ಕ್ರಿ. ಅ. ಗೆದ್ದಲು ಹತ್ತು, ಕೆಟ್ಟು ಹೋಗು.
**कसरणे** (ಕಸರಣೇ) ಕ್ರಿ. ಅ. ಕಡಿಮೆಯಾಗು (ಜ್ವರ) ಇಳಿ.
**कसरत** (ಕಸರತ್) ಸ್ತ್ರೀ. ಅರ. ವ್ಯಾಯಾಮ, ಅದ್ಭುತ
**कसरा** (ಕಸರಾ) ವಿ. ಚಿತ್ರವಿಚಿತ್ರವಾದ.
**कसलत** (ಕಸಲತ್) ಸ್ತ್ರೀ. ಅರ. ಪೀಡೆ, ಸಂಕಟ, ಪರಿಶ್ರಮ.
**–सोसणे** (– ಸೋಸಣೇ) ಕ್ರಿ. ಸ. ಕಷ್ಟಪಡು.
**कसला** (ಕಸಲಾ) ಸರ್ವ. ಪ್ರ. ಎಂತಹ, ಎಂಥ.
**कसवट** (ಕಸ್‌ವಟ್) ಸ್ತ್ರೀ, ಒರೆಗಲ್ಲು, ನಿಕಷ.
**कसवंटी** (ಕಸವಂಟೀ) ಸ್ತ್ರೀ. ಒಂದು ಬಗೆಯ ಉಪ್ಪಿನ ಕಾಯಿ.
**कसा** (ಕಸಾ) ಕ್ರಿ. ವಿ. ಪ್ರ. ಹೇಗೆ? ಯಾವ ಬಗೆಯಿಂದ? ೨. ಪು. ಜಗ್ಗುವದಾರದ ಹಮ್ಮಿಣಿ, ಚೀಲ.
**कसाई** (ಕಸಾಈ) ಪು. ಅರ. (ಕಸ್ಸಾಬ್) ಕಟುಕ, ವಧಿಕ, (ಲಾ) ಕಠೋರ, ದುಷ್ಟ.
**कसाकसा** (ಕಸಾಕಸಾ) ಕ್ರಿ. ವಿ. ಹೇಗೆ ಹೇಗೆ.
**कसाकाय** (ಕಸಾಕಾಯ್) ಕ್ರಿ. ವಿ. ಪ್ರ. ಹೇಗೆ, ಎಂತು, ಎನಿತು, (ಆಶ್ಚರ್ಯ ವ್ಯಕ್ತಪಡಿಸುವುದರ ಸಲುವಾಗಿ.)
**कसातरी** (ಕಸಾತರೀ) ಕ್ರಿ. ವಿ. ಹೇಗಾದರೂ ಮಾಡಿ.
**कसाब** (ಕಸಾಬ್) ಪು. ಅರ. ಕಟುಕ.
**कसाबी** (ಕಸಾಬೀ) ಸ್ತ್ರೀ. ಕಟುಕನ ವ್ಯವಸಾಯ.
**कसालत** (ಕಸಾಲತ್) ಸ್ತ್ರೀ. ಅರ. ತೊಂದರೆ, ಪೀಡೆ, ಸಂಕಟ. ೨. ಪರಿಶ್ರಮ.
**कसालती** (ಕಸಾಲತೀ) ವಿ. ಅರ. ದುಡಿಯುವವ. ೨. ಕಷ್ಟ ಸಾಧ್ಯ.
**कसाला** (ಕಸಾಲಾ) ಪು. ಅರ. ಆಯಾಸ, ಕಷ್ಟ. ೨. ಜುಲುಮೆ; ಅತ್ಯಾಚಾರ.
**कसीदा** (ಕಸೀದಾ) ಪು. ಫಾ. ಕಸೂತಿ.
**कसूं** (ಕಸೂ) ನ. ಹೊಲದ ಸುತ್ತಲು ಕಟ್ಟಿದ ಒಡ್ಡು.
**कसूर** (ಕಸೂರ್) ಸ್ತ್ರೀ. ಅರ. ದೋಷ, ತಪ್ಪು, ದುರ್ಲಕ್ಷ್ಯ.
**कसे** (ಕಸೇ) ಕ್ರಿ. ವಿ. ಹೇಗೆ.
**कसेसे** (ಕಸೇಸೇ) ಕ್ರಿ. ವಿ. ಅಸ್ವಸ್ಥಗೊಳಿಸುವ,
**–वाटणे** (–ವಾಟಣೇ) ಕ್ರಿ. ಅ. ಮೈಯಲ್ಲಿ ನೆಟ್ಟಗಿರದಿರು. ೨. ಸೇರದಿರು.
**कसोटी** (ಕಸೋಟೀ) ಸ್ತ್ರೀ. ಹಿಂ. ಸತ್ವಪರೀಕ್ಷೆ. ೨. ಒರೆಗಲ್ಲು, ನಿಕಷ. ೩. ಸಾಕ್ಷಿ.
೪. **–सामना** (–ಸಾಮನಾ) (ಕ್ರಿಕೆಟ್) ಟೆಸ್ಟ್ ಮ್ಯಾಚ್.
**कसोशी** (ಕಸೋಶೀ) ಸ್ತ್ರೀ. ದಕ್ಷತೆ.
**–ने** (–ನೇ) ಕ್ರಿ. ವಿ. ಶ್ರಮಬಟ್ಟು.
**कस्त** (ಕಸ್ತ್) ಸ್ತ್ರೀ. ಕಷ್ಟ, ಪರಿಶ್ರಮ.
**कस्तर** (ಕಸ್ತರ್) ಪು. ನ. ಬೆಸುಗೆ.
**–करणे** (–ಕರಣೇ) ಕ್ರಿ. ಸ. ಬೆಸುಗೆ ಹಚ್ಚು, ಬೆಸೆ.
**कस्तरणे** (ಕಸ್ತರಣೇ) ಕ್ರಿ. ಸ. ಬೆಸುಗೆಮಾಡು.
**कस्ता** (ಕಸ್ತಾ) ಪು. ಫಾ. (ಖಸ್ತಾ) ಕಷ್ಟ, ಪರಿಶ್ರಮ, ಆಯಾಸ. ೨. ವಿ. ಒಲಿದ, ಬಿಗಿದ, ಜಗ್ಗಿದ.
**कस्तानी** (ಕಸ್ತಾನೀ) ವಿ. ದಟ್ಟಕೆಂಗೆಂದು ಬಣ್ಣದ.
**कस्ती** (ಕಸ್ತೀ) ವಿ. ಪರಿಶ್ರಮ ಮಾಡುವವ.
**कस्तु–स्तूरी** (ಕಸ್ತು–ಸ್ತೂ–ರೀ) ಸ್ತ್ರೀ. ಕಸ್ತೂರಿ.
**कहर** (ಕಹರ) ಪು. ಅರ. ರೋಷ, ಸಿಟ್ಟು, ಪೀಡೆ, ಸಂಕಟ.
**कहरी–ऱ्या** (ಕಹರೀ) (ಕಹರಾ) ಪು. ಭಯಂಕರ, ರೋಷವುಳ್ಳ, ಕ್ರೂರ.
**कहाणी** (ಕಹಾಣೀ) ಸ್ತ್ರೀ. (ವ್ರತ) ಕಥೆ, ಕತೆ, (ಲಾ) ದುಃಖದ ಕತೆ. ೨. ಜೋಳದ ಮೇಲಿನ ಒಂದುರೋಗ.
**कहात** (ಕಹಾತ್–) ಸ್ತ್ರೀ. ಅರ. ಬರಗಾಲ, ಕೇಡು, ಭಯಂಕರ-ಪ್ರಸಂಗ.
**कहार** (ಕಹಾರ್) ಪು. ಹಿಂ. ಪಲ್ಲಕ್ಕಿಯನ್ನು ಎತ್ತುವವ, ಭೋಯಿ.
**कहि** (ಕಹಿ) **कधी** ನೋ.
**कह्या** (ಕಹ್ಯಾ) ಪು. ಹಿಂ. ಆಜ್ಞೆ, ಹತೋಟಿ, ವಶ.
**कह्यात** (ಕಹ್ಯಾತ್) ಕ್ರಿ. ವಿ. ವಶದಲ್ಲಿ.
**कळ** (ಕಳ್) ಸ್ತ್ರೀ. ದುಃಖ, ನೋವು, ಪೀಡೆ. ೨. ಸಣ್ಣ ಪುಟ್ಟ ಯಂತ್ರ. ೩. ಕುಶಲತೆ, ಕಲೆ. ೪. ಜಗಳ (ಕಲಿ)
**–लावणे** (–ಲಾವಣೇ) ಕ್ರಿ. ಸ. ಜಗಳಹಚ್ಚು.
**कळक** (ಕಳಕ್) ಪು. ದೊಡ್ಡ ಗಳ.
**कळंक** (ಕಳಂಕ್) ಪು. ಕಳಂಕ.

**कळकट** (ಕಳ್‌ಕಟ್) ವಿ. ಕೊಳೆಯಾದ, ಹೊಲಸಾದ, ಹೇಸಿಗೆ ಬರುವ, ನಾರುವ.

**कळकटणे** (ಕಳಕಟಣೇ) ಕ್ರಿ.ಅ. ಹೊಲಸಾಗು,ಮಾಸು.

**कळकटा** (ಕಟಕಟಾ) ವಿ.ಜಗಳಗಂಟ, ಪುಂಡ.

**कळकणे** (ಕಳಕಣೇ) ಕ್ರಿ. ಅ. ಕಿಲುಬು, ಕಹಿಯಾಗು.

**कळकळ** (ಕಳಕಳ್) ಸ್ತ್ರೀ. ಉತ್ಸಾಹ, ನಿಜವಾದ ಭಾವನೆ, ಪ್ರಾಮಾಣಿಕವಾದ ಇಚ್ಛೆ.

**कळकळणे** (ಕಳಕಳಣೇ) ಕ್ರಿ. ಅ. ದುಃಖವಾಗು, ಸಂಕಟವಾಗು, ಕಸಿವಿಸಿಯಾಗು.

**कळकी** (ಕಳಕೀ) ಸ್ತ್ರೀ. ದೊಡ್ಡ ಗಳ.

**कळंकी** (ಕಳಂಕೀ) ಸ್ತ್ರೀ. **कलंकी** ನೋ.

**—नारद** (—ನಾರದ) ಪು. ಜಗಳ ಹಚ್ಚುವವ.

**कळकुटा** (ಕುಳಕುಟಾ) ವಿ. ಹೊಲಸಾದ, ಮಾಸಿದ.

**कळकुंबा** (ಕುಳಕುಂಬಾ) ವಿ. ಆಳಿತ್ತರ.

**कळक्याऊस** (ಕಳಕ್ಯಾಊಸ್) ಪು. ಒಂದು ಬಗೆಯ ಕಬ್ಬು.

**कळखंड** (ಕಳಖಂಡ್) ಪು. ಅತಿ ಸಣ್ಣ ಚೂರು.

**कळगा** (ಕಳಗಾ) ಪು. ಬಳೆಯ ಚೂರು, ತುಂಡು.

**कळंजणे** (ಕಳಂಜಣೇ) ಕ್ರಿ.ಅ.ದಣಿ,ಬಾಡು,ವ್ಯಥೆಪಡು.

**कळण** (ಕಳಣ್) ನ. (ಹೆಸರು, ಕಡಲೆ ಮುಂತಾದವು ಗಳ) ಎಸರು, ಕಟ್ಟು, ಸಾರು.

**कळणा** (ಕಳಣಾ) ಪು. ಬೇಳೆಯ ಪುಡಿ, ಚೂರು.

**—कोंडा** (—ಕೋಂಡಾ) ಪು. ಬಡವರ ಆಹಾರ.

**कळणे** (ಕಳಣೇ) ಕ್ರಿ. ಸ. ಅ. ತಿಳಿ, ಅರ್ಥವಾಗು.

**कळत** (ಕಳತ್) ಕ್ರಿ. ವಿ. ತಿಳಿದು, ಬೇಕೆಂದು.

**—नकळत** (—ನಕಳತ್) ಕ್ರಿ. ವಿ. ದುರ್ಲಕ್ಷದಿಂದ, ಅರಿಯದೆ.

**कळत्र** (ಕಳತ್ರ) ನ. ಸಂ. ಹೆಂಡತಿ.

**कळप** (ಕಳಪ್) ಪು. ಹಿಂಡು, ಸಮೂಹ.

**कळप—पा** (ಕಳಪ್—ಪಾ) ಪು. ಪದರು, ಚಿಪ್ಪೆ.

**कळपणे** (ಕಳಪಣೇ) ಕ್ರಿ. ಅ.ಸುಲಿದು ಹೋಗು, ಬಿದ್ದು ಹೋಗು.

**कळंब** (ಕಳಂಬ್) ಪು. ಒಂದು ಸಸ್ಯ.

**कळंबी** (ಕಳಂಬೀ)ಸ್ತ್ರೀ. ದೋಣಿಯಹಿಂಭಾಗದಆಧಾರ.

**कळंबे** (ಕಳಂಬೇ) ನ. ನಾಯಿಯ ಚತ್ತರಿಗೆ, ನಾಯಿ ಕೊಡೆ, ಅಣವೆ.

**कळंभा** (ಕಳಂಭಾ) ಪು. ಜಗಳ.

**कळभांड** (ಕಳಭಾಂಡ್) ವಿ. ಜಗಳಗಂಟ.

**कळमण** (ಕಳಮಣ್) ಸ್ತ್ರೀ. ಅಸ್ವಸ್ಥತೆ, ಕಸವಿಸಿ.

**कळलाव्या** (ಕಳಲಾವ್ಯಾ) ವಿ. ಜಗಳ ಹಚ್ಚುವವ.

**कळवंडणे** (ಕಳವಂಡಣೇ) ಕ್ರಿ. ಸ. ಜಗಿದಾಡಿ ವ್ಯಾಜ್ಯ ಮಾಡು.

**कळवंडा** (ಕಳವಂಡಾ) ಪು. ಜಗಳ.

**कळवंतीण** (ಕಳವಂತೀಣ್) ಸ್ತ್ರೀ. ವೇಶ್ಯೆ, ಸೂಳೆ, ನರ್ತಕಿ. ೨. ಪಾತರಗಿತ್ತಿ.

**कळवळा** (ಕಳವಳಾ) ಪು. ಕರುಣೆ, ದಯೆ, ದಾಕ್ಷಿಣ್ಯ.

**कळवळणे** (ಕಳವಳಣೇ) ಕ್ರಿ. ಅ. ಕೇಡೆನಿಸು, ದಯೆ ಯುಂಟಾಗು.

**कळवा** (ಕಳವಾ) ಪು.ಕುದುರೆಯ ಹಿಂದಿನ, ಮುಂದಿನ ಮುಂದಿನ ಕಾಲಿಗೆ ಕಟ್ಟಿದ ಹಗ್ಗ. ೨. (ಲಾ.) ತಡೆ, ಅಡ್ಡಿ.

**कळवाकळव** (ಕಳವಾಕಳವ್) ಸ್ತ್ರೀ. ಎಲ್ಲರಿಗೂ ತಿಳಿಸು ವಿಕೆ, ಪರಸ್ಪರ ಸೂಚನೆ.

**कळविणे** (ಕಳವಿಣೇ) ಕ್ರಿ. ಅ. ತಿಳಿಸು.

**कळवी** (ಕಳವೀ) ಸ್ತ್ರೀ. ಖೊಟ್ಟಿ ನಾಣ್ಯ, ಖೋಟಾ, ಕೃತಕ, ದುಡ್ಡು.

**कळशी** (ಕಳಶೀ) ಸ್ತ್ರೀ. ಬಿಂದಿಗೆ, ಸಣ್ಣಕೊಡ.

**कळस** (ಕಳಸ್) ಪು. ಕಳಸ, ಗುಮಟ. ೨. (ಲಾ.) ಅತಿರೇಕ, ಅತ್ಯುಚ್ಚ ತರಗತಿ.

**कळसणे** (ಕಳಸಣೇ) ಕ್ರಿ. ಸ. ಗೂಢಚಾರನ ಕೆಲಸ ಮಾಡು, ಕಣ್ಣಿಡು, ರಹಸ್ಯ ತಿಳಿದುಕೊ.

**कळसवणी** (ಕಳಸವಣೀ) ಸ್ತ್ರೀ. (ಮದುವೆಯಲ್ಲಿ) ಮದುಮಗನ ನೀರಿನ ಕೊಡವನ್ನು ವಧುವಿನ ಮೇಲೆ ಸುರಿಯುವ ಆಟ.

**कळसा** (ಕಳಸಾ) ಪು. ನಲ್ಲಿಯುಳ್ಳ ಗಡಿಗೆ,ನೀರಿನ ಪಾತ್ರೆ.

**कळसूत्र** (ಕಳಸೂತ್ರ) ನ. ಗೊಂಬೆಯಾಟದಲ್ಲಿಯ ಅಗ ಲಾಡಿಸುವ ದಾರ.

**कळसूत्राची बाहुली** (ಕಳಸೂತ್ರಾಚೀ ಬಾಹುಲೀ) ಸ್ತ್ರೀ. (ಗೊಂಬೆಯಾಟದಲ್ಲಿಯ) ಗೊಂಬೆ. ೨. ಪರಾ ವಲಂಬಿಯಾದ ಮನುಷ್ಯ.

**कळसूत्री** (ಕಳಸೂತ್ರೀ) ವಿ. ಗೊಂಬೆಯಾಟದ,ಕೃತಕ.

**— बाहुली** (— ಬಾಹುಲೀ) ಸ್ತ್ರೀ. ಆಟದಲ್ಲಿಯ ಗೊಂಬೆ, ಬೇರೆಯವರು ಹೇಳಿದಂತೆ ವರ್ತಿಸುವವ.

**कळा** (ಕಳಾ) ಸ್ತ್ರೀ. ಮುಖಮುದ್ರೆ, ಕಾಂತಿ, ಶೋಭೆ, ೨ ಕಲಾಕೌಶಲ್ಯ.

**— निधी** (— ನಿಧೀ) ವಿ. ವಿದ್ವಾಂಸ.

**— कळा करण** (—ಕಳಾಕರಣೇ) ಕ್ರಿ. ಅ. ಅಂಗಲಾಚಿ ಬೇಡಿಕೊಳ್ಳು.

कळांतर (ಕಳಾಂತರ್) ನ. ಬಡ್ಡಿ.

कळावंत (ಕಳಾವಂತ) ಪು. ಕುಶಲ, ಕಲಾವಿದ.

कळावंतीण (ಕಳಾವಂತೀಣ್) ಸ್ತ್ರೀ. कलवंतीण ನೋ.

कळावा (ಕಳಾವಾ) ಪು. कळबा ನೋ.

कळावी (ಕಳಾವೀ) ಸ್ತ್ರೀ. ಒಂದು ಬಗೆಯ ಬಳೆ.

कळिकाळ (ಕಳಿಕಾಳ್) ಪು. ಕಲಿಯುಗ, ಕೆಟ್ಟಕಾಲ.

कळी (ಕಳೀ) ಸ್ತ್ರೀ. ಮೊಗ್ಗೆ. ೨ ತಾಂಬೂಲ,ಬೀಡಾ. ೩ ಸುಣ್ಣದ ಹರಳು.

–उमलणे (–ಉಮಲಣೇ) ಕ್ರಿ. ಅ. ಅರಳು. ೨ ಹಿಗ್ಗು. (ಲಾ) ಸಂತೋಷವನ್ನು ವ್ಯಕ್ತಪಡಿಸು, ಮಾತನಾಡಹತ್ತು.

कळेवर (ಕಳೆವರ್) ನ. कलेवर ನೋ.

कक्ष (ಕಕ್ಷ) ಪು. ಸಂ. ಕಂಕುಳ, ಬಗಲು, ಬದಿ.

कक्षा (ಕಕ್ಷಾ) ಸ್ತ್ರೀ. ಸಂ. ತರಗತಿ, ಕಣ, ಕಕ್ಷೆ.

का (ಕಾ) ಕ್ರಿ. ವಿ. ಪು. ಏಕೆ, ಅಹುದಲ್ಲವೋ? ೨. ಅಥವಾ. ಉದಾ: (हे का ते ? ಹೇ ಕಾ ತೇ ? ) ಇದೋ ಅದೋ ?

काईल (ಕಾಈಲ್) ಸ್ತ್ರೀ. ಕಬ್ಬಿನ ಹಾಲನ್ನು ಕುದಿಸುವ ದೊಡ್ಡ ಕೊಪ್ಪರಿಗೆ. ೨. ವಿ. ಸೋಮಾರಿ, ನಿರುತ್ತರ, ಗತಿಯಿಲ್ಲವದ.

काऊ (ಕಾಊ) ಪು. (ಮಕ್ಕಳ ಮಾತಿನಲ್ಲಿ) ಕಾಗೆ.

काउळा (ಕಾಉಳಾ) ಪು. कावळा ನೋಂ.

–काठी (–ಕಾಠೀ) ಸ್ತ್ರೀ. ದಂಟು, ಕಟ್ಟಿಗೆ, ಕಡ್ಡಿ.

काक (ಕಾಕ್) ಪು. ಸಂ. ಕಾಗೆ.

–तालीय न्याय (–ತಾಲೀಯ ನ್ಯಾಯ) ಪು. ಅಕಸ್ಮಾತ್ತಾಗಿ ಒದಗುವ ಸಂಗತಿ. (ನಿಯಮಕ್ಕನುಸರಿಸಿಯಲ್ಲ).

–दृष्टी (–ದೃಷ್ಟೀ) ಸ್ತ್ರೀ. ತೀಕ್ಷ್ಣ ನೋಟ. ೨.(ಲಾ) ಆಸೆ, ದುರಾಸೆ.

–पद (ಪದ್) ನ. (ಬಿಟ್ಟ ಮತ್ತು ಮೇಲೆ ಬರೆದ) ಶಬ್ದವನ್ನು ಸೂಚಿಸುವ ಚಿನ್ಹ.

–पक्ष (–ಪಕ್ಷ) ಪು. ಮಕ್ಕಳ ಜುಲುಪೆ, ಎರಡೂ ಕಿವಿಗಳ ಹತ್ತಿರದ ಕೂದಲುಗಳು.

–पिंड (–ಪಿಂಡ) ಉತ್ತರ ಕ್ರಿಯೆಯಲ್ಲಿ ಕಾಗೆಗೆ ಹಾಕಿದ ಪಿಂಡ.

–बली (–ಬಲೀ) ಪು. ವೈಶ್ವದೇವದಲ್ಲಿಯ ಕಾಗೆಗೆ ಹಾಕಿದ ನೈವೇದ್ಯ.

–वंध्या (–ವಂಧ್ಯಾ) ಸ್ತ್ರೀ. ಒಂದು ಮಗು ಹುಟ್ಟಿದ ಮೇಲೆ ಬಂಜೆಯಾಗುವ ಹೆಂಗಸು.

–स्नान (–ಸ್ನಾನ್) ನ. ಲಗುಬಗೆಯಿಂದ ಕಡಿಮೆ ನೀರಿನಿಂದ ಮಾಡಿದ ಜಳಕ.

–स्वर (–ಸ್ವರ್) ಪು. ಕರ್ಕಶ ದನಿ.

काकड–डा (ಕಾಕಡ್–ಡಾ)– ಸ್ತ್ರೀ. ಪು. ಹತ್ತಿಯಿಂದ ಹೊಸೆದ ಬತ್ತಿ, ಬೆಳಗಿನ ಆರತಿಯ ಬತ್ತಿ.

काकडारती (ಕಾಕಡಾರತೀ) ಗುಡಿಯಲ್ಲಿಯ ಮೊಟ್ಟಮೊದಲಿನ ಆರತಿ.

काकडणे (ಕಾಕಡಣೇ) ಕ್ರಿ. ಅ. ಚಳಿಯಿಂದ ನಡುಗು.

काकडशिंगी (ಕಾಕಡ್ ಶಿಂಗೀ) ಸ್ತ್ರೀ. ಒಂದು ಔಷಧಿ.

काकडी (ಕಾಕಡೀ) ಸ್ತ್ರೀ ಎಳೆ ಸೌತೇಕಾಯಿ.

काकरी (ಕಾಕರೀ) ಸ್ತ್ರೀ. ನೇಗಿಲದ ಒಂದು ಸುತ್ತು.

काकलक (ಕಾಕಲಕ್) ಕತ್ತಿನಲ್ಲಿ ಕಾಣುವ ಮೂಳೆ, ಎಲುಬು, ಕಂಠನಾಲ, ಗೋಮಾಳೆ.

काकवी (ಕಾಕವೀ) ಸ್ತ್ರೀ. ಕ. ಕಾಕಂಬಿ,

काकळूत (ಕಾಕಳೂತ್) ಸ್ತ್ರೀ. ಕ. ಕಕ್ಕುಲತೆ, ದಯೆ,

काका (ಕಾಕಾ) ಪು. ಚಿಗಪ್ಪ, ದೊಡ್ಡಪ್ಪ, ಕಕ್ಕ.

काकाकव्वा–कुव्वा (ಕಾಕಾಕವ್ವಾ–ಕುವ್ವಾ) ಪು. ಹಿಂ. ಗಿಳಿಯಂತಹ ಒಂದು ಮಾತಾಡುವ ಪಕ್ಷಿ, ಕೊಕಾಟೋ.

काकी (ಕಾಕೀ) ಸ್ತ್ರೀ. ಚಿಕ್ಕಮ್ಮ, ದೊಡ್ಡಮ್ಮ.

काकु–कू (ಕಾಕು–ಕೂ) ಸ್ತ್ರೀ. ಚಿಕ್ಕಮ್ಮ ದೊಡ್ಡಮ್ಮ. ೨. ಅನುಮಾನ, ಹಿಂಜರಿಯುವಿಕೆ.

–करणे (–ಕರಣೇ) ಕ್ರಿ. ಅ. ಅನುಮಾನಿಸು.

काकुळत (ಕಾಕುಳತ್) ಸ್ತ್ರೀ. ಕ. काकळूत ನೋ.

काख–खा (ಕಾಖ್–ಖಾ) ಸ್ತ್ರೀ. ಪು. ಬಗಲು,ಕಂಕುಳ.

काखा वर करणे ( ಕಾಖಾ ವರ್ ಕರಣೇ ) ಕ್ರಿ. ಅ. ದಿವಾಳಿತೆಗೆ.

काखा वाजविणे (ಕಾಖಾ ವಾಜವಿಣೇ) ಕ್ರಿ. ಅ. ಆನಂದಪಡು, ಹಿಗ್ಗು.

काखेस मारणे (ಕಾಖೇಸ್ ಮ್ಹಾರಣೇ) ಕ್ರಿ. ಸ. ಕೈವಶಪಡಿಸಿಕೊ. ೨ ಅಪಹರಿಸು.

काखेत कळसा गावाला वळसा (ಕಾಖೇತ್ ಕಳಸಾ ಗಾವಾಲಾ ವಳಸಾ) ನಾಣ್ಣುಡಿ. (ಕಂಕುಳದಲ್ಲಿಯ ಕೊಡವನ್ನು ಮರೆತು ಊರೆಲ್ಲ ಹುಡುಕಾಡುವಿಕೆ) ಲಾ. ಮರಗೂಳಿತನ.

**काखाटी** ) ( ಕಾಖಾಟೀ )
**काखोटी** ) ( ಕಾಖೋಟೀ ) ಸ್ತ್ರೀ. **काखा** ನೋ.

**काग** (ಕಾಗ್) ಪು. **काक** ನೋ.

**कागडा** (ಕಾಗಡಾ) ಪು. **काक** ನೋ.

**कागद** (ಕಾಗದ್) ಪು. ಅರ. ಪತ್ರ, ಚೀಲ, ಕಾಗದ, ಹಾಳೆ.

**–पत्र** (– ಪತ್ರ) ನ. ಬಹು. ದಸ್ತಾವೇಜು, ಪತ್ರ ವ್ಯವಹಾರ.

**कागदी** (ಕಾಗದೀ) ವಿ. ಅರ. ಕಾಗದದಿಂದ ಮಾಡಿದ. ಬರೆಹದಲ್ಲಿಯ.

**– घोडे नाचवणे** (– ಘೋಡೇ ನಾಚವಣೇ) ಕ್ರಿ. ಸ. ಕೇವಲ ಪತ್ರೋತ್ತರದಲ್ಲಿ ಅಥವಾ ಫೈಲಿನಲ್ಲಿ ಬರೆದಿಡು (ಪ್ರತ್ಯಕ್ಷ ಕೃತಿ ಏನೂ ಇಲ್ಲದೆ). ೨ ನಯವಾದ, ತಿಳುವಾದ.

**– बदाम** (ಬದಾಮ್) ತಿಳುವಾದ ಬದಾಮಿ.

**– लिंबू** (– ಲಿಂಬೂ) ತೆಳ್ಳಗಾದ ತೊಗಟೆಯ ನಿಂಬೆಕಾಯಿ.

**कागदोपत्री** (ಕಾಗದೋಪತ್ರೀ) ಕ್ರಿ. ವಿ. ಬರೆಹದಲ್ಲಿ, ಪತ್ರವ್ಯವಹಾರದಲ್ಲಿ, ದಸ್ತಾವೇಜುಗಳಲ್ಲಿ.

**कागाळखोर** (ಕಾಗಾಳ್‌ಖೋರ್) ಪು. ದೂರು ಹೇಳುವವ, ಅಳುಮೋರೆಯುವ, ತಕರಾರು ಮಾಡುವವ.

**काच** (ಕಾಚ್) ಪು. ಹರಳು, ಕನ್ನಡಿ, ಕಾಚು, ಗಾಜು.

**– बिंदु** (– ಬಿಂದು) ಪು. ಬಿರುಸಾದ ಕಣ್ಣೊಳಗಿನ ಬಿಂದು, ಪೊರೆ. ೨ ಗುಂಡಿಯು ಕಾಜಿ, ತೂತು.

**काचकिरडा** (ಕಾಚಕಿರಡಾ) ವಿ. ಚನ್ನಾಗಿ ಬೇಯದ. ೨ ಹಂಜಕ್ಕಿಯ (ಅನ್ನ.)

**काचकुली** (ಕಾಚಕುಲಿ) ಸ್ತ್ರೀ. ಕಟ್ಟಾಡಿಸುವಿಕೆ.

**काचकूच** (ಕಾಚಕೂಚ) ಸ್ತ್ರೀ. ಅನುಮಾನ.

**काचणी** (ಕಾಚಣೀ) ಸ್ತ್ರೀ. ತಿಕ್ಕಾಟ, ಘರ್ಷಣೆ.

**काचफोड** (ಕಾಚಫೋಡ್) ಪು. ಹಸಿವ್ರಣ, ಗಾಯ, ಹುಣ್ಣು.

**काचरी** (ಕಾಚರೀ) ಸ್ತ್ರೀ. ಹೋಳುಮಾಡಿದ ಪಲ್ಯ.

**काचळ** (ಕಾಚಳ್) ಸ್ತ್ರೀ. ಕಲ್ಲುಬಂಡೆ ತುಂಬಿದ ಪ್ರದೇಶ ಭೂಭಾಗ.

**काचा-च्या** (ಕಾಚಾ–ಚ್ಯಾ) ಪು. ಕಚ್ಚೆ, ಕಚ್ಛ.

**काचाकुची** (ಕಾಚಾಕುಚೀ) ಸ್ತ್ರೀ. **काचाकूच** ನೋ.

**काचार** (ಕಾಚಾರ್) ಪು. ಬಳೆಗಾರ. **कासार** ನೋ.

**काचावणे** (ಕಾಚಾವಣೇ) ಕಿ. ಅ. ಧೈರ್ಯಗೆಡು, ಅಂಜು.

**काचोळा** (ಕಾಚೋಳಾ) ಪು. ತವಡು, ತೌಡು.

**काचोळे** (ಕಾಚೋಳೇ) ನ. ಗಂಧ, ಅಕ್ಷತೆ, ಮುಂ. ಗಳನ್ನು ಒಟ್ಟಿಗೆ ಇಡುವ ಪಾತ್ರೆ.

**काज** (ಕಾಜ್) ಸ್ತ್ರೀ. ಪೋ. ಗುಂಡಿಯ, ಬಟನ್ನಿನ ತೂತು, ಕಾಜಿ.

**काचोळी** (ಕಾಚೋಳೀ) ಸ್ತ್ರೀ. ರವಕೆ, ಕುಪ್ಪಸ, ಮೊಲೆಕಟ್ಟು.

**–पंथी** (–ಪಂಥೀ) ವಿ. ಸ್ತ್ರೈಣ, ವ್ಯಭಿಚಾರಿ.

**काजगी** (ಕಾಜಗೀ) ತು. ಸ್ತ್ರೀ. ಒಂದುಬಗೆಯುಲಗಾಮು.

**काजरा** (ಕಾಜರಾ) ಪು. ಒಂದು ಬಗೆಯ ಗಿಡ.

**काजवा** (ಕಾಜವಾ) ಪು. ಮಿಂಚಿನ ಹುಳು, ಮಿಣುಕು ಹುಳು.

**काजवे चमकणे** (ಕಾಜವೇ ಚಮಕಣೇ) ಕ್ರಿ. ಅ. ಅಂಜಿಕೆಯುಂಟಾಗು, ಮೂರ್ಛೆ, ಬವಳಿಬರು.

**काजव्याचा उजेड** (– ಕಾಜವ್ಯಾಚಾ ಉಜೇಡ್) ಮಿಂಚಿನ ಹುಳುವಿನ ಪ್ರಕಾಶ, ಲಾ. ಅತ್ಯಲ್ಪ, ಸದ್ಗುಣ, ಲಾಭ.

**काजव्याचा उजेड ढुंगणाभोवता** (ಕಾಜವ್ಯಾಚಾ ಉಜೇಡ ಡುಂಗಣಾ ಭೋವತಾ) ನಾಣ್ಣುಡಿ. ಮಿಂಚಿನ ಹುಳದ ಪ್ರಕಾಶದಿಂದ ಅದರ ಪೃಷ್ಠದ ಹೊರತಾಗಿ ಏನೂ ಕಾಣಲಾರದು. (ಲಾ) ಅಲ್ಪಗುಣಗಳೊಡನೆ ಮಹತ್ಕಾರ್ಯ ಮಾಡುವುದು ಅಸಾಧ್ಯ.

**काजळ** (ಕಾಜಳ್) ಪು. ಕಾಡಿಗೆ.

**–कुंकू** (–ಕುಂಕೂ) ನ. ಸ್ತ್ರೀಯರ ಅಲಂಕರಣ ಶೃಂಗಾರ.

**–काजळाची कोठडी** (– ಕಾಜಳಾಚೀ ಕೋಠಡೀ) ಸ್ತ್ರೀ. ಕೋಶಾಗಾರ, ಟ್ರೇಜರಿ, ಚಿನಿವಾಲಕಟ್ಟೆ.

**काजळी** (ಕಾಜಳೀ) ಸ್ತ್ರೀ. ಬತ್ತಿಯ ಸುಟ್ಟು ಉಳಿದ ಭಾಗ. ೨ ಕಾಡಿಗೆ.

**–कागद** (–ಕಾಗದ) ಪು. ಕಾರ್ಬನ್ ಕಾಗದ.

**काजाऊ** (ಕಾಜಾಊ) ವಿ. ಉಪಯುಕ್ತವಾದ.

**काजाण** (ಕಾಜಾಣೂ) ನ. ಕಟ್ಟಡದಲ್ಲಿಯ ಕಟ್ಟಿಗೆಯ ಸಾಮಾನು.

**काजारी** (ಕಾಜಾರೀ) ಪು. ತು. **काचार** ನೋ.

**काजी** (ಕಾಜೀ) ಪು. ಅರ. ಮುಸಲ್ಮಾನ ನ್ಯಾಯಾಧೀಶ.

**काज़** (ಕಾಜೂ) ಪು. ಪೋ. ಗೋಡಂಬಿ.

**काट** (ಕಾಟ್) ನ. ಕ. ಕುದಿಸಿದ ಸಾರು ಕಟ್ಟು (ಬೇಳೆ ಮುಂ.ಗಳ) ಕಟ್ಟು, ತಿಳಿನೀರು. ೨ ಪು. ೨ಕೊಯಿದ ಟೊಂಗೆಗಳು.೩ ಇಸ್ಪೇಟು ಹಂಚುವಾಗ ಮೊದಲು ತೆಗೆದು ಇಟ್ಟ ಒಂದು ಭಾಗ. ೩ ಸ್ತ್ರೀ. ತಿದ್ದುಪಡಿ, ಕಾಟುಹಾಕುವಿಕೆ.

**–छाट** (–ಛಾಟ್) ಸ್ತ್ರೀ. ತಿದ್ದುಪಡಿ.

**काटक** (ಕಾಟಕ್) ವಿ. ಕ. ಕಷ್ಟಸಹಿಸಬಲ್ಲವ, ದಪ್ಪ ನಾಗಿರದಿದ್ದರೂ ಶಕ್ತಿಶಾಲಿ. ೨ ಪು. ಕಲ್ಲುಕಟುಗ ಜಾತಿಯವ.

**काटकढी** (ಕಾಟ್‌ಕಢೀ) ಸ್ತ್ರೀ. ಕ. ಕಟ್ಟಿನ ಸಾರು.

**काटकसर** (ಕಾಟಕಸರ್) ಸ್ತ್ರೀ. ಮಿತವ್ಯಯ, ಉಳಿತಾಯ.

**काटकसरी –र्‍या** (ಕಾಟ್‌ಕಸರೀ –ರ್‍ಯಾ) ವಿ. ಮಿತವ್ಯಯ ಮಾಡುವವ.

**आटकाई** (ಕಾಟಕಾಯೀ) ಸ್ತ್ರೀ. ಕಾಟಕ ಜಾತಿಯ ಪುಂಡರ ಹಾವಳಿ.

**काटकी** (ಕಾಟಕೀ) ಸ್ತ್ರೀ. ಕಟ್ಟಿಗೆಯ ತುಂಡು, ಚೂರು.

**काटकुळा** (ಕಾಟಕುಳಾ) ವಿ. ಬಡಕಾದ, ಸೀರಾದ.

**काटकोण** (ಕಾಟಕೋಣ್) ಪು. ೯೦ ಅಂಶದ ಕೋನ.

**काटकोन्या** (ಕಾಟಕೋನ್ಯಾ) ಪು. ಉಪ್ಪಾರನ ಕೋನಪಟ್ಟಿ.

**काटगोल** (ಕಾಟಗೋಲ್) ಪು. ದುಂಡನ್ನ ಬೊಡ್ಡೆ, ಕಟ್ಟಿಗೆ, ತೀರು, ತೊಲೆ.

**काटणी** (ಕಾಟಣೀ) ಸ್ತ್ರೀ. ಪೈರು ಕೊಯ್ಯುವಿಕೆ, ಪಯರು ಕೊಯ್ಲುಮಾಡು, ಕಟಾಯಿಸು.

**काटणे** (ಕಾಟಣೀ) ಸ್ತ್ರೀ. ಕಡಿಮೆಮಾಡು, ಕತ್ತರಿಸು ಕಡಿ. ೨ (ದುಃಖದಿಂದ) ಕಾಲಕ್ಷೇಪಮಾಡು, ಬಾಳುವೆ ಮಾಡು.

**काटबाज** (ಕಾಟ್‌ಬಾಜ್) ವಿ. ಧೂರ್ತ, ಖದೀಮ.

**काटमोगरी** (ಕಾಟಮೋಗರೀ) ಸ್ತ್ರೀ. ಮಲ್ಲಿಗೆಯ ಒಂದು ಜಾತಿ.

**काटवण** (ಕಾಟವಣ್) ನ. ಕ. ಗಿಡಗಂಟಿಯುಳ್ಳ ಕಾಡು.

**काटवणी** (ಕಾಟವಣೀ) ಸ್ತ್ರೀ. ಕ. ಕುದಿಸಿದ ಸತ್ವ, ಸಾರು, ಕಟ್ಟು.

**काटवल** (ಕಾಟ್‌ವಲ್) ನ. ಹುಲ್ಲು.

**काटवळ** (ಕಾಟವಳ್) ನ. ಕಡಿದ ಟೊಂಗೆಗಳು.

**काटविकरा** (ಕಾಟವಿಕರಾ) ಪು. ಅತಿಶಯ ಬೆಲೆಏರಿಕೆ.

**काटशह** (ಕಾಟ್‌ಶಹ್) (ಚದುರಂಗದಲ್ಲಿ) ರಾಜನಿಗೆ ಎರಡು ಬದಿಯಿಂದ ಕೊಟ್ಟ ಆಹ್ವಾನ, ಶಹ. ೨. (ಲಾ) ಅತಿಶಯ ಬಿಕ್ಕಟ್ಟಿನ ಪ್ರಸಂಗ.

**काटा** (ಕಾಟಾ) ಪು. ಮುಳ್ಳು. ೨. ರೋಮಾಂಚ. ೩. ಚೇಳಿನಕೊಂಡಿ,

**–काढणे** (–ಕಾಢಣೀ) ಕ್ರಿ. ಸ. ಬೇಡಾದವನನ್ನು ನಾಶಗೊಳಿಸುವಿಕೆ.

**काटचाने–काढणे** / ಕಾಟ್ಯಾನೆ–ಕಾಢಣೀ } (ಕ್ರಿ. ಸ. ಲಾ) ವೈರಿಯಿಂದ ವೈರಿಯನ್ನು ನಾಶ ಗೊಳಿಸುವಿಕೆ.

**काटाकाट** (ಕಾಟಾಕಾಟ್) ಸ್ತ್ರೀ. ತಿದ್ದುಪಡಿ. ೨. ಉಳಿತಾಯ. ೩. ಸಂಹಾರ.

**काटांजन** (ಕಾಟಾಂಜನ್) ನ. ಕಟಾಂಜನ.

**काटी** (ಕಾಟೀ) ಸ್ತ್ರೀ. ಮುಳ್ಳುಗಂಟಿ.

**काटुक** (ಕಾಟುಕ್) ನ. ಕಟ್ಟಿಗೆಯ ತುಂಡು, ಚೂರು.

**काटोस्री** (ಕಾಟೋಸ್ರೀ) ಸ್ತ್ರೀ. ನೇಕಾರನ ಉಪಕರಣ.

**काठ** (ಕಾಠ್) ಪು. ೧. ಅಂಚು, ಕೊನೆ, ದಂಡೆ.

**–कर** (–ಕರ್) ಪು. ಮೆರವಣಿಗೆಯಲ್ಲಿ ರುಮಾಲದ ಕೋಲನ್ನು ಹೊರುವವ.

**काठंगा** (ಕಾಠಂಗಾ) ವಿ. ಕೃಶನಾದ, ಸೀರಾದ, ಬಡಕಾದ.

**काठण** (ಕಾಠಣ್) ನ. ಬೇಳೆಯಕಾಳುಗಳು.

**काठवट** (ಕಾಠವಟ್) ಸ್ತ್ರೀ. ಕಟ್ಟಿಗೆಯ ಪರಾತ.

**काठळी** (ಕಾಠಳೀ) ಸ್ತ್ರೀ. ಒಂದು ಕೀಳು ಬಗೆಯಧಾನ್ಯ.

**काठार** (ಕಾಠಾರ್) ನ. ದಂಡೆ.

**काठिन्य** (ಕ್ಯಾಠಿನ್ಯ) ನ. ಸಂ. ಬಿರುಸುತನ, ಗಟ್ಟಿತನ. ೨. (ಲಾ) ಕಠೋರತೆ.

**काठी** (ಕಾಠೀ) ಸ್ತ್ರೀ. ಕೋಲು. ೨. ಸ್ತಂಭ. ೩. ೩. ಶರೀರದ ಆಕಾರ.

**काठेवाड** (ಕಾಠೇವಾಡ್) ನ. ಸೌರಾಷ್ಟ್ರ.

**काठेवाडी** (ಕಾಠೇವಾಡೀ) ವಿ. ಸೌರಾಷ್ಟ್ರದವ, (ಲಾ) ಬಡಕಾದವ, ಪುಕ್ಕ.

**काड** (ಕಾಡ್) ಸ್ತ್ರೀ. ಸಿಪ್ಪೆ, ಹೊಟ್ಟು, ಉಯ್ಯೆ.

**काडकन्** (ಕಾಡಕನ್) ಕ್ರಿ. ವಿ. ರಭಸದಿಂದ, ಒಮ್ಮೆಲೆ.

**काडमुंगी** (ಕಾಡ್‌ಮುಂಗೀ) ಸ್ತ್ರೀ. ಕ+ಮು ಕಾಡು ಇರುವೆ.

**काडाकूट** (ಕಾಡಾಕೂಟ್) ಸ್ತ್ರೀ. ಕಷ್ಟ, ಸಾಧ್ಯಸಂಗತಿ.

**काडी** (ಕಾಡೀ) ಸ್ತ್ರೀ. ಕ. ಕಡ್ಡಿ. ೨. ನಿಷ್ಪ್ರಯೋಜನ ವಸ್ತು, ಕಸಕಡ್ಡಿ.

**काडीमोड** (ಕಾಡೀಮೋಡ್) ಸ್ತ್ರೀ. ವಿವಾಹ ವಿಚ್ಛೇದ. ೨. ಲಾ. ಸಂಬಂಧ, ಪರಿತ್ಯಾಗ.

**काडू** (ಕಾಡೂ) ಪು. ಮಣ್ಣುಹುಳು, ಎರೆಹುಳು.

**काडुक** (ಕಾಡುಕ್) ನ. ಸಣ್ಣಕೋಲು.

**काडेखार** (ಕಾಡೇಖಾರ್) ಪು. ಹಪ್ಪಳಕಾರ.

**काडेचिराइत** (ಕಾಡೇಚಿರಾಯಿತ್) ನ. ಚಿರಾಯಿತ ಕಡ್ಡಿ.

**काढ** (ಕಾಢ್) ಪು. ಬೊಡ್ಡೆ.

**काढघाल** (ಕಾಢ್‌ಘಾಲ್) ಸ್ತ್ರೀ. ನಿರರ್ಥಕ ಉದ್ಯೋಗ.

**काढणी** (ಕಾಢಣೀ) ಸ್ತ್ರೀ. ಕೊಯ್ಲುಮಾಡುವಿಕೆ, ೨. ಹಗ್ಗ.

**काढणे** (ಕಾಢಣೇ) ಕ್ರಿ. ಸ. ತೆಗೆ, ತೆರೆ, ಎಳೆ, ತೆಗೆದು ಹಾಕು. ಹೊರಗೆಡವು.

**कज्जा–** (ಕಜ್ಜಾ–) ಕ್ರಿ. ಸ. ಜಗಳಹಚ್ಚು.

**काम–** (ಕಾಮ್–) ಕ್ರಿ. ಸ. ಕೆಲಸವನ್ನು ನಿರ್ಮಿಸು, ನಿಮಿತ್ತತೆಗೆ.

**गळा–** (ಗಳಾ–) ಕ್ರಿ. ಅ. ದೊಡ್ಡದನಿಯಿಂದ ಅಳು.

**दुखणे–** (ದುಖಣೇ–) ಬೇನೆ ಸಹಿಸು. ೨. ಆರೈಕೆ ಮಾಡು.

**दैव–नशीब–** (ದೈವ – ನಶೀಬ್ – ) ಉತ್ಕರ್ಷ ಹೊಂದು.

**काढवणी** (ಕಾಢವಣೀ) ಸ್ತ್ರೀ. ಬಾವಿಯಿಂದ ಸೇದಿ ತೆಗೆದ ನೀರು.

**काढा** (ಕಾಢಾ) ಪು. ಕಷಾಯ, ಕಾಢೆ.

**–काढी** (–ಕಾಢೀ) ಸ್ತ್ರೀ. ಲಗಬಗೆಯಿಂದ ತೆಗೆದು ಹಾಕಿದ ಬಟ್ಟೆ.

**काढीव** (ಕಾಢಿವ್) ವಿ. ಕಸೂತಿತೆಗೆದ. ೨. ತಯಾರಿಸಿದ.

**काणकूण** (ಕಾಣಕೂಣ್) ಸ್ತ್ರೀ. ಗುಜುಗುಜು ಮಾತು.

**काणा** (ಕಾಣಾ) ವಿ. ಒಂದು ಕಣ್ಣುಳ್ಳವ, ಒಕ್ಕಣ್ಣ.

**काणीट** (ಕಾಣೀಟ್) ನ. ಒಂದು ಹುಳ.

**काणीपेठ** (ಕಾಣೀಪೇಠ್) ಸ್ತ್ರೀ. ಭರವಸೆ ಮಾಡಲಾಗದ ಪೇಟೆ, ಅನಿಶ್ಚಿತ ವ್ಯವಹಾರ.

**कात** (ಕಾತ್) ಪು. ಕಾಚು, ವೀಳ್ಯದ ಮಸಾಲೆ ೨. ಹಾವಿನ ಪರಿ, ಪೊರೆ.

**कातकुली** (ಕಾತಕುಲೀ) ಸ್ತ್ರೀ. ಕಟ್ಟಾಡಿಸುವಿಕೆ.

**कातडी** (ಕಾತಡೀ) ಸ್ತ್ರೀ. ಚರ್ಮ, ತೊಗಲು. ೨. ವಿ. ಚರ್ಮದ, ತೊಗಲಿನ.

**कातडे** (ಕಾತಡೇ) ನ. ತೊಗಲು, ಚರ್ಮ.

**डोळचावर–ओढणे** ( –ಡೋಳ್ಚ್ಯಾವರ್–ಓಢಣೇ ) ಕ್ರಿ. ಅ. ನೋಡಿಯೂ ನೋಡದಂತೆ ನಟಿಸು, ದುಷ್ಕೃತ್ಯವನ್ನು ಮಾಡಗೊಡು.

**कातण** (ಕಾತಣ್) ನ. ಕರಚೀಕಾಯಿಯ ಕಣಕವನ್ನು ಕೊರೆದ ಮೇಲೆ ಉಳಿದ ಕಣಕ.

**कातणे** (ಕಾತಣೇ) ಕ್ರಿ. ಸ. ನೂಲು, ನೂಲುತೆಗೆ.

**कातर** (ಕಾತರ್) ವಿ. ಸಂ. ಅಂಜರಿಯುವವ, ಅನುಮಾನಿಸುವ. ೨. ಸ್ತ್ರೀ. ಕೂದಲಿಗೆ ಆಗುವ ವಿಕಾರ. ೩. ಸ್ತ್ರೀ. ದೊಡ್ಡ ಕತ್ತರಿ.

**कातरण** (ಕಾತರಣ್) ನ. ವರ್ತಮಾನ ಪತ್ರದಿಂದ ಕತ್ತರಿಸಿಕೊಂಡ ಭಾಗ.

**कातरणे** (ಕಾತರಣೇ) ಕ್ರಿ. ಸ. ಕತ್ತರಿಸು.

**कातरता** (ಕಾತರತಾ) ಸ್ತ್ರೀ. ಸಂ. ಅಂಜಿಕೆ, ಸಂಕೋಚ, ಅನುಮಾನ.

**कातरा** (ಕಾತರಾ) ಪು. ಕತ್ತರಿಸಿದ ಚೂರುಗಳು.

**कातरी** (ಕಾತರೀ) ಸ್ತ್ರೀ. ಕತ್ತರಿ.

**–लावणे** (–ಲಾವಣೇ) ಕ್ರಿ. ಸ. ಕಡಿಮೆಮಾಡು, ಉಳಿಸು, ಉಳಿತಾಯ ಮಾಡು.

**कातवणे** (ಕಾತವಣೇ) ಕ್ರಿ. ಸ. ಸಿಟ್ಟುಮಾಡು.

**कातळ** (ಕಾತಳ್) ಪು. ನ. ಕಲ್ಲಿನ ನೆಲ.

**कातळा** (ಕಾತಳಾ) ಪು. ತೆಳ್ಳನ್ನ ಕಲ್ಲು.

**कातारी** (ಕಾತಾರೀ) ಪು. ಚರಕಿ ಯಂತ್ರದಲ್ಲಿ ಕೆಲಸ ಮಾಡುವವನು.

**कातावणे** (ಕಾತಾವಣೇ) ಕ್ರಿ. ಸ. ಸಿಟ್ಟಗೆದ್ದುಮಾತಾಡು.

**कातिया** (ಕಾತಿಯಾ) ಪು. ಭಂಡಾರಿ ಜಾತಿಯವನು ಉಪಯೋಗಿಸುವ ಕುಡಗೋಲು.

**कातीण** (ಕಾತೀಣ್) ಸ್ತ್ರೀ. ಜೇಡದಂಥ ಒಂದು ಹುಳು.

**कातीव** (ಕಾತೀವ್) ವಿ. ಚರಕಿಯಂತ್ರದಲ್ಲಿತಯಾರಿಸಿದ.

**कात्यायन** (ಕಾತ್ಯಾಯನ್) ನ. ಸಂಹಾರ, ನಷ್ಟಗೊಳಿಸುವಿಕೆ.

**कात्री** (ಕಾತ್ರೀ) ಸ್ತ್ರೀ. **कातरी** ನೋ.

**काथ** (ಕಾಥ್) ಪು. **कात** ನೋ.

**काथवट** (ಕಾಥವಟ್) ಸ್ತ್ರೀ. ಕಟ್ಟಿಗೆಯ ಹರಿವಾಣ.

**काथा–थ्या** (ಕಾಥಾ–ಥ್ಯಾ) ಪು. ತೆಂಗಿನ ನಾರು. ೨. ಹಗ್ಗ.

**–कूट** (–ಕೂಟ್) ಸ್ತ್ರೀ. ನಿರರ್ಥಕ ಚರ್ಚೆ.

**–मेथा** ( –ಮೇಥಾ ) ಪು. ವೃದ್ಧ ಸ್ತ್ರೀಯರಿಗೆ ಗೊತ್ತಿದ್ದ ಔಷಧಗಳು.

**कादंबरी** (ಕಾದಂಬರೀ) ಸ್ತ್ರೀ. ದೊಡ್ಡ ಕತೆ, ಕಾದಂಬರಿ, ನಾವೆಲ್.

**कान** (ಕಾನ್) ಪು. ಕಿವಿ. ೨. ಹಿಡಿಕೆ.

**–उघडणे** (–ಉಘಡಣೇ) ಕ್ರಿ. ಸ. ಬುದ್ಧಿಹೇಳು.

**–धरणे** (–ಧರಣೇ) ಕ್ರಿ. ಸ. ಶಿಕ್ಷೆಮಾಡು.

**–किटणे** (–ಕಿಟಣೇ) ಕ್ರಿ. ಅ. (ಕೇಳಿ) ಬೇಸರುಬರು.

**कानास खडा लावणे** ( ಕಾನಾಸ್ ಖಡಾ ಲಾವಣೆ ) ಕ್ರಿ. ಅ. ಪಶ್ಚಾತ್ತಾಪ ಮಾಡು, ಬುದ್ಧಿಗಲಿ.

**कानावर हात ठेवणे.** (ಕಾನಾವರ್ ಹಾತ್ ಠೇವಣೇ) ಕ್ರಿ. ಸ. 'ನನಗೆ ಗೊತ್ತಿಲ್ಲ'ವೆಂದು ಹೇಳು.

**सोनाराने–टोचणे** ( ಸೋನಾರಾನೇ ಕಾನ್‌ಟೋಚಣೆ) ಕ್ರಿ.ಸ. (ಅಧಿಕಾರವಿದ್ದವನು) ಆಜ್ಞೆಮಾಡು.

**–देणे** (–ದೇಣೇ) ಕಿ. ಸ. ಲಕ್ಷಕೊಡು.

**–थंड होणे** (–ಥಂಡ್ ಹೋಣೇ) ಕ್ರಿ. ಅ. (ಕೇಳಿ) ಸಮಾಧಾನ ಪಡು.

**–टवकारणे** (–ಟಕರಾವಣೇ) ಕ್ರಿ. ಸ. ಲಕ್ಷಗೊಟ್ಟು ಕೇಳು.

**–फुंकणे** (–ಫುಂಕಣೇ) ಕ್ರಿ. ಸ. ಕಿವಿಯಲ್ಲಿ ಮಂತ್ರ ಹೇಳು. (ವ್ಯಂಗ) ಚಾಡಿಹೇಳು.

**–फुटणे** (–ಫುಟಣೇ) ಕಿ.ಅ. ಕೇಳದಿರು, ಕಿವುಡನಾಗು.

**–लांब होणे** (–ಲಾಂಬ್ ಹೋಣೇ) ಕ್ರಿ.ವಿ. ಮೂರ್ಖನಾಗು.

**–भरणे** (–ಭರಣೇ) ಕ್ರಿ. ಅ. ಜಗಳವನ್ನು ಪ್ರೇರೇಪಿಸು, ಚಿತಾವಣಿಮಾಡು.

**–गोष्ट** (–ಗೋಷ್ಟ) ಸ್ತ್ರೀ. ಮಂತ್ರೋಪದೇಶ.

**–पिसा** (–ಪಿಸಾ) ವಿ. ತಟ್ಟನೆ ವಿಶ್ವಾಸವನ್ನು ಇಡುವವ.

**–फाटा** (–ಫಾಟಾ) ಪು. ಸನ್ಯಾಸಿ, ಗೋಸ್ವಾಮಿ.

**एकदा कानफाटा तो कानफाटाच** ( ಏಕದಾ ಕಾನ ಫಾಟಾ ತೋಕಾನ್ ಫಾಟಾಚ್) ಒಮ್ಮೆ ಕೆಟ್ಟ ಹೆಸರು ಬಿದ್ದರೆ ಕಡೆತನಕ ಉಳಿಯುವದು.

**कानाचा तिखट** (ಕಾನಾಚಾ ತಿಖಟ್) ವಿ. ಚನ್ನಾಗಿ ಕೇಳ ಬಲ್ಲವನು.

**कानाचा हलका** (ಕಾನಾಚಾ ಹಲಕಾ) ವಿ. ಬೇರೆಯವರು-ಹೇಳಿದ ಮಾತು, ಚಾಡಿ ಮುಂ. ಗಳನ್ನು ನಂಬುವವ.

**कानफट** (ಕಾನಫಟ್) ಸ್ತ್ರೀ. ಕೆನ್ನೆ, ಗಂಡಸ್ಥಲ.

**कानशील** (ಕಾನಶೀಲ್) ಸ್ತ್ರೀ. **कानफट** ನೋ.

**कानगी** (ಕಾನಗೀ) ಸ್ತ್ರೀ. ಕಿವಿಮಾತು. ೨. ವ್ಯಂಕಟೇಶ ದೇವರಿಗೆ ಕೊಡುವ ವಾರ್ಷಿಕ ಹಣ.

**कानट** (ಕಾನಟ್) ಸ್ತ್ರೀ. ಒಂದು(ಸಮುದ್ರದಲ್ಲಿಯ) ಮೀನು.

**कानडा** (ಕಾನಡಾ) ಪು. (ಸಂಗೀತದಲ್ಲಿಯ) ಕಾನಡಾರಾಗ. ೨. ಕರ್ನಾಟಕಸ್ಥ. ೩. ವಿ. ತಿಳಿಯಲಿಕ್ಕೆ ಕಠಿಣವಾದ.

**कानडी** (ಕಾನಡೀ) ಸ್ತ್ರೀ. ಕನ್ನಡ ಭಾಷೆ, ವಿ. ಕನ್ನಡದಲ್ಲಿಯ, ಕರ್ನಾಟಕದ.

**कानडे** (ಕಾನಡೇ) ಪು. ಬಹು. ವ. ರಾಟಿಯಲ್ಲಿ ನೂಲು ಸುತ್ತಲಿಕ್ಕೆ ಇಟ್ಟ ಭಾಗ. ೨. (ಲಾ) ತಿಳಿಯದ ಭಾಷೆ.

**कानन** (ಕಾನನ) ನ. ಸಂ. ಅರಣ್ಯ, ಅಡವಿ.

**कानपुणे** (ಕಾನಪುಣೇ) ಕ್ರಿ. ಅ. ಕುಂದು, ಕಡಿಮೆಯಾಗು.

**कानपा** (ಕಾನಪಾ) ಪು. ಕಟ್ಟಿಗೆಯ ಪಾತ್ರೆಗಳ ಹಿಡಿಕೆ.

**कानवडणे** (ಕಾನವಡಣೇ) ಕ್ರಿ. ಅ. ಒಂದು ಮಗ್ಗಲಿಗೆ ಒರಗು, ಮಲಗು.

**कानवडा** (ಕಾನವಡಾ) ವಿ. ಒಂದುಮಗ್ಗಲಿಗೆಒರಗಿದವ.

**कानवला** (ಕಾನವಲಾ) ಪು.೧. ಕಡಬು, ಕರಚಿಕಾಯಿ ೨. ಒಂದು ಗಿಡ.

**कानवसा** (ಕಾನವಸಾ) ಪು. ಕಿವಿಗೊಟ್ಟು ಕೇಳುವಿಕೆ.

**–घेणे** (–ಘೇಣೇ) ಕ್ರಿ. ಸ. ಕಿವಿಗೊಟ್ಟು ಕೇಳು.

**कानवळ** (ಕಾನವಳ್) ಪು. ಗದ್ದಕಟ್ಟು, ಮಂಗನಬಾವು.

**कानस** (ಕಾನಸ್) ಸ್ತ್ರೀ. ಸಣ್ಣ ಅರ. ೨. ಸಣ್ಣ ಕರಗಸ.

**कानसणी** (ಕಾನಸಣೀ) ಸ್ತ್ರೀ. ಆರದಿಂದ ದುರಸ್ತು ಮಾಡುವಿಕೆ.

**कानसणे** (ಕಾನಸಣೇ) ಕ್ರಿ. ಸ. ಅರ–ಕರಗಸದಿಂದ ನುಣುಪು ಮಾಡು.

**काना** (ಕಾನಾ) ಪು. ತೋಫಿನ(ಮದ್ದು ತುಂಬುವ) ಭಾಗ. ೨. 'ಆ' ಕಾರದ ಚಿನ್ಹ ಉದಾ : (**क–का**)

**–मात्रा** (–ಮಾತ್ರಾ) ಪು. ಬಹು ವ. ಶುದ್ಧ ಲೇಖನದ ಚಿನ್ಹಗಳು. ೩. ಮೂಲೆ.

**–कोपरा** (–ಕೋಪರಾ) ವಿ. ಮೂಲೆ, ಅಪರಿಚಿತಸ್ಥಳ.

**कानाकोपऱ्यात** (ಕಾನಾ ಕೋಪರ್ಯಾತ್) ಕ್ರಿ. ವಿ. ಎಲ್ಲ ಕಡೆಗೆ, ಎಲ್ಲೆಲ್ಲಿಯೂ.

**कानाडोळा** (ಕಾನಾಡೋಳಾ) ಪು. ದುರ್ಲಕ್ಷ.

**–करणे** (–ಕರಣೇ) ಕ್ರಿ. ಸ. ದುರ್ಲಕ್ಷಮಾಡು.

**कानीन** (ಕಾನೀನ್) ಪು. ಸ್ತ್ರೀ. ಮದುವೆಯಾಗದವಳ ಸಂತತಿ.

**कानू** (ಕಾನೂ) ಪು. ಅರ. ಕಾನೂನು, ನಿಯಮ.

**कायदे–** (ಕಾಯದೇ–) ವಿಧಿ ನಿಯಮಗಳು.

**कानोकानी** (ಕಾನೋಕಾನೀ) ಕ್ರಿ. ವಿ- ಒಬ್ಬರಿಗೆ ಹೇಳಿದುದನ್ನು ಬೇರೋಬ್ಬರಿಗೆ ಹೇಳಿ, ಕರ್ಣೋಪಕರ್ಣವಾಗಿ.

**कानोला** (ಕಾನೋಲಾ) ಪು. **कानवला** ನೋ.

**कानोसा** (ಕಾನೋಸಾ) ಪು. **कानवसा** ನೋ.

**कान्हा** (ಕಾನ್ಹಾ) ಪು. ಕೃಷ್ಣ. ೨.ತೆಂಗಿನ ಮರದ ತುದಿಯ ಎಲೆ.

**कान्हेर** (ಕಾನ್ಹೇರ್) ಪು. ಕರ್ಕಶವಾದ ಸಪ್ಪಳ, ಸದ್ದು.

**कान्होबा** (ಕಾನ್ಹೋಬಾ) ಪು. ಶ್ರೀ ಕೃಷ್ಣ.

**काप** (ಕಾಪ್) ಪು.ಕ. ಕೊಪ್ಪ, ಕಿವಿಯಲ್ಲಿಯ ಆಭರಣ. ೨. ಹೋಳು, ತುಂಡು, ಚೂರು.

**कापटणे** (ಕಾಪಟಣೇ) ಕ್ರಿ. ಸ. ಬೋಳಿಸು.

**कापटा** (ಕಾಪಟಾ) ಪು. ಬಾಳೆಯ ಎಲೆಯ ತುಣುಕು. ೨. ಕಲ್ಲಿನ ಚೂರು.

**कापटी** (ಕಾಪಟೀ) ಸ್ತ್ರೀ. ತುಣುಕು, ಚೂರು.

**कापटय** (ಕಾಪಟ್ಯ) ನ. ಸಂ. ಕಪಟ, ಮೋಸ.

**कापड** (ಕಾಪಡ್) ನ. ಅರಿವೆ, ವಸ್ತ್ರ, ಬಟ್ಟೆ.

**–चोपड** (–ಚೋಪಡ್) ವಿ. ಉಡುತೊಡುವ ಬಟ್ಟೆಗಳು.

**कापडी** (ಕಾಪಡೀ) ವಿ. ಅರಿವೆಯ. ೨. ಪು. ಗೇರುಬಣ್ಣದ ಪತಾಕೆಯನ್ನು ಹಿಡಿದುಕೊಂಡು ಹೊರಟ ಯಾತ್ರಿಕ.

**कापण** (ಕಾಪಣ್) ಪು. (ಪೈರಿನ) ಕೊಯ್ಲು, ಕಟಾವು ಯಿಸುವಿಕೆ.

**कापणावळ** (ಕಾಪಣಾವಳ್) ಸ್ತ್ರೀ. ಕೊಯ್ಲು ಮಾಡುವ ಕೂಲಿ.

**कापणी** (ಕಾಪಣೀ) ಸ್ತ್ರೀ. **कापण** ನೋಂ.

**कापणे** (ಕಾಪಣೇ) ಕ್ರಿ.ಸ. ಹೆಚ್ಚು, ಕೊಯ್ಯು, ತುಂಡರಿಸು, ಕತ್ತರಿಸು. (ಬರಬೇಕಾದ ಹಣವನ್ನು ಅಥವಾ ಕೊಡಬೇಕಾದ ಸಂಬಳವನ್ನು ಮುರಿದುಕೊ.)

**कापला** (ಕಾಪಲಾ) ಪು. **काफला** ನೋ.

**कापशा** (ಕಾಪಶಾ) ವಿ. ದಪ್ಪ, ಅರಳೆಯ ಅಂಡಿಗೆಯಂತೆ ಇರುವ, ಕೊಬ್ಬಿದ.

**कापशी** (ಕಾಪಶೀ) ಸ್ತ್ರೀ. ಹತ್ತಿಯ ಗಿಡ.

**कापीव** (ಕಾಪೀವ್) ವಿ. ಕೊಯ್ದು ತಯಾರಿಸಿದ.

**कापुसणे** (ಕಾಪುಸಣೇ) ಕ್ರಿ. ಅ. ಬುರುಸುಗಟ್ಟು, ಕೊಳೆಯಾಗು.

**कापूर** (ಕಾಪೂರ್) ಪು. ಕಪ್ಪುರ.

**कापूस** (ಕಾಪೂಸ್) ಪು. ಹತ್ತಿ, ಅರಳೆ.

**काफर** (ಕಾಫರ್) ವಿ. ಅರ. ನಾಸ್ತಿಕ. ಇಸ್ಲಾಂ ಧರ್ಮವನ್ನು ನಂಬದವ.

**काफला** (ಕಾಫಲಾ) ಪು.ಅರ. ತಂಡ, ಗುಂಪು, ಸಮೂಹ.

**काफी** (ಕಾಫೀ) ಸ್ತ್ರೀ. ಕಾಫಿ, ಕಾಫಿ ಬೀಜ. ೨. ಪು. ಕಾಫೀ ಎಂಬ ರಾಗ.

**काबा** (ಕಾಬಾ) ಪು. ಅರ. ಪವಿತ್ರ ಶಿಲೆ, ಕಾಅಬಾ.

**काबाड** (ಕಾಬಾಡ್) ನ. ಒಜ್ಜೆ. ಭಾರ.

**–कष्ट** (–ಕಷ್ಟ) ಪು. ಬಹು ವ. ಪರಿಶ್ರಮ.

**काबीज** (ಕಾಬೀಜ್) ವಿ. ಅರ. ಕೈವಶ ಪಡಿಸಿದ, ಪ್ರಾಪ್ತ ಹಸ್ತಗತ.

**काबील** (ಕಾಬೀಲ) ವಿ. ಅರ. ಚತುರ, ಕುಶಲ.

**काबुयार** (ಕಾಬೂಯಾರ್) ವಿ. ತು. ಮೋಸಗಾರ.

**काबू** (ಕಾಬೂ) ಪು. ತು. ವಶ, ಅಧಿಕಾರ.

**काम** (ಕಾಮ್) ನ. ಕೆಲಸ.

**–चोरणे** (–ಚೋರಣೇ) ಕ್ರಿ. ಸ. ಮೈಗಳ್ಳತನ ಮಾಡು, ಕೆಲಸ ತಪ್ಪಿಸು.

**–साधणे** (–ಸಾಧಣೇ) ಕ್ರಿ. ಸ. ಉದ್ದೇಶವನ್ನು ಈಡೇರಿಸು.

**कामा येणे** (ಕಾಮಾಯೇಣೇ) ಕ್ರಿ. ಅ. ಉಪಯೋಗ ಬೀಳು. ಕೆಲಸಕ್ಕೆ ಬರು.

**कामास येणे** (ಕಾಮಾಸ್ ಯೇಣೇ) ಕ್ರಿ. ಸ. ಸಹಾಯ ಮಾಡು. ೨. ಯುದ್ಧದಲ್ಲಿ ಮಡಿ.

**कामाला लावणे** (ಕಾಮಾಲಾವಣೇ) ಕ್ರಿ. ಸ. ಕೆಲಸಕ್ಕೆ ಹಚ್ಚು, ಉದ್ಯೋಗವನ್ನು ಕಲ್ಪಿಸಿಕೊಡು.

**कामापुरता मामा ताकापुरती आजीबाई** ಕಾಮಾಪುರತಾ ಮಾಮಾ ತಾಕಾಪುರತೀ ಅಜೀಬಾಈ, ನಾಣ್ಣುಡಿ. ಸ್ವಾರ್ಥ ಸಾಧಿಸುವುದಕ್ಕೆ ಮಾಡಿದ ನೆಂಟತನ.

**काम सरो वैद्य मरो** ಕಾಮ್ ಸರೋ ವೈದ್ಯ ಮರೋ } ನಾಣ್ಣುಡಿ. ತನ್ನ ಕೆಲಸವಾದರಾಯಿತು. ಮುಂದೆ ಯಾರ ಪರಿವೆ ಇಲ್ಲ.

**–करी** (–ಕರೀ) ಪು. ದುಡಿಯುವವ. ಕೂಲಿಕಾರ.

**–काज** (–ಕಾಜ್) ನ. ಕೆಲಸ, ಹೋರೆ.

**–गार** (–ಗಾರ್) ಪು. ದುಡಿಯುವವ ಕಾರ್ಮಿಕ, ನೌಕರ.

–गिरी (–ಗಿರೀ) ಸ್ತ್ರಿ, (ದೊಡ್ಡ) ಕೆಲಸ. ಪೌರುಷ.

–चलाऊ (–ಚಲಾಊ) ವಿ. ಕೆಲಸಕ್ಕೆ ಸಾಕಾಗು ವಷ್ಟು.

–चुकार (–ಚುಕಾರ್) ಪು. ವೈಗಳ್ಳ.

–धंदा (–ಧಂದಾ) ಪು. ಕೆಲಸ ಬೊಗಸೆ.

–धाम (–ಧಾವ್ಮ್) ಪು. ಕೆಲಸ, ಬದುಕು.

कामाचा (ಕಾಮಾಚಾ) ವಿ. ಉಪಯುಕ್ತ.

काय कामाचा ? (ಕಾಯ್ ಕಾಮಾಚಾ ? ಏನು ಉಪಯೋಗ.

कामसू (ಕಾಮಸೂ) ವಿ. ದುಡಿಯುವವ, ಶ್ರಮ ಪಡುವವ.

काम (ಕಾಮ್) ಪು. ಸಂ. ಕಾಮವಾಸನೆ, (ರತಿಕ್ರೀಡೆ)

–चेष्टा (ಚೇಷ್ಟಾ) ಸ್ತ್ರೀ. ಕೈತವ, ಕಾಮಕ್ರೀಡೆ.

–देव (–ದೇವ) ಪು. ಮದನ, ಕಾಮಣ್ಣ.

काय (ಕಾಯ್) ಸರ್ವ. ಪ್ರ. ಏನು ? ಏ

–काय (–ಕಾಯ್) ಏನು ಏನು ?

–से (–ಸೇ) ಕ್ರಿ. ವಿ. ಏನೋ.

कायत–स्थ (ಕಾಯತ್–ಸ್ಥ) ಪು. ಕಾಯಸ್ಥ ಕುಲದವ.

कायदा (ಕಾಯದಾ) ಪು. ಅರ. ಕಾನೂನು, ನಿಯಮ.

कायदेकौन्सिल (ಕಾಯದೇ ಕೌನ್ಸಿಲ್) ವಿಧಾನಸಭೆ.

कायदेपंडित (ಕಾಯದೇ ಪಂಡಿತ್) ಪು. ಕಾನೂನು ಬಲ್ಲವ, ನ್ಯಾಯ ಶಾಸ್ತ್ರಿ.

कायदेशीर (ಕಾಯದೇಶೀರ್) ವಿ. ಸಕ್ರಮ, ಕಾನೂನಿಗೆ ಅನುಸರಿಸಿ ಮಾಡಿದ.

कायम (ಕಾಯಮ್) ವಿ. ಅರ. ಸ್ಥಿರ, ಬಾಳುವ, ತಾಳುವ, ಖಾಯಂ.

काया (ಕಾಯಾ) ಸ್ತ್ರೀ. ಸಂ. ಶರೀರ.

–पालट (–ಪಾಲಟ) ಸ್ತ್ರೀ. ರೂಪದಲ್ಲಿ ಆದ ಅದ್ಭುತ ಬದಲಾವಣೆ.

कायिक (ಕಾಯಿಕ) ವಿ. ಸಂ. ಶಾರೀರಿಕ, ದೈಹಿಕ.

कार (ಕಾರ್) ಪು. ಗೊಬ್ಬರ.

–कार (–ಕಾರ್) ವಿ. ಪ್ರತ್ಯಯ. ಮಾಡುವವ. ೨. ಒಡೆಯ ೩. ಸಂಪಾದಕ. ೪ ವರ್ಣ ಅಕ್ಷರ.

कारक (ಕಾರಕ) ವಿ. ಸಂ. ಮಾಡಿಸುವವ, ಉತ್ಪನ್ನ ಮಾಡುವವ, ಒದಗಿಸುವವ.

–कारक (–ಕಾರಕ್) ಪ್ರತ್ಯಯ ವಿ. ಉಂಟು ಮಾಡುವ.

समाधान– (ಸಮಾಧಾನ–) ೨. ಸಂತೋಷಗೊಳಿಸುವ (ವ್ಯಾಕರಣ) ವಿಭಕ್ತಿ ಸಂಬಂಧ.

कारका (ಕಾರಕಾ) ಸ್ತ್ರೀ. ಆಣೇಕಲ್ಲು.

कारकीर्द (ಕಾರಕೀರ್ದ್) ಸ್ತ್ರೀ. ಫಾ. ಆಡಳಿತ, ರಾಜ ಕಾಲ.

कारकुनी (ಕಾರಕುನೀ) ಸ್ತ್ರೀ. ಫಾ. ಕಾರಕೂನನ ಪದ, ವ್ಯವಸಾಯ.

कारकून (ಕಾರಕೂನ್) ಪು. ಫಾ. ಕರಣಿಕ. ಲೇಖನಿಕ.

कारखानदार (ಕಾರಖಾನ್‌ದಾರ್) ಪು. ಫಾ. ಕಾರ್ಖಾನೆಯ ಒಡೆಯ, ಉದ್ಯೋಗಪತಿ.

कारखाना (ಕಾರಖಾನಾ) ಪು. ಫಾ. ಕಾರ್ಖಾನೆ, ದೊಡ್ಡ ಉದ್ಯೋಗ, ಫ್ಯಾಕ್ಟರಿ.

कारंजे (ಕಾರಂಜೆ) ನ. ಕಾರಂಜಿ, ಊಟೆ, ಒರತೆ, ನೀರುಬುಗ್ಗೆ.

कारटा (ಕಾರಟಾ) ಪು. ತುಚ್ಛ ಹುಡುಗ, ಕೆಟ್ಟಹುಡುಗ

कारण (ಕಾರಣ್) ನ. ಕಾರಣ.

कारणे (ಕಾರಣೇ) ಕ್ರಿ. ವಿ. ಮೂಲಕ.

कारभार (ಕಾರ್‌ಭಾರ್) ಪು. ಫಾ. ಆಡಳಿತ, ರಾಜ್ಯ ವ್ಯವಸ್ಥೆ. ೨. ಹಿರಿಯತನ, ವ್ಯವಸ್ಥಾಪನೆ. (ವ್ಯಂಗ್ಯ) ಅನಧಿಕೃತ ಕೆಲಸ.

कारभारी (ಕಾರಭಾರೀ) ಪು. ಆಡಳಿತಕಾರ, ವ್ಯವಸ್ಥಾಪಕ, ದಿವಾಣ.

कारभारीण (ಕಾರಭಾರೀಣ್) ಸ್ತ್ರೀ. ಆಡಳಿತಗಾರ್ತಿ. ೨. ಹೆಂಡತಿ.

कारवाई (ಕಾರವಾಈ) ಸ್ತ್ರೀ, ಫಾ. ಕೆಲಸ, ಏರ್ಪಾಡು. ೨. ಒಳಸಂಚು, ಹೊಂಚು,

कारवान (ಕಾರವಾನ್) ನ. ಫಾ. ವ್ಯಾಪಾರಸ್ಥರ ತಂಡ, (ಒಂಟೆಯ) ಸಾಗಾಣೆ.

कारस्थान (ಕಾರಸ್ಥಾನ್) ನ. ಫಾ. (ಕಾರ್‌ಸಿತಾನೀ) ಒಳಸಂಚು. ದ್ರೋಹ.

कारस्थानी (ಕಾರಸ್ಥಾನೀ) ವಿ. ಕುಟಿಲ, ಹೊಂಚು ಹಾಕುವವ.

कारा(गृह) (ಕಾರಾ ಗೃಹ) ನ. ಸಂ. ಸೆರೆಮನೆ, ಬಂದಿಖಾನೆ, ಜೈಲು, ತುರಂಗ.

कारागिरी (ಕಾರಾಗಿರೀ) ಸ್ತ್ರೀ. ಕೈಗಾರಿಕೆ, ಕಲಾ ಕೌಶಲ್ಯ.

कारागीर (ಕಾರಾಗೀರ) ಪು. ಕಲಾನಿಪುಣ, ಕಲಾವಿದ.

कारागृहाधिपति (ಕಾರಾಗೃಹಾಧಿಪತಿ) ಪು. ಸಂ. ಸೆರೆ ಮನೆಯ ಅಧಿಕಾರಿ, ಅಧಿಪತಿ.

कारिका (ಕಾರಿಕಾ) ಸ್ತ್ರೀ. ಸಂ. ಸೂತ್ರದ ಭಾಷ್ಯ, ಟಿಪ್ಪಣೆ.

**कारुण्य** (ಕಾರುಣ್ಯ) ನ. ಸಂ. ದಯೆ, ಕರುಣೆ, ಕಾರುಣ್ಯರಸ.

**कार्कश्य** (ಕಾರ್ಕಶ್ಯ) ನ. ಸಂ. ಕಠೋರತನ,ಕರ್ಕಶತೆ.

**कार्तिक** (ಕಾರ್ತಿಕ) ಪು. ಸಂ. ಕಾರ್ತಿಕ ಮಾಸ.

**कार्पण्य** (ಕಾರ್ಪಣ್ಯ) ನ. ಸಂ. ಜಿಬುಟತನ. ೨. ಮನೋದೌರ್ಬಲ್ಯ.

**कार्य** (ಕಾರ್ಯ) ನ. ಸಂ. ಕೆಲಸ, ಪ್ರಕರಣ. ೨. (ಲಗ್ನ ಮುಂತಾದ) ಉತ್ಸವ, ಸಂಸ್ಕಾರ.

**कार्यकर्ता** (ಕಾರ್ಯಕರ್ತಾ) ಪು. ಸ. ಸಾಮಾಜಿಕ ಅಥವಾ ರಾಜನೀತಿಯ ಚಳುವಳಿಯಲ್ಲಿ ಭಾಗ ವಹಿಸುವವ.

**कार्यकारणन्याय** (ಕಾರ್ಯಕಾರಣ ನ್ಯಾಯ) ಪು.ಸಂ. ಕಾರ್ಯಕಾರಣ ಸಂಬಂಧ.

**कार्यकारिणी** (ಕಾರ್ಯಕಾರಿಣೀ) ಸ್ತ್ರೀ. ಸಂ. ಆಡಳಿತ ಸಮಿತಿ, ಕಾರ್ಯವಾಹಕ ಮಂಡಲ.

**कार्यकारी** (ಕಾರ್ಯಕಾರೀ) ವಿ. ಸಂ. ಕಾರ್ಯವನ್ನು ಈಡೇರಿಸುವ, ನಿರ್ವಾಹಕ.

**कार्यकुशल** (ಕಾರ್ಯಕುಶಲ) ಪು. ಸಂ. ಕೆಲಸಬಲ್ಲವ, ನಿಪುಣ.

**कार्यक्रम** (ಕಾರ್ಯಕ್ರಮ) ಪು. ಸಂ. ಕಾರ್ಯವಿವರ, ಪ್ರೊಗ್ರಾಮ್.೨.ಗೊತ್ತುಪಡಿಸಿದ ಕಾರ್ಯ, ಚಳುವಳಿ.

**कार्यदेशक** (ಕಾರ್ಯದೇಶಕ) ಪು. ಸಂ. ಕೆಲಸವನ್ನು ತಿಳಿಸಿ ಹೇಳಿ ಮಾಡಿಸಿಕೊಳ್ಳುವವ. ಆಳು, ಫೋರ್ ಮನ್.

**कार्यप्रणाली** (ಕಾರ್ಯ ಪ್ರಣಾಲೀ) ಸ್ತ್ರೀ. ಸಂ. ಕೆಲಸದ ಪದ್ಧತಿ, ಕಾರ್ಯ ಪದ್ಧತಿ.

**कार्यभाग** (ಕಾರ್ಯಭಾಗ್) ಪು. ವಹಿಸಿಕೊಂಡ ಕೆಲಸ.

**कार्यक्षम** (ಕಾರ್ಯಕ್ಷಮ) ವಿ. ಸಂ. ಕೆಲಸಮಾಡಬಲ್ಲ, ನಿಪುಣ.

**कार्यक्षमता** (ಕಾರ್ಯ ಕ್ಷಮತಾ) ಸ್ತ್ರೀ. ಸಂ. ಕೆಲಸ ಮಾಡುವ, ನೆರವೇರಿಸುವ ಶಕ್ತಿ, ಸಾಮರ್ಥ್ಯ.

**कार्यालय** (ಕಾರ್ಯಾಲಯ) ನ. ಸಂ. ಚಾವಡಿ, ಕಚೇರಿ, ಕಾರ್ಯಾಲಯ, ಆಫೀಸ್.

**काल** (ಕಾಲ್) ಪು. ಸಂ. ಸಮಯ, ಋತು, ಕ್ರಿ. ವಿ. ೨. ನಿನ್ನೆ.

**–परवा** (–ಪರವಾ) ಕ್ರಿ. ವಿ. ಇತ್ತೀಚೆಗೆ.

**कालकूट** (ಕಾಲಕೂಟ್) ನ. ಸಂ. ವಿಷ. ೨. ದ್ವೇಷ.

**कालक्रमणा** (ಕಾಲಕ್ರಮಣಾ) ಸ್ತ್ರೀ. ಕಾಲಕ್ಷೇಪ, ಕಾಲ ಕಳೆಯುವಿಕೆ.

**कालगति** (ಕಾಲಗತಿ) ಸ್ತ್ರೀ. ಕಾಲ, ದೈವ, ಮು. ಗಳ ಗತಿ, ಚಮತ್ಕಾರ.

**कालचक्र** (ಕಾಲಚಕ್ರ) ನ. ಸಂ. ಸತತವಾಗಿ ಸಾಗಿರುವ ಕಾಲಗತಿ.

**कालत्रय** (ಕಾಲತ್ರಯ) ನ. ಸಂ. ತ್ರಿಕಾಲ, (ಭೂತ, ವರ್ತಮಾನ, ಭವಿಷ್ಯತ್)

**कालत्रयी** (**अशक्य**) (ಕಾಲತ್ರಯೀ) (ಅಶಕ್ಯ) ವಿ. ಎಂದೆಂದಿಗೂ ಸಾಧ್ಯವಿಲ್ಲದ.

**कालथा** (ಕಾಲಥಾ) ಪು. ಸಪಾಟಾದ ಸೌಟು.

**कालपुरुष** (ಕಾಲಪುರುಷ) ಪು. ಮೃತ್ಯು, ಯಮನ ದೂತ. ೨. ಲಾ. ಭಯಂಕರ ಮನುಷ್ಯ.

**कालमान** (ಕಾಲಮಾನ) ನ. ಸಮಯದ ಸ್ವರೂಪ.

**कालव** (ಕಾಲವ್) ನ. ಇಚ್ಚಿಪ್ಪಿನಲ್ಲಿಯ, ಸೀಪೆಯಲ್ಲಿಯ ಜೀವಸಹಿತವಾಗಿ ತಿನ್ನುವ ಮೃದು ಕೀಟ.

**कालवड** (ಕಾಲವಡ್) ಸ್ತ್ರೀ. ಸಣ್ಣ ಆಕಳ ಕರು.

**कालवण** (ಕಾಲವಣ್) ನ. ಸಾರು, ಮಜ್ಜಿಗೆ, ಮುಂತಾದ ಅನ್ನದಲ್ಲಿ ಸೇರಿಸುವ ¦ವ್ಯಂಜನ

**कालवणे** (ಕಾಲವಣೇ) ಕ್ರಿ. ಸ. ಸೇರಿಸು, ಕಲೆಸು, ಮಿಶ್ರಣ.

**कालवा** (ಕಾಲವಾ) ಪು. ಪೋ. ಕಾಲುವೆ, ನದಿಯಿಂದ ತೆಗೆದ ಪ್ರವಾಹ.

**कालवाकालव** (ಕಾಲವಾ ಕಾಲವ್) ಸ್ತ್ರೀ. ಕಸಿವಿಸಿ, ಅಸಮಾಧಾನ.

**कालविपर्यय** (ಕಾಲವಿಪರ್ಯಯ) ಪು. ಸಂ. ಕಾಲವಿ ಸಂಗತಿ.

**कालविसंगत** (ಕಾಲವಿಸಂಗತ) ವಿ. ಸಂ. ಕಾಲಕ್ಕೆ ಸರಿಹೋಗದ, ೨. ಕಾಲಬಾಹ್ಯ.

**कालक्षेप** (ಕಾಲಕ್ಷೇಪ) ಪು. (ಆಯುಷ್ಯದ) ಕಾಲವನ್ನು (ಒಳ್ಳೆಯ ರೀತಿಯಿಂದ) ಕಳೆಯುವಿಕೆ.

**काला** (ಕಾಲಾ) ಪು. ಮಿಶ್ರಣ, ಬೆರಕೆ. ೨. ಧಾನ್ಯ ಕಾಳುಕಡಿ.

**दही–** (ದಹೀ–) ಪು. ಮೊಸರಿನ ಮಿಶ್ರಣ. (ಒಂದು ಹಬ್ಬ.)

**कालानुकूलय** (ಕಾಲಾನುಕೂಲ್ಯ) ನ. ಸಂ. ಸಮಯದ ಅನುಕೂಲತೆ, ಯೋಗ್ಯಸಂಧಿ.

**कालानुक्रमिक** (ಕಾಲಾನುಕ್ರಮಿಕ) ವಿ. ಸಂ. ಕಾಲ ಮಾನವನ್ನು ಅನುಸರಿಸಿ ಬರೆದ (ಚರಿತ್ರೆ ಮುಂ)

**कालिक** (ಕಾಲಿಕ) ವಿ. ಸಮಯದ,ಸಮಯಕ್ಕೆ ತಕ್ಕ

**काल्** (ಕಾಲೂ) ಸ್ತ್ರೀ. ಸೀಪೆ. ೨. ಇಚ್ಚಿಪ್ಪೆ.

**काल्पनिक** (ಕಾಲ್ಪನಿಕ) ವಿ. ಸಂ. ಕಲ್ಪನೆಯ, ಸತ್ಯವಲ್ಲದ.
**काव** (ಕಾವ್) ಸ್ತ್ರೀ. ಕಾವಿಮಣ್ಣು, ಕಾವಿ.
**कावकाव** (ಕಾವ್‌ಕಾವ್) ಸ್ತ್ರೀ. (ಕಾಗೆಯ) ಕರ್ಕಶ ಸಪ್ಪಳ. ೨. ಕಸವಿಸಿ, ಅಸಮಾಧಾನ.
**कावड** (ಕಾವಡ್) ಸ್ತ್ರೀ. ಹೆಗಲಮೇಲೆ ಹೊರುವ ನೀರಿನ, ಹಾಲಿನ ಇಬ್ಬದಿ ಕೊಳಗ, ಪಾತ್ರೆ.
**कावराबावरा** (ಕಾವರಾ ಬಾವರಾ) ವಿ. ಹೌಹಾರಿದ, ತೋಚದಂತಾದ, ದಿಙ್ಮೂಢ.
**कावळा** (ಕಾವಳಾ) ಪು. ಕಾಗೆ.
**कावा** (ಕಾವಾ) ಪು. ಹೊಂಚು, ಗತ್ತು, ಒಳಸಂಚು, ಚಾಣಕ್ಯ ನೀತಿ.
**कावीळ** (ಕಾವೀಳ್) ಸ್ತ್ರೀ. ಕಾಮಾಲೆ, ಕಾಮಣಿ.
**कावेबाज** (ಕಾವೇಬಾಜ್) ವಿ. ಧೂರ್ತ, ಹೊಂಚು ಹಾಕುವವ.
**काव्य** (ಕಾವ್ಯ) ನ. ಕವಿತೆ.
**काव्ह(व)णे** (ಕಾವ್ಹ(ವಣೇ) ಕ್ರಿ. ಸ. ಸಿಟ್ಟುಮಾಡು, ಸಿಟ್ಟಿಗೇಳು, ಕೋಪಮಾಡು.
**काशी** (ಕಾಶೀ) ಸ್ತ್ರೀ. ಕಾಶೀತೀರ್ಥ, ವಾರಾಣಸಿ.
 **–फल** (–ಫಲ್) ನ. ಕುಂಬಳಕಾಯಿ.
**काष्टा** (ಕಾಷ್ಟಾ) ಪು. ಸಂ. ಕಚ್ಚೆ, ಕಚ್ಛೆ.
**काष्ट** (ಕಾಷ್ಟ) ನ. ಕಟ್ಟಿಗೆ.
 **(–कुट्ट)** –ಕುಟ್ಟ) ಪು. ಮರುಗಟುಗ ಪಕ್ಷಿ.
 **–वत्** (–ವತ್) ಕ್ರಿ. ವಿ. ಅಲುಗಾಡದೆ, ಅಚೇತನವಾಗಿ.
**काषाय** (ಕಾಷಾಯ) ವಿ. ಸಂ. ಕಾವಿಮಣ್ಣಿನ ಬಣ್ಣದ ಸನ್ಯಾಸಿಗಳ ಬಟ್ಟೆಯ (ಬಣ್ಣ)
**कास** (ಕಾಸ್) ಸ್ತ್ರೀ. ಕೆಚ್ಚಲು.
**कासंडी** (ಕಾಸಂಡೀ) ಸ್ತ್ರೀ. (ಹಿತ್ತಾಳೆಯ) ಡಬ್ಬೆ, ಪಾತ್ರೆ.
**कासया** (ಕಾಸಯಾ) ಪ್ರ.. ಹ. ಮ. ಅದೇಕೆ, ಅದೆಂತು.
**कासव** (ಕಾಸವ್) ಪು. ಆಮೆ. ಕೂರ್ಮ.
**कासार** (ಕಾಸಾರ್) ಪು. ಬಳೆಗಾರ.
**कासाविसी** (ಕಾಸಾವಿಸೀ) ಸ್ತ್ರೀ. ಕ. ಕಸವಿಸಿ, ನೋವು.
**कासावीश** (ಕಾಸವೀಸ್) ವಿ. ಅಸ್ವಸ್ಥ, ತೊಳಲಾಡುವ.
**काहिली** (ಕಾಹಿಲೀ) ಸ್ತ್ರೀ. ಸೆಕೆ. ೨. ಬಾಯಿಲೆ. ೩. ಕೊಪ್ಪರಿಗೆ.
**काहीं** (ಕಾಹೀ) ವಿ. ಕೆಲವು. ೨. ಕ್ರಿ. ವಿ. ಏನೂ.
**काहील** (ಕಾಹೀಲ್) ಸ್ತ್ರೀ. (ಕಬ್ಬಿನಹಾಲಿನ) ಕೊಪ್ಪರಿಗೆ.
**काहूर** (ಕಾಹೂರ್) ನ. ಫಾ. ಕೋಲಾಹಲ, ಕೆಟ್ಟ ಸಮಯ. ೨. ಸುಳ್ಳು ದೋಷಾರೋಪಣೆ. ೩. ಭಯಂಕರ ಪರಿಸ್ಥಿತಿ.
**काहूल** (ಕಾಹೂಲ್) ಸ್ತ್ರೀ ಕೋಲಾಹಲ, ಗೊಂದಲ.
**काळ** (ಕಾಳ್) ಸ್ತ್ರೀ. ಕಾಲ, ಸಮಯ. ೨. ಮೃತ್ಯು.
**काळगेला** (ಕಾಳಗೇಲಾ) ವಿ. ಸಾದಗಪ್ಪು ಬಣ್ಣದ.
**काळजी** (ಕಾಳಜೀ) ಸ್ತ್ರೀ. ಚಿಂತೆ, ಯೋಚನೆ, ದುಃಖ.
**काळज्वर** (ಕಾಳಜ್ವರ) ಪು. ವಿಷಮ (ಟೈಫಸ್) ಜ್ವರ.
**काळझोप** (ಕಾಳಝೋಪ್) ಸ್ತ್ರೀ. ಚಿರನಿದ್ರೆ, ಮರಣ.
**काळतोंडचा** (ಕಾಳತೋಂಡ್ಯಾ) ವಿ. ಅಶುಭ, ಕುಲಕ್ಷಣ, ದುರ್ದೈವಿ.
**काळपुळी** (ಕಾಳಪುಳೀ) ಸ್ತ್ರೀ. ಕೆಟ್ಟಕುರು, ಬೆನ್ನುಫೇಣಿ, ರಾಜಹುಣ್ಣು.
**काळवंडणे** (ಕಾಳವಂಡಣೇ) ಕ್ರಿ. ಅ. ಕಪ್ಪು ಬಣ್ಣಬರು, ಕಪ್ಪಾಗು.
**काळवीट** (ಕಾಳವೀಟ್) ಪು. ಜಿಂಕೆ (ಗಂಡು).
**काळसर** (ಕಾಳಸರ್) ವಿ. ಸಾದಗಪ್ಪು.
**काळा** (ಕಾಳಾ) ವಿ. ಕಪ್ಪು.
 **(तोंड) काळे करणे–** (–ತೋಂಡ್) (ಕಾಳೇಕರಣೇ) ಕ್ರಿ. ಅ. ಓಡಿಹೋಗು, ಗುಡಚಾಪೆ ಕಟ್ಟು.
 **काळेपाणी** (ಕಾಳೇಪಾಣೀ) ಸ್ತ್ರೀ. ಗಡಿಪಾರಿನ ಶಿಕ್ಷೆ.
**काळाकभिन्न** (ಕಾಳಕಭಿನ್ನ) ವಿ. ಅತಿಕಪ್ಪು ಬಣ್ಣದ.
**काळाकुट्ट** (ಕಾಳಾಕುಟ್ಟ) ವಿ. ತೀರಕಪ್ಪು.
**काळासावळा** (ಕಾಳಾಸಾವಳಾ) ವಿ. ಸಾದಗಪ್ಪು.
**काळिमा** (ಕಾಳಿಮಾ) ಪು. ಅಪಕೀರ್ತಿ, ಕಳಂಕ.
**काळीज** (ಕಾಳೀಜ್) ನ. ಯಕೃತ್, ಹೃದಯ.
 **–फाटणे** (–ಫಾಟಣೇ) ಕ್ರಿ. ಅ. ಅತಿಶೋಕವಾಗು.
**काळेला** (ಕಾಳೇಲಾ) ವಿ. ಕಪ್ಪು, ಸಾದಗಪ್ಪು.
**काळोख** (ಕಾಳೋಖ್) ಪು. ಕತ್ತಲೆ.
**काळोखी** (ಕಾಳೋಖೀ) ಸ್ತ್ರೀ. ಮುಸುಮುಸುಕು. ೨. ಕಳಂಕ. ೩. ಬವಳಿ, ಮೂರ್ಛೆ.
**कांक्षा** (ಕಾಂಕ್ಷಾ) ಸ್ತ್ರೀ. ಸಂ. ಇಚ್ಛೆ, ಮನೋರಥ, ಇಷ್ಟ.
**कांक्षित** (ಕಾಂಕ್ಷಿತ) ವಿ. ಸಂ. ಬೇಕಾದ, ಆಸೆಪಟ್ಟ, ಈಪ್ಸಿತ.

**किं** (ಕಿಂ) ಕ್ರಿ. ವಿ. ಸರ್ವ, ಏನು? ಏಕೆ.
 **–कर्तव्यमूढ** (– ಕರ್ತವ್ಯ ಮೂಢ) ವಿ. ಏನು ಮಾಡಬೇಕೋ ತಿಳಿಯದವ.
**किंकर** (ಕಿಂಕರ) ಪು. ಸಂ. ಆಳು, ಸೇವಕ.
**किंकाळणे** (ಕಿಂಕಾಳಣೇ) ಕ್ರಿ, ಅ. ಚೀರು, ಒದರು.
**किंकाळ** (ಕಿಂಕಾಳೀ) ಸ್ತ್ರೀ. ಕಿರಿಚುವಿಕೆ, ಆಕ್ರೋಶ, ಒದರುವಿಕೆ.

**किचकट** (ಕಿಚಕಟ್) ವಿ. ಕ್ಲಿಷ್ಟ, ಓದಲಿಕ್ಕೆ, ತಿಳಿಯಲಿಕ್ಕೆ ಕಠಿಣವಾದ. ೨. ನೀರಸವಾದ.

**किचकिच** (ಕಿಚಕಿಚ್) ಸ್ತ್ರೀ. ಜಿಡ್ಡು, ಎಣ್ಣೆ ಬಸಿಯುವಿಕೆ.

**किंचाळणे** (ಕಿಂಚಾಳಣೇ) ಕ್ರಿ. ಅ. ಚೀರು, ಅಕ್ರೋಶ ಮಾಡು.

**किंचित्** (ಕಿಂಚಿತ್) ಕ್ರಿ. ವಿ. ಸ್ವಲ್ಪ, ತುಸ, ಕೊಂಚ.

**–ज्ञान** (–ಜ್ಞಾನ) ನ. ಅಲ್ಪಜ್ಞಾನ.

**किटण** (ಕಿಟಣ್) ನ. ಕ. ಕಿಟ್ಟ, ಹೊಲಸಿನ ಪದರು, ಗೊಣ್ಣೆ.

**किटणे** (ಕಿಟಣೇ) ಕ್ರಿ. ಅ. ಹೊಲಸಾಗು, ಮಾಸು, ೨. ಜಿಗುಪ್ಸೆಯಾಗು, ಬೇಜಾರಾಗು.

**कान–** (ಕಾನ್–) ಕ್ರಿ. ಅ. (ಕೇಳಿ) ಬೇಸರಿಕೆಯುಂಟಾಗು.

**किटा** (ಕಿಟಾ) ಪು. ಒಡೆದ, ಸೀಳಿದ ಕಟ್ಟಿಗೆ, ಉರವಲ.

**किटाळ** (ಕಿಟಾಳ್) ನ. ದೂಷಣೆ, ಅಪಕೀರ್ತಿ, ಆರೋಪಣೆ. ೨. ಬಿಕ್ಕಟ್ಟಿನ ಪರಿಸ್ಥಿತಿ, ಕೇಡು, ಬವಣೆ.

**किडका** (ಕಿಡಕಾ) ವಿ. ಹುಳು ಹತ್ತಿದ, ಗೆದ್ದಲು ಹತ್ತಿದ ೨. ದೂಷಿತ, ಕೆಟ್ಟುಹೋದ.

**किडकोळा** (ಕಿಡಕೋಳಾ) ವಿ. ಸೀರಾದ, ಬಡಕಾದ, ಅಶಕ್ತ.

**किडकिडीत** (ಕಿಡಕಿಡೀತ್) ವಿ. ಸೀರಾದ, ಬಡಕಾದ.

**किडणे** (ಕಿಡಣೇ) ಕ್ರಿ. ಅ. ಹುಳು ಹತ್ತು, ದೂಷಿತವಾಗು, ಕೆಟ್ಟು ಹೋಗು.

**किडा** (ಕಿಡಾ) ಪು. ಹುಳು, ಕೀಟ.

**–मुंगी** (–ಮುಂಗೀ) ಸ್ತ್ರೀ. ಹುಳು ಹುಪ್ಪಡಿ.

**किडुकमिडुक** (ಕಿಡುಕ್‌ಮಿಡುಕ್) ನ. (ಮನೆಯಲ್ಲಿ ಸಂಗ್ರಹಿಸಿದ) ಸಣ್ಣಪುಟ್ಟ ವಸ್ತುಗಳು, ಒಡವೆಗಳು, ೨. ಸೊತ್ತು.

**कितपत** (ಕಿತ್‌ಪತ್) ಕ್ರಿ. ವಿ. ಪ್ರ. ಎಷ್ಟರಮಟ್ಟಿಗೆ, ಎಷ್ಟು.

**कितान** (ಕಿಂತಾನ್) ನ. ನಾರು ಅಥವಾ ರೇಶ್ಮೆಯಬಟ್ಟೆ.

**किताब** (ಕಿತಾಬ್) ಪು. ಅರ. ಉಪಾಧಿ, ಪದವಿ (ಖಿತಾಬ್) ಯೋಗ್ಯತೆ. (ಕಿತಾಬ್) ಪುಸ್ತಕ.

**–खाना** (–ಖಾನಾ( ಪು. ಪುಸ್ತಕ ಸಂಗ್ರಹಾಲಯ. ಪುಸ್ತಕದ ಅಂಗಡಿ.

**किंतु** (ಕಿಂತು) ಪು. ಸಂ. ಸಂದೇಹ, ಮನಸ್ಸಿನಲ್ಲಿಯ ಬೆದರಿಕೆ, ಸಂಕೋಚ, ಅನುಮಾನ.

**कित्ता** (ಕಿತ್ತಾ) ಪು. ಅರ. ಅನುಕರಿಸಲಿಕ್ಕೆ ಯೋಗ್ಯವಾದ ಪಟ, ವಸ್ತು, ಉತ್ತಮ ಬರೆಹ, ಶುದ್ಧಬರೆಹ. ೨. ಅನುಕರಣ. ೩. ಮೇಲೆ ಹೇಳಿದ ಅದೇ ಗ್ರಂಥ (Ibid) ಎಂಬ ಚಿನ್ಹ.

**–घालून देणे** (–ಘಾಲೂನ್ ದೇಣೇ) ಕ್ರಿ. ಸ. ಆದರ್ಶ ನಡಾವಳಿಯ ಮಾದರಿಯನ್ನು ಒದಗಿಸು, ಪಾಠ ಗಲಿಸು.

**–गिरविणे** (–ಗಿರವಿಣೇ) ಕ್ರಿ. ಸ. ಉತ್ತಮ ಅಕ್ಷರ ತೀಡು (ಲಾ) ಅನುಕರಣ ಮಾಡು.

**–खर्च** (–ಖರ್ಚ್) ಪು. ಸಾಮಾನ್ಯ ಖರ್ಚು, ವೆಚ್ಚ.

**कित्येक** (ಕಿತ್ಯೇಕ) ಕ್ರಿ. ವಿ. ಅದೆಷ್ಟೋ, ಅನೇಕ, ಹಲಕೆಲವು.

**किनखाप** (ಕಿನಖಾಪ್) ಪು. ಅರ. ಕಿನಖಾಬ್- ಕುತನಿಯ ಬಟ್ಟೆ.

**किनार** (ಕಿನಾರ್) ಸ್ತ್ರೀ. ಫಾ. ಅಂಚು, ಸೀರೆಯ, ಒಲ್ಲೆಯ ಅಂಚು, ಜರದ ಕಡ್ಡಿ.

**किनारा** (ಕಿನಾರಾ) ಪು. ಫಾ. ದಂಡೆ, ತುದಿ, ಕೊನೆ, ತಟ.

**किन्नर** (ಕಿನ್ನರ) ಪು. ಸಂ. ಶ್ರೇಷ್ಠ ಗಾಯಕ, ೨. ಕಲ್ಪಿತ ಜನಾಂಗ.

**किंनिमित्त** (ಕಿಂನಿಮಿತ್ತ) ಕ್ರಿ. ವಿ. ಪ್ರ. ಅದೇಕೆ, ಏಕೆ, ಏನು ಕಾರಣ.

**किफायती** (ಕಿಫಾಯತೀ) ವಿ. ಅರ. ಅಲ್ಪ ಬೆಲೆಯ, ಲಾಭದಾಯಕ, ಉಳಿತಾಯ ಮಾಡುವ.

**किंमत** (ಕಿಂಮತ್) ಸ್ತ್ರೀ. ಅರ. ಬೆಲೆ, ಯೋಗ್ಯತೆ, ಶ್ರೇಷ್ಠತೆ, ೨. ಆದರ, ಸದ್ಭಾವನೆ. ೩. ಮಹತ್ವ.

**किमया** (ಕಿಮಯಾ) ಸ್ತ್ರೀ. ಅರ. ಫಾ. ಗೂಢವಿದ್ಯೆ. ರಸಾಯನ ಶಾಸ್ತ್ರ. ೩. ಮಾಟ, ಚಮತ್ಕಾರ.

**–ग–गार** (–ಗ–ಗಾರ್) ಪು. ಮಾಟಗಾರ, ಸಿದ್ಧ, ಚಮತ್ಕಾರ ಮಾಡಬಲ್ಲವ.

**किमर्थ** (ಕಿಮರ್ಥ) ಕ್ರಿ. ವಿ. ಸಂ. ಏನು ಕಾರಣ, ಆದೇಕೆ!

**किमान** (ಕಿಮಾನ್) ಕ್ರಿ. ವಿ. ಅರ. ತೀರ ಕಡಿಮೆ.

**–पक्षी** (–ಪಕ್ಷೀ) ಕ್ರಿ. ವಿ. ಏನಿಲ್ಲೆಂದರೂ, ಕಡಿಮೆಯೆಂದರೂ.

**किरकिर** (ಕಿರಕಿರ್) ಸ್ತ್ರೀ. ಕಟಕಟ, (ಸಣ್ಣ ಹುಡುಗರ) ಅಳುವಿಕೆ. ೨. ಕಷ್ಟ, ತೊಂದರೆ, ತಕರಾರು.

**किरकिरणे** (ಕಿರಕಿರಣೇ) ಕ್ರಿ. ಸ. ತಕರಾರು ಮಾಡು, ಕಿರುಕುಳ ಉಂಟುಮಾಡು.

किरकोळ (ಕಿರಕೋಳ್) ಕ್ರಿ. ವಿ. ಕ. ಕಿರಿಯ, ಸಣ್ಣ ಪುಟ್ಟ, ಕ್ಷುಲ್ಲಕ, ಚಿಲ್ಲರೆ.

किरटा (ಕಿರಟಾ) ವಿ. ಸಣ್ಣ, ಅಶಕ್ತ. ೨. ಗಿಡ್ಡ. ೩. ಸಣ್ಣ ಮೈಕಟ್ಟಿನ ೩. ಅಶಕ್ತ. ೪. ಜಿಬುಟ. ೫. (ಅಕ್ಷರ) ಜನುಗಾದ, ಸಣ್ಣ.

किरण (ಕಿರಣ) ಪು. ಸಂ. ಕಿರಣ.

किरमिजी (ಕಿರಮಿಜೀ) ವಿ. ಕಿರಮಂಜೀ,ಕಂದೀಬಣ್ಣದ.

किरमीज (ಕಿರಮೀಜ್) ನ. ಒಂದು ಹುಳು.

किराणा (ಕಿರಾಣಾ) ಪು. ಕಿರಾಣಿ ಸಾಮಾನು.

किरात (ಕಿರಾತ್) ಪು. ಸಂ. ಭಿಲ್ಲ, ಕಾಡುಮನುಷ್ಯ.

किरीट (ಕಿರೀಟ್) ಪು. ಸಂ. ಕಿರೀಟ, ಮುಕುಟ.

किरा (ಕಿರಾ) ವಿ. ಕರ್ಕಶ ಶಬ್ದಯುಕ್ತ, ನಿಬಿಡ.

किर्द (ಕಿರ್ದ್) ಸ್ತ್ರೀ. ಫಾ. ಲೆಕ್ಕದ ಪುಸ್ತಕ.

किलकिलाट (ಕಿಲ್‌ಕಿಲಾಟ್)
–बिलाट (ಕಿಲ್‌ಬಿಲಾಟ್) } ಪು. ಕಿಲಕಿಲ ಶಬ್ದ, ಪಕ್ಷಿಗಳ, ಸಣ್ಣಹುಡುಗರ ಶಬ್ದ.

किलकलणे (ಕಿಲ್‌ಕಿಲಣೇ) ಕ್ರಿ. ಸ. ಶಬ್ದಮಾಡು, ನುಡಿ.

किलबिल (ಕಿಲ್‌ಬಿಲ್) ಸ್ತ್ರೀ. ಶಬ್ದ, ಸಪ್ಪಳ.

किल्मिष (ಕಿಲ್‌ಮಿಷ್) ನ. ಸಂದೇಹ, ಸೇಡು, ದ್ವೇಷ, ೨. ಹೊಲಸು.

किल्ला (ಕಿಲ್ಲಾ) ಪು. ಆರ. ಕೋಟೆ, ಕೊತ್ತಳ, ಭದ್ರ, ದುರ್ಗ.

किल्ली (ಕಿಲ್ಲೀ) ಸ್ತ್ರೀ. ಬೀಗದ ಕೈ, ಲಾ. ಯಶಸ್ಸಿನ ಸಾಧನ.

–फिरविणे (ಫಿರವಿಣೇ) ಕಿ. ಸ. ದೊಡ್ಡವರ ಕಡೆಯಿಂದ ಕಾರ್ಯ ಸಾಧಿಸು.

किंवा (ಕಿಂವಾ) ಕ್ರಿ. ವಿ. ಅಥವಾ.

किशोर (ಕಿಶೋರ) ವಿ. ಹುಡುಗ, ೨. ಪ್ರಾಯಕ್ಕೆ ಬಂದ.

किसणी (ಕಿಸಣೀ) ಸ್ತ್ರೀ. ಹೆರೆಯುವ ಮಣೆ.

किसणे (ಕಿಸಣೇ) ಕ್ರಿ. ಸ. (ಕೊಬ್ಬರಿ ಮುಂ.) ಹೆರೆ.

किसान (ಕಿಸಾನ್) ಪು. ಒಕ್ಕಲಿಗ, ಕೃಷಕ.

किळस (ಕಿಳಸ್) ಪು. ಜಿಗುಪ್ಸೆ, ಅಸಹ್ಯವಾಗುವಿಕೆ, ಹೇಸಿಗೆ.

–खोर (–ಖೋರ್) ವಿ. ಹೇಸಿಗೆ ಪಡುವವ.

–वाणा (–ವಾಣಾ) ವಿ. ಹೇಸಿಗೆ ಬರುವಂಥ.

कीं (ಕೀ) ನ. ಅ. ಅಥವಾ, ಇಲ್ಲವೆ, ೨. (ಇದೋ) ಅದೋ ?

कीट–क (ಕೀಟ್–ಕ) ಪು. ಸಂ. ಹುಳು.

कीड (ಕೀಡ್) ಸ್ತ್ರೀ. ಹುಳು, ೨ ಹುಳು ಹತ್ತುವಿಕೆ.

कीर (ಕೀರ್) ಪು. ಸಂ. ಗಿಳಿ.

कीर्तन (ಕೀರ್ತನ್) ಪು. ಸಂ. ಕೀರ್ತನೆ, ನಾಮಸಂಕೀರ್ತನೆ.

कीर्ती (ಕೀರ್ತಿ) ಸ್ತ್ರೀ. ಹೆಸರು, ಕೀರ್ತಿ.

–मान (–ಮಾನ್) ವಿ. ಕೀರ್ತಿವಂತ, ಹೆಸರಾದವ.

कीर्द (ಕೀರ್ದ) ಸ್ತ್ರೀ. ಫಾ. ಲೆಕ್ಕದ ಪುಸ್ತಕ, ಖಾತೆ ಕೀರ್ದಿ.

कील (ಕೀಲ್) ಪು. ಸಂ. ಅಣಿ, ಮೊಳೆ, ಗೂಟ.

कीव (ಕೀವ್) ಸ್ತ್ರೀ. ದಯೆ, ಕರುಣೆ.

कीस (ಕೀಸ್) ಪು.ಹೆರೆದ ಕೊಬ್ಬರಿ,ಸೌತೆಕಾಯಿ ಮುಂ.

–काढणे (–ಕಾಢಣೇ) ಕ್ರಿ. ಸ. ನಿರರ್ಥಕವಾಗಿ ಸಣ್ಣ ಮಾತಿನ ವಿಷಯದಲ್ಲಿ ಚರ್ಚೆ ಮಾಡುವಿಕೆ.

कुई (ಕುಈ) ಸ್ತ್ರೀ. ಚೀರಾಟ, ಒದರಾಟ ೨.ಕೂಗು.

कोल्हे– (ಕೋಲ್ಹೆ–) ಸ್ತ್ರೀ. ಸುಳ್ಳು ಕೂಗಾಟ, ಧೂರ್ತತನದ ಗೊಂದಲ.

कु – (ಕು) ಪ್ರತ್ಯಯ. ಸಂ. ಕೆಟ್ಟ, ವಿಪರೀತ.

कुकर्म (ಕುಕರ್ಮ) ಪು. ಸಂ. ಕೆಟ್ಟ ಕೆಲಸ.

कुकल्पना (ಕುಕಲ್ಪನಾ) ಪು. ಸಂ. ಕೆಟ್ಟ ಕಲ್ಪನೆ.

कुकीर्ती (ಕುಕೀರ್ತಿ) ಸ್ತ್ರೀ. ಸಂ. ಕೆಟ್ಟ ಹೆಸರು, ದುಷ್ಕೀರ್ತಿ.

कुंकुम (ಕುಂಕುಮ) ಸ್ತ್ರೀ. ಸಂ. ಕುಂಕುಮ.

–पत्रिका (–ಪತ್ರಿಕಾ) ಸ್ತ್ರೀ. ಮದುವೆ ಮುಂಜಿಯ ಔತಣ ಪತ್ರಿಕೆ.

कुंकू (ಕುಂಕೂ) ನ. ಕುಂಕುಮ, ಸೌಭಾಗ್ಯ.

कुंकोत्री (ಕುಂಕೋತ್ರಿ) ಸ್ತ್ರೀ. ಔತಣ ಪತ್ರಿಕೆ, ಮದುವೆಯ ಔತಣ.

कुक्कुट (ಕುಕ್ಕುಟ) ಪು. ಕೋಳಿ, ಹುಂಜು.

–पालन (–ಪಾಲನ್) ನ. ಕೋಳಿ ಸಾಕುವಿಕೆ, ಕೋಳಿ ವ್ಯಾಪಾರ.

कुग्राम (ಕುಗ್ರಾಮ) ನ. ಸಂ. ದೂರದಲ್ಲಿಯ, ಅನನುಕೂಲವಾದ ಹಳ್ಳಿ.

कुच (ಕುಚ) ಪು. ಮೊಲೆ, ಸ್ತನ.

कुचका (ಕುಚಕಾ) ವಿ. ಕೊಳೆತ, ಕೆಟ್ಟುಹೋದ. ೨ ಕೆಟ್ಟು ಮಾತನಾಡುವವ, ಕುತ್ಸಿತ ಸ್ವಭಾವದವ.

कुचकामी (ಕುಚಕಾಮೀ) ವಿ. ಕೆಲಸಕ್ಕೆ ಬಾರದ, ನಿರುಪಯುಕ್ತ.

कुचकुच (ಕುಚ್‌ಕುಚ್) ಸ್ತ್ರೀ. ಸದ್ದಿಲ್ಲದೆ ಮಾತನಾಡುವಿಕೆ. ೨ ಆಡಿಕೊಳ್ಳುವಿಕೆ. ೩ ಗುಪ್ತಮಾತು, ಟೀಕೆ.

**कुंचडे** (ಕುಂಚಡೇ) ನ. ಕ. ಕುಂಚಿಗೆ, ಕುಲಾಯಿ.

**कुंचला** (ಕುಂಚಲಾ) ಪು. ಬಣ್ಣಹಚ್ಚುವ ಕುಂಚ.

**कुचराई** (ಕುಚರಾಈ) ಸ್ತ್ರೀ. ವೈಗಳ್ಳತನ,ದುರ್ಲಕ್ಷ್ಯ.

**कुंचा** (ಕುಂಚಾ) ಪು. ಕುಂಚ, ಚಿತ್ರಕಾರನ ಕುಂಚ.

**कुचाळखोर** (ಕುಚಾಳ್‌ಖೋರ್) ವಿ. ಕುಚೋದ್ಯದ, ತುಂಟ.

**कुचाळी** (ಕುಚಾಳೀ) ಸ್ತ್ರೀ. ದೂರುವಿಕೆ, ಕೆಟ್ಟಸುದ್ದಿ ಹಬ್ಬಿಸುವಿಕೆ. ೨ ತುಂಟತನ, ಕುಚೋದ್ಯತನ.

**कुंची** (ಕುಂಚೀ) ಸ್ತ್ರೀ. ಕುಂಚಿಗೆ, ಕುಲಾಯಿ.

**कुचेष्टा** (ಕುಚೇಷ್ಟಾ) ಸ್ತ್ರೀ. ಕೆಟ್ಟಚೇಷ್ಟೆ, ಗೇಲಿ.

**कुचेष्टेखोर** (ಕುಚೇಷ್ಟೇಖೋರ್) ವಿ. ಗೇಲಿ ಮಾಡುವವ, ಸಿಟ್ಟುಬರುವಂತೆ ಚೇಷ್ಟೆಮಾಡುವವ.

**कुंज** (ಕುಂಜ) ಪು. ಸಂ. ಹೂಬನ, ಪುಷ್ಪಕುಂಜ.

**कुजकट–कुजट** (ಕುಜಕಟ್–ಕುಜಟ್) ವಿ. ಕೊಳೆತ, ನಾರುವ. ೨ ಕೆಟ್ಟ ಉದ್ದೇಶದ.

**कुजका** (ಕುಜಕಾ) ವಿ. ಕೊಳೆತ. ೨. ಕುತ್ಸಿತ.

**कुजणे** (ಕುಜಣೇ) ಕ್ರಿ. ಅ. ಕೊಳೆಯು, ನಾರು, ಕೊಳೆತುಹೋಗು. ೨ ವ್ಯರ್ಥವಾಗು, ಉಪಯೋಗವಿಲ್ಲದಾಗು.

**कुजबूज** (ಗುಜಬೂಜ) ಸ್ತ್ರೀ. ಸದ್ದಿಲ್ಲದೆ ಮಾತನಾಡುವಿಕೆ, ಆಡಿಕೊಳ್ಳುವಿಕೆ, ತಕರಾರು, ಕೆಟ್ಟಮಾತು.

**कुंजर** (ಕುಂಜರ್) ಪು. ಆನೆ, ಶ್ರೇಷ್ಠ ಪುರುಷ.

**कुंजरी** (ಕುಂಜರೀ) ಸ್ತ್ರೀ. ಸಂ. ಹೆಣ್ಣು ಆನೆ.

**कुटण** (ಕುಟಣ್) ನ. ಕುಟ್ಟುವಿಕೆ.

**कुंटण** (ಕುಂಟಣ) ಸ್ತ್ರೀ. ಕುಂಟಣಿ, ಕುಟ್ಟಣಿ.

**–खाना** (–ಖಾನಾ) ಪು. ವೇಶ್ಯಾಗೃಹ, ಸೂಳೆಯ ಮನೆ.

**कुटणे** (ಕುಟಣೇ) ಕ್ರಿ. ಸ. ಕುಟ್ಟು, ಪುಡಿಮಾಡು.

**कुटा** (ಕುಟಾ) ಪು. ಪುಡಿ, ಕುಟ್ಟ.

**कुटाई** (ಕುಟಾಈ) ಸ್ತ್ರೀ. ಕುಟ್ಟುವ ಕೂಲಿ.

**कुटाळ** (ಕುಟಾಳ್) ವಿ. ಕೆಟ್ಟಸುದ್ದಿ ಹುಟ್ಟಿಸುವ.

**–खोर** (–ಖೋರ) ವಿ. ದೂರಿಕೊಳ್ಳುವವ.

**कुटाळकी** (ಕುಟಾಳಕೀ) ಸ್ತ್ರೀ. ಆಡಿಕೊಳ್ಳುವಿಕೆ.

**कुटाळी** (ಕುಟಾಳೀ) ಸ್ತ್ರೀ. ಸುಳ್ಳು–ಕೆಟ್ಟ ಸುದ್ದಿ ಹಬ್ಬಿಸುವಿಕೆ.

**कुटिल** (ಕುಟಿಲ) ವಿ. ಸಂ. ಹೊಂಚುಹಾಕುವವ, ಕೇಡುಬಗೆಯುವವ, ಕುಟಿಲತಂತ್ರಮಾಡುವವ.

**कुटी** (ಕುಟೀ) ಸ್ತ್ರೀ. ಸಂ. ಗುಡಿಸಲ.

**कुंटीण** (ಕುಂಟೀಣ) ಸ್ತ್ರೀ. ಕುಟ್ಟಣಿ, ವೇಶ್ಯೆಯ ಸಲುವಾಗಿ ಗಿರಾಕಿ ತರುವವಳು.

**कुटीर** (ಕುಟೀರ) ನ. ಸಂ. ಗುಡಿಸಲ.

**कुटुंब** (ಕುಟುಂಬ್) ನ. ಸಂ. ಮನೆತನ,ಕುಟುಂಬ.

**–नियोजन** (–ನಿಯೋಜನ್) ನ. ಜನನ, ನಿಯಂತ್ರಣ.

**–वत्सल** (ವತ್ಸಲ) ವಿ. ಕುಟುಂಬದ ಸಲುವಾಗಿ ದುಡಿಯುವವ, ಮಕ್ಕಳು ಮರಿಗಳನ್ನು ಪ್ರೀತಿಸುವವ.

**कुटुंबिनी** (ಕುಟುಂಬಿನೀ) ಸ್ತ್ರೀ ಸಂ. ಹೆಂಡತಿ.

**कुटुंबी** (ಕುಟುಂಬೀ) ಪು. ಸಂ. ಗೃಹಸ್ಥಿಕೆ ಮಾಡುವವ.

**कुंठणे** (ಕುಂಠಣೇ) ಕ್ರಿ. ಅ. ತಡೆಯಾಗು, ನಿಂತು ಹೋಗು.

**वाढ–** (ವಾಢ್) ಕ್ರಿ. ಅ. ಬೆಳವಣಿಗೆ ನಿಲ್ಲು, ನಿಂತು ಹೋಗು.

**कुठार** (ಕುಟಾರ್) ನ. ಸಂ. ಕೊಡಲಿ, ಪರಶು.

**कुंठित** (ಕುಂಠಿತ) ವಿ. ತಡೆದುಹಾಕಿದ, ನಿಂತು ಹೋದ, ಮುಂದರಿಯಲಾರದ. ೨ ತೋಚಲಾರದ.

**कुठे** (ಕುಠೇ) ಕ್ರಿ. ವಿ. ಎಲ್ಲಿ?

**कुंड** (ಕುಂಡ) ನ. ಕೊಳ, ನಿಂತನೀರು, ಅಗ್ನಿಕುಂಡ.

**कुडकुडणे** (ಕುಡುಕಡಣೇ) ಕ್ರಿ. ಅ. (ಚಳಿಯಲ್ಲಿ, ಚಳಿಯಿಂದ) ನಡುಗು.

**कुडकुडीत** (ಕುಡಕುಡೀತ್) ವಿ. ಗರಗರಿಯಾದ, ತಿನ್ನಲಿಕ್ಕೆ ಹಗುರಾದ.

**कुडण** (ಕುಡಣ್) ನ. ಬೇಲಿ.

**कुडते** (ಕುಡತೇ) ನ. ಹಿಂ. ಅಂಗಿ, ಬನಿಯನ್.

**कुडबुडणे** (ಕುಡಬುಡಣೇ) ಕ್ರಿ. ಅ. ಕಾರಣವಿಲ್ಲದೆ ನಡುನಡುವೆ ಬರು.

**कुडबुडे** (ಕುಡಬುಡೇ) ನ. ಬುಡಬುಡಕನ ವಾದ್ಯ.

**कुडबुडचा जोशी** (ಕುಡಬುಡ್ಯಾ ಜೋಶಿ) ಪು. 'ಬಲವಾಗತೈತೆ' ಎನ್ನುವ ಬುಡಬುಡಿಕ.

**कुंडल** (ಕುಂಡಲ್) ನ. ಸಂ. ಕಿವಿಯ ಆಭರಣ. ೨. ಹಾವಿನ (ಮೈ) ಸುತ್ತು.

**कुंडली** (ಕುಂಡಲೀ) ಸ್ತ್ರೀ. ಜಾತಕ.

**कुंडा** (ಕುಂಡಾ) ಪು. ದೊಡ್ಡ ಬರಣಿ.

**कुडी** (ಕುಡೀ) ಸ್ತ್ರೀ. ಕಿವಿಯಲ್ಲಿಯ ಬುಗುಡಿ. ೨ ತುದಿ, ಕೊನೆ. ೩ ಮೈಕಟ್ಟು.

**कुंडी** (ಕುಂಡೀ) ಸ್ತ್ರೀ. ಸಸಿಗಳನ್ನು ಬೆಳೆಯಿಸುವ ಮಣ್ಣಿನ ಪಾತ್ರೆ. ಹೂವುಗಳನ್ನು ಹಾಕಿಡುವ ಪಾತ್ರೆ. ಫ್ಲಾವರ್ ಪಾಟ್.

**कुडे** (ಕುಡೇ) ನ. ಬುಗುಡೆ. ೨ ಕೇಡು ಬಯಸುವಿಕೆ. ೩ ಹೊಂಚು.

**कुढणे** (ಕುಢಣೇ) ಕ್ರಿ. ಅ. ಮನಸ್ಸಿನಲ್ಲಿ ಮರುಗು, ಶೋಕಿಸು.

**कुढा–कुढचा** (ಕುಢಾ –ಢ್ಯಾ) ವಿ. ವ್ಯಥೆಪಡುವವ, ವ್ಯಥಿತ.

**कुणकुण** (ಕುಣಕುಣ್) ಸ್ತ್ರೀ. ಜನರಾಡಿಕೊಳ್ಳುವ (ಗುಪ್ತ) ಮಾತು, ಕಿವಿಯಲ್ಲಿ ಹೇಳಿದ ಸುದ್ದಿ.

**कुणगा** (ಕುಣಗಾ) ಪು. ಹೂಳಿಟ್ಟ ಹಣ. ೨ ಗುಪ್ತ ಧನ. ೩ ಬತ್ತದ ಹಾಳೆಯ ಒಂದು ಭಾಗ.

**कुणबी** (ಕುಣಬೀ) ಪು. ಒಕ್ಕಲಿಗ, ಕುಳ, ರೈತ.

**कुतरओढ** (ಕುತರ್ಓಢ) ಸ್ತ್ರೀ. ಬಿಕ್ಕಟ್ಟು, ಕಠಿಣ ಪ್ರಸಂಗ.

**कुतरघाई** (ಕುತರ್‌ಘಾಈ) ಸ್ತ್ರೀ. ಉತಾವಳಿತನ, ಅನಾವಶ್ಯಕ ಲಗುಬಗೆ.

**कुतर्क** (ಕುತರ್ಕ) ಪು. ಸಂ. ಕೆಟ್ಟ ಆಲೋಚನೆ, ತಪ್ಪು ಕಲ್ಪನೆ.

**कुतूहल** (ಕುತೂಹಲ) ನ. ಸಂ. ಲವಲವಿಕೆ, ಕುತೂಹಲ.

**कुत्रा** (ಕುತ್ರಾ) ಪು. ನಾಯಿ.

**–कुत्र्याचे जिणे** (–ಕುತ್ರ್ಯಾಚೇಜಿಣೇ) ಸ್ತ್ರೀ. ಅಪಮಾನ ಸಹಿಸಿ ಬಾಳುವಿಕೆ.

**कुत्री** (ಕುತ್ರೀ) ಸ್ತ್ರೀ. ಹೆಣ್ಣು ನಾಯಿ. ೨ ನ. ಬಹುವಚನ. ನಾಯಿಗಳು. (ಏಕವಚನ. **कुत्रे**).

**कुत्सित** (ಕುತ್ಸಿತ) ವಿ. ಸಂ. ಕೆಟ್ಟ ಸ್ವಭಾವದ, ಕುತ್ಸಿತ.

**कुंतल** (ಕುಂತಲ) ಪು. ಸಂ. ಕೂದಲು. ೨ ಕುಂತಲ ದೇಶ.

**कुंथणे** (ಕುಂಥಣೇ) ಕ್ರಿ. ಅ. ತಿಣುಕು, ಶ್ರಮಪಡು, ಆಯಾಸಪಡು.

**कुंद** (ಕುಂದ್) ಪು. ಮಲ್ಲಿಗೆ.

**कुदकणे** (ಕುದಕಣೇ) ಕ್ರಿ. ಸ. ಥಳಿಸು.

**कुदणे** (ಕುದಣೇ) ಕ್ರಿ. ಅ. ಜಿಗಿ, ಹಾರು.

**कुदलणे** (ಕುದಲಣೇ) ಕ್ರಿ. ಸ. ಅಡಮುಠ್ಠತನದಿಂದ ಹತಾಳಿಸು, ದುರ್ಲಕ್ಷ್ಯಮಾಡಿ, ಮನಬಂದಂತೆ ಉಪಯೋಗಿಸು.

**कुदळ** (ಕುದಳ್) ಸ್ತ್ರೀ. ಸಂ. ಗುದ್ದಲಿ.

**कुदिन** (ಕುದಿನ್) ಪು. ಕೆಟ್ಟ ದಿವಸ.

**कुंदीकाम** (ಕುಂದೀಕಾಮ್) ನ. ನುಣುಪು ಮಾಡುವಿಕೆ, ಇಸ್ತ್ರಿ.

**कुंपण** (ಕುಂಪಣ) ನ. ಬೇಲಿ.

**कुपथ्य** (ಕುಪಥ್ಯ) ನ. ಸಂ. ಶರೀರಕ್ಕೆ ಹಾನಿಕರವಾದ ಆಹಾರ ಮು.ಗಳ ಸೇವನ.

**कुपा** (ಕುಪಾ) ಪು. ಕುಪ್ಪಿ, ಬೋತಲು, ಶೀಸೆ.

**कुपी** (ಕುಪೀ) ಪು. ಸಣ್ಣ ಕುಪ್ಪಿ, ಸಣ್ಣ ಬೋತಲು, ಬಾಟ್ಲಿ, ಶೀಸೆ.

**कुपुत्र** (ಕುಪುತ್ರ) ಪು. ಸಂ. ಮಾತುಕೇಳದ ಮಗ.

**कुबट** (ಕುಬಟ್) ವಿ. ನಾರುವ, ವಾಸನೆಬರುವ.

**कुबड** (ಕುಬಡ್) ನ. ಡೂಗು, ಡುಬ್ಬ.

**कुबडा–डचा** (ಕುಬಡಾ–ಡ್ಯಾ) ವಿ. ಡೂಗು ತೆಗೆಯುವವ, ಡುಬ್ಬತೆಗೆಯುವವ, ಮಣಿದು ನಡೆಯುವವ.

**कुबडी** (ಕುಬಡೀ) ಸ್ತ್ರೀ. ಕುಂಟನ ಊರುಗೋಲು, ಕಂಕುಳಕೋಲು.

**कुबलणे** (ಕುಬಲಣೇ) ಕ್ರಿ. ಸ. ಹೊಡೆ, ಬಡಿ, ಯಥೇಚ್ಛ ಥಳಿಸು.

**कुबुद्धि** (ಸ್ತ್ರೀ. ಸಂ. ಕೆಟ್ಟಬುದ್ಧಿ, ದುಷ್ಟಬುದ್ಧಿ. ವಿ. ಕೆಟ್ಟ ವಿಚಾರವುಳ್ಳವ.

**कुबेर** (ಕುಬೇರ) ಪು. ಧನಪತಿ. ೨. ಬಹುದೊಡ್ಡ

**कुब्ज** (ಕುಬ್ಜ) ಸ್ತ್ರೀ. ಡಬ್ಬುಹಾಯಿಸಿ ನಡೆಯುವವ. ಡೂಗು ತೆಗೆಯುವವ, ಮಣಿದವ.

**कुंभ** (ಕುಂಭ) ಪು. ಸಂ. ನೀರಿನ ಕೊಡ, ಹರಿವೆ. ೨. ಕುಂಭರಾಶಿ.

**कुंभकार** (ಕುಂಭಕಾರ) ಪು. ಸಂ. ಕುಂಬಾರ.

**कुभांड** (ಕುಭಾಂಡ್) ನ. ಸುಳ್ಳು ದೋಷಾರೋಪಣೆ.

**कुंभार** (ಕುಂಭಾರ) ಪು. ಕುಂಬಾರ.

**कुंभारीण** (ಕುಂಭಾರೀಣ) ಸ್ತ್ರೀ. ಕುಂಬಾರನ ಹೆಂಡತಿ. ಕುಂಬಾರ್ತಿ.

**कुमक** (ಕುಮಕ್) ಸ್ತ್ರೀ. ತು. ದಂಡಿಗೆ ಕೊಡುವ ಪುಷ್ಟಿ, ಹೊಸ ಸೈನ್ಯ. ೨ ಸಹಾಯ, ಪೋಷಣ.

**कुमकणे** (ಕುಮಕಣೇ) ಕ್ರಿ. ಸ. ಹೊಡೆ, ಬಡಿ, ಥಳಿಸು.

**कुमार** (ಕುಮಾರ) ಪು. ಸ. ಸಣ್ಣಹುಡುಗ, ೨.ಮಗ.

**कुमारी** (ಕುಮಾರೀ) ಸ್ತ್ರೀ. ಸಣ್ಣಹುಡುಗಿ. ೨. ಮದುವೆಯಾಗದ ಹೆಣ್ಣು. ೩ ಲೋಳಿಸರ.

**कुमार्ग** (ಕುಮಾರ್ಗ) ಸ್ತ್ರೀ. ಸಂ. ಕೆಟ್ಟ ನಡತೆ.

**कुमुद** (ಕುಮುದ್) ನ. ಸಂ. ಬಿಳಿಯ ತಾವರೆ, ಕಮಲ.

**कुमुदिनी** (ಕುಮುದಿನೀ) ಸ್ತ್ರೀ. ಸಂ. ತಾವರೆ

**कुयोग** (ಕುಯೋಗ) ಪು. ಸಂ. ರಾಶಿ, ಗ್ರಹಗಳ ಪ್ರತಿಕೂಲ ಕೂಟ, ಅಶುಭ ಪ್ರಸಂಗ.

**कुरकुर** (ಕುರಕುರ್) ಸ್ತ್ರೀ. ತಕರಾರು,ಅಸಮಾಧಾನ.

**कुरकुरणे** (ಕುರಕುರಣೇ) ಕ್ರಿ. ಅ. ತಕರಾರುಮಾಡು, ಅಸಂತೋಷವನ್ನು ವ್ಯಕ್ತಪಡಿಸು.

**कुरकुरीत** (ಕುರಕುರೀತ್) ವಿ. ಗರಿಗರಿಯಾದ, ತಿನ್ನಲಿಕ್ಕೆ ಹಗುರಾದ.

**कुरंग** (ಕುರಂಗ್) ಪು. ಸ. ಜಿಂಕೆ, ಎರಳೆ.

**–नयना** (–ನಯನಾ) ಜಿಂಕೆಯಂತಹ ಕಣ್ಣುಳ್ಳವಳು, ವಿಶಾಲಾಕ್ಷಿ.

**कुरघोडी** (ಕುರಘೋಡೀ) ಸ್ತ್ರೀ. ಒಂದು ಆಟ, ಕಪ್ಪೆ ಕುಪ್ಪಳ ಆಟ.

**–करणे** (– ಕರಣೇ) ಕ್ರಿ. ಸ. ಮೈಮೇಲೆ ಏರಿ ಹೋಗು, ಜಗಳಮಾಡು, ಅಪಮಾನ ಮಾಡು, ಅಪಾಯಮಾಡು.

**कुरतडणे** (ಕುರತಡಣೇ) ಕ್ರಿ. ಸ. ಕೆದರು, ಕೆರೆ, ಚಿವುಟು, (ಇಲಿ.ಮುಂ.), ಕಚ್ಚು, ತಿಂದುಹಾಕು. ೨ ಹಾಳುಮಾಡು.

**कुरण** (ಕುರಣ) ನ. ಮೇಯುವ ಭೂಮಿ, ಗದ್ದೆ.

**कुरबुर** (ಕುರಬುರ್) ಸ್ತ್ರೀ. ತಕರಾರು, ಜಗಳ, ಅಸಮಾಧಾನ.

**कुरबुरणे** (ಕುರಬುರಣೇ) ಕ್ರಿ. ಅ. ತಕರಾರುಮಾಡು, ಅಸಮಾಧಾನವನ್ನು ವ್ಯಕ್ತಪಡಿಸು.

**कुरमुरा** (ಕುರಮುರಾ) ಪು. ಚುರಮುರಿ, ಕಡಲೆ ಕಾಯಿ.

**कुरवंडी** (ಕುರವಂಡೀ) ಸ್ತ್ರೀ. ದೇವರಿಗೆ ಅರ್ಪಿಸುವಿಕೆ, ದೇವರ ಮುಂದೆ ನಿವಾಳಿಸುವಿಕೆ. ೨ ಲಾ. ಭಕ್ತಿಯನ್ನು ತೋರುವಿಕೆ.

**–करणे** (–ಕರಣೇ) ಕ್ರಿ. ಸ. ಆತ್ಮಾರ್ಪಣ ಮಾಡು.

**कुरवाळणे** (ಕುರವಾಳಣೇ) ಕ್ರಿ. ಸ. ಅಪ್ಪಿಕೊ, ಆಲಿಂಗಿಸು. ೨. ಪ್ರೀತಿಯಿಂದ ಕೈಯಾಡಿಸು, ಬೆನ್ನು ಚಪ್ಪರಿಸು.

**कुरळा** (ಕುರಳಾ) ವಿ. ಉಂಗುರದಂಥ (ಕೂದಲು)

**कुराण** (ಕುರಾಣ್) ನ. ಅರ. ಕುರಾಣ ಗ್ರಂಥ.

**कुरापत** (ಕುರಾಪತ್) ಸ್ತ್ರೀ. ಜಗಳಕ್ಕೆ ಆರಂಭ. ೨. ಚಿತಾವಣಿ.

**कुरूंग** (ಕುರುಂಗ್) ಪು. ಕಣ್ಣುಗಳ ತುದಿಯಲ್ಲಿಯ ಕೆಂಪು ಬಣ್ಣ.

**कुरूप** (ಕುರೂಪ್) ನ. ಕಾಣಿಸಲಿಕ್ಕೆ ಅಪ್ರಿಯವಾದ ರೂಪ. ೨. ವಿ. ಕಾಣಿಸಲಿಕ್ಕೆ ಕಾಡು, ಕುರೂಪ.

**कुर्रा** (ಕುರ್ರಾ) ಪು. ಅರ. ದಿಮಾಕ, ಡೌಲು.

**कुऱ्हाड** (ಕುರ್ಹಾಡ್) ಸ್ತ್ರೀ. ಕೊಡಲಿ, ಪರಶು.

**कुल** (ಕುಲ) ನ. ಸಂ. ಕುಲ, ತಂಡ, ಜಾತಿ. ೨. ವಿ. ಅರ. ಎಲ್ಲ, ಕ್ರಿ, ವಿ. ಒಟ್ಟು.

**–अख्तियार** (–ಅಖ್ತಿಯಾರ್) ವಿ. ಸಂಪೂರ್ಣ ಅಧಿಕಾರ. ಱ. ಒಟ್ಟು ಮುಖ್ತಾರ.

**कुलकर्णी** (ಕುಲಕರ್ಣೀ) ಪು. ಶಾನುಭೋಗ, ಕರಣಂ, ಕುಲಕರಣಿ.

**कुलंगडे** (ಕುಲಂಗಡೇ) ನ. ಒಳಮಾತು, ಗುಪ್ತಸಂಗತಿ. ೨. ಅಡಚಣಿ, ವ್ಯಾಜ್ಯ. ೩. ಕುಟಿಲ ವ್ಯವಹಾರ.

**कुलगुरू** (ಕುಲಗುರು) ಪು. ಸಂ. ಕುಲಪುರೋಹಿತ ವಿಶ್ವವಿದ್ಯಾಲಯದ ಉಪಾಧ್ಯಕ್ಷ,ವೈಸ್ ಛಾನ್ಸೆಲರ್.

**कुलंगे** (ಕುಲಂಗೇ) ಸಣ್ಣ ಮತ್ತು ಕೊಬ್ಬಿದ, ಚಿಕ್ಕ ಮತ್ತು ಮಾಟ.

**कुलटा** (ಕುಲಟಾ) ಸ್ತ್ರೀ. ಸಂ. ವ್ಯಭಿಚಾರಿಣಿ, ಜಾರಿಣಿ, ಹಾದರಗಿತ್ತಿ,

**कुलदीपक** (ಕುಲದೀಪಕ್) ಪು. ಸಂ. ಕುಲಕ್ಕೆ ಕೀರ್ತಿ ತರುವವ.

**कुलदेवता** (ಕುಲದೇವತಾ) ಸ್ತ್ರೀ. ಸಂ. ಕುಲದೇವತೆ.

**कुलदैवत** (ಕುಲದೈವತ್) ನ. ಕುಲದೇವತೆ.

**कुलनारी** (ಕುಲನಾರೀ) ಸ್ತ್ರೀ. ಕುಲೀನ ಹೆಂಗಸು, ಸಂಭಾವಿತ ಸ್ತ್ರೀ.

**कुलनाश** (ಕುಲನಾಶ) ಪು. ಸಂ. ಕುಲ ಹಾಳಾಗುವಿಕೆ. ೨. ವಿ. ಕುಲವನ್ನು ಹಾಳುಮಾಡುವ ಮಗ.

**कुलपति** (ಕುಲಪತಿ) ಪು. ಸಂ. ವಿಶ್ವವಿದ್ಯಾಲಯದ ಅಧಿಪತಿ, ಛಾನ್ಸೆಲರ್.

**कुलपरंपरा** (ಕುಲಪರಂಪರಾ) ಪು. ಕುಲದ, ಜಾತಿಯ ರೂಢಿ.

**कुलपरंपरागत** (ಕುಲಪರಂಪರಾಗತ್) ವಿ. ಸಂ. ಕುಲದಲ್ಲಿ, ಜಾತಿಯಲ್ಲಿ ನಡೆದು ಬಂದ.

**कुलपणे** (ಕುಲಪಣೇ) ಕ್ರಿ. ಅ. ಕುಂಟು.

**कुलपी–फी–** (ಕುಲಫೀ) ಸ್ತ್ರೀ. ಮಂಜುಗಟ್ಟಿದ ಹಾಲಿನ ತಿನಸು.

**कुलपी गोळा** (ಕುಲಪೀಗೋಳಾ) ಪು. ಅ+ಫಾ, ಸ್ಫೋಟಕ ಗುಂಡು, ಬಾಂಬ್.

**कुलपुरुष** (ಕುಲಪುರುಷ) ಪು. ಸಂ. ಮೂಲಪುರುಷ.
**कुलभूषण** (ಕುಲಭೂಷಣ) ನ. ಕುಲಕ್ಕೆಕೀರ್ತಿ ತರುವವ.
**कुलमंत्री** (ಕುಲಮಂತ್ರೀ) ಪು. ಮಠಪತಿ, ವಿಶ್ವವಿದ್ಯಾನಿಲಯಾಧ್ಯಕ್ಷ.
**कुलमर्यादा** (ಕುಲಮರ್ಯಾದಾ) ಸ್ತ್ರೀ. ಸಂ. ಜಾತಿಯಲ್ಲಿಯ ಮರ್ಯಾದೆ, ಕುಟುಂಬದ ಸನ್ಮಾನ–ಮರ್ಯಾದೆ.
**कुलमुख्त्यार** (ಕುಲಮುಖ್ತ್ಯಾರ್) ಪು. ಅರ. ಪೂರ್ಣಾಧಿಕೃತ. ಎಲ್ಲ ಅಧಿಕಾರಗಳನ್ನು ಪಡೆದವ.
**कुलरीती** (ಕುಲರೀತೀ) ಸ್ತ್ರಿ. ಕುಟುಂಬದ ಪದ್ಧತಿ, ರೂಢಿ.
**कुलवधू** (ಕುಲವಧೂ) ಸ್ತ್ರೀ. ಮರ್ಯಾದೆಯುಳ್ಳ ಕುಲದಲ್ಲಿಯ ವಿವಾಹಿತೆ, (ಸೊಸೆ)
**कुलशासक** (ಕುಲಶಾಸಕ) ಪು. ಮಠ, ವಿಶ್ವವಿದ್ಯಾನಿಲಯದ ಪೇಲಾಧಿಕಾರಿ, ಮೇಲ್ವಿಚಾರಕ.
**कुलसचिव** (ಕುಲಸಚಿವ) ಪು. ಮಠ, ವಿಶ್ವವಿದ್ಯಾನಿಲಯದ ವ್ಯವಸ್ಥಾಪಕ, ರಜಿಸ್ಟ್ರಾರ್.
**कुलस्वामिनी** (ಕುಲಸ್ವಾಮಿನೀ) ಸ್ತ್ರೀ. ಸಂ. ಕುಲದೇವತೆ.
**कुलहीन** (ಕುಲಹೀನ) ವಿ. ಸಂ. ಅಕುಲೀನ, ಜಾತಿಗೆಟ್ಟ.
**कुलक्षय** (ಕುಲಕ್ಷಯ) ಪು. ಸಂ. ವಂಶನಾಶ, ಮನೆಹಾಳು.
**कुलांगार** (ಕುಲಾಂಗಾರ್) ಪು. ಸಂ. ಕುಲಕ್ಕೆ ಅಪಕೀರ್ತಿಯನ್ನು ತರುವವ.
**कुलाचार** (ಕುಲಾಚಾರ್) ಪು. ಸಂ. ಕುಲದಲ್ಲಿಯ ಸಂಪ್ರದಾಯ, ರೂಢಿ.
**कुलाल** (ಕುಲಾಲ್) ಪು. ಸಂ. ಕುಂಬಾರ.
**कुलीन** (ಕುಲೀನ) ವಿ. ಒಳ್ಳೆಯ ನಡತೆಯ, ಮರ್ಯಾದಸ್ಥ.
**कुलुंगा** (ಕುಲಂಗಾ. ವಿ. ಚಿಕ್ಕ ಮತ್ತು ಮಾಟ, ಪುಟ್ಟ ಹಾಗೂ ಕೊಬ್ಬಿದ.
**कुलूप** (ಕುಲೂಪ್) ನ. ಅರ. ಬೀಗ, ಕೀಲಿ,
**कुलोपाध्याय** (ಕುಲೋಪಾಧ್ಯಾಯ) ಪು. ಸಂ. ಕುಲಪುರೋಹಿತ.
**कुवत** (ಕುವತ್) ಸ್ತ್ರೀ. ಅರ. ಶಕ್ತಿ, ಸಾಮರ್ಥ್ಯ ಕಸುವು
**कुंवर** (ಕುಂವರ್) ಪು. ಕುಮಾರ, ರಾಜಪುತ್ರ.
**कुंवार** (ಕುಂವಾರ್). ಸ್ತ್ರೀ. ಕುಮಾರೀ, ಅವಿವಾಹಿತ ಹುಡುಗಿ.
**कुवासना** (ಕುವಾಸನಾ) ಸ್ತ್ರೀ. ಸಂ. ಕೆಟ್ಟ ಇಚ್ಛೆ,
**कुविद्या** (ಕುವಿದ್ಯಾ) ಸ್ತ್ರೀ. ಮಾಟ, ಮೋಸಮುಂತಾದ ಕುಟಿಲತಂತ್ರ.
**कुवेळ** (ಕುವೇಳ್) ಸ್ತ್ರೀ. ಅಶುಭ ಕಾಲ, ಅಯೋಗ್ಯ ಕಾಲ.
**कुश** (ಕುಶ) ಪು. ಸಂ. ಕುಶ, ದರ್ಭ, ಪವಿತ್ರ ತೃಣ.
**कुशब्द** (ಕುಶಬ್ದ) ಪು. ಸಂ. ದೂಷಣೆ, ನಿಂದೆ, ಕೆಟ್ಟ ಮಾತು, ಬೈಗಳು.
**कुशल** (ಕುಶಲ್ ವಿ. ನಿಪುಣ, ಜಾಣ. ೨ ನ. ಕುಶಲ, ಕ್ಷೇಮ.
**–प्रश्न** (–ಪ್ರಶ್ನ) ಪು. ಅಭಿವಾದನ, ಕ್ಷೇಮಕುಶಲ ವೃತ್ತಾಂತವನ್ನು ಕೇಳುವಿಕೆ.
**कुशाग्र** (ಕುಶಾಗ್ರ) ವಿ. ಸಂ. ಚುರುಕು, ಜಾಣ.
**–बुद्धी** (–ಬುದ್ಧೀ) ಪು. ಚುರುಕುತನ, ಜಾಣತನ.
**कुष्ठ** (ಕುಷ್ಠ) ನ. ಸಂ. ಕುಷ್ಠರೋಗ.
**कुष्ठी** (ಕುಷ್ಠೀ) ವಿ. ಸಂ. ಕುಷ್ಠರೋಗವುಳ್ಳ.
**कुसरकणे** (ಕುಸಕರಣೇ) ಕ್ರಿ. ಸ. ಕಿವುಚು, ಪುಡಿಮಾಡು, ಹಿಚುಕು.
**कुसंग** (ಕುಸಂಗ್ ಪು. ಸಂ. ಕೆಟ್ಟ ಸಹವಾಸ, ಕೆಟ್ಟ ಗೆಳೆತನ.
**कुसंतान** (ಕುಸಂತಾನ) ನ. ಸಂ. ಕೆಟ್ಟ ಸಂತತಿ.
**कुसर** (ಕುಸರ್) ಸ್ತ್ರೀ. ಕಲಾತ್ಮಕ ಆಕೃತಿ. ೨. ಕೌಶಲ್ಯ. ೩. ಮಲ್ಲಿಗೆಯ ಒಂದು ಜಾತಿ.
**कुसरूड** (ಕುಸರೂಡ್) ಪು. ಕಂಬಳಿ ಹುಳು.
**कुसवा–कुसा** (ಕುಸುವಾ–ಕುಸಾ) ಪು. ಗರ್ಭ.
**कुसळ** (ಕುಸಳ್)ನ. ಕಡ್ಡಿ, ಮುಳ್ಳು, ಸಿಬರು.
**कुसुंबा** (ಕುಸುಂಬಾ)ಪು. ಕುಸುಬೆಯ ಒಣ ಹೂವು. ೨. ಆ ಬಣ್ಣ.
**कुसुम** (ಕುಸುಮ್) ನ. ಹೂ,ಪುಷ್ಪ.
**कुस्ती** (ಕುಸ್ತೀ) ಸ್ತ್ರೀ. ಫಾ. ಮಲ್ಲಯುದ್ಧ, ಕುಸ್ತಿ.
**कुळव** (ಕುಳವ್) ಪು. ಕುಂಟೆ, ಹಲುವೆ.
**कुळवंत** (ಕುಳವಂತ್) ವಿ. ಕುಲಶೀಲ, ಕುಲೀನ.
**कुळी** (ಕುಳೀ) ಸ್ತ್ರೀ. ಕುಟುಂಬ, ಕುಲ, ಕುಲವೃತ್ತ.
**जात–** (ಜಾತ್–) ಸ್ತ್ರೀ. ಕುಲಸಂಬಂಧ, ಕುಲವೃತ್ತ.
**कुक्षि** (ಕುಕ್ಷಿ) ಪು. ಸ್ತ್ರೀ. ಸಂ. ಮಗ್ಗಲು, ಬದಿ, ೨. ಗರ್ಭ. ಹೊಟ್ಟೆ.
**कूच** (ಕೂಚ್) ಸ್ತ್ರೀ. ಹಿಂ. ಪಯಣ, ಪ್ರಸ್ಥಾನ. ೨. ಸೈನಿಕರ ಮುನ್ನಡೆ, ಮಾರ್ಚಿಂಗ್.
**आगे–** (ಆಗೇ–) ಸ್ತ್ರೀ. ಮುನ್ನಡೆ, ಪ್ರಗತಿ.

**कूजन** (ಕೂಜನ್) ನ. ಸಂ. ಪ್ರೇಮಾಲಾಪ. ೨. ಪಕ್ಷಿಗಳ ಶಬ್ದ, ಪಾರಿವಾಳದ ಹುಂಕಾರ. ೩. ಕೋಗಿಲೆಯ ಧ್ವನಿ.

**कूट** (ಕೂಟ) ನ. ಸಂದೇಹ, ಸಮಸ್ಯೆ, ಬಿಕ್ಕಟ್ಟು.
**–प्रश्न** (–ಪ್ರಶ್ನ) ಬಿ. ಬಿಕ್ಕಟ್ಟಿನ ಪ್ರಸಂಗ, ಗಹನ ವಿಷಯ.

**कूड** (ಕೂಡ್) ಸ್ತ್ರೀ. ವೈಕಟ್ಟು.

**कूप** (ಕೂಪ್) ಪು. ಬಾವಿ.
**शौच–** (ಶೌಚ–) ಪು. ಪಾಯಖಾನೆ, ಕಕ್ಕಸ.
**–मंडूक** (–ಮಂಡೂಕ್) ವಿ. ಸಂಕುಚಿತ ದೃಷ್ಟಿಯುಳ್ಳವ,

**कूर्म** (ಕೂರ್ಮ) ಪು. ಆಮೆ, ಆವೆ.

**कूस** (ಕೂಸ್) ಸ್ತ್ರೀ. ಮಗ್ಗಲು ಬದಿ. ೨. ಕಂಕುಳ. ೩. ಗರ್ಭಾಶಯ.

**कूळ** (ಕೂಳ್) ನ. ಕುಲ, ಕುಟುಂಬ. ೨. ರೈತ, ಆಸಾಮಿ. ೩. ಸಾಲತೆಗೆದು ಕೊಂಡವ. ೪. ಗಿರಾಕಿ, ಪಕ್ಷ

**कृत** (ಕೃತ) ವಿ. ಸಂ. ಮಾಡಿದ, ರಚಿಸಿದ.
**–कृत्य** (–ಕೃತ್ಯ) ಧನ್ಯ ಕೃತಾರ್ಥ.

**कृतघ्न** (ಕೃತಘ್ನ) ವಿ.–ಸಂ. ಉಪಕಾರ ಮರೆಯುವವ ಉಪಕಾರವನ್ನು ದುರ್ಲಕ್ಷಿಸುವವ.

**कृतनिश्चय** (ಗೃತ ನಿಶ್ಚಯ) ವಿ. ಸಂ. ನಿಶ್ಚಯ ಮಾಡಿದವ.

**कृतसंकल्प** (ಕೃತಸಂಕಲ್ಪ) ವಿ. ಸಂ. ಸಂಕಲ್ಪ ಮಾಡಿದವ, ನಿಶ್ಚಯಿಸಿಕೊಂಡವ.

**कृतज्ञ** (ಕೃತಜ್ಞ) ವಿ. ಉಪಕಾರ ಸ್ಮರಿಸುವವ, ಉಪಕಾರ ಕರ್ತನನ್ನು ಮನ್ನಿಸುವವ.

**कृतज्ञता** (ಕೃತಜ್ಞತಾ) ಸ್ತ್ರೀ. ಸಂ. ಉಪಕಾರ ನೆನೆಸುವಿಕೆ.

**कृतांत** (ಕೃತಾಂತ್) ಪು. ಸಂ. ಯಮ ದುರ್ದೈವ.

**कृतार्थ** (ಕೃತಾರ್ಥ) ವಿ. ಸಂ. ಉದ್ದಿಷ್ಟವನ್ನು ಈಡೇರಿಸಿಕೊಂಡವ.

**कृति** (ಕೃತಿ) ಸ್ತ್ರೀ. ಸಂ. ಕರ್ಮ, ಕೆಲಸ.

**कृत्तिका** (ಕೃತ್ತಿಕಾ) ಸ್ತ್ರೀ. ಕೃತ್ತಿಕಾ ನಕ್ಷತ್ರ.

**कृत्य** (ಕೃತ್ಯ) ನ. ಕೆಲಸ.
**–भूमिति** (–ಭೂಮಿತಿ) ಸ್ತ್ರೀ. ಪ್ರಯೋಗಗತ ಭೂಮಿತಿ.

**कृत्या** (ಕೃತ್ಯಾ) ಸ್ತ್ರೀ. ಸಂ. ಮಾಟಮಾಡುವಿಕೆ, ಮಂತ್ರ, ಮಾಯ. ೨. ಮಾಟಗಾತಿ.

**कृत्रिम** (ಕೃತ್ರಿಮ) ವಿ. ಸಂ. ಅಸ್ವಾಭಾವಿಕ, ಹುಟ್ಟಿಸಿದ, ಕೈಯಿಂದಮಾಡಿದ, ನಕಲೀ, ಕೃತಕ.

**कृपण** (ಕೃಪಣ) ಪು. ಸಂ. ವಿ. ಜಿಬುಟ, ಜೀನ.

**कृपा** (ಕೃಪಾ) ಸ್ತ್ರೀ. ಸಂ. ದಯೆ.
**–कटाक्ष** (–ಕಟಾಕ್ಷ) ಪು. ದಯೆಯ ದೃಷ್ಟಿ.

**कृपालु–ळू** (ಕೃಪಾಲು–ಳು) ವಿ. ಸಂ. ದಯೆಯುಳ್ಳವ.

**कृपावंत** (ಕೃಪಾವಂತ್) ವಿ. ಸಂ. ದಯೆಯುಳವ.

**कृमि** (ಕೃಮಿ) ನ. ಸಂ. ಹುಳು, ಕ್ರಿಮಿ.

**कृश** (ಕೃಶ) ವಿ. ಸಂ. ಸೀರ, ಬಡಕ, ತೆಳುವಾದ, ಬಡಕಲಾದ.

**कृशांगी** (ಕೃಶಾಂಗೀ) ಸ್ತ್ರೀ. ಸಂ. ಸುಕುಮಾರ, ವೈಯುಳ್ಳವಳು.

**कृषानु–कृषानन** (ಕೃಷಾನು–ಕೃಶಾನನ) ನ. ಅಗ್ನಿ, ಬೆಂಕಿ.

**कृषिकर्म** (ಕೃಷಿಕರ್ಮ) ನ. ಸಂ. ಒಕ್ಕಲುತನ.

**कृषिक** (ಕೃಷಿಕ) ಪು. ಸಂ. ಒಕ್ಕಲಿಗ.

**कृषिक्षेत्र** (ಕೃಷಿಕ್ಷೇತ್ರ) ನ. ಸಂ. ಸಾಗುವಮಾಡಿದಭೂಮಿ.

**कृष्ण** (ಕೃಷ್ಣ) ವಿ. ಸಂ. ಕಪ್ಪು. ೨. ಕೆಟ್ಟ.
**–कृत्य** (–ಕೃತ್ಯ) ನ. ಕೆಟ್ಟ ಕೆಲಸ.
**–तुळस** (–ತುಳಸ್) ಸ್ತ್ರೀ, ಕಪ್ಪು ತುಳಸಿ-ಶಿ.
**–पक्ष** (–ಪಕ್ಷ) ಪು. ಬಹುಳ, ವದ್ಯ.
**–मृग** (–ಮೃಗ) ಪು. ಕರಿಯ ಜಿಂಕೆ.

**कृष्णाजिन** (ಕೃಷ್ಣಾಜಿನ) ನ. ಸಂ. ಮೃಗ ಚರ್ಮ, ಚಿಗರೆಯ ಚರ್ಮ, 'ಕೃಷ್ಣಾಂಜನ'

**क्लृप्ति** (ಕ್ಲೃಪ್ತಿ) ಸ್ತ್ರೀ. ಸಂ. ಹೊಂಚು, ಒಳಸಂಚು. ೨. ಯುಕ್ತಿ, ಉಪಾಯ. ೩. ಕಲ್ಪನೆ, ಹೊಸ ತಂತ್ರ.

**केकटणे** (ಕೆಕಟಣೇ) ಕ್ರಿ. ಅ. ಹಾಹೂ ಎಂದು ಸಪ್ಪಳ ಮಾಡು. ೨. ಸಣ್ಣಮಕ್ಕಳ ಶಬ್ದ. ೩. ಹಾಸ್ಯ.

**केका** (ಕೇಕಾ) ಸ್ತ್ರೀ. ಸಂ. ನವಿಲಿನ ಕೂಗು. ಸುಮಧುರ ಶಬ್ದ.

**केकावली** (ಕೇಕಾವಲೀ) ಸ್ತ್ರೀ. ಮೋರೋಪಂತ್ (ಮಯೂರ ಪಂಡಿತ) ನ ಪ್ರಸಿದ್ಧ ಕವನ.

**केकी** (ಕೇಕೀ) ಸ್ತ್ರೀ. ಸಂ. ನವಿಲು.

**केतकी** (ಕೇತಕೀ) ಸ್ತ್ರೀ. ಸಂ. ಕೇದಿಗೆ, ಕೇತಕಿ.

**केतु** (ಕೇತು) ಪು. ೧. ಗ್ರಹ ವಿಶೇಷ. ೨. ಒಬ್ಬ ಅಸುರ. ೩. ಧ್ವಜ, ಪತಾಕೆ.

**केन्द्र** (ಕೇಂದ್ರ) ನ. ಪು. ಮಧ್ಯದೇಶ, ಮುಖ್ಯಸ್ಥಾನ, ಕೇಂದ್ರ.

**केन्द्रीय** (ಕೇಂದ್ರೀಯ) ವಿ. ಸಂ. ಮಧ್ಯವರ್ತಿ, ಮೇಲಿನ, ಕೇಂದ್ರದ.

**केधवा** (ಕೇಧವಾ) ಕ್ರಿ. ವಿ. ಹ. ಮ. ಹೇಗೆ? ಯಾವ ಬಗೆಯಿಂದ ?

**केंबर** (ಕೇಂಬರ) ನ. ನೊರಜು.

**केंबळ** (ಕೇಂಬಳ್) ಪು. ಕೆಂಪಾದ, ದಟ್ಟಹುಲ್ಲು.

**केर** (ಕೇರ) ಪು. ಕಸ, ಕಸಕಡ್ಡಿ, ಹೊಲಸು, ಮಲ. ೨.(ಲಾ) ನಿಷ್ಪ್ರಯೋಜನವಾದ ವಸ್ತು. ಅಸ್ತಾವ್ಯಸ್ತಬಿದ್ದುಕೊಂಡ ಸಾಮಾನ.

**–कचरा** (–ಕಚರಾ) ಪು. ಕಸ, ಹೊಲಸು, ಕೊಳೆ.

**–पाणी** (–ಪಾಣೀ) ನ. ಮನೆಯಲ್ಲಿಯ ಹೆಂಗಸರ ನಿತ್ಯಕರ್ಮ, ಕಸಮುಸುರೆ.

**–सुणी** (–ಸುಣೀ) ಸ್ತ್ರೀ. ಕಸಬರಿಗೆ.

**केलि** (ಕೇಲಿ) ಸ್ತ್ರೀ. ಸಂ. ಪ್ರಿಯಾರಾಧನೆ, ಕಾಮ ಕ್ರೀಡೆ.

**केवल–ळ** (ಕೇವಲ–ಳ) ಕ್ರಿ. ವಿ. ಮಾತ್ರ, ಕೇವಲ, ಬರಿ.

**केविलवाणा** (ಕೇವಿಲವಾಣಾ) ವಿ. ಕನಿಕರ ಹುಟ್ಟಿಸುವ.

**केवि** (ಕೇವಿ) ಕ್ರಿ. ವಿ. ಹೇಗೆ, ಯಾವರೀತಿಯಿಂದ.

**केव्हां** (ಕೇಂವ್ಹಾ) ಕ್ರಿ. ವಿ. ಯಾವಾಗ, ಎಂದು, ಎಂದಿಗೆ.

**केव्हांच** (ಕೇಂವ್ಹಾಚ್) ಕ್ರಿ. ವಿ. ಈಗಾಗಲೇ, ಯಾವಾಗಲೋ, ಎಂದೋ.

**केशर** (ಕೇಶರ್) ನ. ಸಂ. ಕೇಸರಿ.

**केशरी** ಕೇಶರೀ) ವಿ. ಸಂ. ಕೇಸರಿ ಬಣ್ಣದ.

**केशवर्धक** (ಕೇಶವರ್ಧಕ್) ವಿ. ಕೂದಲು ಬೆಳೆಸುವಂಥ (ಔಷಧಿ).

**केशाकर्षण** (ಕೇಶಾಕರ್ಷಣ) ನ. ಸಂ. ಎಳೆಯಿಂದ ನೀರು, ಎಣ್ಣೆ ಮುಂತಾದವು ಮೇಲೆ ಏರುವ ಕ್ರಿಯೆ.

**केसर** (ಕೇಸರ) ಪು. ಸ. ಹೂವಿನ ಕೇಸರ, ೨ ಸಿಂಹದ ಆಯಾಲು.

**केसरी** (ಕೇಸರೀ) ಪು. ಸಂ. ಸಿಂಹ, ವೀರ.

**केसाळ** (ಕೇಸಾಳ್) ವಿ. ಬಹಳ ಕೂದಲು ಬೆಳೆದ, ಪೊದೆಗೂದಲಿನ.

**केळ** (ಕೇಳ್) ಸ್ತ್ರೀ. ಬಾಳೆಯ ಹಣ್ಣು.

**–फूल** (–ಫೂಲ್) ನ. ಬಾಳೆಯ ಹೂವು.

**केळवण** (ಕೇಳವಣ್ ನ. ಕ. ಮದುವೆಯಾಗುವ ವರನ, ವಧುವಿನ ಸನ್ಮಾನಾರ್ಥವಾಗಿ ಏರ್ಪಡಿಸಿದ ಊಟ, ಗಡಿಗೆ ನೀರು.

**केळे** (ಕೇಳೇ) ನ. ಬಾಳೆಯ ಹಣ್ಣು.

**कैक** (ಕೈಕ್) ವಿ. ಅದೆಷ್ಟೋ, ಅನೇಕ, ಬಹಳ.

**कैची** (ಕೈಚೀ) ಸ್ತ್ರೀ. ಕತ್ತರಿ. ೨ ಚಿಮ್ಮಟ. ೩(ಲಾ) ಬಿಕ್ಕಟ್ಟು.

**कैतव** (ಕೈತವ್) ನ. ಸಂ. (ಪ್ರಿಯಕರನ) ಚೇಷ್ಟೆ, ತಮಾಷೆ.

**कैद** (ಕೈದ್) ಸ್ತ್ರೀ. ಅರ. ದಸ್ತಗಿರಿ, ಬಂಧನ, ಕೈದು.

**–खाना** (–ಖಾನಾ) ಪು. ಸೆರೆಮನೆ, ಜೈಲು.

**कैदाशीण** (ಕೈದಾಶೀಣ್) ಸ್ತ್ರೀ. ಜಗಳಗಂಟ ಹೆಂಗಸು. ಕುರೂಪ ಹೆಂಗಸು, ಮಾಟಗಾರತಿ.

**कैफ** (ಕೈಫ್) ಪು. ಅರ. ಅಮಲು, ಉನ್ಮತ್ತತೆ.

**कैफीयत** (ಕೈಫೀಯತ್) ಸ್ತ್ರೀ. ಅರ. ವಿಶದಪಡಿಸುವಿಕೆ, ತಿಳಿಸಿಹೇಳುವಿಕೆ, ಕತೆ ಹೇಳುವಿಕೆ. ೨ ಷರಾ, ಸೂಚನೆ.

**कैरी** (ಕೈರೀ) ಸ್ತ್ರೀ. ಮಾವಿನ ಕಾಯಿ, ಉಪ್ಪಿನ ಕಾಯಿಯ ಮಾವು.

**कैलास** (ಕೈಲಾಸ) ಪು. ಸಂ. ಶಿವನ ಆಸ್ಥಾನ.

**–वासी** (–ವಾಸೀ) ವಿ. ತೀರಿಕೊಂಡ, ದಿವಂಗತ.

**कैवार** (ಕೈವಾರ್) ಪು. ಸಮರ್ಥನ, ಬೆನ್ನಿಗೆ ಹಾಕುವಿಕೆ, ಬೆಂಬಲ.

**–घेणे** (–ಘೇಣೇ) ಕ್ರಿ. ಸ. ಸಮರ್ಥನಮಾಡು, ಸಹಾಯಮಾಡು, ಬೆಂಬಲಕೊಡು.

**कैवारी** (ಕೈವಾರೀ) ಪು. ಪಕ್ಷಪಾತಿ, ಬೆಂಬಲ ಕೊಡುವವ, ಸಹಾಯಕ.

**कैसा** (ಕೈಸಾ) ಕ್ರಿ. ವಿ. (ಕವಿತೆಯಲ್ಲಿ) ಹೇಗೆ, ಎನಿತು, ಎಂತು.

**कोकंब** (ಕೋಕಂಬ್) ನ. ಪು. ಹುಣಸೆ ಹಣ್ಣಿನಂತೆ ಹುಳಿಗೆ ಉಪಯೋಗಿಸುವ ಒಣಗಿಸಿದ ಹಣ್ಣು, ಕೋಕಮ್.

**कोकरू** (ಕೋಕರೂ) ನ. ಅತಿ ಚಿಕ್ಕ ಕುರಿಮರಿ.

**कोकलणे** (ಕೋಕಲಣೇ) ಕ್ರಿ. ಸ. ಒದರು, ಕೂಗು. ೨ ನಿಷ್ಕಾರಣವಾಗಿ ಕೂಗಾಟಮಾಡು. ೩ ಬಡಿ, ಥಳಿಸು, ಸದೆಬಡಿ.

**कोकशास्त्र** (ಕೋಕಶಾಸ್ತ್ರ) ನ. ಸಂ. ಕಾಮಶಾಸ್ತ್ರ.

**कोंका** (ಕೋಂಕಾ) ಸ್ತ್ರೀ. ಬಾಳೆಯ ಗೊನೆ.

**कोकिळ–ळा** (ಕೋಕಿಳ್–ಳಾ) ಪು. ೨ ಸ್ತ್ರೀ. ಕೋಗಿಲೆ.

**–व्रत** (–ವ್ರತ್) ನ. ಅಧಿಕ ಆಷಾಢಮಾಸದಲ್ಲಿಯ ಸ್ತ್ರೀಯರ ವ್ರತ.

**कोकी** (ಕೋಕೀ) ಸ್ತ್ರೀ. ಕ. ಕೊಕ್ಕೆ. ೨ ರುಮಾಲದ ಮೊನೆಯಾದ ತುದಿ. ೩ ಗರಿ. ೩ ಗುಡ್ಡದ ಶಿಖರ.

**कोजागर-री** (ಕೋಜಾಗರ್-ರೀ) ಪು. -ಸ್ತ್ರೀ. ಆಶ್ವಿನ ಹುಣ್ಣಿವೆ, ಹಾಲಹುಣ್ಣಿವೆ.

**कोट** (ಕೋಟ್) ಪು. ಕ. ಕೋಟೆ, ದುರ್ಗ, ಭದ್ರ. ೨ ಕೋಟಿ (ಸಂಖ್ಯೆ). ೩ ಕೋಟು, ನಿಲುವಂಗಿ.

**-कल्याण** (-ಕಲ್ಯಾಣ) ನ. ಅಭಿವೃದ್ಧಿ.

**कोटर** (ಕೋಟರ್) ನ. ಗಿಡದಲ್ಲಿಯ ಗೂಡು, ತೂತು, ಕೋಟರ.

**कोटी-** (ಕೋಟೀ-) ವಿ. ಒಂದು ಕೋಟಿ, ೨. ಸ್ತ್ರೀ. ಮೊನೆ ಮಾತು, ಮೋಜಿನ ಮಾತು. ೩. ತುದಿ.

**-क्रम** (-ಕ್ರಮ್) ಪು. ನಿರೂಪಣೆ, ಮಂಡನ, ವಿಶದೀಕರಣ.

**कोटिशः** (ಕೋಟಿಶಃ) ಕ್ರಿ. ವಿ. ಕೋಟಿಗಟ್ಟಲೆ.

**कोटयावधि** (ಕೋಟ್ಯಾವಧಿ) ಕ್ರಿ. ವಿ. ಕೋಟಿಗಟ್ಟಲೆ, ಕೋಟ್ಯಾವಧಿ.

**कोटयाधीश** (ಕೋಟ್ಯಾಧೀಶ್) ಪು. ಸಂ. ಧನವಂತ, ಕೋಟ್ಯಾಧೀಶ.

**कोठडी** (ಕೋಠಡೀ) ಸ್ತ್ರೀ. ಕಂ. ಕೊಟ್ಟಿಗೆ, ಕೊಟ್ಟಡಿ, ಕೋಣೆ.

**कोठनीस** (ಕೋಠನೀಸ್) ಪು. ಭಾಂಡಾರದ ಅಧಿಕಾರಿ.

**कोठपर्यंत** (ಕೋಠ್‌ಪರ್ಯಂತ್) ಕ್ರಿ. ವಿ. ಎಲ್ಲಿಯ ವರೆಗೆ ಎಷ್ಟರ ಮಟ್ಟಿಗೆ.

**कोठा** (ಕೋಠಾ) ಪು. ಸಾಮಾನು, ಸಾಮಗ್ರಿಯ ಸಂಚಯ, ೨. ಗೂಡು, ೩. ಹೊಟ್ಟೆ, ಒಡಲು.

**-साफ असणे** (-ಸಾಫ್ ಅಸಣೇ) ಶೌಚಕ್ಕೆ ಸರಿಯಾಗಿ ಆಗು. ಮಲಾವರೋಧವಿಲ್ಲದಿರು.

**कोठार** (ಕೋಠಾರ್) ನ. ಸಾಮಗ್ರಿಯ ಸಂಗ್ರಹ, ಭಾಂಡಾರ. ೨ ಗೂಡು.

**कोठारी** (ಕೋಠಾರೀ) ಪು. ಸಾಮಗ್ರಿಯ, ಸರಕಿನ ಸಂಗ್ರಹದ ಅಧಿಕಾರಿ, ಮೇಲ್ವಿಚಾರಕ.

**कोठी** (ಕೋಠೀ) ಸ್ತ್ರೀ. ಹಿಂ. ಉಗ್ರಾಣ, ಭಾಂಡಾರ.

**कोठून** (ಕೋಠೂನ್) ಕ್ರಿ. ವಿ. ಎಲ್ಲಿಂದ.

**कोठें** (ಕೋಠೇ) ಕ್ರಿ. ವಿ. ಎಲ್ಲಿ.

**कोठेकोठे** (ಕೋಠೇಕೋಠೇ) ಕ್ರಿ. ವಿ. ಕೆಲವು ಕಡೆಗೆ.

**कोड-** (ಕೋಡ್) ಪು. ಅಕ್ಕರೆ, ಪ್ರೀತಿ, ಲಾಲನೆ.

**-कौतुक** (ಕೌತುಕ್) ಲಾಲನೆ, ಪ್ರೀತಿ, ಆದರಣೆ.

**कोड** (ಕೋಡ್) ನ. ಬಿಳುಪು, ತೊನ್ನು, ಬಿಳಿಚು ರೋಗ.

**कोडगा** (ಕೋಡಗಾ), **कोडगेला** (ಕೋಡಗೇಲಾ) ವಿ. ನಾಚಿಕೆ ಇಲ್ಲದವ, ದುರ್ಲಕ್ಷ ಮಾಡುವವ, ಸಿಟ್ಟು ಮಾಡಿದರೆ, ಹೀಯಾಳಿಸಿದರೆ ಜನರ ಅಂಜಿಕೆಯಿಲ್ಲದವ.

**कोंडणे** (ಕೋಂಡಣೇ) ಕ್ರಿ. ಸ. ಬಂಧಿಸು, ಒಳಗಿರಿಸು, ಕೂಡು, ಕೋಣೆಯ ಒಳಗೆ ಹಾಕಿ ಬಾಗಿಲಮುಚ್ಚು.

**कोंडवाडा** (ಕೋಂಡವಾಡಾ) ಪು. ಅಲೆದಾಡುವಆಕಳೆಮ್ಮೆಗಳ ದಡ್ಡಿ, ತುರುಮಂದಿ, ರೊಪ್ಪ, ಕೊಂಡವಾಡೆ.

**कोंडमारा** (ಕೋಂಡ್‌ಮಾರಾ) ಪು. ಉಸಿರುಗಟ್ಟುವಿಕೆ, ಜನದಟ್ಟಣೆಯಿಂದ, ಕಡಿಮೆ ಸ್ಥಳದ ಮೂಲಕ ಆಗುವ ತೊಂದರೆ.

**कोंडा** (ಕೋಂಡಾ) ಪು. ಹೊಟ್ಟು, ಉಯ್ಯ್ಯ.ತೌಡು.

**कोंडाळे** (ಕೋಂಡಾಳೇ) ನ. ವರ್ತುಳ, ಸುತ್ತು, ಚಕ್ರವ್ಯೂಹ.

**कोंडी** (ಕೋಂಡೀ) ಸ್ತ್ರೀ. ಬಂಧನ, ಸೆರೆ. ೨ ಅಡ್ಡಿ, ತಡೆ.

**कोडे** (ಕೋಡೇ) ನ. ಬಿಕ್ಕಟ್ಟು, ತಿಳಿಯದಮಾತು, ಗೂಢ, ಪ್ರಶ್ನೆ, ದಿಗಲು. ೨ ಒಗಟು, ಕೂಟ ಪ್ರಶ್ನೆ.

**कोडचा** (ಕೋಡ್ಯಾ) ವಿ. ಕುಷ್ಠರೋಗವುಳ್ಳ.

**कोण** (ಕೋಣ್) ಸರ್ವ. ಯಾರು.

**कोणी** (ಕೋಣೀ) ಸರ್ವ. ಯಾರಾದರೂ.

**कोणी एक** (ಕೋಣೀ ಏಕ್) ಸರ್ವ. ಯಾರಾದರೊಬ್ಬನು.

**कोणीकडे** (ಕೋಣೀಕಡೇ) ಕ್ರಿ. ವಿ. ಎತ್ತ, ಎತ್ತ ಕಡೆಗೆ.

**कोतवाल** (ಕೋತವಾಲ್) ಪು. ಹಿಂ. ನಗರರಕ್ಷಕ, ಪೋಲೀಸ್ ಇನ್ಸ್‌ಪೆಕ್ಟರ್.

**कोतवाली** (ಕೋತವಾಲೀ) ಸ್ತ್ರೀ. ನಗರರಕ್ಷಕನ ಕಾರ್ಯಾಲಯ, ಪೋಲೀಸ್ ಸ್ಟೇಶನ್, ಚೌಕಿ.

**कोता** (ಕೋತಾ) ವಿ. ಕಡಿಮೆ, ಅಲ್ಪ, ಅಲ್ಪಶಕ್ತಿಯ, ಬೆಲೆಯ.

**कोथळा** (ಕೋಥಳಾ) ಪು. ದೊಡ್ಡ ಚೀಲ.

**कोथळी** (ಕೋಥಳೀ) ಸ್ತ್ರೀ. ಚೀಲ, ಹೊಟ್ಟೆ, ಕರಳು.

**कोथिंबीर** (ಕೋಥಿಂಬೀರ್) ಸ್ತ್ರೀ. ಕೊತ್ತುಂಬರಿ.

**कोंदट** (ಕೋಂದಟ್) ವಿ. ಇಕ್ಕಟ್ಟಾದ, ಹತ್ತಿರ ಹತ್ತಿರ ಮನೆಗಳಿದ್ದ.

**कोंदण** (ಕೋಂದಣ್) ನ. ಮುತ್ತು, ವಜ್ರ ಮುಂತಾದವುಗಳನ್ನು ಕೂಡಿಸುವ (ಬಂಗಾರದ) ಜೋಡಣೆ.

**कोंदणे** (ಕೋಂದಣೇ) ಕ್ರಿ. ಅ. ಉಸಿರುಗಟ್ಟು. ಕ್ರಿ. ಸ. ಮುತ್ತು ವಜ್ರಗಳನ್ನು ಜೋಡಿಸು, ಕೂಡಿಸು.

**कोदंड** (ಕೋದಂಡ್) ನ. ಸಂ. ಬಿಲ್ಲು, ಚಾಪ.

**कोन** (ಕೋನ್) ಪು. ಸಂ. ಮೂಲೆ, ಕೋನ.

**कोनशिला** (ಕೋನ್‌ಶಿಲಾ) ಸ್ತ್ರೀ. ಅಡಿಗಲ್ಲು.

**कोनाकोपरा** (ಕೋನಾಕೋಪರಾ) ಪು. ಮೂಲೆಮೂಲೆ, ಸಂದಿಗೊಂದಿ.

**–ढुंडाळणे** (ಢುಂಡಾಳಣೇ) ಕ್ರಿ. ಸ. ಮೂಲೆಯಲ್ಲಿ, (ಎಲ್ಲ ಕಡೆಗೆ) ಹುಡುಕು.

**कोनाडा** (ಕೋನಾಡಾ) ಪು. ಗೋಡೆಯಲ್ಲಿಯ ಗೂಡು, 'ಮಾಡ'.

**कोनफळ** (ಕೋನಫಳ್) ನ. ಗೆಣಸುಗಡ್ಡೆ, ಸೂರಣಪಲ್ಯ.

**कोप** (ಕೋಪ್) ಪು. ಸಂ. ಕ್ರೋಧ, ಸಿಟ್ಟು. ೨ ಕ. ಕೊಪ್ಪ, ಗುಡಿಸಲು, ಊರು.

**कोपणे** (ಕೋಪಣೇ) ಕ್ರಿ. ಅ. ಸಿಟ್ಟಿಗೇಳು.

**कोपर** (ಕೋಪರ್) ನ. ಮೊಣಕೈ. ೨ ಮೊಳಕೈ.

**कोपरापासून हात जोडणे** (ಕೋಪ್‌ರಾಪಾಸೂನ್ ಹಾತ್ ಜೋಡಣೇ) ಕ್ರಿ. ಸ. (ವ್ಯಂಗ್ಯ) ತಿರಸ್ಕಾರ ತೋರಿಸು, 'ಸಾಕಾಯಿತು' ಅನ್ನು.

**–खळी** (–ಖಳೀ) ಸ್ತ್ರೀ. ವಕ್ರೋಕ್ತಿ, ನರ್ಮವಿನೋದ, ಚುಚ್ಚುಮಾತು, ಟೀಕೆ.

**कोपरा** (ಕೋಪರಾ) ಪು. ಮೂಲೆ, ಸಂದು.

**कोपायमान** (ಕೋಪಾಯಮಾನ) ವಿ. ಸಂ. ಸಿಟ್ಟಿಗೆದ್ದ, ಕ್ರುದ್ಧ.

**कोंब** (ಕೋಂಬ್) ಪು. ಮೊಳಕೆ, ಅಂಕುರ.

**कोंबट** ( ಕೋಂಬಟ್ ) ವಿ. ಉಗುರುಬೆಚ್ಚನ್ನ, ಬೆಚ್ಚಗಾದ.

**कोंबडा** (ಕೋಂಬಡಾ) ಪು. ಕೋಳಿ, ಹುಂಜ.

**कोंबडी** (ಕೋಂಬಡೀ) ಸ್ತ್ರೀ. ಕೋಳಿ.

**कोंबडे** (ಕೋಂಬಡೇ) ನ. ಕೋಳಿ.

**कोंबणे** (ಕೋಂಬಣೇ) ಕ್ರಿ. ಸ. ತುರುಕು, ಹಾಕು, ತುಂಬು, ತುಂಬಿಕೋ.

**कोबा** (ಕೋಬಾ) ಪು. ಮಣ್ಣು, ಗಚ್ಚು, ಸಿಮೆಂಟ್ ಇವುಗಳ ಮಿಶ್ರಣ.

**कोबी** (ಕೋಬೀ) ಸ್ತ್ರೀ. ಇಂ. ಕೋಸುಗಡ್ಡೆ, ಕ್ಯಾಬೀಜ.

**कोम** (ಕೋಮ್) (ಪ್ರತ್ಯಯ) ಅರ. (ಕಾನೂನಿನಲ್ಲಿ) ಹೆಂಡತಿ ಅಥವಾ ವಿಧವೆ.

**कोमट** (ಕೋಮಟ್) ವಿ. ಉಗುರುಬೆಚ್ಚಗಾದ.

**कोमल** (ಕೋಮಲ್) ವಿ. ನಯವಾದ, ಕೋಮಲವಾದ.

**कोमेजणे** (ಕೋಮೇಜಣೇ) ಕ್ರಿ. ಅ. ಕಮರು, ಕಳೆಹೀನನಾಗು, ಬಾಡು.

**कोय** (ಕೋಯ್) ಸ್ತ್ರೀ. ಗೊರಟ (ಮಾವಿನ ಬೀಜ)

**कोयंडा** (ಕೋಯಂಡಾ) ಪು. ಕೊಂಡಿ, ಅಗಳಿ, ಚಿಲಕ.

**कोयता** (ಕೋಯತಾ) ಪು. ಕ. ಕುಡಗೋಲು.

**कोयती** (ಕೋಯತೀ) ಸ್ತ್ರೀ. ಕ. ಕೂಡಗೋಲು, ಕುಯಿಲುಗತ್ತಿ.

**कोयनेल** (ಕೋಯನೆಲ್) ನ. ಇಂ. ಕ್ವಿನಾಇನ್, ಕ್ವಿನೀನು.

**कोयरी** (ಕೋಯರೀ) ಸ್ತ್ರೀ. (ಹಿಂ. ಕೈರೀ) ಮಾವಿನ ಕಾಯಿಯ ಆಕಾರದ, ಕುಂಕುಮ ಡಬ್ಬಿ.

**कोयल** (ಕೋಯಲ್) ಪು. ಕೋಗಿಲೆ.

**कोर** (ಕೋರ್) ಸ್ತ್ರೀ. ಚಂದ್ರನ ಕಲೆ, ಅಂಚು, ತುದಿ. ೨. ದ್ವೇಷ.

**कोरड** (ಕೋರಡ್) ಸ್ತ್ರೀ. ಒಣಗುವಿಕೆ. (ಗಂಟಲು ಇ.)

**कोरडणे** (ಕೋರಡಣೇ) ಕ್ರಿ. ಅ. ಬತ್ತು, ಅಟ್ಟಿಹೋಗು, ಒಣಗು.

**कोरडा** (ಕೋರಡಾ) ವಿ. ಶುಷ್ಕ, ಒಣ, ತಿರುಳಿಲ್ಲದ. ೨. (ಹಿಂ. ಕೋಡಾ, ಕ. ಕೊರಡು) ಬಾರಕೋಲು.

**कोरणी** (ಕೋರಣೀ) ಸ್ತ್ರೀ. ಕೊರೆಯುವ ಕಡ್ಡಿ.

**कोरणे** (ಕೋರಣೇ) ಕ್ರಿ. ಸ. ಕ. ಕೊರೆ.

**दात कोरून पोट भरणे** (ದಾತ್‌ಕೋರೂನ್ ಪೋಟ ಭರಣೇ) ಕ್ರಿ. ಸ. ತೀರ ಬಡತನದಿಂದ ಬಾಳು.

**कोरफड** (ಕೋರ್‌ಫಡ್) ಸ್ತ್ರೀ. ಲೋಳಿಸರ, ಒಂದು ವನಸ್ಪತಿ, 'ಕುಮಾರಿ'

**कोरा** (ಕೋರಾ) ವಿ. ಬರೆಹವಿಲ್ಲದ, ಬರಿಯ, ೨. ಅಚ್ಚಹೊಸ. ೩. ಅನನುಭವಿಕ.

**–करकरीत** (–ಕರಕರೀತ್) ಅಚ್ಚಹೊಸ.

**कोरांटी** (ಕೋರಾಂಟೀ) ಸ್ತ್ರೀ. ಗೊರಟಿಗೆ ಹೂ.

**कोरान्न** (ಕೋರಾನ್ನ) ನ. ಸಂ. ಭಿಕ್ಷೆ, ಬಡವರಿಗೆ ಹಾಕಿದ ಕಾಳು.

**कोरीव** (ಕೋರೀವ್) ವಿ. ಕೊರೆದ. ೨. ಕೆತ್ತಿದ, ಕೆತ್ತನೆಯ.

**कोलणे** (ಕೋಲಣೇ) ಕ್ರಿ. ಸ. ನೂಕು, ದೂಕು, ತಳ್ಳು, ದಬ್ಬು.

**कोलदांडा** (ಕೋಲ್‌ದಾಂಡಾ) ಪು. ಕ. ಮು. ಆಕಳ, ಎಮ್ಮೆಯ ಕೊರಳಲ್ಲಿ ಕಟ್ಟಿದ ಅಡ್ಡಿಗೋಲು.

**कोलमडणे** (ಕೋಲ್ ಮಡಣೇ) ಕ್ರಿ. ಅ. ಬೀಳು, ಕಡ ಕೊಂಡು ಬೀಳು, ನೆಲಕ್ಕೆ ಉರುಳು.

**कोलांटी** (ಕೋಲಾಂಟೀ) ಸ್ತ್ರೀ. ಲಾಗ, ಲಗಾಟ.

**कोलाहल** (ಕೋಲಾಹಲ) ಪು. ಸಂ. ಗೊಂದಲ, ಗದ್ದಲ, ಕರ್ಕಶ ಸಪ್ಪಳ.

**कोलीत** (ಕೋಲೀತ್) ನ. ದೀವಟಿಗೆ, ಪಂಜು, ಉರಿ ಗೋಲು.

**कोल्हा** (ಕೋಲ್ಹಾ) ಪು. ನರಿ.

**कोल्ही** (ಕೋಲ್ಹೀ) ಸ್ತ್ರೀ. ಹೆಣ್ಣುನರಿ.

**कोल्हाटी** (ಕೋಲ್ಹಾಟೀ) ಪು. ತಂತಿಯ ಮೇಲೆ ಕಸ ರತ್ತು ಮಾಡುವವ.

**कोल्हेकुई** (ಕೋಲ್ಹೇಕುಈ) ಸ್ತ್ರೀ. ನರಿಯ ಕೂಗು. ೨. (ಲಾ) ಪುಂಡರು ಎಬ್ಬಿಸಿದ ಗೊಂದಲ.

**कोवळा** (ಕೋವಳಾ) ವಿ. ಎಳೆಯ, ನಯವಾದ, ಮೃದುವಾದ, ಸುಕುಮಾರ.

**कोवळीक** (ಕೋವಳೀಕ) ಸ್ತ್ರೀ. ನಯ, ಕೋಮಲತೆ.

**कोविद** (ಕೋವಿದ್) ವಿ. ಸಂ. ನಿಪುಣ, ಜಾಣ, ಪ್ರವೀಣ.

**कोश** ಕೋಶ) ಪು. ಸಂ. ಚೀಲ. ೨. ನಿಘಂಟು, ಶಬ್ದ ಕೋಶ. ೩. ಬೊಕ್ಕಸ, ಭಾಂಡಾರ.

**–पाल** (–ಪಾಲ್) ಪು. ಭಾಂಡಾರದ ಅಧಿಕಾರಿ.

**कोशा** (ಕೋಶಾ) ಪು. ರೇಶ್ಮೆಯ ಕೊರಳಪಟ್ಟಿ. ೨. ರುಮಾಲ.

**कोशागार** (ಕೋಶಾಗಾರ್) ಪು. ಸಂ. ಬೊಕ್ಕಸ, ಖಜಾನೆ.

**कोशाध्यक्ष** (ಕೋಶಾಧ್ಯಕ್ಷ) ಪು. ಸಂ. ಬೊಕ್ಕಸದ ಅಧಿಕಾರಿ.

**कोशिंबीर** (ಕೋಶಿಂಬೀರ್) ಸ್ತ್ರೀ. ಹಿಂ. ಕೋಸಂಬ್ರಿ, ನೆನೆಸಿದ ಕಡಲೆ (ಅಥವಾ ಪಲ್ಯ ಹೆಚ್ಚಿ) ಹಾಕಿದ ವ್ಯಂಜನ.

**कोशिस** (ಕೋಶಿಸ್) ಸ್ತ್ರೀ. ಫಾ. ಪ್ರಯತ್ನ.

**कोष्टक** (ಕೋಷ್ಟಕ್) ನ. ಸಂ. ಅಂಕಿಯ ಪಟ್ಟಿ, ದರಪಟ್ಟಿ.

**कोष्टी** (ಕೋಷ್ಟೀ) ಪು. ನೇಕಾರ.

**कोस** (ಕೋಸ್) ಪು. ೨ ಮೈಲು ಅಂತರ, ಹರದಾರಿ.

**कोसळणे** (ಕೋಸಳಣೇ) ಕ್ರಿ. ಅ. ಬೀಳು, ಉರುಳಿಬೀಳು, ನೆಲಕ್ಕೆ ತಾಗು.

**आभाळ–** (ಆಭಾಳ್–) ಕ್ರಿ. ಅ. ವಿಪರೀತ ಮಳೆ ಯಾಗು. ೨. (ಲಾ) ಕೆಟ್ಟಕಾಲ ಒದಗು.

**कोह–हाळा** (ಕೋಹ–ಹಾಳಾ) ಪು. ಕೂಷ್ಮಾಂಡ, ಹಾಲುಗುಂಬಳ.

**कोळपणी** (ಕೋಳಪಣೀ) ಸ್ತ್ರೀ. ಹುಲ್ಲುಕಡ್ಡಿ ತೆಗೆದು ಹಸನು ಮಾಡುವಿಕೆ.

**कोळपे** (ಕೋಳಪೇ) ನ. ಹುಲ್ಲುಗುಯಿಲು, ಕುಡಗೋಲು.

**कोळंबी** (ಕೋಳಂಬೀ) ಸ್ತ್ರೀ. ಕೆರೆಬಾವಿಯಲ್ಲಿಯ ಚಿಕ್ಕ ಮೀನ.

**कोळसा** (ಕೋಳಸಾ) ಪು. ಇದ್ದಲು, ಇದ್ದಲಿ.

**कोळिष्टक** (ಕೋಳಿಷ್ಟಕ್) ನ. ಜೇಡದ ಗೂಡು.

**कोळी** (ಕೋಳೀ) ಪು. ಜೇಡ. ೨. ಮೀನುಗಾರ.

**कौटिल्य** (ಕೌಟಿಲ್ಯ) ನ. ಸಂ. ಕುಟಿಲತಂತ್ರ, ಡೊಂಕು ನಡತೆ.

**कौटुंबिक** (ಕೌಟುಂಬಿಕ್) ವಿ. ಸಂ. ಮನೆಮಾರಿನ, ಮನೆತನದ, ಗೃಹಸ್ಥ ಜೀವನದ.

**कौतुक** (ಕೌತುಕ್) ನ. ಸಂ. ಕುತೂಹಲ, ಆದರಣೆ, ಸ್ತುತಿ. ತಲೆದೂಗುವಿಕೆ.

**कौतुहल** (ಕೌತೂಹಲ) ನ. ಕುತೂಹಲ, ತಿಳಿದು ಕೊಳ್ಳುವ ಲವಲವಿಕೆ.

**कौपीन** (ಕೌಪೀನ) ನ. ಸನ್ಯಾಸಿಯ ವೇಷ, ಪಂಜೆ, ಸುತ್ತುದಟ್ಟಿ.

**कौमार्य** (ಕೌಮಾರ್ಯ) ನ. ಸಂ. ಸ್ತ್ರೀಯರ ಚಾರಿತ್ರ್ಯ, ಮರ್ಯಾದೆ.

**–भंग** (–ಭಂಗ್) ಪು. ಹೆಂಗಸನ್ನು ಕೆಡಸುವಿಕೆ, ಬಲಾತ್ಕಾರ.

**कौमुदी** (ಕೌಮುದೀ) ಸ್ತ್ರೀ. ಸಂ. ಬೆಳದಿಂಗಳು.

**कौल** (ಕೌಲ್) ಪು. ಅರ. ತೀರ್ಪು, ಆಜ್ಞೆ, ದೇವರ ಆಜ್ಞೆ. ೨. ನ. ಹಂಚು.

**–करार** (–ಕರಾರ್) ಪು. ಬಹು. ಒಪ್ಪಂದ, ಕರಾರು ಪತ್ರ.

**–नामा** (–ನಾಮಾ) ಪು. ಕರಾರು ಪತ್ರ.

**कौलार** (ಕೌಲಾರ) ನ. ಹೊಚ್ಚಿದ (ಹಂಚು ಹಾಕಿದ) ಮಾಳಿಗೆ.

**कौलारू** (ಕೌಲಾರೂ) ವಿ. ಹಂಚಿನ, ಹಂಚುಹಾಕಿದ (ಮನೆ.)

**कौशल–ल्य** (ಕೌಶಲ–ಲ್ಯ) ನ. ಸಂ. ಕುಶಲತೆ, ನಿಪುಣತೆ.

**कौस्तुभ** (ಕೌಸ್ತುಭ) ಪು. ಸಂ. ಶ್ರೀ ಕೃಷ್ಣನ ಕೊರಳ ಲ್ಲಿಯ ವಜ್ರ, ಕೌಸ್ತುಭ.

**क्रंदन** (ಕ್ರಂದನ್) ನ. ಸಂ. ಆಕ್ರೋಶ, ಅಳುವಿಕೆ.

**गहन** (ಗಹನ) ವಿ. ಸಂ. ಆಳವಾದ, ಗಂಭೀರವಾದ, ಕಠಿಣ.

**गहाण** (ಗಹಾಣ್) ನ. ಒತ್ತೆ, ನಿಧಿ, ನ್ಯಾಸ.

**–टाकणे** (–ಟಾಕಣೇ) ಕ್ರಿ.ಸ. ಒತ್ತೆ ಇಡು. ಲಾ. ಹತ್ತಿರ ಇಲ್ಲದಿರು.

**–खत** (–ಖತ್) ನ. ಒತ್ತೆಯಿಡುವ ಬಗ್ಗೆ ಕಾಗದ ಪತ್ರ.

**गहाळ** (ಗಹಾಳ್) ವಿ. ಕಳೆದ, ಕಳೆದುಹೋದ.

**गहिरा** (ಗಹಿರಾ) ವಿ. ದಟ್ಟ, ದಪ್ಪ, ತಿಳಿಯಾಗಿರದ (ಬಣ್ಣ).

**गहिवर** (ಗಹಿವರ) ಪು. ಭಾವನೆಯ ಉದ್ರೇಕ, ಗಂಟಲು ಗಡಚಾಗುವಿಕೆ.

**गही** (ಗಹೀ) ಸ್ತ್ರೀ. ಅಕ್ಕಸಾಲಿಗನ ಚಿಮ್ಮಟ, ಚಿಮುಟ, ಪಟಕಾರ, ಶ್ರವಣ.

**गहू** (ಗಹೂ) ಪು. ಗೋಧಿ.

**गळ** (ಗಳ) ಪು. ಮೀನ ಹಿಡಿಯುವ ಕೊಕ್ಕೆ. ೨. ಒತ್ತಾಯ.

**–घालणे** (ಘಾಲಣೇ) ಒತ್ತಾಯಪಡಿಸು.

**गळका** (ಗಳಕಾ) ವಿ- ಸೋರುವ, ಸ್ರವಿಸುವ.

**गळचेपी** (ಗಳಚೇಪೀ) ಸ್ತ್ರೀ. ಕುತ್ತಿಗೆಯ ಉರಲು, (ಲಾ) ಒತ್ತಾಯ, ಅತ್ಯಾಚಾರ, ಹಿಂಸೆ. ೩. ತೊಂದರೆ. ೪. ಅಡ್ಡಿ.

**गळणे** (ಗಳಣೇ) ಕ್ರಿ. ಅ. ಸೋರು, ಸ್ರವಿಸು. ೨. ಇಲ್ಲದಂತಾಗು.

**गळतें** (ಗಳತೇ) ನ. ಸೋರುವಿಕೆ, ಸ್ರಾವ.

**गळपट्टा** (ಗಳಪಟ್ಟಾ) ಪು. ಕೊರಳುಪಟ್ಟಿ, ಸ್ಕಾರ್ಫ್. ೨. ಕುತ್ತಿಗೆಯ ಉರಲು.

**गळफास** (ಗಳಫಾಸ್) ಪು. ಲಾ. ಪ್ರಾಣಸಂಕಟ, ಸಾವು.

**गळसर–री** (ಗಳಸರ್–ರೀ) ಪು. ಸ್ತ್ರೀ. ಕೊರಳಲ್ಲಿಯ ಸರ, ಆಭರಣ.

**गळा** (ಗಳಾ) ಪು. ಕಂಠ, ಕಂಠರವ, ಧ್ವನಿ, ದನಿ. ೨. ಕೊರಳು, ಕತ್ತು, ಕುತ್ತಿಗೆ.

**गळ्यांतला ताईत** (ಗಳ್ಯಾತಲಾತಾಈತ್) ಪು. ಅತಿ ಶ್ರಯ ಪ್ರಿಯನಾದ.

**केसाने–कापणे** (ಕೇಸಾನೇ–ಕಾಪಣೇ) ಕ್ರಿ. ಅ. ಮೋಸಮಾಡು, ದ್ರೋಹಮಾಡು, ವಂಚಿಸು, ಗುಪ್ತ ರೀತಿಯಿಂದ ನಾಶಗೊಳಿಸು.

**–गुंतणे** (–ಗುಂತಣೇ) ಕ್ರಿ. ಅ. ಸಿಲುಕು, ಸಿಗು ಯಾವುದೊಂದು ಕೆಲಸ, ವ್ಯಾಜ್ಯ, ತಪ್ಪು, ಮುಂತಾದವುಗಳಲ್ಲಿ ಸಿಲುಕಿಕೊಳ್ಳು.

**–फुटणे** (–ಫುಟಣೇ) ಕ್ರಿ.ಅ. ದನಿ ಕೂಡು.

**गळी देणे** (ಗಳೀದೇಣೇ) ಕ್ರಿ. ಸ. ಗಲ್ಲಿಗೇರಿಸು.

**गळी पडणे** (ಗಳೀ ಪಡಣೇ) ಕ್ರಿ. ಸ. ಅಂಗಲಾಚು, ಕೇಳು.

**गळ्यात माळ घालणे** (ಗಳ್ಯಾತ್ ಮಾಳ್ ಘಾಲಣೇ) ಕ್ರಿ. ಸ. ಮದುವೆಯಾಗು.

**गळ्यात येणे** (ಗಳ್ಯಾತ್ ಏಣೇ) ಕ್ರಿ. ಅ. ಕೊರಳಲ್ಲಿ ಬೀಳು, ಅನಿಷ್ಟ ಸಂಗತಿಯನ್ನು ಸ್ವೀಕರಿಸಬೇಕಾಗು.

**गळ्यावर गाणे** (ಗಳ್ಯಾವರ್ ಗಾಣೇ) ಕ್ರಿ. ಸ. ಇಂಪಾದ ದದಿಯಿಂದ ಹಾಡು.

**गळा काढून रडणे** (ಗಳಾ ಕಾಡೂನ್ ರಡಣೇ) ಕ್ರಿ. ಅ. ದೊಡ್ಡ ದನಿಯಿಂದ ಅಳು.

**गळ्यावरून सुरी फिरविणे** (ಗಳ್ಯಾವರೂನ್ ಸುರೀ ಫಿರವಣೇ) ಕ್ರಿ. ಸ. ಮೋಸಗೊಳಿಸು, ನಾಶಗೊಳಿಸು, ದ್ರೋಹಮಾಡು.

**गळ्यापर्यंत येणे** (ಗಳ್ಯಾಪರ್ಯಂತ ಏಣೇ) ಕ್ರಿ. ಅ. ಸಹನಶಕ್ತಿಮೀರು, ಸಂಕಟ ಸಮೀಪಿಸು.

**गळाठणे** (ಗಳಾಠಣೇ) ಕ್ರಿ. ಅ. ದಣಿ, ಬೇಸರಪಡು.

**गळू** (ಗಳೂ) ಪು. ಕುರ, ಹುಣ್ಣು.

**गळेकापू** (ಗಳೇಕಾಪೂ) ಪು. ಮೋಸಗಾರ, ವಂಚಕ, ದ್ರೋಹಿ.

**गळेपडू** (ಗಳೇಪಡೂ) ಪು. ಅಂಗಲಾಚಿ ಬೇಡುವವ, ಒತ್ತಾಯಪಡಿಸುವವ.

**गांगरणे** (ಗಾಂಗರಣೇ) ಕ್ರಿ. ಅ. ಬೆದರು, ಬೆಪ್ಪನಾಗು.

**गागाचार्य** (ಗಾಗಾಚಾರ್ಯ)
**गागाभट्ट** (ಗಾಗಾಭಟ್ಟ)
**गागादीक्षित** (ಗಾಗಾದೀಕ್ಷಿತ) } ಪು. ಶಿವಾಜಿಗೆ ರಾಜ್ಯಾಭಿಷೇಕ ಮಾಡಿಸಿದ ಪುರೋಹಿತ. ೨. (ಲಾ) ವಿದ್ವತ್ತೆ ತೋರುವವ, ಪಂಡಿತಂಮನ್ಯ, ಅಹಂಮನ್ಯ.

**गांजणूक** (ಗಾಂಜಣೂಕ್) ಸ್ತ್ರೀ. ಪೀಡೆ, ಕಾಡುವಿಕೆ, ಹಿಂಸೆ, ಉಪದ್ರವ.

**गांजणे** (ಗಾಂಜಣೇ) ಕ್ರಿ. ಸ. ಕಾಡು, ಉಪದ್ರವ ಕೊಡು. ಕ್ರಿ. ಅ. ಬಳಲು, ವ್ಯಥೆಪಡು.

**गाजणे** (ಗಾಜಣೇ) ಕ್ರಿ. ಅ. ಪ್ರಸಿದ್ಧನಾಗು, ಹೆಸರು ಪಡೆ.

**गाजर** (ಗಾಜರ್) ನ. ಗಜ್ಜರಿ.

**–पारखी** (–ಪಾರಖೀ) ಪು. (ವ್ಯಂಗ್ಯ) (ಇಲ್ಲದ) ಪಾಂಡಿತ್ಯ ತೋರಿಸುವವ.

**गाजविणे** (ಗಾಜವಿಣೇ) ಕ್ರಿ. ಸ. ಹೆಸರುಪಡೆ, ಪ್ರಸಿದ್ಧಿಗೆ ತರು. ೨. ಅಲಂಕರಿಸು, ಶೋಭೆಯನ್ನುಂಟು ಮಾಡು.

**गांजा** (ಗಾಂಜಾ) ಪು. ಒಂದು ಅಮಲಿನ ಪದಾರ್ಥ, ಗಾಂಜಿ.

**गाजावाजा** (ಗಾಜಾವಾಜಾ) ಪು. ಮಿತಿಮೀರಿ ಮಾತು ಚರ್ಚೆ, ಮಾತುಕತೆ.

**––करणे** (–ಕರಣೇ) ಕ್ರಿ. ಅ. ಬಹಳಷ್ಟು ಚರ್ಚೆ ಮಾಡು.

**गाजी** (ಗಾಜೀ) ಪು. ಅರ. ಬಂಟ, ವೀರ, ಧರ್ಮ ರಕ್ಷಕ.

**गांजेकस** (ಗಾಂಜೇಕಸ್) ಪು. ಗಾಂಜಿ ಬಡಕ.

**गाठ** (ಗಾಠ್) ಸ್ತ್ರೀ. ಗಂಟು. ೨. ಭೆಟ್ಟಿ. ೩. ಸಂಬಂಧ.

**आतल्या गाठीचा** (ಆತಲ್ಯಾ ಗಾಠೀಚಾ) ವಿ. ತನ್ನ ಮನಸ್ಸಿನಲ್ಲಿದ್ದುದನ್ನು ಬಾಯಿಬಿಚ್ಚಿ ಹೇಳದವ, ಮಾತಿನಲ್ಲಿ ತೊಡಕದವ.

**गाठण** (ಗಾಠಣ) ಸ್ತ್ರೀ. ತೊಡಕಿಸುವಿಕೆ, ಪೋಣಿಸುವಿಕೆ. ೨. ಆಭರಣ ಮುಂತಾದವುಗಳನ್ನು ರೇಶ್ಮೆ ದಾರದಲ್ಲಿ ಪೋಣಿಸುವಿಕೆ, ಪಟಾಯಿಸುವಿಕೆ.

**गाठणे** (ಗಾಠಣೇ) ಕ್ರಿ.ಸ. ಭೆಟ್ಟಿಯಾಗು, ಹಿಡಿದುಕೊ. ೨. ಪೋಣಿಸು, ಪಟಾಯಿಸು.

**गाठले** (ಗಾಠಲೇ) ನ. ಕೊರಳಿನಲ್ಲಿಯ ಆಭರಣ.

**गाठविणे** (ಗಾಠವಿಣೇ) ಕ್ರಿ.ಸ. ಮುತ್ತಿನ ಸರ ಮುಂತಾದವುಗಳನ್ನು ರೇಶ್ಮೆ ಜರತಾರಿಯಲ್ಲಿ ಪೋಣಿಸಿಕೊ, ಗೊಂಡೆಗಳನ್ನು ಹಚ್ಚಿಸು.

**गाठाळ** (ಗಾಠಾಳ್) ವಿ. ಗಂಟುಗಂಟಾದ

**गाठी** (ಗಾಠೀ) ಸ್ತ್ರೀ. ಲವಂಗ, ಬತ್ತಾಸ ಮುಂತಾದವುಗಳನ್ನು ಪೋಣಿಸಿಮಾಡಿದ ಸರ (ಹೋಳಿಯ ಹಬ್ಬದ ಸರ.)

**गाठोडे** (ಗಾಠೋಡೇ) ನ. ಗಂಟು, ಧನ, ಸಂಗ್ರಹ.

**गाठोळी** (ಗಾಠೋಳೀ) ಸ್ತ್ರೀ. ಅಸಲು, ಮೊಬಲಗು ಸ್ವಂತದ ಹಣ.

**गाडगे** (ಗಾಡಗೇ) ನ. ಗಡಿಗೆ, ಮಣ್ಣಿನ ಪಾತ್ರೆ.

**गाडणे** (ಗಾಡಣೇ) ಕ್ರಿ. ಸ. ಹುಗಿ, ಮುಗಿಸು, ಬಚ್ಚಿಡು.

**गांड** (ಗಾಂಡ್) ಸ್ತ್ರೀ. ಹಿಂ. ಕುಂಡಿ, ಮುಕುಳಿ, ಗುದ.

**गाडी** (ಗಾಡೀ) ಸ್ತ್ರೀ. ಬಂಡಿ, ಚಕ್ಕಡಿ. ೨. ವಾಹನ ೩. ಮೊಟರ ಕಾರ್.

**गांडीव** (ಗಾಂಡೀವ್) ನ. ಅರ್ಜುನನ ಧನುಷ್ಯ, ಬಿಲ್ಲು.

**गाडीवान** (ಗಾಡೀವಾನ್) ಪು. ಬಂಡಿಯುವ ಸಾರಥಿ, ಚಕ್ಕಡಿ ಹೊಡೆಯುವವ.

**गांडू** (ಗಾಂಡೂ) ಪು. ಹಿಂ. ಮುಕುಳಿ ಹಡಿಸುವವ, ೨. ನಪುಂಸಕ. ೩. ಹೇಡಿ.

**गांडूळ** (ಗಾಂಡೂಳ್) ಪು. ಮಣ್ಣು ಹುಳ.

**गाढ** (ಗಾಢ್) ವಿ. ಕ್ರಿ. ಸಂ. ಗಾಢವಾಗಿ, ಸುಖದಿಂದ ಪರಿವೆಯಿಲ್ಲದೆ. ೨. ವಿ. ದಪ್ಪ, ದಟ್ಟ.

**गाढव** (ಗಾಢವ್) ಪು. ನ. ಕತ್ತೆ. ೨. ಮೂರ್ಖ.

**गाढवाचा नांगर फिरविणे** (ಗಾಢವಾಚಾ ನಾಂಗರ ಫಿರವಿಣೇ) ಕ್ರಿ. ಸ. ಹಾಳುಮಾಡು, ನಾಶಗೊಳಿಸು.

**गाढवी** (ಗಾಢವೀ) ಸ್ತ್ರೀ. ಕತ್ತೆ (ಹೆಣ್ಣು).

**गाढा** (ಗಾಢಾ) ವಿ. ದಪ್ಪ, ದಟ್ಟ, ತಿಳಿಯಾಗಿರದ. ೨. ಬಹಳ ಸಾಧನೆ ಮಾಡಿದ.

**–विद्वान्** (–ವಿದ್ವಾನ್) ಮಹಾಪಂಡಿತ.

**गाणे** (ಗಾಣೇ) ಕ್ರಿ. ಸ. ಹಾಡು, ಪದ ಅನ್ನು. ನ. ಹಾಡು, ಪದ. ೩. ಸ್ತುತಿ. ೪. ಸಂಗತಿ, ಕತೆ.

**गाणेबजावणे** (ಗಾಣೇಬಜಾವಣೇ) ನ. ಗಾಯನ ವಾದನ, ಸಂಗೀತ ಸಭೆ.

**गात्र** (ಗಾತ್ರ) ನ. ಅವಯುವ

**गाथा** (ಗಾಥಾ) ಪು. ಸ್ತುತಿ, ಹಾಡು. ೨. ವಾಕ್ಯ. ೩. ಹರಟೆ.

**गादी** (ಗಾದೀ) ಸ್ತ್ರೀ. ಹಾಸಿಗೆ. ೨. ಸಿಂಹಾಸನ, ಪಟ್ಟ, ಪದವಿ. ೩. ಆಡಳಿತ, ಅಧಿಕಾರ.

**–सांभाळणे** (–ಸಾಂಭಾಳಣೇ) ಕ್ರಿ. ಸ. ಅಧಿಕಾರ ನಡೆಸು.

**गांध** (ಗಾಂಧ್) ಸ್ತ್ರೀ. ಗಂಟು, ೨. ಕಡಿಜೀರಿಗೆಯ ಹುಳು.

**गांधर्व** (ಗಾಂಧರ್ವ) ವಿ. ಸಂ. ಗಂಧರ್ವರಂಥ, ಸುಶ್ರಾವ್ಯ. ೨. ಸಂಗೀತ ವಿದ್ಯೆ.

**–विवाह** (–ವಿವಾಹ್) ಪು. ಪರಸ್ಪರರ ಅನುಮತಿಯಿಂದ ಮಾಡಿಕೊಂಡ ಮದುವೆ.

**गांधी** (ಗಾಂಧೀ) ಪು. ಔಷಧ, ಅತ್ತರು, ಮಾರುವವ.

**गांधीलमाशी** (ಗಾಂಧೀಲ್‌ಮಾಶೀ) ಸ್ತ್ರೀ. ಕಡಿಜೀರಿಗೆಯ ಹುಳು.

**गान** (ಗಾನ್) ನ. ಸಂ. ಹಾಡು, ಪದ, ಸಂಗೀತ.

**गाफील** (ಗಾಫೀಲ್) ವಿ. ಅರ. ಅಲಕ್ಷ್ಯಮಾಡುವವ, ದಕ್ಷನಲ್ಲದವ.

**गाबती** (ಗಾಬತೀ) ಪು. ಮೀನುಗಾರ.

**गाभ** (ಗಾಭ) ಪು. ಗರ್ಭ. ೨. ದನದ ಗರ್ಭ. ೩. ಗುಡ್ಡದಲ್ಲಿಯ ದೊಡ್ಡ ತಗ್ಗು.

**गाभण** (ಗಾಭಣ) ವಿ. ಗಬ್ಬವಾದ, ತೆನೆಯಾದ.

**गाभणे** (ಗಾಭಣೇ) ಕ್ರಿ. ಅ. ಗಬ್ಬವಾಗಿರು, ತೆನೆಯಾಗಿರು.

**गाभा** (ಗಾಭಾ) ಪು. ತಿರುಳು, ಮರ್ಮ, ಗುಟ್ಟು, ಕೇಂದ್ರ, ಗಡ್ಡೆ.

**गाभाटणे** (ಗಾಭಾಟಣೆ) ಕ್ರಿ. ಅ. ಹಲಿವುಳಿ, ಗರ್ಭವನ್ನು ಕೆಡವು, ಸಕಾಲಕ್ಕೆ ಮುಂಚಿತವಾಗಿ ಈಯು.

**गाभारा** (ಗಾಭಾರಾ) ಪು. ಗರ್ಭಗುಡಿ.

**गांभीर्य** (ಗಾಂಭೀರ್ಯ) ನ. ಸಂ, ಆಳ, ಗಹನತೆ, ಗಾಢತೆ, ಗೂಢತೆ, ಗಭೀರತೆ.

**गाभुळणे** (ಗಾಭುಳಣೇ) ಕ್ರಿ.ವಿ. ಪಾಡಾಗು, ಹಣ್ಣಾಗು.

**गाय** (ಗಾಯ್) ಸ್ತ್ರೀ. ಆಕಳು, ಹಸು.

**गायक** (ಗಾಯಕ್) ಪು. ಸಂ. ಗಾಯಕ, ಸಂಗೀತಜ್ಞ.

**गायकी** (ಗಾಯಕೀ) ಸ್ತ್ರೀ. ಸಂಗೀತ ಪದ್ಧತಿ, ಹಾಡುವ ರೀತಿ, ಸಂಗೀತಕಾರನ ವ್ಯವಸಾಯ.

**गायतोंडचा** (ಗಾಯತೋಂಡ್ಯಾ) ವಿ. ನಮ್ರ, ನಾಚಿಕೊಳ್ಳುವವ.

**गायत्री** (ಗಾಯತ್ರೀ) ಸ್ತ್ರೀ. ಸಂ. ಋಗ್ವೇದದ ಒಂದು ಮಂತ್ರ.

**गार** (ಗಾರ್) ಸ್ತ್ರೀ. ಆಣೆಕಲ್ಲು, ತಗ್ಗು. ೨. ಹೊಟ್ಟೆ. ೩. ಬೆನಕ.

ವಿ. ತಣ್ಣನ್ನ, ತಂಪಾದ.

ಕ್ರಿ. ವಿ. ತಂಪಾಗಿ, ತಣ್ಣಗಾಗಿ.

**–करणे** (–ಕರಣೇ) ಕ್ರಿ. ಸ. ರಮಿಸು. ೨. ಆಶ್ಚರ್ಯಗೊಳಿಸು. ೩. ವಶಪಡಿಸಿಕೊ.

**तळीराम–करणे** (ತಳೀರಾಮ್ ಗಾರ್ ಕರಣೇ) ಬೇರೊಬ್ಬರ ಸೊತ್ತನ್ನು ಅಪಹರಿಸಿ ಆನಂದ ಪಡುವಿಕೆ.

**तळीराम गार होणे** (ತಳೀರಾಮ್ ಗಾರ್ ಹೋಣೇ) ಕ್ರಿ. ಅ. ತೃಪ್ತಿ ಹೊಂದು.

**गारगोटी** (ಗಾರಗೋಟೀ) ಸ್ತ್ರೀ. ಬೆನಕ, ಬೆನಕನ ಕಲ್ಲು.

**गारठणे** (ಗಾರಠಣೇ) ಕ್ರಿ. ಅ. ತಣ್ಣಗಾಗು, ಹೆಪ್ಪುಗಟ್ಟು, ಗಡ್ಡೆಗಟ್ಟು.

**गारठा** (ಗಾರಠಾ) ಪು. ಶೀತ, ತಣ್ಣನ್ನ ಹವೆ.

**गारद** (ಗಾರದ್) ವಿ. ಅರ. (ಗಾರತ್) ಇಲ್ಲದಾಗುವಿಕೆ, ಕಳೆದು ಹೋಗುವಿಕೆ.

**गारदी** (ಗಾರದೀ) ಪು. ಪೋರ್ತು. ಇಂ. ಸೈನಿಕ ದಂಡಾಳು, ಸಂರಕ್ಷಕ.

**गारवा** (ಗಾರವಾ) ಪು. ತಂಪು, ಶೀತಲತೆ.

**गारुडी** (ಗಾರುಡೀ) ಪು. ಹಾವಾಡಿಗ, ಮಾಟಗಾರ. ಮಾಯಾವಿ.

**गाऱ्हाणे** (ಗಾರ್‍ಹಾಣೇ) ನ. ಗೋಳು, ದುಃಖ, ತಾಪತ್ರಯ.

**गाल** (ಗಾಲ್) ಪು. ಕೆನ್ನೆ, ಗಲ್ಲ.

**गालावर गाल चढणे** (ಗಾಲಾವರ್ ಗಾಲ್ ಚಢಣೇ) ಕ್ರಿ. ಅ. ಕೊಬ್ಬು, ಸ್ಥೂಲನಾಗು.

**गालांत हसणे** (ಗಾಲಾತ್ ಹಸಣೇ) ಕ್ರಿ.ಅ. ಮೃದುವಾಗಿ ನಗು, ನರ್ಮಹಾಸ್ಯ ಮಾಡು.

**–गुच्चा** (–ಗುಚ್ಚಾ) ಪು. ಗಲ್ಲ ಹಿಂಡು, ಪ್ರೀತಿಯನ್ನು ತೋರಿಸು. ೨. ಪ್ರಾಯಶ್ಚಿತ್ತ ಮಾಡು.

**–गुंड** (–ಗುಂಡ್) ನ. ಮಂಗನ ಬಾವು.

**–फड** (–ಫಡ್) ನ. ಕೆನ್ನೆ. ೨. ಕೂತಗಲ್ಲ. ಒಳ ಸೇದಿದ ಕೆನ್ನೆ.

**–फड बसणे** (ಫಡ್ ಬಸಣೇ) ಕ್ರಿ .ಅ. ಗಲ್ಲ ಒಳ ಸೇದು, ಅಶಕ್ತನಾಗು.

**गालबोनेट** (ಗಾಲ್‌ಬೋಟ್) ನ. ದೃಷ್ಟಿ ಹತ್ತಬಾರದೆಂದು ಹಚ್ಚಿದ ಕಪ್ಪು, ಕಾಡಿಗೆ.

**गालिचा** (ಗಾಲಿಚಾ) ಪು. ಫಾ ರತ್ನಗಂಬಳಿ.

**गालिप्रदान** (ಗಾಲಿಪ್ರದಾನ) ನ. ಸಂ. ಬಯ್ಯುವಿಕೆ.

**गाली–ळी** (ಗಾಲೀ–ಳೀ) ಸ್ತ್ರೀ. ಹಿಂ. ಬಯ್ಯುವಿಕೆ.

**गाव** (ಗಾವ್) ನ. ಊರು, ಗ್ರಾಮ.

**–कंटक** (–ಕಂಟಕ್) ಪು. ಊರಲ್ಲಿಯ ತುಂಟ.

**–करी** (–ಕರೀ) ಪು. ಊರವ, ಗ್ರಾಮಸ್ಥ, ಹಳ್ಳಿಗ, ಗ್ರಾಮವಾಸೀ.

**गावकी** (ಗಾವಕೀ) ಸ್ತ್ರೀ. ಊರಮಂದಿ, ಪಂಚಾಯತ್ತು.

**गावकुसू** (ಗಾವಕುಸೂ) ನ. ಊರ ಸುತ್ತು ಗೋಡೆ, ಬೇಲಿ.

**गावगन्ना** (ಗಾವಗನ್ನಾ) ಕ್ರಿ. ವಿ. ಪ್ರತಿಯೊಂದು ಊರಿಗೆ, ಪ್ರತಿಯೊಬ್ಬನಿಗೆ.

**गावगुंड** (ಗಾವಗುಂಡ್) ಪು. ಊರಲ್ಲಿ ಉಪದ್ರವ ಕೊಡುವವ ಕಿಡಿಗೇಡಿ.

**गावठ–ठा–ण** (ಗಾವಠ–ಠಾ–ಣ) ನ. ಊರ ಪ್ರದೇಶ, ಗಡಿ.

**गावठी** (ಗಾವಠೀ) ವಿ. ಅಪರಿಷ್ಕೃತ, ಅಸಂಸ್ಕೃತ, ಹುಂಬ, ಉರುಟು, ನಯವಲ್ಲದ, ೨. ಶಾಸ್ತ್ರೋಕ್ತ ವಲ್ಲದ, ದೇಶೀಯ, ಕಚ್ಚಾ.

**गावढळ** (ಗಾವಢಳ್) ವಿ. ಹಳ್ಳಿಯ, ಸುಧಾರಣೆ ಹೊಂದದ, ಆಶಿಕ್ಷಿತ.

**गावढे** (ಗಾವಢೇ) ನ. ಗುಡಿಸಲು, ಊರು, ಹಳ್ಳ.

**गावदेवी** (ಗಾವದೇವೀ) ಸ್ತ್ರೀ. ಊರದೇವತೆ. ಗ್ರಾಮ ದೇವತೆ.

**गावमामा** (ಗಾವಮಾಮಾ) ಪು. ಊರಲ್ಲಿ ಎಲ್ಲರಿಗೂ ಬೇಕಾದವ, ಹಿರಿಯ.

**गावमावशी** (ಗಾವಮಾವಶೀ) ಸ್ತ್ರೀ. ಊರಲ್ಲಿ ಎಲ್ಲರಿಗೂ ಬೇಕಾದವಳು.

**गावरान** (ಗಾವರಾನ್) ನ. ಊರ ಗಡಿ. ವಿ. ಹಳ್ಳಿಯ, ಅಪರಿಷ್ಕೃತ, ಗಾವಠಿ.

**गायली** (ಗಾಯಲೀ) ಸ್ತ್ರೀ. ಆಕಳ ಅಕ್ಕರದ ಹೆಸರು.

**गाववेस** (ಗಾವವೇಸ್) ಸ್ತ್ರೀ. ಊರ ಅಗಸೆ.

**गाशा** (ಗಾಶಾ) ಪ್ರ ಅರ. ಆಸನ, ಹಾಸಿಗೆ.

**–गुंडाळणे** (–ಗುಂಡಾಳಣೆ) ಕ್ರಿ. ಸ. ಪ್ರಯಾಣ ಬೆಳೆಸು, ಗುಡಿಚಾಪೆ ಕಟ್ಟು. ಗಂಟುಕಟ್ಟು.

**गाळ** (ಗಾಳ್) ಸ್ತ್ರೀ. ಪು ಬೈಯ್ಯುವಿಕೆ, ಬೈಗಳು. ರಾಡಿ, ತಳದಲ್ಲಿ ಕೂತ ಹೊಲಸು, (ಲಾ) ನಿರುಪಯುಕ್ತ ಪದಾರ್ಥ.

**गाळण** (ಗಾಳಣ್) ಸ್ತ್ರೀ. ಅಂಜಿಕೆ, ಬೆದರಿಕೆ ಹಾಹಾರು ವಿಕೆ.

**–उडणे** (–ಉಡಣೇ) ಕ್ರಿ. ಅ– ಅಂಜು, ಬೆದರು, ಹಾಹಾರಿ ಹೋಗು.

**गाळणी** (ಗಾಳಣೀ) ಸ್ತ್ರೀ. ಸೋಸುವ ಪಾತ್ರೆ, ಸೋಸಿಗೆ, ಜರಡಿ, ಸಾರಣಿಗೆ.

**गाळणे** (ಗಾಳಣೇ) ಕ್ರಿ. ಸ. ಸೋಸು, ಬಸಿ. ೨. ಬಿಟ್ಟು ಬಿಡು, ಕಾಟುಹಾಕು. ೩. ಶುದ್ಧಮಾಡು. ೪. ಸರಾ ಯಿಮಾಡು.

**गाळा** (ಗಾಳಾ) ಪು. ಹಿಂಜದ ಹತ್ತಿ, ಕಾಳು ತೆಗೆದ ಹತ್ತಿ, ೨. ಅಂಕಣ, ೩. ಖೋಲಿ, ವಾಸಸ್ಥಳ.

**गाळागाळ** (ಗಾಳಾಗಾಳ್) ಸ್ತ್ರೀ. (ಪುಸ್ತಕ,ಕಾರ್ಯಕ್ರ ಮದೊಳಗಿಂದ) ಅಂಶಗಳನ್ನು ತೆಗೆದುಹಾಕುವಿಕೆ.

**गाळीव** (ಗಾಳೀವ) ವಿ. ಸೋಸಿದ. ಬಸಿದ. ೨ ಶುದ್ಧ ೩. ಮಹಾಧೂರ್ತ.

**गिचमिड** (ಗಿಚ್‌ಮಿಡ್) ಸ್ತ್ರೀ. ಗಿಜಬಿಜಿಯಾದ ಬರಹ, ಗಿಜಿಬಿಜಿಯಾದ, ಓದಲಿಕ್ಕೆ ಬಾರದ.

**गिड्डा** (ಗಿಡ್ಡಾ) ವಿ. ಕ. ಗಿಡ್ಡ, ಕುಳ್ಳ.

**गिधाड** (ಗಿಧಾಡ್) ನ. ರಣಹದ್ದು, ಹಾಳೆಯಹದ್ದು.

**गिरकन्** (ಗಿರಕನ್) ಕಿ. ವಿ. ಒಮ್ಮೆಲೆ ಸುತ್ತುಹಾಕಿ, ಗಿರ್ರೆಂದು.

**गिरकी** (ಗಿರಕೀ) ಸ್ತ್ರೀ. ಸುತ್ತು, ಪಲಟಿ.

**गिरगिरणे** (ಗಿರಗಿರಣೇ) ಕ್ರಿ. ಅ. ತಲೆ ತಿರಗು, ಬವ ಳಿಬರು.

**गिरणी** (ಗಿರಣೀ) ಸ್ತ್ರೀ. ಯಂತ್ರ, ಕಾರ್ಖಾನೆ, ಮಿಲ್.

**गिरदी** (ಗಿರದೀ) ಸ್ತ್ರೀ. ದುಂಡನ್ನ ತಲೆಗಿಂಬು ತಕ್ಕೆ.

**गिरफदार** (ಗಿರಫ್‌ದಾರ್) ವಿ. ಫಾ. ಸೆರೆಹಿಡಿದ, ದಸ್ತ ಗಿರಿಮಾಡಿದ ಬಂಧಿಸಿದ.

**गिरमिट** (ಗಿರಮಿಟ್) ನ. ಇಂ. ಬಡಿಗನ ತೂತು ಕೊರೆಯುವ ಸಾಧನ, ಬೈರಿಗೆ.

**गिरविणे** (ಗಿರವಿಣೇ) ಕಿ. ನ. ಹಾಕಿಕೊಟ್ಟ ಅಕ್ಷರಗ ಳನ್ನು ತೀಡು, ಬರೆ.

**किता–** (–ಕಿತ್ತಾ) ಕ್ರಿ. ನ. ಅನುಕರಣ ಮಾಡು, ಪಾಠಕಲಿ.

**गिरा** (ಗಿರಾ) ಸ್ತ್ರೀ. ಸಂ ಭಾಷೆ, ಮಾತು.

**गिरी** (ಗಿರೀ) ಸ್ತ್ರೀ. ಗುಡ್ಡ, ಪರ್ವತ, ೨. ತಿರುಪತಿ ಕ್ಷೇತ್ರ.

**–गिरी** (–ಗಿರೀ) (ಪ್ರತ್ಯಯ) ಸ್ತ್ರೀ. ತನ–ಗಾರಿಕೆ. ಉದಾ. **दादा गिरी** (ದಾದಾ ಗಿರೀ) ಸ್ತ್ರೀ. ತುಂಟ ತನ.

**गिर्रेबाज** (ಗಿರ್ರೇಬಾಜ್,) ವಿ. ಪಲಟಿ ಹೊಡೆಯುವ (ಪಾರಿವಾಳ) ಡಾಲಿನವ, ಓಮ್ಮಾಕ ಮಾಡುವವ.

**गिऱ्हाइकी** (ಗಿರ್ಹಾಇಕೀ) ಸ್ತ್ರೀ. ವ್ಯಾಪಾರ, ಮಾರಾಟ.

**गिऱ्हाईक** (ಗಿರ್ಹಾಈಕ್) ಪು. ಗಿರಾಕಿ, ಕೊಳ್ಳುವವ, ವರ್ತನೆಗಾರ.

**गिलगिलीत** (ಗಿಲ್‌ಗಿಲೀತ್) ವಿ. ಅಳ್ಳನ್ನ,ಲೋಳೆಯಾದ.

**गिलावा** (ಗಿಲಾವಾ) ಪು. ಸಾರಿಸುವಿಕೆ, ಲೇಪ, ಬಳಿ ಯುವಿಕೆ,ಗೋಡೆಯನ್ನು ನುಣುಪು ಮಾಡುವುದಕ್ಕೆ ಹಚ್ಚಿದ, ಗಚ್ಚು, ಸಿಮೆಂಟು.

**गिल्ला** (ಗಿಲ್ಲಾ) ಪು. ಫಾ. ದೂರು, ದೂಷಣೆ, ಆಕ್ರೋಶ, ತಕರಾರು.

**गिळंकृत** (ಗಿಳಂಕೃತ) ವಿ. ಎತ್ತಿಹಾಕಿದ, ನುಂಗಿದ, ಕೈವಶಪಡಿಸಿಕೊಂಡ.

**–करणे** (–ಕರಣೇ) ಕ್ರಿ. ನ. ಅಪಹರಿಸು, ತಿಂದು ಹಾಕು, ನುಂಗು.

**गिळगिळीत** (ಗಿಳಗಿಳೀತ್) ವಿ. ಲೋಳೆಯಾದ, ಜವು ಳಾದ, ಒದ್ದೆಯಾದ, ಹಸಿ.

**गिळणे** (ಗಿಳಣೇ) ಕ್ರಿ.ಸ. ನುಂಗು, ಸಹಿಸು. ೨.ಅಪಹ ರಿಸು. ೩. (ತುಚ್ಛತೆಯಿಂದ ಅನ್ನುವಾಗ) ಉಣ್ಣು, ತಿನ್ನು.

**गीत**(ಗೀತ್) ನ. ಸಂ. ಹಾಡು, ಪದ, ಪದ್ಯ.

**गीर** (ಗೀರ್) ಪು. ತಿರುಳು, ಸಾರ, ರಸ, ತೊಳೆ.

**गीर्वाण** (ಗೀರ್ವಾಣ) ವಿ. ಸಂ. ದೇವಲೋಕದ.

**–भाषा** (–ಭಾಷಾ) ಸ್ತ್ರೀ. ಸಂಸ್ಕೃತ ಭಾಷೆ

**गुंग** (ಗುಂಗ್) ವಿ. ಮಗ್ನ, ಬೆಪ್ಪಗಾದ, ಆಶ್ಚರ್ಯ ಪಡುವ.

**गुंगणे** (ಗುಂಗಣೇ) ಕ್ರಿ. ಅ. ಧ್ಯಾನಮಾಡು, ಸಮಾಧಿ ಹತ್ತು, ಮಗ್ನನಾಗು.

**गुंगविणे** (ಗುಂಗವಿಣೇ) ಕ್ರಿ. ಸ. ರಮಿಸು, ೨. ಆಕ ರ್ಷಣೆಯನ್ನುಂಟುಮಾಡು. ೩. ಅಮಲುಬರು ವಂತೆಮಾಡು. ೪. ಕೆಲಸದಲ್ಲಿ ತೊಡಗಿಸು. ೫. ಮಗ್ನಮಾಡು. ೬. ಮೋಸಗೊಳಿಸು.

**गुंगारा** (ಗುಂಗಾರಾ) ಪು. ಮೋಸ, ಠಕ್ಕುತನ.

**गुंगी** (ಗುಂಗೀ) ಸ್ತ್ರೀ. ಎಚ್ಚರ ತಪ್ಪುವಿಕೆ, ಅಮಲೇರು ವಿಕೆ, ಅಮಲು, ಮೂರ್ಛೆ.

**गुच्चा** (ಗುಚ್ಚಾ) ಪು. ಹೊಡೆತ, ಏಟು, ತಾಡನ.

**गुच्छ** (ಗುಚ್ಛ) ಪು. ಸಂಚಯ, ಹೂವಿನತುರಾಯಿ, 'ಬೋಕೆ'

**गुंज** (ಗುಂಜ) ಸ್ತ್ರೀ. ಗುಂಜಿ, ಕರಿಯಕಣ್ಣುಳ್ಳ ಕೆಂಪು ಕಾಳು. ೨. ಬಂಗಾರದ ತೀರ ಕಡಿಮೆಯಾದ ತೂಕ.

**गुज** (ಗುಜ್) ನ. ಗುಪ್ತ ಮಾತು.

**–गोष्टी**(–ಗೋಷ್ಟೀ) ಸ್ತ್ರೀ. ಬಹುವ. ಗುಪ್ತ ಮಾತುಕತೆ.

**गुंजट** (ಗುಂಜಟ್) ನ. ಕಟ್ಟಿಗೆಯ ಮೇಲಿನ ಗಂಟು.

**गुंजडे** (ಗುಂಜಡೇ) ನ. ದಾರದ ಉಂಡೆ, ಲಡಿ.

**गुंजन** (ಗುಂಜನ) ನ. ಸಂ. ಕೂಜನ, ಇಂಪಾದ ಸ್ವರ, ಇಂಚರ.

**गुजर** (ಗುಜರ್) ಪು. ಫಾ. ಉದರನಿರ್ವಾಹ.

**गुजरणे** (ಗುಜರಣೇ) ಕ್ರಿ. ಸ. ಕಾಲಕಳೆ. ೨. (ವ್ಯಾಜ್ಯ) ಹೂಡು. ೩. (ಮೈ ಮೇಲೆ) ಪ್ರಸಂಗ ಬರು. ೪. ಮರಣ ಹೊಂದು.

**गुजराण** (ಗುಜರಾಣ್) ಸ್ತ್ರೀ. ಉದರನಿರ್ವಾಹ.

**गुजरी** (ಗುಜರೀ) ಸ್ತ್ರೀ. ಅರಳೆಯ (ಗುಜರಾತೀ ವ್ಯಾಪಾರಸ್ಥರ) ಪೇಟೆ, ಪಲ್ಲೆಯ ಪೇಟೆ. ೨. ಅರಳೆಯ ಅಂಡಿಗೆ.

**गुंजारव** (ಗುಂಜಾರವ್) ಪು. ಜೇನ್ನೊಣದ ಗುಣ ಗುಟ್ಟುವಿಕೆ. ೨. ಭ್ರಮರದ ಗುಂಜನ.

**गुजारा** (ಗುಜಾರಾ) ಪು. ಫಾ. ಹೊಟ್ಟೆ ತುಂಬಿ ಕೊಳ್ಳುವಿಕೆ.

**गुटिका** (ಗುಟಿಕಾ) ಸ್ತ್ರೀ. ಗುಳಿಗೆ, ಗುಟಿ, ಗುಂಡು.

**गुटी** (ಗುಟೀ) ಸ್ತ್ರೀ. ಗುಳಿಗೆ.

**गुंठा** (ಗುಂಠಾ) ಪು. ಉಳ, ಬೇಸಾಯದ ಸಾಧನ. ೨. ಎಕರೆಯ $\frac{೧}{೪೦}$ ಭಾಗ.

**गुंड** (ಗುಂಡ್) ವಿ. ತುಂಟ, ಕಿರುಕುಳ ಕೊಡುವವ, ಉಪದ್ರವಿ.

**गुडगुडी** (ಗುಡಗುಡೀ) ಸ್ತ್ರೀ. ಗುಡಗುಡಿ, ಹುಕ್ಕಾ.

**गुडघा** (ಗುಡಘಾ) ಮೊಣಕಾಲು.

**गुडघी** (ಗುಡಘೀ) ಸ್ತ್ರೀ. ಮೊಣಕಾಲಿನ ಬಾವು, ನೋವು. ೨. ಬ್ರೀಚಿಸ್, ಚಲ್ಲಣ, ಷರಾಯಿ.

**गुडदाणी** (ಗುಡದಾಣೀ) ಸ್ತ್ರೀ. ಕರದಂಟು.

**गुंडा** (ಗುಂಡಾ) ಪು. ದಾರದ ಉಂಡೆ.

**गुडाखू** (ಗುಡಾಖೂ) ಪು. ಗುಡಗುಡಿಗಾಗಿ ಉಪ ಯೋಗಿಸುವ ತಂಬಾಕ, ಬೆಲ್ಲ ಕೂಡಿದ ತಂಬಾಕ.

**गुडाकेश** (ಗುಡಾಕೇಶ) ಪು. ಸಂ. ಸಂಯಮಿ, ಜಿತೇಂದ್ರಿಯ. ೨. ಕೃಷ್ಣ.

**गुंडाळणे** (ಗುಂಡಾಳಣೇ) ಕ್ರಿ. ಸ. (ದಾರ, ಹಾಸಿಗೆ ಮುಂ) ಸುತ್ತು, ಕಟ್ಟು.

**गुंडाळी** (ಗುಂಡಾಳೀ) ಸ್ತ್ರೀ. ಗಂಟು, ಸುತ್ತಿದ, ದಾರ, ಹಾಸಿಗೆ.

**गुंडी** (ಗುಂಡೀ) ಸ್ತ್ರೀ. ಗುಂಡಿ, ಬಟನ್. ೨. ಪಾತ್ರೆ.

**गुंड्या** (ಗುಂಡ್ಯಾ) ಪು- ಹುಡುಗನ ಅಕ್ಕರದ ಹೆಸರು.

**गुढी** (ಗುಢೀ) ಸ್ತ್ರೀ. ಕ. ಯುಗಾದಿಯ ದಿವಸ ಹಚ್ಚಿದ ನಿಶಾನಿ, ಬಾವುಟ.

**–पाडवा** (–ಪಾಡವಾ) ಪು. ಯುಗಾಹಬ್ಬ.ದಿಯ

**गुण** (ಗುಣ) ಪು. ಸಂ. ಗುಣ, ಸದ್ಗುಣ. ೨. ವಾಸಿ ಯಾಗುವಿಕೆ, ಆರೋಗ್ಯ.

**गुणक** (ಗುಣಕ) ಪು. ಸಂ. ಗುಣಿಸುವ ಸಂಖ್ಯೆ.

**गुणकर–कारी** (ಗುಣಕರ–ಕಾರೀ) ವಿ. ಸಂ. ವಾಸಿಗೊಳಿಸು, ಗುಣಕಾರಿಯಾದ.

**गुणगान** (ಗುಣಗಾನ) ನ. ಸಂ. ಸ್ತುತಿ, ಸ್ತವನ.

**गुणगुण** (ಗುಣಗುಣ್) ಸ್ತ್ರೀ. ಗೊಣಗುಟ್ಟುವಿಕೆ. ೨. ಗುಂಜನ.

**–णे** (–ಣೇ) ಕ್ರಿ. ಸ. ಮೆಲ್ಲಗೆ ಹಾಡು ಅನ್ನು. ೨. ಗೊಣಗುಟ್ಟು.

**गुणगुणा** (ಗುಣಗುಣಾ) ಪು. ಮೂಗಿನ ಹೊಳ್ಳೆಗಳನ್ನು ಸಂಧಿಸುವ ಸ್ನಾಯು.

**–फुटणे** (–ಫುಟಣೇ) ಕ್ರಿ. ಅ. ಮೂಗಿನೊಳಗಿಂದ ರಕ್ತ ಸುರಿ.

**गुणग्रहण** (ಗುಣಗ್ರಹಣ) ನ. ಸಂ. ರಸಾಸ್ವಾದ, ಗುಣಗಳ ಪರೀಕ್ಷೆ, ತಲೆದೂಗುವಿಕೆ.

**गुणग्राहक** (ಗುಣಗ್ರಾಹಕ) ವಿ. ಸದ್ಗುಣಗಳನ್ನು ಆದರಿಸುವವ.

**गुणणे** (ಗುಣಣೇ) ಕ್ರಿ. ಸ. ಗುಣಾಕಾರ ಮಾಡು.

**गुणत्रय** (ಗುಣತ್ರಾಯ) ನ. ತ್ರೈಗುಣ್ಯ–ಸತ್ವ, ರಜ, ತಮ ಈ ಮೂರು ಗುಣಗಳು.

**गुणदोष** (ಗುಣದೋಷ್) ಪು. ಬಹು. ವ. ಸಂ. ಒಳ್ಳೆಯ ಮಾತುಗಳು ಮತ್ತು ದೋಷಗಳು.

**गुणवंत** (ಗುಣವಂತ್) ವಿ. ಸಂ. ಸದ್ಗುಣಿ, ಸುಶೀಲ.

**गुणवती** (ಗುಣವತೀ) ಸ್ತ್ರೀ. ಸಂ. ಸದಾಚಾರಿಣಿ, ಒಳ್ಳೆಯ ಹೆಂಗಸು.

**गुणवत्ता** (ಗುಣವತ್ತಾ) ಸ್ತ್ರೀ. ಸಂ. (ಒಳ್ಳೆಯ ಗುಣಗಳು ಇರುವಿಕೆ.

**गुणहीन** (ಗುಣಹೀನ) ವಿ. ಸಂ. ಸದ್ಗುಣಗಳಿಲ್ಲದ, ಅಶಿಕ್ಷಿತ, ಅಕುಶಲ, ನಿರುಪಯುಕ್ತ.

**गुणज्ञ** (ಗುಣಜ್ಞ) ಪು. ಸಂ. ಗುಣಗಳನ್ನು ಗುರುತಿಸುವವ, ರಸಿಕ, ಮರ್ಮಜ್ಞ.

**गुणांक** (ಗುಣಾಂಕ್) ಪು. ಸು. ಗುಣಾಕಾರ ಮಾಡಿದ ಮೇಲೆ ಬರುವ ಸಂಖ್ಯೆ.

**गुणाकार** ಪು. ಸಂ. ಗುಣಾಕಾರ, ಗುಣಿಸುವಿಕೆ.

**गुणाढ्य** (ಗುಣಾಢ್ಯ) ವಿ. ಸಂ. ಸದ್ಗುಣಮಣಿ, ಸದ್ಗುಣಿ.

**गुणात्मक** (ಗುಣಾತ್ಮಕ) ವಿ. ಸಂ. ಗುಣದ ದೃಷ್ಟಿಯಿಂದ ಕಲ್ಪಿಸಿದ, ಒಳ್ಳೆಯ, ಕೆಟ್ಟ ಎಂಬ ವಿಚಾರವುಳ್ಳ (ತುಲನೆ).

**गुणाधिक्य** (ಗುಣಾಧಿಕ್ಯ) ನ. ಸಂ. ಸದ್ಗುಣಗಳ ಹೆಚ್ಚಳ, ವಿಪುಲತೆ.

**गुणानुवाद** (ಗುಣಾನುವಾದ) ನ. ಸಂ. ಗುಣಗಾಯನ

**गुणीजन** (ಗುಣೀಜನ) ಪು. ಸಂ. ಕುಶಲ, ರಸಿಕ ಮನುಷ್ಯ. ೨. ನೃತ್ಯ ಗಾಯನ ಮಾಡುವವ.

**गुणी** (ಗುಣೀ) ವಿ. ಸಂ. ಗುಣವಂತ, ಸದ್ಗುಣಿ.

**गुणोत्कर्ष** (ಗುಣೋತ್ಕರ್ಷ) ಪು. ಸಂ. ಸದ್ಗುಣಗಳ ಹೆಚ್ಚಳ, ವಿಪುಲತೆ.

**गुणोत्तर** (ಗುಣೋತ್ತರ) ನ. ಸಂ. (ಭೂಮಿತಿ) ಶ್ರೇಢಿ ಗುಣೋತ್ತರ, ಪ್ರೊಗ್ರೇಶನ್.

**गुण्य** (ಗುಣ್ಯ) ವಿ. ಸಂ. ಗುಣಿಸಬೇಕಾದ ಸಂಖ್ಯೆ.

**गुण्या** (ಗುಣ್ಯಾ) ಪು. ಉಪ್ಪಾರನ (ಸಮತಲ ಗೋಡೆಯ ಎತ್ತರ ನೋಡುವ) ಪಟ್ಟಿ.

**गुण्यांक** (ಗುಣ್ಯಾಂಕ) ಪು. ಗುಣಾಕಾರದ ಸಂಖ್ಯೆ.

**गुण्यागोविंदाने** (ಗುಣ್ಯಾಗೋವಿಂದಾನೇ) ಕ್ರಿ.ವಿ. ಸದ್ಭಾವದಿಂದ, ಪ್ರೀತಿ, ಆದರದಿಂದ.

**गुंतणे** (ಗುಂತಣೇ) ಕ್ರಿ. ಅ. ತೊಡಕು, ತೊಡಗು, ಸಿಲುಕು, ಸಿಲುಕಿಬೀಳು.

**गुंतवळ** (ಗುಂತವಳ್) ಸ್ತ್ರೀ. ನ. ಹೆಳಲಿನಿಂದ ಬಿದ್ದ ಕೂದಲು, ಕೇಶಪುಂಜ.

**गुंतविणे** (ಗುಂತವಿಣೇ) ಕ್ರಿ. ಸ. ತೊಡಗಿಸು, ಹಣ ಬಡ್ಡಿಗೆ ಕೊಡು, ವಿನಿಯೋಗಿಸು. ೨. ಇಕ್ಕಟ್ಟಿನಲ್ಲಿ ಹಿಡಿ. ತೊಡಕಿಸು, ಸಿಲುಕಿಸು.

**गुंता** (ಗುಂತಾ) ಪು. ತೊಡಕು, ಗಂಟು, ಸಮಸ್ಯೆ.

**गुंतागुंत** (ಗುಂತಾಗುಂತ) ಸ್ತ್ರೀ. ತೊಡಕು, ಸಮಸ್ಯೆ.

**गुत्ता** (ಗುತ್ತಾ) ಪು. ಕ. ಗುತ್ತಿಗೆ.

**गुद** (ಗುದ) ನ. ಸಂ. ಅಂಡು, ಮುಕಳಿ, ಗುದದ್ವಾರ

**–द्वार** (–ದ್ವಾರ) ಆಸನದ್ವಾರ, ಕುಂಡಿ.

**गुदगुदणे** (ಗುದಗುದಣೇ) ಕ್ರಿ. ಅ. ಉಕ್ಕೇರಿ ಬರು, ಉತ್ಸಾಹ ಬರು.

**गुदगुदी** (ಗುದಗುದೀ) ಸ್ತ್ರೀ. ಉಕ್ಕೇರುವಿಕೆ. ೨. ಉತ್ಸಾಹ. ೩. ತೀಟೆ.

**गुदगुली** (ಗುದಗುಲೀ) ಸ್ತ್ರೀ. ಕಟ್ಟಾಡಿಸುವಿಕೆ.

**गुदमरणे** (ಗುದಮರಣೇ) ಕ್ರಿ. ಅ. ಉಸುರುಗಟ್ಟು.

**गुदस्त** (ಗುದಸ್ತ್) ಕ್ರಿ. ವಿ. ಹೋದವರ್ಷ. ವಿ. ಕಳೆದ, ಸಂದಿದ (ವರ್ಷ).

**–बाकी** (–ಬಾಕೀ) ಸ್ತ್ರೀ. ಹೋದ ವರ್ಷದ ಬಾಕಿ, ಸಲ್ಲುವ ಹಣ.

**गुदस्ता** (ಗುದಸ್ತಾ) ಕ್ರಿ. ವಿ. ಹೋದ ವರ್ಷ.

**गुदाम** (ಗುದಾಮ್) ಪು. ಇಂ. ವಖಾರ, ಅಡ್ಡೆ, ಉಗ್ರಾಣ, ಸಂಗ್ರಹ.

**गुद्दा** (ಗುದ್ದಾ) ಪು. ಕ. ಗುದ್ದು, ಗುದ್ದುವಿಕೆ.

**गुन्हा** (ಗುನ್ಹಾ) ಪು. ಫಾ. ಅಪರಾಧ, ದೋಷ.

**गुन्हेगार** (ಗುನ್ಹೇಗಾರ್) ವಿ. ಫಾ. ಅಪರಾಧಿ.

**गुन्हेगारी** (ಗುನ್ಹೇಗಾರೀ) ಸ್ತ್ರೀ. ಫಾ. ಅಕ್ರಮ ನಡತೆ, ಅಪರಾಧ ಮಾಡುವಿಕೆ.

**गुपचुप** (ಗುಪಚುಪ್) ಕ್ರಿ. ವಿ. ಸದ್ದಿಲ್ಲದೆ, ಹೇಳದೆ ಕೇಳದೆ.

**गुपित** (ಗುಪಿತ್) ನ. ಗುಟ್ಟು, ಗುಪ್ತಸಂಗತಿ,ಮರ್ಮ.

**गुप्त** (ಗುಪ್ತ) ವಿ. ಸಂ. ಬಚ್ಚಿಟ್ಟ, ಕಾಣದ, ಗುಪ್ತ.

**–दान** (–ದಾನ್) ನ. ಸಂ. ಗುಪ್ತವಾಗಿ ಕೊಟ್ಟ ಹಣ.

**–दूत** (–ದೂತ್) ಪುನಃ ಗುಪ್ತ ರೀತಿಯಿಂದ ಕಳಿಸಿದ ಆಳು, ರಾಯಭಾರಿ.

**–धन** (–ಧನ) ಹೂಳಿಟ್ಟ–ಉಲ್ಲೇಖವಿಲ್ಲದ–ಹಣ, ಸಂಪತ್ತು.

**गुप्त पोलीस** (ಗುಪ್ತ ಪೋಲೀಸ) ಪು. ಪತ್ತೇದಾರಿಯ ಪೋಲೀಸ್.

**गुप्ती** (ಗುಪ್ತೀ) ಸ್ತ್ರೀ. ಬಡಿಗೆಯಲ್ಲಿ ಮುಚ್ಚಿದ ಚೂರಿ.

**गुंफणे** (ಗುಂಫಣೇ) ಕ್ರಿ. ಸ. ಪೋಣಿಸು.

**गुंफा** (ಗುಂಫಾ) ಸ್ತ್ರೀ. ಗುಹೆ, ಗವಿ.

**गुबगुबीत** (ಗುಬಗುಬೀತ್) ವಿ. ಮೈ ಕೈ ತುಂಬಿಕೊಂಡ, ಕೊಬ್ಬಿದ.

**गुबारा** (ಗುಬಾರಾ) ಪು. ಫಾ. ವಾತದಿಂದ ಹೊಟ್ಟೆ ಉಬ್ಬುವಿಕೆ. ೨. ದ್ವೇಷ, ದೇಹದೊಳಗಡೆಯ ಬಾವು.

**गुमान** (ಗುಮಾನ್) ಪು. ಫಾ. ಸಂದೇಹ.

**गुमास्ता** ಪು. ಫಾ. ಬರೆಹಗಾರ, ನೋಕರ, ಸಿಬ್ಬಂದಿಯವ.

**गुरकणे** (ಗುರಕಣೇ) ಕ್ರಿ. ಅ. ರೇಗು, ಸಿಟ್ಟಿನಿಂದ ಮಾತಾಡು.

**गुरकावणे** (ಗುರಕಾವಣೇ) ಕ್ರಿ. ಸ. ಬೆದರಿಸು,ಅಂಜಿಸು

**गुरगुटा** (ಗುರಗುಟಾ) ವಿ. ಅಳ್ಳನ್ನ, ಗಂಜಿಯಂಥ.

**–भात** (–ಭಾತ್) ಪು. ಅಳ್ಳನ್ನ ಅನ್ನ.

**गुरगुर** (ಗುರಗುರ್) ಸ್ತ್ರೀ. ಸಿಟ್ಟು, ಕೋಪ, ಅಣಕಿಸುವಿಕೆ, ದೂರು.

**गुरगुराट** (ಗುರಗುರಾಟ) ಪು. ಸೆಡವು, ಅರ್ಭಟಿಸುವಿಕೆ, ರಂಭಾಟ.

**गुरचराई** (ಗುರಚರಾಯಿ) ಸ್ತ್ರೀ. ಹುಲ್ಲು ಬನ್ನಿ, ದನ ಮೇಯುವುದರ ಸಲುವಾಗಿ ಕೊಡುವ ಪಟ್ಟಿ.

**गुरफटणे** (ಗುರಫಟಣೇ) ಕ್ರಿ. ಅ. ಸುತ್ತು, ಸಿಲುಕು, ಸಿಲುಕಿ ಬೀಳು. ೨. ಆಸಕ್ತನಾಗು. ೩. ಹೊದಿಕೆಯಲ್ಲಿ ಇರು.

**गुरव** (ಗುರವ್) ಪು. ದೇವರ ಪೂಜೆ ಮಾಡುವವ, ಹೂಗಾರ, ದೇವರ ಸೇವಕ, ಗುಡಿಯ ಪರಿಚಾರಕ.

**गुराखी** (ಗುರಾಖೀ) ಪು. ದನಕಾಯುವವ, ಗೋಪ.

**गुरु** (ಗುರು) ಪು. ಸಂ. ಉಪಾಧ್ಯಾಯ, ಗುರುವು. ವಿ. ೨. ಗಂಭೀರ, ದೊಡ್ಡ, ಹೆಚ್ಚಿನ.

**–किल्ली** (–ಕಿಲ್ಲೀ) ಸ್ತ್ರೀ. ಖಂಡಿತ ಉಪಾಯ ಸಾಧನ.

**–जन** (–ಜನ) ಪು. ಬಹುವ. ಹಿರಿಯರು, ಗುರುಗಳು, ಮಹಾತ್ಮರು.

**–दक्षिणा** (–ದಕ್ಷಿಣಾ) ಸ್ತ್ರೀ. ಗುರುವಿಗೆ ಕೊಡುವ ಹಣ.

**गुरुत्व** (ಗುರುತ್ವ) ನ. ಸಂ. ಭಾರ, ಜಡತ್ವ.

**गुरुत्वाकर्षण** (ಗುರುತ್ವಾಕರ್ಷಣ) ನ. ಸಂ. ಭಾರವಿರುವ ವಸ್ತುವನ್ನು ತನ್ನೆಡೆಗೆ ಆಕರ್ಷಿಸುವ ಭೂಮಿಯ ಶಕ್ತಿ.

**गुरुद्रोह** (ಗುರುದ್ರೋಹ) ಪು. ಗುರುವಿನ ವಿರುದ್ಧ ಮಾಡಿದ ಕೃತ್ಯ, ವಂಚನೆ, ದ್ರೋಹ.

**गुरुपीठ** (ಗುರುಪೀಠ) ನ. ಸಂ. ಗುರುವಿನ ವಸತಿ ಸ್ಥಾನ.

**गुरुपूजा** (ಗುರುಪೂಜಾ) ಸ್ತ್ರೀ. ಸಂ. ಆಷಾಢ ಹುಣ್ಣಿಮೆಯ ದಿವಸ ಮಾಡುವ ಗುರುಪೂಜೆ.

**गुरुप्रसाद** (ಗುರುಪ್ರಸಾದ) ಗುರುವಿನ ಅನುಗ್ರಹ ಪ್ರಸಾದ.

**गुरुबन्धु** (ಗುರುಬಂಧು) ಪು. ಒಂದೇ ಗುರುವಿನ ಶಿಷ್ಯರು ಅಭ್ಯಾಸಮಾಡುವ ಸಂಗಡಿಗರು.

**गुरुमन्त्र** (ಗುರುಮಂತ್ರ) ಪು. ಗುರುವುಕೊಟ್ಟ ಮಂತ್ರ.

**गुरुवार** (ಗುರುವಾರ್) ಪು. ಬೃಹಸ್ಪತಿವಾರ.

**गुरू** (ಗುರೂ) ನ. ದನ, ಪ್ರಾಣಿ.

**गुरेढोरे** (ಗುರೇಢೋರೇ) ನ. ಬಹು. ವ. ದನಕರುಗಳು.

**गुर्मी** (ಗುರ್ಮೀ) ಸ್ತ್ರೀ. ಮಿತಿಮೀರಿದ ಸೊಕ್ಕು, ಗರ್ವ.

**गुऱ्हाळ** (ಗುರ್‍ಹಾಳ್) ಸ್ತ್ರೀ. ಕಬ್ಬಿನಗಾಣ. ೨. ಲಾ. ಬೇಸರಾಗುವಂತೆ ಮಾತನಾಡುವ ಅಭ್ಯಾಸ, ಕೇಳಲಿಕ್ಕೆ ಬೇಸರಬರುವ ಮಾತು.

**गुलकंद** (ಗುಲಕಂದ್) ಪು.ಫಾ. ಗುಲಾಬಿ ಹೂಗಳನ್ನು ಕಲ್ಲು ಸಕ್ಕರೆಯಲ್ಲಿ ಕುದಿಸಿ ಮಾಡಿದ ಮುರಬ್ಬ.

**गुलकावणे** (ಗುಲಕಾವಣೇ) ಕ್ರಿ. ಸ. ಠಕ್ಕಿಸು, ಮೋಸ ಮಾಡು, ಕೈಗೆಹತ್ತದಿರು, ಪಾರಾಗು.

**गुलगुलीत** (ಗುಲಗುಲೀತ್) ವಿ. ಮೃದುವಾದ, ನಸ ಳುವ, ಕೋಮಲ.

**गुलचांदणी** (ಗುಲಚಾಂದಣೀ) ಸ್ತ್ರೀ. ಹೂವಿನ ಒನಪು ಬಗೆ.

**गुलछडी** (ಗುಲಛಡೀ) ಸ್ತ್ರೀ. ಒಂದು ಹೂ.

**गुलछबू** (ಗುಲಛಬೂ) ಪು. ಒಂದು ಬಗೆಯ ಗುಲಾಬಿಯ ಅಥವಾ ರೋಜಾಹೂ. ೨. ರಸಿಕ.

**गुलजार** (ಗುಲಜಾರ್) ವಿ. ಫಾ. ಸುಂದರ, ಮನೋಹರ, ಆಕರ್ಷಕ, ಕೋಮಲ, ಶೃಂಗಾರಿಕ.

**गुलतुरा** (ಗುಲತುರಾ) ಪು. ಒಂದು ಹೂವಿನ ಗಿಡ, ಗೋಲ್ಡಮೊಹೊರ್.

**गुलदस्ता** (ಗುಲದಸ್ತಾ) ಪು. ಫಾ. ಪುಷ್ಪಗುಚ್ಛ.

**गुलदस्तात ठेवणे** (ಗುಲದಸ್ತಾತ ಠೇವಣೇ) ಕ್ರಿ. ಸ. ಗುಪ್ತವಾಗಿ ಇಡು, ಅನಿರ್ಣಿತವಾಗಿ ಇಡು.

**गुलमेख** (ಗುಲಮೇಖ್) ಸ್ತ್ರೀ. ದೊಡ್ಡ ತಲೆಯುಳ್ಳ ಸಣ್ಣಮೊಳೆ.

**गुलहोणे** (ಗುಲಹೋಣೇ) ಕ್ರಿ. ಅ. ಕಾಣಿಸದಂತಾಗು, ಪಲಾಯನಮಾಡು, ಓಡಿಹೋಗು.

**गुलहौशी** (ಗುಲಹೌಶೀ) ವಿ. ಫಾ. ರಸಿಕ, ಭೋಗ ವಿಲಾಸ ಪ್ರಿಯ, ಉತ್ಸವ ಪ್ರಿಯ.

**गुलहौस** (ಗುಲಹೌಸ್) ಸ್ತ್ರೀ. ಫಾ. ರಸಿಕತೆ, ಉತ್ಸಾಹ, ಉತ್ಸವ ಪ್ರಿಯತೆ, ಮೆರೆಯುವ, ಲವಲವಿಕೆಯುಳ್ಳವ.

**गुलाब** (ಗುಲಾಬ್) ಪು. ಫಾ. ಗುಲಾಬಿಯ ಹೂ, ರೋಜಾಹೂ.

**–दाणी** (ದಾಣೀ) ಸುಂಗಧದ ನೀರನ್ನು ಸಿಂಪಡಿಸುವ ಬೆಳ್ಳಿಯ ಪಾತ್ರೆ.

**–पाणी** (–ಪಾಣೀ) ಸ್ತ್ರೀ. ಗಂಧದ ನೀರು.

**गुलाबी** (ಗುಲಾಬೀ) ವಿ. ಗುಲಾಬಿಯ ಬಣ್ಣದ ಕೆಂಪು ಮೂಡಿಯ, ಬಣ್ಣದ.

**–थंडी** (–ಥಂಡೀ) ಸ್ತ್ರೀ. ಸುಖಕರವಾದ ಚಳಿ.

**गुलाम** (ಗುಲಾಮ್) ಪು. ಅರ. ದಾಸ, ಭೃತ್ಯ, ಕಿಂಕರ, ಆಳು. ೨. ಇಸ್ಪೇಟಿನಲ್ಲಿಯ 'ಗುಲಾಮ'(ರಾಣಿಯ ಗಿಂತ ಕೆಳಗಿನ ಚಿತ್ರ) ಜಾಕಿ.

**गुलामगिरी** (ಗುಲಾಮಗಿರೀ) ಸ್ತ್ರೀ. ಅರ. ದಾಸ್ಯ, ಪರಸ್ವಾಧೀನತೆ.

**गुलामजादा** (ಗುಲಾಮಜಾದಾ) ಪು. ಅರ+ವಾ. ಬೆರಕಿ, ಧೂರ್ತ.

**गुलामी** (ಗುಲಾಮೀ) ಸ್ತ್ರೀ. ಅರ. ದಾಸ್ಯ, ಪರಸ್ವಾಧೀನತೆ

**गुलाल** (ಗುಲಾಲ್) ಪು. ಹಿಂ. ಕೆಂಪುಬಣ್ಣದ ಪುಡಿ, ಕುಂಕುಮ.

**गुल्म** (ಗುಲ್ಮ) ನ. ಸಂ. ಗಂಟು, ದುಂಡನ್ನಗಿಡಗಂಟೆ, ಗಡ್ಡೆ, ಗ್ರಂಥಿ, ಸೇನಾವಿಭಾಗ.

**गुल्मोदर** (ಗುಲ್ಮೋದರ್) ನ. ಜಲೋದರದಂಥ ರೋಗ.

**गुहा** (ಗುಹಾ) ಸ್ತ್ರೀ. ಸಂ. ಗವಿ, ಗುಹೆ.

**गुह्य** (ಗುಹ್ಯ) ವಿ. ಸಂ. ಗುಪ್ತ, ಮುಚ್ಚಿದ, ಗುಪ್ತೇಂದ್ರಿಯ. ೨. ನ. ಸಂ. ಮರ್ಮ, ಗುಟ್ಟು.

**गुळगुळीत** (ಗುಳಗುಳೀತ್) ವಿ. ನುಣುಪಾದ, ಮೃದುವಾದ.

**गुळचट** (ಗುಳಚಟ್) ವಿ. ಸ್ವಲ್ಪ ಸಿಹಿಯಾಗಿರುವ.

**गुळणा** (ಗುಳಣಾ) ಪು. ಬಾಯಲ್ಲಿ ನೀರುಹಾಕಿಕೊಂಡು ಮುಕ್ಕಳಿಸುವಿಕೆ.

**गुळंबा** (ಗುಳಂಬಾ) ಪು. ಬೆಲ್ಲದಲ್ಲಿ ಮಾಡಿದ ಮಾವಿನ ಕಾಯಿಯ ಮುರಬ್ಬ.

**गुळमुळीत** (ಗುಳಮುಳೀತ್) ವಿ. ಸ್ಪಷ್ಟವಾಗಿರದ, ತೋರಿಕೆಯ, ಅರ್ಥವಾಗದ, ಮುಚ್ಚುಮರೆಯುಳ್ಳ, ಹಾರಿಸಿಕೊಳ್ಳುವ (ಮಾತು).

**गुळवणी** (ಗುಳವಣೀ) ಸ್ತ್ರೀ. ಸಕ್ಕರೆ ಹಾಕಿದ ನೀರು.

**गुळवेल** (ಗುಳವೇಲ್) ಸ್ತ್ರೀ. ಒಂದು ಔಷಧಿ, ವನಸ್ಪತಿ,

**गू** (ಗೂ) ಪು. ಹೇಲು, ವಿಷ್ಟೆ.

**गूज** (ಗೂಜ್) ನ. ಗುಪ್ತಮಾತು.

**गूढ** (ಗೂಢ) ವಿ. ಗಹನ, ಗೂಢ, ಗುಪ್ತ, ತಿಳಿಯದ.

**–चार** (–ಚಾರ್) ಪು. ಗುಪ್ತವಾಗಿ ಕಳಿಸಿದ ದೂತ, ಹೇಜಿಬ.

**गूढार्थ** (ಗೂಢಾರ್ಥ) ವಿ. ಗುಪ್ತವಾದ ಅರ್ಥವುಳ್ಳ, ಗುಪ್ತವಾದ, ಒಳಗಿನ, ಅರ್ಥ.

**गूल** (ಗೂಲ್) ಪು. ಜ್ವಾಲೆ, ಬೆಳಕಿನ ಧಾರೆ.

**गूळ** (ಗೂಳ್) ಪು. ಬೆಲ್ಲ.

**–खोबरे** (–ಖೋಬರೇ) ನ. ಸವಿಮಾತು, ಅಕ್ಕರದ ಚೇಷ್ಟೆ. ೨. ಗೆಳೆತನ, ಹಿತಸಂಬಂಧ.

**–पापडी** (–ಪಾಪಡೀ) ಸ್ತ್ರೀ. ಬೆಲ್ಲಕಣಕ ಕೂಡಿ ಮಾಡಿದ ಉಂಡೆ, ಸಿಹಿ.

**गृध्र** (ಗೃಧ್ರ) ಪು. ಸಂ. ರಣಹದ್ದು. ೨. ಆಸೆಬುರುಕ. ೩. ಹಣ್ಣು ಹಣ್ಣು ಮುಪ್ಪಿನವ, ಮುದುಕ.

**गृह** (ಗೃಹ) ನ. ಸಂ. ಮನೆ, ನಿಲಯ, ನಿವಾಸ.

**–कर्म, कृत्य–कार्य–** (–ಕರ್ಮ–ಕೃತ್ಯ–ಕಾರ್ಯ) ಮನೆಯಲ್ಲಿ ಮಾಡಬೇಕಾಗುವ ಕೆಲಸ.

**गृहकलह** (ಗೃಹಕಲಹ) ಪು. ಸಂ. ಮನೆಯಲ್ಲಿಯ ಮತಭೇದಗಳು, ಜಗಳಗಳು.

**गृहच्छिद्र** (ಗೃಹಚ್ಛಿದ್ರ) ನ. ಸ. ಮನೆಯೊಳಗಿನ ಒಡಕು, ನ್ಯೂನ, ಗುಪ್ತ ಸಂಗತಿಗಳು.

**गृहपाल** (ಗೃಹಪಾಲ) ಪು. ಸಂ. ಮನೆಯೊಳಗಿನ ಹಿರಿಯ. ೨. ಸಂಸ್ಥೆಯ, ನಿಲಯದ ವ್ಯವಸ್ಥಾಪಕ.

**गृहपालिका** (ಗೃಹಪಾಲಿಕಾ) ಸ್ತ್ರೀ. ಮನೆಯೊಳಗಿನ ಹಿರಿಯ ಹೆಂಗಸು. ೨. ಸಂಸ್ಥೆಯ ವ್ಯವಸ್ಥಾಪಿಕೆ.

**गृहस्थ** (ಗೃಹಸ್ಥ) ಪು. ಮನೆಯೊಡೆಯ, ಗೃಹಸ್ಥ, ಸಜ್ಜನ, ಸಭ್ಯಮನುಷ್ಯ.

**गृहस्थाश्रम** (ಗೃಹಸ್ಥಾಶ್ರಮ) ಪು. ಸಂ. ಮದುವೆ ಮಾಡಿಕೊಂಡು ಬಾಳ್ವೆಮಾಡುವ ಆಶ್ರಮ, ವ್ರತ.

**गृहिणी** (ಗೃಹಿಣೀ) ಸ್ತ್ರೀ. ಸಂ. ಮನೆಯ ಯಜಮಾನತಿ.

**गृहीत** (ಗೃಹೀತ) ವಿ. ಸಂ. ತೆಗೆದುಕೊಂಡ, ತಿಳಿದುಕೊಂಡ, ಸ್ವೀಕರಿಸಿದ, ಒಪ್ಪಿಕೊಂಡ.

**–सत्य** (–ಸತ್ಯ) ನ. ಒಪ್ಪಿದ ಮಾತು.

**गृह्य** (ಗೃಹ್ಯ) ವಿ. ಸಂ. ಮನೆಯ, ಮನೆತನದ, ಕೌಟುಂಬಿಕ.

**गृह्याग्नी** (ಗೃಹ್ಯಾಗ್ನೀ) ಪು. ಸಂ. ಮನೆಯಲ್ಲಿಯ ಪೂಜೆಯ ಅಗ್ನಿ–ಅಗ್ನಿಹೋತ್ರ.

**गेंगाणा** (ಗೇಂಗಾಣಾ) ವಿ. ಕಸವಿಸಿಗೊಳಿಸುವ.

**गेंगारणे** (ಗೇಂಗಾರಣೇ) ಕ್ರಿ. ಅ. ಮೂಗಿನೊಳಗಿಂದ ಮಾತನಾಡು.

**गेंडा** (ಗೇಂಡಾ) ಪು. ಖಡ್ಗಮೃಗ, ಒಂದು ಕೊಂಬಿರುವ ಹಾಗೂ ದಪ್ಪ ಚರ್ಮವುಳ್ಳ ಪಶು.

**गेंद** (ಗೇಂದ್) ನ. ಪು. ಹೂವಿನ ಗೊಂಚಲ, ತುರಾಯಿ.

**गैदी** (ಗೈದೀ) ವಿ. ಅವ್ಯವಸ್ಥಿತ, ಎಡಸುಬಡಸು.

**गैर** (ಗೈರ್) ವಿ. ಅರ. ತಪ್ಪು ಅಯೋಗ್ಯ.

**–खर्च** (–ಖರ್ಚ). ಪು. ಅಯೋಗ್ಯ ಖರ್ಚು.

**–फायदा** (–ಫಾಯದಾ) ಪು. ಅಯೋಗ್ಯ ಲಾಭ, ಅಯೋಗ್ಯವಾಗಿ ಲಾಭ ಪಡಕೊಳ್ಳುವಿಕೆ.

**–मर्जी** (–ಮರ್ಜೀ) ಸ್ತ್ರೀ. ಅಸಮಾಧಾನ, ಸಿಟ್ಟು.

**–माहितगार** (–ಮಾಹಿತ್‌ಗಾರ್) ವಿ. ಅನಭಿಜ್ಞ, ವಿಷಯವನ್ನು ಅರಿಯದವ.

**–लागू** (–ಲಾಗೂ) ವಿ. ಅಪ್ರಸ್ತುತ, ಸಮಯಕ್ಕೆ ಸರಿಹೋಗದ, ಸಂಬಂಧವಿರದ.

**–वाजवी** (–ವಾಜವೀ) ವಿ. ಯೋಗ್ಯವಲ್ಲದ, ಅಕ್ರಮ.

**–शिस्त** (–ಶಿಸ್ತ) ವಿ. ಶಿಸ್ತು ಅಥವಾ ನಿಯಮಿತ ತನವಿರದ, ಅವ್ಯವಸ್ಥಿತ.

**–समजूत** (–ಸಮಜೂತ್) ಸ್ತ್ರೀ. ತಪ್ಪು ತಿಳುವಳಿಕೆ, ತಪ್ಪು ಕಲ್ಪನೆ, ವಿಪರೀತಗ್ರಹ.

**–सावध** (–ಸಾವಧ) ವಿ. ಎಚ್ಚರದಿಂದಿರದ, ದಕ್ಷತೆಯಿಲ್ಲದ.

**गैरसोईचा** (ಗೈರಸೋಈಚಾ) ವಿ. ಅನುಕೂಲವಲ್ಲದ, ಅನುವಾಗದ.

**गैरसोय** (ಗೈರಸೋಯ) ಸ್ತ್ರೀ. ಅನನುಕೂಲತೆ, ಅನುವಿಲ್ಲದಿರುವಿಕೆ. ೨. ಕಷ್ಟ, ತೊಂದರೆ.

**गैरहजर** (ಗೈರಹಜರ) ವಿ. ಅರ. ಅನುಪಸ್ಥಿತ, ಹಾಜರಿಲ್ಲದ, ಬಂದಿರದ, ಇಲ್ಲದ.

**गैरहुकमी** (ಗೈರಹುಕಮೀ) ವಿ. ಅರ. ಅನಧಿಕೃತ, ಹುಕುಮಿಗೆ ಅನ್ವಯಿಸದ.

**गो** (ಗೋ) ಸ್ತ್ರೀ. ಸಂ. ಆಕಳು.

**गोकर्ण** (ಗೋಕರ್ಣ) ನ. ಒಂದು ಹೂ.

**गोकुळ** (ಗೋಕುಳ್) ನ. ಗೋಕುಲ, ಶ್ರೀಕೃಷ್ಣನ ಬಾಲ್ಯಕಾಲದ ಊರು.

**गोगलगाय** (ಗೋಗಲ್ ಗಾಯ್) ೧. ಬಸವನ ಹುಳು.

**–पोटात पाय** (–ಪೋಟಾತ್ ಪಾಯ್) ನಾಣ್ಣುಡಿ–ಗೋಮುಖ ವ್ಯಾಘ್ರ, ಸಾಧುವಾಗಿ ಕಾಣುವ ಉಗ್ರ ವ್ಯಕ್ತಿ.

**गोग्रास** (ಗೋಗ್ರಾಸ್) ಪು. ಆಕಳಿಗೆ ದಾನವೆಂದು ಹಾಕುವ ಅನ್ನ.

**गोचडी–गोचीड** (ಗೋಚಡೀ–ಗೋಚೀಡ್) ಸ್ತ್ರೀ. (ದನಗಳಿಗೆ ಅಂಟುವ) ಉಣ್ಣೆ, ಕೀಟಕ.

**गोजिरा** (ಗೋಜಿರಾ) ವಿ. ಸುಂದರ.

**गोजी** (ಗೋಜೀ) ಸ್ತ್ರೀ. ಹೆಣ್ಣು ಆಕಳು, ಕರ.

**गोजिरवाणा** (ಗೋಜಿರವಾಣಾ) ವಿ. ಅಂದವಾದ, ಚಂದವಾದ.

**गोट** (ಗೋಟ್) ಪು. ೧. ಬಂಗಾರದ ಆಭರಣ, ಗೋಟು. ೨. ರೇಶ್ಮೆಯ ಸೀರೆಗೆ ಹಚ್ಚುವ ಜರತಾರಿಯ ಅಂಚು.

**गोटा** (ಗೋಟಾ) ಪು. ೧. ಹೂವಿನ ಗೊಂಚಲ. ೨. ದುಂಡನ್ನ ಕಲ್ಲು. ೩. ಬೋಳಿಸಿದ ತಲೆ.

**गोटी** (ಗೋಟೀ) ಸ್ತ್ರೀ. ಬೆನಕ, ಆಡುವ ಗುಂಡು. ೨. ದುಂಡನ್ನ ಮಾವಿನಕಾಯಿ.

**गोठण** (ಗೋಠಣ) ಸ್ತ್ರೀ. ದನಗಳಿಗೆ ನೀರು ಕುಡಿಯುವದರ ಸಲುವಾಗಿ ಮಾಡಿದ ನೆರಳಿನ ಸ್ಥಾನ.

**गोठणे** (ಗೋಠಣೇ) ಕ್ರಿ. ಅ. ಹೆಪ್ಪುಗಟ್ಟು, ಮಂಜುಗಟ್ಟು, ಗಡ್ಡೆಗಟ್ಟು.

**गोठवणे** (ಗೋಠವಣೆ) ಕ್ರಿ. ಸ. ಶೀತಲ ಗೃಹದಲ್ಲಿ ಇಡು, ಮಂಜುಗಟ್ಟಿಸು.

**गोठा** (ಗೋಠಾ) ಪು. ದನದ ಮನೆ.

**गोड** (ಗೋಡ್) ವಿ. ಸಿಹಿಯಾದ, ಸಿಹಿ, ಮಧುರ, ಸೌಮ್ಯ, ಅಂದವಾದ.

**–गळा** (–ಗಳಾ) ಪು. ಮಧುರ ದನಿ.

**–धाडे** (–ಧಾಡೇ) ನ. ಪಕ್ವಾನ್ನ, ಭಕ್ಷ್ಯ (ಹಬ್ಬಕ್ಕಾಗಿ.)

**गोडबोल्या** (ಗೋಡಬೋಲ್ಯಾ) ವಿ. ಸಿಹಿ ಮಾತನಾಡುವವ.

**गोडवा** (ಗೋಡವಾ) ಪು. ಮಾಧುರ್ಯ, ಸವಿ.

**गोडवे गाणे** (ಗೋಡವೇಗಾಣೇ) ಕ್ರಿ.ಸ. ಸ್ತುತಿ ಮಾಡು, ಮುಖಸ್ತುತಿ ಮಾಡು. ೨. ಅತಿಶಯೋಕ್ತಿ ಮಾಡು.

**गोडसर** (ಗೋಡಸರ್) ವಿ. ಸಿಹಿಯಾದ ಸವಿಯಾದ.

**गोंडा** (ಗೋಂಡಾ) ಪು. ಕ. ಗೊಂಡೆ, ರೇಶ್ಮೆಯ ಗುಂಡಿ.

**–घोळणे** (–ಘೋಳಣೇ) ಕ್ರಿ. ಸ. ಮುಖಸ್ತುತಿ ಮಾಡು.

**गोडी** (ಗೋಡೀ) ಸ್ತ್ರೀ. ರುಚಿ, ಅಭಿರುಚಿ,ಮಾಧುರ್ಯ, ರಸಾಸ್ವಾದ.

**–गुलाबी** (–ಗುಲಾಬೀ) ಸ್ತ್ರೀ. ಮಿತ್ರತ್ವ, ಗೆಳೆತನ.

**गोण** (ಗೋಣ್) ಸ್ತ್ರೀ. ಹಿಂ. ಗೋಣಿ ಚೀಲ, ಸಣಬಿನ ಚೀಲ.

**–घालून बसणे** (–ಘಾಲೂನ್ ಬಸಣೇ) ಗೋಣಿ ಹಾಕಿಕೊಂಡು ಕೂಡು, ಸ್ಥಿರವಾಗಿ ಕೂಡು, ದೃಢ ನಿಶ್ಚಯದಿಂದ ಕೆಲಸಮಾಡು.

**गोणपाट** (ಗೋಣಪಾಟ್) ಸ್ತ್ರೀ. ತಟ್ಟು, ಸಣಬಿನ ಅಥವಾ ಪುಂಡಿಯ ನಾರಿನ ಬಟ್ಟೆ, ಗೋಣಿತಟ್ಟು.

**गोणी** (ಗೋಣೀ) ಸ್ತ್ರೀ. ಸಣಬಿನ ಚೀಲ, ಗೋಣಿ ಚೀಲ.

**गोत** (ಗೋತ) ನ. ಗೋತ್ರ, ನೆಂಟರು, ಆಪ್ತರು, ಬಳಗದವರು.

**–पात** (ಪಾತ್) ನ. ನೆಂಟತನ, ಬಳಗ.

**गोता** (ಗೋತಾ) ಪು. ಅರ. ಪಲಟಿ, ಲಾಗ. ೨. ಬುಡಮೇಲು. ೩. ಹಾನಿ, ಲುಕ್ಸಾನು.

**गोतवळा** (ಗೋತವಳಾ) ಪು. ಆಪ್ತೇಷ್ಟರು, ಬಳಗದವರು.

**गोत्र** (ಗೋತ್ರ) ನ. ಸಂ. ಕುಲ, ಗೋತ್ರ, ವಂಶ.

**गोत्रज** (ಗೋತ್ರಜ್) ಪು. ಸಂ. ಆಪ್ತ, ಬಳಗದವ,

**गोंद** (ಗೋಂದ್) ಪು. ಅಂಟು.

**गोंदणे** (ಗೋಂದಣೇ) ಕ್ರಿ. ಸ. ಹಚ್ಚೆಹಾಕು. ೨. ನ. ಹಚ್ಚೆ, ಹಸರು ಬಣ್ಣದ ಚಿನ್ಹ(ಮೈಯಲ್ಲಿ ಚುಚ್ಚಿದ).

**गोंददाणी** (ಗೋಂದದಾಣೀ) ಸ್ತ್ರೀ. ಅಂಟಿನ ಪಾತ್ರೆ, ಬಾಟಲಿ.

**गोंदवण** (ಗೋಂದವಣ) ನ. ಹಚ್ಚೆ ಹಾಕಿದ ಆಕೃತಿ.

**गोदी** (ಗೋದೀ) ನ. ಹಡಗು ಕಟ್ಟೆ, ಗೋದಿ.

**गोधडी** (ಗೋಧಡೀ) ಸ್ತ್ರೀ. ಕೌದಿ, ಒಳಗೆ ಹತ್ತಿ, ಅರಿವೆಯನ್ನು ಹಾಕಿ ಹೊಲಿದ ಹೊದಿಕೆ.

**गोधन** (ಗೋಧನ್) ನ. ಸಂ. ಪಶುಗಳ ಸಂಪತ್ತು, ಪಶುಗಳ ಒಡೆತನ.

**गोंधळ** (ಗೋಂಧಳ್) ಪು. ಕ. ಗೊಂದಲ, ಕೋಲಾಹಲ, ಅವ್ಯವಸ್ಥೆ, ತಪ್ಪು ಕೆಲಸ, ಅನವಸ್ಥೆ. ೨. ದೇವಿಯ ಸನ್ಮಾನಾರ್ಥವಾಗಿ ನೆರೆಯಿಸಿದ ಕೀರ್ತನ.

**गोंधळणे** (ಗೋಂಧಳಣೇ) ಕ್ರಿ. ಅ. ತಪ್ಪು ಮಾಡು, ತಡವರಿಸು.

**गोंधळविणे** (ಗೋಂಧಳವಿಣೇ) ಕ್ರಿ. ಅ. ತೋಚದಂತಾಗಿ ಮಾಡು. ೨. ಗೊಂದಲ ಎಬ್ಬಿಸು. ೩. ಅವ್ಯವಸ್ಥಿತವಾಗಿ ಆಚರಿಸು. ೪. ತಪ್ಪು ಕಲ್ಪನೆ, ಯನ್ನುಂಟು ಮಾಡು.

**गोंधळी** (ಗೋಂಧಳೀ) ಪು. 'ಗೊಂದಲ' ಅಥವಾ ದೇವಿಯ ಕೀರ್ತನೆಯನ್ನು ಮಾಡುವವ.

**गोंधळ्या** (ಗೋಂಧಳ್ಯಾ) ವಿ. ತಪ್ಪು ಕೆಲಸ ಮಾಡುವವ, ಅವ್ಯವಸ್ಥಿತವಾಗಿ ಆಚರಿಸುವವವ, ಅನವಸ್ಥೆಯನ್ನುಂಟು ಮಾಡುವವ.

**गोधूम** (ಗೋಧೂಮ) ಪು. ಸಂ. ಗೋಧಿ.

**गोधूल–ळ** (ಗೋಧೂಲ್–ಳ್) ಪು. ಸ. ದನ ಮನೆಗೆ ಬರುವ ಸಮಯ, ಸಂಜೆ, ಮುಚ್ಚಂಜೆ.

**–मुहूर्त** (–ಮುಹೂರ್ತ) ಪು. ಸಂ. ಸಂಜೆಯ ಮುಂದಿನ ಮದುವೆಯ ಮುಹೂರ್ತ.

**गोप** (ಗೋಪ್) ಪು. ಸಂ. ದನ ಕಾಯುವವ, ಗೋಪಾಲಕ.

**गोपन** (ಗೋಪನ್) ನ. ಸಂ. ಸಂರಕ್ಷಣೆ, ಕಾಯುವಿಕೆ, ಬಚ್ಚಿಡುವಿಕೆ, ಗುಪ್ತವಾಗಿ ಇಡುವಿಕೆ.

**गोपनीय** (ಗೋಪನೀಯ) ವಿ. ಸಂ. ಗುಪ್ತ, ಗುಪ್ತವಾಗಿಡಬೇಕಾದ. ೨. ಸಂರಕ್ಷಣೆಗೆ ತಕ್ಕದಾದ, ಕಾಯ್ದಿಡಬೇಕಾದ.

**गोपाल–ळ** (ಗೋಪಾಲ್–ಳ್) ಪು. ದನ ಕಾಯುವವ, ಗೋಪಾಲಕ. ೨. ಶ್ರೀಕೃಷ್ಣ.

**गोपि–का** (ಗೋಪಿ –ಕಾ) ಸ್ತ್ರೀ. ಸಂ. ಗೋಪಿಕೆ, ದನ ಕಾಯುವವಳು.

**गोपी** (ಗೋಪೀ) ಸ್ತ್ರೀ. ಸಂ. ಗೋಪಿ, ವೃಂದಾವನ ನಿವಾಸಿನಿ, ಪಶುಪಾಲನ ಮಾಡುವ ಹೆಂಗಸು.

**–चन्दन** (–ಚಂದನ) ನ. ಸಂ. ಬಿಳಿಯ ಮಣ್ಣು. ಗೋಪಿಚಂದನ. ೨. (ಲಾ) ಮನೆಹಾಳು.

**गोपुर** (ಗೋಪುರ) ನ.ಪು. ಕಳಸ, ಗೋಪುರ, ಗುಡಿಯ ಶಿಖರ.

**गोफ** (ಗೋಫ) ಪು. ಕ. ರೇಶ್ಮೆಯ ಹೊಸೆದ ದಾರ, ಗೋಪು.

**गोफण** (ಗೋಫಣ) ಸ್ತ್ರೀ. ಕವಣೆ.

**गोबरा** (ಗೋಬರಾ) ವಿ. ಕೊಬ್ಬಿದ, ಸ್ಥೂಲ, ಜಡಭರತ ೨. ವಿದ್ರೂಪ, ಅಸಡ್ಡಾಳ.

**गोम** (ಗೋಮ್) ಸ್ತ್ರೀ. ನ್ಯೂನ, ಕುಂದು, ಕೊರತೆ. ೨. ಜಿರಲೆ, ಸಾವಿರ ಕಾಲಿನ ಹುಳು.

**गोमटा** (ಗೋಮಟಾ) ವಿ. ಕೆಂಪು ಬಣ್ಣದ, ೨. ಶ್ವೇತ ವರ್ಣದ. ೩. ಮಾಟ, ಅಂದವಾದ.

**गोरा–** (–ಗೋರಾ) ವಿ. ಬಹಳ ಕೆಂಪು ಬಣ್ಣದ, ಗೌರಾಂಗ.

**गोमय** (ಗೋಮಯ) ನ. ಆಕಳ ಸಗಣಿ. ೨. ಸಾರಿಸುವಿಕೆ, ಗೋಮ,

**गोमा** (ಗೋಮಾ) ಪು. ಡೌಲು, ಡಿಮ್ಮಾಕ, ಅಲಕ್ಷ (ತೋರಿಕೆಯ)

**गोमागणेश** (ಗೋಮಾಗಣೇಶ) ಪು. ಯಾರೋ ಒಬ್ಬ. (ಉತ್ತರ ಕನ್ನಡದಲ್ಲಿ) 'ಗೋಮಾಜೀಗಣೇಶ ಕಾಪ್ಸೆ'

**गोमांतक** (ಗೋಮಾಂತಕ್) ಪು. ಸಂ. ಗೋವೆ.

**गोमाशी** (ಗೋಮಾಶೀ) ಸ್ತ್ರೀ. ತೊಣಚಿ, ದನಗಳನ್ನು ಕಚ್ಚುವ ಹುಳು.

**गोमुख** (ಗೋಮುಖ) ನ. ಆಕಳ ಮೋರೆಯುಳ್ಳ ನಲ್ಲಿ, ಕೊಳಾಯಿ.

**–व्याघ्र** (–ವ್ಯಾಘ್ರ) ಪು. ಸಭ್ಯನಾಗಿ ಕಾಣಿಸುತ್ತಿದ್ದು ಭಯಂಕರನಾದ ಮನುಷ್ಯ.

**गोमुखी** (ಗೋಮುಖೀ) ಸ್ತ್ರೀ. ಜಪ ಮಾಡುವದಕ್ಕಾಗಿ ಹೊಲಿದ ಕೈಚೀಲ.

**गोमूत्र** (ಗೋಮೂತ್ರ) ನ. ಸಂ. ಆಕಳ ಉಚ್ಚಿ, ಗೋಮೂತ್ರ, ಗೋಮಂತ್ರ.

**गोमेध** (ಗೋಮೇಧ) ನ. ಸಂ. (ಹಸು) ಪಶುಯಜ್ಞ.

**गोयला** (ಗೋಯಲಾ) ಪು. ಕಟ್ಟಿಗೆಗಳ ಸಣ್ಣ ಗಂಟು.

**गोरगरिब** (ಗೋರ್‌ಗರೀಬ್) ಪು. ಬಹುವ. ಬಡಬಗ್ಗರು.

**गोरज** (ಗೋರಜ್) ಪು. ಆಕಳು ಮನೆಗೆ ಬರುವ ಸಮಯ, ಮುಚ್ಚಂಜೆ.

**–मुहूर्त** (–ಮುಹೂರ್ತ) ಪು. ಸಂಜೆಯ ಮುಂದಿನ ಮದುವೆಯ ಮುಹೂರ್ತ.

**गोरटेला** ವಿ. ಶ್ವೇತ ವರ್ಣದವ, ಗೌರಕಾಯ, ಕೆಂಪು ಮೈಬಣ್ಣದವ.

**गोरस** (ಗೋರಸ್) ಪು. ಸಂ. ಹೈನ, ಹಾಲು, ಮೊಸರು ಬೆಣ್ಣೆ ಇತ್ಯಾದಿ.

**गोरक्षक** (ಗೋರಕ್ಷಕ್) ಪು. ಸಂ. ಪಶುಧನವನ್ನು ಕಾಪಾಡುವ ದೇವತೆ.

**गोरा** (ಗೋರಾ) ವಿ. ಶ್ವೇತವರ್ಣದ, ಬಿಳಿಯಬಣ್ಣದ ಗೌರ ವರ್ಣದವ, ಕೆಂಪು ಮೈಬಣ್ಣದವ.

**–गोमटा** (–ಗೋಮಟಾ) ವಿ. ಗೌರಾಂಗ, ಅಂದಕಾಣುವ.

**–गोरापान** (–ಗೋರಾಪಾನ್) ವಿ. ಅಚ್ಚ ಶ್ವೇತ ಬಣ್ಣದವ.

**–मोरा** (–ಮೋರಾ) ವಿ. ಭ್ರಾಂತಚಿತ್ತ, ಹೌಹಾರಿದವ, ಕಳೆಗುಂದಿದವ.

**गोरी** (ಗೋರೀ) ಪು. ಬೇಟೆಗಾರ, ಬಲೆಗಾರ, ಬಲೆ ಹಾಕಿ ಪ್ರಾಣಿಗಳನ್ನು ಹಿಡಿಯುವ ಬೇಟೆಗಾರ.

**गोऱ्हा** (ಗೋರ್‍ಹಾ) ಪು. ಗಂಡು ಆಕಳಕರು ೨ ಹೋರಿ.

**गोल** (ಗೋಲ್) ಪು. ಗೋಲಕ, ಭೂಮಿಯ ಗೋಲಾಕೃತಿ, ೨. ವಿ. ದುಂಡನ್ನ. ೩. ಕ್ರಿ. ವಿ. ದುಂಡಗೆ, ಸುತ್ತುಮುತ್ತಾಗಿ.

**गोलक** (ಗೋಲಕ್) ಪು. ದುಂಡನ್ನ ಪದಾರ್ಥ, ಗೋಲಾಕೃತಿ.

**गोलंदाज** (ಗೋಲಂದಾಜ್) ಪು. ಫಾ. (ಕ್ರಿಕೆಟ್ಟಿನ ಆಟದಲ್ಲಿ) ಚಂಡು ಎಸೆಯುವವನು, ಬೋಲರ, ಬೋಲಿಂಗ್ ಮಾಡುವವ, ೨. ತೋಪು ಹಾರಿಸುವವ, ತುಬಾಕಿಯ ಗುಂಡು ಹಾರಿಸುವವ.

**गोलंदाजी** (ಗೋಲಂದಾಜೀ) ಸ್ತ್ರಿ. ಕ್ರಿಕೆಟ ಚಂಡನ್ನು ಎಸೆಯುವಿಕೆ, ಬೋಲಿಂಗ. ೨ ಗುಂಡು ಹಾರಿಸುವಿಕೆ ತೋಪು ಹಾರಿಸುವಿಕೆ.

**गोलांटी** (ಗೋಲಾಂಟೀ) ಸ್ತ್ರಿ. ಲಾಗ, ಲಗಾಟ.

**गोलार्ध** (ಗೋಲಾರ್ಧ) ಪು. ಸಂ. ಪೃಥ್ವಿಯ ಅರ್ಧ ಭಾಗ.

**गोवत्स** (ಗೋವತ್ಸ) ನ. ಆಕಳಕರು.

**गोवणे** (ಗೋವಣೇ) ಕ್ರಿ. ಸಂ. ಪೋಣಿಸು. ೨ ಅಡಕಿಸು ಸಿಲುಕಿಸು, ಗಂಟು ಹಾಕು, ಸಂಬಂಧವನ್ನುಂಟು ಮಾಡು, (ಲಾ.) (ಯಾರಾದರನ್ನು) ಅಪರಾಧ ದಲ್ಲಿ ಸಿಲುಕಿಸು.

**गोवर** (ಗೋವರ್) ಪು. ಕ. ಗೊಬ್ಬರ (ಸುಂಕುರೋಗ

**गोवरी** (ಗೋವರೀ) ಸ್ತ್ರಿ. ಕುಳ್ಳು, ಸಗಣೆಯನ್ನು ಒಣಗಿಸಿ ಮಾಡಿದ ಉರವಲ.

**गोवारी** (ಗೋವಾರೀ) ಪು. ದನ ಕಾಯುವವ ೨. ಗೋವರೀ ಕಾಯಿ, ಚವಳಿಕಾಯಿ.

**गोवे** (ಗೋವೆ) ನ. ಗೋವೆ, ಗೋವಾರಾಜ್ಯ

**गोशाळा** (ಗೋಶಾಳಾ) ಸ್ತ್ರಿ. ಆಕಳ ದೊಡ್ಡಿ.

**गोषवारा** (ಗೋಷವಾರಾ) ಪು. ಫಾ. ವೃತ್ತಾಂತ, ವರದಿ ೨ ಸಾರಾಂಶ.

**गोषा** (ಗೋಷಾ) ಪು. ಫಾ. ಮೂಲೆ, ಅಜ್ಞಾತಸ್ಥಾನ ಏಕಾಂತ ಸ್ಥಾನ ೨ ಪಡದೆ, ಮುಸಲ್ಮಾನ ಹೆಣ್ಣು ಮಕ್ಕಳ ಬುರ್ಕಾ, ಪಡದೆ.

**गोष्ट** (ಗೋಷ್ಟ) ಸ್ತ್ರಿ. ೧ ವಸ್ತು ೨ ಮಾತು, ಸಂಗತಿ ೩ ಕತೆ, ಕಥೆ, ೪ ಹಕೀಕತ್ತು.

**गोष्ठ** (ಗೋಷ್ಠ) ನ. ದನಕರುಗಳ ದೊಡ್ಡಿ

**गोसावी** (ಗೋಸಾವೀ) ಪು. ಸನ್ಯಾಸಿ, ವಿರಕ್ತ ೨. ಸ್ವಾಮಿ, ಮಠಪತಿ.

**गोहत्या** (ಗೋಹತ್ಯಾ) ಸ್ತ್ರಿ. ಸಂ. ಗೋವಧೆ.

**गोहोरा** (ಗೋಹೋರಾ) ಪು. ಗಂಡು ಆಕಳಕರು, ಹೋರಿ.

**गोळा** (ಗೋಳಾ) ಪು. ಗುಂಡು ೨ ಮುದ್ದೆ ೩. ಸಂಗ್ರ ಹ, ರಾಶಿ.

**–करणे** (–ಕರಣೇ) ಕ್ರಿ. ಸ. ಒಟ್ಟು ಗೂಡಿಸು ಸಂಗ್ರಹಿಸು.

**–गोळी** (–ಗೋಳಿ) ಸ್ತ್ರಿ. ಗುಂಡು ಹಾರಿಸುವಿಕೆ.

**–बेरीज** (–ಬೇರೀಜ್) ಒಟ್ಟು ಸಂಖ್ಯೆ.

**गोळी** (ಗೋಳೀ) ಸ್ತ್ರಿ. ೧. ಗುಳಿಗೆ ೨. ಗುಂಡು, ಮದ್ದುಗುಂಡು.

**–घालणे** (–ಘಾಲಣೇ) ಕ್ರಿ. ಸ. ಗುಂಡುಹಾರಿಸಿ ಕೊಲ್ಲು.

**–बार** (–ಗೋಳೀಬಾರ) ಗುಂಡು ಹಾರಿಸುವಿಕೆ, (ಪೋಲೀಸರ) ಬಂದೂಕುಹಾರಿಸಿ ಚದರಿಸುವಿಕೆ.

**गोंगाट** (ಗೋಂಗಾಟ್) ಪು. ಸದ್ದು, ಗೊಂದಲ.

**गोंजारणे** (ಗೋಂಜಾರಣೇ) ಕ್ರಿ. ಸ. ಅಕ್ಕರತೋರಿಸು, ಪ್ರೀತಿಸು, ತಬ್ಬಿಕೊ.

**गोंड** (ಗೋಂಡ್) ಪು. ಗೊಂಚಲ – ೨. ಓಣಿ.

**गोंडस** (ಗೋಂಡಸ್) ವಿ. ಚಂದಕಾಣುವ, ಅಂದಕಾ ಣುವ, ಮಾಟವಾದ.

**गौड** (ಗೌಡ್) ಪು. ಬಂಗಾಳದೇಶ, ೨. ಬ್ರಾಹ್ಮಣರ ಒಂದು ಜಾತಿ.

**–बंगाल** (–ಬಂಗಾಲ್) ಮೋಸ, ಮಾಟಗಾರಿಕೆ ೨. ರಹಸ್ಯ, ಗೂಢತೆ.

**–बंगाली** (–ಬಂಗಾಲೀ) ಪು. ಮಾಟಗಾರ, ಮಾಯಾವಿ ಮೋಸಗಾರ.

**–सारंग** (–ಸಾರಂಗ) ಪು. ಹಿಂದುಸ್ಥಾನೀ ಪದ್ಧತಿಯ ಸಂಗೀತ, ಒಂದು ರಾಗ

**गौण** (ಗೌಣ್) ವಿ. ಸಂ ಎರಡನೆಯ ಪ್ರತಿಯ, ಕಡಿಮೆ ಮಹತ್ವದ, ಗೌಣ, ಕ್ಷುದ್ರ.

**–पक्ष** (–ಪಕ್ಷ) ಪು. (ಸೋಲುವ) ಬಲಹೀನ ಪಕ್ಷ, ಜಯಿಸದ ಪಂಗಡ.

**गौप्य** (ಗೌಪ್ಯ) ನ. ಗುಪ್ತಮಾತು, ಗುಟ್ಟು, ಮರ್ಮ

**गौरव** (ಗೌರವ) ಪು. ಸನ್ಮಾನ, ಆದರ, ಸತ್ಕಾರ, ೨. ಮಹತ್ವ, ಗಂಭೀರತೆ.

**सन्मान्य** (ಸನ್ಮಾನ್ಯ) ವಿ. – ಸನ್ಮಾನ್ಯ, ಸಂಬಳ ಪಡೆ ಯದೆ ಕೆಲಸಮಾಡುವ.

**गौरविणे** (ಗೌರವಿಣೇ) ಕ್ರಿ. ಸ. ಗೌರವ ತೋರಿಸು, ಮರ್ಯಾದೆ ಕೊಡು, ಸನ್ಮಾನ ಮಾಡು.

**गौरीहर** (ಗೌರೀಹರ) ಪು. ಮದುವೆಯ ಮುಂಚೆ ವಧುವು ಪೂಜಿಸುವ ಶಿವಪಾರ್ವತಿ ಪ್ರತಿಮೆ.

**ग्रथन** (ಗ್ರಥನ) ನ. ಸಂ. ಕಟ್ಟುವಿಕೆ, ಪೋಣಿಸುವಿಕೆ,

**ग्रथित** (ಗ್ರಥಿತ) ವಿ. ಸಂ. ಕಟ್ಟಿದ, ಪೋಣಿಸಿದ.

**ग्रसन** (ಗ್ರಸನ) ನ. ಸಂ. ನುಂಗುವಿಕೆ, ಆವರಿಸು ವಿಕೆ, ಖಗ್ರಾಸ ಗ್ರಹಣ.

**ग्रस्त** (ಗ್ರಸ್ತ) ವಿ. ಸಂ. ಸುತ್ತಲ್ಪಟ್ಟ, ನುಂಗಲ್ಪಟ್ಟ. ಗಿಳಂಕೃತ, ನುಂಗಿದ, ವ್ಯಥಿತ, ಪೀಡಿತ, ಬಾಧಿತ.

**आपद्–** (ಆಪದ್–) ವಿ. ಸಂಕಟದಲ್ಲಿ ಬಿದ್ದ,

**धरण–** (ಧರಣ್–) ವಿ. ಆಣೆಕಟ್ಟು ಕಟ್ಟುವುದ ರಿಂದ ನಿರಾಶ್ರಿತರಾದವರು.

**ग्रस्तोदय** (ಗ್ರಸ್ತೋದಯ) ಪು. ಸಂ. ಸೂರ್ಯಚಂದ್ರ ಗ್ರಹಣ ಕಾಲದಲ್ಲಿಯ ಉದಯ.

**ग्रह** (ಗ್ರಹ) ಪು. ಸಂ. ಸೂರ್ಯಮಂಡಲದಲ್ಲಿಯ ತೋಜೋವಿಭೂತಿಗಳು. ೨. ತಿಳುವಳಿಕೆ, ಅನಿಸುವಿಕೆ, ಬೋಧೆ, ಅರ್ಥ, ಕಲ್ಪನೆ. ೩. ಪೀಡೆ, ಕಿರುಕುಳ ಉತ್ಪನ್ನಮಾಡುವ ಮನುಷ್ಯ.

**–गति** (ಗತೀ) ಸ್ತ್ರೀ. ಗ್ರಹಗಳ ಗತಿ, ದೈವಗತಿ.

**ग्रहण** (ಗ್ರಹಣ) ನ. ಸಂ. ಚಂದ್ರಸೂರ್ಯರ ಗ್ರಹಣ. ೨. ಬರಮಾಡಿಕೊಳ್ಳುವಿಕೆ.

**–स्थानक** (–ಸ್ಥಾನಕ) ನ. ಸ್ವಾಗತದ ಕಚೇರಿ. ೨. ರೇಡಿಯೋ) ಸ್ವೀಕೃತಿ ಸ್ಥಾನ.

**ग्रहणीय** (ಗ್ರಹಣೀಯ) ವಿ. ಸಂ. ಸ್ವೀಕರಿಸಲಿಕ್ಕೆಯೋಗ್ಯ.

**ग्रहदशा** (ಗ್ರಹದಶಾ) ಸ್ತ್ರೀ. ಸಂ. ದೈವಗತಿ.

**ग्रहपीडा** (ಗ್ರಹಪೀಡಾ) ಸ್ತ್ರೀ. ಸಂ. ಅಶುಭ ಗ್ರಹದಿಂದ ಆಗುವ ಪೀಡೆ.

**ग्रहमंडल** (ಗ್ರಹ ಮಂಡಲ) ನ. ಗಹಗಳ ವರ್ತುಲ, ಮಂಡಲ.

**ग्रहयोग** (ಗ್ರಹಯೋಗ್) ಪು. ಸಂ. ಕುಂಡಲಿಯಲ್ಲಿಯ ಗ್ರಹಸ್ಥಿತಿ.

**ग्रहशान्ति** (ಗ್ರಹಶಾಂತಿ) ಸ್ತ್ರೀ. ಸಂ. ಗ್ರಹಗಳ ಸಂತರ್ಪಣೆ.

**ग्रहसिद्धान्त** (ಗ್ರಹಸಿದ್ಧಾಂತ್) ಪು. ಸಂ. ಗ್ರಹಮಾನ ಪದ್ಧತಿ, ಜ್ಯೋತಿರ್ವಿದ್ಯೆ.

**ग्रंथ** (ಗ್ರಂಥ) ಪು. ಸಂ. ಪುಸ್ತಕ, ಗ್ರಂಥ.

**ग्रंथकार** (ಗ್ರಂಥಕಾರ್) ಪು. ಸಂ. ಪುಸ್ತಕ ಕರ್ತ, ಲೇಖಕ, ಗ್ರಂಥಕರ್ತ.

**ग्रंथपाल** (ಗ್ರಂಥಪಾಲ್) ಪು. ಸಂ. ಗ್ರಂಥಾಲಯದ ವ್ಯವಸ್ಥಾಪಕ.

**ग्रंथविस्तार** (ಗ್ರಂಥವಿಸ್ತಾರ್) ಪು. ಗ್ರಂಥದಲ್ಲಿಯ ನಿರೂಪಣೆ ಹೆಚ್ಚಾಗುವಿಕೆ.

**ग्रंथसंग्रहालय** (ಗ್ರಂಥ ಸಂಗ್ರಹಾಲಯ) ನ. ಸಂ. ಓದುವ ಸಲುವಾಗಿ ಕಲೆ ಹಾಕಿದ ಪುಸ್ತಕಗಳ ನಿಲಯ, ಲೈಬ್ರರಿ.

**ग्रंथि** (ಗ್ರಂಥಿ) ಸ್ತ್ರೀ. ಗಂಟು, ಬುಗುಟೆ, ಗಡ್ಡೆ, ತೊಡಕು. ೨. ತೊಡಕು.

**ग्राम** (ಗ್ರಾಮ) ಪು. ಸಂ. ಹಳ್ಳಿ, ಊರು, ಪ್ರದೇಶ, ಸಮೂಹ ೨. ವಿಸ್ತಾರ.

**इन्द्रिय–** (ಇಂದ್ರಿಯ) ಪು. ಇಂದ್ರಿಯ ಸಮೂಹ.

**–कंटक** (–ಕಂಟಕ್) ಪು. ಊರಲ್ಲಿಯ ತುಂಟರು, ಪುಂಡರು.

**–जोशी** (–ಜೋಶೀ) ಪು. ಜೋಯಿಸರು.

**–केसरी–,सिंह** (ಕೇಸರಿ–ಸಿಂಹ) ಪು. ನಾಯಿ.

**ग्रामणी** (ಗ್ರಾಮಣೀ) ಪು. ಸಂ. ಊರಪ್ರಮುಖ, ಗೌಡ.

**ग्रामण्य** (ಗ್ರಾಮಣ್ಯ) ನ. ಸಂ. ಊರು, ಜನರು, ಹಾಕಿದ ಬಹಿಷ್ಕಾರ.

**ग्रामदेवता** (ಗ್ರಾಮದೇವತಾ) ಸ್ತ್ರೀ. ಸಂ. ಊರದೇವತೆ.

**ग्रामसंस्था** (ಗ್ರಾಮಸಂಸ್ಥಾ) ಸ್ತ್ರೀ. ಸಂ. ಹಳ್ಳಿಯ ಜೀವನ ಪದ್ಧತಿ. ೨. ಪಂಚಾಯತ್ತು.

**ग्रामस्थ** (ಗ್ರಾಮಸ್ಥ) ಪು. ಸಂ. ಹಳ್ಳಿಯನಿವಾಸಿ, ಹಳ್ಳಿಗ.

**ग्राम्य** (ಗ್ರಾಮ್ಯ) ವಿ. ಸಂ. ಅಸಂಸ್ಕೃತ, ಅಶುದ್ಧ, ಅಭದ್ರ, ಬಿರುಸು (ಮಾತು).

**ग्रास** (ಗ್ರಾಸ) ಪು. ಸಂ. ತುತ್ತು. ೨. ಗ್ರಹಣ.

**ग्रासणे** (ಗ್ರಾಸಣೇ) ಕ್ರಿ. ಸಂ. ನುಂಗು, ಹಬ್ಬು.

**ग्राहक** (ಗ್ರಾಹಕ) ಪು. ಸಂ. ಕೊಳ್ಳುವವ, ಗಿರಾಕಿ.

**ग्राह्य** (ಗ್ರಾಹ್ಯ) ವಿ. ಸಂ. ಒಪ್ಪುಗೆಯಾಗುವ, ಸ್ವೀಕರಿಸತಕ್ಕ, ಮಾನ್ಯ ಮಾಡತಕ್ಕ.

**ग्राह्यांश** (ಗ್ರಾಹ್ಯಾಂಶ) ಪು. ಸಂ. ತೆಗೆದುಕೊಳ್ಳಲಿಕ್ಕೆ ಯೋಗ್ಯವಾದ ಭಾಗ, ಅಂಶ.

**ग्रीवा** (ಗ್ರೀವಾ) ಸ್ತ್ರೀ. ಸಂ. ಕತ್ತು, ಕುತ್ತಿಗೆ, ಕೊರಳು.

**ग्रीष्म** (ಗ್ರೀಷ್ಮ) ಪು. ಸಂ. ಗ್ರೀಷ್ಮ ಋತು, ಜ್ಯೇಷ್ಠ, ಆಷಾಢ ತಿಂಗಳ ಕಾಲ, ಸೆಕೆಯ ಕಾಲ.

**ग्लान** (ಗ್ಲಾನ) ವಿ. ಸಂ. ದಣಿದ, ಖಿನ್ನ, ಮುಖಬಾಡಿದ.

**ग्लानि** (ಗ್ಲಾನಿ) ಸ್ತ್ರೀ. ಸಂ. ದುಣಾವು, ಖೇದ, ಮುಖಬಾಡುಕೆಕೆ. ೨. ತಲೆತಿರುಗುವಿಕೆ, ಬವಳಿ. ೩. ಅವನತಿ, ಅಳಿಗಾಲ.

**ग्वाही** (ಗ್ವಾಹೀ) ಸ್ತ್ರೀ. ಫಾ. ಸಾಕ್ಷಿ, ಬೆಂಬಲ, ಪುಷ್ಟಿ, ಹಮಿ.

## घ ಘ

**घ** ಪ್ರ. ಕವರ್ಗದ ನಾಲ್ಕನೆಯ ವ್ಯಂಜನ.

**घ घा ची बारा खडी** (ಘ, ಘಾ, ಚೀ ಬಾರಾ ಖಡೀ) ನಾಣ್ಣುಡಿ. ಬೇರೊಬ್ಬರಿಂದ ಕೆಲಸಮಾಡಿಸಿಕೊಳ್ಳುವ ಸ್ವಭಾವ.

**घट** ಘಟ್– ಪು. ಸಂ. ಗಡಿಗೆ, ಕೊಡ. ೨. ಸ್ತ್ರೀ. ಹಿಂ. ಹಾನಿ, ಕಡಿಮೆಯಾಗುವಿಕೆ, ಹ್ರಾಸ.

**वध–** (ವಧ–) ಗುಜ. ಬೆಲೆಯ ಏರಿಳಿತ.

**घटक** (ಘಟಕ್) ಪು. ಘಟಕದ್ರವ್ಯ. ೨. ಕಾರಣ, ಅಂಗ.

**घटका** (ಘಟಕಾ) ಸ್ತ್ರೀ.ಸಂ. ಗಳಿಗೆ, ೨೪ ನಿಮಿಷಗಳು.
**–भर** (–ಭರ) ಕ್ರಿ. ವಿ. ಸ್ವಲ್ಪ ಹೊತ್ತು.
**–भरणे** (–ಭರಣೇ) ಕ್ರಿ. ಅ. ಮರಣ ಸಮೀಪಿಸು.
**घटकेचे घडचाळ** (ಘಟಕೇಚೇ ಘಡ್ಯಾಳ್) ಕ್ಷಣ ಭಂಗುರ ಜೀವನ.

**घटाघटा** (ಘಟಾಘಟಾ) ಕ್ರಿ. ವಿ. ಗಟಗಟ (ಕುಡಿ)
**घटणे** (ಘಟಣೇ) ಕ್ರಿ. ಅ. ಕಡಿಮೆಯಾಗು, ಕುಗ್ಗು.
**घटती** (ಘಟತೀ) ಸ್ತ್ರೀ. ಹಾನಿ, ಲುಕ್ಸಾನ.
**घटना** (ಘಟನಾ) ಸ್ತ್ರೀ. ಸಂ. ಸಂಗತಿ, ಸತ್ಯ, ನಿಜ ವಾಗಿ ಒದಗಿದ ಪ್ರಸಂಗ. ೨. ನಿಯಮಾವಲಿ, ವಿಧಿ, ಕಾನೂನು.

**घटनात्मक** (ಘಟನಾತ್ಮಕ) ವಿ. ಸಂ. ವಿಧಿವಿಚಾರ ದಿಂದ ಉದ್ಭವಿಸಿದ (ಪ್ರಶ್ನೆ)
**घटना समिति** (ಘಟನಾ ಸಮಿತಿ) ಸ್ತ್ರೀ. ದೇಶದ ಘಟನೆ ಯನ್ನು ನಿರ್ಮಿಸಲಿಕ್ಕೆ ನಿಯಮಿಸಿದ ಸಮಿತಿ.
**घटपटादि खटपट** (ಘಟಪಟಾದಿ ಖಟಪಟ) ಸ್ತ್ರೀ. ಹಳೆಯ ಬಗೆಯಿಂದ ವ್ಯಾಕರಣದ ಅಭ್ಯಾಸ.
**घटसर्प** (ಘಟಸರ್ಪ) ಪು. ಸಂ. ಗ್ರೀವಾಶೋಥ, ಘಟ ಸರ್ಪ, ಡಿಫ್ತೀರಿಯಾ.
**घटस्थापना** (ಘಟಸ್ಥಾಪನಾ) ಸ್ತ್ರೀ. ಸಂ. ನವರಾತ್ರಿ ಯಲ್ಲಿ ಮೊದಲನೆಯ ದಿವಸ ಮಾಡುವ ಉತ್ಸವ, ಅಶ್ವೀನ ಶುದ್ಧ ಪ್ರತಿಪದೆಯ ಹಬ್ಬ.
**घटस्फोट** (ಘಟಸ್ಫೋಟ) ಪು.ಸಂ. ವಿವಾಹ ವಿಚ್ಛೇದ, ಉಡಿಕೆ.
**घटितार्थ** (ಘಟಿತಾರ್ಥ) ಪು. ಸಂ. ದೈವ, ವಿಧಿಘಟನೆ.
**घटी** (ಘಟೀ) ಸ್ತ್ರೀ. ಸಂ. ಗಳಿಗೆ, ೨೪ ನಿಮಿಷದ ಕಾಲ.
**–यन्त्र** (–ಯಂತ್ರ) ಜಲಚಕ್ರ, ನೀರ್ಗಾಲಿ, ತೋಟ ದಲ್ಲಿಯ ಬಾವಿಯಿಂದ ನೀರು ತೆಗೆಯಲಿಕ್ಕೆ ತಯಾ ರಿಸಿದ ತಿರುಗಣಿಯ ಡಬ್ಬಿಗಳ ರಾಟಿ.
**घटोत्कचाचा बाजार** (ಘಟೋತ್ಕಚಾಚಾ ಬಾಜಾರ) ಪು. ಮಾಯೆಯ ಮಾರುಕಟ್ಟೆ, ಘಟೋತ್ಕಚನ ಮೋಸದ ಪೇಟೆ.
**घट्ट** (ಘಟ್ಟ) ವಿ. ಕ. ಗಟ್ಟಿಯಾದ, ಬಿರುಸಾದ, ಭದ್ರ ವಾದ, ಕ್ರಿ. ವಿ. ಗಟ್ಟಿಯಾಗಿ, ಎಳೆದು, ಬಿಗಿಯಾಗಿ.
**घट्टा** (ಘಟ್ಟಾ) ಪು. ಶ್ರಮದಿಂದ, ಬಿರುಸಾದ ಚರ್ಮ ಗಟ್ಟಿಯಾದ ಮೈದೊಗಲು.
**घड** (ಘಡ್) ಪು. ಗೊಂಚಲು, ಗೊನೆ.

**घडकाम** (ಘಡ್‌ಕಾಮ್) ನ. ಕೆತ್ತನೆಯ ಕೆಲಸ, ಕೈಗಾರಿಕೆ, ಬಡಿಗನ, ಕಮ್ಮಾರನ, ಕೆಲಸ.
**घडकामी** (ಘಡಕಾಮೀ) ಪು. ಧಾತುಗಳಿಂದ ಪಾತ್ರೆ ಗಳನ್ನು ತಯಾರಿಸುವವ.
**घडघड** (ಘಡಘಡ್) ಕ್ರಿ. ವಿ. ಸ್ಪಷ್ಟವಾಗಿ, ತಡವರಿ ಸದೆ (ಮಾತಾಡು ಓದು)
**घडण** (ಘಡಣ) ಸ್ತ್ರೀ. ಆಕಾರ, ತಯಾರಿಕೆ, ನಿರ್ಮಾಣ, ತಯಾರಿಕೆ, ಸಿದ್ಧತೆ. ೨. ಒದಗುವಿಕೆ.
**घडणावळ** (ಘಡಣಾವಳ್) ಸ್ತ್ರೀ. (ಬೆಳ್ಳಿ ಬಂಗಾರದ ಒಡವೆಗಳನ್ನು) ತಯಾರಿಸುವ ಕೂಲಿ.
**घडणे** (ಘಡಣೇ) ಕ್ರಿ. ಅ. ಉದ್ಭವಿಸು, ಘಟಿಸು, ಒದಗು, ತಯಾರಾಗು, ಸಿದ್ಧವಾಗು.
**घडून येणे** (ಘಡೂನ್ ಏಣೇ) ಕ್ರಿ. ಅ. ಒದಗು, ನೆರವೇರು, ಉತ್ಪನ್ನವಾಗು, ಏರ್ಪಾಡಾಗು.
**घडवंची** (ಘಡವಂಚೀ) ಸ್ತ್ರೀ. ಎತ್ತರವಾದ ಸ್ಟೂಲು, ಮಂಚ, ಮೇಜು, ಟೀಪಾಯ್.
**घडविणे** (ಘಡವಿಣೇ) ಕ್ರಿ.ಸ. ತಯಾರಿಸು, ನಿರ್ಮಿಸು, ಒದಗಿಸು.೨. ಸಾಧಿಸು, ನೆರವೇರಿಸು, ಸಿದ್ಧಪಡಿಸು.
**घडा** (ಘಡಾ) ಪು. ಕೊಡ. ೨. ಗಡಿಗೆ, ಹರಿವಾಣ.
**–भरणे** (–ಭರಣೇ) ಕ್ರಿ. ಅ. ಅಂತಸಮಯ ಒದಗು.
**–फोडणे** (–ಫೋಡಣೇ) ಕ್ರಿ. ಸ. ಗುಟ್ಟನ್ನು ಹೊರ ಗೆಡವು.
**घडाई** (ಘಡಾಈ) ಪು. ಮಾಡುವ ಕೂಲಿ.
**घडाडणे** (ಘಡಾಡಣೇ) ಕ್ರಿ. ಅ. ಕುಸಿದು ಬೀಳು.
**घडामोड** (ಘಡಾಮೋಡ್) ಸ್ತ್ರೀ. ಸಂಗತಿ, ಒದಗಿದ ಪ್ರಸಂಗ, ಚಟುವಟಿಕೆ, ಐತಿಹ್ಯ. ೨. ಪರಿವರ್ತನೆ.
**घडामोडी** (ಘಡಾಮೋಡೀ) ಸ್ತ್ರೀ. ಬಹು. ಜರುಗಿದ ಸಂಗತಿಗಳು, ರೂಪಗೊಂಡ ಬದಲಾವಣೆಗಳು.
**घडी** (ಘಡೀ) ಸ್ತ್ರೀ. ಮಡಿಕೆ, ಇಸ್ತರಿ. ೨. ವ್ಯವಸ್ಥೆ, ಚೊಕ್ಕಟ್ಟು.
**–बसणे** (–ಬಸಣೇ) ಕ್ರಿ.ಅ. ಚೊಕ್ಕಟ್ಟಾಗು.
**–मोडणे** (–ಮೋಡಣೇ) ಕ್ರಿ. ಸ. ಹೊಸ ಸೀರೆ ಮುಂ. ಉಡು, ತೊಡು. ೨. ಲಾ. ಚನ್ನಾಗಿ ನಡೆದ ಕೆಲಸವನ್ನು ಕೆಡಿಸು.
**घडीत** (ಘಡೀತ್) ನ. ಪಾತ್ರೆ ಮುಂ.ಗಳನ್ನು ತಯಾ ರಿಸುವ ಧಾತು.
**घडीबंद** (ಘಡೀಬಂದ್) ವಿ. ಚನ್ನಾಗಿ ಮಡಿಕೆ ಹಾಕಿದ.
**घडीव** (ಘಡೀವ) ವಿ. ತಯಾರಿಸಿದ, ಕೈಗಾರಿಕೆಯ.

**घडुले** (ಘಡುಲೇ) ನ. ದೊಡ್ಡ ಗಡಿಗೆ, ಹರಿವೆ.

**घडीघडी** (ಘಡೀಘಡೀ) | **घडोघडी** (ಘಡೋಘಡೀ) | ಕ್ರಿ. ವಿ. ಪ್ರತಿಕ್ಷಣ, ಯಾವಾಗಲೂ.

**घडचाळ** (ಘಡ್ಯಾಳ್) ನ. ಗಡಿಯಾರ.

**–ची** (–ಚೀ) ಪು. ಗಡಿಯಾರವನ್ನು ರಿಪೇರಿ ಮಾಡುವವ.

**घण** (ಘಣ) ಪು. ಕೊಡಲಿ. ೨. ಕೊಡಲಿಯ ಏಟು.

**घणघण** (ಘಣಘಣ) ಸ್ತ್ರೀ. ಗಂಟೆಯ ಸದ್ದು, ಗಣ ಗಣ ಸಪ್ಪಳ.

**घणघणणे** (ಘಣಘಣಣೇ) ಕ್ರಿ. ಅ. ಸದ್ದಾಗು, ಸಪ್ಪಳ ವಾಗು.

**घंटा–** (ಘಂಟಾ–) ಸ್ತ್ರೀ. ಶೂನ್ಯ, ಸೊನ್ನೆ, ಅಪೂಟ ಏನೂ ಇಲ್ಲ ಎಂಬ ಸನ್ನೆ.

**घणघणाट** (ಘಣಘಣಾಟ್) ಪು. ಗಂಟೆಯ ನಿನಾದ, ಸದ್ದು.

**घणघणीत** (ಘಣಘಣೀತ್) ಕ್ರಿ. ವಿ. ಸ್ಪಷ್ಟವಾಗಿ.

**घन** (ಘನ) ವಿ. ಸಂ. ಗಟ್ಟಿಯಾದ, ಬಿರುಸಾದ, ಗಾತ್ರವುಳ್ಳ, ಘನರೂಪವುಳ್ಳ. ೨. ದೊಡ್ಡ, ಭಯಂಕರ.

**–घोर** (–ಘೋರ್) ವಿ. ಬಹು ಭಯಂಕರವಾದ.

**–चक्कर** (ಚಕ್ಕರ್) ವಿ. ವಿಪುಲವಾದ, ದಪ್ಪವಾದ, ದಟ್ಟವಾದ, ನಿಬಿಡವಾದ.

**–चक्र** (–ಚಕ್ರ) ನ. ಘೋರ (ಕಾಳಗ)

**घनत्व** (ಘನತ್ವ) ನ. ಬಿರುಸಾಗಿರುವಿಕೆ, ತುಂಬಿ ಕೊಂಡಿರುವಿಕೆ, ಗಾತ್ರ, ಘನರೂಪದ್ದಾಗಿರುವಿಕೆ.

**घनदाट** (ಘನದಾಟ್) ವಿ. ನಿಬಿಡವಾದ, ದಟ್ಟವಾದ.

**घनपाठी** (ಘನಪಾಠೀ) ಪು. ವೇದವನ್ನು ಬಾಯಿಪಾಠ ವಾಗಿ ಅನ್ನಬಲ್ಲವ, ಘನಪಾಠಿ.

**घनफळ** (ಘನಫಳ್) ನ. (ಉದ್ದ, ಅಗಲ, ಎತ್ತರ ಇವುಗಳ ಗುಣಾಕಾರ ಮಾಡಿದುದರ) ಪರಿಮಾಣ.

**घनमूळ** (ಘನಮೂಳ್) ನ. ಸಂ. (ಸಂಖ್ಯಾಶಾಸ್ತ್ರ) ಘನಮೂಲ.

**घनवट** (ಘನವಟ್) ವಿ. ದಟ್ಟವಾಗಿ ನೇಯ್ದ.

**घनवर्ग** (ಘನವರ್ಗ) ಪು. ಸಂ. (ಸಂಖ್ಯಾಶಾಸ್ತ್ರ) ಘನಪರಿಮಾಣದ ವರ್ಗ.

**घनश्याम** (ಘನಶ್ಯಾಮ) ವಿ. ಮುಗಿಲು ವಣ್ಣ. ೨. ಶ್ರೀಕೃಷ್ಣ, ನೀಲವರ್ಣ.

**घनांधकार** (ಘನಾಂಧಕಾರ) ಪು. ಸಂ. ನಿಬಿಡವಾದ ಕತ್ತಲೆ.

**घनिष्ठ** (ಘನಿಷ್ಠ) ವಿ. ಸಲಿಗೆಯ, ಅತಿಶಯ ಅಕ್ಕರ ತೆಯ (ಗೆಳೆತನ).

**घनीभवन** (ಘನೀಭವನ್) ನ. ಸಂ. ಬಿರುಸಾಗುವಿಕೆ, ಘನರೂಪಹೊಂದುವಿಕೆ, ಹೆಪ್ಪುಗಟ್ಟುವಿಕೆ, ಗಡ್ಡೆ ಗಟ್ಟುವಿಕೆ, ಮಂಜುಗಟ್ಟುವಿಕೆ.

**घप्पाघोळ** (ಘಪ್ಪಾಘೋಳ್) ಪು. ಅವ್ಯವಸ್ಥೆ, ಗದ್ದಲ, ಗೊಂದಲ.

**घबराट** (ಘಬರಾಟ್) ಸ್ತ್ರೀ. ಭಯ, ಅಂಜಿಕೆ, ಬೆದ ರಿಕೆ, ಭಯಭೀತನಾಗುವಿಕೆ.

**घबाड** (ಘಬಾಡ್) ನ. ಆಕಸ್ಮಿಕ ದ್ರವ್ಯಲಾಭ, ಒಳ್ಳೆಯ ಗ್ರಹಸ್ಥಿತಿ.

**–साधणे** (–ಸಾಧಣೇ) ಕ್ರಿ. ಸ. ಅನಪೇಕ್ಷಿತವಾಗಿ ಲಾಭಹೊಂದು.

**घमघमाट** (ಘಮಘಮಾಟ್) ಪು. ಕಮ್ಮಗಿನ ವಾಸನೆ.

**घमेंड** (ಘಮೇಂಡ್) ಸ್ತ್ರೀ. ಹಿಂ. ಸೊಕ್ಕು, ಗರ್ವ, ಹೆಮ್ಮೆ, ಅಭಿಮಾನ.

**–खोर** (–ಖೋರ್) ಪು. ಸಂ. ಸೊಕ್ಕಿನವ.

**घमत** (ಘಮತ್) ಸ್ತ್ರೀ. ದೋಣಿಗೆ ತೂತು ಬಿದ್ದ ಮೂಲಕ ಒಳಗೆಬಂದ ನೀರು.

**घमेले** (ಘಮೇಲೆ) ಸ್ತ್ರೀ. ಕಬ್ಬಿಣದ ಕೊಡ ಅಥವಾ ದೊಡ್ಡ ಪಾತ್ರೆ, ಗಂಗಾಳ.

**घर** (ಘರ್) ನ. ಮನೆ.

**–करणे** (ಕರಣೇ) ಕ್ರಿ.ಸ. ಮನೆಮಾಡು, ವಾಸಿಸು.

**–धुवून नेणे** (–ಧುಊನ್ ನೇಣೇ) ಕ್ರಿ. ಸ. ಮನೆ ಯಲ್ಲಿಯ ಎಲ್ಲ ವಸ್ತುಗಳನ್ನು ಅಪಹರಿಸು.

**घरोघरी मातीच्या चुली** (ಘರೋಘರೀ ಮಾತೀಚ್ಯಾ ಚುಲೀ) ನಾಣ್ಣುಡಿ. ಒಲೆಗಳು ಎಲ್ಲೆಡೆಗೂ ಮಣ್ಣಿ ನವೇ. (ಕೆಲವು ಕುಂದು ಕೊರತೆಗಳು ಎಲ್ಲರಲ್ಲಿಯೂ ಕಂಡುಬರುತ್ತವೆ.)

**–म्हणून ठेवणे** (ಮ್ಹಣೂನ್ ಠೇವಣೇ) ಕ್ರಿ. ಸ. ಅತಿಥಿಗಳ ಸಲುವಾಗಿ ಕಾಯ್ದು ಇಡು.

**खाल्या घरंचे वासे मोजणे** (ಖಾಲ್ಯಾ ಘರಚೇ ವಾಸೇ ಮೋಜಣೇ) ಕ್ರಿ. ಸ. ಉಂಡ ಮನೆಯ ಗಳಎಣಿಸು. (ಕೃತಘ್ನತೆ ತೋರಿಸು.)

**घर डोक्यावर घेणे** (ಘರ್ ಡೋಕ್ಯಾವರ್ ಘೇಣೇ) ಕ್ರಿ. ಸ. ವಿಪರೀತ ಒದರಾಟ ಚೀರಾಟ (ಸಣ್ಣ ಹುಡುಗರು) ಮಾಡು.

**घर चालविणे** (ಘರ್ ಚಾಲವಿಣೇ) ಕ್ರಿ. ಸ. ಮನೆತನ ನಡೆಸು, ಬಾಳ್ವೆಮಾಡು.

**–घर जोडणे** (ಘರ್ ಜೋಡಣೇ) ಕ್ರಿ. ಸ. ಗೆಳೆತನ ಮಾಡು, ಸ್ನೇಹ ಸಂಬಂಧ ಬೆಳೆಸು.

**घर फिरले म्हणजे घराचे वासे फिरतात** (ಘರ್ ಫಿರಲೇ ಮ್ಹಣಜೇ ಘರಾಚೇ ವಾಸೇ ಫಿರತಾತ್) ನಾಣ್ಣುಡಿ. ವಿಪತ್ತುಗಳು ಒಮ್ಮೆಲೆ ಒದಗುತ್ತವೆ. ಗೂಳಿಬಿದ್ದ ಮೇಲೆ ಆಳಿಗೊಂದೊಂದು ಕಲ್ಲು.

**घरात वाजे नकार घंटा** (ಘರಾತ್ ವಾಜೇ ನಕಾರ ಘಂಟಾ) ನಾಣ್ಣುಡಿ. ಮನೆಯಲ್ಲಿ "ಇಲ್ಲ" ವೆಂಬ ಸಪ್ಪಳವೇ ಕೇಳಬರುತ್ತದೆ. (ಅತಿ ಬಡತನದ ಪರಿಸ್ಥಿತಿ.)

**बडचा घरचा पोकळ वासा** (ಬಡ್ಯಾ ಘರಚಾ ಪೋಕಳ್ ವಾಸಾ) ನಾಣ್ಣುಡಿ. ದೊಡ್ಡ ಮನೆಯ ಪೊಳ್ಳು ತೊಲೆಗಳು (ತೋರಿಕೆಯ ಸಿರಿವಂತಿಕೆ.)

**घर धरणे** (ಘರ್ ಧರಣೇ) ಕ್ರಿ. ಸ. ಸ್ಥಿರವಾಗಿ ಬಾಳ್ವೆಮಾಡು.

**घर धुणे** (ಘರ್ ಧುಣೇ) ಕ್ರಿ. ಸ. ಮೋಸಮಾಡಿ ಸರ್ವಸ್ವವನ್ನು ಅಪಹರಿಸು.

**घर पाडणे** (ಘರ್ ಪಾಡಣೇ) ಕ್ರಿ. ಅ. ಆಳಿಗಾಲವನ್ನು ಉಂಟುಮಾಡು.

**घर फोडणे** (ಘರ್ ಫೋಡಣೇ) ಕ್ರಿ. ಸ. ಮನೆಗೆ ಕನ್ನ ಹಾಕು ಹಾಳುಮಾಡು.

**घर बसणे** (ಘರ್ ಬಸಣೇ) ಕ್ರಿ. ಅ. ಅವನತಿ ಯುಂಟಾಗು.

**घर बुडणे** (ಘರ್ ಬುಡಣೇ) ಕ್ರಿ.ಅ. ಮನೆಹಾಳಾಗು.

**घर भरणे** (ಘರ್ ಭರಣೇ) ಕ್ರಿ. ಅ. ಐಶ್ವರ್ಯ ಹೊಂದು.

**घरी बसणे** (ಘರೀ ಬಸಣೇ) ಕ್ರಿ. ಅ. ಕೆಲಸ ಕಳೆದು ಕೊಳ್ಳು, ನಿರುದ್ಯೋಗಿಯಾಗು.

**घरी आलेली** (ಘರೀ ಆಲೇಲೀ) ವಿ. ಸ. ಮನೆಗೆಬಂದ (ವಿಧವೆಯಾದ ಮಗಳು.)

**घर कहाणी** (ಘರ್ ಕಹಾಣೀ) ನ. ಸ್ತ್ರೀ. ಮನೆಯ ಗೋಳು, ಬಾಳುರಿ.

**घर काम** (ಘರ್ ಕಾಮ್) ನ. ಮನೆಗೆಲಸ.

**घरकुल** (ಘರ್ ಕುಲ್) ನ. ಸಣ್ಣ ಹುಡುಗರು ಆಟ ದಲ್ಲಿ ಕಟ್ಟಿದ ಮನೆ.

**घरकोंबडा** (ಘರ್ಕೋಂಬಡಾ) ಪು. ಮನೆಯಲ್ಲಿ ಕೂತಿರುವವ, ಗೆಳೆತನ, ಸಲಿಗೆತೋರದವ, ಏಕಾಂತ ಪ್ರಿಯ.

**घर खटले** (ಘರ್ ಖಟಲೇ) ನ. ಮನೆಯ ಹೊಣೆ ಗಾರಿಕೆಗಳು, ತಾಪತ್ರಯಗಳು.

**घरखर्च** (ಘರ್ ಖರ್ಚ್) ಪು. ಮನೆಯ ಖರ್ಚು, ವೆಚ್ಚ.

**घरगणती** (ಘರ್ ಗಣತೀ) ಸ್ತ್ರೀ. ಖಾನೇಸುಮಾರಿ ಜನ, ಮನೆ, ಇವುಗಳ ಗಣನೆ.

**घरंगळणे** (ಘರಂಗಳಣೇ) ಕ್ರಿ. ಅ. ಉರುಳು, ಉರು ಳುತ್ತ ಬೀಳು.

**घरगाडा** (ಘರ್ಗಾಡಾ) ಪು. ಮನೆಯಲ್ಲಿಯ ಕೆಲಸ ಗಳು, ಗೃಹಕೃತ್ಯಗಳು.

**घरगुती** (ಘರ್ಗುತೀ) ವಿ. ಮನೆಯಲ್ಲಿ ತಯಾರಿಸಿದ, ಪೇಟೆಯಿಲ್ಲಿಂದ ತಂದಿರದ.

**घरघर** (ಘರ್ಘರ್) ಸ್ತ್ರೀ. ಮರಣ ಸಮಯದಲ್ಲಿ ಗಂಟಲಿನಿಂದ ಹೊರಡುವ ಸದ್ದು, ಬಿಕ್ಕು.

**घरघरणे** (ಘರಘರಣೇ) ಕ್ರಿ. ಅ. ಸದ್ದಾಗು, ಸಪ್ಪಳ ವಾಗು.

**घरचा** (ಘರಚಾ) ವಿ. ಮನೆಯವ, ಆಪ್ತ, ಸ್ವಕೀಯ, ಮನೆಮಾರಿಗೆಯ.

**–अहेर** (–ಅಹೇರ್) ಪು. ಮನೆಯ ಜನರು ಕೊಡ ಬೇಕಾದ ಉಡುಗರೆ. (ವ್ಯಂಗ್ಯ) ಸ್ವಕೀಯರು ಕಲಿಸಿದ ಬುದ್ಧಿ.

**घरचा सुखी** (ಘರಚಾ ಸುಖೀ) ವಿ. ಉಂಡುಟ್ಟು ಸುಖದಿಂದಿದ್ದವ.

**घरजांवई** (ಘರಜಾವಈ) ಪು. ಮನೆಯ ಅಳಿಯ, ಮಾವನ ಮನೆಯಲ್ಲಿ ವಾಸಿಸುವ ಅಳಿಯ.

**घरटे** (ಘರಟೇ) ನ. ಪಕ್ಷಿಗಳ ಗೂಡು.

**घरठाण** (ಘರಠಾಣ್) ನ. ಮನೆ ಕಟ್ಟಲಿಕ್ಕಾಗಿ ತೆಗೆದುಕೊಂಡ ಭೂಮಿ.

**घरतंटा** (ಘರಘಂಟಾ) ಪು. ಮನೆಯಲ್ಲಿಯ ವ್ಯಾಜ್ಯ ಗಳು.

**घरंदाज** (ಘರಂದಾಜ್) ಪು. ಮರ್ಯಾದೆಯುಳ್ಳ, ನಡತೆಬಲ್ಲವ, ಕುಲೀನ, ಸಭ್ಯ, ದೊಡ್ಡಮನೆತನದವ.

**घरदार** (ಘರದಾರ್) ನ. ಇಡಿಯ ಕುಟುಂಬ, ಮನೆಯ ಎಲ್ಲ ಜನರು.

**घरधनी** (ಘರಧನೀ) ಪು. ಮನೆಯ ಯಜಮಾನ.

**घरधनीण** (ಘರಧನೀಣ) ಸ್ತ್ರೀ. ಮನೆಯ ಒಡತಿ.

**घरपट्टी** (ಘರಪಟ್ಟೀ) ಸ್ತ್ರೀ. ಮನೆಯಪಟ್ಟಿ, ಮುನಿಸಿ ಪಲ್ ಟ್ಯಾಕ್ಸ್.

घरपोच (ಘರಪೋಚ್)ವಿ.ಮನೆತನಕ ತಂದು ಮುಟ್ಟಿಸಿದ, ಕ್ರಿ. ವಿ. ಮನೆಯತನಕ ಮುಟ್ಟಿಸುವಂತೆ.

घरफोडी (ಘರಫೋಡೀ)ಸ್ತ್ರೀ. ಮನೆಯ ಬೀಗಒಡೆದು ಮಾಡಿದ ಕಳವು, ಕನ್ನಹಾಕಿ ಮಾಡಿದ ಕಳವು.

घरबसल्या (ಘರಬಸಲ್ಯಾ)ಕ್ರಿ. ವಿ. ಅನಾಯಾಸವಾಗಿ ಮನೆಯಲ್ಲಿ ಕುಳಿತಾಗಲೆ,

घरबुडव्या (ಘರಬುಡವ್ಯಾ) ವಿ. ಮನೆಯನ್ನು ಹಾಳು ಮಾಡುವವ.

घरबैठा (ಘರಬೈಠಾ)ವಿ.ಮನೆಯಲ್ಲಿಕುಳಿತು (ಆಡುವ ಆಟ) ಇಲ್ಲವೆ ಮಾಡುವ ವ್ಯವಹಾರ-

घरभरणी (ಘರಭರಣೀ)ಸ್ತ್ರೀ.ಮನೆತುಂಬಿಸಿ ಕೊಳ್ಳುವ ಸಂಸ್ಕಾರ, ವಧೂವರರನ್ನು ಮನೆಗೆ ಕರೆತರುವಿಕೆ.

घरभाडे (ಘರಭಾಡೆ) ನ. ಮನೆಯ ಬಾಡಿಗೆ.

घरभेद्या (ಘರ್‌ಭೇದ್ಯಾ) ಪು. ಮನೆಯ ಗುಟ್ಟು, ಹೊರಗೆಡುವುವವ, ಗೃಹವಂಚಕ.

घरराखण (ಘರರಾಖಣ) ಸ್ತ್ರೀ. ಮನೆಯ ಕಾವಲು, ಜೋಪಾಸನೆ, ಕಾಯುವಿಕೆ.

घराणे (ಘರಾಣೇ) ನ. ಮನೆತನ, ಕುಟುಂಬ, (ಗಾಯನ ಪದ್ಧತಿಯ) ಮೂಲ ಮನೆತನ.

घरोबा ( ಘರೋಬಾ ) ಪು. ಮನೆತನದ ಸ್ನೇಹ, ಸೌಹಾರ್ದ.

घर्षण (ಘರ್ಷಣ) ನ. ತಿಕ್ಕಾಟ, ವಿರೋಧ, ಜಗಳ.

घवघवीत (ಘವಘವೀತ್) ವಿ. ಸ್ಪಷ್ಟ, ಸೊಗಸಾದ.

—यश (—ಯಶ್) ನ. ಒಳ್ಳೆಯ ಯಶಸ್ಸು.

घस (ಘಸ್) ಸ್ತ್ರೀ. ವ್ಯಾಪಾರದಲ್ಲಿಯ ಹಾನಿ. ೨. ಕ. ಗಸಿ, ಬುಡದಲ್ಲಿ ಉಳಿದ ಕೊಳೆ.

घसकन् (ಘಸಕನ್) ಕ್ರಿ. ವಿ.ಒಮ್ಮೆಲೆ, ಆವೇಶದಿಂದ, ಸಿಟ್ಟಿನಿಂದ.

घसघशीत (ಘಸಘಶೀತ್) ಕ್ರಿ. ವಿ. ಸ್ಪಷ್ಟವಾಗಿ, ಸ್ಪಷ್ಟವಾದ.

घसघस(ಘಸಘಸ್) ಸ್ತ್ರೀ. ಜಗಳ, ವಾಗ್ವಾದ, ಒಡಕು.

घसट (ಘಸಟ್) ಸ್ತ್ರೀ. ಬಹಳ ಪರಿಚಯ, ಸಲಿಗೆ, ಸ್ನೇಹ, ಆತ್ಮೀಯತೆ.

घसटणे (ಘಸಟಣೇ)ಕ್ರಿ.ಅ.ತಿಕ್ಕು,ತಬ್ಬು,ತಾಕಲಾಡು.

घसरट (ಘಸರಟ್) ಸ್ತ್ರೀ. ಬಹಳ ಪರಿಚಯ, ಸಲಿಗೆ. ವಿ. ೨. ಜಾರಿಕೆ, ಉರುಳುವಂಥ ಸ್ಥಳ.

घस्त (ಘಸ್ತ್) ಸ್ತ್ರೀ. ಹಾನಿ. ೨. ಗಸ್ತಿ, ಕಾವಲು.

घस्मर (ಘಸ್ಮರ್) ವಿ. ಉರುಟು. ೨. ಅವಿನೀತ.

घसा (ಘಸಾ) ಪು. ಗಂಟಲು. ೨. ದನಿ.

घास घशाखाली न उतरणे ( ಘಾಸ ಘಶಾಖಾಲೀ ನ ಉತರಣೇ) ಕ್ರಿ. ಅ. ಅನ್ನರುಚಿ ಹತ್ತದಿರು, ಚಿಂತೆಮಾಡು.

घसाघस (ಘಸಾಘಸ್) ಕ್ರಿ. ವಿ. ರಭಸದಿಂದ, ಆವೇಶದಿಂದ. ೨. ಕೈಸಡಿಲುಬಿಟ್ಟು.

घसारा (ಘಸಾರಾ) ಪು. ಬಳಕೆಯ ಮೂಲಕ ಆದ ಹಾನಿ ಸವಕಳಿ.

घळ (ಘಳ್) ಸ್ತ್ರೀ. ಕಂದಕ, ಗುಹೆ, ಪರ್ವತದಲ್ಲಿಯ ಇಕ್ಕಟ್ಟಿನ ಇಳಕಲು.

घळघळां (ಘಳಘಳಾ) ಕ್ರಿ. ವಿ. ಬಹಳಷ್ಟು, ಬಹಳ.

घळघळीत (ಘಳಘಳೀತ್) ವಿ. ಸಡಿಲಾದ, ನೆಟ್ಟಗೆ ಕೂಡದಿರುವ (ಬಟ್ಟೆ)

घळण (ಘಳಣ್) ಸ್ತ್ರೀ. ತಗ್ಗು, ಕಂದಕ.

घंगाळ (ಘಂಘಾಳ್) ನ. ಗಂಗಾಳ, ಜಳಕದ ನೀರು ಸುರಿಯುವ ತಾಮ್ರ, ಹಿತ್ತಾಳೆಯ ಪಾತ್ರೆ.

घंटा (ಘಂಟಾ) ಸ್ತ್ರೀ. ಸಂ. ಗಂಟೆ.

—वाजणे (—ವಾಜಣೇ) ಕ್ರಿ. ಅ. ಮುಗಿ, ತೀರು.

घंटी (ಘಂಟೀ) ಸ್ತ್ರೀ. ಗುಂಗುರ, ಸಣ್ಣಗಂಟೆ. ೨. ಬೀಸುವ ಕಲ್ಲು.

घाई (ಘಾಈ) ಸ್ತ್ರೀ. ಅವಸರ, ಲಗುಬಗೆ.

घाऊक (ಘಾಊಕ್)ವಿ. ಒಟ್ಟು,ಸಗಟು (ವ್ಯಾಪಾರ)

घागर (ಘಾಗರ್) ಸ್ತ್ರೀ. ಕೊಡ, ಬಿಂದಿಗೆ.

घागरा (ಘಾಗರಾ) ಸ್ತ್ರೀ. ಪು. ಸ್ತ್ರೀಯರ ಒಳವಸ್ತ್ರ, ಪರಕಾರ, ಸೀರೆಯ ಒಳಬದಿಗೆ ಉಡುವ ಬಟ್ಟೆ.

घागरी (ಘಾಗರೀ) ಸ್ತ್ರೀ. ಗೆಜ್ಜೆ, ಸಣ್ಣಗಂಟೆ.

घाट (ಘಾಟ್) ಪು. ಘಟ್ಟ, ೨. ನದಿಯಲ್ಲಿಯ ಪಾವಟಣಿಗೆ, ತೀರ್ಥ. ೨. ಆಕಾರ, ಆಕೃತಿ – ಸೊಬಗು, ಮಾಟ.

—घालणे (—ಘಾಲಣೇ) ಕ್ರಿ.ಸಂ.ಹೊಂಚುಹಾಕು.

घाटणा (ಘಾಟಣಾ) ಪು. ಅರಳು ಹುರಿಯುವಾಗ ಉಪಯೋಗಿಸುವ ಅರಿವೆಯ ಗಂಟು, ಕಟ್ಟಿದ ಕೋಲು.

घाटणे (ಘಾಟಣೇ) ಕ್ರಿ.ಸಂ. ಕಲಕಿಸು, ಅಗಳಾಡಿಸು, ಹುರಿ. ಕ್ರಿ.ಅ. ಮಾತುಕತೆ ನಡೆ, ವಿಚಾರ ನಡೆದಿರು.

घाटनाळ (ಘಾಟ್‌ನಾಳ್) ಸ್ತ್ರೀ. ಗುಡ್ಡದಲ್ಲಿಯ- ಇಕ್ಕಟ್ಟಿನ ಇಳುಕಲು.

घाटपांडे (ಘಾಟ್‌ಪಾಂಡೇ) ಪು. ಕ್ಷೇತ್ರದಲ್ಲಿಯ ಪಟ್ಟಿಯನ್ನು ವಸೂಲಿ ಮಾಡುವ ಅಧಿಕಾರಿ.

**घाटमाथा** (ಘಾಟ್‌ಮಾಥಾ) ಪು. ಪರ್ವತದ ಮೇಲಿನ ಬೈಲು, ಸಪಾಟು ಪ್ರದೇಶ, ಘಟ್ಟ.

**घाटवळ** (ಘಾಟ್‌ವಳ್) ವಿ. ಘಟ್ಟದ ಮೇಲಿನ ಜನರು, ಕೊಂಕಣ ಪಟ್ಟಿಯ ಹೊರತಾಗಿನ ಸಹ್ಯಾದ್ರಿ ಗುಡ್ಡದ ಪ್ರದೇಶದಲ್ಲಿಯವರು. (ಸಾತಾರೆ, ಕೊಲ್ಹಾಪುರ, ಪುಣೆ ಮುಂ.)

**घाटा** (ಘಾಟಾ) ಪು. ಕಡಲೆಯ ಬುಡ್ಡು, ಸಿಪ್ಪೆಯುಳ್ಳ ಕಡಲೆ. ೨. ಹಾನಿ.

**घाटी** ಸ್ತ್ರಿ. ವಿ. ಕೊರಳು ೨. ಸಣ್ಣಘಟ್ಟ, ಗಿರಿಕಂದರ. ೨. ಸಹ್ಯಾದ್ರಿಯ ಪ್ರದೇಶದವ. (ಕೊಂಕಣ, ಗುಜರಾತದವನಲ್ಲದವ)

**घाण** (ಘಾಣ್) ಸ್ತ್ರಿ. ಹೊಲಸು, ಕೊಳೆ.

**–येणे** (–ಯೇಣೇ) ಕ್ರಿ. ಅ. ಹೊಲಸು ನಾರು.

**घाणा** (ಘಾಣಾ) ಪು. ಒಬ್ಬೆ, ಮುಷ್ಟಿ (ಹುರಿಯುವ ಕಾಳಿನ ಅಳತೆ). ೨. ಗಾಣ.

**–भरणे** (ಭರಣೆ) ಲಗ್ನದ ಒಂದು ವಿಧಿ.

**घाणी** (ಘಾಣೀ) ಸ್ತ್ರೀ. ಗಾಣ, ಎಣ್ಣೆ ತೆಗೆಯುವ ಗಾಲಿ.

**घाणेरडी** (ಘಾಣೇರಡೀ) ಸ್ತ್ರೀ. ಹೊಲಸಾದ,ಹೊಲಸು.

**घात** (ಘಾತ) ಪು. ಮೋಸ, ದ್ರೋಹ, ಘಾತ.

**घातक** (ಘಾತಕ) ವಿ. ಕೊಲ್ಲುವ, ಪ್ರಾಣಹೀರುವ, ಸಾವು ಉಂಟುಮಾಡುವ, ನಾಶಕ. ೨. ಪು. ಕೊಲ್ಲುವವ, ಕೊಲೆಗಾರ.

**घातकी** (ಘಾತಕೀ) ವಿ. ವಿನಾಶಕ, ನಾಶಕಾರಿ, ಹಾಳು ಮಾಡುವ, ಪ್ರಾಣಹೀರುವ.

**घातपात** (ಘಾತಪಾತ್) ಪು. ಆತಂಕ, ಪುಂಡಾಟಿಕೆ, ಉಪದ್ರವ, ಅಪಘಾತಗಳನ್ನು ನಿರ್ಮಿಸುವಿಕೆ, ಉತ್ಪಾತಗಳನ್ನುಂಟು ಮಾಡುವಿಕೆ.

**घातवार** (ಘಾತವಾರ್) ಪು. (ಜ್ಯೋತಿಷ್ಯ) ಪ್ರತಿಕೂಲವಾದ ದಿವಸ, ಕೆಲಸ ಸಾಧ್ಯವಾಗದ ದಿವಸ.

**घातुक** (ಘಾತುಕ್) ವಿ. ನಾಶಗೊಳಿಸುವ, ಅನಿಷ್ಟಕರ, ಭಯಂಕರ.

**घाबरणे** (ಘಾಬರಣೇ) ಕ್ರಿ. ಅ. ಅಂಜು, ಹೆದರು, ಗಾಬರಿಗೊಳ್ಳು.

**घाबरवणे** (ಘಾಬರವಣೇ) ಕ್ರಿ.ಸ. ಬೆದರಿಸು,ಅಂಜಿಸು, ಗಾಬರಿಗೊಳಿಸು.

**घाबरा** (ಘಾಬರಾ) ವಿ. ಅಂಜಿದ, ಹೆದರಿದ, ಬೆದರಿದ.

**घाम** (ಘಾಮ್) ಪು. ಬೆವರು. ೨. (ಲಾ) ಶ್ರಮ, ಪರಿಶ್ರಮ.

**–गाळणे** (–ಗಾಳಣೇ) ಕ್ರಿ. ಸ. ಪರಿಶ್ರಮ ಪಡು.

**–घामाचा पैसा** (–ಘಾಮಾಚಾ ಪೈಸಾ) ಪು. ದುಡಿದು ಸಂಪಾದಿಸಿದ ಹಣ.

**घामट** (ಘಾಮಟ್) ವಿ. ಬೆವರಿನ ವಾಸನೆ ಬರುವ, ನಾತಬರುವ, ಹೊಲಸಾದ, ಕೊಳೆಯಾದ.

**घामटा** (ಘಾಮಟಾ) ಪು. ಪರಿಶ್ರಮ, ದುಡಿತ.

**घामाघूम** (ಘಾಮಾಘೂಮ್) ವಿ. ದಣಿದ, ಬೆವರು ಸುರಿಯುವ, ಅಂಜಿದ, ಬೆದರಿದ, ಬೆಪ್ಪಾದ.

**घामोळे** (ಘಾಮೋಳೇ) ವಿ. ಸೆಕೆಯಿಂದ ಬೆನ್ನಿಗೆ ಹೊಟ್ಟೆಯ ಮೇಲೆ ಬರುವ ಬಕ್ಕೆಗಳು, ಬೆವರುಸಾಲೆ.

**घायकुत्या** (ಘಾಯಕುತ್ಯಾ) ವಿ. ಅವಸರ ಪಡಿಸುವವ, –ಮಾಡುವವ, ಲಗುಬಗೆಯಿಂದ ಕೆಲಸ ಮಾಡುವವ.

**घायकूत** (ಘಾಯಕೂತ) ಸ್ತ್ರೀ. ಅವಸರ ಮಾಡುವಿಕೆ, –ಪಡುವಿಕೆ, ಲಗುಬಗೆ, ಬೇಗಬೇಗನೆ ಕೆಲಸ ಮಾಡುವವ.

**घायकुतीस येणे** (ಘಾಯಕುತೀಸ್ ಏಣೇ) ಕ್ರಿ. ಅ. ಬಹಳ ಅವಸರಮಾಡು, ಬೇಗಬೇಗ ಮಾಡು.

**घायपात** (ಘಾಯಪಾತ್) ಸ್ತ್ರೀ. ಒಂದು ವನಸ್ಪತಿ.

**घायाळ** (ಘಾಯಾಳ್) ವಿ. ಗಾಯಗೊಂಡ, ಗಾಯಹೊಂದಿದ.

**घार** (ಘಾರ್) ಸ್ತ್ರೀ. ಹದ್ದು, ಹಾಳೆಯ ಹದ್ದು.

**घारगा** (ಘಾರಗಾ) ಪು. ಬೆಲ್ಲ ಕಣಕ ಕೂಡಿಸಿ ಕರಿದ ತಿಂಡಿ.

**घारा** (ಘಾರಾ) ವಿ. ಬೆಕ್ಕಣ್ಣಿನ, ನೀಲಿ ಕಣ್ಣಿನವ.

**घालणे** (ಘಾಲಣೇ) ಸ. ಹಾಕು, ಇಡು, ಸುರಿ. ೨. ಬಡಿಸು, ನೀಡು, ಎಲೆಯ ಮೇಲೆ ಹಾಕು. ೩. ತೊಡು, ಧರಿಸು.

**घालून पाडून बोलणे** (ಘಾಲೂನ್ ಪಾಡೂನ್ ಬೋಲಣೇ) ಕ್ರಿ. ಸ. ಚುಚ್ಚು ಮಾತು ನುಡಿ, ಕೆಟ್ಟ ಮಾತುಗಳನ್ನಾಡು, ರೇಗಿಸು, ಚಿತಾವಣಿ ಮಾಡು.

**घालमेल** (ಘಾಲಮೇಲ್) ಸ್ತ್ರೀ. ಅವ್ಯವಸ್ಥೆ, ಬುಡಮೇಲು, ಉತ್ಪಾತ. ೨. ಕ್ಷೋಭ, ಸಂತಾಪ.

**घालमेल्या** (ಘಾಲಮೇಲ್ಯಾ) ವಿ. ಕಿಡಿಗೇಡಿ. ೨. ಪ್ರಯತ್ನ ಪಡುವವ, ಸುಮ್ಮನೆ ಕೂಡದವ.

**घालविणे** (ಘಾಲವಿಣೇ) ಕ್ರಿ.ಸ. ತೊಲಗಿಸು, ಹೊರಗೆ ಹಾಕು, ಅಟ್ಟು. ಕ್ರಿ. ಅ. ಕಳೆದುಕೊಳ್ಳು.

**संधी–** (ಸಂಧೀ–) ಕ್ರಿ. ಅ. ಒಳ್ಳೆಯ ಸಂಧಿಯನ್ನು ಕಳೆದುಕೊಳ್ಳು.

**घालवेड** (ಘಾಲವೇಡ್) ನ. ಹುಚ್ಚನಂತೆ ನಟಿಸುವಿಕೆ, ಕೃತಕ ಹುಚ್ಚು.

**घालवेडा** (ಘಾಲಾವೇಡಾ) ವಿ. ಹುಚ್ಚಿನ ಸೋಗು ಹಾಕುವವ.

**घाला** (ಘಾಲಾ) ಪು. ಪ್ರಹಾರ, ಹೊಡೆತ, ದಾಳಿ, ಸಂಕಟ.

**घाव** (ಘಾವ್) ಪು. ಹೊಡೆತ, ಏಟು, ಪ್ರಹಾರ. ೨. ಗಾಯ. ೩. ಲುಕ್ಸಾನು, ಹಾನಿ.

**घावन** (ಘಾವನ್) ನ. ದೋಸೆ.

**घास** (ಘಾಸ್) ಪು. ತುತ್ತು. ೨. ಹುಲ್ಲು.

**घासणी** (ಘಾಸಣೀ) ಸ್ತ್ರೀ. ತಿಕ್ಕುವ, ತೊಳೆಯುವ ಬಟ್ಟೆ, ಮುಸುರೆ ತಿಕ್ಕುವ ಜುಬ್ಬರ.

**घासणे** (ಘಾಸಣೇ) ಕ್ರಿ. ಸ. ತಿಕ್ಕು, ತಾಕು, ತಾಕಲಾಡು ೨. ಸ್ವಚ್ಛಗೊಳಿಸು.

**घासून पुसून ठेवणे** (ಘಾಸುನ್ ಪುಸೂನ್ ಠೇವಣೇ) ಕ್ರಿ. ಸ. ತಿಕ್ಕಿ ಒರೆಸಿ ಇಡು ಅಚ್ಚುಕಟ್ಟಾಗಿ ಮಾಡು, ಇಡು.

**घासाघीस** (ಘಾಸಾಘೀಸ್) ಕ್ರಿ ಸ್ತ್ರೀ. ವ್ಯಾಪಾರದಲ್ಲಿಯ ಜಗ್ಗಾಟ ವಾಗ್ವಾದ, ರಗಳೆ.

**घाळ** (ಘಾಳ್) ಸ್ತ್ರೀ. ತಗ್ಗು, ಗಿರಿಕಂದರ.

**घांची** (ಘಾಂಚೀ) ಪು. ಗಾಣಿಗ, ಎಣ್ಣೆ ತೆಗೆಯುವವ.

**घिरट–टी** (ಘಿರಟ್–ಟೀ) ೧. ರಾಟೆ, ೨. ಬೀಸುವ ಕಲ್ಲು. ೩. ಸುತ್ತು, ಸುಳಿದಾಟ.

**घिरटचा घालणे** (ಘಿರಟ್ಯಾ ಘಾಲಣೇ) ಕ್ರಿ. ಅ. ಸುಳಿದಾಡು ಸುತ್ತುಹಾಕು ಎಡತಾಕು.

**घिरटणे** (ಘಿರಟಣೇ) ಕ್ರಿ. ಸ. ಅರೆ, ಉರುಟಾಗಿ ಬೀಸು.

**घिसाडघाई** (ಘಿಸಾಡ್‌ಘಾಈ) ಸ್ತ್ರೀ. ಅತೀ ಅವಸರ, ಅಯೋಗ್ಯ ಲಗುಬಗೆ, ೨. ಕಾರ್ಯನಾಶ.

**घिसाडी** (ಘಿಸಾಡೀ) ಪು. ಕಮ್ಮಾರ.

**घुघऱ्या** (ಘುಘರ್ಯಾ) ಸ್ತ್ರೀ. ಬಹುವ. ಕುಚ್ಚಿದ ಕಡಲೆ ಗುಗ್ಗರಿ.

**–च्या सहावीच्या घुगऱ्या खाणे** (–ಚ್ಯಾ ಸಹಾವಿಚ್ಯಾ ಘುಗರ್ಯಾ ಖಾಣೇ) ಕ್ರಿ. ಸ. (ಬೇರೊಬ್ಬನಿಗಿಂತ) ಬಹಳ ಅನುಭವ ಪಡೆದಿರು.

**घुघु** (ಘುಘು) ಕಿ ಸ್ತ್ರೀ. ಗೂಗೆಯ ಕೂಗು ಘೂತ್ಕಾರ,

**घुघुबाळ** (ಘುಘುಬಾಳ) ನ. ಎಳೆಯ ಕೂಸು, ಹಾಲು ಕುಡಿಯುವ ಕಂದ.

**घुटकन** (ಘುಟ್‌ಕನ್) ಕ್ರಿ. ವಿ. ಒಮ್ಮೆಲೆ (ಕುಡಿ)

**घुटका** (ಘುಟಕಾ) ಸ್ತ್ರೀ. ಪು. ಗುಟುಕು.

**घुटमळणे** (ಘುಟಮಳಣೇ) ಕ್ರಿ. ಅ. ಅನುಮಾನ ಮಾಡು ೨. ಸುಳಿದಾಡು, ಸುತ್ತಾಡು.

**घुट्ट** (ಘುಟ್ಟ್) ನ. ಪ್ರಾಣ ಹೋಗುವಾಗ ಬರುವಬಿಕ್ಕು

**घुणघुणा** (ಘುಣಘುಣಾ) ಪು. **गुणगुणा** ನೋ.

**घुणाक्षर** (ಘುಣಾಕ್ಷರ) ನ. ಅಕ್ಷರದಂತೆ ಕಾಣುವ, ಹುಳುತಿಂದ ಆಕೃತಿ.

**–न्याय** (–ನ್ಯಾಯ) ಪು. (ತರ್ಕಶಾಸ್ತ್ರ) ಹುಳು ತಿಂದ ಹಲಗೆಯ ಮೇಲಿನ ಚಿನ್ಹಗಳನ್ನು ಅಕ್ಷರ ಗಳೆಂದು ತಿಳಿಯುವಿಕೆ, ಆಕಸ್ಮಾತ್ತಾಗಿ ಕಾಣಿಸಿ ಕೊಂಡ ಸಂಗತಿ.

**घुबड** (ಘುಬಡ್) ನ. ಗೂಗೆ. ೨. ಕುರೂಪ ಮನುಷ್ಯ.

**घुमट** (ಘುಮಟ್) ಪು. ಫಾ. ಗುಮ್ಮಟ, ಬುರುಜು, ಕಳಸ.

**घुमटी** (ಘುಮಟೀ) ಸ್ತ್ರೀ. ಸಣ್ಣ ಕಳಸ, ಗುಮ್ಮಟ.

**घुमड** (ಘುಮಡ್) ಪು. ಕಣ್ಣು ನೋವು–ಕೆಂಪಾ ಗುವಿಕೆ.

**घुमणे** (ಘುಮಣೇ) ಕ್ರಿ.ಅ. (ಸಪ್ಪಳ) ಹರಡು, ಪ್ರತಿ ಧ್ವನಿತವಾಗು.

**घुमा** (ಘುಮಾ) ಪು. ಏಟು, ಹೊಡೆತ. ೨. ಸೋಮಾರಿ ತನ, ಆಲಸ್ಯ, ಮೈಗಳ್ಳತನ. ೩. ಮಾತನಾಡದವ.

**घुमा–म्या** (ಘುಮಾ–ಮ್ಯಾ) ವಿ. ಮಾತನಾಡದವ, ಮೋರೆ ಒಣಗಿಸಿಕೊಂಡು ಕೂಡುವವ.

**घुरघुटणे** (ಘುರಘುಟಣೇ) ಕ್ರಿ. ಸಂ. ಹೊದಿಸು, ಸುತ್ತು, ಹೊದಿಕೆಹಾಕು, ಕಟ್ಟು.

**घुरघुर** (ಘುರ್‌ಘುರ್) ಸ್ತ್ರೀ. ಅಸಂತೋಷ, ತಕರಾರು, ಬೇಜಾರ, ಜಿಗುಪ್ಸೆ.

**घुरम्याव** (ಘುರ್‌ಮ್ಯಾವ್) ನ. (ಬೆಕ್ಕಿನ) ಅಂಜಿಸುವಿಕೆ.

**घुरे** (ಘುರೇ) ನ. ಸನ್ನಿಪಾತ, ಮಲರೋಗ.

**घुलकावणी** (ಘುಲಕಾವಣೀ) ಸ್ತ್ರೀ. ಮೋಸ, ಚಾಪಲ್ಯ, ಕಪಟ.

**घुले** (ಘುಲೇ) ನ. ಕಂಬಳಿ ಹುಳು. ೨. ರೆಕ್ಕೆ ಮೂಡದ ಹುಳು.

**घुसखोर** (ಘುಸ್‌ಖೋರ್) ವಿ. ಒಳಗೆ ಬಂದವ, ವಲಸಿಗ, ಗುಪ್ತರೀತಿಯಿಂದ ದೇಶದಲ್ಲಿ ಸೇರಿಕೊಂಡವ.

**घुसडणे** (ಘುಸಡಣೇ) ಕ್ರಿ. ಸ. ಹಾಕು, ತುರುಕು, ಪ್ರಕ್ಷೇಪಮಾಡು. ೨. ಕೈಗಂಟಿನ ವಾಕ್ಯ ಬೆರೆಸು.

**घुसणे** (ಘುಸಣೇ) ಕ್ರಿ. ಅ. ಹೊಗು, ಒಳಸೇರು, ನುಗ್ಗು, ಪ್ರವೇಶಿಸು.

**घुसळण** (ಘುಸಳಣ) ನ. ಕಡಿಯುವಿಕೆ (ಮಜ್ಜಿಗೆ ಮುಂ.)

**घुसळणे** (ಘುಸಳಣೇ) ಕ್ರಿ. ಸ. (ಮೊಸರು ಮುಂ.) ಕಡೆ, ಅಲಗಾಡಿಸು. ೨. ಕಾಡು, ಹಿಂಸೆಮಾಡು.

**घुसमटणे** (ಘುಸ್‌ಮಟಣೇ) ಕ್ರಿ. ಅ. ಉಸಿರುಗಟ್ಟು, ಸೆಕೆಯಾಗು.

**घुस्सा** (ಘುಸ್ಸಾ) ಪು. ಅರ. ಸಿಟ್ಟು, ಕೋಪ.

**घुळणा** (ಘುಳಣಾ) ಪು. ಹೊರಳೆಗಳನ್ನು ಜೋಡಿಸುವ ಕೋಮಲ ತ್ವಚೆ.

**घुळी** (ಘುಳೀ) ಪು. ಕ. ಗೂಳಿ, ದೇವರಿಗೆ ಬಿಟ್ಟುಕೊಟ್ಟ ಹೋರಿ.

**घुंगट** (ಘುಂಗಟ್) ನ. ಪರದೆ, ಮುಖವನ್ನು ಮುಚ್ಚುವ ಸೆರಗು.

**घुंगरट** (ಘುಂಗರಟ್) ನ. ಚಿಕ್ಕಾಡು, ಸೊಳ್ಳೆ, ಕಡಿಯುವ ಹುಳು.

**घुंगरू** (ಘುಂಗರೂ) ನ. ಗೆಜ್ಜೆ, ಪೈಜಣ, ನೂಪುರ.

**घुंगुरमाळ** (ಘುಂಗುರಮಾಳ್) ಸ್ತ್ರೀ. ಕೊರಳಿನಲ್ಲಿ ಕಟ್ಟುವ ಗೆಜ್ಜೆಯ ಮಾಲೆ, ಗುಂಗುರಪಟ್ಟಿ.

**घुंगुरवाळा** (ಘುಂಗುರ್‌ವಾಳಾ) ಪು. ಸಣ್ಣಹುಡುಗರ ಕಾಲಲ್ಲಿ ಹಾಕುವ ಪೈಜಣ, ನೂಪುರ, ಗೆಜ್ಜೆಯ ಸರಪಣಿ.

**घूस** (ಘೂಸ್) ಸ್ತ್ರೀ. ಹೆಗ್ಗಣ. ೨. ಕಪ್ಪು ಬಣ್ಣದ ಹೆಂಗಸು (ವ್ಯಂಗ್ಯ).

**घृणा** (ಘೃಣಾ) ಸ್ತ್ರೀ. ಹೇಸಿಗೆ, ಜಿಗುಪ್ಸೆ, ಬೇಸರ, ದ್ವೇಷ. ೨. ದಯೆ, ಕನಿಕರ.

**घृत** (ಘೃತ) ನ. ಸಂ. ತುಪ್ಪ.

**–कुल्या** (ಕುಲ್ಯಾ) ಸ್ತ್ರೀ. ತುಪ್ಪದ ಹೊಳೆ (ಲಾ.) ತುಪ್ಪದ ಪಕ್ವಾನ್ನದ ಊಟ, ಸಮೀಚೀನ ಊಟ.

**घृतकुल्या मधुकुल्या** (ಘೃತಕುಲ್ಯಾ ಮಧುಕುಲ್ಯಾ) ಸ್ತ್ರೀ. ಹೇರಳವಾಗಿ ತುಪ್ಪ ಜೇನು ಹಾಕಿದ ಪಕ್ವಾನ್ನಗಳು, ಸಮೀಚೀನ ಭೋಜನ.

**घेणे** (ಘೇಣೇ) ಕ್ರಿ. ಸ. ತೆಗೆದುಕೊ, ಸ್ವೀಕರಿಸು. ೨. ಗ್ರಹಿಸು, ಪಾಠ ಕಲಿ.

**–करी** (–ಕರೀ) ಪು. ಧನಕೋ, ಸಾಲಕೊಟ್ಟವ.

**घेर** (ಘೇರ್) ಪು. ಸುತ್ತಳತೆ, ಪರಿಘ.

**पोटाचा–** (ಪೋಟಾಚಾ–) ಪು. (ಮುಂದೆ ಬಂದ ಹೊಟ್ಟೆಯ) ಅಳತೆ, ವಿಸ್ತಾರ.

**घेरा** (ಘೇರಾ) ಪು. ಸಂಜಾಪು, ಚಂಡಿಕೆಯ ಸುತ್ತಲಿನ ಕೂದಲು.

**घेरणे** (ಘೇರಣೇ) ಕ್ರಿ. ಸ. ಸುತ್ತುಮುತ್ತು ಸುಳಿದಾಡು. ೨. ಬಂಧಿಸು, ಮುತ್ತು.

**घेराव** (ಘೇರಾವ್) ಪು. ಮುತ್ತಿಗೆ, ಸುತ್ತುಮುತ್ತು ನಿಲ್ಲುವಿಕೆ.

**घेरी** (ಘೇರೀ) ಸ್ತ್ರೀ. ಬವಳಿ, ತಲೆದಿಮ್ಮೆನ್ನುವಿಕೆ, ಮೂರ್ಛೆ.

**घेवडा** (ಘೇವಡಾ) ಪು. ಚಳ್ಳವರೆ, ಸೀಮೆ ಅವರೇಕಾಯಿ, ಒಂದು ಪಲ್ಯ.

**घेवाण देवाण** (ಘೇವಾಣ್ ದೇವಾಣ್) ಸ್ತ್ರೀ. ಕೊಡಕೊಳ್ಳುವಿಕೆ, ಸ್ನೇಹ ಸಂಬಂಧ, ಆದಾನ ಪ್ರದಾನ.

**घेवबा** (ಘೇವಬಾ) ಪು. ಸುಲಿಯುವವ, ತೆಗೆದುಕೊಳ್ಳುವವ (ಕೊಡುಗೈಯವನಲ್ಲದವ).

**घो** (ಘೋ) ಪು. (ಗ್ರಾಮ್ಯ) ಗಂಡ, ಯಜಮಾನ.

**घोकणी** (ಘೋಕಣೀ) ಸ್ತ್ರೀ. ಪುನಃ ಪುನಃ ಅನ್ನುವಿಕೆ, ಪಾಠಮಾಡುವಿಕೆ, ಬಾಯಿಪಾಠ ಮಾಡುವಿಕೆ.

**घोकणे** (ಘೋಕಣೇ) ಕ್ರಿ. ಸಂ. ಬಾಯಿಪಾಠ ಮಾಡು.

**घोकीव** (ಘೋಕೀವ್) ವಿ. ಬಾಯಿಪಾಠ ಮಾಡಿದ.

**घोगरा** (ಘೋಗರಾ) ವಿ. ದನಿಕೂತ, ಗೊಗ್ಗರು ಮಾತನಾಡುವ.

**घोघो** (ಘೋಘೋ) ಪು. ಸದ್ದು ಗಡಚಾದ ಶಬ್ದ.

**घोट** (ಘೋಟ್) ಪು. ಗುಟುಕು.

**जिवाचा घोट घेणे** (ಜಿವಾಚಾ ಘೋಟ್ ಘೇಣೇ) ಕ್ರಿ. ಸ. ಪ್ರಾಣ ಹೀರು.

**घोटणे** (ಘೋಟಣೇ) ಕ್ರಿ. ಸಂ. ಅರೆ(ಒರಳುಕಲ್ಲಿನಲ್ಲಿ)

**घोटा** (ಘೋಟಾ) ಪು. ಅರೆದು ತಯಾರಿದ 'ಭಂಗ್' (ಮಾದಕ ಪದಾರ್ಥ)

**घोटाळणे** (ಘೋಟಾಳಣೇ) ಕ್ರಿ. ಅ. ಅನುಮಾನ ಮಾಡು,ತಡವರಿಸು, ಬಹಳಹೊತ್ತು ಕಾರಣವಿಲ್ಲದೆ ನಿಲ್ಲು.

**घोटाळा** (ಘೋಟಾಳಾ) ಪು. ಪ್ರಮಾದ, ತಪ್ಪುತಡೆ, ಅವ್ಯವಸ್ಥೆ.

**घोटीव** (ಘೋಟೀವ್) ವಿ. ಅರೆದ, ಪುಡಿಮಾಡಿದ.

**घोट्या** (ಘೋಟ್ಯಾ) ಪು. ಉಪ್ಪಾರನ ಸಾಧನ.

**घोडचाल** (ಘೋಡಚಾಲ್) ಸ್ತ್ರೀ. ಬೇಗ ನಡೆಯುವಿಕೆ, ದ್ರುತಗತಿ.

**घोडचूक** (ಘೋಡ್‌ಚೂಕ್) ಸ್ತ್ರೀ. ಬಹಳ ದೊಡ್ಡ ತಪ್ಪು, ಪ್ರಮಾದ.

**घोडदळ** (ಘೋಡ್‌ದಳ್) ನ. ಅಶ್ವಸೇನೆ, ಕುದುರೆಯ ಕಾವಲು.

**घोडनवरा** (ಘೋಡ್‌ನವರಾ) ಪು. ವಯಸ್ಸು ಮೀರಿದ ಮದುಮಗ.

**घोडनवरी** (ಘೋಡ್‌ನವರೀ) ಸ್ತ್ರೀ. ವಯಸ್ಸು ಮೀರಿದ ಮದುಮಗಳು.

**घोडशाळा** (ಘೋಡ್‌ಶಾಳಾ) ಸ್ತ್ರೀ. ಅಶ್ವಸಾಲೆ, ಕುದುರೆಯ ತಬೇಲ.

**घोडा** (ಘೋಡಾ) ಪು. ಕುದುರೆ, ೨. ಬಂದೂಕಿನ (ಹಾರಿಸುವ) ಕೀಲಿ.

**घोडचावर बसून येणे** (ಘೋಡ್ಯಾವರ ಬಸೂನ್ ಏಣೇ) ಕ್ರಿ. ಅ. ಬಹಳ ಅವಸರ ಮಾಡು.

**घोडा मैदान जवळ आहे** (ಘೋಡಾ ಮೈದಾನ್ ಜವಳ್ ಆಹೇ) ನಾಣ್ನುಡಿ. ಏನು ಆಗಬಹುದು ಎಂದು ಕೇಳುವ ಅಗತ್ಯವಿಲ್ಲ. ಎಲ್ಲವೂ ನಿಮ್ಮ ಕಣ್ಣು ಮುಂದೆ ಜರುಗಲಿದೆ.

**घोडा हाकणे** (ಘೋಡಾ ಹಾಕಣೇ) ಕ್ರಿ. ಅ. ಪಲಾಯನ ಮಾಡು.

**घोडचापुढे धावणे** (ಘೋಡ್ಯಾಪುಢೇ ಧಾವಣೇ) ಕ್ರಿ. ಅ. ಬಹಳ ಶ್ರಮಪಡು.

**घोडचाची चाकरी** (ಘೋಡ್ಯಾಚೀ ಚಾಕರೀ) ಸ್ತ್ರೀ. ಕುದುರೆಯ ಸಂಗೋಪನ.

**घोडी** (ಘೋಡೀ) ಸ್ತ್ರೀ. ಹೆಣ್ಣು ಕುದುರೆ ೨. ಬಹಳ ಎತ್ತರ ಬೆಳೆದ ಅಥವಾ ತಿಳಿಗೇಡಿ ಹುಡುಗೆ.

**घोडें** (ಘೋಡೇ) ನ. ಕುದುರೆ.

**–पुढे ढकलणे** (–ಪುಢೇ ಢಕಲಣೇ) ಕ್ರಿ. ಅ. ತನ್ನ ಕೆಲಸ ಸಾಧಿಸು ಪ್ರಗತಿಹೊಂದು.

**घोडे थकणे** (ಘೋಡೇ ಥಕಣೇ) ಕ್ರಿ. ಅ. ಬಹಳ ದಣಿ, ಅಶಕ್ತನಾಗು.

**घोडे मारणे** (ಘೋಡೇ ಮಾರಣೇ) ಕ್ರಿ. ಸ. ಹೆರವರನ್ನು ಪೀಡಿಸು, ತೊಂದರೆ ಕೊಡು.

**घोण** (ಘೋಣ್) ಸ್ತ್ರೀ. ಜಿರಲೆ. ೨. ಬೆಟ್ಟಿಯ ಜೆನಕ, ಸಾವಿರ ಕಾಲಿನ ಹುಳು.

**घोणशा** (ಘೋಣಶಾ) ವಿ. ಬಹಳ ದಡ್ಡ, ಸೋಮಾರಿ.

**घोणस** (ಘೋಣಸ್) ಪು. ಒಂದು ವಿಷಸರ್ಪ.

**घोणा** (ಘೋಣಾ) ಪು. ಹೊರಳೆಗಳನ್ನು ಜೋಡಿಸುವ ಮಾಂಸಪೇಶಿ.

**–फुटणे** (–ಫುಟಣೇ) ಕ್ರಿ. ಅ. ಮೂಗಿನಿಂದ ನೆತ್ತರ ಬರು.

**घोर** (ಘೋರ್) ವಿ. ಸಂ. ಕಠಿಣ, ಭಯಂಕರ. ೨. ನ. ವಿಪತ್ತು, ಸಂಕಟ.

**घोरणे** (ಘೋರಣೇ) ಕ್ರಿ. ಅ. ಗೊರಕೆ ಹೊಡೆ, ಗಾಢವಾಗಿ ನಿದ್ರಿಸು.

**घोरपड** (ಘೋರಪಡ್) ಸ್ತ್ರೀ. ಓತೀಕಾಟದಂತಹ ದೊಡ್ಡ ಪ್ರಾಣಿ. ೨. ಕುರೂಪ ಹೆಂಡತಿ, ೩. ಕಾಡುವ ಮನುಷ್ಯ, ಭಾರ.

**घोष** (ಘೋಷ) ಪು. ನಾದ, ಶಬ್ದ. ೨. ದನ ಕಾಯುುವವರ ವಸತಿ.

**–वाक्य** (–ವಾಕ್ಯ) ನ. ಧ್ಯೇಯವಾಕ್ಯ, ಗುರಿ.

**घोषणा** (ಘೋಷಣಾ) ಸ್ತ್ರೀ. ಸಂ. ಪ್ರಕಟನೆ, ಘೋಷಣೆ.

**घोस** (ಘೋಸ್) ಪು. ಗೊಂಚಲು, ಗೊನೆ.

**–दार** (–ದಾರ್) ವಿ. ಗೊಂಚಲುಗಳುಳ್ಳ.

**घोसाळे** (ಘೋಸಾಳೇ) ನ. ತುಪ್ಪಹೀರೆಕಾಯಿ, ತುಪರೀಕಾಯಿ.

**घोळ** (ಘೋಳ್) ಪು. ಅವ್ಯವಸ್ಥೆ, ತಾಳತಂತ್ರವಿಲ್ಲದಿರುವಿಕೆ.

**घोळका** (ಘೋಳಕಾ) ಪು. ಸಮೂಹ, ಗುಂಪು, ಜನದಟ್ಟಣೆ.

**घोळघोळून** (ಘೋಳ್‌ಘೋಳೂನ್) ಕ್ರಿ. ವಿ. ಮತ್ತೆ ಉಚ್ಚರಿಸಿ (ಹೇಳು, ಹಾಡು.)

**घोळणे** (ಘೋಳಣೇ) ಕ್ರಿ. ಸ. ಕಲಿಸು, ಕೂಡಿಸು, ಬೆರೆಸು. ೨. ರೂಢಿಮಾಡು, ಅಭ್ಯಾಸಮಾಡು.

**घोळवणे** (ಘೋಳವಣೇ) ಕ್ರಿ. ಸ. ನಿಲ್ಲಲಿಕ್ಕೆ ಹಚ್ಚು, ವಿಲಂಬಮಾಡು. ೨. ತೊಂದರೆಕೊಡು.

**घोंगट** (ಘೋಂಗಟ್) ಮೋರೆಯ ಮೇಲಿನ ಪರದೆ. ಸೆರಗು.

**घोंगडी** (ಘೋಂಗಡೀ) ಸ್ತ್ರೀ. ಕಂಬಳಿ, ಗೊಂಗಡಿ.

**घोंगडे** (ಘೋಂಗಡೇ) ನ. ಕಂಬಳಿ, ಗೊಂಗಡಿ.

**घोंगावणे** (ಘೋಂಗಾವಣೇ) ಕ್ರಿ. ಸ. ಸಪ್ಪಳಮಾಡು, ನಿನಾದಮಾಡು.

**घ्राण** (ಘ್ರಾಣ) ನ. ಪ್ರಾಣೇಂದ್ರಿಯ, ಮೂಗು.

**घ्राणेन्द्रिय** (ಘ್ರಾಣೇಂದ್ರಿಯ) ನ. ಮೂಗು.

**घ्रात** (ಘ್ರಾತ್) ವಿ. ಮೂಸಿನೋಡಿದ, ಉಪಯೋಗಿಸಿದ. ೨. ಲಾ. ಶೀಲಭ್ರಷ್ಟ ಸ್ತ್ರೀ.

# च ಚ

**च** : ಚ : ಚ ವರ್ಗದ ಮೊದಲನೆಯ ಅಕ್ಷರ. ಮರಾಠಿಯಲ್ಲಿ ಎರಡು ಬಗೆಯ ಉಚ್ಚಾರವುಳ್ಳ ಅಕ್ಷರ. ತ್ಸ=ಚ– ಇದು ಮರಾಠಿಯ ವಿಶಿಷ್ಟ ವಿ ಉಚ್ಚಾರ ಎರಡನೆಯದು ಸಾಮಾನ್ಯ ಚ. ಸಂಸ್ಕೃತ ತತ್ಸಮ, ಹಾಗೂ ಕೆಲವೊಂದು ತದ್ಭವ (ಉದಾ ಚಾರ.,) ಇ, ಉ, ಯ್, ವ್, ಇವುಗಳೊಡನೆ ಬಂದಾದ ಸಾಮಾನ್ಯ ಚ ದಂತೆ. ಇತರ ಸಂದರ್ಭಗಳಲ್ಲಿ ಮರಾಠಿಯಲ್ಲಿ 'ಚ' ಎಂಬ ಉಚ್ಚಾರವೇ ಪ್ರಚಾರದಲ್ಲಿದೆ. ಚ ಚ ಇವುಗಳ ಉಚ್ಚಾರವನ್ನು ಗಮನಿಸುವುದು ಅಗತ್ಯವಾಗಿದೆ. (ಉತ್ತರ ಕರ್ನಾಟಕದದರಿಗೆ ಕೊಂಚಮಟ್ಟಿಗೆ ಸುಲಭ.)

**च-** ಚ– ಪುಷ್ಟ್ಯರ್ಥಕ ಪ್ರತ್ಯಯ (ಅವ್ಯಯ)

**माझा** ಮಾಝಾ } ನನ್ನ. **माझाच** ಮಾಝಾಚ } ನನ್ನದೆ.

**चक** (ಚಕ್) ಪು. **वचक** ನೋಡಿರಿ.

**चकचकणे** (ಚಕಚಕಣೇ) ಕ್ರಿ. ಅ. ಥಳಥಳಿಸು, ಹೊಳೆ.

**चकचकाट** (ಚಕಚಕಾಟ್) ಪು. ಹೊಳಪು, ಮಿರುಗು, ಮಿಂಚುವಿಕೆ.

**चकचकीत** (ಚಕಚಕೀತ್) ವಿ. ಹೊಳೆಯುವ ಮಿಂಚುವ.

**चकणा** (ಚಕಣಾ) ವಿ. ತಿರುಳುಗಣ್ಣಿನವ. ತಿರುಳ.

**चकणे** (ಚಕಣೇ) ಕ್ರಿ. ಅ. ಸೋಜಿಗಗೊಳ್ಳು, ಬೆಪ್ಪಾಗು.

**चकती** (ಚಕತೀ) ಸ್ತ್ರೀ. ದುಂಡನ್ನ ತುಂಡು, ಧಾತುವಿನ ಬಿಲ್ಲೆ, ಗೋಲಕ.

**चकमक** (ಚಕಮಕ್) ಸ್ತ್ರೀ. ಒನಪು, ಒಯ್ಯಾರಿ. ೨. ವಿ. ಹೊಳೆಯುವ, ಚೊಕ್ಕಟ್ಟಾದ.

**चकमकणे** (ಚಕಮಕಣೇ) ಕ್ರಿ. ಅ. ಹೊಳೆ, ಮಿಂಚು.

**चकली** (ಚಕಲೀ) ಸ್ತ್ರೀ. ಕ. ಚಕ್ಕುಲಿ, ಮುರುಕು.

**चकवा** (ಚಕವಾ) ಪು. ಚಕ್ರವಾಕದ ಮರಿ, ಗಾನ.

**चकविणे** (ಚಕವಿಣೇ) ಕ್ರಿ. ಅ. ಮೋಸಮಾಡು, ಠಕ್ಕಿಸು. ೨. ಆಶ್ಚರ್ಯಗೊಳಿಸು. ೩. ಮೋಜು ಮಾಡು, ತಮಾಷೆಮಾಡು, ಚೇಷ್ಟೆಮಾಡು.

**चकाकणे** (ಚಕಾಕಣೇ) ಕ್ರಿ. ಅ. ಹೊಳೆ, ಮಿಂಚು.

**चकाकी** (ಚಕಾಕೀ) ಸ್ತ್ರೀ. ಹೊಳಪು.

**चकाचकी** (ಚಕಾಚಕೀ) ಸ್ತ್ರೀ. ವಾಗ್ವಾದ, ವಾದ, ಜಗಳ.

**चकाटचा** (ಚಕಾಟ್ಯಾ) ಸ್ತ್ರೀ. ಬಹು. ವ. ಗೊಳ್ಳು ಹರಟೆ, ಮೋಜಿನ ಮಾತು, ಸರಸಸಲ್ಲಾಪ.

**–पिटणे** (ಪಿಟಣೇ) ಕ್ರಿ. ಅ. ಹರಟೆಕೊಚ್ಚು.

**चकार** (ಚಕಾರ್) ಪು. ಚ. ಚ– ಅಕ್ಷರ.

**–शब्द** (–ಶಬ್ದ) ಒಂದೂ ಮಾತಿಲ್ಲದೆ,

**(नाही)** (ನಾಹೀ) ಮೌನದಿಂದ.

**चतुष्पाद** (ಚತುಷ್ಪಾದ) ವಿ. ನಾಲ್ಕು ಕಾಲುಗಳುಳ್ಳ, (ಪ್ರಾಣಿ), ದನಕರು.

**चतु:स्सीमा** (ಚತು:ಸೀಮಾ) ಸ್ತ್ರೀ. ಮೇರೆಗಳು.

**चपखल** (ಚಪಖಲ್) ವಿ. ನೆಟ್ಟಗೆ, ಯೋಗ್ಯವಾಗಿ, ಸಮರ್ಪಕವಾಗಿ.

**–बसणे** (ಬಸಣೇ) ಕ್ರಿ. ಅ. (ಮಾತು) ಚನ್ನಾಗಿ ಅನ್ವಯಿಸು, ಸಮರ್ಪಕವಾಗಿರು.

**चपटा** (ಚಪಟಾ) ವಿ. ಹತ್ತಿಕ್ಕಿದ, ಚಪ್ಪಟೆಯಾದ, ಮೊಂಡ (ಮೂಗು)

**चपटी** (ಚಪಟೀ) ಸ್ತ್ರೀ. ಮೊಂಡ ಮೂಗಿನವಳು.

**चपराक** (ಚಪರಾಕ್) ಸ್ತ್ರೀ. ಏಟು, ಹೊಡೆತದ, ಕೆನ್ನೆಯ ಮೇಲೆ ಹೊಡೆಯುವಿಕೆ. ಚಪರಾಕಿ.

**चपराशी** (ಚಪರಾಶೀ) ಪು. ಫಾ. ಆಳು, ಸೇವಕ, ಜವಾನ.

**चपरास** (ಚಪರಾಸ್) ಸ್ತ್ರೀ. ಫಾ. ಬಿಲ್ಲೆ, ಬ್ಯಾಡ್ಜ್, ಆಳಿನ ಹಿತ್ತಾಳೆಯ ಬಿಲ್ಲೆ.

**चपल** (ಚಪಲ್) ವಿ ಸಂ. ಚಪಲ, ಚಂಚಲ, ಲಗುಬಗೆಯ, ಚುರುಕಾದ.

**चपला** (ಚಪಲಾ) ಸ್ತ್ರೀ. ಸಂ. ಮಿಂಚು, ಕೋಲ್ಮಿಂಚು ಸಿಡಿಲು.

**चपला** (ಚಪಲಾ) ಸ್ತ್ರೀ. ಬಹು. ವ. ಚಪ್ಪಲ್, ಕಾಲ್ಮೊರೆ, ಪಾದತ್ರಾಣ.

**चपळ** (ಚಪಳ್) ನಿ. ಚಪಲ.

**चपळाई** (ಚಪಳಾಈ) ಸ್ತ್ರೀ ಚಪಲತೆ, ಚಂಚಲತೆ, ಚುರುಕುತನ, ಗತ್ತು ಹಂಚಿಕೆ ೨. ಮೋಸ.

**चपाटणे** (ಚಪಾಟಣೇ) ಕ್ರಿ ಸ. ನುಂಗು ಬಕ್ಕರಿಸು.

**चपाटा** (ಚಪಟಾ) ಪು. ವೇಗ, ಯಾವುದೊಂದು ಕೆಲಸವನ್ನು ಮತ್ತೆಮತ್ತೆ ಮಾಡುವ ರೂಢಿ.

**चपाटी** (ಚಪಾಟೀ) ಸ್ತ್ರಿ. ಏಟು, ಹೊಡೆತ, ತಪರಾಕು

**चपाती** (ಚಪಾತೀ) ಸ್ತ್ರೀ. ಚಪಾತಿ, ಗೋದಿಯರೊಟ್ಟಿ
**चपापणे** (ಚಪಾಪಣೇ) ಕ್ರಿ. ಅ. ಸೋಜಿಗಗೊಳ್ಳು, ಅಂಜಿಕೊ, ಬೆದರು ಬೆಪ್ಪಗಾಗು.
**चप्पल** (ಚಪ್ಪಲ್) ಸ್ತ್ರೀ. ಚಪ್ಪಲ್, ಕಾಲ್ಮೊರೆ.
**चबचबीत** (ಚಬಚಬೀತ್) ನ. ವಿ. ಒದ್ದೆಯಾದ, ನೀರು ಬಸಿಯುವ.
**चबूतरा** (ಚಬೂತರಾ) ಪು. ಹಿಂ. ಕಟ್ಟೆ, ಸ್ಮಾರಕ–ಮೂರ್ತಿಯ ಬುಡದಲ್ಲಿಯ ಕಟ್ಟೆ.
**चमक** (ಚಮಕ್) ಸ್ತ್ರೀ. ಡೌಲು, ದಿಮ್ಮಾಕ. ೨. ಹೊಳಪು. ೩. ತೀವ್ರ ವೇದನೆ, ನೋವು.
**चमकणे** (ಚಮಕಣೇ) ಕ್ರಿ.ಅ. ಬೆರಗಾಗು. ೨. ಹೆಸರು ಪಡೆ. ೩. ಹೊಳೆ, ಮಿಂಚು.
**चमकबिजली** (ಚಮಕಬಿಜಲೀ) ಸ್ತ್ರೀ. ಚಂದಕಾಣುವ ಹೆಂಗಸು, ಒನಪಿನ ಸಿಂಗಾರಿ.
**चमकावणे** (ಚಮಕಾವಣೇ) ಕ್ರಿ. ಸ. ಬೆರಗುಗೊಳಿಸು. ೨. ಸಿಟ್ಟುಮಾಡು, ಬೆದರಿಸು, ಪಾರುಪತ್ಯಮಾಡು.
**चमकी** (ಚಮಕೀ) ಸ್ತ್ರೀ. ಮೂಗುತಿ, ಮೂಗುಬೊಟ್ಟು.
**चमचमाट** (ಚಮಚಮಾಟ್) ಪು. ಸಮೀಚೀನ ಭೋಜನದ ಸೊಬಗು.
**चमचमीत** (ಚಮಚಮೀತ್) ವಿ. ಸಮೀಚೀನವಾದ, ತೃಪ್ತಿಕರ (ಊಟ).
**चमचा** (ಚಮಚಾ) ಪು. ಚಮ್ಮಚೆ. ೨. (ಲಾ)
**चमत्कार** (ಚಮತ್ಕಾರ್) ಪು. ಸಂ. ಚಮತ್ಕಾರ, ಸೋಜಿಗದ ಮಾತು, ಆಶ್ಚರ್ಯಕಾರಕ ಸಂಗತಿ.
**चमत्कारिक** (ಚಮತ್ಕಾರಿಕ) ವಿ. ಸಂ. ಆಶ್ಚರ್ಯಕಾರಕ. ೨. ವಿಚಿತ್ರಕಾಣುವ, ಸರಿಯಾಗಿರದ.
**चमन** (ಚಮನ್) ನ. ಮೋಜು, ತಮಾಷೆ, ವಿಲಾಸ.
**चमनगोटा** (ಚಮನ್‌ಗೋಟಾ) ಪು. ಪಾರುಪತ್ಯ, ದಂಡನೆ.
**–करणे** (–ಕರಣೇ) ಕ್ರಿ. ಸಂ. ಸಿಟ್ಟುಮಾಡು, ಗದ್ದರಿಸು, ಬಯ್ಯು.
**चमस** (ಚಮಸ್) ಪು. ಸಂ. ಸೌಟು, ಚಮ್ಮಚೆ.
**चमू** (ಚಮೂ) ಸ್ತ್ರೀ.ಸಂ. ಸೇನೆ, ದಂಡು, ಸಮೂಹ.
**चमेली** (ಚಮೇಲೀ) ಸ್ತ್ರೀ. ಮಲ್ಲಿಗೆ. ೨. ಜಾಜೀಬಳ್ಳಿ, ಹೂವು.
**चर** (ಚರ್) ಪು. ಕಂದಕ, ಕೋಟೆಯ ಸುತ್ತಲಿನ ತಗ್ಗು, ಕೂದಕ:
**चरक** (ಚರಕ್) ಪು. ಕಬ್ಬಿಣ ಗಾಣ, ಯಂತ್ರ.
**चरकाला धरणे** (ಚರಕಾಲಾ ಧರಣೇ) ಕ್ರಿ. ಅ. ಕೆಲಸಕ್ಕೆ ಹಚ್ಚು, ದುಡಿಸಿಕೊ.
**चरकणे** (ಚರಕಣೇ) ಕ್ರಿ. ಅ. ಬೆರಗಾಗು. ೨. ಅಂಜು, ಬೆದರು, ಹೆದರು, ಗಾಬರಿಗೊಳ್ಳು.
**चरका** (ಚರಕಾ) ಸ್ತ್ರೀ. ಸುಡುವ ಸ್ಪರ್ಶ. ೨. ಬರೆ, ತಪ್ತಮುದ್ರೆ.
**चरकी** (ಚರಕೀ) ಸ್ತ್ರೀ. ಬೀಸುವ ಕಲ್ಲು.
**चरखा** (ಚರಖಾ) ಪು. ನೂಲುವ ರಾಟೆ, ಚರ್ಖಾ.
**चरचरणे** (ಚರಚರಣೇ) ಕ್ರಿ. ಅ. ಗಾಯವಾಗು, ನೋವಾಗು, ಉರಿ.
**चरचरा** (ಚರಚರಾ) ಕ್ರಿ. ವಿ. ಪರಾಪರಾ (ಹರಿಯುವಿಕೆ.)
**चरचरीत** (ಚರಚರೀತ್) ವಿ. ಚುರುಕಾದ, ಉರುಟಾದ. ೨. ತೀವ್ರವಾದ (ಹಸಿವೆ).
**चरट** (ಚರಟ್) ನ. ಹಗ್ಗ, ಮಿಣಿ.
**चरडभरड** (ಚರಡ್‌ಭರಡ್) ವಿ. ಉರುಟಾದ, ನಯವಾಗಿರದ.
**चरण** (ಚರಣ್) ಪು. ಪಾದ. ೨. ಪದ್ಯದ ಭಾಗ. ೩. ಮೂಲೆ. ೪. ಕಾಲು, ಪಾಲು.
**चरण** (ಚರಣ್) ನ. ಮೇವು. ೨. ಹುಲ್ಲುಗಡ್ಡೆ, ಹುಲ್ಲುಗಾವಲು.
**चरणे** (ಕ್ರಿ. ಸ. ಹುಲ್ಲುತಿನ್ನು, ಮೇಯು. ೨. ಆಸೆಬುರುಕ ತನದಿಂದ ತಿನ್ನು, ಗಬಗಬ ನುಂಗು, ಲಂಚ ತಿನ್ನು.
**चरबड** (ಚರಬಡ್) ವಿ. ಉರುಟಾದ.
**चरचरीत** (ಚರಚರೀತ) ವಿ. ಉರುಟಾದ.
**चरवण** (ಚರವಣ) ನ. ಹುಲ್ಲುಗದ್ದೆ, ಮೇಯುವ ಅಡವಿ.
**चरविणे** (ಚರವಿಣೇ) ಕ್ರಿ. ಅ. ಮೇಯಿಸು, ತಿನ್ನಿಸು, ತಿನ್ನಲಿಕ್ಕೆ ಹಾಕು.
**चरवी** (ಚರವೀ) ಸ್ತ್ರೀ. ಪಾತ್ರೆ, ಕೊಳಗ.
**चरस** (ಚರಸ್) ಪು. ಒಂದು ಮಾದಕ ದ್ರವ್ಯ.
**चरा** (ಚರಾ) ಪು. ಬಿರುಕು. ೨. ಚಿವುರಿದ ಚಿನ್ಹ.
**चराई** (ಚರಾಈ) ಸ್ತ್ರೀ. ದನಮೇಯಿಸುವ ಕೂಲಿ.
**चराचर** (ಚರಾಚರ್) ವಿ. ಸಜೀವ ನಿರ್ಜೀವ (ಸೃಷ್ಟಿ)
**चराचरा** (ಚರಾಚರ್) ಕ್ರಿ. ವಿ. ಕರಕರ, ಚರಚರ, ಲಗುಬಗೆಯಿಂದ ೨. ದಾಕ್ಷಿಣ್ಯವಿಲ್ಲದೆ.
**चरित** (ಚರಿತ್) ನ. ಚರಿತ್ರೆ, ನಡಾವಳಿ.

**चरितार्थ** (ಚರಿತಾರ್ಥ) ಪು. ಉದರ ನಿರ್ವಾಹ, ಹೊಟ್ಟೆತುಂಬಿಕೊಳ್ಳುವಿಕೆ, ಉಪಜೀವನ.

**चरित्र** (ಚರಿತ್ರ) ನ. ಕತೆ, ಕಥೆ, ಚರಿತ್ರೆ ೨. ನಡಾವಳಿ, ವರ್ತನ.

**चरी** (ಚರೀ) ಸ್ತ್ರಿ. ಸಣ್ಣ ತಗ್ಗು.

**चरू** (ಚರೂ) ಪು. ಸಂ. ಅನ್ನ (ಧಾರ್ಮಿಕವಿಧಿಯ ಸಲುವಾಗಿ ಮಾಡಿದ)

**चर्चा** (ಚರ್ಚಾ) ಸ್ತ್ರೀ. ಸಂ. ಮಾತುಕಥೆ, ವಾರ್ತಾಲಾಪ, ಚರ್ಚೆ, ವಿಚಾರ ವಿನಿಮಯ.

**चर्चिणे** (ಚರ್ಚಿಣೇ) ಕ್ರಿ. ಸ. ಚರ್ಚೆಮಾಡು, ಮಾತನಾಡು (ಯಾವದೊಂದು ವಿಷಯದ ಸಂಬಧದಿಂದ

**चर्चित** (ಚರ್ಚಿತ) ವಿ. ಸಂ. ಚರ್ಚೆಮಾಡಿದ, ವಿಚಾರ ವಿನಿಮಯ ಮಾಡಿದ.

**चर्पटपंजरी** (ಚರ್ಪಟಪಂಜರೀ) ಸ್ತ್ರೀ. ರಗಳೆ, ನಿರರ್ಥಕ ಪ್ರಳಾಪ.

**चर्पटिका** (ಚರ್ಪಟಿಕಾ) ಸ್ತ್ರೀ. ರಗಳೆ, ರಸಹೀನ ಮಾತುಕಥೆ.

**चर्म** (ಚರ್ಮ) ನ. ಸಂ. ತೊಗಲು, ಚರ್ಮ.

**चर्मकार** (ಚರ್ಮಕಾರ) ಪು. ಸಮಗಾರ, ಚರ್ಮವನ್ನು ಹದಗೊಳಿಸುವವ.

**चर्मचक्षु** (ಚರ್ಮಚಕ್ಷು) ಪು. ಸಂ. ಸಾಕ್ಷಾತ್ತಾಗಿ ನೋಡುವ ಕಣ್ಣು.

**चर्मवाद्य** (ಚರ್ಮವಾದ್ಯ) ನ. ಸಂ. ಡೊಳ್ಳು, ಮೃದಂಗ ಮುಂತಾದ ವಾದ್ಯಗಳು.

**चर्या** (ಚರ್ಯಾ) ಸ್ತ್ರೀ. ಸಂ. ನಡಾವಳಿ, ವರ್ತನ, ಚರಿತ್ರ ಚಟುವಟಿಕೆ, ೨. ಮುಖಮುದ್ರೆ.

**–पालटणे** (–ಪಾಲಟಣೇ) ಕ್ರಿ. ಅ. ಆರೋಗ್ಯ ಹೊಂದು, ಸುಖವಾಗಿರು.

**चर्‍होणे** (ಚರ್‍ಹೋಣೇ) ಕ್ರಿ. ಅ. ಅಂಜು, ೨. ಕನಿಕರಪಡು.

**चर्वण** (ಚರ್ವಣ) ನ. ಸಂ. ಬಾಯಲ್ಲಿ ಹಾಕಿಕೊಂಡು ಅಗಿಯುವಿಕೆ, ೨. ಮೆಲಕಾಡಿಸುವಿಕೆ (-ದನ).

**चर्वित–** (ಚರ್ವಿತ–) ನ. ಒಮ್ಮೆ ಬಗೆಹರಿಸಿದ ಮಾತನ್ನೆ ಪುನಃ ಚರ್ಚಿಸುವಿಕೆ, ೨. ನಿರರ್ಥಕವಾದ ಮಾತು.

**चऱ्हाट** (ಚರ್‍ಹಾಟ್) ನ. ರಗಳೆ, ನಿರರ್ಥಕ ಪ್ರಳಾಪ, ಗೋಳು.

**–चल** (–ಚಲ) ವಿ. ಪ್ರತ್ಯಯ ಸಂ (**चलत**) ಸರಿಯುವ, ಗತಿಯುಳ್ಳ ನಡೆಯುವ.

**–चित्रपट** (–ಚಿತ್ರಪಟ್) ಪು. ಚಲತ್‌ಚಿತ್ರ ಸಿನೆಮಾ, ಮೂವಿ.

**चलती** (ಚಲತೀ) ಸ್ತ್ರಿ. ಐಶ್ವರ್ಯ, ಅಧಿಕಾರ.

**–असणे** (–(ಅಸಣೇ) ಕ್ರಿ. ಅ. ಒಳ್ಳೆಯ ಕಾಲವಿರು, ಉನ್ನತಿ ಹೊಂದು.

**चलन** (ಚಲನ್) ನ. ಸಂ. ನಡೆ– ೨. ನಾಣ್ಯ–ಮುದ್ರಾಪ್ರಸಾರ.

**परकीय–** (ಪರಕೀಯ–) ಸ- ಪರದೇಶದ ನಾಣ್ಯ, ಧನ

**–वलन** (–ವಲನ್) ನ. ಕ್ರಿಯೆ, ನಡೆಯುವಿಕೆ ನಡಾವಳಿ, ಚಟುವಟಿಕೆ.

**चलनी** (ಚಲನೀ) ವಿ. ನಾಣ್ಯಗಳು, ನಡೆಯುವ ಹಣ

**चलविचल** (ಚಲವಿಚಲ್) ಸ್ತ್ರೀ. ಕದಲಿಕೆ, ಕಂಪ, ಅಸ್ಥಿರತೆ (ಮನಸ್ಸಿನ) ಹೊಯ್ದಾಡುವಿಕೆ.

**चलाऊ** (ಚಲಾಊ) ವಿ. ಕೆಲಸಕ್ಕೆ (ತಕ್ಕ ಮಟ್ಟಿಗೆ) ಬರುವ.

**चलाख** (ಚಲಾಖ್) ವಿ. ಫಾ. ಚುರುಕು, ಬುದ್ಧಿವಂತ, ಚತುರ.

**चलाखी** (ಚಲಾಖೀ) ಸ್ತ್ರೀ. ಫಾ. ಚಾತುರ್ಯ. ೨. ಮಾಟ, ಮೋಸ.

**हात–** (ಹಾತ್–) ಸ್ತ್ರೀ ಕೈಚಳಕ. ಮೋಸ.

**चलान** (ಚಲಾನ್) ನ. ಹಿಂ. ಕಳ್ಳರ ತಂಡ, ೨. ಮೊಕದ್ದಮೆ, ಖಟಲೆ. ೩. ಸಾಮಾನು ಪಟ್ಟಿ, ಸೂಚಿ.

**चव** (ಚವ್) ಸ್ತ್ರೀ. ರುಚಿ, ಸ್ವಾದ.

**चवकशी** (ಚವಕಶೀ) ಸ್ತ್ರೀ ವಿಚಾರಣೆ, ಪ್ರಶ್ನೆ, ಕೇಳುವಿಕೆ.

**चवचाल** (ಚವಚಾಲ್) ಸ್ತ್ರೀ. ವಿ. ಚಂಚಲ, ಕೆಟ್ಟ ನಡತೆಯ, ಅಸಭ್ಯ (ಸ್ತ್ರೀ)

**चवड** (ಚವಡ್) ಸ್ತ್ರೀ. ಕ. ಕ. ಸಿವುಡು, ಗೊಂಚಲು, ರಾಶಿ.

**चवडा** (ಚವಡಾ) ಪು. ಅಂಗಾಲಿನ ಮಧ್ಯಭಾಗ.

**चवढव** (ಚವಢವ್) ಸ್ತ್ರೀ. ಅವ್ಯವಸ್ಥೆ, ಅಸ್ಥಿರತೆ. ೨. ಗದ್ದಲ, ಗೊಂದಲ.

**चवताळणे** (ಚವತಾಳಣೇ) ಕ್ರಿ. ಅ. ಸಿಟ್ಟಿಗೇಳು, ಕೋಪಿಸು.

**चवदार** (ಚವದಾರ್) ವಿ. ಸಿಹಿಯಾದ, ರುಚಿಯಾದ, ಸ್ವಾದವುಳ್ಳ.

**चवरंग** (ಚವರಂಗ್) ಪು. ನಾಲ್ಕು ಕಾಲುಗಳುಳ್ಳ ಸಣ್ಣಮಣೆ, ಪೂಜೆಯ ಮಣೆ, ೨. ಕೈಕಾಲುಗಳಿಲ್ಲದ ಮನುಷ್ಯ.

**चवरी** (ಚವರೀ) ಸ್ತ್ರೀ. ಸಂ. ಚವರಿ, ಬೀಸಣಿಕೆ, ರಾಜನ ಸೇವೆಯಲ್ಲಿಯ ವೀಜನ.

**चवली** (ಚವಲೀ) ಸ್ತ್ರೀ. (ಹಳೆಯ ಕಾಲದ) ಎರಡು ಆಣೆಯ ಬೆಳ್ಳಿಯ ಚಿಕ್ಕ ನಾಣ್ಯ.

**चवळी** (ಚವಳೀ) ಸ್ತ್ರೀ. ಒಂದು ಪಲ್ಯ. ೨. ಹರವೆ ಪಲ್ಯ. ೩. ಚವಳಿಕಾಯಿ. ೪. ಹಾರುಸುದ್ದಿ.

**चवाठा** (ಚವಾಠಾ) ಪು. ನಾಲ್ಕು ದಾರಿಗಳು ಒಂದೆಡೆಗೆ ಸೇರುವ ಸ್ಥಳ, ಕೂಟ. ೨. ಚಾವಡಿ, ಪಂಚಾಯತ್ತು. ೩. ಬಹಿರಂಗ ಸಭೆ.

**चवाठचावर मांडणे** (ಚವಾಠ್ಯಾವರ ಮಾಂಡಣೇ) ಕ್ರಿ. ಸ. ಹುಳುಕು ಹೊರಗೆಡವುವಿಕೆ.

**चवाळे** (ಚವಾಳೇ) ನ. ಕಂಬಳಿ.

**चविष्ट** (ಚವಿಷ್ಟ) ವಿ. ಸ್ವಾದವುಳ್ಳ, ರುಚಿಯಾದ, ರುಚಿಕರವಾದ.

**चव्वेचाळीस** (ಚವ್ವೆಚಾಳೀಸ್) ವಿ. ನಾಲ್ವತ್ತುನಾಲ್ಕು (ಸಂಖ್ಯೆ)

**चव्वीस** (ಚವ್ವೀಸ್) ವಿ. ಇಪ್ಪತ್ತುನಾಲ್ಕು (ಸಂಖ್ಯೆ)

**चषक** (ಚಷಕ್) ಪು. (ಮದ್ಯ, ನೀರು) ಕುಡಿಯುವ ಪಾತ್ರೆ. ೨. ಇನಾಮು ಕೊಡುವ ಬೆಳ್ಳಿಯ ಪಾತ್ರೆ.

**चष्मा** (ಚಷ್ಮಾ) ಸ್ತ್ರೀ. ಕನ್ನಡಕ, ಉಪನೇತ್ರ, ಚಾಳೀಸು

**चहा** (ಚಹಾ) ಪು. ಚಹ, ಟೀ.

**गवती-** (ಗವತೀ-) ಸ್ತ್ರೀ. ಒಂದು ವನಸ್ಪತಿ (ಹುಲ್ಲು) ೨. ಸ್ತ್ರೀ. ಬೇಡಿಕೆ. ೨. ಪ್ರೀತಿ, ಆದರ, ಆತ್ಮೀಯತೆ.

**चहाटळ** (ಚಹಾಟಳ್) ವಿ. ಬಹಳ ಮಾತನಾಡುವವ, ಬಾಯಿಬಡಕ. ೨. ಜಗಳಗಂಟಿ.

**चहाडखोर** (ಚಹಾಡ್‌ಖೋರ್) ವಿ. ಚಾಡಿಖೋರ, ಚಾಡಿ ಹೇಳುವವ, ದೂರು ಹೇಳುವವ, ಪಿಸುಣ.

**चहाडी** (ಚಹಾಡೀ) ಸ್ತ್ರೀ. ಚಾಡಿ, ಪರರ ದೂಷಣೆ, ನಿಂದೆ, ಬೆನ್ನು ಹಿಂದೆ ದೂಷಿಸುವಿಕೆ.

**चहाता** (ಚಹಾತಾ) ವಿ. ಆದರಿಸುವವ, ಪ್ರೀತಿಸುವವ.

**चहादाणी** (ಚಹಾದಾಣೀ) ಸ್ತ್ರೀ. ಟೀ ತಯಾರಿಸುವ ಪಾತ್ರೆ, ಅಥವಾ ಟೀ ಹಾಕಿಟ್ಟ ಪಾತ್ರೆ.

**चहूकडून** (ಚಹೂಕಡೂನ್) ಕ್ರಿ. ವಿ. ನಾಲ್ಕೂ ಬದಿಯಿಂದ, ನಿಟ್ಟೆನಿಂದ.

**चहूकडे** (ಚಹೂಕಡೇ) ಕ್ರಿ. ವಿ. ಎಲ್ಲ ಕಡೆಗೆ, ನಾಲ್ಕೂ ಕಡೆಗೆ.

**चळ** (ಚಳ್) ಪು. ದೋಷ, ನ್ಯೂನ. ೨. ಹುಚ್ಚು, ಭ್ರಮು.

**म्हातार-** (ಮ್ಹಾತಾರ್-) ಪು. ಮುಪ್ಪಿನ ಕಾಲದ ಬುದ್ಧಿ.

**चळचळा** (ಚಳ್‌ಚಳಾ) ಕ್ರಿ. ವಿ. ಥರಥರನೆ (ನಡುಗು)

**चळचळाट** (ಚಳಚಳಾಟ್) ಪು. ವಿಪುಲತೆ, ಐಶ್ವರ್ಯ, ಸೊಬಗು.

**चळणवळण** (ಚಳಣವಳಣ್) ನ. ನಡೆ, ನಡತೆ, ರೀತಿ.

**चळणे** (ಚಳಣೇ) ಕ್ರಿ. ಅ. ಹಾದಿ ತಪ್ಪು, ವಿಚಲಿತನಾಗು, ಪ್ರಮಾದಮಾಡು.

**चळवळ** (ಚಳುವಳ್) ಸ್ತ್ರೀ. ಚಳವಳಿ, ಜನಕ್ಷೋಭ, ಆಂದೋಲನ.

**चळवळणे** (ಚಳವಳಣೇ) ಕ್ರಿ. ಅ. ಸರಿದಾಡು, ಮಿಸಿಕಾಡು, ನಡೆದಾಡು.

**चळवळ्या** (ಚಳವಳ್ಯಾ) ವಿ. ಚಳುವಳಿಗಾರ, ಸುಮ್ಮಗೆ ಕೂಡದವ, ಉದ್ಯೋಗಿ, ಉಪದ್ವ್ಯಾಪಿ.

**चळेल** (ಚಳೇಲ್) ವಿ. ಹುಚ್ಚ, ಒಂದೇ ವಿಷಯದ ಧ್ಯಾನ ಮಾಡುವವ.

**चक्षु** (ಚಕ್ಷು) ಪು. ಸಂ. ಕಣ್ಣು.

**चक्षुर्वै सत्यम्** (ಚಕ್ಷುರ್ವೈಸತ್ಯಮ್) ಸಂ. ನಾಣ್ಣುಡಿ. ತಾನು ಕಂಡುದೇ ನಿಜ, ಕಣ್ಣೇ ಸಾಕ್ಷಿ.

**चक्षुरिंद्रिय** (ಚಕ್ಷುರಿಂದ್ರಿಯ) ನ. ಕಣ್ಣು.

**चक्षुर्विषय** (ಚಕ್ಷುರ್ವಿಷಯ) ಪು. ಗೋಚರವಾಗುವ ವಿಷಯ.

**चंग** (ಚಂಗ್) ಪು. ಆಣೆ, ಘೋಷಣೆ, ಪಣ.

**–बांधणे** (ಬಾಂಧಣೇ) ಕ್ರಿ. ಅ. ಪಣತೊಡು.

**चंगळ** (ಚಂಗಳ್) ಸ್ತ್ರೀ. ಐಶ್ವರ್ಯ, ಸಂಪನ್ನತೆ, ವಿಪುಲತೆ, ಸುಖ.

**चंगा** (ಚಂಗಾ) ವಿ. ಒಳ್ಳೆಯವ, ಒಳ್ಳೆಯ, ಶುದ್ಧ.

**चंगाराणी** (ಚಂಗಾರಾಣೀ) ಸ್ತ್ರೀ. ಪ್ರೀತಿಯ ಹೆಂಡತಿ, ನಲ್ಲೆ.

**चंगीभंगी** (ಚಂಗೀಭಂಗೀ) ವಿ. ದುರಾಚಾರಿ, ಸ್ವೇಚ್ಛಾಚಾರಿ, ಕಾಮುಕ.

**चंचल** (ಚಂಚಲ) ವಿ. ಸಂ. ಅಸ್ಥಿರ, ಚಂಚಲ.

**चंची** (ಚಂಚೀ) ಸ್ತ್ರೀ. ಚಂಚಿ, ಎಲೆ, ಅಡಿಕೆ, ತಂಬಾಕದ ಕೈಚೀಲ.

**चंचु** (ಚಂಚು) ಪು. ಸಂ. ಮೂಡಿ, ಕೊಕ್ಕು, ಚುಂಚು.

**–प्रवेश** (–ಪ್ರವೇಶ್) ಪು. ದಾರಿ ಮಾಡಿಕೊಳ್ಳುವಿಕೆ, ಸಾವಕಾಶವಾಗಿ ಪ್ರವೇಶ ಪಡೆಯುವಿಕೆ.

**चंड** (ಚಂಡ) ವಿ. ಸಂ. ಪ್ರಚಂಡ, ಬಹುದೊಡ್ಡ, ಉಗ್ರ–ಉಷ್ಣ.

**–किरण** (–ಕಿರಣ) ಪು. ಸೂರ್ಯ.

**–प्रचंड** (–ಪ್ರಚಂಡ) ವಿ. ಬಹುದೊಡ್ಡ.

**–वात** (–ವಾತ) ಪು. ಬಿರುಗಾಳಿ, ಸೊಂಟರಗಾಳಿ.

**चंडाशु** (ಚಂಡಾಶು) ಪು. ಸಂ. ಸೂರ್ಯ.

**चंडिका** (ಚಂಡಿಕಾ) ಸ್ತ್ರೀ.ಸಂ. ದುರ್ಗಾದೇವಿ, ಕಾಳಿ. ೨. ನಿಷ್ಠುರ ಹೆಂಗಸು.

**चंडोल** (ಚಂಡೋಲ್) ಪು. ಒಂದು ಅಂದವಾದ ಪಕ್ಷಿ. ೨. ಸಡಗರ ಮಾಡುವ.

**चंदन** (ಚಂದನ್) ನ.ಸಂ. ಗಂಧದ ಕಟ್ಟಿಗೆ, ಚಂದನ.

**–करणे** (–ಕರಣೇ) ಕ್ರಿ.ಸ. ನಾಶಗೊಳಿಸು, ಪಾರುಪತ್ಯಮಾಡು.

**चंदा** (ಚಂದಾ) ಪು.ಫಾ. ಪಟ್ಟಿ, ದಾನ,ಧನಸಹಾಯ, ಚಂದಾ.

**चंदी** (ಚಂದೀ) ಸ್ತ್ರೀ. ಕುದುರೆಗೆ ಪ್ರತಿನಿತ್ಯ ಕೊಡಲಾಗುವ ಕಾಳು, ಹುಲ್ಲು.

**चंदेरी** (ಚಂದೇರೀ) ವಿ. ಬೆಳದಿಂಗಳಲ್ಲಿಯ. ೨.ಚಂದೇರೀ ಊರಿನಲ್ಲಿ ತಯಾರಿಸಿದ (ಸೀರೆ).

**चंदोल** (ಚಂದೋಲ) ಪು. **चंडोल** ನೋಡಿರಿ.

**चंद्र** (ಚಂದ್ರ) ಪು. ಚಂದ್ರ, ತಿಂಗಳ, ಸೋಮ.

**चंद्रकळा** (ಚಂದ್ರಕಳಾ) ಸ್ತ್ರೀ. ಚಂದ್ರನ ಅಂಶ, ಕಲೆ.

**काळी–** (ಕಾಳೀ–) ವಿ. ಕಪ್ಪು ಬಣ್ಣದ (ಸೀರೆ).

**चंद्रकांत** (ಚಂದ್ರಕಾಂತ) ಪು. ಚಂದ್ರಕಾಂತ ಮಣಿ, ಸ್ಫಟಿಕ.

**चंद्रकोर** (ಚಂದ್ರಕೋರ್) ಸ್ತ್ರೀ. ಚಂದ್ರಕಲೆ, ವದ್ಯ ಪಕ್ಷದಲ್ಲಿಯ ಚಂದ್ರ, ಬಾಲಚಂದ್ರ.

**चंद्रग्रहण** (ಚಂದ್ರಗ್ರಹಣ್) ನ. ಸಂ. ಚಂದ್ರಗ್ರಹಣ.

**चंद्रज्योत** (ಚಂದ್ರಜ್ಯೋತ್) ಸ್ತ್ರೀ. ಒಂದು ಬಗೆಯ ಹಾರಿಸುವ ಮದ್ದು.

**चंद्रबळ** (ಚಂದ್ರಬಳ್) ನ. ಲಗ್ನ ಮುಂ.ಗಳಿಗೆ ಅವಶ್ಯವಿದ್ದ ಚಂದ್ರಬಲ.

**ओढून ताणून चंद्रबळ** (ಓಢೂನ್ ತಾಣೂನ್ ಚಂದ್ರಬಳ್) ನಾಣ್ಣುಡಿ. ತನಗೆ ಬೇಕಿದ್ದರೂ ಬೇಡವೆಂದು ನಟಿಸು, ತೋರಿಕೆಯ ನಿಸ್ಪೃಹತೆ. ತೋರಿಸು.

**चंद्रबिंब** (ಚಂದ್ರಬಿಂಬ) ನ.ಸಂ. ಚಂದ್ರಬಿಂಬ.

**चंद्रमंडल** (ಚಂದ್ರಮಂಡಲ) ನ. ಸಂ. ಚಂದ್ರನ ಪೂರ್ಣಾಕೃತಿ.

**चंद्रमा** (ಚಂದ್ರಮಾ) ಪು. ಸಂ. ಚಂದ್ರ.

**चंद्रमुखी** (ಚಂದ್ರಮುಖೀ) ವಿ. (ಸ್ತ್ರೀ.) ಸುಂದರ(ಸ್ತ್ರೀ)

**चंद्रमौळी** (ಚಂದ್ರಮೌಳೀ) ವಿ. ತೀರಬಡವ, ಪು. ೨. ತೀರಬಡತನ.

**चंद्रस** (ಚಂದ್ರಸ್) ಸ್ತ್ರೀ. ರಾಳ.

**चंद्रहार** (ಚಂದ್ರಹಾರ್) ಪು. ಚಿನ್ನದ ಕಂಠಿ, ಕತ್ತಿನಸರ

**चंद्रिका** ಚಂದ್ರಿಕಾ) ಸ್ತ್ರೀ. ಸಂ. ಬೆಳದಿಂಗಳು.

**चंद्री** (ಚಂದ್ರೀ) ಸ್ತ್ರೀ. ಎವೆ ಇಕ್ಕದೆ ನೋಡುವಿಕೆ. ೨. ಕಣ್ಣು ಕೆರಳಿಸುವಿಕೆ.

**चंद्रोदय** (ಚಂದ್ರೋದಯ) ಪು. ಸಂ. ಚಂದ್ರನು ಉದಯಿಸುವ ಸಮಯ.

**चंपक** (ಚಂಪಕ್) ಪು. ಸಂಪಿಗೆ.

**चंपा** (ಚಂಪಾ) ಪು. ಚಮ್ಮಕಿ. ೨. ಹೂ.

**चंपी** (ಚಂಪೀ) ಸ್ತ್ರೀ. ಎಣ್ಣೆ ಹೂಸಿ, ಕೈಕಾಲು, ತಲೆ, ಒತ್ತುವಿಕೆ, ಮಸಾಜ್.

**चंपू** (ಚಂಪೂ) ಪು. ಸಂ. ಒಂದು ಕಾವ್ಯ ಪ್ರಕಾರ.

**चंबू** (ಚಂಬೂ) ಪು. ಚಂಬು, ಲೋಟ, ತಂಬಿಗೆ.

**–गबाळे उचलणे** (–ಗಬಾಳೇ ಉಚಲಣೇ) ಕ್ರಿ. ಅ. ಪ್ರಯಾಣ ಮಾಡು, ತೊಲಗು.

**चाऊल** (ಚಾಊಲ್) ಸ್ತ್ರೀ. ಗುರುತು, ವಾಸನೆ, ಶಬ್ದ (ಯಾರೊಬ್ಬರನ್ನು ಗುರುತಿಸುವುದಕ್ಕಾಗಿ)

**चाक** (ಚಾಕ್) ನ. ಗಾಲಿ, ಚಕ್ರ.

**चाकण** (ಚಾಕಣ್) ಪು. ಸರ್ಪ, ಹಾವು.

**चाकदडा** (ಚಾಕ್‌ದಾಂಡಾ) ಪು. ಗಾಲಿಯ ಅಚ್ಚು.

**चाकपट्टी** (ಚಾಕ್‌ಪಟ್ಟೀ) ಸ್ತ್ರೀ. ಗಾಲಿಯ ಮೇಲೆ ಬಡಿದ ಹಲಗೆ.

**चाकर** (ಚಾಕರ್) ಪು. ಹಿಂ. ಸೇವಕ, ಆಳು.

**नोकर–** (ನೋಕರ್–) ಪು. ಬಹುವ. ಆಳುಗಳು.

**चाकरी** (ಚಾಕರೀ) ಸ್ತ್ರೀ. ಸೇವೆ, ಊಳಿಗೆ.

**चाकवत** (ಚಾಕವತ್) ನ. ಒಂದು ಹಸಿ ಪಲ್ಯ.

**चाकी** (ಚಾಕೀ) ಸ್ತ್ರೀ. ಧಾತುವಿನ ದುಂಡನ್ನ ತುಂಡು.

**चाकू** (ಚಾಕೂ) ಪು. ಚೂರಿ, ಚಾಕು, ಕಿರುಗತ್ತಿ.

**चाकोरी** (ಚಾಕೋರೀ) ಸ್ತ್ರೀ. ೧. ಬಂಡಿಯ ಹಾದಿ, ನಿಶ್ಚಿತವಾದ ಜೀವನ ಕ್ರಮ, ರೂಢಿ.

**चाखणे** (ಚಾಖಣೇ) ಕ್ರಿ. ಸಂ. ಸವಿನೋಡು, ರುಚಿನೋಡು.

**चाखत माखत जेवणे** (ಚಾಖತ್ ಮಾಖತ್ ಜೇವಣೇ) ಕ್ರಿ. ಸ. ಸವಿನೋಡುತ್ತ ಉಣ್ಣು, ರುಚಿಗಾರನಂತೆ ಊಟಮಾಡು.

**चाचपडणे** (ಚಾಚ್‌ಪಡಣೇ) ಕ್ರಿ. ಸಂ. (ಕತ್ತಲೆಯಲ್ಲಿ) ಹುಡುಕು, ಶೋಧಿಸು. ೨. ಅನುಮಾನಿಸು, ಸಂಕೋಚ ಪಡು.

**चाचपणे** (ಚಾಚಪಣೇ) ಕ್ರಿ. ಸಂ. ಕೈಯಿಂದ ಸ್ಪರ್ಶಿಸಿ ನೋಡು, ಸ್ಪರ್ಶೇಂದ್ರಿಯದಿಂದ ಪರೀಕ್ಷಿಸು.

**चाट** (ಚಾಟ್) ವಿ. ಕೆಟ್ಟ ಸ್ವಭಾವದ, ನೀಚ.

**–पडणे** (–ಪಡಣೇ) ಕ್ರಿ. ಅ. ಬೆರಗಾಗು.

**चाटक** (ಚಾಟಕ್) ನ. ಅಂದ, ಸೊಬಗು, ಮಾಧುರ್ಯ

**चाटण** (ಚಾಟಣ್) ನ. ಲೇಹ, ಲೇಹ್ಯ, ನೆಕ್ಕುವ ಔಷಧ.

**चाटणे** (ಚಾಟಣೇ) ಕ್ರಿ. ಸಂ. ನೆಕ್ಕು, ಸವಿನೋಡು. ೨. ನಾಲಿಗೆಯನ್ನು ಆಡಿಸು.

**चाटळ** (ಚಾಟಳ್) ವಿ. ಬಾಯಿಬಡಕ, ತುಂಟ.

**चाड** (ಚಾಡ್) ಸ್ತ್ರೀ. ಪ್ರೀತಿ. ೨. ಅಭಿಮಾನ. ೩. ನಾಚಿಕೆ.

**चाणाक्ष** (ಚಾಣಾಕ್ಷ) ವಿ. ಸೂಕ್ಷ್ಮ, ಬುದ್ಧಿಶಾಲಿ, ಚುರುಕು.

**चातक** (ಚಾತಕ್) ಪು. ಸಂ. ಚಾತಕ ಪಕ್ಷಿ.

**चाती** (ಚಾತೀ) ಸ್ತ್ರೀ. ದುಂಡನ್ನು (ಧಾತುವಿನ) ತುಂಡು, ಬಿಲ್ಲೆ.

**चातुरी** (ಚಾತುರೀ) ಸ್ತ್ರೀ. ಚಾತುರ್ಯ, ಜಾಣತನ, ದಕ್ಷತೆ.

**चातुर्मास्य** (ಚಾತುರ್ಮಾಸ್ಯ) ನ. ಪು. ಸಂ. ಆಷಾಢ ಶು. ೧೧ ಇಂದ ಕಾರ್ತಿಕ ಶುದ್ಧ ಏಕಾದಶಿಯ ವರೆಗಿನ ಕಾಲ, ಮಳೆಗಾಲ.

**चातुर्य** (ಚಾತುರ್ಯ) ನ. ಸಂ. ಚತುರತೆ, ಜಾಣತನ

**चातुर्वर्ण्य** (ಚಾತುರ್ವರ್ಣ್ಯ) ನ. ಸಾ. ನಾಲ್ಕು ವರ್ಣ–ಜಾತಿಗಳ ಸಮಾಜ ವ್ಯವಸ್ಥೆ.

**चादर** (ಚಾದರ್) ಸ್ತ್ರೀ. ಮೇಜು ಮತ್ತುಹಾಸಿಗೆಯ ಮೇಲೆ ಹಾಸುವ ವಸ್ತ್ರ, ಬೆಡ್‌ಶೀಟ್.

**चाप** (ಚಾಪ್) ನ. ಸಂ. ಬಿಲ್ಲು ಧನುಷ್ಯ.

**चाप** (ಚಾಪ್) ಪು. ತುಬಾಕಿಯ ಒತ್ತು, ಸ್ಕ್ರೂ, ಮಲಸೂತ್ರ ತಿರುಗಿಸುವ ಸಾಧನ.

**–लावणे** (–ಲಾವಣೇ) ಕ್ರಿ. ಸಂ. ಪೀಡಿಸು.

**चापट** (ಚಾಪಟ್) ಸ್ತ್ರೀ. ಕೆನ್ನೆಗೆ ಏಟು ಕೊಡುವಿಕೆ, ೨. ವಿ. ಚಪ್ಪಟೆಯಾದ.

**–पोळी** (–ಪೋಳೀ) ಸ್ತ್ರೀ. (ವ್ಯಂಗ್ಯ) ಕಪಾಳಕ್ಕೆ ಹೊಡೆಯುವಿಕೆ.

**चापटी** (ಚಾಪಟೀ) ಸ್ತ್ರೀ. (ಕೆನ್ನೆಗೆ) ಏಟು, ಹೊಡೆತ

**चापल्य** (ಚಾಪಲ್ಯ) ನ. ಚಪಲತೆ, ಚುರುಕುತನ– ೨. ಮೋಸ, ಕೈಚಳಕ ಕೈವಾಡ.

**चाफा** (ಚಾಫಾ) ಪು. ಚಂಪಕ, ಸಂಪಿಗೆ.

**चाफेकळी** (ಚಾಫೇಕಳೀ) ಸ್ತ್ರೀ. ಸಂಪಿಗೆಯ ಮೊಗ್ಗೆ (ಅಂದವಾದ ಮೂಗಿನ ಉಪಮಾನ.)

**चावा** (ಚಾಬಾ) ಪು. ಕಡಿತ, ಕಚ್ಚುವಿಕೆ, ೨. ತಿನಿಸು

**चाबूक** (ಚಾಬೂಕ್) ನ. ಫಾ. ಬಾರಕೋಲು, ಹಂಟರ್.

**–स्वार** (–ಸ್ವಾರ್) ಪು. ಕುದುರೆಯ ಸವಾರ.

**चामखीळ** (ಚಾಮಖೀಳ್) ಸ್ತ್ರೀ. ನರೋಲಿ.

**चामचोरी** (ಚಾಮಚೋರೀ) ಸ್ತ್ರೀ. ದನಗಳ ಕಳವು.

**चामट** (ಚಾಮಟ್) ವಿ. ಗಟ್ಟಿಗ, ಜಿಗುಟಾದ, ಅಂಟುವ.

**चामडी-डे** (ಚಾಮಡೀ–ಡೇ) ೧. ಸ್ತ್ರೀ. ೨. ನ. ಚರ್ಮ, ತೊಗಲು.

**–लोळविणे** (–ಲೋಳವಿಣೇ) ಕ್ರಿ, ಸಂ. ಕನಿಕರವಿಲ್ಲದೆ ಹೊಡೆ.

**चामर** (ಚಾಮರ್) ನ. ಸಂ. ಚವರಿ, ಕೂದಲಿನ ಬೀಸಣಿಕೆ.

**चामाठी** (ಚಾಮಾಠೀ) ಸ್ತ್ರೀ. ಬಾರಕೋಲು.

**चामीकर** (ಚಾಮೀಕರ್) ನ. ಶುದ್ಧ ಬಂಗಾರ, ಅಪರಂಜಿ.

**चार** (ಚಾರ್) ವಿ. ನಾಲ್ಕು. ೨. ಸಂ. ಚರ (ಗುಪ್ತ) ಸಂಚಾರ ಮಾಡುವವ, ಪತ್ತೆದಾರಿ ಜವಾನ ೩. ಹಸಿಹುಲ್ಲು, ಮೇವು.

**चारीदिशा मोकळ्या होणे** (ಚಾರೀದಿಶಾ ಮೋಕಳ್ಯಾ ಹೋಣೇ) ಕ್ರಿ. ಅ. ಸ್ವಾತಂತ್ರ್ಯಪಡೆ.

**चार दिवस सासूचे चार दिवस सुनेचे** (ಚಾರ ದಿವಸ ಸಾಸೂಚೆ ಚಾರ ದಿವಸ್ ಸುನೇಚೇ. (ನಾಣ್ಣುಡಿ) ನಾಲ್ಕುದಿನ ಅತ್ತೆಯ ಅಧಿಕಾರ ನಾಲ್ಕುದಿನ ಸೊಸೆಯ ಕಾರಭಾರ.

**चार गोष्टी सांगणे** (ಚಾರಗೋಷ್ಟೀ ಸಾಂಗಣೇ) ಕ್ರಿ. ಸ. ಉಪದೇಶಮಾಡು ಮನವೊಲಿಸು.

**चार देणे चार घेणे** (ಚಾರ ದೇಣೇ ಚಾರ ಘೇಣೇ) ಸಮಾನತೆಯಿಂದ, ಸಮಬುದ್ಧಿಯಿಂದ, ಆಚರಿಸು.

**चार हात होणे** (ಚಾರ್ ಹಾತ್ ಹೋಣೇ) ಕ್ರಿ. ಅ. ಮದುವೆಯಾಗು.

**चार दिशा** (ಚಾರ್ ದಿಶಾ) (ನಾಲ್ಕು ದಿಕ್ಕುಗಳು)

**चार धामे** (ಚಾರಧಾಮೇ) ನ. ಬಹು. ಶಿವನ ಪ್ರತಿಷ್ಠಾನಗಳು. ಕೇದಾರೇಶ್ವರ (ಉತ್ತರ) ರಾಮೇಶ್ವರ (ದಕ್ಷಿಣ) ವಿಷ್ಣುವಿನ ಎರಡು ಧಾಮಗಳು. ಜಗನ್ನಾಥ (ಪೂರ್ವ) ದ್ವಾರಕಾ (ಪಶ್ಚಿಮ)

**चारपुरुषार्थ** (ಚಾರಪುರುಷಾರ್ಥ) (ಧರ್ಮ, ಅರ್ಥ, ಕಾಮ, ಮೋಕ್ಷ) ನಾಲ್ಕುಪುರುಷಾರ್ಥಗಳು.

**चार युगे** (ಚಾರ್ ಯುಗೇ) (ಕೃತ, ತ್ರೇತಾ, ದ್ವಾಪರ ಮತ್ತು ಕಲಿ) ನಾಲ್ಕು ಯುಗಗಳು.

**चार ठाव** (ಚಾರ ಠಾವ್) (ಅನ್ನ, ಹುಳಿ, ಪಲ್ಯ, ರೊಟ್ಟಿ) ನಾಲ್ಕು ಭೋಜನ ಪದಾರ್ಥಗಳು.

**चारचक्षु** (ಚಾರಚಕ್ಷು) ಗುಪ್ತಚರರ ಮುಖಾಂತರ ನೋಟ.

**चारण** (ಚಾರಣ) ಪು. ಸಂ. ಸ್ತುತಿಪಾಠಕ, ಭಟ್ಟಂಗಿ.

**चारणे** (ಚಾರಣೇ) ಕ್ರಿ. ಸಂ. ತಿನ್ನಲಿಕ್ಕೆ ಕೊಡು. ೨. ಮೇಯಿಸು. ೩. ಲಂಚಕೊಡು.

**चार्वाक** (ಚಾರ್ವಾಕ) ಪು. ಸಂ. ನಾಸ್ತಿಕತೆಯ ತತ್ವಜ್ಞಾನಿ.

**चारा** (ಚಾರಾ) ಪು. ಮೇವು, ಹುಲ್ಲು.

**–चुरा** (–ಚುರಾ) ಪು. ಚೂರು, ತುಣುಕು.

**चारु** (ಚಾರು) ವಿ. ಸಂ. ಚಂದ, ಚಂದಕಾಣುವ.

**–गात्री** (–ಗಾತ್ರೀ) ಸ್ತ್ರೀ. ವಿ. ಸುಂದರಾಂಗಿ.

**चारोळी** (ಚಾರೋಳೀ) ಸ್ತ್ರೀ. ಪಕ್ವಾನ್ನಗಳ ಮೇಲೆ ಹಾಕುವ ಮಸಾಲೆಯ ಪದಾರ್ಥ.

**चाल** (ಚಾಲ್) ಸ್ತ್ರೀ. ನಡತೆ, ನಡಾವಳಿ, ರೂಢಿ. ೨. ಹಾಡಿನ ಧಾಟ, ಬಗೆ. ೩. ಆಕ್ರಮಣ.

**–करणे** (–ಕರಣೇ) ಕ್ರಿ. ಸಂ. ದಂಡೆತ್ತಿ ಹೋಗು.

**चालक** (ಚಾಲಕ್) ಪು. ವ್ಯವಸ್ಥಾಪಕ, ಸಂಚಾಲಕ.

**चालचर्या** (ಚಾಲಚರ್ಯಾ) ಸ್ತ್ರೀ. ಸಂ. ರೂಢಿ, ಪರಂಪರೆ, ನಡತೆ.

**चालचलन** (ಚಾಲ್ ಚಲನ್) ನ. ನಡತೆ, ನಡಾವಳಿ.

**चालचलाऊ** (ಚಾಲ್‌ಚಲಾಊ) ವಿ. ನಡೆಯಬಹುದಾದ, ಪ್ರಶಸ್ತ.

**चालढकल** (ಚಾಲ್‌ಢಕಲ್) ಸ್ತ್ರೀ. ಮುಂದೂಡುವಿಕೆ. ೨. ಉಪೇಕ್ಷೆ.

**चालणे** (ಚಾಲಣೇ) ಕ್ರಿ. ಅ. ನಡೆ, ಅಡ್ಡಾಡು. ೨. ಅನ್ವಯಿಸು, ಹೊಂದಿಕೆಯಾಗು. ೩. ಕೆಲಸಕ್ಕೆ ಬರು, ಕೆಲಸಮಾಡು (ಯಂತ್ರ) ೪. ಸಮ್ಮತವಾಗಿರು (ಮಾತು, ಕೆಲಸ)

**चालता** (ಚಾಲತಾ) ವಿ. ನಡೆಯುವ, ಉಪಯುಕ್ತ.

**–बोलता** (–ಬೋಲತಾ) ವಿ. ಪ್ರತ್ಯಕ್ಷವಾದ, ಸಾಕ್ಷಾತ್.

**–चालता** (–ಚಾಲತಾ) ಕ್ರಿ.ವಿ. ಒಮ್ಮಿಂದೊಮ್ಮೆ, ಒಮ್ಮೆಲೆ.

**चालविणे** (ಚಾಲವಿಣೇ) ಕ್ರಿ. ಸ. ನಡೆಸು, ಕೆಲಸಮಾಡಿಸು, ಏರ್ಪಡಿಸು, ವ್ಯವಸ್ಥೆ ನಡೆಸು.

**चालू** (ಚಾಲೂ) ವಿ. ಪ್ರಕೃತ, ಸದ್ಯದ, ಈಗಿನ.

**चावट** (ಚಾವಟ) ವಿ. ತಮಾಷೆಗಾರ, ಡೊಂಕು ಮಾತನಾಡುವವ. ೨. ಉಪದ್ರವಿ.

**चावडी** (ಚಾವಡೀ) ಸ್ತ್ರೀ. ಹಿಂ. ಚಾವಡಿ, ಗೌಡನ, ಪೋಲೀಸನ ಕಚೇರಿ, ಗ್ರಾಮಸಭಾಗ್ರಹ.

**चावणे** (ಚಾವಣೇ) ಕ್ರಿ. ಸಂ. ಕಚ್ಚು, ದಂಶಮಾಡು.

**चावनट** (ಚಾವನಟ್) ವಿ. ಬಾಯಿಬಡಕ, ಅವಿವೇಕ.

**चावरा** (ಚಾವರಾ) ವಿ. ಕಚ್ಚುವ ಸ್ವಭಾವವುಳ್ಳ, ದುಷ್ಟ.

**चावल** (ಚಾವಲ್) ಪು. ಹಿಂ. ಅಕ್ಕಿ.

**चावा** (ಚಾವಾ) ಪು. ಕಡಿತ, ಕಚ್ಚುವಿಕೆ.

**चावी** (ಚಾವೀ) ಸ್ತ್ರೀ. ಕೀಲಿಯ ಕೈ, ಬೀಗದ ಕೈ.

**चाह** (ಚಾಹ್) ಸ್ತ್ರೀ. ಸೇರಿಕೆ, ಒಪ್ಪಿಗೆ, ಬೇಕಾಗಿರುವಿಕೆ.

**चाहणे** (ಚಾಹಣೇ) ಕ್ರಿ. ಸಂ. ಪ್ರೀತಿಸು, ಆದರಿಸು, ಸತ್ಕರಿಸು.

**चाहूल** (ಚಾಹೂಲ್) ಸ್ತ್ರೀ. ಚಾಳ್ ನೋಡಿರಿ.

**चाळ** (ಚಾಳ್) ಸ್ತ್ರೀ. (ಸಂ. ಶಾಲಾ) ಅಗ್ರಹಾರ, ಅನೇಕ ಕುಟುಂಬಗಳ ವಸತಿ ಸ್ಥಾನ. ೨. ಕ. (ಚಾಳಿ) ನಡತೆ, ಅಭ್ಯಾಸ, ದುರ್ವ್ಯವಹಾರ. ೩. ಕಾಲೊಳಗಿನ ಪೊಳ್ಳು ಪೈಜಣ.

**चाळण–णी** (ಚಾಳಣ–ಣೀ) ಸ್ತ್ರೀ. ಜರಡಿ.

**चाळणे** (ಚಾಳಣೇ) ಕ್ರಿ. ಸಂ. ಜಲ್ಲಿಸು, ಹಸನಾಗಿ ಮಾಡು. ಜರಡಿಹಿಡಿ. ೨. (ವರ್ತಮಾನ ಪತ್ರ ಮುಂ.), ಭರಭರ ಓದು, ಓದಿಹಾಕು.

**चाळपुळी** (ಚಾಳಪುಳೀ) ಸ್ತ್ರೀ. ಹೊಟ್ಟೆಯಲ್ಲಿಯ ವ್ರಣ.

**चाळवणे** (ಚಾಳವಣೇ) ಕ್ರಿ. ಸಂ. ಆಕರ್ಷಿಸು. ೨. ಮೋಸಮಾಡು. ೩. ಒಂದೇ ಮಾತಿನ ಧ್ಯಾಸ ಹಿಡಿ.

**चाळवाचाळव** (ಚಾಳವಾಚಾಳವ) ಸ್ತ್ರೀ. ಹಿಂಸೆ, ನಿರರ್ಥಕವಾಗಿ, ವಾಗ್ವಾದ ಮಾಡುವಿಕೆ.

**चाळा** (ಚಾಳಾ) ಪು. ಕ (?) ಚಾಳಿ, (ಕೆಟ್ಟ) ಚಟ.

**चाळाबोळा** (ಚಾಳಾಬೋಳಾ) ಪು. ಮುದ್ದೆ, ಅವ್ಯವಸ್ಥೆ.

**चाळिशी** (ಚಾಳೀಶೀ) ಸ್ತ್ರೀ. ೪೦ ವರ್ಷದ ವಯಸ್ಸು. ೨. ಚಾಳೀಸು, ಕನ್ನಡಕ.

**चाळीव** (ಚಾಳೀವ) ವಿ. ಜರಡಿಹಿಡಿದ, ಹಸನಾಗಿ ಮಾಡಿದ, ಸೋಸಿದ.

**चाळीस** (ಚಾಳೀಸ್) ವಿ. ನಾಲ್ವತ್ತು (ಸಂಖ್ಯೆ)

**चाळे खोर** (ಚಾಳೇ ಖೋರ್) ವಿ. ಕೆಟ್ಟ ಚಾಳಿಯುವ, ದುರ್ವ್ಯವಹಾರಿ.

**चाक्षुष** (ಚಾಕ್ಷುಷ) ವಿ. ಸಂ. ಕಣ್ಣಿನಿಂದ ನೋಡಿದ.

**चाक्षुषीविद्या** (ಚಾಕ್ಷುಷೀವಿದ್ಯಾ) ಸಂ. ಮಾಟ, ಮೋಸಗಾರಿಕೆ.

**चांगला** (ಚಾಂಗಲಾ) ವಿ. ಒಳ್ಳೆಯುವ, ಒಳ್ಳೆಯ, ಉತ್ತಮ.

**चांगुलपणा** (ಚಾಂಗುಲಪಣಾ) ಪು. ಒಳ್ಳೆಯ ಸ್ವಭಾವ, ಸಭ್ಯತನ, ಪುಣ್ಯ.

**चांचड** (ಚಾಂಚಡ್) ನ. ದೊಡ್ಡ ಕೆಂಪು ಇರುವೆ.

**चांचण** (ಚಾಂಚಣ) ನ. ಗುಂಗಾಡು, ಸೊಳ್ಳೆ.

**चांचणी** (ಚಾಂಚಣೀ) ಸ್ತ್ರೀ. ಪರೀಕ್ಷೆ, ಆರಿಸುವಿಕೆ, ಆಯ್ಕೆ.

**–गृह** (–ಗೃಹ) ನ. ಪರೀಕ್ಷಾ ಸದನ.

**चांचल्य** (ಚಾಂಚಲ್ಯ) ನ. ಸಂ. ಚಂಚಲತನ, ಅಸ್ಥಿರ ಸ್ವಭಾವ.

**चांचा** (ಚಾಂಚಾ) ಪು. ಸಮುದ್ರಕಳ್ಳ, ಹಡಗುಗಳನ್ನು ಸುಲಿಯುವ ತಂಡದಲ್ಲಿಯುವ.

**चांडाल-ळ** (ಚಾಂಡಾಲ್–ಳ್) ಪು. ಸ. ಚಾಂಡಾಲ. ೨. ದುಷ್ಟ ಮನುಷ್ಯ.

**–चौकडी** (–ಚೌಕಡೀ) ಸ್ತ್ರೀ. ಕೆಟ್ಟ ಜನರ ಗುಂಪು.

**चांद** (ಚಾಂದ್) ಪು. ಸಂ. ಚಂದ್ರ. ೨. ಒಂದು ಆಭರಣ.

**चांदई** (ಚಾಂದಈ) ಸ್ತ್ರೀ. ಗೋಡೆಯ ಅಗಲವಾದ ತುದಿ.

**चांदणी** (ಚಾಂದಣೀ) ಸ್ತ್ರೀ. ತಾರೆ, ಚಿಕ್ಕೆ. ೨. ಗುಡಾರ, ಹಾಸುಗಂಬಳಿ, ಕುದುರೆಯ ಹಣೆಯ ಬಿಳಿ ಚಿಕ್ಕೆ.

**–रात** (–ರಾತ್) ಸ್ತ್ರೀ. ಬೆಳದಿಂಗಳ ರಾತ್ರಿ.

**चांदणे** (ಚಾಂದಣೇ) ನ. ಬೆಳದಿಂಗಳು.

**चोराच्या मनात–** (ಚೋರಾಚ್ಯಾ ಮನಾತ್–) ಅಪರಾಧಿಗೆ ಆಗುವ ಕಸಿವಿಸಿ.

**चांदरात** (ಚಾಂದರಾತ್) ಸ್ತ್ರೀ. ಬೆಳದಿಂಗಳ ರಾತ್ರಿ. ೨. ಉತ್ಸವದಿನ. ೩. ಸಂಬಳದ ದಿನ.

**चांदला** (ಚಾಂದಲಾ) ಪು. ಹಣೆಯ ಮೇಲ್ಭಾಗದ ಅಲಂಕಾರ.

**चांदवा** (ಚಾಂದವಾ) ಪು. ಸಿಂಹಾಸನದ ಮೇಲಿನ ಚತ್ತರಿಗೆ. ೨. ಹಂದರದ ಮೇಲಿನ ಗುಡಾರ.

**चांदी** (ಚಾಂದೀ) ಸ್ತ್ರೀ. ಶುದ್ಧ ಬೆಳ್ಳಿ.

**चांदुकली** (ಚಾಂದುಕಲೀ) ಸ್ತ್ರೀ. ಪುಟ್ಟನ್ನ ರೊಟ್ಟಿ.

**चांदोबा** (ಚಂದೋಬಾ) ಪು. ಚಂದಪ್ಪ, ಚಂದ್ರಾಮ.

**चांद्र** (ಚಾಂದ್ರ) ವಿ. ಸಂ. (ಜ್ಯೋತಿಷ) ಚಂದ್ರನಿಗೆ ಸಂಬಂಧಿಸಿದ.

**–मान** (–ಮಾನ) (ಚಂದ್ರನಗತಿಗನುಸರಿಸಿ) ಪಂಚಾಂಗದ ಲೆಕ್ಕ.

**–मास** (–ಮಾಸ್) ಪು. ಚಂದ್ರನ ಗತಿಯ ಮೇರೆಗೆ ನಿಶ್ಚಯಿಸಿದ (೨೮–೨೯ ದಿನಗಳ) ತಿಂಗಳು.

**चांद्रायण** (ಚಾಂದ್ರಾಯಣ) ನ. ಸಂ. ಚಾಂದ್ರಮಾನಕ್ಕೆ ಅನುಸರಿಸಿ ಹೆಚ್ಚು ಕಡಿಮೆ ಉಣ್ಣುವ ವ್ರತ.

**चांभार** (ಚಾಂಭಾರ್) ಪು. ಚರ್ಮಕಾರ, ಮೋಚಿ, ಚಮ್ಮಾರ.

**चांभाराच्या देवाला खेटराची पूजा** (ಚಾಂಭಾರಾಚ್ಯಾ ದೇವಾಲಾ ಖೇಟರಾಚೀ ಪೂಜಾ) ಸಮಗಾರನ ದೇವರಿಗೆ ಮೊಟ್ಟೆಯ ಪೂಜೆ, ಮಟ್ಟಕ್ಕೆ ತಕ್ಕ ಬಹುಮಾನ.

**चिऊ** (ಚಿಪೂ) ಸ್ತ್ರೀ. (ಮಕ್ಕಳ ಮಾತಿನಲ್ಲಿ) ಗುಬ್ಬಿ, ಹಕ್ಕಿ.

**चिकचिक** (ಚಿಕ್‌ಚಿಕ್) ಸ್ತ್ರೀ. ಜಿಗುಟು ಪದಾರ್ಥ, ೨. ಲೋಳೆ.

**चिकचिकीत** (ಚಿಕ್‌ಚಿಕೀತ್) ವಿ. ಅಂಟುವ, ಲೋಳೆಯಾದ, ಜಿಗಟಾದ.

**चिकट** (ಚಿಕಟ್) ವಿ. ಜಿಗಟಾದ, ಅಂಟಿಕೊಳ್ಳುವ.

**चिकटणे** (ಚಿಕಟಣೇ) ಕ್ರಿ. ಅ. ಅಂಟಿಕೊಳ್ಳು, ಅಂಟು, ಬಿಗಿಯಾಗಿ ಹಿಡಿ, ತಬ್ಬಿಕೊ.

**चिकटवण** (ಚಿಕಟವಣ್) ನ. ಅಂಟು, ಅಂಟಿಸುವುದಕ್ಕೆ ಉಪಯೋಗಿಸುವ ದ್ರವ್ಯ.

**चिकटवणे** (ಚಿಕಟವಣೇ) ಕ್ರಿ. ಸ. ಅಂಟಿಸು, ಗಟ್ಟಿಯಾಗಿ ಕೂಡಿಸು.

**चिकटा** (ಚಿಕಟಾ) ಪು. ಅಂಟಿಕೊಳ್ಳುವಿಕೆ, ಗಟ್ಟಿಯಾಗಿ ಕೊಡುವಿಕೆ. ೨. ಕಣ್ಣಲ್ಲಿಯ ಪಿಚ್ಚು.

**चिकटचा** (ಚಿಕಟ್ಯಾ) ಪು. ಒಂದೇ ಮಾತು ಗಟ್ಟಿಯಾಗಿ ಹಿಡಿಯುವವ, ಒತ್ತಾಯಪಡಿಸುವವ, ೨. ಎಡಬಿಡದೆ ಕೇಳುವವ. ೩. ಒಂದು ಸ್ಥಳದಿಂದ ಅಗಲದವ.

**चिकणा** (ಚಿಕಣಾ) ವಿ. ಅಂಟು ಅಂಟಾದ. ೨. ಅಂದವಾದ. ೩. ನುಣುಪಾದ. ೪. ಒನಪು ಒಯ್ಯಾರದ

**चिकणी सुपारी** (ಚಿಕಣೀ ಸುಪಾರೀ) ಸ್ತ್ರೀ. ಚಿಕಣೀ ಅಡಿಕೆ.

**चिकणाई** (ಚಿಕಣಾಈ) ಸ್ತ್ರೀ. ಕೊಬ್ಬು, ಸ್ಥೂಲತನ.

**चिकाचा पडदा** (ಚಿಕಾಚಾ ಪಡದಾ) ಪು. ಗಳದ ಸಿಬರಿನ ಪಡದೆ.

**चिकाटी** (ಚಿಕಾಟೀ) ಸ್ತ್ರೀ. ತಾಳ್ಮೆ, ದೀರ್ಘೋದ್ಯೋಗ.

**चिकार** (ಚಿಕಾರ್) ವಿ. ಬಹಳ, ಬೇಕಾದಷ್ಟು.

**चिकित्सक** (ಚಿಕಿತ್ಸಕ್) ವಿ. ಬಹಳ ವಿಚಾರ ಮಾಡುವವ. ೨. ಆರೈಕೆ ಮಾಡುವವ, ವೈದ್ಯ.

**चिकित्सा** (ಚಿಕಿತ್ಸಾ) ಸ್ತ್ರೀ. ಸಂ. ಆರೈಕೆ. ೨. ಸೂಕ್ಷ್ಮ ವಿಚಾರ, ಕೂಲಂಕಷ ವಿಚಾರ. ೩. ಅತಿ ವಿಚಾರ, ಅನುಮಾನ.

**चिकित्सा–त्से खोर** (ಚಿಕಿತ್ಸಾ–ತ್ಸೇ ಖೋರ್) ವಿ. ಬಹಳ ಪ್ರಶ್ನೆ ಕೇಳುವವ, ಬಹಳ ಚಿಕಿತ್ಸೆ ಮಾಡುವವ.

**किचित्सालय** (ಚಿಕಿತ್ಸಾಲಯ) ನ. ಸಂ. ಆಸ್ಪತ್ರೆ, ದವಾಖಾನೆ.

**चिकी** (ಚಿಕೀ) ಸ್ತ್ರೀ. ಬೆಲ್ಲ ಅಥವಾ ಸಕ್ಕರೆಯ ಪಾಕದಲ್ಲಿ ಕಡಲೆ, ನೆಲಗಡಲೆ, ಗೋಡಂಬಿ ಹಾಕಿ ಮಾಡಿದ ತಿನಿಸು. ೨. ಕರಿದಂಟು.

**चिकीर्षा** (ಚಿಕೀರ್ಷಾ) ಸ್ತ್ರೀ. ಸಂ. (ಕೆಲಸ) ಮಾಡುವ ಇಚ್ಛೆ.

**चिकीर्षु** (ಚಿಕೀರ್ಷು) ವಿ. ಸಂ. ಮಾಡಬಯಸುವವ.

**चिकू** (ಚಿಕೂ) ಪು. ೧. ಚಿಕ್ಕೂಹಣ್ಣು. ೨. ವಿ. ಕೃಪಣ.

**चिकोटी** (ಚಿಕೋಟೀ) ಸ್ತ್ರೀ. ಬಿಗಿದು ಅಪ್ಪಿಕೊಳ್ಳುವಿಕೆ.

**चिखल** (ಚಿಖಲ್) ಪು. ಮಣ್ಣು, ಕೆಸರು.

**–फेक** (–ಫೇಕ್) ಸ್ತ್ರೀ. ಪರಸ್ಪರ ದೋಷಾರೋಪಣೆ, ನಿಂದೆ, ಜಗಳ.

**–वाट** (–ವಾಟ್) ಸ್ತ್ರೀ. ಹೊಲಸು ದಾರಿ, ಕೆಸರು.

**चिखल्या** (ಚಿಖಲ್ಯಾ) ಸ್ತ್ರೀ. ಬಹುವ. ಕಾಲಿನರೋಗ.

**चिघणणे** (ಚಿಘಳಣೇ) ಕ್ರಿ. ಸಂ. ಹರಡು, ಹೆಚ್ಚಾಗು, ಉದ್ರೇಕಹೊಂದು.

**चिचुंद्री** (ಚಿಚುಂದ್ರೀ) ಸ್ತ್ರೀ. ಮೂಲೆಯ ಇಲಿ, ಹೆಗ್ಗಣ.

**चिच्छक्ती** (ಚಿಚ್ಛಕ್ತಿ) ಸ್ತ್ರೀ. ಸಂ. ಚಿತ್ತದ, ಮನಸ್ಸಿನ ಶಕ್ತಿ.

**चिटकुला** (ಚಿಟಕುಲಾ) ವಿ. ಸಣ್ಣ, ಪುಟ್ಟ.

**चिटणीशी** (ಚಿಟಣಿಶೀ) ಸ್ತ್ರಿ. ಗುಮಾಸ್ತನ ಕೆಲಸ, ಖಾಸಗೀ ಸಹಾಯಕನ ಕೆಲಸ.

**चिटणीस** (ಚಿಟಣೀಸ್) ಪು. ಗುಮಾಸ್ತ, ಕಾರ್ಯವಾಹ, ಕಾರ್ಯದರ್ಶಿ.

**चिटपाखरू** (ಚಿಟಪಾಖರೂ) ನ. ಒಂದು ಪಕ್ಷಿಯು (ಕೂಡ ಇಲ್ಲ), (ನಿರ್ಜನ ಪ್ರದೇಶ)

**चिटोरा** (ಚಿಟೋರಾ) ಪು. ಸಣ್ಣಪತ್ರ, ಕಾಗದದ ತುಣುಕು.

**चिठ्ठी** (ಚಿಠ್ಠೀ) ಸ್ತ್ರೀ. ಚೀಟಿ, ಪತ್ರ, ಕಾಗದ, ಕಾಗದದ ತುಂಡು.

**–टाकणे** (–ಟಾಕಣೇ) ದೈವ ಪರೀಕ್ಷೆಗೆಂದು ಚೀಟಿಗಳನ್ನು ಆರಿಸುವುದು.

**–रतवणे** (–ರತವಣೇ) ಕ್ರಿ.ಅ. ಬೇನೆವಾಸಿಯಾಗು.

**चिडखोर** (ಚಿಡಖೋರ್) ವಿ. ಕೋಪಮಾಡುವ, ಸಿಟ್ಟಿಗೇಳುವ.

**चिडका** (ಚಿಡಕಾ) ವಿ. ಸಿಟ್ಟಿಗೇಳುವ, ಜಗಳಹೂಡುವ.

**–बिब्बा** (–ಬಿಬ್ಬಾ) ಪು. ಸಿಟ್ಟಿಗೇಳುವ ಮನುಷ್ಯ.

**चिडचिडणे** (ಚಿಡಚಿಡಣೇ) ಕ್ರಿ.ಅ. ಅಲ್ಪಸ್ವಲ್ಪ ಮಾತಿಗೆ ಸಿಟ್ಟಿಗೇಳುವವ.

**चिडचिडा** (ಚಿಡಚಿಡಾ) ವಿ. ಸಿಟ್ಟಿನ, ಕೋಪಮಾಡುವ (ಸ್ವಭಾವ).

**चिडचिडीत** (ಚಿಡಚಿಡೀತ್) ವಿ. ಜಿಗಟಾದ, ಅಂಟಿಕೊಳ್ಳುವ.

**चिडणे** (ಚಿಡಣೇ) ಕ್ರಿ. ಅ. ಸಿಟ್ಟಿಗೇಳು, ಕೋಪಿಸು. ೨. ಸಿಟ್ಟುಬರು, ಜಿಗುಪ್ಸೆಯುಂಟಾಗು.

**चिडविणे** (ಚಿಡವಿಣೇ) ಕ್ರಿ.ಸ. ರೇಕಿಸು, ಸಿಟ್ಟಿಗೆಎಬ್ಬಿಸು, ಚಿತಾವಣಿ ಮಾಡು. ೨. ಅಣಕಿಸು, ಹಂಗಿಸು.

**चिडिया** (ಚಿಡಿಯಾ) ಸ್ತ್ರೀ. ಸಣ್ಣ ಪಕ್ಷಿ, ಗುಬ್ಬಿ. ೨. ಕೋಮಲ ಹೆಂಗಸು.

**चिडी** (ಚಿಡೀ) ಸ್ತ್ರೀ. ಗುಬ್ಬಿ, ಹೆಣ್ಣು ಗುಬ್ಬಿ, ಗುಬ್ಬಚ್ಚಿ.

**चिणचिण** (ಚಿಣಚಿಣ್) ಸ್ತ್ರೀ. ಸಿಟ್ಟು, ಕೋಪ, ಸೆಡವು, ರಭಸ.

**चिणणे** (ಚಿಣಣೇ) ಕ್ರಿ. ಸ. ಗೋಡೆಯಲ್ಲಿ ಹೂಳು, ಚಿತ್ರವಧೆ, ಜೀವವಿರುವಾಗಲೆ ಒಬ್ಬನ ಮೇಲೆ ಗೋಡೆಕಟ್ಟು, ಎದ್ದುನಿಲ್ಲಿಸಿ ಹುಗಿ.

**चितळ** (ಚಿತಳ್) ನ. ಬಿಳಿಯ ಚುಕ್ಕೆಗಳುಳ್ಳ ಚಿಗರೆ.

**चिता** (ಚಿತಾ) ಸ್ತ್ರೀ. ಸಂ. ಚಿತೆ, ಶವದ ದಹನಕ್ಕಾಗಿ ತಯಾರಿಸಿದ ಬೆಂಕಿ.

**–भस्म** (ಭಸ್ಮ) ನ. ಚಿತೆಯಲ್ಲಿಯ ಭಸ್ಮ, ಬೂದಿ.

**चितारणे** (ಚಿತಾರಣೇ) ಕ್ರಿ.ಸ. ಚಿತ್ರಿಸು. ಚಿತ್ರತೆಗೆ.

चितारी (ಚಿತಾರೀ) ಪು. ಚಿತ್ರಕಾರ.

चित्त (ಚಿತ್ತ) ನ. ಸಂ. ಮನಸ್ಸು, ಲಕ್ಷ.

–विभ्रम (–ವಿಭ್ರಮ) ನ. ತಲೆತಿರುಗುವಿಕೆ,ಭ್ರಮ, ಭ್ರಾಂತಿ.

–वृत्ति (–ವೃತ್ತಿ) ಸ್ತ್ರೀ. ಸ್ವಭಾವ, ಮನಸ್ಸಿನ ಸ್ಥಿತಿ.

–वेधक (–ವೇಧಕ) ವಿ. ಮನಸ್ಸನ್ನು ಸೆಳೆಯುವ.

–वैकल्य (–ವೈಕಲ್ಯ) ನ. ಭ್ರಾಂತಿ, ಹುಚ್ಚು.

–शुद्धि (–ಶುದ್ಧಿ) ಸ್ತ್ರೀ. ಮನಸ್ಸಿನ ಶುಚಿತ್ವ.

-स्थैर्य (–ಸ್ಥೈರ್ಯ) ನ. ಮನಸ್ಸಿನ ಸ್ಥಿರತೆ.

चित्तळ (ಚಿತ್ತಳ್) ಪು. ಚಿಕ್ಕ ಚಿಕ್ಕೆಯ ಚಿಗರೆ, ಎರಳೆ, ಜಿಂಕೆ.

चित्ता (ಚಿತ್ತಾ) ಪು. ಚಿರ್ಚ, ಹೊನಿಗ.

चित्र (ಚಿತ್ರ) ನ. ಸಂ. ಚಿತ್ರ, ಪಟ.

चित्रकार (ಚಿತ್ರಕಾರ) ಪು. ಸಂ. ಚಿತ್ರ ತೆಗೆಯುವವ, ಚಿತ್ರಕಾರ.

चित्रगुप्त (ಚಿತ್ರಗುಪ್ತ) ಪು. ಸಂ. ನರರ ಪಾಪಪುಣ್ಯ ಗಳನ್ನು ಬರೆದಿಡುವ ದೇವತೆ, ಯಮನ ಸಹಾಯಕ.

चित्रपट (ಚಿತ್ರಪಟ) ಪು. ಚಲಚ್ಚಿತ್ರ, ಫಿಲ್ಮ್, ಮೂವೀ.

चित्रफलक (ಚಿತ್ರಫಲಕ್) ಪು. ಚಿತ್ರ ತೆಗೆಯುವ ಸಲುವಾಗಿ ಮಾಡಿದ ಚೌಕಟ್ಟು, ಹಲಗೆ, ಪಟ.

चित्रमंदिर (ಚಿತ್ರಮಂದಿರ) ನ. ಸಂ. ನಾಟಕ, ಸಿನೆಮಾ ಇವುಗಳ ಸಲುವಾಗಿನ ಪ್ರೇಕ್ಷಾಗೃಹ, ಥಿಏಟರ್.

चित्रमय (ಚಿತ್ರಮಯ) ವಿ. ಸಂ. ಚಿತ್ರಗಳುಳ್ಳ, ಚಿತ್ರಾಂಕಿತ.

चित्रविचित्र (ಚಿತ್ರವಿಚಿತ್ರ) ವಿ. ಸಂ. ಬಣ್ಣಬಣ್ಣದ.

चित्रा (ಚಿತ್ರಾ) ಸ್ತ್ರೀ. ಸಂ. ಒಂದು ನಕ್ಷತ್ರ, ಚಿತ್ರಾ ನಕ್ಷತ್ರ.

चित्रालंकार (ಚಿತ್ರಾಲಂಕಾರ್) ಪು. ಸಂ. (ಕಾವ್ಯ) ಚಿತ್ರಾ ಎಂಬ ಅಲಂಕಾರ.

चित्राहुति (ಚಿತ್ರಾಹುತಿ) ಸ್ತ್ರೀ. ಸಂ. ಊಟಕ್ಕೆ ಕೂಡು ವಾಗ ಎಲೆಯ ಸುತ್ತಲೂ ನೀರು ಸುರಿದು ಮಾಡುವ ಆಹುತಿ ದಾನ, ಚಿತ್ರಾವತಿ.

चित्रित (ಚಿತ್ರಿತ) ವಿ. ಸಂ. ಚಿತ್ರಿಸಲ್ಪಟ್ಟ, ಚಿತ್ರತೆಗೆದ.

चित्सुख (ಚಿತ್ಸುಖ) ನ. ಮಾನಸಿಕ ಸುಖ, ಆನಂದ.

चिथविणे (ಚಿಥವಿಣೇ) ಕ್ರಿ.ವಿ. ರೇಗಿಸು, ಸಿಟ್ಟಿಗೆಬ್ಬಿಸು, ಚಿತಾವಣಿ ಮಾಡು.

चिथावणी (ಚಿಥಾವಣೀ) ಸ್ತ್ರೀ. ಸಿಟ್ಟಿಗೆ ಎಬ್ಬಿಸುವಿಕೆ, ವಾಜ್ಯವನ್ನುಂಟುಮಾಡುವಿಕೆ, ಚಿತಾವಣಿ.

चिद्धन (ಚಿದ್ಧನ) ನ. ಸಂ. ಚೈತನ್ಯ ಧನ, ಚೇತ ನಾಧಿಕ್ಯ.

चिनी (ಚೀನೀ) ವಿ. ಸಣ್ಣ. ೨. ಚೀನಾ ದೇಶದ. ೩. ಚೀನಾಮಣ್ಣಿನ.

चिन्मय (ಚಿನ್ಮಯ) ವಿ. ಸಂ. ಚೈತನ್ಯಪೂರ್ಣ, ಚೇತನಾಮಯ.

चिन्ह (ಚಿನ್ಹ) ನ. ಸಂ. ಚಿನ್ಹ, ಗುರುತು, ಸನ್ನೆ.

चिपका (ಚಿಪಕಾ) ವಿ. ಸಂ. ಚಿವುಗಣ್ಣ, ಮಂದ ದೃಷ್ಟಿಯುವ.

चिपटे (ಚಿಪಟೇ) ನ. ಒಂದು ಸಣ್ಣ ಅಳತೆ, ಚಟಾಕು.

चिपड (ಚಿಪಡ್) ನ. ಕಣ್ಣೊಳಗಿಂದ ಬರುವ ಕಶ್ಮಲ, ಪಿಚ್ಚು.

चिप–पाड (ಚಿಪ–ಪಾಡ್) ನ. ಹಾಲು ತೆಗೆದ ಮೇಲೆ ಉಳಿದ ಕಬ್ಬಿನ ಸಿಪ್ಪೆ.

चिपनखी (ಚಿಪನಖೀ) ಸ್ತ್ರೀ. ಓಕಳಿಯಾಡುವ ಕೊಳವೆ. ಪಿಚಕಾರಿ.

चिपळचा (ಚಿಪಳ್ಯಾ) ಸ್ತ್ರೀ. ಬಹು.ವ. ಭಕ್ತರು ಕೀರ್ತನೆ ಮಾಡುವಾಗ ಬಾರಿಸುವ ಕಟ್ಟಿಗೆಯ ಕೈತಾಳ.

चिपाट (ಚಿಪಾಟ್) ನ. ದಂಟು ಅಥವಾ ಕಬ್ಬಿನ ಸಿಪ್ಪೆ.

चिप्प (ಚಿಪ್ಪ) ವಿ. ಹಸಿಯಾದ, ಒದ್ದೆಯಾದ. ೨. ಉದ್ಗಾರ. ಸುಮ್ಮನಿರು.

चबचिबीत (ಚಿಬಚಿಬೀತ್) ವಿ. ಒದ್ದೆಯಾದ, ನೀರು ಬಸಿಯುವ.

चिबुक (ಚಿಬುಕ್) ನ. ಸಂ. ಗದ್ದ, ಚಿಬುಕ.

चिबूड (ಚಿಬೂಡ್) ಪು. ಕರಬೂಜಿಯಂಥ ಒಂದು ಹಣ್ಣು.

चिमखडा (ಚಿಮುಖಡಾ) ಪು. (ಎಸೆಯುವ) ಹರಳು. ೨. ಸುಲಕ್ಷಣ ಹುಡುಗ.

चिमटा (ಚಿಮುಟಾ) ಪು. ಚಿವುರುವಿಕೆ, ಚಿವುರಿದ ಚಿನ್ಹ, ಚಿವುಟು. ೨. ಪೀಡಿಸುವಿಕೆ. ೩. ವ್ಯಂಗ್ಯ ವಾಕ್ಯ, ಉಪರೋಧ. ೪. ಚಿಮ್ಮುಟ ಹಿಡಿಯುವ ಸಾಧನ. ಇಕ್ಕಳ.

–घेणे (–ಘೇಣೇ) ಕ್ರಿ. ಸ. ಚಿವುಟು.

चिमटचात सापडणे (ಚಿಮಟ್ಯಾತ್ ಸಾಪಡಣೇ) ಕ್ರಿ. ಅ. ಇಕ್ಕಳದಲ್ಲಿ (ಸಂಕಟದಲ್ಲಿ) ಸಿಗು.

चिमटणे (ಚಿಮುಟಣೇ) ಕ್ರಿ. ಅ. ಚಿವುಟು, ಚಿವುರು.

**चिमटी** (ಚಿಮಟೀ) ಸ್ತ್ರೀ. ಒಂದು ಚಿಟಿಕೆ.

**चिमळसाळ** (ಚಿಮಳಸಾಳ್) ಪು. ಉತ್ತಮ ತರಗತಿಯ ಅಕ್ಕಿ.

**चिमणा** (ಚಿಮಣಾ) ಪು. ಗಂಡು ಗುಬ್ಬಿ. ೨. ವಿ. ಸಣ್ಣ, ಪುಟ್ಟ.

**चिमणी** (ಚಿಮಣೀ) ಸ್ತ್ರೀ. ಗುಬ್ಬಿ, ಹೆಣ್ಣು ಗುಬ್ಬಿ. ೨. ಚಿಮಣಿ (ಕಲ್ಲೆಣ್ಣೆಯ ದೀಪ) ೩. (ಹೊಗೆ ಹೋಗುವುದಕ್ಕಾಗಿ ಕಟ್ಟಿದ) ಹೊಗೆಗಿಂಡಿ.

**चिमणीच्या दांतानी फोडणे** (ಚಿಮಣೀಚ್ಯಾ ದಾಂತಾನೀ ಫೋಡಣೇ) ಕ್ರಿ. ಸ. ಗುಬ್ಬಿಯ ಎಂಜಲ ಮಾಡು (ಮೇಲೆ ಬಟ್ಟೆ ಹಾಕಿ ಕಚ್ಚು)

**चिमुकला** (ಚಿಮುಕಲಾ) ವಿ. ಚಿಕ್ಕ, ಸಣ್ಣ.

**चिमुरडा** (ಚಿಮುರಡಾ) ವಿ. ಚಿಕ್ಕ, ಸಣ್ಣ, ಪುಟ್ಟ.

**चिमूट** (ಚಿಮೂಟ್) ಸ್ತ್ರಿ. (ಉಪ್ಪು, ಸಕ್ಕರೆ, ಮುಂ.) ಗಳ ಒಂದು ಚಿಟಿಕೆ. ಕ್ರಿ. ವಿ. (ಲಾ) ಕೊಂಚ, ತುಸು.

**चिर** (ಚಿರ) ವಿ. ಸಂ. ಚಿರವಾದ, ಸ್ಥಿರವಾದ, ಶಾಶ್ವತ.

**चिरकांडी** (ಚಿರಕಾಂಡೀ) ಸ್ತ್ರಿ. (ನೀರು, ನೆತ್ತರ ಮುಂ.ಗಳ) ಚಿಮ್ಮುವಿಕೆ,ಹೊರಬೀಳುವಿಕೆ.

**चिरकाल** (ಚಿರಕಾಲ) ಕ್ರಿ. ವಿ. ಬಹಳ ಸಮಯದ ವರೆಗೆ, ಶಾಶ್ವತವಾಗಿ.

**चिरंगटणे** (ಚಿರಂಗಟಣೇ) ಕ್ರಿ. ಸ. ಒತ್ತು, ಹಿಚುಕು.

**चिरगुट** (ಚಿರಗೂಟ್) ನ. ವಸ್ತ್ರ, ಅರಿವೆ ಅಂಚಡಿ. ಹರಿದ ಬಟ್ಟೆ. ಹರಕು ಬಟ್ಟೆ.

**–पांघरूण** (–ಪಾಂಘ್‌ರೂಣ್) ನ. ಹಾಸಿಗೆ ಹೊದಿಕೆ. ಬಟ್ಟೆ, ಅರಿವೆ ಅಂಚಡಿ.

**चिरचिर** (ಚಿರಚಿರ) ಸ್ತ್ರೀ. ಕಳುವಿಕೆ, ಪೀಡಿಸುವಿಕೆ, ಕಾಡುವಿಕೆ.

**चिरचिरणे** (ಚಿರಚಿರಣೇ) ಕ್ರಿ. ಅ. ಒಂದೇ ಸವನೆ ಅಳು, ಪೀಡಿಸು, ಕಾಡು.

**चिरचिरा** (ಚಿರಚಿರಾ) ವಿ. ಅಳುವ ಪೀಡಿಸುವ, ದೂಷಿಸುವ, ತಕರಾರು ಮಾಡುವ.

**चिरचिरीत** (ಚಿರಚಿರೀತ್) ವಿ. ಹಳೆಯ, ನೈಕಾಣು ವಂಥ (ಬಟ್ಟೆ)

**चिरंजीव** (ಚಿರಂಜೀವ) ಪು. ೧. ಮಗನ (ಮಗಳ) ಸಲುವಾಗಿನ ಒಕ್ಕಣಿಕೆ. ೨.ಮಗ.೩.ಏಳು ಚಿರಜೀವಿಗಳಲ್ಲಿ ಒಬ್ಬನು (ಅಶ್ವತ್ಥಾಮ, ಬಲಿ, ವ್ಯಾಸ, ಹನುಮಂತ, ವಿಭೀಷಣ, ಕೃಪ ಹಾಗೂ ಪರಶುರಾಮ) ೪. ದೀರ್ಘಾಯುಷ್ಯವುಳ್ಳ.

**चिरंजीवी** (ಚಿರಂಜೀವೀ) ಸ್ತ್ರೀ. ಮಗಳು. ೨. ವಿ. ದೀರ್ಘಾಯುಷಿ.

**चिरटा** (ಚಿರಟಾ) ಸ್ತ್ರೀ. ಬಾಳೆಯ ಎಲೆಯ ತುಣುಕು.

**चिरड** (ಚಿರಡ್) ಸ್ತ್ರೀ. ಸಿಟ್ಟು, ಜಿಗುಪ್ಸೆ, ಅಸಹ್ಯವಾಗುವಿಕೆ, ಅಸಂತೋಷ.

**-खोर** (–ಖೋರ್) ವಿ. ಅಸಂತುಷ್ಟ.

**चिरडणे** (ಚಿರಡಣೇ) ಕ್ರಿ. ಸ. ಒತ್ತಿಕ್ಕು, ಜಜ್ಜು, ಪುಡಿಮಾಡು, ಹಿಂಸೆಮಾಡು, ನಾಶಗೊಳಿಸು.

**चिरणी** (ಚಿರಣೀ) ಸ್ತ್ರೀ. ಕೊರಕಲು. ೨. ಕೊರೆಯುವ ಗಾಲಿ.

**चिरणे** (ಚಿರಣೇ) ಕ್ರಿ. ಸ. ಹೆಚ್ಚು, ಹೋಳುಮಾಡು.

**चिरंतन** (ಚಿರಂತನ) ವಿ. ಸಂ. ಶಾಶ್ವತ.

**चिरफळी**, **चिरफाड** } ಸ್ತ್ರೀ. ಹೋಳು, ತುಂಡು. ೨. ಧ್ವಂಸ.

**चिरमुटणे** (ಚಿರಮುಟಣೇ) ಕ್ರಿ.ಅ. ಬಾಡು, ಸುರುಟು, ಮುದುಡು, (ಚರ್ಮ) ಸುಕ್ಕಾಗು.

**चिरस्थायी** (ಚಿರಸ್ಥಾಯೀ) ವಿ. ಸಂ- ತಾಳುವ, ಬಾಳುವ, ಶಾಶ್ವತ.

**चिरा** (ಚಿರಾ) ಪು. ಕಟೆದು ಸಮಪಡಿಸಿದ ಕಲ್ಲು.

**-घालणे** (–ಘಾಲಣೇ) ಕ್ರಿ. ಸ. ಮುಗಿಸು, ಬಗೆಹರಿಸು.

**चिऱ्यांचा पाया** (ಚಿರ್‍ಯಾಂಚಾ ಪಾಯಾ) ಪು. ಗಟ್ಟಿಯಾದ ತಳಹದಿ.

**चिऱ्यावरची रेघ** (ಚಿರ್‍ಯಾವರಚೀ ರೇಘ್) ಸ್ತ್ರೀ. ಖಂಡಿತಮಾತು.

**चिरायु** (ಚಿರಾಯು) ವಿ. ಸಂ. ಚಿರಂಜೀವಿ.

**-होवो** (–ಹೋವೋ) ಬಹುದಿವಸ ಬಾಳಲಿ! ಚಿರಂಜೀವಿಯಾಗಲಿ ? ಜಿಂದಾಬಾದ್ !

**चिरीमिरी** (ಚಿರೀಮಿರೀ) ಸ್ತ್ರೀ. ಅಲ್ಪ ಸ್ವಲ್ಪ ಹಣ ಕೊಡುವಿಕೆ, ಇನಾಮು, ಮಾಮೂಲು.

**चिरीव** (ಚಿರೀವ್) ವಿ. ಹೆಚ್ಚಿದ, ಹೋಳುಮಾಡಿದ.

**चिरूट** (ಚಿರೂಟ್) ಸ್ತ್ರೀ. ಚಿರೂಟು, ಸಿಗಾರ್.

**चिरेखाण** (ಚಿರೇಖಾಣ್) ಸ್ತ್ರೀ. ಕಲ್ಲುಕಣಿ.

**चिरेबंदी** (ಚಿರೇಬಂದೀ) ವಿ.ಕಲ್ಲಿನಿಂದ ಕಟ್ಟಿದ(ಕಟ್ಟಡ)

**चिरोटा** (ಚಿರೋಟಾ) ಪು. ಕರಿದ, ಪಾಕದಲ್ಲಿ ಹಾಕಿದ ತಿಂಡಿ, ಚರೋಟ.

**चिलखत** (ಚಿಲಖತ್) ವಿ.ಫಾ. ಚಿಲಕತ್ತು, ಶಿರಸ್ತ್ರಾಣ, ಸಂರಕ್ಷಣೆಯ ವಸ್ತ್ರ, ಸರಪಣಿಯ ಅಂಗಿ.

**चिलट** (ಚಿಲಟ್) ಸ್ತ್ರೀ. ನೊರಜು. ೨. ಗುಂಗಾಡು. ೩. ಸೊಳ್ಳೆ.

**चिल्लीपिल्ली** (ಚಿಲ್ಲಿಪಿಲ್ಲೀ) ನ. ಬಹು ವ. ಮಕ್ಕಳು ಮರಿಗಳು, ಹುಡುಗುರ ಹುಪ್ಪಡಿ.

**चिलीम** (ಚಿಲೀಮ್) ಸ್ತ್ರೀ. ಚಿಲಿಮೆ, ತಂಬಾಕು ಸೇದುವ ಕೊಳಿವೆ.

**चिल्लर** (ಚಿಲ್ಲರ್) ವಿ.ಕ.ಕ್ಷುದ್ರ.೨.ಚಿಲ್ಲರೆ, ಬಿಡಿರೊಕ್ಕ.

**-खर्च** (–ಖರ್ಚ) ಪು. ಸಣ್ಣಪುಟ್ಟ ಖರ್ಚು.

**चिवचिव** (ಚಿವಚಿವ್) ಸ್ತ್ರೀ ಪಕ್ಷಿಗಳ ಶಬ್ದ, ಹಾಡು.

**–करणे** (–ಕರಣೇ) ಕ್ರಿ. ಸ. ಶಬ್ದಮಾಡು,ಹಾಡು.

**चिवट** (ಚಿವಟ್)ವಿ. ಜಿಗಟಾದ,ದೃಢ,ತಾಳ್ಮೆಯುಳ್ಳ.

**चिवटा** (ಚಿವಟಾ) ಪು. ಹಡಗ ಅಥವಾ ದೋಣಿಗೆ ಕಟ್ಟುವ ಅರಿವೆ.

**चिवडा** (ಚಿವಡಾ) ಪು. ಕರಿದ ಅವಲಕ್ಕಿ 'ಚೂಡಾ' ೨. ಕರಿಸಿದ ಪದಾರ್ಥ, ಲಾ. ಅವ್ಯವಸ್ಥೆ.

**चिन्ह** (ಚಿಹ್ನ) ನ. ಸಂ. ಗುರುತು, ಚಿನ್ಹ.

**चिन्हीत** (ಚಿಹ್ನಿತ)ವಿ. ಸಂ. ಗುರುತುಹಾಕಿದ, ಅಂಕಿತ.

**चिळकांडी** (ಚಿಳಕಾಂಡೀ)ಸ್ತ್ರೀ. (ರಕ್ತ,ನೀರು) ಚಿಮ್ಮಿ ಬಂದ ಪ್ರವಾಹ.

**चिच** (ಚಿಂಚ್) ಸ್ತ್ರೀ. ಹುಣಸೆ (ಹಣ್ಣು–ಗಿಡ)

**-पेटी** (–ಪೇಟೀ) ಸ್ತ್ರೀ. ಒಂದು ಆಭರಣ.

**चिंचवणी** (ಚಿಂಚವಣೀ) ಸ್ತ್ರೀ. ಹುಣಸೆಯ ಹಣ್ಣು ಹಿಂಡಿದ ನೀರು.

**चिंचोका** (ಚಿಂಚೋಕಾ) ಪು. ಹುಣಸೆಯ ಬೀಜ, ಪಕ್ಕ.

**चिंचोळा** (ಚಿಂಚೋಳಾ)ವಿ. ಸಂಕುಚಿತ,ಸಣ್ಣದಾಗುವ.

**चिंतणे** (ಚಿಂತಣೇ) ಕ್ರಿ. ಸ. ಚಿಂತನೆಮಾಡು,ಆಶಿಸು, ಚಿಂತಿಸು.

**चिंतन** (ಚಿಂತನ್) ನ. ಸಂ. ವಿಚಾರ, ಚಿಂತನೆ, ಯೋಚನೆ, ಧ್ಯಾನ್ಯ.

**चिंतनिका** (ಚಿಂತನಿಕಾ) ಸ್ತ್ರೀ. ಸಂ. ವಿಚಾರ, ಮನನ ಧ್ಯಾನ.

**चिंतनीय** (ಚಿಂತನೀಯ) ವಿ. ಸಂ. ವಿಚಾರಮಾಡತಕ್ಕ

**चिंता** (ಚಿಂತಾ) ಸ್ತ್ರೀ. ಸಂ. ಚಿಂತೆ, ಯೋಚನೆ, ಬಿಕ್ಕಟ್ಟು.

**चिंताकुल** (ಚಿಂತಾಕುಲ) ವಿ. ಸಂ. ವಿಚಾರದಲ್ಲಿ ಮಗ್ನನಾದ, ಯೋಚನೆ ಮಾಡುವ, ಚಿಂತಾಕ್ರಾಂತ

**चितागिन** (ಚಿಂತಾಗ್ನಿ) ಸ್ತ್ರೀ. ಸಂ. ಚಿಂತೆಯ ಕಿಚ್ಚು, ಯೋಚನೆಯ ಪೀಡೆ.

**चिताग्रस्त** (ಚಿಂತಾಗ್ರಸ್ತ) ವಿ. ಯೋಚನೆಯಲ್ಲಿ ಮುಳುಗಿದ.

**चितामणी** (ಚಿಂತಾಮಣಿ) ಪು. ಬೇಕಿದ್ದುದನ್ನು ಕೊಡುವ ರತ್ನ. ೨. ಗಣಪತಿ, ೩. ಯೋಚನೆಯನ್ನು ಪರಿಹರಿಸುವವ.

**चित्य** (ಚಿಂತ್ಯ) ವಿ. ಸಂ. ಚಿಂತನೆ ಮಾಡತಕ್ಕ, ವಿಚಾರಮಾಡತಕ್ಕ.

**चिंधडी** (ಚಿಂಧಡೀ) }
**चिंधी** (ಚಿಂಧೀ) } ಸ್ತ್ರೀ. ಅರಿವೆಯ ತುಂಡು, ಹರಕು ಬಟ್ಟೆ.

**चिंब** (ಚಿಂಬ್) ವಿ. ತೊಯಿದ, ಒದೆಯಾದ, ಬಸಿಯುವ.

**चिंबणे** (ಚಿಂಬಣೇ) ಕ್ರಿ. ಸ. ಒತ್ತು. ೨. ಮುದುಡಿಸು

**चीक** (ಚೀಕ) ಪು. (ಗಿಡದ) ಹಾಲು, ರಸ, ೨. ಗಿಣ್ಣದ ಹಾಲು.

**चीची** (ಚೀಚೀ) ಉದ್ಗಾರ (ಛೀಛೀ).

**चीज** (ಚೀಜ್) ಸ್ತ್ರೀ. ಫಾ. ವಸ್ತು. ೨. ವಿ. ಸಾರ್ಥಕ.

**-होणे** (–ಹೋಣೇ) ಕ್ರಿ. ಅ. ಸಾರ್ಥಕವಾಗು ೩. ಗಾಯನದ ಪದಾವಲಿ, ಹಾಡು.

**-वस्त** (–ವಸ್ತ್) ಸ್ತ್ರೀ- ಸಾಮಾನು, ಸಲಕರಣೆ.

**चीट** (ಚೀಟ್) ನ. ಚೀಟು, ಅಚ್ಚುಹಾಕಿದ ಸೀರೆ, ಅರಿವೆ.

**चीड** (ಚೀಡ್) ಸ್ತ್ರೀ. ಸಿಟ್ಟು, ೨. ಬೇಜಾರ, ಜಿಗುಪ್ಸೆ.

**चीण** (ಚೀಣ್) ಸ್ತ್ರೀ. ಗೆರೆ, ಮುದುಡು. ೨. ಕೊನಕಲು.

**चीत** (ಚೀತ್) ವಿ. ಸೋಲಿಸಿದ.

**-करणे** (–ಕರಣೇ) ಕಿ. ಸಂ. ಸೋಲಿಸು.

**–होणे** (–ಹೊಣೇ) ಕ್ರಿ. ಅ. ಸೋಲು.

**चीत्कार** (ಚಿತ್ಕಾರ) ಪು. ಕಿರಿಚುವಿಕೆ, ಕೂಗು, ಚೀತ್ಕಾರ.

**चीप** (ಚೀಪ್) ಪು. ಕ. ಚೀಪುಕಲ್ಲು, ಕಲ್ಲಿನ ತುಂಡು.

**चीर** (ಚೀರ್) ಸ್ತ್ರೀ. ಗೆರೆ, ಕೊರೆತ, ಕೊರಕಲು, ಹರಕು (ಬಟ್ಟೆ) ಬಟ್ಟೆಯ ಛಿದ್ರ, ೨.ಹಾಯುವಿಕೆ.

**चीळ** (ಚೀಳ್) ಸ್ತ್ರೀ. ತುಷಾರ. ೨. ಚಿಮ್ಮಿ ಬರುವಿಕೆ (ಮೊಲೆಹಾಲು, ನೀರು ಅಥವಾ ನೆತ್ತರು)

**चुइटी** (ಚುಇಟೀ) ಸ್ತ್ರೀ. ಸಿಬರು, ಕಡ್ಡಿ, ದಂಟಿನ ಸೀಳು. ೨. ತಿಂದೊಗೆದ ಕಬ್ಬಿನ ಸಿಪ್ಪೆ.

**चुई** (ಚುಈ) ಸ್ತ್ರೀ. ದಂಟಿನ ಅಥವಾ ಗಳದ ಸಿಬರು, ಸಿಬರು ಕಡ್ಡಿ. (ಎಲೆ ಹಚ್ಚುವುದರ ಸಲುವಾಗಿ)

**चुकचुकणे** (ಚುಕಚುಕಣೇ) ಕ್ರಿ. ಅ. ನುಡಿ (ಹಲ್ಲಿ ಮುಂ.)

**चुकटी** (ಚುಕಟೀ) **चिमटी** ನೋ.

**चुकणे** (ಚುಕಣೇ) ಕ್ರಿ. ಅ. ತಪ್ಪು, ತಡವರಿಸು, (ಮಾಡಿ) ಬಿಡು (ಸಹಾಯಕ ಕ್ರಿಯಾಪದ) ೨. ಸಿಕ್ಕದೆ ಹೋಗು. ೩. ಕಳೆದುಕೊಳ್ಳು (ಹಾದಿ ಮುಂ.)

**चुकत माकत** (ಚುಕತ್ ಮಾಕತ್) ಕ್ರಿ. ವಿ. ತಪ್ಪುತ್ತ ತಡವರಿಸುತ್ತ.

**चुकता करणे** (ಚುಕತಾ ಕರಣೇ) ಕ್ರಿ. ಸ. ಕೊಟ್ಟು ಬಿಡು. ತೀರಿಸು. (ಸಾಲ ಮುಂ.)

**चुकलामाकला** (ಚುಕಲಾಮಾಕಲಾ) ವಿ. ದಾರಿ ತಪ್ಪಿದ ೨. ತಪ್ಪುಮಾಡಿದ.

**चुकल्या माकल्या सारखे होणे** (ಚುಕಲ್ಯಾಮಾಕಲ್ಯಾ ಸಾರಖೇ ಹೋಣೇ) ಕ್ರಿ. ಅ. ತಪ್ಪಿದಂತೆ ಆಭಾಸ ವಾಗು.

**चुकवाचुकव** (ಚುಕವಾಚುಕವ್) ಸ್ತ್ರೀ. ತಪ್ಪಿಸಿಕೊಳ್ಳು ವಿಕೆ (ಕೆಲಸ ಮುಂ) ಮೈಮೇಲಿಂದ ತೆಗೆದು ಹಾಕು ವಿಕೆ.

**चुकवणे** (ಚುಕವಣೇ) ಕ್ರಿ. ಸ. ತಪ್ಪಿಸು, ಪಾರಾಗು.

**चुका** (ಚುಕಾ) ಪು. ಒಂದು ಹುಳಿಯಾದ ಪಲ್ಯ.

**चुकामुक** (ಚುಕಾಮೂಕ್) ಸ್ತ್ರೀ. ಒಬ್ಬರಿಗೊಬ್ಬರು ತಪ್ಪಿಸಿಕೊಳ್ಳುವಿಕೆ, ದಾರಿ ತಪ್ಪುವಿಕೆ. ೨. ಭೆಟ್ಟಿ ಯಾಗದಿರುವಿಕೆ.

**चुकार** (ಚುಕಾರ್) ವಿ. ಮೈಗಳ್ಳ, ಸೋಮಾರಿ.

**-तट्टू** (-ತಟ್ಟೂ) ಪು. ಕೆಲಸ ತಪ್ಪಿಸುವವ.

**चुकी** (ಚುಕೀ) ಸ್ತ್ರೀ. ತಪ್ಪು, ಅಪರಾಧ, ದೋಷ.

**चुकूनमाकून** (ಚುಕೂನ್ಮಾಕೂನ್) ಕ್ರಿ. ವಿ. ತಪ್ಪು ಮಾಡಿ, ದೋಷದ ಮೂಲಕ, ದುರ್ಲಕ್ಷದ ಮೂಲಕ ವಾಗಿ.

**चुगलखोर** (ಚುಗಲ್‌ಖೋರ್) ವಿ. ಚಾಡಿಗಾರ, ಚಾಡಿ ಹೇಳುವವ.

**चुगली** (ಚುಗಲೀ) ಸ್ತ್ರೀ. ಚಾಡಿ, ದೂರು, ಬೆನ್ನಹಿಂದೆ ಮಾಡಿದ ನಿಂದೆ.

**चुचकारणे** (ಚುಚಕಾರಣೇ) ಕ್ರಿ. ಸ. ಸಮಾಧಾನ ಗೊಳಿಸು, ರಮಿಸು, ಮನವೊಲಿಸು.

**चुटका** (ಚುಟಕಾ) ಪು. ಮೋಜಿನ ಮಾತು. ೨. ಮನೋರಂಜಕವಾದ ಸಣ್ಣ ಕಥೆ. ೩. ತೂಕಡಿಕೆ. ೪. ಕ್ಷಣ. ೫. ಚಿಟಿಕೆ.

**चुटक्या सरशी** (ಚುಟಕ್ಯಾ ಸರಶೀ) ಕ್ರಿ.ವಿ. ಕ್ಷಣಾ ರ್ಧದಲ್ಲಿ, ಬೇಗನೆ.

**चुटक्यांचे मांडव** (ಚುಟಕ್ಯಾಂಚೇ ಮಾಂಡವ)

**चुटिया** (ಚುಟಿಯಾ) ಪು. ಒಂದು ಬಗೆಯ ಉಂಡೆ, ಲಾಡೂ.

**चुटपुट** (ಚುಟಪುಟ್) ಸ್ತ್ರೀ. ಲವಲವಿಕೆ, ಕುತೂಹಲ. ೨. ಅಸಮಾಧಾನ. ೩. ಪಶ್ಚಾತ್ತಾಪ. ೪. ಕೆಡಕು ಅನಿಸುವಿಕೆ.

**चुटपुटता** (ಚುಟಪುಟತಾ) ಕ್ರಿ. ವಿ. ಸಹಜವಾಗಿ, ಅನಾಯಾಸವಾಗಿ, ಬೇಗನೆ.

**चुट्टा** (ಚುಟ್ಟಾ) ಪು. ಕ. ಚುಟ್ಟ, ಬೀಡಿ.

**चुडा** (ಚುಡಾ) ಪು. ಬಳೆ, ಅಲಂಕಾರ, ಮುತ್ತೈದೆ ತನದ ಲಕ್ಷಣ.

**चुडेदान मागणे** (ಚುಡೇದಾನ್ ಮಾಗಣೇ) ಕ್ರಿ. ಸ. ಮುತ್ತೈದೆತನವನ್ನು ಬೇಡಿಕೋ.

**चुडचा** (ಚುಡ್ಯಾ) ಪು. ದೀವಟಿಗೆ ಹಿಡಿಯುವವ.

**चुणचुण** (ಚುಣಚುಣ್) ಸ್ತ್ರೀ. ಉರಿತ. ೨. ಪಶ್ಚಾ ತ್ತಾಪ, ಕೆಡಕು ಅನಿಸುವಿಕೆ, ಹಳಹಳಿಸುವಿಕೆ.

**चुणचुणणे** (ಚುಣಚುಣಣೇ) ಕ್ರಿ. ಅ. ಹಳಹಳಿಸು, ಖೇದಪಡು.

**चुणचुणीत** (ಚುಣಚುಣೀತ್) ಕ್ರಿ. ವಿ. ಚುರುಕಾದ, ಹುಷಾರಾದ, ಚಂದಕಾಣುವ, ಡೌಲಿನ.

**चुणणे** (ಚುಣಣೇ) ಕ್ರಿ. ಸಂ. ಹೆರಳುಹಾಕು, ಹೆಣೆ, ನೀರಿಗೆ ಹಾಕು.

**चुणी** (ಚುಣೀ) ಸ್ತ್ರೀ. ನೀರಿಗೆ. ೨. ಹೊಟ್ಟು.

**चुणूक** (ಚುಣೂಕ್) ಸ್ತ್ರೀ. ಮಾದರಿ, ನಮೂನೆ, ಚಮತ್ಕೃತಿ.

**—दाखविणे** (—ದಾಖವೀಣೇ) ಕೈತೋರಿಸು.

**चुथडा** (ಚುಥಡಾ) ಪು. ಅವ್ಯವಸ್ಥೆ, ಹೊಲಸು, ರಾಡಿ.

**—करणे** (—ಕರಣೇ) ಕ್ರಿ. ೪. ಕೆಲಸ ಕೆಡಿಸು, ರಾಡಿ ಮಾಡು.

**चुनकळी** (ಚುನಕಳೀ) ಸ್ತ್ರೀ. ಸುಣ್ಣದ ಹರಳು.

**चुनखडा** (ಚುನಖಡಾ) ಪು. ಉತ್ತಮ ಸುಣ್ಣ, ಸುಣ್ಣದ ಹರಳು.

**चुनखडी** (ಚುನಖಡೀ) ಸ್ತ್ರೀ. ಉತ್ತಮ ಸುಣ್ಣ. ೨. ಲಾ. ಸುಂದರ ಸ್ತ್ರೀ.

**चनडी** (ಚುನಡೀ) ಸ್ತ್ರೀ. ಚಿಕ್ಕೆ ಚಿಕ್ಕೆಯ ಸೀರೆ.

**चुनणे** (ಚುನಣೇ) ಕ್ರಿ. ಸ. ಹೆರಳುಹಾಕು, ಹೆಣೆ.

**चुना** (ಚುನಾ) ಪು. ಸುಣ್ಣ.

**-भट्टी** (–ಭಟ್ಟೀ) ಸ್ತ್ರೀ. ಸುಣ್ಣದ ಗೂಡು, ಸುಣ್ಣ ಸುಡುವ ಗೂಡು.

**चुनेखाण** (ಚುನೇಖಾಣ್) ಸ್ತ್ರೀ. ಸುಣ್ಣದ ಕಲ್ಲಿನ ಕಣಿ, ಗಣಿ.

**चुनेगच्ची** (ಚುನೇಗಚ್ಚೀ) ಸ್ತ್ರೀ ಗಚ್ಚು, ಕಲ್ಲು ಇವು ಗಳಿಂದ ಕಟ್ಟಿದ ಮಾಳಿಗೆ, ಸೌಧೆ. ೨. (ವಾಡಿಕೆ) ಸುಣ್ಣ, ತಂಬಾಕ ಇವುಗಳನ್ನು ಕೂಡಿಸಿ ಬಾಯಲ್ಲಿ ಹಾಕುವಿಕೆ.

**चुप** (ಚುಪ್) ಉದ್ಗಾರ, ಹಾ, ಸುಮ್ಮನಿರು ! ಸುಮ್ಮಗೆ ಕೂಡು !

**-चाप**(-ಚಾಪ್)ಕ್ರಿ.ವಿ.ಸುಮ್ಮನೆ,ತಕರಾರುಮಾಡದೆ.

**चुबकणे** (ಚುಬಕಣೇ) ಕ್ರಿ. ಅ. ಬಟ್ಟೆಗಳನ್ನು ಸಾಬಾಣ ಹಚ್ಚಿ ಒತ್ತಿಕ್ಕು. ೨. ನಾದು.

**चुबकळणे** (ಚುಬಕಳಣೇ) ಕ್ರಿ. ಅ. ಸಂ. ಬಟ್ಟೆಗಳನ್ನು ಒಗೆದು ನೀರಲ್ಲಿ ಕದಲಿಸು.

**चुरगळणे** (ಚುರಗಳಣೇ) ಕ್ರಿ. ಸಂ. ಒತ್ತು, ಹಿಚುಕು, ಒತ್ತಿಕ್ಕು, ಹಿಂಸೆಮಾಡು. ಕ್ರಿ. ಅ. ೨. (ಬಟ್ಟೆ) ಮುದುಡು, ನೀರಿಗೆ ಬೀಳು, ಇಸ್ತ್ರಿ ಕೆಡು.

**चुरगळा** (ಚುರಗಳಾ) ಪು. ಕೆಟ್ಟ ವ್ಯವಹಾರ, ಅವ್ಯವಸ್ಥೆ.

**चुरचुर** (ಚುರಚುರ್) ಸ್ತ್ರೀ. ಆತುರತೆ, ಲವಲವಿಕೆ. ೨. ಕ್ರಿ. ವಿ. ಬೇಗ.

**चुरचुरणे** (ಚುರಚುರಣೇ) ಕ್ರಿ. ಅ. ನೋವಾಗು (ಕಣ್ಣು ಮುಂ.) ಉರಿ.

**चुरचरीत** (ಚುರಚುರೀತ್) ವಿ. ಚುರುಕಾದ. ೨. (ಬಟ್ಟೆ) ಒಗೆದು ಒಣಗಿಸಿದ.

**चुरडणे** (ಚುರಡಣೇ) ಕ್ರಿ. ವಿ. ಒತ್ತು, ಹಿಚುಕು, ಹಿಚಿಕಿ ಹಾಳುಮಾಡು.

**चुरणे** (ಚುರಣೇ) ಕ್ರಿ. ಅ. ಪುಡಿಮಾಡು, ಹೋಳು ಮಾಡು.

**चुरबुरा** (ಚುರಬುರಾ) ವಿ. ಹರಿತ, ತೀಕ್ಷ್ಣ.

**चुरमुरा** (ಚುರಮುರಾ) ಪು. ಚೂರಮರಿ, ಕಡಲೆ ಕಾಯಿ.

**–चुरमुरे खाणे** (ಚುರಮುರೆ ಖಾಣೇ) ಕ್ರಿ. ಅ. ಅಸಹಾಯನಾಗಿ, ಆಕ್ರೋಶ ಮಾಡು, ಪ್ರಳಾಪಿಸು.

**चुरस** (ಚುರಸ್) ಸ್ತ್ರೀ. ಸ್ಪರ್ಧೆ, ಪಂದ್ಯಾಟ.

**चुरा** (ಚುರಾ) ಪು. ಪುಡಿ, ತುಣುಕು, ಹರಿದ ಸಾಬಾಣ, ಕೊಬ್ಬರಿ ಮುರುಕು, ಮುರಿದ ಬಿಸ್ಕತ್ತು ಮುಂ.

**चुराडा** (ಚುರಾಡಾ) ಪು. ಹಿಂಸೆ, ನಾಶ.

**चुरुचुरू** (ಚುರುಚುರು) ಕ್ರಿ. ವಿ. ಉದ್ಧತತನದಿಂದ (ಮಾತನಾಡು)

**चुलत** (ಚುಲತ್) ವಿ. ದೊಡ್ಡಪ್ಪನ-ಚಿಗಪ್ಪನ.

**चुलतभाऊ** (ಚುಲತ್‌ಭಾವೂ) ಪು. ಕಕ್ಕನ ಮಗ.

**–आजा** (–ಆಜಾ) ಪು. ಅಜ್ಜನ ಅಣ್ಣ, ತಮ್ಮ.

**–मामा** (–ಮಾಮಾ) ಪು. ತಾಯಿಯ ಕಕ್ಕನ ಮಗ.

**चुलता** (ಚುಲತಾ) ಪು. ದೊಡ್ಡಪ್ಪ, ಚಿಕ್ಕಪ್ಪ, ಕಕ್ಕ.

**चुलती** (ಚುಲತೀ) ಸ್ತ್ರೀ. ದೊಡ್ಡಮ್ಮ, ಚಿಕ್ಕಮ್ಮ, ಕಕ್ಕಿ.

**चुला** (ಚುಲಾ) ಪು. ದೊಡ್ಡ ಒಲೆ.

**चुवा** (ಚುವಾ) ಪು. ಇಲಿ, ಹೆಗ್ಗಣ.

**चुस्त** (ಚುಸ್ತ್) ವಿ. ಹುಷಾರಾದ, ಚುರುಕಾದ.

**चुळणी** (ಚುಳಣೀ) ಸ್ತ್ರೀ. ಮುಕ್ಕಳಿಸುವಿಕೆ.

**चुळबूळ** (ಚುಳ್‌ಬೂಳ್) ಸ್ತ್ರೀ. ಮಿಸಿಕಾಡು, ಸಂಕಟ ಪಡು.

**चुळबुळ्या** (ಚುಳಬುಳ್ಯಾ) ವಿ. ಸುಮ್ಮನೆ ಕೂಡದವ, ಕಿಡಿಗೇಡಿ, ಉಪದ್ರವಿ.

**चुळबुळाट** (ಚುಳಬುಳಾಟ) ಪು. ಅಸ್ವಸ್ಥತೆ, ಅಸಮಾಧಾನ, ಗಡಿಬಿಡಿ.

**चुळबुळीत** (ಚುಳಬುಳೀತ್) ವಿ. ಜಿಗಟಾದ, ಎಣ್ಣೆ ಬಸಿಯುವ.

**चुळूक** (ಚುಳೂಕ್) ವಿ. ಚಂದಕಾಣುವ,ಅಂದವಾದ.

**चुंफणे** (ಚುಂಫಣೇ) ಕ್ರಿ. ಸ. ಮೊಲೆಕುಡಿ. ೨.ಚೀಪು.

**चुंबक** (ಚುಂಬಕ) ವಿ. ಆಕರ್ಷಿಸುವ.

**लोह-** (ಲೋಹ–) ಪು. ಕಬ್ಬಿಣ ಸೆಳೆಯುವ ಧಾತು.

**कवडी-** (ಕವಡೀ) ಪು. ಜಿಪುಣ. ದರಿದ್ರ.

**चुंबन** (ಚುಂಬನ್) ನ. ಸಂ. ಮುತ್ತು ಮುದ್ದು.

**चुंबळ** (ಚುಂಬಳ) ಸ್ತ್ರೀ. ಕೊಡ, ಭಾರ ಹೊರುವು ದಕ್ಕಾಗಿ ತಲೆಯಮೇಲಿಟ್ಟುಕೊಳ್ಳುವ ಅರಿವೆಯ ಸುತ್ತು, ಸಿಂಬೆ,

**चुंबा** (ಚುಂಬಾ) ಪು. ಜನದಟ್ಟಣಿ, ಸಾಂದ್ರವಸತಿ, ಗದ್ದಲ.

**चुंबाचुंबी** (ಚುಂಬಾಚುಂಬೀ) ಸ್ತ್ರೀ. ಸಲಿಗೆ, ಕಾಮ ಚೇಷ್ಟೆ. ೨. ಲಾ. ತೋರಿಕೆಯ ಸ್ನೇಹ.

-करणे (-ಕರಣೇ) ಕ್ರಿ. ಅ. ಗೆಳೆತನಮಾಡು, ಮುಖಸ್ತುತಿಮಾಡು.

चूक (ಚೂಕ್) ಸ್ತ್ರೀ. ತಪ್ಪು, ದೋಷ.

-भूल (ಭೂಲ್) ತಪ್ಪು ಲೆಕ್ಕದಲ್ಲಿಯ ತಪ್ಪು.

-चूड (ಚೂಡ್) ಸ್ತ್ರೀ. ಸಂಜು, ದಿವಟಿಗೆ.

चूडा (ಚೂಡಾ) ಸ್ತ್ರೀ. ತಲೆಯ ಕೂದಲು, ಹೆರಳು. ೨. ಚಂಡಿಕೆ.

-कर्म (-ಕರ್ಮ) ನ. ಸಂ. ಚಂಡಿಕೆ ಬಿಡುವ ಸಂಸ್ಕಾರ, ಉಪನಯನ.

चूडामणी (ಚೂಡಾಮಣಿ) ಪು.ಸಂ. ಶ್ರೇಷ್ಠಪುರುಷ. ೨. ಕಿರೀಟದಲ್ಲಿಯ ಹರಳು.

चूण (ಚೂಣ್) ಸ್ತ್ರೀ. ದನಗಳಿಗೆ ಹಾಕುವ ಹೊಟ್ಟು, ಕಲಗಚ್ಚು.

चूर (ಚೂರ್) ಪು. ಪುಡಿ, ಚೂರು, ತುಣುಕು.

चूर्ण (ಚೂರ್ಣ) ನ. ಸಂ. ಪುಡಿ, ಚೂರು, ಚೂರ್ಣ.

चूल (ಚೂಲ್) ಸ್ತ್ರೀ. ಒಲೆ.

चुलीत जाणे (ಚುಲೀತ್ ಜಾಣೇ) ಕ್ರಿ.ಅ.ಹಾಳಾಗು

चुलीचे लाकूड चुलीतच जळावे (ಚುಲೀಚೇ ಲಾಕೂಡ್ ಚುಲೀತಚ್ ಜಳಾವೆ) ಕ್ರಿ.ಅ. ಮದುವೆ ಯಾದ ಹೆಣ್ಣಿಗೆ ಅತ್ತೆಯ ಮನೆಯಲ್ಲಿ ಕಷ್ಟಪಡ ಬೇಕಾದರೂ ಅಡ್ಡಿಯಿಲ್ಲ.

चुलीला विरजण घालणे (ಚುಲೀಲಾ ವಿರಜಣ ಘಾಲಣೇ) ಕ್ರಿ. ಸ. ಒಲೆಯನ್ನು ಆರಿಸು.

चूल पोतेरे (ಚೂಲ್ ಪೋತೋರೇ) ನ. ಒಲೆಸಾರಿಸು ವಿಕೆ.

चूळ (ಚೂಳ್) ಸ್ತ್ರೀ. ಮುಕ್ಕಳಿಸುವಿಕೆ, ಬಾಯಲ್ಲಿ ಹಿಡಿದ ನೀರು.

चूंचूं (ಚೂಂಚೂಂ) ನ. ಚಿವ್ರುಗುಟ್ಟುವಿಕೆ, ತಕರಾರು.

चेकाळणे (ಚೇಕಾಳಣೇ) ಕ್ರಿ. ಅ. ರೊಚ್ಚಿಗೇಳು, ಸಿಟ್ಟಿಗೇಳು, ೨. ಹೊತ್ತು (ಉರಿ)

चेचणे (ಚೇಚಣೇ) ಕ್ರಿ. ಸಂ. ಜಜ್ಜು, ಪುಡಿಮಾಡು ೨. ನಾಶಗೊಳಿಸು.

चेटक (ಚೇಟಕ್) ನ. ಮಾಟ, ಮಾಯ.

चेटकी (ಚೇಟಕೀ) ಸ್ತ್ರೀ. ಮಾಯ ಮಾಡುವವಳು, ಮಾಟಗಾರ್ತಿ.

चेटूक (ಚೇಟೂಕ್) ನ. ಮಂತ್ರ, ಮಾಯ, ಮಾಟ.

चेडू (ಚೇಡೂ) ನ. ಕೂಸು.

चेतन (ಚೇತನ್) ವಿ. ಸಂ. ಚೈತನ್ಯವುಳ್ಳ, ಸಜೀವ.

चेतना (ಚೇತನಾ) ಸ್ತ್ರೀ. ಜೀವ, ಚೈತನ್ಯ, ಅರಿವು.

चेतवणा (ಚೇತವಣ್) ನ. ಉರಿಹೊತ್ತಿಸುವಿಕೆ.

चेतविणे (ಚೇತವಿಣೇ) ಕ್ರಿ. ಸಂ. ಉರಿಹೊತ್ತಿಸು, ೨. ಉದ್ರೇಕಿಸು, ೩. ಚಿತಾವಣಿಮಾಡು.

चेपणे (ಚೇಪಣೇ) ಕ್ರಿ. ಸ. ಒತ್ತು, ಒತ್ತಿಕ್ಕು, ಮರ್ದನ ಮಾಡು, ಹಿಚುಕು.

चेला (ಚೇಲಾ) ಪು. ಹಿಂ. ಶಿಷ್ಯ, ಅನುಯಾಯಿ.

चेर्ली (ಚೇಲೀ) ಸ್ತ್ರೀ. ಹಿಂಬಾಲಿಸುವ ಸ್ತ್ರೀ.

चेव (ಚೇವ್) ಪು. ಹುರುಪು, ಉತ್ಸಾಹ, ೨. ರೋಷ ಉದ್ವೇಗ, ರೊಚ್ಚು.

चेवणे (ಚೇವಣೇ) ರೊಚ್ಚಿಗೇಳು, ಉದ್ರೇಕಹೊಂದು, ಉದ್ವಿಗ್ನನಾಗು.

चेष्टा (ಚೇಷ್ಟಾ) ಸ್ತ್ರೀ. ಸಂ. ಕೃತಿ, ಕಾರ್ಯ. ೨. ತಮಾಷೆ, ಮೋಜು, ಚೇಷ್ಟೆ.

चेष्टित (ಚೇಷ್ಟಿತ್) ವಿ. ಮಾಡಿದಕೆಲಸ.

चेष्टेखोर (ಚೇಷ್ಟೆಖೋರ) ಪು. ವಿ. ಚೇಷ್ಟೆಮಾಡುವವ ಪೋಕರಿ.

चेहरा (ಚೆಹರಾ) ಪು. ಫಾ. ಮುಖಮುದ್ರೆ, ಮುಖ, ಮೊಗ.

-मोहरा (-ಮೋಹರಾ) ಪು. ಮುಖದ ಗುರುತು.

चेहरेपट्टी (ಚೇಹರೇಪಟ್ಟೀ) ಮುಖದರೀವಿ.

चेंगट (ಚೇಂಗಟ್) ವಿ. ಸೋಮಾರಿ.

चेंगरणे (ಚೇಂಗರಣೇ) ಕ್ರಿ. ಅ. ಸಿಲುಕು, (ಸಂದಿ ಯಲ್ಲಿ) ಒತ್ತಿಕ್ಕುವುದರಿಂದ ಗಾಯಹೊಂದು.

चेंगराचेंगरी (ಚೇಂಗರಾಚೇಂಗರೀ) ಸ್ತ್ರೀ. ಜನರ ಗದ್ದಲದಲ್ಲಿಯ ತಿಕ್ಕಾಟ ಹಿಂಸೆ.

चेंडू (ಚೇಂಡೂ) ಪು. ಚಂಡು, ಗೋಲಕ.

-फळी (-ಫಳೀ) ಸ್ತ್ರೀ. ಕ್ರಿಕೆಟ್ ಆಟ.

चेंदणे (ಚೇಂದಣೇ) ಕ್ರಿ. ಅ. ಸಿಲುಕಿ, ಒತ್ತಿಕ್ಕಿ, ಗಾಯಹೊಂದು.

चेंदामेंदा (ಚೇಂದಾಮೇಂದಾ) ಕ್ರಿ. ವಿ. ನುಗ್ಗು ನುಗ್ಗಾಗಿ.

चैतन्य (ಚೈತನ್ಯ) ನ. ಸಂ. ಅರಿವು, ಜೀವ, ಚೈತನ್ಯ, ಪ್ರಾಣ.

चैत्य (ಚೈತ್ಯ) ನ. ಬುದ್ಧ ಮಂದಿರ.

चैत्र (ಚೈತ್ರ) ಪು. ಚೈತ್ರ ಮಾಸ.

-पालवी (-ಪಾಲವೀ) ಸ್ತ್ರೀ. ವಸಂತ ಮಾಸದ ಚಿಗುರು.

चैत्री (ಚೈತ್ರೀ) ಸ್ತ್ರೀ. ಚೈತ್ರ ಹುಣ್ಣಿವೆ.

**चैन** (ಚೈನ್) ಸ್ತ್ರೀ. ಹಿಂ. ಸ್ವಸ್ಥತೆ, ಉಪಶಮನ, ಸಂತೋಷ. ೨. ವಿಲಾಸ, ಭೋಗವಿಲಾಸ, ಸಂಭ್ರಮ.

**-बाज** (ಬಾಜ್) ವಿಲಾಸರತ, ವಿಲಾಸಿ.

**-बाजी** (-ಬಾಜೀ) ಸ್ತ್ರೀ. ವಿಷಯ ಲಂಪಟತನ.

**चैनी** (ಚೈನೀ) ವಿ. ಸುಖವಸ್ತು. ೨. ಕಷ್ಟಪಡದವ.

**चैल** (ಚೈಲ್) ನ. ವಸ್ತ್ರ, ಬಟ್ಟೆ.

**चोख** (ಚೋಖ) ವಿ. ಕ. ಚೊಕ್ಕ, ಶುದ್ಧ.

**चोखट** (ಚೋಖಟ್) ವಿ. ಶುದ್ಧ, ಉತ್ತಮ,

**चोखणी** (ಚೋಖಣೀ) ಸ್ತ್ರೀ. ಚೀಪುವ ವಸ್ತು, ಚೂಚಕ, ಕುಚಾಗ್ರ.

**चोखणे** (ಚೋಖಣೇ) ಕ್ರಿ. ಸ. ಚೀಪು, ಮೊಲೆಯುಣ್ಣು.

**चोखंदळ** (ಚೋಖಂದಳ್) ವಿ. ರಸಗ್ರಾಹಿ, ರಸಗ್ರಹಣ ಮಾಡಬಲ್ಲವ.

**चोखाळणे** (ಚೋಖಾಳಣೇ) ಕ್ರಿ. ಸ. ಹುಡುಕು, ಶೋಧಿಸು, ಆಯ್ಕೆಮಾಡು. ೨. ಪರೀಕ್ಷೆಮಾಡು.

**चोचरा** (ಚೋಚರಾ) ವಿ. ಉಗ್ಗುವವ.

**चोचा** (ಚೋಚಾ) ಪು. ಕಟ್ಟಿಗೆಯಲ್ಲಿಯ ಕೆತ್ತನೆ, ಕೆತ್ತಿದ ಗುರುತು.

**चोचले** (ಚೋಚಲೇ) ಪು. ಬಹು. ವ. ಬಹಳ ಅಕ್ಕರ ಮಾಡುವಿಕೆ, ಅತಿಪ್ರೇಮ. ಲಾಲನೆ.

**चोचावणे** (ಚೋಚಾವಣೇ) ಕ್ರಿ. ಅ. ಕೊಕ್ಕಿನಿಂದ, ಚುಂಚದಿಂದ ಇರಿ, ಗಾಯ ಮಾಡು.

**चोथा** (ಚೋಥಾ) ಪು. ನಿಸ್ಸತ್ವವಾದ ವಸ್ತು, ಶೇಷ, ಸಿಲುಕು, ಉಳಿಕೆ.

**-पाणी** (ಪಾಣೀ) ನ. ಹಾಲು ಒಡೆದ ಮೇಲೆ ಉಳಿಯುವ, ವಿಂಗಡಿಸಿದ ಜಿಡ್ಡು ಮತ್ತು ನೀರು.

**चोप** (ಚೋಪ್) ಪು. ಏಟು, ಹೊಡೆತ.

**चोपई** (ಚೋಪಈ) ಸ್ತ್ರೀ. ಒಂದು ಬಗೆಯ ಓತಿಕಾಟ.

**चोपड** (ಚೋಪಡ್) ವಿ. ಜಿಗಟಾದ, ಜಿಡ್ಡಾದ.

**चोपडणे** (ಚೋಪಡಣೇ) ಕ್ರಿ. ಸ. (ಎಣ್ಣೆ ಮುಂ.) ಸವರು, ಬಳಿ, ಹಚ್ಚು.

**चोपडी** (ಚೋಪಡೀ) ಸ್ತ್ರೀ. ಪುಸ್ತಕ, ಗ್ರಂಥ.

**चोपडे** (ಚೋಪಡೇ) ನ. ಪುಸ್ತಕ, ವಹಿ, ಲೆಕ್ಕದ ಪುಸ್ತಕ, ಖಾತೆಕಿರ್ದಿ.

**चोपणे** (ಚೋಪಣೇ) ನ. ಬಡಿಯುವ (ಒಗೆಯುವಾಗ) ಕಟ್ಟಿಗೆ, ಹಲಗೆ. ೨. ಕ್ರಿ. ಸ. ಹೊಡೆ, ಏಟು ಹಾಕು.

**चोपदार** (ಚೋಪದಾರ್) ಪು. ಮುಖ್ಯ ಜವಾನ್, ಪ್ರಹರಿ, ಅಂಗರಕ್ಷಕ.

**चोमडा** (ಚೋಮಡಾ) ವಿ. (ಸಂಬಂಧವಿಲ್ಲದೆ ನಡುವೆ) ಮಾತನಾಡುವವ, ಅನಿಯಂತ್ರಿತವಾಗಿ ಮಾತನಾಡುವವ.

**चोय** (ಚೋಯ್) ಸ್ತ್ರೀ. (ದಂಟಿನ, ಗಳದ) ಸಿಬರು, ಕಡ್ಡಿ.

**चोर** (ಚೋರ್) ಪು. ಕಳ್ಳ.

**ओळखीचा चोर जिवे न सोडी** (ಓಳಖೀಚ್ಯಾ ಚೋರ್ ಜಿವೇ ನ ಸೋಡೀ) ನಾಣ್ಣುಡಿ. ಪರಿಚಯದ ಕಳ್ಳನು ಜೀವದಿಂದ ಉಳಿಯಗೊಡಲಾರನು.

**चोराचे पाऊल चोर जाणे** (ಚೋರಾಚೇ ಪಾಊಲ್ ಚೋರ್ ಜಾಣೇ) ನಾ. ಕಳ್ಳನ ಗುರುತು ಕಳ್ಳನೇ ಬಲ್ಲ.

**चोराच्या मनांत चांदणे** (ಚೋರಾಚ್ಯಾ ಮನಾತ್ ಚಾಂದಣೇ) ನಾ. ಅಪರಾಧಿಯ ಮನಸ್ಸು ಯಾವಾಗಲೂ ಅಸ್ವಸ್ಥವಾಗಿರುತ್ತದೆ. (ಕಳ್ಳನು ಯಾವಾಗಲೂ ಬೆಳದಿಂಗಳಿಗೆ ಬೆದರುತ್ತಾನೆ).

**चोराच्या उलटचा बोंबा** (ಚೋರಾಚ್ಯಾ ಉಲಟ್ಯಾ ಬೋಂಬಾ) ನಾ. ಕಳ್ಳನೇ ಬೊಬ್ಬೆ ಹೊಡೆದನಂತೆ.

**चोर ओटी** (ಚೋರ್ ಓಟೀ) ಸ್ತ್ರೀ. ಸಣ್ಣ ಮೊಲೆ, ತೊಟ್ಟು (ಬಹಳ ಹಾಲು ಬರುವಂತಹದು).

**चोर काटा** (ಚೋರ್ ಕಾಟಾ) ಪು. ಖೊಟ್ಟಿ ತಕ್ಕಡಿ, ಮೋಸದ ತೂಕ.

**चोर कोनाडा** (ಚೋರ್ ಕೊನಾಡಾ) ಪು. (ಗೋಡೆಯಲ್ಲಿಯ) ಗುಪ್ತ ಗೂಡು.

**चोर खण** (ಚೋರ್ ಖಣ) ಪು. (ಮೇಜಿನ) ಗುಪ್ತ ಸೆಳೆಖಾನೆ, ಗುಪ್ತ ಡ್ರಾ.

**चोर नजर** (ಚೋರ್ ನಜರ್) ಸ್ತ್ರೀ. ಓರೆನೋಟ, ಕಳ್ಳನೋಟ.

**चोर बातमी** (ಚೋರ್ ಬಾತಮೀ) ಸ್ತ್ರೀ. ಗುಪ್ತಸುದ್ದಿ.

**चोर विद्या** (ಚೋರ್ ವಿದ್ಯಾ) ಸ್ತ್ರೀ. ಗುಪ್ತ ಜ್ಞಾನ.

**चोर शिवण** (ಚೋರ್ ಶಿವಣ) ನ. ಕಣ್ಣಿಗೆ ಕಾಣದ ಹೊಲಿಗೆ.

**चोर हाटी** (ಚೋರ್ ಹಾಟೀ) ಸ್ತ್ರೀ. ಗಂಟೀ ಚೌಡೆಯರ ಸಂತೆ.

**चोर खिसा** (ಚೋರ್ ಖಿಸಾ) ಪು. ಗುಪ್ತ ಜೇಬು.

**चोर गाठ** (ಚೋರ್ ಗಾಠ್) ಸ್ತ್ರೀ. ಕಣ್ಣಿಗೆ ಕಾಣದ ಗಂಟು.

**चोरटा** (ಚೋರಟಾ) ವಿ. ಕಳವು ಮಾಡುವ ಅಭ್ಯಾಸವುಳ್ಳ. ಪು. ಕಳ್ಳ.

**-ताप** (ತಾಪ್) ಪು. ಸಣ್ಣಗೆ ಬರುವ ಜ್ವರ.

**-धंदा** (-ಧಂದಾ) ಪು. ಅಕ್ರಮ ವ್ಯವಸಾಯ.

**चोरटे चाळे** (ಚೋರಟೇ ಚಾಳೇ) ಸದ್ದಿಲ್ಲದೆ ಮಾಡುವ ಕಿಡಿಗೇಡಿತನ.

**चोरटे पीक** (ಚೋರಟೇ ಪೀಕ್) ನ. ಸ್ವಲ್ಪ ಕಾಣುವ ಮತ್ತು ನಿಜವಾಗಿ ಹೆಚ್ಚಿನದಾದ ಬೆಳೆ.

**चोरणे** (ಚೋರಣೇ) ಕ್ರಿ. ಸ. ಕಳವು ಮಾಡು, ಕದಿ, ಕಳು.

**चोर पाऊल** (ಚೋರ್ ಪಾಊಲ್) ನ. ಸದ್ದಿಲ್ಲದೆ ಬರುವಿಕೆ.

**चोर वाट** (ಚೋರ್‌ವಾಟ) ಸ್ತ್ರೀ. ಒಳದಾರಿ, ಗುಪ್ತ ಮಾರ್ಗ.

**चोरी** (ಚೋರೀ) ಸ್ತ್ರೀ. ಕಳವು, ಕಳ್ಳತನ.

**चोरीचा मामला** (ಚೋರೀಚಾ ಮಾಮಲಾ) ಪು. ಗುಪ್ತ ವ್ಯವಹಾರ. ೨. ಕದ್ದ ಸಾಮಾನು.

**चोरून मारून** (ಚೋರೂನ ಮಾರೂನ್) ಗುಪ್ತವಾಗಿ, ಯಾರಿಗೂ ತಿಳಿಯದಂತೆ.

**चोवीस** (ಚೋವೀಸ್) ವಿ. ಇಪ್ಪತ್ತುನಾಲ್ಕು.

**चोष्य** (ಚೋಷ್ಯ) ವಿ. ಚೀಪುವ (ಮಿಠಾಯಿ ಮುಂ.)

**चोही-हो-कडे** (ಚೋಹೀ-ಹೋ-ಕಡೆ) ಕ್ರಿ. ವಿ. ನಾಲ್ಕೂ ನಿಟ್ಟಿಗೆ, ಎಲ್ಲೆಲ್ಲಿಯೂ, ಎಲ್ಲ ಕಡೆಗೂ.

**चोळणा** (ಚೋಳಣಾ) ಪು. ಕ. ಚಣ್ಣ, ಪಾಯಿಜಾಮ.

**चोळणे** (ಚೋಳಣೇ) ಕ್ರಿ. ಸ. (ಎಣ್ಣೆ) ಹಚ್ಚು, ಹೂಸು, ತಿಕ್ಕು, ಸವರು (ಎಣ್ಣೆ ಹಚ್ಚಿ) ಒತ್ತು.

**चोळवटणे** (ಚೋಳವಟಣೇ) ಕ್ರಿ. ಸ. ಉದ್ಧತತನದಿಂದ ವರ್ತಿಸು, ಅವಿನಯದಿಂದ ಮೈಕೈ ಹಚ್ಚು, ಮುಟ್ಟು.

**चोळामोळा** (ಚೋಳಾಮೋಳಾ) ಪು. ಮುದ್ದೆ, ಮುದ್ದೆ ಮಾಡುವಿಕೆ, ಕೆಡಿಸುವಿಕೆ, ಹಾಳುಮಾಡುವಿಕೆ. ೨. ವಿ. ಮುದ್ದೆಯಾದ, ಹಾಳಾದ.

**चोळी** (ಚೋಳೀ) ಸ್ತ್ರೀ. ಕುಪ್ಪಸ, ರವಕೆ.

**-बांगडी** (-ಬಾಂಗಡೀ) ಸ್ತ್ರೀ. ಮುತ್ತೈದೆಯ ಉಡುಪು. ೨. ಹೆಂಗಸಿನ ತೀರ ಕಡಿಮೆ ಪರಿಧಾನ.

**चोंच** (ಚೋಂಚ್) ಸ್ತ್ರೀ. ಕೊಕ್ಕೆ, ಚುಂಚು.

**चोंचण** (ಚೋಂಚಣ) ನ. ತೆಂಗಿನ ಕಾಯಿಯ ನಾರು, ತೆಂಗಿನ ನಾರು.

**चोंडा** (ಚೋಂಡಾ) ಪು. ಬತ್ತದ ಗದ್ದೆಯ ಅಳತೆ.

**चोंदणे** (ಚೋಂದಣೇ) ಕ್ರಿ. ಅ. ತುಂಬಿಹೋಗು, ಬಂದು ಆಗು.

**-नाक** (-ನಾಕ) ಕ್ರಿ. ಅ. (ಚಳಿಯಿಂದ) ಉಸಿರಾಡಿಸಲಿಕ್ಕೆ ಬರದಾಗು.

**चोंबडा** (ಚೋಂಬಡಾ) ವಿ. ಸಂಬಂಧವಿಲ್ಲದೆ ನಡುನಡುವೆ ಮಾತನಾಡುವವ, ಅಪದ್ಧ.

**चोंबडेपणा** (ಚೋಂಬಡೆಪಣಾ) ಪು. ತನಗೆ ಸಂಬಂಧವಿಲ್ಲದ ವಿಷಯದಲ್ಲಿ ಮನಸಿಗೆ ಬಂದಂತೆ ಮಾತನಾಡುವದು.

**चौक** (ಚೌಕ) ಪು. ಚತುಷ್ಕೋಣ. ೨. ದೊಡ್ಡ ಒಳಂಗಳ ಬೀದಿಯ ವಿಸ್ತೀರ್ಣ ಭಾಗ, ಚೌಕ, ಚೌವಟ್ಟ, ಚೌವಠಾರ.

**चौकट** (ಚೌಕಟ್) ಸ್ತ್ರೀ. ಚಿತ್ರದ ಚೌಕಟ್ಟು. ೨. (ಇಸ್ಪೇಟಿನಲ್ಲಿ) ಚೌಕಟ್ಟು, ಡಯಮಂಡು.

**चौकडा** (ಚೌಕಡಾ) ಪು. ಕಿವಿಯಲ್ಲಿಯ ಮುತ್ತಿನ ಬಾಳಿ.

**चौकडी** (ಚೌಕಡೀ) ಸ್ತ್ರೀ. ನಾಲ್ಕು ಜನರ ಗುಂಪು, ತಂಡ.

**चांडाळ-** (ಚಾಂಡಾಳ್-) ಸ್ತ್ರೀ. ದುರ್ಜನ ಸಮುದಾಯ.

**चौकशी** (ಚೌಕಶೀ) ಸ್ತ್ರೀ. ತಪಾಸಣೀ, ವಿಚಾರಣೀ, ಪತ್ತೆದಾರಿತನ. ೨. ಕುಶಲಪ್ರಶ್ನೆ, ಸಮಾಚಾರ ತಿಳಿದುಕೊಳ್ಳುವಿಕೆ.

**चौकस** (ಚೌಕಸ್) ವಿ. ವಿಚಾರಣೆಮಾಡುವವ, ಜಾಗರೂಕ, ಸಮಯಜ್ಞ.

**चौकार** (ಚೌಕಾರ್) ಪು. ಕ್ರಿಕೆಟ ಆಟದಲ್ಲಿನ ನಾಲ್ಕು ರನ್ನುಗಳ ಓಟ.

**चौकी** (ಚೌಕೀ) ಸ್ತ್ರೀ. ಪೋಲೀಸರ ಕಚೇರಿ, ಕೊಟ್ಟಡಿ ೨. ಪಹರೆ ೩. ಚಿಕ್ಕಸ್ಟೂಲು, ಟಿಪೈ.

**-दार** (-ದಾರ್) ಪು. ಕಾವಲುಗಾರ.

**चौकोन** (ಚೌಕೋನ್) ಪು. ಚತುಷ್ಕೋಣ, ಸಮಾಂತರ ಭುಜದ ಚೌಕಟ್ಟು, ೨. ಚಚ್ಚೌಕು.

**चौकोनी** (ಚೌಕೋನಿ) ವಿ. ಚಚ್ಚೌಕು ಆಕಾರದ.

**चौखूर** (ಚೌಖೂರ್) ಕ್ರಿ. ವಿ. ಭರದಿಂದ (ಓಡುವಿಕೆ)

**चौगुला-घुला** (ಚೌಗುಲಾ-ಘುಲಾ) ಪು. ಹಳ್ಳಿಯ ಒಬ್ಬ ಅಧಿಕಾರಿ.

**चौघडा** (ಚೌಘಡಾ) ಪು. ನಗಾರಿ, ಬಜಂತ್ರಿ, ಓಲಗ.

**तपेली** (ತಪೇಲೀ) ಸ್ತ್ರೀ. ಹಿಂ. ಕಾಯಿಸುವ ಪಾತ್ರೆ, ತಪ್ಪೇಲಿ.

**तपेले** (ತಪೇಲೇ) ನ. ಹಿಂ. ತಪ್ಪೇಲಿ, ಪಾತ್ರೆ.

**तपोधन** (ತಪೋಧನ) ಪು. ಸಂ. ಬಹಳ ತಪಶ್ಚರ್ಯೆ ಮಾಡಿದವ, ಸನ್ಮಾನ ಪಡೆದವ.

**तपोनिधि** (ತಪೋನಿಧಿ) ಪು. ಸಂ. ಬಹಳ ತಪಸ್ಸು ಮಾಡಿದವ.

**तपोबल** (ತಪೋಬಲ್) ನ. ಸಂ. ತಪಸ್ಸಿನ ಸಾಮರ್ಥ್ಯ.

**तपोलोक** (ತಪೋಲೋಕ) ಪು. ಸಂ. ಆರನೆಯ ಸ್ವರ್ಗ.

**तपोवन** (ತಪೋವನ್) ನ. ಸಂ. ತಪಶ್ಚರ್ಯೆಯ ಸ್ಥಾನ, ಅರಣ್ಯ.

**तप्त** (ತಪ್ತ) ವಿ. ಸಂ. ಕಾಯ್ದ, ಬಿಸಿಯಾದ, ೨. ಸಿಟ್ಟಿಗೆದ್ದ.

**–दिव्य** (–ದಿವ್ಯ) ನ. ಬರೆ ಕೊಡುವ ಸಂಸ್ಕಾರ, ೨. ಬಹಳ ಕಠಿಣ ಕೆಲಸ.

**तफावत** (ತಫಾವತ್) ಸ್ತ್ರೀ. ಅರ. ಬಹಳ ಅಂತರ, ವ್ಯತ್ಯಾಸ.

**तबक** (ತಬಕ್) ನ. ಅರ. ಹರವಾದ ಪಾತ್ರೆ, ತಬಕ.

**तबकडी** (ತಬಕಡೀ) ಸ್ತ್ರೀ. ಅರ+ಮ ಸಣ್ಣ ತಬಕ, ದುಂಡಾದ ಪಾತ್ರೆ.

**तबलची–जी** (ತಬಲಚೀ–ಜೀ) ಸ್ತ್ರೀ. ಅರ. ತಬಲ ಬಾರಿಸುವವ.

**तबला** (ತಬಲಾ) ಪು. ಅರ. ಮೃದಂಗ, ಚರ್ಮ ವಾದ್ಯ, ವಿತಾನ ವಾದ್ಯ.

**तबीब** (ತಬೀಬ್) ಪು. ಅರ. ವೈದ್ಯ.

**तबेला** (ತಬೇಲಾ) ಪು. ದಡ್ಡಿ, ದನದ ಮನೆ, ಕುದುರೆ ಕಟ್ಟುವ ಸ್ಥಳ.

**तब्बल** (ತಬ್ಬಲ್) ಕ್ರಿ. ವಿ. ಅರ (ತವೀಲ್) ಉದ್ದ, ಪೂರ್ಣ, ಸಂಪೂರ್ಣವಾಗಿ, ಪೂರಾ.

**तब्येत** (ತಬ್ಯೇತ್) ಸ್ತ್ರೀ. ಅ. ಆರೋಗ್ಯ, ಪ್ರಕೃತಿ.

**तम** (ತಮ್) ಪು. ಅಂಧಕಾರ, ಕತ್ತಲೆ. ೨. ತಮೋ ಗುಣ.

**तमचा** (ತಮಚಾ) ಪು. ತುರ್ಕಿ. ಪಿಸ್ತೂಲ್, ರಿವಾಲ್ವರ್.

**तमस्वी** (ತಮಸ್ವೀ) ವಿ. ತಾಮಸೀ ಸ್ವಭಾವದವ.

**तमा** (ತಮಾ) ಸ್ತ್ರೀ. ಅರ. ಚಿಂತೆ, ಯೋಚನೆ, ಮಹತ್ವ, ಆದರ.

**तमाखू** (ತಮಾಖೂ) ಸ್ತ್ರೀ. ಪೋ. ತಂಬಾಕ.

**तमाम** (ತಮಾಮ್) ವಿ. ಅರ. ಎಲ್ಲ, ಸಮಸ್ತ.

**तमारी** (ತಮಾರಿ) ಪು. ಸಂ. ಸೂರ್ಯ.

**तमालपत्र** (ತಮಾಲ್‌ಪತ್ರ) ನ. ಸಂ. ಒಂದು ಮಸಾಲೆಯ ವನಸ್ಪತಿ.

**तमाशा** (ತಮಾಶಾ) ಪು. ಫಾ. ದೃಶ್ಯ, ಹಾಸ್ಯ, ತಮಾಷೆ, ಮನೋರಂಜಕ ಸಂಗತಿ.

**तमासबीन** (ತಮಾಸ್‌ಬೀನ್) ಪು. ಫಾ. ತಮಾಷೆ ನೋಡುವವ, ಬರಿ ಮನೋರಂಜನೆ ಕೋರುವವ.

**तमासगीर** (ತಮಾಸ್‌ಗೀರ್) ಪು. ಫಾ. ವಿದೂಷಕ, ಮನೋರಂಜನೆ ಮಾಡುವವ.

**तमिस्रा** (ತಮಿಸ್ರಾ) ಸ್ತ್ರೀ. ಸಂ. ಕತ್ತಲೆ.

**तमोगुणी** (ತಮೋಗುಣೀ) ವಿ. ಸಂ. ತಾಮಸಿ, ಸಿಟ್ಟಿನವ.

**तमोहर** (ತಮೋಹರ್) ಪು. ಸಂ. ಸೂರ್ಯ.

**तयार** (ತಯಾರ್) ವಿ. ಫಾ. ಸಿದ್ಧ, ತತ್ಪರ, ತಯಾರಾದ. ೨. ಪಕ್ವ.

**तयारी** (ತಯಾರೀ) ಸ್ತ್ರೀ. ಸಿದ್ಧಿ, ಸಿದ್ಧನಾಗುವಿಕೆ. ತಯಾರಿ, ಸಿದ್ಧತೆ.

**तर** (ತರ್) ಸ್ತ್ರೀ. ಸಣ್ಣ ದೋಣಿ.

**तरी पार करणे** (ತರೀ ಪಾರ್ ಕರಣೇ) ಕ್ರಿ. ಸ. ಸಣ್ಣ ದೋಣಿಯಿಂದ ತೆಪ್ಪದಿಂದ ದಾಟುವಿಕೆ.

**तर** (ತರ್) ಅವ್ಯಯ. ಹಾಗಾದರೆ, ಆದರೆ.

**–मग** (–ಮಗ್) ಆಮೇಲೆ, ಹಾಗಾದರೆ.

**तरका** (ತರಕಾ) ಸ್ತ್ರೀ. ಅರ. ಊರ್ಜಿತಾವಸ್ಥೆ.

**तरकारी** (ತರಕಾರೀ) ಸ್ತ್ರೀ. ಫಾ. ಪಲ್ಲೆ, ಪಲ್ಯ, ಸಪ್ಪು.

**तरंग** (ತರಂಗ್) ಪು. ಸಂ. ತರಂಗ, ತೆರೆ, ನೆರೆ.

**तरंगणे** (ತರಂಗಣೇ) ಕ್ರಿ. ಸಂ. ತೇಲಾಡು, ಈಸು.

**तरंगिणी** (ತರಂಗಿಣೀ) ಸ್ತ್ರೀ. ಸಂ. ನದಿ.

**तरजुमा** (ತರಜುಮಾ) ಪು. ಅರ. ಅನುವಾದ, ಭಾಷಾಂತರ.

**तरट** (ತರಟ್) ನ. ಹಿಂ. ತಟ್ಟು, ಸಣಬಿನ ಬಟ್ಟೆ.

**तरणा** (ತರ್ಣಾ) ವಿ. ತರುಣ, ಹರೆಯದವ.

**–ताठा** (–ತಾಠಾ) ವಿ. ಹರೆಯುವವ.

**–बांड** (–ಬಾಂಡ್) ವಿ. ಹರೆಯದವ.

**तरणि** (ತರಣಿ) ಪು. ಸಂ. ಸೂರ್ಯ.

**तरणूक** (ತರಣೂಕ್) ಸ್ತ್ರೀ. ಪಾರಾಗುವಿಕೆ.

**तरतूद** (ತರತೂದ್) ಸ್ತ್ರೀ. ಅರ. (ತರದ್ದುದ್) ಯೋಚನೆ, ಯೋಜನೆ, ವ್ಯವಸ್ಥೆ, ಏರ್ಪಾಡು.

**तर्दूद** (ತರ್ದೂದ್) ಸ್ತ್ರೀ. **तरतूद** ನೋ.

**तर्पण** (ತರ್ಪಣ) ನ. ಸಂ. ತರ್ಪಣೆ, ಸಂತೋಷ ಗೊಳಿಸುವಿಕೆ.

**तर्फे** (ತರ್ಫೇ) ಅ. ವತಿಯಿಂದ, ಪರವಾಗಿ.

**तऱ्या** (ತರ್ಯಾ) ಪು. ದೋಣಿಯನ್ನು ನಡೆಸುವವನು

**तर्र** (ತರ್ರ) ವಿ. (ಹೆಂಡ ಕುಡಿದು) ವೈಮರೆತವ. ಪೂರ ನಿಶ್ಶೇಷ್ಟ.

**तऱ्हा** (ತರ್ಹಾ) ಸ್ತ್ರೀ. ಅರ. ಮಾದರಿ, ಬಗೆ.

**तऱ्हेवाईक** (ತರ್ಹೇವಾಈಕ್) ವಿ. ಅರ. ವಿಚಿತ್ರ, ಸೋಜಿಗದ.

**तल** (ತಲ್) ಪು. ಸಂ. ತಳ, ಪಾತಳಿ.

**तलख** (ತಲಖ್) ವಿ. ಅರ. ಕಟು, ಕಹಿ. ೨. ಚುರುಕು. ಜಾಣ.

**तलखी** (ತಲಖೀ) ಸ್ತ್ರೀ. ಅರ. ಕಾರ, ಕ್ಷಾರ, ಕಹಿ ಯಾಗಿರುವಿಕೆ.

**तलफ** (ತಲಫ್) ಸ್ತ್ರೀ. ಅರ. ಚಟ, ಅಭ್ಯಾಸ, ಇಚ್ಛೆ, ಬಯಕೆ.

**तलब** (ತಲಬ್) ಸ್ತ್ರೀ. ಅರ. ಚಟ. ೨. ಬೇಡಿಕೆ.

**तलम** (ತಲಮ್) ವಿ. ಸೂಕ್ಷ್ಮ, ನಯವಾದ.

**–सुती** (–ಸುತೀ) ವಿ. ಅತಿ ನಯವಾದ, ನೂಲಿನಿಂದ ನೇತ.

**तलवार** (ತಲವಾರ್) ಕ್ರಿ. ಸಂ. ಖಡ್ಗ.

**तलाक** (ತಲಾಕ್) ಸ್ತ್ರೀ. ಅರ. ವಿವಾಹ ವಿಚ್ಛೇದ.

**तलाठी** (ತಲಾಠೀ) ಪು. ಹಿಂ. ಕುಲಕರ್ಣಿ, ಶಾನಭೋಗ.

**तलाव** (ತಲಾವ್) ಪು. ಹಿಂ. ಸರೋವರ, ಕೆರೆ.

**तलाशी** (ತಲಾಶೀ) ಸ್ತ್ರೀ. ಫಾ. ಹುಡುಕುವಿಕೆ, ಶೋಧನೆ, ತಪಾಸು.

**तलास** (ತಲಾಸ್) ಪು. ಫಾ. ಹುಡುಕುವಿಕೆ, ಪತ್ತೇದಾರಿ.

**तल्प** (ತಲ್ಪ) ನ. ಸಂ. ಹಾಸಿಗೆ.

**तल्लीन** (ತಲ್ಲೀನ) ವಿ. ಬಹಳ ಆಸಕ್ತನಾದ, ಮಗ್ನನಾದ.

**तवकीर** (ತವಕೀರ್) ಸ್ತ್ರೀ. ಬಿಳಿಯಬಣ್ಣದ (ಧಾನ್ಯ) ಸತ್ವ.

**तवंग** (ತವಂಗ್) ಪು. (ಸಾರಿನ ಮೇಲೆ) ತೇಲಾಡುವ ಎಣ್ಣೆ.

**तवा** (ತವಾ) ಪು. ಹಿಂ. ಕಬ್ಬಿಣದ ಹಂಚು.

**तवाई** (ತವಾಈ) ಸ್ತ್ರೀ. ಫಾ. ನಷ್ಟಪೂರ್ತಿ, ಸಜೆ, ದಂಡ.

**तवाका** (ತವಾಕಾ) ಪು. ಅರ. ಶಕ್ತಿ, ಸಾಮರ್ಥ್ಯ.

**तवाना** (ತವಾನಾ) ವಿ. ಫಾ. ಶಕ್ತಿಶಾಲಿ, ಗಟ್ಟಿಗ.

**तवज़ा** (ತವಾಜೂ) ಸ್ತ್ರೀ. ಪು. ಅರ. ಆರ್ಘ್ಯ, ಆದರ, ಕೊಡುಗೆ, ಪ್ರಕ್ಷಾಲನ.

**तशरीफ** (ತಶರೀಫ್) ಸ್ತ್ರೀ. ಅರ- ಸನ್ಮಾನ, ಶ್ರೇಷ್ಠತ್ವ.

**तशवीस** (ತಶವೀಸ್) ಸ್ತ್ರೀ. ಅರ. ಅಸಮಾಧಾನ, ತೊಂದರೆ.

**तसदी** (ತಸದೀ) ಸ್ತ್ರೀ. ಅರ. ಕಷ್ಟ, ತಾಪ, ತೊಂದರೆ.

**तसबीर** (ತಸಬೀರ್) ಸ್ತ್ರೀ. ಅರ. ಚಿತ್ರ, ಪಟ.

**तसराळे** (ತಸರಾಳೇ) ನ. ಪರಾತ, ಹರಿವಾಣ.

**तसलमात** (ತಸಲ್‌ಮಾತ್) ಸ್ತ್ರೀ. ಅರ. ಸನ್ಮಾನ, ಆದರ, ನಮಸ್ಕಾರ.

**तसला** (ತಸಲಾ) ವಿ. ಆ ಬಗೆಯ.

**तसा** (ತಸಾ) (ಅವ್ಯಯ), ಹಾಗೆ, ಅದರಂತೆ.

**तसू** (ತಸೂ) ನ. ತುಸ, ಅಲ್ಪ ಅಳತೆ.

**तस्कर** (ತಸ್ಕರ್) ಪು. ಸಂ. ಕಳ್ಳ, ಸಮುದ್ರದಲ್ಲಿಯ ಕಳ್ಳ, ಕಳ್ಳವ್ಯಾಪಾರಿ.

**तस्करी** (ತಸ್ಕರೀ) ಸ್ತ್ರೀ. ಸಂ. ಕಳ್ಳತನ.

**तस्त** (ತಸ್ತ) ಪು. ಫಾ. ಉಗುಳುವ ಪಾತ್ರೆ.

**तस्मात्** (ತಸ್ಮಾತ್) ಅವ್ಯಯ. ಸಂ. ಆದುದರಿಂದ, ಆದ್ದರಿಂದ.

**तह** (ತಹ್) ಪು. ಅರ. ಒಪ್ಪಂದ.

**तहकूब** (ತಹಕೂಬ್) ವಿ. ಅರ. ಮುಂದೂಡಿದ.

**तहकुबी** (ತಹಕುಬೀ) ಸ್ತ್ರೀ. ಮುಂದೂಡುವಿಕೆ.

**तहगीरी** (ತಹಗೀರೀ) ಸ್ತ್ರೀ. ಕೆಲಸದಿಂದ ತೆಗೆದು ಹಾಕುವಿಕೆ, ಬಡತರ್ಫಿ.

**तहनामा** (ತಹನಾಮಾ) ಪು. ಫಾ. ಒಪ್ಪಂದ, ಕರಾರು ಪತ್ರ.

**तहसील** (ತಹಸೀಲ್) ಪು. ಅರ. ತಹಸೀಲು, ತಾಲ್ಲೂಕು.

**–दार** (–ದಾರ್) ಪು. ಮಾಮಲೆದಾರ.

**तहान** (ತಹಾನ್) ಸ್ತ್ರೀ. ನೀರಡಿಕೆ.

**–घालविणे** (–ಘಾಲವಿಣೇ) ಕ್ರಿ. ಅ. ನೀರಡಿಕೆಯನ್ನು ಆರಿಸು, ಕುಡಿ.

**तहानेला** (ತಹಾನೇಲಾ) ವಿ. ನೀರಡಿಕೆಯಾದವ.

**ताहयात** (ತಹಾಹಯಾತ್) ಕ್ರಿ. ವಿ. ಜೀವದಿಂದಿರುವವರೆಗೆ, ಆಜನ್ಮ.

**तळ** (ತಳ್) ಪು. ಸ್ಥಾನ, ಸ್ಥಾನಕ, ಕೂಡ, ನಿಲ್ದಾಣ ಬಿಡಾರ.

**तळकट** (ತಳಕಟ್) ವಿ. ಕರಿದ.
**तळका** (ತಳಕಾ) ಪು. ಕಾಲು ಒರೆಸುವ ಚಾಪೆ.
**तळकोंकण** (ತಳಕೊಂಕಣ) ನ. ಕೊಂಕಣದ ದಕ್ಷಿಣ ತುದಿ.
**तळखंबा** (ತಳಖಂಬಾ) ಪು. ದೆವ್ವ, ಭೂತ.
**तळघर** (ತಳ್‌ಘರ್) ನ. ನೆಲಮನೆ.
**तळटीप** (ತಳ್‌ಟೀಪ್) ಸ್ತ್ರೀ. ತಳದಲ್ಲಿಯ ಟಿಪ್ಪಣಿ, ಫುಟ್‌ನೋಟ್.
**तळण** (ತಳಣ) ನ. ಕರಿಯುವಿಕೆ.
**तळणे** (ತಳಣೇ) ಕ್ರಿ. ಸಂ. (ಎಣ್ಣೆ, ತುಪ್ಪದಲ್ಲಿ) ಕರಿ.
**तळतळ** (ತಳತಳ್) ಸ್ತ್ರೀ. ಕಾಟ, ಪೀಡೆ, ವ್ಯಥೆ.
**तळतळणे** (ತಳತಳಣೇ) ಕ್ರಿ. ಅ. ವ್ಯಥೆಯಾಗು.
**तळतळाट** (ತಳತಳಾಟ್) ಪು. ವ್ಯಥೆ, ಶೋಕ.
**तळप** (ತಳಪ್) ನ. ಕರಿಯುವ ಕೆಲಸ–ಸಾಮಾನು ಕರಿಯುವ ಕೂಲಿ.
**तळपट** (ತಳಪಟ್) ನ. ವಿನಾಶ.
**तळपणे** (ತಳಪಣೇ) ಕ್ರಿ. ಅ. ಹೊಳೆ, ಶೋಭಿಸು.
**तळपाय** (ತಳಪಾಯ್) ಪು. ಅಂಗಾಲು.
**तळपायाची आग मस्तकाला जाणे** (ತಳಪಾಯಾಚೀ ಆಗ್ ಮಸ್ತಕಾಲಾ ಜಾಣೇ) (ನಾಣ್ಣುಡಿ) ಬಹಳ ಕೋಪಿಸು.
**तळमळ** (ತಳಮಳ್) ಸ್ತ್ರೀ. ದುಃಖ, ವ್ಯಥೆ.
**तळमळणे** (ತಳಮಳಣೇ) ಕ್ರಿ. ಅ. ಶೋಕಿಸು ದುಃಖ ಪಡು.
**तळवट** (ತಳವಟ್) ನ. ಗುಡ್ಡದ ಕೆಳಗಿನ ಸಮನೆಲ.
**तळवटणे** (ತಳವಟಣೇ) ಕ್ರಿ. ಸಂ. ಒತ್ತಿಕ್ಕು.
**तळवा** (ತಳವಾ) ಪು. ಅಂಗೈ, ಅಂಗಾಲು.
**तळहात** (ತಳಹಾತ್) ಪು. ಅಂಗೈ.
**तळहाताचा फोड** (ತಳಹಾತಾಚಾ ಫೋಡ್) ಪು. ಬಹಳ ಬೇಕಾದ, ಪ್ರಿಯವಿದ್ದ, ಸಂಗತಿ, ಮನುಷ್ಯ.
**तळी** (ತಳೀ) ಸ್ತ್ರೀ. ಬೀಸುವ ಕಲ್ಲಿನ ಹೋಳು.
**–उचलणे** (ಉಚಲಣೇ) ಕ್ರಿ. ಸಂ. ಅನುಮೋದಿಸು.
**तळीराम गार करणे** (ತಳೀರಾಮ್ ಗಾರ್ ಕರಣೇ) ಕ್ರಿ. ಅ. ತೃಪ್ತಿ ಪಡೆ.
**तळे** (ತಳೇ) ನ. ಕೆರೆ, ಹೊಂಡ.
**तक्षक** (ತಕ್ಷಕ) ಪು. ಸಂ. ತಕ್ಷಕ, ಸರ್ಪರಾಜ.
**तज्ञ**, **तज्ज्ञ** } (ತಜ್ಞ) ಪು. ಬಲ್ಲವ, ಅರಿತವ, ಪಟು.

**तंग** (ತಂಗ್) ವಿ. ಫಾ. ಬಿಗಿಯಾದ. ೨. ಭಯಾನಕವಾದ.
**तंगडी** (ತಂಗಡೀ) ಸ್ತ್ರೀ. ಕಾಲು.
**ज्याची तंगडी त्याच्या गळचात घालणे** (ಜ್ಯಾಚೀ ತಂಗಡೀ ತ್ಯಾಚ್ಯಾ ಗಳ್ಯಾತ್ ಘಾಲಣೇ) ಕ್ರಿ. ಸಂ. ವಿರುದ್ಧ ಪಕ್ಷದವನನ್ನು ಪೇಚಿನಲ್ಲಿ ತರು.
**तंगी** (ತಂಗೀ) ಸ್ತ್ರೀ. ಫಾ. ಕಠಿಣ ಪರಿಸ್ಥಿತಿ, ಕೊರತೆ.
**तंटा** (ತಂಟಾ) ಪು. ಜಗಳ, ವ್ಯಾಜ್ಯ.
**–बखेडा** (–ಬಖೇಡಾ) ಪು. ಜಗಳಾಟ.
**तंटेखोर** (ತಂಟೇಖೋರ್) ವಿ. ಜಗಳಗಂಟ.
**तंडणे** (ತಂಡಣೇ) ಕ್ರಿ. ಸಂ. ಜಗಳಾಡು.
**तंडुल** (ತಂಡುಲ್) ಪು. ಸಂ. ಅಕ್ಕಿ.
**तंडोली** (ತಂಡೋಲೀ) ಸ್ತ್ರೀ. ಸೊಕ್ಕು–ಅಧಿಕ ಪ್ರಸಂಗ.
**तंतरणे** (ತಂತರಣೇ) ಕ್ರಿ. ಸಂ. ಮೋಸಗೊಳಿಸು. ಕ್ರಿ. ಅ. ಬಿಕ್ಕಟ್ಟಿನಲ್ಲಿ ಸಿಲುಕು.
**तंतु** (ತಂತು) ಪು. ನೂಲು, ತಂತು, ತಂತಿ.
**–कार** (–ಕಾರ್) ಪು. ತಂತು ವಾದ್ಯ ಬಾರಿಸುವವರು.
**–पटन्याय** (–ಪಟನ್ಯಾಯ) ಪು. ದೃಢಸಂಬಂಧ.
**–वाद्य** (–ವಾದ್ಯ) ನ. ತಂತು ವಾದ್ಯ.
**–वाय** (–ವಾಯ) ಪು. ಜೇಡ, ನೇಕಾರ.
**तंतोतंत** (ತಂತೋತಂತ್) ಕ್ರಿ. ವಿ. ತೀರ ಒಂದೇ ಬಗೆಯಾಗಿ. ವಿ. ಒಂದೇ ತರಹದ.
**तंत्र** (ತಂತ್ರ) ನ. ಸಂ. ಬಗೆ, ತಂತ್ರ, ವಿಧಿ.
**तंत्रज्ञ** (ತಂತ್ರಜ್ಞ) ಪು. ಸಂ. ತಂತ್ರಬಲ್ಲವ.
**तंत्री** (ತಂತ್ರೀ) ಸ್ತ್ರೀ. ತಂತು ವಾದ್ಯ.
**तंद्रा** (ತಂದ್ರಾ) ಸ್ತ್ರೀ. ಸಂ. ನಿದ್ದೆ, ಸೋಮಾರಿತನ.
**तंद्री** (ತಂದ್ರೀ) ಸ್ತ್ರೀ. ನಿದ್ದೆ, ಧ್ಯಾನ, ಜಂಪು.
**तंबाकु–खू** (ತಂಬಾಕೂ–ಖೂ) ಪು. ಪೋ. ತಂಬಾಕ.
**तंबी** (ತಂಬೀ) ಸ್ತ್ರೀ. ಅರ. ಸಿಟ್ಟು, ಎಚ್ಚರಿಕೆ.
**–देणे** (–ದೇಣೇ) ಕ್ರಿ. ನ. ಗದ್ದರಿಸು, ಎಚ್ಚರಿಸು.
**तंबू** (ತಂಬೂ) ಪು. ಡೇರೆ, ಬಿಡಾರ.
**–ठोकणे** (–ಠೋಕಣೇ) ಕ್ರಿ. ಸಂ. ಡೇರೆಹಾಕು, ವಾಸಿಸು.
**तंबोरा** (ತಂಬೋರಾ) ಪು. ಫಾ. ತಂಬೋರಿ.
**ताई** (ತಾಈ) ಸ್ತ್ರೀ. ಅಕ್ಕ.
**ताईत** (ತಾಈತ್) ನ. ಅರ. ಮಂತ್ರಿಸಿದ ಯಂತ್ರ.
**गळचातले–** (ಗಳ್ಯಾತಲೇ–) ನ. ಅತಿಪ್ರಿಯ, ನಲ್ಮೆಯ ಮನುಷ್ಯ.

**ताऊस** (ತಾಊಸ್) ಪು. ಅರ. ನವಿಲು.

**ताक** (ತಾಕ್) ನ. ಮಜ್ಜಿಗೆ.

**ताकाला जाऊन भांडे लपविणे** (ತಾಕಾಲಾ ಜಾಊನ್ ಭಾಂಡೆ ಲಪವಿಣೇ) ಕ್ರಿ. ಅ. ಕೋರಿಕೆಯನ್ನು ಬೇರೆ ಬಗೆಯಿಂದ ಹೇಳು.

**ताकापुरते रामायण** (ತಾಕಾಪುರತೆ ರಾಮಾಯಣ್) ನ. ಕೆಲಸ ಸಾಧಿಸುವವರೆಗೆ ಸವಿಮಾತಾಡುವಿಕೆ.

**ताकद** (ತಾಕದ್) ಸ್ತ್ರೀ. ಅರ. ಶಕ್ತಿ ಸಾಮರ್ಥ್ಯ.

**ताकपाणी** (ತಾಕಪಾಣೀ) ನ. ಮಿತವ್ಯಯ.

**ताकपिच्या** (ತಾಕ್‌ಪಿಚ್ಯಾ) ಪು. ಅಲ್ಪಜ್ಞಾನಿ.

**ताकवणी** (ತಾಕವಣೀ) ನ. ಬಹಳ ನೀರು ಕೂಡಿದ ಮಜ್ಜಿಗೆ.

**ताकीद** (ತಾಕೀದ್) ಸ್ತ್ರೀ. ಅರ. ಎಚ್ಚರಿಕೆ, ಸಾವಧಾನ, ಚೇತಾವಣಿ.

**–पत्र** (ಪತ್ರ) ನ. ಎಚ್ಚರಿಕೆ ಕೊಡುವ ಪತ್ರ.

**ताग** (ತಾಗ್) ಪು. ಸಣಬು, ಜೂಟ್.

**तागडी** (ತಾಗಡೀ) ಸ್ತ್ರೀ. ಕ. ತಕ್ಕಡಿ.

**तागा** (ತಾಗಾ) ಪು. ಬಟ್ಟೆಯ ಪೂರ್ಣಸುರುಳಿ, ತಾಕೆ.

**तागायत** (ತಾಗಾಯತ್) ಕ್ರಿ.ವಿ. ಅರಾ+ಫಾ,ವರೆಗೆ, ತನಕ.

**ताजमहल** (ತಾಜಮಹಲ್) ಪ್ರ. ಅರ. ಆಗ್ರಾದಲ್ಲಿಯ ತಾಜ್.

**ताजवा** (ತಾಜವಾ) ಪು. ತಕ್ಕಡಿ.

**ताजा** (ತಾಜಾ) ವಿ. ಫಾ. ಹೊಸ, ತಾಜಾ.

**–तवाना** (–ತವಾನಾ) ವಿ. ತರುಣ, ಹುರುಪಿನ.

**–कलम** (–ಕಲಮ್) ಕ್ರಿ. ವಿ. (ಪತ್ರದ ಕೊನೆಯಲ್ಲಿ ಬರೆದ) ಹೊಸ ಮಜಕೂರು ಪೋಸ್ಟಸ್ಕ್ರಿಪ್ಟ್.

**ताजी** (ತಾಜೀ) ವಿ. ಫಾ. ಅರಬಸ್ತಾನದ (ಕುದುರೆ).

**ताजीम** (ತಾಜೀಮ್) ಸ್ತ್ರೀ. ಅರ. ಆದರ, ಸನ್ಮಾನ.

**खडी–** (ಖಡೀ–) ಸ್ತ್ರೀ. ಎದ್ದುನಿಂತು ಸ್ವಾಗತ ಮಾಡುವಿಕೆ, ಅಭ್ಯುತ್ಥಾನ.

**ताजूब** (ತಾಜೂಬ) ಸ್ತ್ರೀ. ಅರ. ಆಶ್ಚರ್ಯ, ಸೋಜಿಗ

**ताट** (ತಾಟ್) ನ. ಕ. ಊಟದ ಹದವಾದ ಪಾತ್ರೆ, ತಾಟು.

**ताटा खालचे मांजर** (ತಾಟಾ ಖಾಲಚೇ ಮಂಜಾರ) ನ. ಆಜ್ಞಾಧಾರಕ ಅತಿ ವಿನಯಶೀಲ, ಹೇಳಿದ ಮಾತು ಕೇಳಿಕೊಂಡು ಬದುಕುವವ.

**ताटकळणे** (ತಾಟ್‌ಕಳಣೇ) ಕ್ರಿ. ಅ. ಅಡ್ಡಗಾಣಿಸಿ ನಿಲ್ಲು, ಜೋತಾಡು, ವೇಳೆಕಳೆ.

**ताटका** (ತಾಟಕಾ) ಸ್ತ್ರೀ. ಜಬರಿಸುವಿಕೆ, ೨. ತ್ರಾಟಿಕೆ, ಜಗಳಗಂಟ ಹೆಂಗಸು.

**ताटली** (ತಾಟಲೀ) ಸ್ತ್ರೀ. ಸಣ್ಣತಾಟು.

**ताटवा** (ತಾಟವಾ) ಪು. ಹೂವಿನ ತೋಟ, ಹೂವಿನ ಗಿಡಗಳ ಸಾಲು.

**ताटस्थ्य** (ತಾಟಸ್ಥ್ಯ) ನ. ಸಂ. ತಟಸ್ಥತೆ, ನಿಃಪಕ್ಷಪಾತ.

**ताटिका** (ತಾಟಿಕಾ) ಸ್ತ್ರೀ. **ताटका** ನೋಡಿರಿ.

**ताटातूट** (ತಾಟಾತೂಟ್) ಸ್ತ್ರೀ. ವಿರಹ, ಬೇರೆ ಬೇರೆ ಕಡೆಗೆ ಹೊರಟು ಹೋಗುವಿಕೆ, ಅಗಲುವಿಕೆ.

**ताटी** (ತಾಟೀ) ಸ್ತ್ರೀ. (ಹೆಣದ) ಚಟ್ಟ, ಸಿದ್ದಿಗೆ.

**ताठ** (ತಾಠ್) ವಿ. ಸೆಟೆದ, ಬಾಗಿದ ೨. ಸೊಕ್ಕಿನ ಕ್ರಿ. ವಿ. ಸೆಟೆದು.

**ताठर** (ತಾಠರ್) ವಿ. ಸೆಟೆಯುವ, ೨. ಸೊಕ್ಕಿನ ೩. ಹಟಮಾರಿತನದ.

**ताठरणे** (ತಾಠರಣೇ) ಕ್ರಿ. ವಿ. ಸೊಕ್ಕಿನಿಂದ ಉಬ್ಬು ಬಾಯು.

**ताठा** (ತಾಠಾ) ಪು. ಸೆಟೆಯುವಿಕೆ. ೨. ಗರ್ವ.

**ताड** (ತಾಡ) ಪು. ಸಿಂದಿಯಗಿಡ, ಈಚಲಗಿಡ.

**ताडकन्** (ತಾಡಕನ್) ಕ್ರಿ. ವಿ. ಒಮ್ಮೆಲೆ, ವಿಚಾರ ಮಾಡದೆ.

**ताडगोळा** (ತಾಡಗೋಳಾ) ಪು. ತಾಲವೃಕ್ಷದ ಹಣ್ಣು, ತಾಲಫಲ.

**ताडणे** (ತಾಡಣೇ) ಕ್ರಿ. ಸ. ಊಹಿಸು, ತರ್ಕದಿಂದ ತಿಳಿದಿಕೊ.

**ताडताड** (ತಾಡತಾಡ್) ಕ್ರಿ. ವಿ. ಸಿಟ್ಟಿನಿಂದ, ರಭಸದಿಂದ.

**ताडन** (ತಾಡನ್) ನ. ಸಂ. ಹೊಡೆತ, ಥಳಿಸುವಿಕೆ.

**ताडपत्र** (ತಾಡಪತ್ರ) ನ. ತಾಲವೃಕ್ಷದ ಎಲೆ.

**ताडपत्री** (ತಾಡಪತ್ರೀ). ಸ್ತ್ರೀ. ಮಳೆಯಿಂದ ರಕ್ಷಿಸಲಿಕ್ಕೆ ಉಪಯೋಗಿಸುವ ದಪ್ಪನ್ನ ಬಟ್ಟೆ.

**ताडमाड** (ತಾಡಮಾಡ್) ಕ್ರಿ. ವಿ. ತಾಲ ವೃಕ್ಷದಂತೆ ಎತ್ತರವಾಗಿ.

**–ऊंच** (–ಉಂಚ್) ಎತ್ತರವಾದ.

**–उडणे** (ಉಡಣೇ) ಕ್ರಿ. ಅ. ಹಾರು.

**ताडतोड** (ತಾಡತೋಡ್) ಸ್ತ್ರೀ. ವಿರಹ, ಅಗಲುವಿಕೆ.

**ताडी** (ತಾಡೀ) ಸ್ತ್ರೀ. ಹೆಂಡ, ಸರಾಯಿ.

ताण (ತಾಣ್) ಪು. ಭಾರ, ಎಳೆತ, ಜಗ್ಗಾಟ.
 –देणे (ದೇಣೆ) ಕ್ರಿ. ಸ. ಎಳೆ, ಜಗ್ಗು.
 ओढा– (ಓಢಾ) ಸ್ತ್ರೀ. ಬವಣೆ, ತೊಂದರೆ.
ताणणे (ತಾಣಣೇ) ಕ್ರಿ. ಅ. ಎಳೆ, ಜಗ್ಗು.
ताणा (ತಾಣಾ) ಪು. (ನೆಯ್ಗೆಯ) ಉದ್ದ ನೂಲು.
ताणाताण (ತಾಣಾತಾಣ್) ಸ್ತ್ರೀ. ಮನಸ್ಸಿನ ಎಳೆದಾಟ, ಚಿಂತೆ.
ताणारी (ತಾಣಾರೀ) ಸ್ತ್ರೀ. ನೇಯುವ ನೂಲನ್ನು ಸರಿಪಡಿಸುವ ಯಂತ್ರ, ತಂತ್ರ.
तात (ತಾತ್) ಪು. ತಂದೆ. ೨. ಪ್ರಿಯ. ೩. ಪುತ್ರ.
तातडी (ತಾತಡೀ) ಸ್ತ್ರೀ. ಅವಸರ, ಲಗುಬಗೆ.
तातवेळ (ತಾತವೇಳ್) ಸ್ತ್ರೀ. ತೀವ್ರತೆ, ಗಾಂಭೀರ್ಯ.
तातोबा (ತಾತೋಬಾ) ಪು. ಹಿರಿಯ.
तात्कालिक (ತಾತ್ಕಾಲಿಕ್) ವಿ. ಸಂ. ಆಯಾ ಸಮಯದ. ೨. ಅವಸರದಿಂದ. ೩. ತತ್‌ಕ್ಷಣ.
तात्काळ (ತಾತ್ಕಾಳ್) ಕ್ರಿ. ವಿ. ಒಮ್ಮೆಲೆ, ಬೇಗ. ೨. ತತ್‌ಕ್ಷಣ.
तात्पर्य (ತಾತ್ಪರ್ಯ) ಪು. ಸಂ. ಉದ್ದೇಶ. ೨. ತಾತ್ಪರ್ಯ. ೩. ಆಶಯ, ಅಭಿಪ್ರಾಯ. ೪. ಬೋಧೆ. ೫. ಸಾರಾಂಶ.
तात्पर्यार्थ (ತಾತ್ಪರ್ಯಾರ್ಥ) ಪು. ಅಭಿಪ್ರಾಯ, ಸಾರಾಂಶ, ಅರ್ಥ.
तात्पुरता (ತಾತ್ಪುರತಾ) ಕ್ರಿ. ವಿ. ಕೆಲಸ ಬಗೆಹರಿಸುವುದರ ಸಲುವಾಗಿ, ಕೆಲಕಾಲದ ಸಲುವಾಗಿ.
तात्यापंतोजी (ತಾತ್ಯಾಪಂತೋಜೀ) ಪು. ಹಳೆಯ ಬಗೆಯ ಶಿಕ್ಷಕ, ಮೇಷ್ಟ್ರು.
तात्त्विक (ತಾತ್ವಿಕ್) ವಿ. ಸಂ. ತತ್ವಕ್ಕೆ ಸಂಬಂಧಿಸಿದ, ನಿಜವಾದ.
तादात्म्य (ತಾದಾತ್ಮ್ಯ) ನ. ಸಂ. ತದಾಕಾರತೆ, ಮಗ್ನತೆ.
तादृश (ತಾದೃಶ್) ವಿ. ಆ ಬಗೆಯ, ಆ ಪ್ರಕಾರದ.
तान (ತಾನ್) ಸ್ತ್ರೀ. ಗಾಯನದ ಆಲಾಪ.
 –मान (ಮಾನ್) ನ. ಅನುಕೂಲತೆ, ಸುಸಂಧಿ.
तानवडे (ತಾನವಡೇ) ನ. ಕಿವಿಯಲ್ಲಿಯ ಆಭರಣ.
तानुले (ತಾನುಲೇ) ನ. ಚಿಕ್ಕಮಗು, ಕೂಸು, ಹಸುಗೂಸು.
तान्हा–तान्हुला (ತಾನ್ಹಾ–ತಾನ್ಹುಲಾ) ಪು. ಚಿಕ್ಕ ಮಗು, ಮೊಲೆಯುಣ್ಣುವ ಕೂಸು.
तान्हेला (ತಾನ್ಹೆಲಾ) ವಿ. ನೀರಡಿಕೆಯಾದವ.
ताप (ತಾಪ್) ಪು. ಜ್ವರ.
 –करी (–ಕರೀ) ವಿ. ಜ್ವರಬಂದವ.
तापट (ತಾಪಟ್) ವಿ. ಸಿಟ್ಟಿನವ.
तापटणे (ತಾಪಟಣೇ) ನ. ಬಾರಕೋಲು.
तापणे (ತಾಪಣೇ) ಕ್ರಿ. ಅ. ಬಿಸಿಯಾಗು, ಕಾಯು. ೨. ಸಿಟ್ಟಿಗೇಳು, ಕೋಪಿಸು.
 तापलेल्या तव्यावर भाजून घेणे (ತಾಪಲೇಲ್ಯಾ ತವ್ಯಾವರ್ ಭಾಜೂನ್ ಘೇಣೇ) ಕ್ರಿ. ಅ. ಕೆಲಸ ಸಾಧಿಸು, ಸಂಧಿ ಸಾಧಿಸು.
तापता (ತಾಪತಾ) ಪು. ರೇಶ್ಮೆಯ ಬಟ್ಟೆ.
तापत्रय (ತಾಪತ್ರಯ) ನ. ಮೂರು ಬಗೆಯ ದುಃಖ, ಯಾತನೆ, ಮನಸ್ಸು, ಜನರು, ದೈವ, ಈ ಮೂರು ಬಗೆಯ ತಾಪ.
तापविणे (ತಾಪವಿಣೇ) ಕ್ರಿ. ಸ. ಕಾಯಿಸು, ಬಿಸಿ ಮಾಡು. ೨. ರೇಗಿಸು.
तापस (ತಾಪಸ್) ವಿ. ತಪಸ್ವಿ, ಸಾಧು.
तापसी (ತಾಪಸೀ) ಪು. ತಪಸ್ವಿ. ಸ್ತ್ರೀ. ತಪಸ್ವಿನಿ.
ताफा (ತಾಫಾ) ಪು. ಅರ. ತಂಡ, ಗುಂಪು, ವೃಂದ. ೨. ಬೊಡ್ಡೆ (ತೇಲುವ), ದೋಣಿ.
ताबडतोब (ತಾಬಡತೋಬ್) ಕ್ರಿ. ವಿ. ಒಮ್ಮೆಲೆ, ತಟ್ಟನೆ.
ताबा (ತಾಬಾ) ಪು. ಅರ. ಸ್ವತ್ವ, ಸ್ವಾಧಿಕಾರ, ನಿಯಂತ್ರಣ.
ताबूत (ತಾಬೂತ್) ಪು. ಅರ. ಮೊಹರಮ್ ಹಬ್ಬದಲ್ಲಿಯ ತಾಬೂತು.
ताबेगहाण (ತಾಬೇಗಹಾಣ್) ವಿ. ಸಾಲಕೊಟ್ಟವನ ಬಳಿಯಲ್ಲಿ ಇಟ್ಟ ಒತ್ತೆ.
ताबेदार (ತಾಬೇದಾರ್) ಪು. ಆಜ್ಞಾಧಾರಕ, ಅಧೀನ.
ताबेदारी (ತಾಬೇದಾರೀ) ಸ್ತ್ರೀ. ಆಜ್ಞಾಧಾರಕತ್ವ, ಅಧೀನತೆ.
तामसी (ತಾಮಸೀ) ವಿ. ಸಿಟ್ಟಿನ, ತಾಮಸ, ಉಗ್ರ.
 –उपचार (–ಉಪಚಾರ್) ಉಗ್ರಯುಕ್ತಿ.
तामीली (ತಾಮೀಲೀ) ಸ್ತ್ರೀ. ಅರ. ನೆರವೇರಿಸುವಿಕೆ.
ताम्र (ತಾಮ್ರ) ನ. ಸಂ. ಕೆಂಪು ಬಣ್ಣದ. ೨. ತಾಮ್ರ ಧಾತು.
 –पट (ಪಟ್) ಪು. ತಾಮ್ರಪಟ.
 –मुखी (–ಮುಖೀ) ವಿ. ಕೆಂಪು ಮೋರೆಯ.
ताम्हन (ತಾಮ್ಹನ್) ನ. (ಪೂಜೆಯ) ತಾಮ್ರದ ತಟ್ಟೆ, ತಾಬಾಣ.

**तार** (ತಾರ್) ಸ್ತ್ರೀ. ಫಾ. ತಂತಿ. ೨. ಎಳೆ. ೩. ಅಮಲು.

**तारक** (ತಾರಕ್) ಪು. ಸಂ. ಕಾಪಾಡುವವ, ಸ್ಕಂಧ, ಕುಮಾರ.

**तारकशी** (ತಾರಕಶೀ) ಸ್ತ್ರೀ.ಫಾ.ತಂತಿಯನ್ನು ತಯಾರಿಸುವಿಕೆ.

**तारकस** (ತಾರಕಸ್) ಪು.ಫಾ. ತಂತಿಯನ್ನು ತಯಾರಿಸುವವ.

**तारका** (ತಾರಕಾ) ಸ್ತ್ರೀ. ತಾರೆ, ಚಿಕ್ಕೆ, ನಕ್ಷತ್ರ.

**तारण** (ತಾರಣ್) ನ. ಒತ್ತಿ ಇಟ್ಟ ಒಡವೆ, ನ್ಯಾಸ.

**तारणारा** (ತಾರಣಾರಾ) ಪು. ಸಲಹುವವ, ಪಾರು ಮಾಡುವವ, ದಾಟಿಸುವವ.

**तारणे** (ತಾರಣೇ) ಸ. ರಕ್ಷಿಸು,ಕಾಪಾಡು,ದಾಟಿಸು.

**तारतम्य** (ತಾರತಮ್ಯ) ನ. ವಿವೇಕ, ಯೋಗ್ಯ ವಿಚಾರ.

**तारं-रां-बळ** (ತಾರಂ–ರಾಂ–ಬಳ್) ಸ್ತ್ರೀ. ಅವಸರ, ಗಡಬಿಡಿ, ಯೋಚನೆ.

**तारवट** (ತಾರವಟ್) ವಿ. ಹಡಗದಿಂದ ತಂದ. ೨. ನಿದ್ದೆಯಿಲ್ಲದ (ಕಣ್ಣು), ಸೋಮಾರಿಯಾದ.

**तारस्वर** (ತಾರಸ್ವರ್) ಪು. ಉಚ್ಚ ಕೋಟಿಯ ಧ್ವನಿ, ಸ್ವರ.

**तारा** (ತಾರಾ) ಪು. ಚಿಕ್ಕೆ, ನಕ್ಷತ್ರ. ೨. ಕನೀನಿಕೆ.

**तारे तोडणे** (ತಾರೇ ತೋಡಣೇ) ಕ್ರಿ.ಅ. ಅಸಂಬದ್ಧವಾಗಿ ಮಾತನಾಡು.

**ताराधीश** (ತಾರಾಧೀಶ) ಪು. ಚಂದ್ರ.

**तारामंडल** (ತಾರಾಮಂಡಲ್) ನ.ಸಂ.ಚಿಕ್ಕೆ ತುಂಬಿದ ಆಕಾಶ.

**तारायंत्र** (ತಾರಾಯಂತ್ರ) ನ.ಸಂ. ತಂತಿಯ ಯಂತ್ರ, ಟೆಲಿಗ್ರಾಫ್ ಯಂತ್ರ.

**तारीख** (ತಾರೀಖ್) ಸ್ತ್ರೀ. ಅರ. ತಿಥಿ, ತೇದಿ, ತಾರೀಖು.

**तारीफ** (ತಾರೀಫ್) ಸ್ತ್ರೀ.ಅರ. ಸ್ತುತಿ, ಹೊಗಳುವಿಕೆ.

**तारुण्य** (ತಾರುಣ್ಯ) ನ.ಸಂ. ಹರೆ, ಪ್ರಾಯ,ತಾರುಣ್ಯ.

**तारे** (ತಾರೇ) ನ. ಹುಚ್ಚು.

**तारू** (ತಾರೂ) ನ. ದೋಣಿ, ನೌಕೆ.

**तारोळा** (ತಾರೋಳಾ) ಪು. ತಡೆ, ಅಡ್ಡಿ, ಆತಂಕ.

**तार्किक** (ತಾರ್ಕಿಕ) ವಿ. ಸಂ. ತರ್ಕಜ್ಞಾನಿ, ಜಾಣ.

**ताल** (ತಾಲ) ಪು. ತಾಲ, ತಾಳ.

**–बद्ध** (–ಬದ್ಧ) ವಿ. ತಾಲಕ್ಕೆ ಸರಿಯಾದ.

**–शुद्ध** (ಶುದ್ಧ) ವಿ.ತಾಲಬದ್ಧ, ಸರಿಯಾದ.

**तालवार** (ತಾಲವಾರ್) ವಿ. ಅರ. ದೈವವುಳ್ಳವ, ಭಾಗ್ಯಶಾಲಿ.

**तालव्य** (ತಾಲವ್ಯ) ನ.ಸಂ. (ವ್ಯಾಕರಣ), ತಾಲವ್ಯ, ಧ್ವನಿ, "ಚ" ವರ್ಗ.

**तालीम** (ತಾಲೀಮ್) ಸ್ತ್ರೀ. ತಾಲೀಮು,ವ್ಯಾಯಾಮ, ಗರಡಿ ಸಾಧಕ.

**–खाना** (ಖಾನಾ) ಗರಡಿಯಮನೆ, ವ್ಯಾಯಾಮ ಶಾಲೆ.

**ताल्** (ತಾಲು) ಸ್ತ್ರೀ. ಸಂ. ಒಳಬಾಯಿ, ತಾಲವ್ಯ.

**तालुका** (ತಾಲುಕಾ) ಪು. ಅರ. ತಾಲೂಕು, ತಹಸೀಲು.

**तालेवार** (ತಾಲೇವಾರ್) ವಿ.ಅರ. ಸಿರಿವಂತ, ಭಾಗ್ಯವಂತ.

**तालवारी** (ತಾಲ್ವಾರೀ) ಸ್ತ್ರೀ. ವಿಪುಲತೆ, ಸಿರಿವಂತಿಗೆ.

**ताव** (ತಾವ್) ಪು. ಕಾಯಿಸುವಿಕೆ, ಕಾವು. ೨. ಸಿಟ್ಟು. ೩. ಹಾಳೆಯ ಪುಟ.

**–मारणे** (ಮಾರಣೇ) ಕ್ರಿ. ಸ. ಬಹಳಷ್ಟು ತಿನ್ನು, ಭಕ್ಷಿಸು.

**–वर ताव देणे** (ವರ್ ತಾವ್ ದೇಣೇ) ಕ್ರಿ. ನ. ಪಡೆ, ಸೆಳೆ, ಅಪಹರಿಸು.

**तावडणे** (ತಾವಡಣೇ) ಕ್ರಿ. ನ. ಬಳಸು, ಉಪಯೋಗಿಸು.

**तावडी** (ತಾವಡೀ) ಸ್ತ್ರೀ. ಹಿಡಿತ, ಅಧಿಕಾರ.

**तावडीत सापडणे** (ತಾವಡೀತ್ ಸಾಪಡಣೇ) ವಶಕ್ಕೆಸಿಗು, ಕೈಗೆ ಬೀಳು.

**तावडीतून** (ತಾವಡೀತೂನ) ಕ್ರಿ. ವಿ. ಕೈಯೊಳಗಿಂದ, ವಶದಿಂದ.

**तावण** (ತಾವಣೇ) ಕ್ರಿ. ಸಂ. ಕಾಯಿಸು.

**तावून सुलाखून निघालेला** (ತಾವೂನ್ ಸುಲಾಖೂನ್ ನಿಘಾಲೇಲಾ) ಪು.ಎಲ್ಲಬಗೆಯ ಕಷ್ಟನಷ್ಟಗಳನ್ನು ಸಹಿಸಿ ಗೆದ್ದವ, ಅನುಭವಿಕ.

**तावत्काळ** (ತಾವತ್ಕಾಳ್) ಕ್ರಿ. ವಿ. ಅಷ್ಟು ಹೊತ್ತಿನವರೆಗೆ.

**तावदान** (ತಾವದಾನ್) ನ. ಫಾ. ಕಾಚಿನ ಹಾಳೆ, ಹಾಸುವ ಕಾಚು.

**ताशा** (ತಾಶಾ) ಪು. ಅರ. ಬಾರಿಸುವ ಚರ್ಮವಾದ್ಯ.

**ताशीव** (ತಾಶೀವ್) ವಿ. ಕೆತ್ತನೆಯ, ಕೆತ್ತಿಗೆಯ.

**ताशेकरी** (ತಾಶೇಕರೀ) ಪು. ತಾಶೆ ವಾದ್ಯವನ್ನು ಬಾರಿಸುವವ.

**ताशेरा** (ತಾಶೇರಾ) ಪು. ಅರ. ಅಭಿಪ್ರಾಯ, ಬರೆದು ಇಡುವ ವಿಚಾರ (ರಿಮಾರ್ಕ)

**तास** (ತಾಸ್) ಪು. ಅರ. ಅಗಲವಾದ ಗಂಟೆ, ಜಾಂಗಟೆ, ೨. ನ. ಪು. ನದಿಯಪಾತ್ರ ೩. ನೇಗಿಲ ಹೊಡೆದಗೆರೆ ಬತ್ತಗೆರೆ.

**–काम** (–ಕಾಮ್) ನ. ಕೆತ್ತಿಗೆಯ ಕೆಲಸ.

**तासडपट्टी** (ತಾಸಡ್‌ಪಟ್ಟೀ) ಸ್ತ್ರೀ.ಎಚ್ಚರಿಕೆ.೨. ನಿಂದೆ. ೩. ಧಿಕ್ಕಾರ.

**तासणे** (ತಾಸಣೇ) ಕ್ರಿ. ಸ. ಕೆತ್ತು, ಕೊನೆ. ೨. ಗದ್ದರಿಸು.

**तासीर** (ತಾಸೀರ್) ಸ್ತ್ರೀ. ಅರ. ಸ್ವಭಾವ, ನಡತೆ.

**तासी(शी)व** (ತಾಸೀ)(ಶೀ)ವ) ವಿ. ಕೆತ್ತಿಗೆಯ, ಕೆತ್ತನೆಯ (ಕೆಲಸ)

**ताळ** (ತಾಳ್) ಪು. ಸರಿಹೊಂದುವಿಕೆ, ತಾಳ.

**–सोडणे** (–ಸೋಡಣೇ) ಕ್ರಿ. ಸಂ. ವಿವೇಕವನ್ನು ತ್ಯಜಿಸು.

**–तंत्र** (–ತಂತ್ರ) ಪು. ಸಾಮನಸ್ಯ ಸುಸಂಬಂಧ, ಅನ್ವಯ.

**–तंत्र सोडणे** (–ತಂತ್ರ ಸೋಡಣೇ ಕ್ರಿ. ಸ. ಅವಿವೇಕತನ ಮಾಡು.

**ताळमेळ** (ತಾಳಮೇಳ್) ಪು. ಸಂಬಂಧ ೨. ವಿವೇಕ.

**ताळा** (ತಾಳಾ) ಪು. ಸುಸಂಗತಿ – ಅನುರೂಪತೆ.

**ताळयावर येणे** (ತಾಳ್ಯಾವರ್ ಯೇಣೇ) ಕ್ರಿ. ಅ. ಜಾಣನಾಗು, ಜಾಣನಂತೆ ನಡೆ.

**ताळू** (ತಾಳೂ) ಸ್ತ್ರೀ. ತಾಲುಕೆ, ಒಳಬಾಯಿ ೨. ತಲೆ ಬುರುಡೆ – ೩. ನೆತ್ತಿ.

**ताळेबंद** (ತಾಳೇಬಂದ್) ಪು. ಸಿದ್ಧಪಡಿಸಿದ ಲೆಕ್ಕ, ಖಾತೆಕಿರ್ದಿ.

**तांगड** (ತಾಂಗಡ್) ಸ್ತ್ರೀ. ಬರಿದಾದ ಸೀಸೆಗಳ ಗಂಟು

**तांगडणे** (ತಾಂಗಡಣೇ) ಕ್ರಿ. ಸ. ಕಾಲುಕಟ್ಟಿಡು. ೨. ಬಹಳ ಹೊತ್ತು ನಿಲ್ಲಿಸು.

**तां(टा)गा** (ತಾಂ(ಟಾ)ಗಾ) ಪು. ಕುದುರೆಯ ಬಂಡಿ, ಟಾಂಗಾ.

**तांडव** (ತಾಂಡವ) ನ. ಸಂ. ಮನಸ್ಸಿಗೆ ಬಂದಂತೆ ಕುಣಿತ, ಒದರಾಟ. ೨. ಚೀರಾಟ, ಕೋಲಾಹಲ.

**तांडा** (ತಾಂಡಾ) ಪು. ಕ. ಜನರ ಗುಂಪು, ಸಂಗಡ, ತಂಡ, ಸಮೂಹ.

**तांडेल** (ತಾಂಡೇಲ್) ಪು. ದೋಣಿಯ, ನೌಕೆಯ ಒಡೆಯ.

**तांत** (ತಾಂತ್) ಪು. ಎಳೆ, ಕರಳು.

**तांत्रिक** (ತಾಂತ್ರಿಕ್) ಪು. ಸಂ. ತಂತ್ರ ಮಾಡುವ, ಮಾಟಗಾರ ೨. ವಿ. ಸಂ. ತಂತ್ರಕ್ಕೆ ಸಂಬಂಧಪಟ್ಟ ೨. ಔಪಚಾರಿಕ, ಶಿಷ್ಟಾಚಾರದ.

**तांदुळजा** (ತಾಂದುಳಜಾ) ಪು. ಒಂದು ವನಸ್ಪತಿ (ಹಕ್ಕರಿಕೆ)

**तांदूळ** (ತಾಂದೂಳ್) ಪು. ಅಕ್ಕಿ, ತಂಡುಲ.

**तांब** (ತಾಂಬ್) ಪು. ಕಬ್ಬಿಣದ ತುಕ್ಕು. ೨. ಕೆಂಪು ಬಣ್ಣ, ಅರುಣವರ್ಣ.

**–झाडणे** (–ಝಾಡಣೇ) ಕ್ರಿ. ಅ. ಮನಸ್ಸಿನಲ್ಲಿದ್ದುದನ್ನು ಆಡಿತೋರಿಸು, (ಸ್ಪಷ್ಟವಾಗಿ ಮಾತಾಡು).

**तांबट** (ತಾಂಬಟ್) ಪು. ತಾಮ್ರದ ಪಾತ್ರೆಗಳನ್ನು ಮಾಡುವವ, ಪತ್ತಾರ.

**तांबड** (ತಾಂಬಡ್) ಸ್ತ್ರೀ. ಕೆಮ್ಮಣ್ಣು, ಹುರಮಂಜು.

**तांबडालाल** (ತಾಂಬಡಾಲಾಲ್) ವಿ. ಕೆಂಪು, ಕಡುಗೆಂಪು.

**तांबडेफुटणे** (ತಾಂಬಡೇಫುಟಣೇ) ಕ್ರಿ. ಅ. ಬೆಳಗಾಗು, ಬೆಳಕುಹರಿ.

**तांबणे** (ತಾಂಬಣೇ) ಕ್ರಿ. ಅ. ತುಕ್ಕು ಹಿಡಿ, ಕಿಲ್ಮಿಷ ಕೂಡು.

**तांबूल** (ತಾಂಬೂಲ್) ಪು. ಸಂ. ವೀಳ್ಯ,ತಾಂಬೂಲ.

**तांबूस** (ತಾಂಬೂಸ್) ವಿ. ನಸುಕೆಂಪು.

**तांबे** (ತಾಂಬೇ) ನ. ತಾಮ್ರ.

**तांबोळी** (ತಾಂಬೋಳೀ) ಪು. ವೀಳ್ಯದ ಎಲೆ ಮಾರುವವ, ವೀಳ್ಯ,(ಬೀಡಾ)ಮಾಡುವವ, ಮಾರುವವ.

**तांब्या** (ತಾಂಬ್ಯಾ) ಪು. ಕ. ತಂಬಿಗೆ, ಕಲಶ.

**तिकटे** (ತಿಕಟೇ) ನ. ಕಟ್ಟಿಗೆಯ ತ್ರಿಕೋಣ.

**तिकडे** (ತಿಕಡೇ) ಕ್ರಿ. ವಿ. ಅಲ್ಲಿ, ಅತ್ತ.

**तिकीट** (ತಿಕೀಟ್) ನ. ಇಂ. ತಿಕೀಟು, ಸ್ಟಾಂಪು. (ರೈಲು, ಬಸ್ಸು, ಮನರಂಜನೆಯ) ತಿಕೀಟು, ಅಂಚೆಯ ತಿಕೀಟು. ೨. ಚುನಾವಣೆಗೆ ಪಕ್ಷದ ವತಿಯಿಂದ ಸಿಗುವ ಅನುಮತಿ.

**तिकोनी** (ತಿಕೋನೀ) ವಿ. ತ್ರಿಕೋಣಾಕೃತಿಯ.

**तिक्त** (ತಿಕ್ತ್) ವಿ. ಕಾರ, ಕಹಿ.

**तिखट** (ತಿಖಟ್) ವಿ. ಕಾರವಾದ, ೨ ನ. ಕಾರಪುಡಿ, ಚಟ್ನಿ.

**–मीठ लाऊन सांगणे** (ಮೀಠ್ ಲಾಊನ್‌ಸಾಂಗಣೇ) ಕ್ರಿ. ಸ. ಅತಿಶಯೋಕ್ತಿಮಾಡು, ಬೆಳೆಸಿ ಹೇಳಿಸು.

**तिखटाई** (ತಿಖಟಾಈ) ಸ್ತ್ರೀ. ಕಾರ.

**तिखणी** (ತಿಖಣೀ) ವಿ. ಮೂರು, ಕಣ (ಕೋಣೆ) ಗಳುಳ್ಳ.

**तिखे** (ತಿಖೇ) ನ. ಉಕ್ಕು. ೨. ಸ್ಥಿರತೆ. ೩. ಹಟ. ೪. ಸೊಕ್ಕು.

**तिगस्ता** (ತಿಗಸ್ತಾ) ಕ್ರಿ. ವಿ. ಹೋದ ವರ್ಷದ ಮುಂಚಿನ ವರ್ಷ.

**तिघे** (ತಿಘೇ) ವಿ. ಮೂರುಮಂದಿ.

**तिचा** (ತಿಚಾ) ಸರ್ವನಾಮ. ಅವಳ, ಆಕೆಯ.

**तिजवर** (ತಿಜವರ್) ಸರ್ವನಾಮ. ಅವಳ ಮೇಲೆ ೨. ಪು. ಮೂರನೆಯ ಸಲ ಮದುವೆಮಾಡಿಕೊಳ್ಳುವವ.

**तिजा** (ತಿಜಾ) ವಿ. ಮೂರನೆಯ.

**तिजोरी** (ತಿಜೋರೀ) ಸ್ತ್ರೀ. ಇಂ. ಭಾಂಡಾರ, ಕೋಶ, ತಿಜೋರಿ, ಟ್ರೆಜರಿ.

**तिटकारणे** (ತಿಟಕಾರಣೇ) ಕ್ರಿ. ಸ. ತಿರಸ್ಕರಿಸು.

**तिटकारा** (ತಿಟಕಾರಾ) ಪು. ತಿರಸ್ಕಾರ, ದ್ವೇಷ.

**तिटी** (ತಿಟೀ) ಸ್ತ್ರೀ. ಕ. ತೀಟು, ಹಣೆಗೆ ಹಚ್ಚುವ ಅಕ್ಷತೆ.

**तिठा** (ತಿಠಾ) ಪು. ಮೂರು ರಸ್ತೆಗಳು ಕೂಡುವ ಸ್ಥಾನ.

**तिडकणे** (ತಿಡಕಣೇ) ಕ್ರಿ. ಅ. ನೋವಾಗು, ಉರಿ.

**तिडका** (ತಿಡಕಾ) ವಿ. ಬಾಗಿದ, ವಕ್ರ, ಡೊಂಕ.

**तिडकी** (ತಿಡಕೀ) ಸ್ತ್ರೀ. ಸ್ಫುಲಿಂಗ, ಕಿಡಿ.

**तिडणी** (ತಿಡಣೀ) ಸ್ತ್ರೀ. ಪೇಚು, ಯೋಚನೆ, ಸಂಕಟ.

**तिडणे** (ತಿಡಣೇ) ನ. ಒತ್ತು, ದಬ್ಬು. ೨. ಡೊಂಕಾಗು.

**तिडतिडा** (ತಿಡತಿಡಾ) ಕ್ರಿ. ವಿ. ಅಡ್ಡ ತಿಡ್ಡ, ಅಂಕು ಡೊಂಕು.

**तिडीक** (ತಿಡೀಕ್) ಸ್ತ್ರೀ. ನೋವು, ಉರಿತ.

**तिडा** (ತಿಡಾ) ವಿ. ಸೊಟ್ಟ, ಡೊಂಕು.

**ततका** (ತಿತಕಾ) ಕ್ರಿ. ವಿ. ಅಷ್ಟು.

**तितपत** (ತಿತಪತ್) ಕ್ರಿ. ವಿ. ಅಷ್ಟರವರೆಗೆ, ಅಷ್ಟರ ಮಟ್ಟಿಗೆ.

**तितिक्षा** (ತಿತಿಕ್ಷಾ) ಸ್ತ್ರೀ. ಸಂ. ತಾಳ್ಮೆ, ಕ್ಷಮೆ.

**तितिक्षु** (ತಿತಿಕ್ಷು) ವಿ. ಸಹಿಸುವವ, ತಾಳ್ಮೆಯುಳ್ಳವ.

**तित्तिर** (ತಿತ್ತಿರ) ಪು. ಕಬ್ಬಕ್ಕಿ, ತಿತ್ತಿರ ಪಕ್ಷಿ.

**तिथी** (ತಿಥಿ) ಸ್ತ್ರೀ. ಸಂ. ದಿವಸ, (ಪಂಚಾಂಗದ ಪ್ರಕಾರ) (ಹಿಂದೂ) ತಾರೀಖು.

**–पर्वणी** (–ಪರ್ವಣೀ) ಸ್ತ್ರೀ. ಹಬ್ಬ, ಪರ್ವಕಾಲ.

**–वृद्धि** (–ವೃದ್ಧಿ) ಸ್ತ್ರೀ. ಒಂದೇ ತಿಥಿ ಎರಡು ದಿನಗಳ ವರೆಗೆ)

**–क्षय** (–ಕ್ಷಯ) ಪು. ತಿಥಿಲೋಪ.

**तिथे** (ತಿಥೇ) ಕ್ರಿ. ವಿ. ಅಲ್ಲಿ.

**तिधारी** (ತಿಧಾರೀ) ವಿ. ಮೂರು ಹರಿತವಾದ ಬದಿಗಳಿದ್ದ, ಮೂರು ತುದಿಗಳಿದ್ದ.

**तिनीसांज** (ತಿನೀಸಾಂಜ್) ಸ್ತ್ರೀ. ಮುಚ್ಚಂಜೆ, ಸಂಜೆ.

**तिन्हीत्रिकाळ** (ತಿನ್ಹೀತ್ರಿಕಾಳ್) ಕ್ರಿ.ವಿ. ಯಾವಾಗಲೂ.

**तिपदरी** (ತಿಪದರೀ) ವಿ. ಮೂರು ಪದರುಗಳಿದ್ದ.

**तिपाई** (ತಿಪಾಈ) ಸ್ತ್ರೀ. ಮೂರು ಕಾಲಿನ ಮಂಚ, ಪೆಟ್ಟಿಗೆ, ಟಿಪಾಯಿ.

**तिपानी** (ತಿಪಾನೀ) ವಿ. ಮೂರು ಪಕ್ಕಗಳಿದ್ದ.

**तिपिकी** (ತಿಪಿಕೀ) ಸ್ತ್ರೀ. ಮೂರು ಸಲ ಬೆಳೆ ಬರುವ.

**तिप्पट** (ತಿಪ್ಪಟ್) ಕ್ರಿ. ವಿ. ಮುಮ್ಮಡಿ, ಮೂರು ಪಟ್ಟು.

**तिमजला** (ತಿಮಜಲಾ) ವಿ.ಅರ. ಮೂರು ಅಂತಸ್ತಿನ.

**तिमाजी नाईक** (ತಿಮಾಜೀ ನಾಈಕ್) ಪು. ತಿಮ್ಮನಾಯಕ (ಪುರಂದರದಾಸರ ಮುಂಚಿನ ಹೆಸರು) ೨. ಬಹು ಜಿಪುಣ.

**तिमिर** (ತಿಮಿರ್) ನ. ಕತ್ತಲೆ.

**तिरकमठा** (ತಿರಕಮಠಾ) ಪು. ಬಿಲ್ಲು ಮತ್ತು ಬಾಣ.

**तिरकस** (ತಿರಕಸ್) ವಿ. ಸೊಟ್ಟ, ಡೊಂಕ ಪು. ಬತ್ತಳಿಕೆ.

**तिरडा** (ತಿರಡಾ) ಪು. ಒಂದು (ಬಿಳಿಯ) ಹೂವಿನ ಗಿಡ.

**तिरंदाज** (ತಿರಂದಾಜ್) ವಿ. ಫಾ. ಬಾಣ ಹೊಡೆಯುವವ, ಧನುರ್ಧಾರಿ.

**तिरंदाजी** (ತಿರಂದಾಜೀ) ಸ್ತ್ರೀ. ಸಂ. ಧನುರ್ವಿದ್ಯೆ.

**तिरपगडे** (ತಿರಪಗಡೇ) ನ- ಪೇಚಾಟ, ಪೀಕಲಾಟ, ಗೋಳಾಟ.

**तिरपा** (ತಿರಪಾ) ವಿ. ಸೊಟ್ಟ, ಡೊಂಕ.

**तिरपीट** (ತಿರಪೀಟ್) ಸ್ತ್ರೀ. ಅಂಜಿಕೆ, ಬೆದರಿಕೆ. ೨. ಫಜೀತಿ.

**तिरपीट उडणे** (ತಿರಪೀಟ್ ಉಡಣೇ) ಕ್ರಿ. ಅ. ಅಂಜಿಕೆಯಾಗು, ಫಜೀತಿಯಾಗು.

**तिरवा** (ತಿರವಾ) ವಿ. ಮೆರಳುಗಣ್ಣಿನ, ಮೆರಳ.

**तिरशिंगराव** (ತಿರಶಿಂಗರಾವ್) ಪು. ಶೀಘ್ರಕೋಪಿ, ಸಿಟ್ಟಿನವ.

**तिरसट** (ತಿರಸಟ್) ವಿ. ಉಗ್ರ, ಸಿಟ್ಟಿನವ.

**तिरस्कार** (ತಿರಸ್ಕಾರ) ಪು. ಸಂ. ದ್ವೇಷ, ತಿರಸ್ಕಾರ.

**तिरस्कारणे** (ತಿರಸ್ಕಾರಣೇ) ಕ್ರಿ. ಸಂ. ತಿರಸ್ಕರಿಸು, ದ್ವೇಷಿಸು.

**तिरस्कृत** (ತಿರಸ್ಕೃತ) ವಿ. ಸಂ. ಬೇಡಾದ, ತಿರಸ್ಕೃತ.

**तिस्थळी** (ತಿಸ್ಥಳೀ) ಸ್ತ್ರೀ. ಕಾಶಿ, ಗಯೆ ಮತ್ತು ಪ್ರಯಾಗ ಈ ಮೂರು ಕ್ಷೇತ್ರಗಳು.

**तिरळा** (ತಿರಳಾ) ವಿ. ಮೆರಳುಗಣ್ಣಿನವ, ಸೊಟ್ಟ ದೃಷ್ಟಿಯುವ.

**तिराइत** (ತಿರಾಯಿತ್) ಪು. ತ್ರಯಸ್ಥ, ಬೇರೆಯುವ, ಹೆರವ.

**तिरीप** (ತಿರೀಪ್) ಸ್ತ್ರೀ. ಕ. ಬಿಸಿಲಿನ ತಾಪ.

**तिरीमिरी** (ತಿರೀಮಿರೀ) ಸ್ತ್ರೀ. ಮೂರ್ಚ್ಛೆ, ಎಚ್ಚರ ತಪ್ಪುವಿಕೆ.

**तिरीमिरीवर येणे** (ತಿರೀಮಿರೀವರಯೇಣೇ) ಕ್ರಿ.ಅ. (ಜಗಳ) ವಿಕೋಪಕ್ಕೆ ಹೋಗು.

**तिरोधान** (ತಿರೋಧಾನ್) ನ. ಸಂ. ಅದೃಶ್ಯವಾಗುವಿಕೆ, ಮಾಯವಾಗುವಿಕೆ, ಬೈಲಾಗುವಿಕೆ.

**तिऱ्हाइत** (ತಿರ್‍ಹಾಯಿತ್) ಪು. **तिराइत** ನೋ.

**तिलक** (ತಿಲಕ್) ಪು. ಸಂ. ತಿಲಕ, ತೀಟು, ಅಕ್ಷತೆ.

**तिलांजलि** (ತಿಲಾಂಜಲಿ) ಸ್ತ್ರೀ. ಸತ್ತವನಿಗೆ ನೀರು ಬಿಡುವಿಕೆ, ತಿಲಾಂಜಲಿ.

**द्यावयास उठणे** (ದ್ಯಾವಯಸ್ ಉಠಣೇ) ಕ್ರಿ. ನಾ ಅ. ನಾಶಗೊಳಿಸಲಿಕ್ಕೆ ಸಿದ್ಧನಾಗು.

**–देणे** (–ದೇಣೇ) ಕ್ರಿ. ಸಂ. ಬಿಡು ಬಿಟ್ಟು ಕೊಡು.

**तिवई** (ತಿವಈ) ಸ್ತ್ರೀ. ಮೂರು ಕಾಲಿನ ಮಂಚ, ಸ್ಟೂಲು.

**तिवठा** (ತಿವಠಾ) ಪು. ಮೂರು ಹಾದಿಗಳು ಕೂಡುವ ಸ್ಥಳ.

**तिवडा** (ತಿವಡಾ) ಪು. ಕಣದಲ್ಲಿಯ ಎತ್ತು ಕಟ್ಟುವ ಕಂಬ.

**तिवण** (ತಿವಣ) ಸ್ತ್ರೀ. ತ್ರಿದಲ ಎಲೆ.

**तिवणा** (ತಿವಣಾ) ವಿ. ತ್ರಿದಲ, ಮೂರುಎಲೆಗಳುಳ್ಳ.

**तिवरा** (ತಿವರಾ) ಪು. ಹೆಮ್ಮೆ, ಅಭಿಮಾನ, ಸ್ವಾಭಿಮಾನ.

**तिव्वा** (ತಿವ್ವಾ) ಪು. ಇಸ್ಪೇಟಿನಲ್ಲಿಯ ಮೂರರ ಎಲೆ.

**तिशी** (ತೀಶೀ) ಸ್ತ್ರೀ. ಮೂವತ್ತು ವರ್ಷಗಳ ವಯಸ್ಸು, ಪ್ರಾಯ.

**तिसरा** (ತಿಸರಾ) ವಿ. ಮೂರನೆಯ.

**हयाचे आपले तिसरेच** (ಹ್ಯಾಚೇ ಆಪಲೇ ತಿಸರೇಚ್) ನಾಂ. ತೃತೀಯ ಪಂಥ, ಲೋಕವಿರುದ್ಧ ಆಚಾರು.

**तिसरापाय** (ತಿಸರಾಪಾಯ್) ವಿ. ತತ್ಪರ, ದಕ್ಷ.

**तिसरेच** (ತಿಸರೇಚ್) ವಿ. ವಿಚಿತ್ರವಾದ.

**तिस्मारखाँ** (ತಿಸ್ಮಾರ್‌ಖಾನ್) ಪು. ಹಿಂ. ಶೂರನಂತೆ ನಟಿಸುವವ.

**तिहेरी** (ತಿಹೇರೀ) ವಿ. ಮೂರು ಬಗೆಯ, ಮೂರು ಪಟ್ಟು.

**तिहोत्रा** (ತಿಹೋತ್ರಾ) ವಿ. ತಿಂಗಳಿಗೆ ಶೇಕಡಾ ಮೂರರಂತೆ ಬಡ್ಡಿಯುದರ.

**तिळतिळ** (ತಿಳತಿಳ್) ಕ್ರಿ. ವಿ. ಸಣ್ಣಗೆ, ತುಸುತುಸು.

**–तुटणे** (–ತುಟಣೇ) ಒಂದೇಸವನೆ ಕೆಡಕು ಅನಿಸು.

**तिळपापड होणे** (ತಿಳಪಾಪಡ್ ಹೋಣೇ) ಕ್ರಿ. ಅ. ಸಿಟ್ಟಿಗೇಳು, ಕೋಪಿಸು.

**तिळप्राय** (ತಿಳಪ್ರಾಯ) ಕ್ರಿ- ವಿ. ಕಿಂಚಿತ್ತು, ರವಷ್ಟು, ಎಳ್ಳಷ್ಟು.

**तिंबणे** (ತಿಂಬಣೇ) ಕ್ರಿ. ಸ. (ಹಿಟ್ಟು) ನಾದು.

**ती** (ತೀ) ಸರ್ವ, ಅವಳು.

**तीज** (ತೀಜ್) ಸ್ತ್ರೀ. ತೃತೀಯೆ.

**तीट** (ತೀಟ್) ನ. ಕ. ತೀಟು.

**तीथ** (ತೀಥ್) ಸ್ತ್ರೀ. ತಿಥಿ.

**–वार** (–ವಾರ್) ಪು. ತಿಥಿ, ವಾರ.

**तीन** (ತೀನ್) ವಿ. ಮೂರು.

**–तेरा** (–ತೇರಾ) ಕ್ರಿ. ವಿ. ಅಸ್ತಾವ್ಯಸ್ತ.

**–माही** (–ಮಾಹೀ) ವಿ. ಮೂರು ತಿಂಗಳಿಗೊಮ್ಮೆ ಬರುವ.

**तीनवार** (ತೀನ್‌ವಾರ್) ವಿ. ಮೂರು ವಾರಗಳಿಗೊಮ್ಮೆಯಂತೆ.

**तीर** (ತೀರ್) ಪು. ಸಂ. ದಂಡೆ, ತಟ. ೨. ಫಾ. ಬಾಣ.

**–कमठा** (–ಕಮಠಾ) ಪು. ಬಿಲ್ಲು ಬಾಣ.

**तीर्थ** (ತೀರ್ಥ) ನ. ಸಂ. ಪವಿತ್ರ ಜಲ. ೨. ಪವಿತ್ರ ಕ್ಷೇತ್ರ.

**तीर्थी गेल्यावाचून मुंडन होत नाही** (ತೀರ್ಥೀ ಗೇಲ್ಯಾವಾಚೂನ್ ಮುಂಡನ್ ಹೋತ್‌ನಾಹೀ) ಕ್ರಿ. ವಿ. ಕಷ್ಟಪಡದ ಹೊರತು ಕಾರ್ಯವಾಗಲಾರದು.

**–प्रसाद** (–ಪ್ರಸಾದ್) ಪು. ತೀರ್ಥ ಹಾಗೂ ಪ್ರಸಾದ.

**–यात्रा** (–ಯಾತ್ರಾ) ಸ್ತ್ರೀ. ತೀರ್ಥಯಾತ್ರೆ.

**तीर्थरूप** (ತೀರ್ಥರೂಪ್) ಪು. ಸಂ. ತಂದೆ. ೨. ಹಿರಿಯರ ಬಗೆಗಿನ ಒಕ್ಕಣಿಕೆ.

**तीर्थस्वरूप** (ತೀರ್ಥಸ್ವರೂಪ್) ವಿ. ಸಂ. ಹಿರಿಯರಾದ (ಒಕ್ಕಣಿಕೆ)

**तीर्थाटन** (ತೀರ್ಥಾಟನ್) ನ. ಸಂ. ತೀರ್ಥಾಟನ್ ತೀರ್ಥಯಾತ್ರೆ.

**तीर्थोदक** (ತೀರ್ಥೋದಕ್) ನ. ಸಂ. ತೀರ್ಥ.

**तीव्र** (ತೀವ್ರ) ನ. ಸಂ. ತೀವ್ರವಾದ, ರಭಸದ. ೨. ಕ್ರಿ. ವಿ. ಬೇಗ.

**तीस** (ತೀಸ್) ವಿ. ಮೂವತ್ತು.

**तीळ** (ತೀಳ್) ಪು. ಎಳ್ಳು. ೨. ಮುಖದ ಮೇಲಿನ ಎಳ್ಳು. (ಕರಿಯ ಚಿಕ್ಕೆ)

**तीळगूळ** (ತೀಳ್‌ಗೂಳ್) ಪು. ಎಳ್ಳು ಬೆಲ್ಲ, ಸಂಕ್ರಾಂತಿಯ ಖಾದ್ಯ.

**तीक्ष्ण** (ತೀಕ್ಷ್ಣ) ವಿ. ಸಂ. ತೀಕ್ಷ್ಣವಾದ, ಹರಿತಾದ.

**–अंशु** (–ಅಂಶು) ಪು. ಸೂರ್ಯ.

**तुकडा** (ತುಕಡಾ) ಪು. ಚೂರು, ತುಂಡು.

**पायाचे तुकडे पडणे** (ಪಾಯಾಚೇ ತುಕಡೇ ಪಡಣೇ) ಕ್ರಿ. ಅ. ಕಾಲು ಸೋಲು, ದಣಿವಾಗು.

**तुकडा तोडून देणे** (ತುಕಡಾ ತೋಡೂನ್ ದೇಣೇ) ಕ್ರಿ. ಸ. ಅಲ್ಲಗಳೆ 'ಇಲ್ಲ' ಎನ್ನು.

**तुकडी** (ತುಕಡೀ) ಸ್ತ್ರೀ. ಗುಂಪು, ಪಂಗಡ, ತಂಡ.

**तुकतुकी** (ತುಕತುಕೀ) ಸ್ತ್ರೀ. ತೇಜಸ್ಸು, ಮಿರುಗು, ಒಳ್ಳೆಯ ನೋಟ.

**तुकतुकीत** (ತುಕತುಕೀತ್) ಕ್ರಿ. ವಿ. ಮಿರುಗುವ, ನಯವಾದ, ನುಣುಪಾದ.

**तुकविणे** (ತುಕವಿಣೇ) ಕ್ರಿ. ಸ. ಅಲಗಾಡಿಸು. ೨. ತಲೆದೂಗು.

**मान तुकविणे** (ಮಾನ್ ತುಕವಿಣೇ) ಕ್ರಿ.ಸ. ತಲೆವಾಗು, ನಮ್ರತೆ ತೋರಿಸು.

**तुच्छ** (ತುಚ್ಛ) ವಿ. ಸಂ. ನಿರುಪಯುಕ್ತ, ಹೀನ, ಕೀಳ್ತರದ.

**तुझा** (ತುಝಾ) ಸರ್ವನಾಮ, ನಿನ್ನ.

**तुटक** ತುಟಕ್) ವಿ. ಅಸಂಬದ್ಧ. ೨. ಸ್ವಲ್ಪ, ಅನಾದರದ.

**–दागणे** ( –ವಾಗಣೇ ) ಕ್ರಿ. ಅ. ನಿರಾದರ ತೋರಿಸು.

**तुटका** (ತುಟಕಾ) ಕ್ರಿ. ವಿ. ಒಡೆದ, ಚೂರಾದ, ಸೀಳಿದ.

**तुटणे** (ತುಟಣೇ) ಕ್ರಿ. ಅ. ಹರಿದುಹೋಗು, ತುಂಡಾಗು, ಹರಿ.

**तुटून पडणे** (ತುಟೂನ್ ಪಡಣೇ) ಕ್ರಿ. ಸ. ದಾಳಿ ಮಾಡು, ಆಕ್ರಮಣಮಾಡು.

**तुटपुंजा** (ತುಟಪುಂಜಾ) ವಿ. ಅಲ್ಪ, ಸ್ವಲ್ಪ.

**तुटपुंजी** (ತುಟಪುಂಜೀ) ಸ್ತ್ರೀ. ಕಡಿಮೆ, ಕೊರತೆ.

**तुटवडा** (ತುಟವಡಾ) ಪು. ಕೊರತೆ, ಕಡಿಮೆ, ತ್ರುಟಿ.

**तुडतुडणे** (ತುಡತುಡಣೇ) ಕ್ರಿ. ಸ. ಸೆಡವಿನಿಂದ ಮಾತನಾಡು, ರೇಗಿಮಾತನಾಡು.

**तुडतुडीत** (ತುಡತುಡೀತ್) ವಿ. ಚುರುಕಾದ.

**तुडतुड्या** (ತುಡತುಡ್ಯಾ) ವಿ. ಸಿಟ್ಟಿಗೇಳುವವ, ಸೆಡವಿನವ.

**तुडवणी** (ತುಡವಣೀ) ಸ್ತ್ರೀ. ತುಳಿಯುವಿಕೆ, ತುಳಿತ.

**तुडस** (ತುಡಸ್) ವಿ. ಜಗಳಗಂಟ.

**तुडुंब** (ತುಡುಂಬ್) ಕ್ರಿ. ವಿ. ಕ. (ತುಂಬ) ಪೂರ್ಣವಾಗಿ, ವಿ. ತುಂಬಿ ತುಳುಕುವ.

**तुणतुणे** (ತುಣತುಣೇ) ನ. ಒಂದೇ ತಂತಿಯುಳ್ಳ ವಾದ್ಯ.

**–लावणे** (ಲಾವಣೇ) ಕ್ರಿ. ಸ. ಕಾಡಿಸು, ಪೀಡಿಸು, ಬೇಡು.

**तुतारी** (ತುತಾರೀ) ಸ್ತ್ರೀ. ಕಹಳೆ.

**तुतिया** (ತುತಿಯಾ) ಪು. ಒಂದು ಔಷಧಿ, ತುತ್ಯ.

**तुती** (ತುತೀ) ಸ್ತ್ರೀ. ಉಪ್ಪು ನೇರಿಳೆ (ರೇಷ್ಮೆ ಹುಳಗಳ ಸಲುವಾಗಿ).

**तुपकट** (ತುಪಕಟ್) ವಿ. ತುಪ್ಪತುಪ್ಪವಾದ, ಸ್ನಿಗ್ಧ ತುಪ್ಪದಲ್ಲಿ ಕರಿದ.

**तुफान** (ತುಫಾನ್) ನ. ಅರ. ಬಿರುಗಾಳಿ, ಸೊಂಟರಗಾಳಿ. ೨. ಜಗಳ, ವಿ. – ಅತಿಶಯ, ಭಯಂಕರ.

**–खोर** (–ಖೋರ್) ವಿ. ಜಗಳಗಂಟ.

**तुंबडी** (ತುಂಬಡೀ) ಸ್ತ್ರೀ. ಕುಂಬಳಕಾಯಿ. ೨. ಭಿಕ್ಷೆಯ ಪಾತ್ರೆ.

**–भरणे** (–ಭರಣೇ) ಕ್ರಿ. ಸ. ಸಿಕ್ಕದ್ದನ್ನು ಕೈವಶ ಪಡಿಸು, ತುಂಬಿಕೊ.

**तुमचा** (ತುಮಚಾ) ಸರ್ವನಾಮ, ನಿಮ್ಮ.

**तुमान** (ತುಮಾನ್) ಸ್ತ್ರೀ. ತು. ಸಡಿಲಾದ, ಚಲ್ಲಣ, ಷರಾಯಿ.

**तुमुल** (ತುಮುಲ) ವಿ. ಸಂ. ಘನಘೋರವಾದ.

**तुम्ही** (ತುಮ್ಹೀ) ಸರ್ವನಾಮ, ನೀವು.

**तुरई** (ತುರಈ) ಸ್ತ್ರೀ. ಇಬ್ಬದಿ, ಮೊನೆಯುಳ್ಳ ಕೀಲ.

**तुरकी चाल** (ತುರಕೀ ಚಾಲ್) ಸ್ತ್ರೀ. ಸಡಗರದ ನಡತೆ.

**तुरंग** (ತುರಂಗ) ಪು. ಸಂ. ಕುದುರೆ.
**तुरंगा** (ತುರಂಗಾ) ಸ್ತ್ರೀ. ಕುದುರೆ (ಹೆಣ್ಣು)
**तुरंज** (ತುರಂಜ್) ನ. ಫಾ. ನಿಂಬೆ, ನಿಂಬೆಹಣ್ಣು.
**तुरट** (ತುರಟ್) ವಿ. ಒಗರು.
**तुरटी** (ತುರಟೀ) ಸ್ತ್ರೀ. ಪಟಕಾರ.
**तुरंत** (ತುರಂತ್) ಕ್ರಿ. ವಿ. ಹಿಂ. ಒಮ್ಮೆಲೆ, ಬೇಗ.
**तुरतुर** (ತುರತುರ್) ಕ್ರಿ. ವಿ. ಬೇಗ (ನಡೆ) ತುರು ತುರು ನಡೆ.
**तुरपणे** (ತುರಪಣೇ) ಕ್ರಿ. ಸ. ಅರಿವೆಯ ತುದಿಹಿಡಿದು ಹೊಲಿ.
**तुरंबी** (ತುರಂಬೀ) ಸ್ತ್ರೀ. ಅಂಕುರ, ಮೊಳಕೆ.
**तुरळक** (ತುರಳಕ್) ವಿ. ಅಲ್ಪ, ಸ್ವಲ್ಪ, ಕಡಿಮೆ.
**तुरा** (ತುರಾ) ಪು. ಫಾ. ತುರಾಯಿ, ಗೊನೆ.
**–लावणे** (–ಲಾವಣೇ) ಕ್ರಿ. ಸ. ದೊಡ್ಡ ಕೆಲಸ ಸಾಧಿಸು.
**तुरीय** (ತುರೀಯ) ವಿ. ಸಂ. ನಾಲ್ಕನೆಯ.
**तुरुंग** (ತುರುಂಗ್) ಪು. ಪೋ. ಜೈಯಿಲ್‌ಖಾನೆ, ಕಾರಾಗೃಹ.
**तुरुत** (ತುರುತ್) ಕ್ರಿ. ವಿ. ಬೇಗ ಬೇಗ.
**तुरुतुरु** (ತುರುತುರು) ಕ್ರಿ. ವಿ. ಬೇಗ.
**तुलई** (ತುಲಈ) ಸ್ತ್ರೀ. ಗಾದೆ, ಚಾಪೆ.
**तुलना** (ತುಲನಾ) ಸ್ತ್ರೀ. ಸಂ. ತುಲನೆ, ಪ್ರಮಾಣಿಸುವಿಕೆ.
**तुलसी** (ತುಲಸೀ) ಸ್ತ್ರೀ. ಕ. (?) ತುಳಸಿ.
**–वर तुलसीपत्र ठेवणे** (–ವರ್ ತುಲಸೀ ಪತ್ರ ಠೇವಣೇ) ಕ್ರಿ. ಸ. ಬಿಟ್ಟುಕೊಡು, ತ್ಯಜಿಸು.
**–वृन्दावन** (–ವೃಂದಾವನ್) ನ. ಸಂ. ವೃಂದಾವನ ತುಳಸಿಯ ಕಟ್ಟೆ.
**तुला** (ತುಲಾ) ಸ್ತ್ರೀ. ಸಂ. ತಕ್ಕಡಿ, ತೂಕ. ೨. ಸರ್ವನಾಮ, ನಿನಗೆ.
**तुल्य** (ತುಲ್ಯ) ವಿ. ಸಂ. ಸಮಾನ, ಏಕರೂಪ.
**–बल** (–ಬಲ್) ವಿ. ಸಮಾನ, ಶಕ್ತಿಶಾಲಿ.
**तुष** (ತುಷ) ಪು. ಸಂ. ಹೊಟ್ಟು.
**तुषार** (ತುಷಾರ) ಪು. ಸಂ. ಹನಿ, ತುಷಾರ, ಅಭಿಷೇಕ.
**तुष्ट** (ತುಷ್ಟ) ವಿ. ಸಂ. ಸಂತುಷ್ಟ.
**तुष्टि** (ತುಷ್ಟಿ) ಸ್ತ್ರೀ. ಸಂ. ಸಂತೋಷ, ಆನಂದ.
**तुसडा** (ತುಸಡಾ) ವಿ. ಗರ್ವಿಷ್ಠ, ಕಡಿಮೆ ಮಾತನಾಡುವವ.

**तुळई** (ತುಳಈ) ಸ್ತ್ರೀ. ಕ. ತೊಲೆ.
**तुळतुळीत** (ತುಳತುಳೀತ್) ವಿ. ಮಿರುಗುವ, ನುಣುಪಾದ.
**तुळवट** (ತುಳವಟ್) ನ. ದೊಡ್ಡ ತೊಲೆ.
**तुळशीपत्र** (ತುಳಶೀಪತ್ರ) ನ. ತುಳಶಿಯ ಎಲೆ.
**हलवायाचा घरावर तुळशीपत्र** (ಹಲವಾಯಾಚ್ಯಾ ಘರಾವರ್ ತುಳಶೀಪತ್ರ) ನ. ಬೇರೆಯವರ ಸೊತ್ತಿನ ವಿಷಯವಾಗಿ ಉದಾರತನ ತೋರುವಿಕೆ.
**कानात तुळशीपत्र** (ಕಾನಾತ್ ತುಳಶೀ ಪತ್ರ) ಕ್ರಿ. ವಿ. ಬೇರೆಯವರ ಕಡೆಗೆ ಅಲಕ್ಷ್ಯಮಾಡುವಿಕೆ.
**वर–ठेवणे** (ವರ್–ಠೇವಣೇ) ಕ್ರಿ.ಸ. ಆಸೆಬಿಡು, ಬಿಟ್ಟುಬಿಡು.
**–वृन्दावन** (ವೃಂದಾವನ್) ನ. ತುಳಸಿಯ ಕಟ್ಟೆ.
**तुळस** (ತುಳಸ್) ಸ್ತ್ರೀ. ತುಳಸಿ.
**भांगेत–** (ಭಾಂಗೇತ್–) ನಾಂ. ಕೆಟ್ಟವರ ಸಂಗತಿಯಲ್ಲಿದ್ದ ಒಳ್ಳೆಯ ಮನುಷ್ಯ.
**तुळा** (ತುಳಾ) ಸ್ತ್ರೀ. ತಕ್ಕಡಿ, ತೂಕ.
**तुंग** (ತುಂಗ್) ವಿ. ಸಂ. ಎತ್ತರವಾದ.
**तुंड** (ತುಂಡ) ನ. ಸಂ. ಮುಖ, ಮೋರೆ.
**तुंदील** (ತುಂದಿಲ್) ವಿ. ಸಂ. ದಪ್ಪನಾದ, ಹೊಟ್ಟೆಬಂದ.
**तुंब** (ತುಂಬ್) ನ. ಗಾಲಿಯ ಮಧ್ಯಭಾಗ.
**तुंबडी** (ತುಂಬಡೀ) ಸ್ತ್ರೀ. ಕುಂಬಳಕಾಯಿ. ೨. ಭಿಕ್ಷಾಪಾತ್ರಾ.
**तुंबणे** (ತುಂಬಣೇ) ಕ್ರಿ. ಅ. ಕ. ತುಂಬು, ತುಂಬಿ ಹೋಗು.
**तुंबळ** (ತುಂಬಳ್) ವಿ. ತುಮುಲ, ಘೋರ.
**तुंबा** (ತುಂಬಾ) ಪು. ಕುಂಬಳ ಕಾಯಿಯಿಂದಮಾಡಿದ ಪಾತ್ರೆ.
**तुंबरा** (ತುಂಬರಾ) ಪು. ತೂತು ಮುಚ್ಚುವುದರಿಂದ ಕಲೆತ ನೀರು.
**तू** (ತೂ) ಸರ್ವನಾಮ, ನೀನು.
**–मी करणे** (–ಮೀ ಕರಣೇ) ಕ್ರಿ. ಸ. ಜಗಳ ಆರಂಭಿಸು.
**तूट** (ತೂಟ್) ಸ್ತ್ರೀ. ಕೊರತೆ, ಹಾನಿ, ತ್ರುಟಿ.
**तूणीर** (ತೂಣೀರ್) ಪು. ಬತ್ತಳಿಕೆ.
**तूत** (ತೂತ್) ಸ್ತ್ರೀ. ಉಪ್ಪು ನೇರಳೆ (ರೇಷ್ಮೆ ಹುಳುಗಳಿಗಾಗಿ ಕೊಡುವ ಎಲೆ.)
**तूप** (ತೂಪ್) ನ. ಕ. ತುಪ್ಪ.

**तूर** (ತೂರ್) ಸ್ತ್ರೀ. ತೊಗರೆ, ತೊಗರೆಯ ಬೇಳೆ.

**हातावर तुरी देणे** (ಹಾತಾವರ್ ತುರೀ ದೇಣೇ) ಕ್ರಿ. ಸ. ಪಾರಾಗು, ಠಕ್ಕಿಸು.

**तूर्ण** (ತೂರ್ಣ) ಕ್ರಿ. ವಿ. ಸಂ. ಒಮ್ಮೆಲೇ, ಬೇಗ.

**तूर्त** (ತೂರ್ತ) ಕ್ರಿ. ವಿ. ಸದ್ಯಕ್ಕೆ, ಸದ್ಯದ ಮಟ್ಟಿಗೆ.

**तूर्ततूर्त** (ತೂರ್ತಾತೂರ್ತ) ಕ್ರಿ. ವಿ. ಸದ್ಯಕ್ಕೆ.

**तूल** (ತೂಲ್) ಪು. ಸಂ. ಅರಳೆ, ಹತ್ತಿ.

**तूष्णीम** (ತೂಷ್ಣೀಮ್) ಕ್ರಿ. ವಿ. ಸಂ. ಸುಮ್ಮನೆ ಮಾತನಾಡದೆ.

**तूस** (ತೂಸ್) ನ. ಹೊಟ್ಟು, ಸಿಪ್ಪೆ.

**तूळ** (ತೂಳ್) ಸ್ತ್ರೀ. ತುಲಾರಾಶಿ, ತಕ್ಕಡಿ, ತುಲನೆ.

**तृण** (ತೃಣ) ನ. ಸಂ. ಹುಲ್ಲು.

**दांती –धरणे** (ದಾಂತೀ– ಧರಣೇ) ಕ್ರಿ. ಅ. ಅಜ್ಞಾಧಾರಕನಾಗಿರು.

**–धान्य** (–ಧಾನ್ಯ) ನ. (ಅಕ್ಕಿ, ಜೋಳ, ಗೋದಿ ಮುಂತಾದ) ತೃಣಧಾನ್ಯಗಳು.

**–वत्** (–ವತ್) ಕ್ರಿ. ವಿ. ಹುಲ್ಲಿನಂತೆ ಕಃಪದಾರ್ಥವಾದ.

**तृणांकुर** (ತೃಣಾಂಕುರ) ಪು. ಹುಲ್ಲಿನ ಅಂಕುರ.

**तृणोपजीवी** (ತೃಣೋಪಜೀವೀ) ವಿ. ಹುಲ್ಲು ಮೇಯುವ ಪ್ರಾಣಿಗಳು.

**तृतीय** (ತೃತೀಯ) ವಿ. ಮೂರನೆಯ.

**–नेत्र** (–ನೇತ್ರ) ನ. ಸಂ. ಸಿಟ್ಟು, ಕೋಪ.

**–पंथ** (–ಪಂಥ) ಪು. ಸಂ. ರೂಢಿಯ ವಿರುದ್ಧವಾದ ವರ್ತನ.

**–पुरुष** (–ಪುರುಷ) (ವ್ಯಾಕರಣ) ಪ್ರಥಮಪುರುಷ.

**–सवन** (ಸವನ್) ನ. ಸಂ. ಉಚ್ಚಸ್ವರ.

**तृतीया** (ತೃತೀಯಾ) ಸ್ತ್ರೀ. ಪಂಚಾಂಗ) ಶುಕ್ಲ ಕೃಷ್ಣ ಪಕ್ಷದ ಮೂರನೆಯ ದಿನ.

**तृप्त** (ತೃಪ್ತ) ವಿ. ಸಂ. ತೃಪ್ತಿಹೊಂದಿದ, ಸಂತುಷ್ಟ.

**तृप्ति** (ತೃಪ್ತಿ) ಸ್ತ್ರೀ. ಸಂ. ಸಂತೋಷ, ತೃಪ್ತಿ.

**तृषा** (ತೃಷಾ) ಸ್ತ್ರೀ. ಸಂ. ನೀರಡಿಕೆ. ೨. ಆಸೆ, ದುರಾಸೆ.

**तृषाकुल** (ತೃಷಾಕುಲ) ವಿ. ನೀರಡಿಕೆಯಿಂದ ಬಳಲುವವ.

**तृषाक्रांत** (ತೃಷಾಕ್ರಾಂತ್) ವಿ. ವಿಶೇಷ ನೀರಡಿಕೆಯಾದವ.

**तृषार्त** (ತೃಷಾರ್ತ) ವಿ. ಸಂ. ನೀರಡಿಕೆಯಿಂದ ಬಳಲುವವ.

**तृषित** (ತೃಷಿತ) ವಿ. ಸಂ. ನೀರಡಿಕೆಯಾದವ.

**तृष्णा** (ತೃಷ್ಣಾ) ಸ್ತ್ರೀ. ಸಂ. ನೀರಡಿಕೆ.

**तेज** (ತೇಜ) ನ. ತೇಜಸ್ಸು, ಹೊಳಪು.

**तेजगी** (ತೇಜಗೀ) ವಿ. ಹೊಳಪುಳ್ಳ.

**तेजःपुंज** (ತೇಜಃಪುಂಜ) ವಿ. ಸಂ. ಬಹಳ ಹೊಳೆಯುವ, ತೇಜಸ್ವಿ.

**तेजस्वी** (ತೇಜಸ್ವೀ) ವಿ. ಸಂ. ತೇಜಸ್ವಿ, ಹೊಳೆಯುವ.

**तेजाब** (ತೇಜಾಬ್) ಪು. ಫಾ. ತೇಜಾಪು, ದಾಹಕ ಆಮ್ಲ.

**तेजाळ** (ತೇಜಾಳ್) ವಿ. ತೇಜಸ್ಸುಳ್ಳ, ಹೊಳೆಯುವ.

**तेजी** (ತೇಜೀ) ಸ್ತ್ರೀ. ಫಾ. ಉದಯ, (ಸಟ್ಟಾ ವ್ಯವಹಾರದಲ್ಲಿಯ) ಬೆಲೆಯ ಬೆಳವಣಿಗೆ.

**–मंदी** (–ಮಂದೀ) ಸ್ತ್ರೀ. ಹಿಂ. ಸಟ್ಟಾ ವ್ಯವಹಾರದಲ್ಲಿಯ ಬೆಲೆಗಳ ಏರಿಳಿತ.

**तेजोभंग** (ತೇಜೋಭಂಗ್) ಪು. ಅಪಮಾನ, ದುರದೃಷ್ಟ.

**तेजोमय** (ತೇಜೋಮಯ) ವಿ. ಸಂ. ತೇಜಸ್ಸುಳ್ಳ, ಹೊಳೆಯುವ.

**तेजोवृध्दि** (ತೇಜೋವೃದ್ಧಿ) ಸ್ತ್ರೀ. ತೇಜಸ್ಸು ಬೆಳೆಯುವಿಕೆ.

**तेजोहानि** (ತೇಜೋಹಾನಿ) ಸ್ತ್ರೀ. ತೇಜ ಕಡಿಮೆಯಾಗುವಿಕೆ. ೨. ಅಪಮಾನ, ಅಪಕೀರ್ತಿ.

**तेढ** (ತೇಢ್) ಸ್ತ್ರೀ. ಜಗಳ, ವೈಮನಸ್ಯ, ಹಟ, ಹಗೆತನ.

**तेढा** (ತೇಢಾ) ವಿ. ಡೊಂಕ, ಸೊಟ್ಟ.

**तेथवर** (ತೇಥವರ್) ಕ್ರಿ. ವಿ. ಅಲ್ಲಿಯವರೆಗೆ.

**तेथे** (ತೇಥೇ) ಕ್ರಿ. ವಿ. ಅಲ್ಲಿ.

**तेधवा** (ತೇಧವಾ) ಕ್ರಿ. ವಿ. ಆಗ.

**तेरडा** (ತೇರಡಾ) ಪು. ಮಲ್ಲಿಗೆಯ ಹಾಗೆ ಕಾಣುವ ಹೂ.

**तेरडचाचा रंग तीन दिवस** (ತೇರಡ್ಯಾಚಾ ರಂಗ್ ತೀನ್ ದಿವಸ್) ನಾಣ್ನುಡಿ ಕೃತಕ ಸೌಂದರ್ಯವು ತಾಳುವುದಿಲ್ಲ.

**तेरवा** (ತೇರವಾ) ಕ್ರಿ. ವಿ. ಮೊನ್ನೆ.

**तेरस** (ತೇರಸ್) ಸ್ತ್ರೀ. ತ್ರಯೋದಶಿ.

**तेरा** (ತೇರಾ) ವಿ. ಹದಿಮೂರು.

**–बारा** (–ಬಾರಾ) ಪು. ಜಗಳ, ಕದನ, ಹಗೆತನ.

**तेरावा** (ತೇರಾವಾ) ವಿ. ಹದಿಮೂರನೆಯ.

**दुष्काळात-महिना** (ದುಷ್ಕಾಳಾತ್ – ಮಹಿನಾ) ನಾಣ್ಣುಡಿ, ಕೆಟ್ಟ ಪರಿಸ್ಥಿತಿಯಲ್ಲಿ ಬರುವ ಹೆಚ್ಚಿನ ಸಂಕಟ.

**तेरीज** (ತೇರಿಜ್) ನ. ಹಿಂ. ಒಟ್ಟು ಲೆಕ್ಕ, ಲೆಕ್ಕದ ಒಟ್ಟುಮಿತಿ, ಒಟ್ಟು ರಕಮಿನಪಟ್ಟಿ.

**तेरीमेरी** (ತೇರೀಮೇರೀ) ಸ್ತ್ರೀ. ಜಗಳ, ಬೈಗಳು.

**तेरीमेरी वर येणे** (ತೇರೀಮೇರಿ ವರ್ ಯೇಣೇ) ಕ್ರಿ. ಸ. ಜಗಳಾಡು, ಬೈಯ್ಯಿ.

**तेल** (ತೇಲ್) ನ. ಸಂ. ಎಣ್ಣೆ, ತೈಲ.

**तेलकट** (ತೇಲ್‌ಕಟ್) ವಿ. ಎಣ್ಣೆ ಬಸಿಯುವ, ಕರಿದ (ಪದಾರ್ಥ)

**तेलकटणे** (ತೇಲ್‌ಕಟಣೇ) ಕ್ರಿ. ಅ. ಎಣ್ಣೆ ಎಣ್ಣೆ ಯಾಗು, ಜಿಡ್ಡಾಗು ೨. ಕರಿದ ಪದಾರ್ಥದಲ್ಲಿ ಎಣ್ಣೆ ಹೆಚ್ಚಾಗು.

**तेलंगण** (ತೇಲಂಗಣ್) ನ. ತೇಲಂಗ, ಆಂಧ್ರಪ್ರದೇಶ, ತೆಲುಗುದೇಶ.

**तेलंगी** (ತೇಲಂಗೀ) ವಿ. ತೆಲುಗು ಮಾತನಾಡುವವ, ತೆಲುಗು ದೇಶದವ. ೨. (ಲಾ) ಆಮಂತ್ರಣವಿಲ್ಲದೆ ಊಟಕ್ಕೆ ಬರುವವ, (ದಾನದ ವಿಷಯದಲ್ಲಿ ಕಾಡುವವ)

**तेलघडी** (ತೇಲ್‌ಘಡೀ) ಸ್ತ್ರೀ. ಎಣ್ಣೆಯಲ್ಲಿ ತೋಯಿಸಿದ ಅರಳೆ, ಬತ್ತಿ.

**तेलघाणा** (ತೇಲ್‌ಘಾಣಾ) ಪು. ಎಣ್ಣೆಯ ಗಾಣ.

**तेलतवा** (ತೇಲ್‌ತವಾ) ಪು. ಕರಿಯುವ ಕಬ್ಬಿಣ ಹಂಚು, ತವೆ.

**तेलफळ** (ತೇಲ್‌ಫಳ್) ನ. ಮದುವೆಯ ಮುಂಚೆ, ವರಪಕ್ಷದ ವತಿಯಿಂದ ವಧುವಿನ ಮನೆಗೆ ಕಳಿಸಿಕೊಡುವ, ಎಣ್ಣೆ, ತೆಂಗಿನಕಾಯಿ, ಬಟ್ಟೆ ಮುಂತಾದ ಉಡುಗರೆಗಳು.

**तेलवात** (ತೇಲ್‌ವಾತ್) ಸ್ತ್ರೀ. ದೀಪದ ವ್ಯವಸ್ಥೆ, ಬತ್ತಿ ಎಣ್ಣೆ ಮುಂತಾದ ಕೆಲಸ.

**तेलवाला** (ತೇಲ್‌ವಾಲಾ) ಪು. ಎಣ್ಣೆ ಮಾರುವವ.

**तेली** (ತೆಲೀ) ಪು. ಗಾಣಿಗ, ಎಣ್ಣೆ ಮಾರುವವ.

**तेलीण** (ತೇಲೀಣ್) ಸ್ತ್ರೀ. ಗಾಣಗಿತ್ತಿ.

**तेलितांबोळी** (ತೇಲಿತಾಂಬೋಳೀ) ಪು. ಸಮಾಜದಲ್ಲಿಯ ಸಣ್ಣಪುಟ್ಟ ವ್ಯವಸಾಯ ಮಾಡುವವರು.

**तेल्या** (ತೇಲ್ಯಾ) ವಿ. ಜಿಗಟಾದುದರಿಂದ, ಹೊಳೆಯುವ ಜಿಡ್ಡಾದ.

**तेवढा** (ತೇವಢಾ) ವಿ. ಅಷ್ಟು.

**तेवणे** (ತೇವಣೇ) ಕ್ರಿ. ಅ. ದೀಪ ಉರಿಯುವಿಕೆ.

**तेवीस** (ತೇವೀಸ್) ವಿ. ಇಪ್ಪತ್ತುಮೂರು.

**तेंव्हा** (ತೇವ್ಹಾ) ಕ್ರಿ. ವಿ. ಆಗ.

**-पासून** (-ಪಾಸೂನ್) ಅವ್ಯಯ. ಆಗಿನಿಂದ, ಆ ಹೊತ್ತಿನಿಂದ.

**तेहतीस** (ತೇಹತೀಸ್) ವಿ. ಮೂವತ್ತು ಮೂರು.

**तैनात** (ತೈನಾತ್) ಸ್ತ್ರೀ. ಅರ. ತೊತ್ತು, ಊಳಿಗ. ೨. ಸಿಬ್ಬಂದಿ ೩. ವಿ. ನಿಯಮಿಸಿದ, ಸಂಬಳಕೊಟ್ಟ.

**-राखणे** (-ರಾಖಣೇ) ಕ್ರಿ. ಅ. ಸೇವೆಮಾಡು, ಹಾಜರಾಗು.

**तैनाती फौज** (ತೈನಾತೀ ಫೌಜ್) ಸ್ತ್ರೀ. ಅರ. ನಿಯಮಿತ, ಸೈನ್ಯ.

**तैलंगण** (ತೈಲಂಗಣ್) ನ. **तेलंगण** ನೋ.

**तैल** (ತೈಲ್) ನ. ಸಂ. ಎಣ್ಣೆ.

**-बुध्दि** (-ಬುದ್ಧಿ) ಸ್ತ್ರೀ. ಚತುರುಕುತನ. ವಿ. ಬುದ್ಧಿ ಶಾಲಿ.

**तैसा** (ತೈಸಾ) ವಿ. ಆ ಬಗೆಯ.

**तैक्ष्ण्य** (ತೈಕ್ಷ್ಣ್ಯ) ನ. ಸಂ. ತೀಕ್ಷ್ಣತೆ, ಹರಿತತನ.

**तोक** (ತೋಕ್) ಪು. ಸಂ. ಮಗು, ಕೂಸು.

**तोकडा** (ತೋಕಡಾ) ವಿ. ಗಿಡ್ಡ. ೨. ಸಾಲದ, ಹಾಳತವಲ್ಲದ.

**तोटा** (ತೋಟಾ) ಪು. ಹಾನಿ, ನಷ್ಟ, ಲುಕ್ಸಾನಿ.

**तोटयाची बाब** (ತೋಟ್ಯಾಚೀ ಬಾಬ್) ಸ್ತ್ರೀ. ಹಾನಿಯ ವ್ಯವಹಾರ.

**तोटी** (ತೋಟೀ) ಸ್ತ್ರೀ. ನಳ, ನಲ್ಲಿ. ೨. ಕೀಲಿಯ ಕೈ.

**तोड** (ತೋಡ್) ಸ್ತ್ರೀ. ಉಪಾಯ, ಯುಕ್ತಿ, ಯಂತ್ರ, ನಿರ್ವಾಹ.

**तोडगा** (ತೋಡಗಾ) ಪು. ಕ. ತೊಡಕಿನ ಪರಿಹಾರ, ಸಮಸ್ಯೆಯನ್ನು ಬಗೆಹರಿಸುವಿಕೆ.

**तोडणी** (ತೋಡಣೀ) ಸ್ತ್ರೀ. ಕಡಿತ, ಕೊಯ್ಲು.

**तोडणे** (ತೋಡಣೇ) ಕ್ರಿ. ಸ. (ಗಿಡ ಮುಂ.ಗಳನ್ನು) ಕಡಿ, ಕೊಯ್ಯಿ.

**तोडा** (ತೋಡಾ) ಪು. ಹಿಂ. ಹಮ್ಮಿಣಿ. ೨. ಹಗ್ಗ. ೩. ಮುಂಗೈಯ ಆಭರಣ. ೪. ಬಂದೂಕಿನ ಕೀಲಿ.

**तोडयाची बंदूक** (ತೋಡ್ಯಾಚೀ ಬಂದೂಕ್) ಸ್ತ್ರೀ. ಯಾಂತ್ರಿಕ, ಕೀಲಿಯುಳ್ಳ ಬಂದೂಕು.

**तोडातोड** (ತೋಡಾತೋಡ್) ಸ್ತ್ರೀ. ಸಂ. ಕಡಿತ, ಸಂಹಾರ.

**तोडीव** (ತೋಡೀವ್) ವಿ. ಕಡಿತ, ಕಡಿದುಮಾಡಿದ.

**तोतया** (ತೋತಯಾ) ಪು. ನಟಿಸುವವ, ಬೇರೊಬ್ಬನ ಹೆಸರು ತನ್ನದೆಂದು ಹೇಳಿ ಮೋಸಗೊಳಿಸುವವ.

**तोतरा** (ತೋತರಾ) ವಿ. ತೊದಲುಮಾತನಾಡುವವ.

**तोता** (ತೋತಾ) ಪು. ಫಾ. ಗಿಳಿ, ಗಿಣಿ.

**तोफ** (ತೋಫ್) ಸ್ತ್ರೀ. ತು. ತೋಪು.

**–खाना** (–ಖಾನಾ) ಪು. ತೋಪಿನಸೈನ್ಯ, ತೋಪುಇಡುವ ಭಾಗ.

**तोबरा** (ತೋಬರಾ) ಪು. ಫಾ. ಕುದುರೆಗೆ ತಿನಿಸುವುದಕ್ಕಾಗಿ ಕಟ್ಟುವ ಚೀಲ. ೨. ತಿನ್ನುವಾಗ ತುಂಬಿದ ಮುಖ.

**–भरणे** (–ಭರಣೇ) ಕ್ರಿ. ಸ.ಬಾಯಲ್ಲಿ ತುಂಬಿಕೊ.

**तोबा** (ತೋಬಾ) ಪು. ಅರ. ಪಶ್ಚಾತ್ತಾಪ. ಅ. ಅಯ್ಯಯ್ಯಾ, **–तोबा** (–ತೋಬಾ) ಅಯ್ಯಯ್ಯೋ.

**तोमर** (ತೋಮರ್) ಪು. ಕಬ್ಬಿಣದ ಗದೆ, ಸಲಾಕಿ.

**तोय** (ತೋಯ) ನ. ಸಂ. ನೀರು.

**तोयद** (ತೋಯದ್) ಪು. ಸಂ. ಅಭ್ರ, ಮೋಡ.

**तोरडचा** (ತೋರಡ್ಯಾ) ಸ್ತ್ರೀ. ಬಹುವ. ಕಾಲಿನ ಸರಪಳಿ, ಗೆಜ್ಜೆಯ ಸರಪಳಿ, ಪೈಜಣ.

**तोरण** (ತೋರಣ್) ನ. ಸಂ. ತೋರಣ,ಎಲೆ,ಹೂವಿನ ಮಾಲೆ, ಪ್ರವೇಶ ದ್ವಾರಕ್ಕೆ ಕಟ್ಟಿದ ಮಾಲೆ.

**तोरा** (ತೋರಾ) ಪು. ಸೊಕ್ಕು, ದಿಮ್ಮಾಕ, ಬಿಂಕ, ಹೆಮ್ಮೆ.

**तोल** (ತೋಲ್) ಪು. ತೂಕ, ಜೋಲಿ, ಮೈಜೋಲಿ. ದೇಹಸ್ಥೈರ್ಯ.

**–सांभाळणे** (–ಸಾಂಭಾಳಣೆ) ಕ್ರಿ. ಸ. ದೇಹವನ್ನು ಸ್ಥಿರವಾಗಿಡು.

**तोलणे** (ತೋಲಣೇ) ಕ್ರಿ. ಸ. ತೂಕಮಾಡು, ತೂಗು. ೨. ತುಲನೆ ಮಾಡು.

**तोलास तोल** (ತೋಲಾಸ್ ತೋಲ್) ವಿ. ತುಲ್ಯಬಲ ಶಾಲಿ.

**तोलाचा** (ತೋಲಾಚಾ) ವಿ. ಸಮಸ್ಥಿತಿಯ ಒಂದೇ ತರಗತಿಯ.

**तोशीस** (ತೋಶೀಸ್) ವಿ. ಫಾ. ಜಿಗುಪ್ಸೆ, ತೊಂದರೆ, ಕಷ್ಟ.

**तोष** (ತೋಷ್) ಪು. ಆನಂದ ಸುಖ.

**तोषण** (ತೋಷಣ್) ನ. ಆನಂದವನ್ನುಂಟುಮಾಡುವ ಸಂಗತಿ. ೨. ದಾನ, ಸೇವೆ ಮುಂ. ಉಪಚಾರ.

**तोषदान** (ತೋಷದಾನ್) ನ.ಸಂ. ಮೆಚ್ಚುಗೆ, ಮೆಚ್ಚಿ ಕೊಟ್ಟ ದಾನ.

**तोसदान** (ತೋಸ್‌ದಾನ್) ನ. ಫಾ. ಕಾರ್ತೂಸು, ಮದ್ದುಗುಂಡುಗಳ, ಚೀಲ.

**तोहमत** (ತೋಹಮತ್) ಸ್ತ್ರೀ. ಅರ. ಸಂಶಯ, ಅಪರಾಧದ ಆರೋಪಣೆ.

**तोळा** (ತೋಳಾ) ಪು. ತೊಲೆ, ತೊಲೆಯಷ್ಟು ತೂಕ.

**–मासा** (–ಮಾಸಾ) ವಿ. ಬಹಳ ಕೋಮಲ ಪ್ರಕೃತಿ. ತಟ್ಟನೆ ಬೇನೆಬೀಳುವ ಪರಿಸ್ಥಿತಿ.

**तोंड** (ತೋಂಡ್) ನ. ಮುಖ, ಬಾಯಿ, ಮೋರೆ.

**–आंबट करणे** (ಆಂಬಟ ಕರಣೇ) ಕ್ರಿ. ಅ. ಅಸಂತೋಷವನ್ನು ವ್ಯಕ್ತಗೊಳಿಸು.

**–उतरणे** (–ಉತರಣೇ) ಕ್ರಿ. ಅ. ಮೋರೆ ಇಳಿ, ಕಷ್ಟವಾಗು.

**–करून बोलणे** (–ಕರೂನ್ ಬೋಲಣೇ) ಕ್ರಿ. ಸ. ಉದ್ಧತತನದಿಂದ ಮಾತನಾಡು.

**–काळे करणे** (ಕಾಳೇ ಕರಣೆ) ಕ್ರಿ.ಅ. ಓಡಿಹೋಗು, ಮೋರೆ ತಪ್ಪಿಸು.

**–चुकवणे** (–ಚುಕವಣೇ) ಕ್ರಿ. ಅ. ಮೋರೆತಪ್ಪಿಸು, ಗುರ್ತುಹಿಡಿಯದಿರು.

**–टाकणे** (–ಟಾಕಣೇ) ಕ್ರಿ. ಅ. ಅಪಮಾನವಾಗುವಂತೆ ಮಾತನಾಡು.

**–दाबणे** (–ದಾಬಣೇ) ಕ್ರಿ. ಅ. ಬಾಯಿಯನ್ನು ಬಿಗಿ. ೨. ಲಂಚಕೊಡು.

**–दिसणे** (–ದಿಸಣೇ) ಕ್ರಿ. ಅ. ಅಪಕೀರ್ತಿ ಬರು, ಕೆಟ್ಟ ಹೆಸರು ಬರು.

**–लागणे** (–ಲಾಗಣೇ) ಕ್ರಿ. ಅ. ಪ್ರಾರಂಭವಾಗು, ಹೊಡು.

**–वाजवणे** (–ವಾಜವಣೇ) ಕ್ರಿ. ಸ. ಒಂದೇ ಸವನೆ ಮಾತನಾಡು.

**–वेंगाडणे** (–ವೇಂಗಾಡಣೇ) ಕ್ರಿ. ಸ. (ಬಿಕ್ಕೆ) ಬೇಡು, ನಮ್ರತನದಿಂದ ಕೋರು.

**–सांभाळणे** (–ಸಾಂಭಾಳಣೆ) ಕ್ರಿ. ಸ. ಜೋಕೆಯಿಂದ ಮಾತನಾಡು.

**–सुख घेणे** (–ಸುಖ ಘೇಣೇ) ಕ್ರಿ. ಸ. (ಮನಸ್ಸಿಗೆ ಬಂದಂತೆ, ಅವಿಚಾರದಿಂದ) ಮಾತನಾಡು, ಆಡಿಕೊ.

**–सोडणे** (–ಸೋಡಣೇ) ಕ್ರಿ. ಅ. ಅವಿಚಾರದಿಂದ ಮಾತನಾಡು.

**–तोंडचे पाणी पळणे** (ತೋಂಡಚೆ ಪಾಣೀ ಪಳಣೇ) ಕ್ರಿ. ಅ. ಗಾಬರಿಯಾಗು.

**तोंडचा घास हिरावून घेणे** (ತೋಂಡಚಾ ಘಾಸ್ ಹಿರಾವೂನ್ ಘೇಣೇ) ಕ್ರಿ.ಸ. ವೃತ್ತಿ ಭೇದಮಾಡು, ಹೊಟ್ಟೆಗೆ ಸಿಗದ ಹಾಗೆ ಮಾಡು.

**तोंडची गोष्ट नाही** (ತೋಂಡಚೀ ಗೋಷ್ಟ್ ನಾಹೀ) ನಾಣ್ಣುಡಿ. ಬರಿ ಮಾತಿನ ವಿಷಯವಲ್ಲ.

**तोंडाचा पट्टा सुटणे** (ತೋಂಡಾಚಾ ಪಟ್ಟಾ ಸುಟಣೇ) ಕ್ರಿ.ಸ. ಬಯ್ಯು, ಬಿರುಸು ಮಾತನಾಡು.

**तोंडाची वाफ घालवणे** (ತೋಂಡಾಚೀ ವಾಫ್ ಘಾಲವಣೇ) ಕ್ರಿ. ಸ. ವ್ಯರ್ಥವಾಗಿ ಮಾತನಾಡು.

**तोंडाला पाने पुसणे** (ತೋಂಡಾಲಾ ಪಾನೇ ಪುಸಣೇ) ಕ್ರಿ. ಸ. ಮೋಸಗೊಳಿಸು. ೨. ಅಲ್ಲಗಳೆ, ೩. ನಿರಾಕರಿಸು.

**तोंडात बोटे घालणे** (ತೋಂಡಾತ್ ಬೋಟೇ ಘಾಲಣೇ) ಕ್ರಿ. ಸ. ಆಶ್ಚರ್ಯವನ್ನು ವ್ಯಕ್ತ ಗೊಳಿಸು.

**तोंडाशी तोंड देणे** (ತೋಂಡಾಶೀ ತೋಂಡ್ ದೇಣೇ) ಕ್ರಿ. ಸ. ಸರಿಸಮಾನನಂತೆ ಮಾತನಾಡು, (ಉದ್ಧತವಾಗಿ) ಮಾತನಾಡು.

**तोंड आटोपणे** (ತೋಂಡ್ ಆಟೋಪಣೇ) ಕ್ರಿ. ಅ. ಬಾಯಿ ಮುಚ್ಚು, ಸುಮ್ಮನಿರು.

**तोंड उष्टे करणे** (ತೋಂಡ್ ಉಷ್ಟೇ ಕರಣೇ) ಕ್ರಿ.ಸ. ಕಡಿದುಕೊ. ೨. ತಿನ್ನು, ನಾಮ ಮಾತ್ರ ಭೋಜನ ಮಾಡು.

**तोंड घालणे** (ತೋಂಡ್ ಘಾಲಣೇ) ಕ್ರಿ. ಸ. ನಡು ನಡುವೆ ಮಾತನಾಡು.

**तोंड पडणे** (ತೋಂಡ್ ಪಡಣೇ) ಕ್ರಿ.ಅ. ಪ್ರಾರಂಭ ವಾಗು, ಮುಖಮುದ್ರೆ ಇಳಿ.

**तोंड बांधणे** (ತೋಂಡ್ ಬಾಂಧಣೇ) ಕ್ರಿ. ಸ. ಮಾತನಾಡದಂತೆ ಮಾಡು.

**तोंड देणे** (ತೋಂಡ್‌ದೇಣೇ) ಕ್ರಿ. ಸ. ಎದುರಿಸು, ಅನುಭೋಗಿಸು.

**–वाईट करणे** (–ವಾಈಟ್ ಕರಣೇ) ಕ್ರಿ. ಸ. ಅಸ ಮಾಧಾನವನ್ನು ವ್ಯಕ್ತಪಡಿಸು.

**–वाईट होणे** (–ವಾಈಟ್ ಹೋಣೇ) ಕ್ರಿ. ಅ. ಬಾಯಿಗೆ ರುಚಿಯಿಲ್ಲದಾಗು.

**–वासणे** (–ವಾಸಣೇ) ಕ್ರಿ. ಅ. ಬೆರಗಾಗು, ಬೆಪ್ಪ ನಾಗು.

**–विचकणे** (–ವಿಚಕಣೇ) ಕ್ರಿ. ಸ. ಅಣಕಾಡಿಸು, ಪರಿಹಾಸಮಾಡು.

**–कोरडे पडणे** (–ಕೋರಡೇ ಪಡಣೇ) ಕ್ರಿ. ಅ. ನೀಕಡಿಕೆಯಾಗು.

**तोंडाचा तोफा खाता सुटणे** (ತೋಂಡಾಚಾ ತೋಫ್ ಖಾನಾ ಸುಟಣೇ) ಕ್ರಿ. ಅ. ಒಂದೇ ಸವನೆ ಮಾತ ನಾಡು. ೨. ಬಯ್ಯು. ಬಿರುಸು ಮಾತನಾಡು.

**तोंडात खाणे** (ತೋಂಡಾತ್ ಖಾಣೇ) ಕ್ರಿ. ಅ. ಹೊಡೆತ ತಿನ್ನು, ಚಪರಾಕಿ ತಿನ್ನು.

**तोंडात मारून घेणे** (ತೊಂಡಾತ್ ಮಾರೂನ್ ಘೇಣೆ) ಕ್ರಿ. ಸ. ಪಶ್ಚಾತ್ತಾಪ ವ್ಯಕ್ತಗೊಳಿಸು.

**तोंडावर थुंकणे** (ತೊಂಡಾವರ್ ಥುಂಕಣೇ) ಕ್ರಿ.ಸ. ತಿರಸ್ಕಾರವನ್ನು ವ್ಯಕ್ತಗೊಳಿಸು, ಬಾಯಿಯ ಮೇಲೆ ಉಗಳು.

**तोंडावर पदर घेणे** (ತೋಂಡಾವರ್‌ಪದರ ಘೇಣೇ) ಕ್ರಿ. ಸ. ಮುಖವನ್ನು ಮುಚ್ಚಿಕೊ. ೨. ಲಜ್ಜಿತ ನಾಗು, ನಾಚಿಕೆ ತೋರಿಸು.

**तोंडावर मारणे** (ತೋಂಡಾವರ್ ಮಾರಣೇ) ಕ್ರಿ. ಸ. ಹೊಡೆ, ತಾಡನಮಾಡು.

**तोंडावरुन हात फिरवणे** (ತೋಂಡಾವರೂನ್ ಹಾತ್ ಫಿರವಣೇ) ಕ್ರಿ. ಸ. ಸಮಾಧಾನ ಹೇಳು. ೨. ಮೋಸಗೊಳಿಸು.

**तोंडी तृण धरणे** (ತೋಂಡೀ ತೃಣ ಧರಣೇ) ಕ್ರಿಸ. ಆಜ್ಞಾಧಾರಕನಾಗಿರು. ೨. ಶರಣುಹೋಗು.

**लहान तोंडी मोठा घास घेणे** (ಲಹಾನ್ ತೋಂಡೀ ಮೋಠಾ ಘಾಸ್ ಘೇಣೆ) ಕ್ರಿ. ಸ. ಸಾಮಾನ್ಯನಿದ್ದು ಗಂಭೀರ ವಿಷಯದಲ್ಲಿ ಮಾತನಾಡು.

**तोंड पसरणे** (ತೋಂಡ್ ಪಸರಣೇ) ಕ್ರಿ. ಸ. ಬೇಡು, ಬಿಕ್ಕೆಬೇಡು.

**तोंड ओळख** (ತೋಂಡ್ ಓಳಖ್) ಸ್ತ್ರೀ. ಅಲ್ಪ ಪರಿಚಯ.

**तोंडघशी** (ತೋಂಡ್‌ಘಶೀ) ಕ್ರಿ.ವಿ. ತಲೆ ಕೆಳಗಾಗಿ.

**तोंडघशी पाडणे** (ತೋಂಡ್ ಘಶೀ ಪಾಡಣೇ) ಕ್ರಿ. ಸ. ಠಕ್ಕಿಸು, ವಂಚಿಸು, ದ್ರೋಹಮಾಡು.

**तोंडचे हिशोब** (ತೋಂಡಚೇ ಹಿಶೋಬ್) ಪು. ಬಹು ವ. ಬರಿಯ ಮಾತು.

**तोंड देखले** (ತೋಂಡ್ ದೇಖಲೇ) ಕ್ರಿ. ವಿ. ಭೇಟಿ ಯಾದಾಗ. ೨. ಮುಖಸ್ತುತಿಯಂತೆ.

**तोंड पाटीलकी** (ತೋಂಡ್ ಪಾಟೀಲಕೀ) ಸ್ತ್ರೀ. ಅಧಿಕಾರವಿಲ್ಲದೆ ಆಜ್ಞಾಪಿಸು.

**तोंडपाठ** (ತೋಂಡ್‌ಪಾಠ್) ಕ್ರಿ.ವಿ. ಬಾಯಿಪಾಠ.

**तोंडपाठ-करणे** (ತೋಂಡ್‌ಪಾಠ್-ಕರಣೇ) ಕ್ರಿ. ಸ. ಬಾಯಿಪಾಠಮಾಡು.

**तोंडपालट** (ತೋಂಡ್‌ಪಾಲಟ್) ಪು. ಆಹಾರದಲ್ಲಿಯ ಬದಲಾವಣೆ, ರುಚಿ ಬದಲಾಯಿಸುವಿಕೆ.

**तोंडापिटी** (ತೋಂಡ್ ಪಿಟೀ) ಸ್ತ್ರೀ. ವ್ಯರ್ಥವಾದ ಮಾತುಕತೆ.

**तोंडमारा** (ತೋಂಡ್‌ಮಾರಾ) ಪು. ಮಾತಾಡಲಿಕ್ಕೆ ಅನುವಿಲ್ಲದಿರುವಿಕೆ, ಅಂಕುಶ.

**तोंड मिळवणी** (ತೋಂಡ್ ಮಿಳವಣೀ) ಸ್ತ್ರೀ. ಲೆಕ್ಕವನ್ನು ಕೂಡಿಸಿಕೊಳ್ಳುವಿಕೆ, ತಪಾಸು. ೨. ಆಯ, ವ್ಯಯ ಇವುಗಳ ಸಂತುಲನ.

**तोंडली** (ತೋಂಡಲೀ) ಸ್ತ್ರೀ. ತೊಂಡೆಯ ಗಿಡ.

**तोंडले** (ತೊಂಡಲೇ) ನ. ತೊಂಡೆಯ ಕಾಯಿ.

**तोंडवळा** (ತೋಂಡವಳಾ) ಪು. ಮುಖಮುದ್ರೆ, ಮೋರೆಯ ಆಕಾರ.

**तोंडसुख** (ತೋಂಡ್ ಸುಖ್) ನ. ಮನಸ್ಸಿಗೆಬಂದಂತೆ ಮಾತಾಡುವಿಕೆ, ಹಳಿಯುವಿಕೆ, ಧಿಕ್ಕಾರ.

**-घेणे** (-ಘೇಣೇ) ಕ್ರಿ. ಸ. ಹಳಿ, ದೂರು, ಬಯ್ಯಿ.

**तोंडातोंडी** (ತೋಂಡಾತೋಂಡೀ) ಸ್ತ್ರೀ. ಜಗಳ, ವ್ಯಾಜ್ಯ.

**तोंडाळ** (ತೋಂಡಾಳ್) ವಿ. ಬಾಯಿ ಬಡಕ, ಬಿರುಸು ಮಾತನಾಡುವವ, ಬಯ್ಯುವವ.

**तोंडी** (ತೋಂಡೀ) ವಿ. ಬಾಯಿಮಾತಿನ, ಮೌಖಿಕ.

**-परीक्षा** (-ಪರೀಕ್ಷಾ) ಮೌಖಿಕ ಪರೀಕ್ಷೆ.

**तोंडी लावणे** (ತೋಂಡೀ ಲಾವಣೇ) ನ. ವ್ಯಂಜನ ಪದಾರ್ಥ, ಬಾಡಿಸಿಕೊಳ್ಳುವ ಪದಾರ್ಥ.

**तोवर** (ತೋವರ್) ಕ್ರಿ. ವಿ. ಅಲ್ಲಿಯ ವರೆಗೆ.

**तोवरी** (ತೋವರೀ) ಸ್ತ್ರೀ. ಸಣ್ಣ ಸಸಿ.

**त्याग** (ತ್ಯಾಗ್) ಪು. ಸಂ ಬಿಟ್ಟುಬಿಡುವಿಕೆ, ತ್ಯಾಗ.

**त्यागणे** (ತ್ಯಾಗಣೇ) ಕ್ರಿ. ಸ. ಬಿಟ್ಟುಬಿಡು, ತ್ಯಜಿಸು.

**त्यागपत्र** (ತ್ಯಾಗಪತ್ರ) ನ. ಸಂ. ರಾಜೀನಾಮೆ, ಪದತ್ಯಾಗ.

**त्यागी** (ತ್ಯಾಗೀ) ವಿ. ಸಂ. ತ್ಯಾಗಮಾಡುವವ, ಸಾಧು, ನಿರಂಜನ.

**त्याज्य** (ತ್ಯಾಜ್ಯ) ವಿ. ಸಂ. ಬಿಟ್ಟುಬಿಡುವಂತಹದು, ತ್ಯಾಜ್ಯವಾದುದು.

**त्रपा** (ತ್ರಪಾ) ಸ್ತ್ರೀ. ಸಂ. ನಾಚಿಕೆ, ಲಜ್ಜೆ.

**त्रय** (ತ್ರಯ) ನ. ಸಂ. (ಮೂರು) ಮೂರರ ಗುಂಪು, ಮೂರು ಮಂದಿ, ಮುಕ್ಕೂಟ, ಮೂರು ವಸ್ತುಗಳ ಸಮಾಹಾರ.

**त्रयस्थ** (ತ್ರಯಸ್ಥ) ವಿ. ಸಂ. ಮೂರನೆಯವ, ಅಪಕ್ಷ.

**त्रयी** (ತ್ರಯೀ) ಸ್ತ್ರೀ. ಸಂ. ಮುಕ್ಕೂಟ, ಮೂರರ ಗುಂಪು.

**त्रयोदश** (ತ್ರಯೋದಶ) ವಿ. ಸಂ. ಹದಿಮೂರು.

**त्रयोदशी** (ತ್ರಯೋದಶೀ) ಸ್ತ್ರೀ. ಸಂ. (ಪಂಚಾಂಗ) ಶುಕ್ಲ, ಕೃಷ್ಣ ಪಕ್ಷಗಳಲ್ಲಿಯ ಹದಿಮೂರನೆಯ ತಿಥಿ.

**त्रस्त** (ತ್ರಸ್ತ) ವಿ. ಸಂ. ದಣಿದ, ಸಂಕಟದಲ್ಲಿದ್ದ, ಗಾಬರಿಯಾದ.

**त्रागा** (ತ್ರಾಗಾ) ಪು. ಸಿಟ್ಟು, ಸೆಡವು.

**त्राटिका** (ತ್ರಾಟಿಕಾ) ಸ್ತ್ರೀ. ಸಂ. ಕೆಟ್ಟ ಸ್ವಭಾವದ ಹೆಂಡತಿ.

**त्राण** (ತ್ರಾಣ) ಪು. ಸಂ. ಶಕ್ತಿ, ಸಾಮರ್ಥ್ಯ. ೨. ಸಂರಕ್ಷಣೆ.

**त्राता** (ತ್ರಾತಾ) ಪು. ಸಂ. ರಕ್ಷಣ ಕರ್ತ, ಪಾರು ಮಾಡುವವ.

**त्रास** (ತ್ರಾಸ್) ಪು. ಜಿಗುಪ್ಸೆ, ತೊಂದರೆ, ಪೀಕಲಾಟ. ೨. ಕಾಟ, ದುರ್ವರ್ತನೆ, ಪೀಡೆ.

**-देणे** (-ದೇಣೇ) ಕ್ರಿ. ಸ. ಕಾಡಿಸು, ಪೀಡಿಸು.

**त्रासणे** (ತ್ರಾಸಣೇ) ಕ್ರಿ. ಅ. ಬೇಜಾರಾಗು, ಬೇಸರಪಡು, ಜಿಗುಪ್ಸೆಯಾಗು.

**त्रासवणे** (ತ್ರಾಸವಣೇ) ಕ್ರಿ. ಸ. ಪೀಡಿಸು, ಕಾಡು, ರೊಚ್ಚಿಗೆಬ್ಬಿಸು.

**त्रासिक** (ತ್ರಾಸಿಕ್) ವಿ. ಸಿಟ್ಟಿಗೇಳುವವ, ಬೇಜಾರು ತೋರಿಸುವವ.

**त्राहि त्राहि** (ತ್ರಾಹಿ ತ್ರಾಹಿ) (ಸಂಬೋಧನೆ) ದೇವರೇ ಕಾಪಾಡು.

**त्रिकाल** (ತ್ರಿಕಾಲ) ವಿ. ಮೂರು ಕಾಲಗಳಿಗೆ ಅನ್ವಯಿಸುವ. ಪು. ೨. ಮೂರು ಹೊತ್ತುಗಳು.

**-ज्ञ, दर्शी** (-ಜ್ಞ, ದರ್ಶೀ) ವಿ. ಹಿಂದಿನ, ಈಗಿನ, ಮುಂದಿನ ಸಂಗತಿಗಳನ್ನು ಅರಿಯುವವ.

**त्रिकाळ** (ತ್ರಿಕಾಳ್) ಪು. ಮೂರು ಸಮಯಗಳು ಮುಂಜಾನೆ, ಮಧ್ಯಾಹ್ನ ಮತ್ತು ಸಂಜೆ.

**तीन्ही-** (ತೀನ್ಹೀ-) ಕ್ರಿ. ವಿ. ಯಾವಾಗಲೂ.

**त्रिकूट** (ತ್ರಿಕೂಟ್) ನ. ಸಂ. ಮುಕ್ಕೂಟ, ಮೂರರ ತಂಡ. ೨. ಮೂರು ಶಿಖರಗಳುಳ್ಳ ಪರ್ವತ.

**त्रिकोण** (ತ್ರಿಕೋಣ್) ನ. ಸಂ. ತ್ರಿಕೋಣ.

**–मिति** (–ಮಿತಿ) ಜ್ಯಾಮೆಟ್ರಿ, ತ್ರಿಕೋಣಮಿತಿ.

**त्रिखंड** (ತ್ರಿಖಂಡ್) ನ. ಸಂ. ಮೂರು ಲೋಕಗಳು. (ಸ್ವರ್ಗ, ಮೃತ್ಯ, ಪಾತಾಳ)

**त्रिगुण** (ತ್ರಿಗುಣ) ಪು. ಸಂ. (ಸತ್ವ, ರಜ, ತಮ, ಈ) ಮೂರು ಗುಣಗಳು.

**त्रिघात** (ತ್ರಿಘಾತ್) ಪು. ಸಂ. ಒಂದು ಸಂಖ್ಯೆಯನ್ನು ಅದರಿಂದಲೇ ಮೂರು ಸಲ ಗುಣಿಸಿದರೆ ಬರುವ ಸಂಖ್ಯೆ (ಕ್ಯೂಬ್)

**त्रिज्या** (ತ್ರಿಜ್ಯಾ) ಸ್ತ್ರೀ. ಸಂ. ತ್ರಿಜ್ಯೆ (ರೇಡಿಯಸ್)

**त्रिताल** (ತ್ರಿತಾಲ್) ಪು. ಸಂ. ತ್ರಿತಾಳ.

**त्रिदंडी** (ತ್ರಿದಂಡೀ) ವಿ. ಸಂ. ದೇಹ, ಮಾತು ಮನಸ್ಸುಗಳನ್ನು ಸ್ವಾಧೀನಪಡಿಸಿಕೊಂಡವ. ಪು. ಸಾಧು, ಸನ್ಯಾಸಿ. ೨. ಕೃತಕ ಸಾಧು.

**त्रिदश** (ತ್ರಿದಶ) ಪು. ಸಂ. ದೇವತೆ.

**त्रिदळ** (ತ್ರಿದಳ್) ವಿ. ಮೂರು ದಳಗಳುಳ್ಳ (ಎಲೆ)

**त्रिदोश** (ತ್ರಿದೋಷ) ಪು. ಸಂ. (ಕಫ, ವಾತ, ಪಿತ್ತ ಈ) ಮೂರು ದೋಷಗಳು.

**त्रिधा** (ತ್ರಿಧಾ) ಕ್ರಿ. ವಿ. ಮೂರು ಬಗೆಯಿಂದ ಮೂರು ಸಲ.

**त्रिनयन** (ತ್ರಿನಯನ) ಪು. ಸಂ. ಮುಕ್ಕಣ್ಣ, ಶಿವ.

**त्रिपद** (ತ್ರಿಪದ) ವಿ. ಮೂರು ಕಾಲುಳ್ಳ, ತ್ರಿಪದಿ.

**त्रिपाद** (ತ್ರಿಪಾದ್) ಪು. ಸಂ. ಅಗ್ನಿ, ಬೆಂಕಿ.

**त्रिपुटी** (ತ್ರಿಪುಟೀ) ಸ್ತ್ರೀ. (ಕರ್ತ, ಕರ್ಮ, ಕ್ರಿಯೆ, ಈ) ಮೂರರ ಕೂಟ.

**त्रिपुरी पौर्णिमा** (ತ್ರಿಪುರೀ ಪೌರ್ಣಿಮಾ) ಸ್ತ್ರೀ. ಸಂ. ಕಾರ್ತೀಕ ಹುಣ್ಣಿಮೆ.

**त्रिफळा** (ತ್ರಿಫಳಾ) ಪು. (ಹರೀತಕಿ, ನೆಲ್ಲಿಯಕಾಯಿ ಮತ್ತು ಅಳಲೇಕಾಯಿ ಇವುಗಳ (ಔಷಧಿ.) ೨. (ಕ್ರಿಕೆಟ್ಟಿನಲ್ಲಿ) ಸ್ಟಂಪುಗಳು.

**–उडवणे** (–ಉಡವಣೇ) (ಚಂಡು ಎಸೆದು) ಸ್ಟಂಪುತಾಕಿ 'ಔಟ್' ಮಾಡು.

**त्रिभुवन** (ತ್ರಿಭುವನ) ನ. ಸಂ. ಮೂರು ಲೋಕಗಳು.

**त्रिमूर्ति** (ತ್ರಿಮೂರ್ತಿ) ಪು. ಸಂ. ದತ್ತಾತ್ರೇಯ. ೨. ಬ್ರಹ್ಮ, ವಿಷ್ಣು ಮಹೇಶ.

**त्रिवार** (ತ್ರಿವಾರ್) ಕ್ರಿ. ವಿ. ಮೂರು ಸಲ, ಅನೇಕ ಸಲ.

**त्रिविध** (ತ್ರಿವಿಧ) ಕ್ರಿ. ವಿ. ಮೂರುಬಗೆಯ.

**त्रिविष्टप** (ತ್ರಿವಿಷ್ಟಪ) ಪು. ಸಂ. ಸ್ವರ್ಗ. ೨. ತಿಬೇಟ್.

**त्रिवेणी** (ತಿವೇಣೀ) ಸ್ತ್ರೀ. ಮೂರು ಜಡೆಗಳುಳ್ಳವಳು. ೨. ಮೂರು ನದಿಗಳ ಸಂಗಮ ಪ್ರಯಾಗ. (ಗಂಗಾ, ಯಮುನಾ ಸರಸ್ವತೀ ಈ ಮೂರು ನದಿಗಳ ಸಂಗಮ)

**त्रिशंकु** (ತ್ರಿಶಂಕು) ವಿ. ಎರಡೂ ಬದಿಯಿಂದ ಅಸ್ಥಿರ, ನಡುವೆಯೇ ಜೋತಾಡುವವ. ೨. ಆಧಾರವಿಲ್ಲದವ.

**त्रिशिख** (ತ್ರಿಶಿಖ) ವಿ. ಮೂರು ಜ್ವಾಲೆಗಳುಳ್ಳ.

**त्रिशूळ** (ತ್ರಿಶೂಳ್) ನ. ಶಿವನ ಅಸ್ತ್ರ, ಶಸ್ತ್ರ ತ್ರಿಸೂಲ, ತ್ರಿಶೂಲ.

**त्रिस्थळी यात्रा** (ತ್ರಿಸ್ಥಳೀ ಯಾತ್ರಾ) ಸ್ತ್ರೀ. ಕಾಶಿ, ಗಯೆ, ಪ್ರಯಾಗ ಈ ಮೂರು ಕ್ಷೇತ್ರಗಳ ಯಾತ್ರೆ. ೨. (ಲಾ) ಒಂದೇ ಕೆಲಸದ ಸಲುವಾಗಿ ಮೂರು ಕಡೆಗೆ ಹೋಗುವಿಕೆ.

**त्रुटी** (ತ್ರುಟೀ) ಸ್ತ್ರೀ. ಸಂ. ನ್ಯೂನ್ಯ, ಕೊರತೆ, ಹಾನಿ.

**त्रुटित** (ತ್ರುಟಿತ) ವಿ. ಸಂ. ಹರಿದ, ಕಡಿದ.

**त्रेचाळीस** (ತ್ರೇಚಾಳೀಸ್) ವಿ. ನಾಲ್ವತ್ತುಮೂರು.

**त्रेता** (ತ್ರೇತಾ) ನ. ಸಂ. ತ್ರೇತಾಯುಗ.

**त्रेधा** (ತ್ರೇಧಾ) ಸ್ತ್ರೀ. ಗಡಬಡಿ, ಅವಸರ, ಲಗುಬಗೆ. ೨. ಅಂಜಿಕೆ, ತೋಚದಾಗುವಿಕೆ, ಫಜೀತಿ, ಪೀಕಲಾಟ.

**त्रेपन्न** (ತ್ರೇಪನ್ನ) ವಿ. ಐವತ್ತುಮೂರು.

**त्रेसष्ट** (ತ್ರೇಸಷ್ಟ) ವಿ. ಅರುವತ್ತುಮೂರು.

**त्रैगुण्य** (ತ್ರೈಗುಣ್ಯ) ನ. ಸಂ. (ಸತ್ವ, ರಜ, ತಮ ಈ) ಮೂರು ಗುಣಗಳು.

**त्रैराशिक** (ತ್ರೈರಾಶಿಕ) ನ. ಸಂ. (ಅಂಕಗಣಿತ) ತ್ರೈರಾಶಿಕ.

**त्रैलोक्य** (ತ್ರೈಲೋಕ್ಯ) ನ. ಸಂ. ಮೂರು ಲೋಕಗಳು.

**–चिंतामणी** (–ಚಿಂತಾಮಣಿ) ಪು. ಎಲ್ಲ ಚಿಂತೆಗಳನ್ನು ಬಗೆಹರಿಸುವ ಔಷಧ, ಗಣಪತಿ.

**त्रैवार्षिक** (ತ್ರೈವಾರ್ಷಿಕ) ವಿ. ಸಂ. ಮೂರು ವರ್ಷಗಳಲ್ಲಿ ಒಮ್ಮೆ ಬರುವ.

**त्रोटक** (ತ್ರೋಟಕ್) ವಿ. ಸಂ. ಅಲ್ಪ, ಸಣ್ಣ, ಚಿಕ್ಕ, ೨. ಸಾರಾಂಶದಲ್ಲಿಯ.

**त्र्यंबक** (ತ್ರ್ಯಂಬಕ್) ಪು. ಸಂ. ಮುಕ್ಕಣ್ಣ, ಶಿವ.

**त्र्याण्णव** (ತ್ರ್ಯಾಣ್ಣವ್) ವಿ. ತೊಂಬತ್ತುಮೂರು.

**त्र्यायशी** (ತ್ರ್ಯಾಯಶೀ) ವಿ. ಎಂಬತ್ತುಮೂರು.

त्याहात्तर (ತ್ಯಾಹತ್ತರ್) ವಿ. ಎಪ್ಪತ್ತುಮೂರು.

त्वक् (ತ್ವಕ್) ಸ್ತ್ರೀ. ಸಂ. ಚರ್ಮ, ತೊಗಲು.

त्वगिन्द्रिय (ತ್ವಗಿಂದ್ರಿಯ) ನ. ಸಂ. ಸ್ಪರ್ಶೇಂದ್ರಿಯ.

त्वचा (ತ್ವಚಾ) ಸ್ತ್ರೀ. ಸಂ. ಚರ್ಮ, ತೊಗಲು, ತ್ವಚೆ.

त्वदीय (ತ್ವದೀಯ) ಸರ್ವನಾಮ, ನಿನ್ನ, ನಿನ್ನದೆ, ನಿನ್ನದು.

त्वरा (ತ್ವರಾ) ಸ್ತ್ರೀ. ಸಂ. ಅವಸರ, ಲಗುಬಗೆ, ಶೀಘ್ರತೆ.

त्वरित (ತ್ವರಿತ್) ಸ್ತ್ರೀ. ಸಂ. ಅವಸರ, ಒಮ್ಮೆಲೆ, ಶೀಘ್ರವಾಗಿ.

त्वष्टा (ತ್ವಷ್ಟಾ) ಪು. (ದೇವರ) ಬಡಿಗ, ನಿರ್ಮಾತ.

त्वेष (ತ್ವೇಷ್) ಪು. ಫಾ. (ತೈಶ್) ತಿರಸ್ಕಾರ, ಸಿಟ್ಟು, ಕ್ರೋಧ.

त्वेषी (ತ್ವೇಷೀ) ವಿ. ಸಂ. ಕ್ರುದ್ಧ, ಸಿಟ್ಟಿಗೆದ್ದ.

# थ ಥ

थ– ಥ– ತ ವರ್ಗದ ಎರಡನೆಯ ಅಕ್ಷರ.

थकणे (ಥಕಣೇ) ಕ್ರಿ. ಅ. ದಣಿ, ಸೋಲು, ನಿಲ್ಲು.

थकबाकी (ಥಕ್‌ಬಾಕೀ) ಸ್ತ್ರೀ. ಮುಟ್ಟದೆ ಇದ್ದ ಸಾಲ – ಉದ್ದರಿಬಾಕಿ.

थकवा (ಥಕವಾ) ಪು. ದಣಿವು, ಆಯಾಸ.

थक्क (ಥಕ್ಕ) ವಿ. ಆಶ್ಚರ್ಯಗೊಂಡ, ಬೆರಗಾದ.

थट्टा (ಥಟ್ಟಾ) ಸ್ತ್ರೀ. ನಗೆಚಾಟಿಕೆ, ಚೇಷ್ಟೆ, ಪರಿಹಾಸ, ೨. ಸಾಮಾನ್ಯ ಕೆಲಸ.

थट्टेखोर (ಥಟ್ಟೆಖೋರ್) ವಿ. ನಗೆಮಾತುಗಳನ್ನಾಡುವವ.

थट्टेवाईक (ಥಟ್ಟೇವಾಈಕ್) ವಿ. ಚೇಷ್ಟೆಯ (ಮಾತು ಕ್ರಿ. ವಿ. ಚೇಷ್ಟೆಗೆಂದು.

थडकणे (ಥಡಕಣೇ) ಕ್ರಿ. ಅ. (ಬಂದು) ನಿಲ್ಲು, (ಮುಂದೆಬಂದು) ಹಾಜರಾಗು.

थडगे (ಥಡಗೇ) ನ. ಗೋರಿ, ಸಮಾಧಿ.

थडी (ಥಡೀ) ಸ್ತ್ರೀ. ದಂಡೆ, ತೀರ, ತಟ.

दुथडी वाहणे (ದುಥಡೀ ವಾಹಣೇ) ಕ್ರಿ. ಅ. (ನದಿಗೆ) ನೆರೆಬರು.

थप्पड (ಥಪ್ಪಡ್) ಸ್ತ್ರೀ. ಚಪರಾಶಿ, ಕೆನ್ನೆಗೆ ಏಟು.

–खाऊ (–ಖಾಊ) ವಿ. ನಿರ್ಲಜ್ಜ, ನಾಚಿಕೆಯಿಲ್ಲದವ, ಅತಿ ಆಜ್ಞಾಧಾರಕ.

थप्पी (ಥಪ್ಪೀ) ಸ್ತ್ರೀ. ಸಣ್ಣರಾಶಿ, ಗುಂಪು.

थबकट, (ಥಬಕಟ್) ವಿ. ಸಪಾಟಾದ, ಮೊಂಡ ,(ಮೂಗು)

थबकण (ಥಬಕಣ್) ಸ್ತ್ರೀ. (ಒಮ್ಮೆಲೆ ಆಯಾಸದಿಂದ ಕೂಡುವಿಕೆ.

थबकणे (ಥಬಕಣೇ) ಕ್ರಿ.ಅ. ನಿಲ್ಲು, (ಕೆಲಸ) ನಿಲ್ಲಿಸು.

थबथबणे (ಥಬಥಬಣೇ) ಕ್ರಿ. ಅ. (ಒದ್ದೆಯಿಂದ) ನೀರುಬಸಿ, ಸೋರುತ್ತಿರು.

थबथबीत (ಥಬಥಬೀತ್) ವಿ. ಒದ್ದೆಯಾದ, ಸೋರುವ.

थयथय (ಥಯಥಯ್) ಕ್ರಿ. ವಿ. ಥೈ ಥೈ (ಕುಣಿ) ೨. (ಬೇನೆಯಿಂದ) ಬಳಲು.

थयथयाट (ಥಯಥಯಾಟ್) ಪು. ಗೋಳು, ರಗಳೆ ೨. ಕುಣಿತ, ಆಡಂಬರ ೩.ಅವಸರದ ಕೆಲಸ.

थर (ಥರ್) ಪು. ಸ್ತರ, ಪದರು.

थरकाप (ಥರ್‌ಕಾಪ್) ಪು. (ಅಂಜಿಕೆಯಿಂದಾದ) ನಡುಗು, ಕಂಪನೆ.

थरथर (ಥರ್‌ಥರ್) ಕ್ರಿ. ವಿ. (ಅಂಜಿಕೆಯಿಂದ) ನಡುಗುವಿಕೆ.

थरथरणे (ಥರಥರಣೇ) ಕ್ರಿ.ಅ. ನಡುಗು, ಅಗಳಾಡು, ಅಲ್ಲಾಡು.

थरथराट (ಥರಥರಾಟ್) ಪು. ನಡುಗುವಿಕೆ, ಕಂಪ, ಕಂಪನೆ.

थरारणे (ಥರಾರಣೇ) ಕ್ರಿ. ಅ. (ಅಂಜಿಕೆ, ಆಶ್ಚರ್ಯದಿಂದ) ನಡುಗು.

थलथलीत (ಥಲಥಲೀತ್) ವಿ. ಸಡಿಲಾದ, ೨. ಕೊಬ್ಬಿದ.

थवा (ಥವಾ) ಪು. ತಂಡ, ಗುಂಪು, ಸಮೂಹ.

थंड (ಥಂಡ್) ವಿ. ತಣ್ಣನ್ನ, ತಣ್ಣಗಾದ, ೨. ಶಾಂತ ೩. ಸೋಮಾರಿ.

–गार (–ಗಾರ್) ವಿ. ಬಹಳ ತಣ್ಣನ್ನ.

थंडाई (ಥಂಡಾಈ) ಸ್ತ್ರೀ. ತಂಪು, ಶೀತ, ಶೀತಲತೆ. ೨. ಉದಾಸೀನತೆ, ನಿರುತ್ಸಾಹ, ಸೋಮಾರಿತನ. ೩. ಪಾನ್ (ಬೀಡಾ) ನಲ್ಲಿ ಹಾಕುವ ಮಸಾಲೆ.

**थंडा फराळ** (ಥಂಡ್ ಫರಾಳ್) ಪು. ನಿರಾಹಾರ, ಬರಿ ನೀರು ಕುಡಿದು ಮಾಡುವ ಉಪವಾಸ. (ರಾಯಪ್ಪ, ನಾಯಿಕರ ಫಳಾರ.)

**थंडावणे** (ಥಂಡಾವಣೇ) ಕ್ರಿ. ಅ. ತಣ್ಣಗಾಗು, ಕಡಿಮೆಯಾಗು, (ಕೆಲಸ) ನಿಂತುಹೋಗು, ಶಾಂತವಾಗು, (ಗದ್ದಲ) ಇಲ್ಲದಾಗು.

**थंडावा** (ಥಂಡಾವಾ) ಪು. ಶಾಂತತೆ,ಶೀತಲತೆ, ತಂಪು.

**थंडी** (ಥಂಡೀ) ಸ್ತ್ರೀ. ಚಳಿ, ಶೀತ.

**थंतरमंतर** (ಥಂತರ್‌ಮಂತರ್) ನ. ತೋರಿಕೆಯ ಕೆಲಸ. ಜುಲುಮೆಯ ಮಂತ್ರ. ೨. ಮೋಸ.

**थाट** (ಥಾಟ್) ಪು. ಸೊಬಗು, ಆಡಂಬರ, ಡೌಲು.

**–माट** (–ಮಾಟ್) ಪು. ಡೌಲು, ಆಡಂಬರ.

**थाटणे** (ಥಾಟಣೇ) ಕ್ರಿ. ಸ. ಸರಿಯಾಗಿ ಹಚ್ಚು, ಅಂದ ಕಾಣುವಂತೆ ರಚಿಸು. ೨. ತೆರೆ.

**दुकान–** (ದುಕಾನ್–) ಕ್ರಿ. ಸ. ಅಂಗಡಿ ತೆಗೆ.

**थाडकन्** (ಥಾಡಕನ್) ಕ್ರಿ. ವಿ. ಒಮ್ಮೆಲೆ, ವಿಚಾರ ಮಾಡದೆ.

**थातुरमातुर** (ಥಾತುರ್‌ಮಾತುರ್) ನ. ಸುಳ್ಳು ಮಂತ್ರ, ಮೋಸ, ಕುಹಕತನ.

**थान** (ಥಾನ್) ನ. ಮೊಲೆ, ಸ್ತನ, ಚೂಚುಕ.

**थाप** (ಥಾಪ್) ಸ್ತ್ರೀ. (ಬಾಗಿಲ, ತಬಲಾ ಇವುಗಳ ಮೇಲೆ) ಸಪ್ಪಳ, ಶಬ್ದ. ೨. ಸುಳ್ಳು ಮಾತು, ಬಡಾಯಿ.

**थापट** (ಥಾಪಟ್) ಸ್ತ್ರೀ. ಏಟು, ಹೊಡೆತ.

**थापटणे** (ಥಾಪಟಣೇ) ಕ್ರಿ. ಸ. (ಕುಂಬಾರನ) ಕೈಯಾಡಿಸುವಿಕೆ, (ನಾಪಿತನ) ಕತ್ತಿಯನ್ನು ಮಸೆಯುವಿಕೆ.

**थापटी** (ಥಾಪಟೀ) ಸ್ತ್ರೀ. ಏಟು,ಹೊಡೆತ. ೨. ಕುಳ್ಳು.

**थाणपणे** (ಥಾಣಪಣೇ) ಕ್ರಿ. ಸ. ನೆಲಸವು ಮಾಡು, ಅಗಲಮಾಡು.

**थापा थापी** (ಥಾಪಾ ಥಾಪೀ) ಸ್ತ್ರೀ. ಸುಳ್ಳು ಮಾತು, ಜಂಭ.

**थापी** (ಥಾಪೀ) ಸ್ತ್ರೀ. ಉಪ್ಪಾರನ (ಗಚ್ಚು ಸಮನಾಗಿ ಮಾಡುವ) ಉಪಕರಣ.

**थार** (ಥಾರ್) ಪು. ಆಧಾರ,ಅನುವು. ೨. ಸಮಂಜಸತೆ.

**थारा** (ಥಾರಾ) ಪು. ಅನುಕೂಲತೆ, ಆಧಾರ, ನೆರವು. ೨. ಆಶ್ರಯ, ಬಿಡಾರ.

**–देणे** (–ದೇಣೇ) ಕ್ರಿ. ಸಂ. ಇಂಬುಗೊಡು, ಉತ್ತೇಜನ ಕೊಡು.

**थारेपालट** (ಥಾರೇಪಾಲಟ್) ಪು. ಬಿಡಾರ ಬದಲಾಯಿಸುವಿಕೆ.

**थारोळे** (ಥಾರೋಳೇ) ನ. (ನೆತ್ತರ) ಹರಿಯುವಿಕೆ, (ರಕ್ತ ಸ್ರಾವ).

**थालीपीठ** (ಥಾಲೀಪೀಠ್) ನ. ಹಿಟ್ಟಿನಲ್ಲಿ ಉಪ್ಪು, ಕಾರ ಹಾಕಿ ಮಾಡಿದ ರೊಟ್ಟಿ, ಥಾಲೀಪೆಟ್ಟು.

**थाली** (ಥಾಲೀ) ಸ್ತ್ರೀ. ತಾಟು, ಊಟದ ಎಲೆ, ಭೋಜನ ಪಾತ್ರ.

**थाळ** (ಥಾಳ್) ಸ್ತ್ರೀ. ಕುಳ್ಳುಗಳ ರಾಶಿ. ೨. ತಟ್ಟಿ.

**थाळा** (ಥಾಳಾ) ಪು. ಊಟದ ಪಾತ್ರೆ.

**थाळी** (ಥಾಳೀ) ಸ್ತ್ರೀ. ಊಟದ ಸಣ್ಣ ಪಾತ್ರೆ.

**थांग** (ಥಾಂಗ್) ಪು. ಪತ್ತೆದಾರಿ, ಗುರುತು, ಅರಿವು. ೨. ನಿಶ್ಚಿತ ವಾಸಸ್ಥಾನ.

**–लागणे** (–ಲಾಗಣೇ) ಕ್ರಿ. ಅ. ಪತ್ತೆ ಹತ್ತು, ಕೈಯಲ್ಲಿ ಸಿಗು, ತಿಳಿದು ಬರು.

**–दोरा** (–ದೋರಾ) ಪು. ಪತ್ತೆದಾರಿ, ಹುಡುಕುವ ಆಧಾರ.

**–पत्ता** (–ಪತ್ತಾ) ಪು. ವಿಳಾಸ, ಅರಿವು, ಆಗುಹೋಗುಗಳ ಜ್ಞಾನ.

**थांबणे** (ಥಾಂಬಣೇ) ಕ್ರಿ. ಅ. ನಿಲ್ಲು, ನಿಂತುಕೊ. ೨. ತಡೆ, ದಾರಿನೋಡು.

**थांबविणे** (ಥಾಂಬವಿಣೇ) ಕ್ರಿ. ಸ. ನಿಲ್ಲಿಸು, ತಡೆದು ಹಾಕು, ಬಂದುಮಾಡು.

**थांबा** (ಥಾಂಬಾ) ಪು. (ಬಸ್ಸುಗಳ) ನಿಲ್ದಾಣ,ನಿಲ್ಲುವ ಸ್ಥಳ.

**थिजणे** (ಥಿಜಣೇ) ಕ್ರಿ. ಅ. ಹೆಪ್ಪುಗಟ್ಟು, ತಣ್ಣಗಾಗು, ಮಂಜುಗಟ್ಟು. ೨. ಅಶಕ್ತನಾಗು.

**थिजविणे** (ಥೀಜವಿಣೇ) ಕ್ರಿ. ಸ. ಮಂಜುಗಟ್ಟಿಸು, ಹೆಪ್ಪುಹಾಕು. ೨. ನಿರಾಶೆಗೊಳಿಸು.

**थिटा** (ಥಿಟಾ) ವಿ. ಕಡಿಮೆ ಅಳತೆಯ ಸಾಲದ. ೨. ಗಿಡ್ಡ, ಸಣ್ಣ.

**थिबकणे** (ಥಿಬಕಣೇ) ಕ್ರಿ. ಅ. ಹನಿಹನಿಯಾಗಿ ಬೀಳು, ಸೋರು.

**थिल्लर** (ಥಿಲ್ಲರ್) ವಿ. ಉಲಕೋಚಿ, ೨. ಅಲ್ಪಜ್ಞಾನಿ, ತೋರಿಕೆಯ ಪಂಡಿತ. ೨. ಕ್ಷುದ್ರ.

**थुईथुई** (ಥುಈಥುಈ) ಕ್ರಿ. ವಿ. ಹನಿ ಹನಿಯಾಗಿ ಬೀಳುವ (ಮಳೆ)

**थुंकणे** (ಥುಂಕಣೇ) ಕ್ರಿ. ಸ. ಉಗುಳು. ೨. ಧಿಕ್ಕರಿಸು.

**थुंकी** (ಥುಂಕೀ) ಸ್ತ್ರೀ. ಉಗುಳು.

**–झेलणे** (–ಝೇಲಣೇ) ಹೀನ ಬಗೆಯಿಂದ ಮುಖ ಸ್ತುತಿಮಾಡು.

**थूक** (ಥೂಕ್) ಸ್ತ್ರೀ. ಉಗುಳು.

**थेट** (ಥೇಟ್) ಕ್ರಿ. ವಿ. ನೇರವಾಗಿ, ಸೀಧಾ, ೨. ವಿ. ನೇರವಾದ.

**थेर** (ಥೇರ್) ಪು. ಹುಡುಗಾಟಿಕೆ, ಚೇಷ್ಟೆ.

**–थेर करणे** (–ಥೇರ ಕರಣೇ) ಅನುಚಿತವಾಗಿ ವರ್ತಿಸು.

**थेरडा** (ಥೇರಡಾ) ಪು. ಮುದುಕ ತಿರಸ್ಕಾರ ತೋರಿಸುವ ಶಬ್ದ)

**थेंब** (ಥೇಂಬ್) ಪು. ಹನಿ.

**थेंबे थेंबे तळे साचे** (ಥೇಂಬೇ ಥೇಂಬೇ ತಳೇ ಸಾಚೇ) ನಾಣ್ಣುಡಿ. ಹನಿ ಹನಿ ಕೂಡಿ ಹಳ್ಳ ಹರಿಯುತ್ತದೆ.

**थैथयाट** (ಥೈಥಯಾಟ್) ಪು. ಕುಣಿದಾಟ,ಗೊಂದಲ, ಗುದುಮುರಿಗೆ.

**थैमान** (ಥೈಮಾನ್) ನ. ಒದರಾಟ,ಚೀರಾಟ,ಗದ್ದಲ, ಅವ್ಯವಸ್ಥೆ. ೨. ಅಸಹ್ಯ ವರ್ತನೆ.

**थैला** (ಥೈಲಾ) ಪು. ಚೀಲ.

**थैली** (ಥೈಲೀ) ಸ್ತ್ರೀ. ಸಣ್ಣಚೀಲ, ಕೈಚೀಲ,ಹಮ್ಮಿಣಿ, ಸೊತ್ತು.

**–शहा** (–ಶಹಾ) ಪು. ರೊಕ್ಕಸ್ಥ, ಸಾವಕಾರ.

**थोकडा** (ಥೋಕಡಾ) ವಿ. ಸಣ್ಣ, ಚಿಕ್ಕ. ೨. ಸಾಲದ, ಕಡಿಮೆ ಅಳತೆಯ:

**थोटका, थोटा** (ಥೋಟಕಾ, ಥೋಟಾ) (ವಿ) ಕೈಯಿಲ್ಲದವ, ಹೆಳವ, ಬೆರಳುಗಳಿಲ್ಲದವ.

**थोट्टक** (ಥೋಟುಕ್) ನ. ಬೀಡಿ ಸಿಗರೇಟುಗಳನ್ನು ಸೇದಿದ ಮೇಲೆ ಉಳಿದ ತುಂಡು.

**थोडका, थोडा** (ಥೋಡಕಾ, ಥೋಡಾ) ವಿ.ಅಲ್ಪ,ಸ್ವಲ್ಪ, ಕಡಿಮೆ.

**थोडक्यांत** (ಥೋಡಕ್ಯಾತ್) ಕ್ರಿ. ವಿ. ಸ್ವಲ್ಪದರಲ್ಲಿ, ಸಾರಾಂಶವಾಗಿ.

**थोडा थोडका** (ಥೋಡಾ ಥೋಡಕಾ) ವಿ. ಅಲ್ಪಸ್ವಲ್ಪ.

**थोडा थोडा** (ಥೋಡಾ ಥೋಡಾ) ಕ್ರಿ. ವಿ. ಸ್ವಲ್ಪ ಸ್ವಲ್ಪ, ಕಡಿಮೆಯಾಗಿ.

**जीव–होणे** (ಜೀವ–ಹೋಣೇ) ಕ್ರಿ. ಅ. ಚಿಂತೆ ಹತ್ತು, ಯೋಚನೆಯಾಗು.

**थोडाफार, थोडाबहुत** (ಥೋಡಾಫಾರ್, ಥೋಡಾ ಬಹುತ್) ಕ್ರಿ. ವಿ. ಅಲ್ಪಸ್ವಲ್ಪ, ಸ್ವಲ್ಪದ ಮಟ್ಟಿಗೆ.

**थोतांड** (ಥೋತಾಂಡ್) ನ. ಸೋಗು, ಆಡಂಬರ, ತಿರುಳಿಲ್ಲದ ಕೆಲಸ.

**–मत** (–ಮತ್) ನಾಸ್ತಿಕತೆ.

**थोतांडी–थोतांडचा** (ಥೋತಾಂಡೀ, ಥೋತಾಂಡ್ಯಾ) ವಿ. ಕೃತಕ ಧರ್ಮಪ್ರಚಾರಕ, ನಾಸ್ತಿಕ.

**थोप** (ಥೋಪ್) ಸ್ತ್ರೀ. ಮುಗಿತಾಯ, ಕೊನೆ, ನಿಲ್ಲುವಿಕೆ.

**थोपटणे** (ಥೋಪಟಣೇ) ಕ್ರಿ. ಸ. ಚಪ್ಪರಿಸು, ಮನವೊಲಿಸು. ೨. (ಕೂಸನ್ನು ಮಲಗಿಸಲಿಕ್ಕೆ) ಚುಚ್ಚುಬಡಿ, ನಿದ್ದೆ ಬರಿಸು.

**थोपणे** (ಥೋಪಣೇ) ಕ್ರಿ. ಅ. ನಿಲ್ಲು, ನಿಶ್ಚಲವಾಗಿ ನಿಲ್ಲು.

**थोपविणे** (ಥೋಪವಿಣೇ) ಕ್ರಿ.ಸ. ನಿಲ್ಲಿಸು, ತಡೆಮಾಡು.

**थोपवा थोपवी** (ಥೋಪವಾ ಥೋಪವೀ) ಸ್ತ್ರೀ. ಒಬ್ಬರಿಗೊಬ್ಬರು ತಡೆಯನ್ನುಂಟು ಮಾಡುವಿಕೆ, ಪರಸ್ಪರ ತಡೆ.

**थोबाड** (ಥೋಬಾಡ್) ನ. ಗಲ್ಲ, ಬಾಯಿ (ತಿರಸ್ಕಾರದ ಶಬ್ದ).

**–फोडणे** (–ಫೋಡಣೇ) ಕ್ರಿ. ಸ. ಚಪರಾಕಿ ಕೊಡು, ಹೊಡೆ.

**थोबडीत देणे** (ಥೋಬಾಡೀತ್ ದೇಣೆ) ಕ್ರಿ. ಸ. ಕೆನ್ನೆಯ ಮೇಲೆ ಹೊಡೆ.

**थोबाडणे** (ಥೋಬಾಡಣೇ) ಕ್ರಿ. ಅ. ಸ. ಚಪರಾಕಿ ಕೊಡು, ಕೆನ್ನೆಗೆ ಹೊಡೆ.

**थोर** (ಥೋರ್) ವಿ. ದೊಡ್ಡ, ಹಿರಿಯ, ಶ್ರೇಷ್ಠ, ಕೀರ್ತಿವಂತ.

**थोरला** (ಥೋರಲಾ) ವಿ. ಹಿರಿಯ, ದೊಡ್ಡವ, ಜ್ಯೇಷ್ಠ.

**थोरवी** (ಥೋರವೀ) ಸ್ತ್ರೀ. ಶ್ರೇಷ್ಠತೆ, ದೊಡ್ಡತನ.

**थोराई** (ಥೋರಾಈ) ಸ್ತ್ರೀ. ಶ್ರೇಷ್ಠತೆ, ಘನತೆ.

**थोराड** (ಥೋರಾಡ್) ವಿ. (ಮೈಕಟ್ಟಿನಿಂದ) ದೊಡ್ಡವ ಎತ್ತರವಾಗಿ ಬೆಳೆದವ.

**थोरा मोठचांचा** (ಥೋರಾ ಮೋಠ್ಯಾಂಚಾ) ವಿ. ದೊಡ್ಡ ಮನೆತನದವ.

# द ದ

द ದ 'ತ' ವರ್ಗದ ಮೂರನೆಯ ಅಕ್ಷರ.

**दऊत** (ದಊತ್) ಸ್ತ್ರೀ. ಮಸಿಯ ಪಾತ್ರೆ, ದೌತಿ, ಇಂಕ್‌ಪಾಟ್.

**दखल** (ದಖಲ್) ಸ್ತ್ರೀ. ಅರ. ಅವಲೋಕನ. ೨. ಪ್ರವೇಶ.

**–घेणे** (–ಘೇಣೇ) ಕ್ರಿ. ಸಂ. ಉಲ್ಲೇಖಿಸು, ಜ್ಞಾಪಕ ದಲ್ಲಿಡು.

**–गिरी** (–ಗಿರೀ) ಸ್ತ್ರೀ- ಪರಿಚಯ, ಗುರುತು.

**दगड** (ದಗಡ್) ಪು. ಕಲ್ಲು.

**दगडावरची रेघ** (ದಗಡಾವರಚೀ ರೇಘ್) ಖಂಡಿತ ಮಾತು.

**दगडापेक्षा वीट मऊ** (ದಗಡಾ ಪೇಕ್ಷಾ ವೀಟ್ ಮಊ) ನಾಣ್ನುಡಿ. ಕಲ್ಲಿಗಿಂತ ಇಟ್ಟಂಗಿ ಮೆತ್ತಗೆ. (ಅತಿ ಕೆಟ್ಟ ವಸ್ತುವಿಗಿಂತ ಮಧ್ಯಮ ವಸ್ತು ಲೇಸು)

**दगड टाकून पाहणे** (ದಗಡ್ ಟಾಕೂನ್ ಪಾಹಣೇ) ಕ್ರಿ. ಸಂ. ಪರೀಕ್ಷೆ ಮಾಡಿನೋಡು.

**दगडाची छाती** (ದಗಡಾಚೀ ಛಾತೀ) ಸ್ತ್ರೀ. ಸಾಹಸ, ಧೈರ್ಯ.

**दगडाखाली हात सापडणे** (ದಗಡಾಖಾಲೀ ಹಾತ್ ಸಾಪಡಣೇ) ಕ್ರಿ. ಸಂ. ಕುತ್ತಿನಲ್ಲಿ ಸಿಗು, ಸಂಕಟ ದಲ್ಲಿರು.

**–फूल** (–ಫೂಲ್) ನ. ಕಲ್ಲಿನ ಮೇಲಿನ ಬುರುಸು.

**–फेक** (–ಫೇಕ್) ಕಲ್ಲ ಎಸೆತ.

**–फोड** (–ಫೋಡ್) ಸ್ತ್ರೀ. ಕಠಿಣ ಕೆಲಸ.

**दगडाळ** (ದಗಡಾಳ್) ವಿ. ಕಲ್ಲುಮಯ, ಕಲ್ಲು ತುಂಬಿದ.

**दगडी** (ದಗಡೀ) ಸ್ತ್ರೀ. ವಿ. ಕಲ್ಲುಪರಟಿ, ಕಲ್ಲಿನಪಾತೆ, ಕಲ್ಲಿನ, ಪ್ರಸ್ತರ.

**–सुपारी** (–ಸುಪಾರೀ) ಸ್ತ್ರೀ. ಕಲ್ಲಡಿಕೆ.

**दगदग** (ದಗ್‌ದಗ್) ಸ್ತ್ರೀ. ಶ್ರಮ, ಆಯಾಸ.

**दगल** (ದಗಲ್) ಸ್ತ್ರೀ. ಅರ. ಮೋಸ, ದ್ರೋಹ.

**–बाज** (–ಬಾಜ್) ವಿ. ಮೋಸಗಾರ, ವಂಚಕ.

**–बाजी** (–ಬಾಜೀ) ಸ್ತ್ರೀ. ಮೋಸ, ವಂಚನೆ.

**दगा** (ದಗಾ) ಪು. ತು. ಮೋಸ, ದ್ರೋಹ.

**–बाजी** (–ಬಾಜೀ) ಸ್ತ್ರೀ. ಮೋಸ.

**दगावणे** (ದಗಾವಣೇ) ಕ್ರಿ. ಅ. ಸಾಯು, ಮಡಿ.

**दगेखोर** (ದಗೇಖೋರ್) ವಿ. ತು. ಮೋಸಗಾರ, ವಂಚಕ, ಕುಚೋದ್ಯದ.

**दग्ध** (ದಗ್ಧ) ವಿ. ಸುಟ್ಟ, ಸುಟ್ಟುಹೋದ.

**–योग** (–ಯೋಗ್) ಪು. ಅಶುಭ ಸಮಯ.

**दचक** (ದಚಕ್) ಸ್ತ್ರೀ. ಬೆದರಿಕೆ, ಅಂಜಿಕೆ.

**दचकणे** (ದಚಕಣೇ) ಕ್ರಿ. ಅ. ಅಂಜು, ಹೌಹಾರಿ ಬೀಳು.

**दचका** (ದಚಕಾ) ಪು. ಅಂಜಿಕೆ- ೨. ಆಘಾತ.

**दटावणी** (ದಟಾವಣೀ) ಸ್ತ್ರೀ. ಬೆದರಿಸುವಿಕೆ, ಅಂಜಿಸು ವಿಕೆ.

**दटावणे** (ದಟಾವಣೇ) ಕ್ರಿ. ಸಂ. ಅಂಜಿಸು.

**दट्टचा** (ದಟ್ಯಾ) ಪು. ಮುಚ್ಚಳ, ಬೂಚು. ೨. ನಿರ್ಭತ್ಸನ, ಸಿಟ್ಟು ಮಾಡುವಿಕೆ.

**–भरणे** (–ಭರಣೇ) ಕ್ರಿ. ಸಂ. ಸಿಟ್ಟುಮಾಡು, ಬಯ್ಯಿ.

**दडणे** (ದಡಣೇ) ಕ್ರಿ. ಅ. ಅಡಗಿ ಕೂಡು, ಅಡಗು.

**दडदडीत** (ದಡದಡೀತ್) ವಿ. ಬಿರುಸಾದ, ಹುರುಕು ಬರುಕಾದ.

**दडपण** (ದಡಪಣ್) ನ. ಒತ್ತಾಯ, ಒತ್ತಡ, ಜುಲುಮೆ.

**दडपणे** (ದಡಪಣೇ) ಕ್ರಿ. ಸ. ಒತ್ತಿಕ್ಕು, ಹತ್ತಿಕ್ಕು, ದಬ್ಬು, ಒತ್ತು.

**दडपशाही** (ದಡಪಶಾಹೀ) ಸ್ತ್ರೀ. ಜುಲುಮೆ, ದಬ್ಬಾಳಿಕೆ.

**दडपश्चमे** (ದಡಪಶ್ಚಮೇ) ಕ್ರಿ. ವಿ. ನಿಜ, ಸುಳ್ಳು ಈ ಬಗೆಯ ವಿಚಾರ ಮಾಡದೆ (ಮಾತನಾಡು).

**दडपादडपी** (ದಡಪಾದಡಪೀ) ಸ್ತ್ರೀ. (ನಿಜಸಂಗತಿಯನ್ನು) ಹತ್ತಿಕ್ಕುವಿಕೆ, ತಿಳಿಯಗೊಡದಿರುವಿಕೆ.

**दडविणे** (ದಡವಿಣೇ) ಕ್ರಿ. ಸ. ಮುಚ್ಚಿಡು, ಬಚ್ಚಿಡು, ಅಡಗಿಸು.

**दडस** (ದಡಸ್) ವಿ. ತುಂಬಾ, ಪೂರ್ಣ, ಬೇಕಾದಷ್ಟು.

**दडा** (ದಡಾ) ಪು. ತಡೆ, ಅಡ್ಡಿ.

**–बसणे** (–ಬಸಣೇ) (ಕಿವಿಯಲ್ಲಿ) ಭಾರವಾಗು, ಕಿವಿ ಮಂದವಾಗು.

**दडी** (ದಡೀ) ಸ್ತ್ರೀ. ಅಡಗಿ ಕೂಡುವಿಕೆ.

**–देणे** (–ದೇಣೇ) ಕ್ರಿ. ಅ. ಅಡಗಿಕೂಡು.

**दणकट** ( ದಣಕಟ್ ) ವಿ. ಗಟ್ಟಿಮುಟ್ಟಿಯಾದ, ತಾಳುವ.

**दणका** (ದಣಕಾ) ಪು. ಏಟು. ೨. ಅರ್ಭಾಟ. ೩. ಗುದ ಮುರಿಗೆ. ೪. ಗೊಂದಲ.

**दणक्याचे लग्न** (ದಣಕ್ಯಾಚೇ ಲಗ್ನ) ನ. ಪು. ಸಡ ಗರದ ಮದುವೆ.

**दणकावणे** (ದಣಕಾವಣೇ) ಕ್ರಿ. ಸ. ಎಚ್ಚರಿಸು, ಎಚ್ಚರಿಕೆ ಕೊಡು, ಸಿಟ್ಟುಮಾಡು.

**दणदणणे** (ದಣದಣಣೇ) ಅ. ಸಪ್ಪಳವಾಗು, ಕೋಲಾಹಲವಾಗು.

**दणदणाट** ( ದಣದಣಾಟ್ ) ಪು. ಕೋಲಾಹಲ, ಗೊಂದಲ, ಗದ್ದಲ, ಸಪ್ಪಳ.

**दणाणणे** (ದಣಾಣಣೇ) ಕ್ರಿ. ಅ. ಅಂಜಿಕೆಯಾಗು.

**धाबे–** (ಧಾಬೇ–) ಬೆದರಿಕೆಯಾಗು.

**दणादण** (ದಣಾದಣ್) ಕ್ರಿ. ವಿ. ಸಪ್ಪಳಮಾಡಿ (ಅಪ್ಪಳಿಸು).

**दत्त** (ದತ್ತ) ವಿ. ಸಂ. ಕೊಟ್ಟ. ೨. ದತ್ತಾತ್ರೇಯ.

**–म्हणून उभा राहणे** ( – ಮ್ಹಣೂನ್ ಉಭಾ ರಾಹಣೇ) ಕ್ರಿ. ಅ. (ಅನಪೇಕ್ಷಿತವಾಗಿ) ಮುಂದೆ ಬಂದು ನಿಲ್ಲು.

**दत्तक** (ದತ್ತಕ್) ವಿ. ಸಂ. ದತ್ತಕ ತೆಗೆದುಕೊಂಡ. ೨. ಪು. ದತ್ತಕ ಮಗ.

**दत्तजयंती** ( ದತ್ತಜಯಂತೀ ) ಸ್ತ್ರೀ. ಸಂ. ಮಾರ್ಗಶೀರ್ಷ ಹುಣ್ಣಿವೆ.

**दत्तपत्र** (ದತ್ತಪತ್ರ) ಪು. ದತ್ತಕಕೊಟ್ಟ ಪತ್ರ.

**दत्तात्रय** (ದತ್ತಾತ್ರಯ) ಪು. ದತ್ತಾತ್ರೇಯ ದೇವರು.

**ददात** (ದದಾತ್) ಸ್ತ್ರೀ. ಸಂ. (ದಧಾತು ನಃ) ಕೊರತೆ. ೨. ಬಡತನ.

**दधि** (ದಧಿ) ನ. ಸಂ. ಮೊಸರು.

**–कुल्या** (ಕುಲ್ಯಾ) ಸ್ತ್ರೀ. ಸಮೀಚೀನ ಊಟ.

**दनुज** (ದನುಜ) ಪು. ರಾಕ್ಷಸ.

**दपकावणे** (ದಪಕಾವಣೇ) ಕ್ರಿ.ಸ. ಬೆದರಿಸು, ಎಚ್ಚರಿಸು.

**दपटणे** (ದಪಟಣೇ) ಕ್ರಿ. ವಿ. ಬೆದರಿಸು. ೨. ಬುದ್ಧಿಗಲಿಸು.

**दपटशा** (ದಪಟಶಾ) ಸ್ತ್ರೀ. ಎಚ್ಚರಿಕೆ, ಅಂಜಿಸುವಿಕೆ.

**धाक–** (ಧಾಕ್–) ಎಚ್ಚರಿಗೆ, ಚೇತಾವಣಿ.

**दप्तर** (ದಪ್ತರ್) ನ. ಫಾ. ಹೊತ್ತಿಗೆ, ಲೆಕ್ಕಪತ್ರ, ಲೇಖಸಂಗ್ರಹ, ಆಲೇಖ.

**–दार** (–ದಾರ್) ಪು. ಬರೆಹಗಾರ.

**–खाना** (–ಖಾನಾ) ಪು. ಲೇಖನೆಯ ಕಚೇರಿ.

**दफन** (ದಫನ) ನ. ಹುಗಿಯುವಿಕೆ.

**दबकणे** (ದಬಕಣೇ) ಕ್ರಿ. ಅ. ಅಂಜು, ಆಜ್ಞಾಧಾರಕನಾಗು.

**दबकावणी** (ದಬಕಾವಣೀ) ಸ್ತ್ರೀ. ಎಚ್ಚರಿಕೆ ಕೊಡುವಿಕೆ, ನಿರ್ಭರ್ತ್ಸನ.

**दबकावणे** (ದಬಕಾವಣೇ) ಕ್ರಿ. ಸ. ಜಬರಿಸು.

**दबडका** (ದಬಡಕಾ) ಪು. ಬಹಳ ಮಂದಿ ಅತಿಥಿಗಳು ಬರುವಿಕೆ.

**दबणे** (ದಬಣೇ) ಕ್ರಿ. ಅ. ನಮ್ರನಾಗು, ಮಾತು ಕೇಳು.

**दबदबा** (ದಬದಬಾ) ಪು. ವರ್ಚಸ್ಸು. ೨. ಬೆದರಿಕೆ.

**दबदबीत** (ದಬದಬೀತ್) ವಿ. ಮೆತ್ತನ್ನ, ಹಾವಸೆಯಾದ.

**दबवणे** (ದಬವಣೇ) ಕ್ರಿ. ಸ. ವರ್ಚಸ್ಸು ತೋರಿಸು, ಬೆದರಿಸು.

**दबा** (ದಬಾ) ಪು. ಅಡಗಿ ಕೂಡುವಿಕೆ (ಆಘಾತ ಮಾಡಲಿಕ್ಕೆ).

**दबाव** (ದಬಾವ್) ಪು. ಹಿಂ. ಒತ್ತಡ, ಒತ್ತಾಯ, ಜುಲುಮೆ.

**दबेल** (ದಬೇಲ್) ವಿ. ಹತ್ತಿಕ್ಕಿದ, ಒತ್ತಿಕ್ಕಿದ.

**दब्ब** (ದಬ್ಬ) ವಿ. (ಹೊಟ್ಟೆ) ತುಂಬಿದ.

**दम** (ದಮ್) ಪು. ಫಾ. ಉಸಿರು. ೨. ತಾಳ್ಮೆ, ೩. ಶಕ್ತಿ.

**–खाणे** (–ಖಾಣೇ) ಕ್ರಿ. ಸ. ತಾಳು, ಸೈರಿಸು.

**–धरणे** (–ಧರಣೇ) ತಾಳು, ದಾರಿ ನೋಡು.

**–छाटणे** (–ಛಾಟಣೇ) ತಾಳು, ಉಸಿರಾಡಿಸದಿರು.

**–देणे –भरणे** (–ದೇಣೇ –ಭರಣೇ) ಕ್ರಿ.ಸ. ಬೆದರಿಸು.

**–कोंडणे** (–ಕೋಂಡಣೇ) ಕ್ರಿ.ಅ. ಉಸಿರುಗಟ್ಟು.

**–घेणे** (–ಘೇಣೇ) ಕ್ರಿ. ವಿ. ವಿಶ್ರಮಿಸು.

**–टाकणे** (–ಟಾಕಣೇ) ಕ್ರಿ. ಅ. ದಣಿ, ಸೋಲು.

**–लागणे** (–ಲಾಗಣೇ) ಕ್ರಿ. ಅ. ಆಯಾಸವಾಗು.

**एका दमात** (ಏಕಾ ದಮಾತ್) ಕ್ರಿ. ವಿ. ಒಂದೇ ಏಟಿನಲ್ಲಿ, ಒಮ್ಮೆಲೆ.

**दमात गार करणे** (ದಮಾತ್ ಗಾರ ಕರಣೇ) ಕ್ರಿ. ಅ. ಬೆದರಿಸಿ ಸುಮ್ಮಗೆ ಕೂಡಿಸು.

**दमछाट** (ದಮ್‌ಛಾಟ್) ಪು. ಉಸಿರುಗಟ್ಟುವಿಕೆ. ೨. ಉಸಿರು ಹಿಡಿಯುವಿಕೆ.

**दमट** (ದಮಟ್) ವಿ. ಜಲಾಂಶಯುಕ್ತ, ಕುಚ್ಚುವ (ಹವೆ) ಆರ್ದ್ರ, ಹಸಿ.

**दमटणे** (ದಮಟಣೇ) ಕ್ರಿ. ಅ. ಹಸಿಯಾಗುವಿಕೆ, ಆರ್ದ್ರವಾಗುವಿಕೆ.

**दमडी** (ದಮಡೀ) ಸ್ತ್ರೀ. ದಮಡಿ, ಕಾಸು.

**दीड दमडीचा** (ದೀಡ್ ದಮಡೀಚಾ) ವಿ. ಕ್ಷುದ್ರ, ಕ್ಷುಲ್ಲಕ, ಕಃಪದಾರ್ಥವಾದ.

**दमणे** (ದಮಣೇ) ಕ್ರಿ. ಅ. ದಣಿ, ದಣಿವಾಗು, ಆಯಾಸವಾಗು.

**दमदमणे** (ದಮದಮಣೇ) ಕ್ರಿ. ಅ. (ಡೊಳ್ಳಿನ, ನಗಾರೆಯ) ಸಪ್ಪಳವಾಗು.

**दमदमाट** (ದಮದಮಾಟ್) ಪು. (ನಗಾರೆಯ) ಸಪ್ಪಳ, ಸದ್ದು.

**दमदमीत** (ದಮದಮೀತ್) ವಿ. ವಿಶೇಷವಾದ,ಹೆಚ್ಚಿನ. ಕ್ರಿ. ವಿ. ವಿಶೇಷವಾಗಿ, ವಿಪುಲವಾಗಿ.

**दमदार** ( ದಮದಾರ್ ) ವಿ. ಫಾ. ಶಕ್ತಿಯುತ, ಜೋರಾದ. ೨. ತಾಳ್ಮೆಯುಳ್ಳ, ತಾಳುವ.

**दमन** (ದಮನ್) ನ. ಸಂ. ನಿಯಮನ, ನಿಯಂತ್ರಣ. ೨. ದಮನ.

**दमनीय** (ದಮನೀಯ) ವಿ. ನಿಯಂತ್ರಣ ಮಾಡತಕ್ಕ. ದಮನಯೋಗ್ಯ.

**दमविणे** (ದಮವಿಣೇ) ಕ್ರಿ. ಸ. ದಣಿಸು, ಪರಿಶ್ರಮ ಪಡಿಸು, ಬೇಸರವಾಗುವಂತೆ ಮಾಡು.

**दमसर** (ದಮಸರ್) ವಿ. ಆರ್ದ್ರ, ಹಸಿಯಾದ.

**दमा** (ದಮಾ) ಪು. ಫಾ. ಕೆಮ್ಮು, ದಮ್ಮು,ಗೂರು, 'ಅಸ್ಥಮಾ'.

**दमादमाने** (ದಮಾದಮಾನೇ) ಕ್ರಿ. ವಿ. ಸಾವಕಾಶ ವಾಗಿ, ಮೆಲ್ಲಗೆ.

**दमान** (ದಮಾನ್) ನ.ಫಾ. ಹಡಗದ, ಪಟದ ಹಗ್ಗ.

**दमाना** (ದಮಾನಾ) ಪು. ಫಾ. (ಜಮಾನಾ), ವೇಳೆ, ಸಮಯ.

**दमेकरी** (ದಮೇಕರೀ) ವಿ. ದಮ್ಮು - ಗೂರು ಇವು ಗಳಿಂದ ಪೀಡಿತನಾದವ.

**दया** (ದಯಾ) ಸ್ತ್ರೀ. ಸಂ. ದಯೆ, ಕರುಣೆ, ಕನಿಕರ.

**–धर्म** (ಧರ್ಮ) ಪು. ದಾನಧರ್ಮ.

**–माया** (ಮಾಯಾ) ಸ್ತ್ರೀ. ಕನಿಕರ.

**दयार्द्र** (ದಯಾರ್ದ್ರ) ವಿ. ದಯೆಯಿಂದ ಪೂರಿತ.

**दयावंत** (ದಯಾವಂತ್) ವಿ. ಕರುಣಾಳು, ದಯೆ ಯುಳ್ಳವ.

**दयाहीन** (ದಯಾಹೀನ) ವಿ. ಸಂ. ದಯೆಯಿಲ್ಲದ.

**दयित** (ದಯಿತ) ವಿ. ನಲ್ಮೆಯ, ಪ್ರಿಯ, ಪ್ರೀತಿಯ.

**दयिता** (ದಯಿತಾ) ಸ್ತ್ರೀ. ಪ್ರಿಯಳು, ದಯಿತೆ.

**दर** (ದರ) ಪು. ಫಾ. ಬೆಲೆ, ದರ, ಧಾರಣೆ.

**दरक**(ದರಕ್) ಪು.ಫಾ. ಶ್ರೇಷ್ಠ ಸ್ಥಾನ, ಹೆಚ್ಚಿನ ಸ್ಥಾನ.

**दरकदार** (ದರಕ್‌ದಾರ್) ಪು.ಫಾ. ರಾಜಪುರುಷ.

**दरकार** (ದರಕಾರ್) ವಿ. ಫಾ. ಬೇಕಾದ, ಬೇಕಿದ್ದ, ಆವಶ್ಯಕವಾದ. ೨.ಪು. ಲಕ್ಷ್ಯ,ಆದರ,ಯೋಚನೆ.

**दरखास्त** (ದರಖಾಸ್ತ್) ಸ್ತ್ರೀ. ಫಾ. ಅರ್ಜಿ.

**दरगा** (ದರಗಾ) ಪು. ಫಾ. ಪ್ರಾರ್ಥನೆಯ ಅಂಗಳ, ದರಗಾ.

**दरगुदर** (ದರಗುದರ್) ಪು. ಅಲಕ್ಷ್ಯ, ತಾಳ್ಮೆ, ಉಪೇಕ್ಷೆ.

**दरजी** (ದರಜೀ) ಪು. ಹಿಂ. ಸಿಂಪಿಗ, ಸಿಪ್ಪಿಗ.

**दरड** (ದರಡ್) ಸ್ತ್ರೀ. ದೊಡ್ಡ ಕಲ್ಲು, ಬಂಡೆ.

**दरडावणी** (ದರಡಾವಣೀ) ಸ್ತ್ರೀ. ಜಬರಿಸುವಿಕೆ, ಅಂಜಿಸುವಿಕೆ.

**दरडावणे** (ದರಡಾವಣೆ) ಕ್ರಿ. ಸ. ಬೆದರಿಸು, ಜಬರಿಸು, ಅಂಜಿಸು.

**दरडोई** (ದರಡೋಯೀ) ಕ್ರಿ. ವಿ. ಪ್ರತಿಯೊಬ್ಬನ, ತಲೆಗೆ, ಪ್ರತಿಯೊಬ್ಬನಿಗೆ.

**दरदरणे** (ದರದರಣೇ) ಕ್ರಿ.ಸ. (ಬೆವರು) ಬರು, ಮೈ ಒದ್ದೆಯಾಗು.

**दरदरा** (ದರದರಾ) ಪು. ವರ್ಚಸ್ಸು, ಘನತೆ.

**दरदरून** ( ದರದರೂನ್ ) ಕ್ರಿ. ವಿ. ಸುರಿಯುವಂತೆ (ಬೆವರು ಬರು).

**दरदी** (ದರದೀ) ವಿ. ಫಾ. ನಿಪುಣ, ತಜ್ಞ.

**दरबार** (ದರಬಾರ್)ಪು.ಫಾ. ರಾಜಸಭೆ, ದರಬಾರ.

**दरबारी** (ದರಬಾರೀ) ವಿ. ಫಾ. ರಾಜಸಭೆಯ. ೨. ತೋರಿಕೆಯ ರಾಜಪುರುಷ, ಸರದಾರ.

**दरमहा** (ದರಮಹಾ) ಕ್ರಿ. ವಿ. ಪ್ರತಿ ತಿಂಗಳು, ತಿಂಗಳಿ ಗೊಮ್ಮೆ, ೨. ಪು. ತಿಂಗಳಾ ಗಳಿಕೆ (ಸಂಬಳ).

**दरम्यान** (ದರಮ್ಯಾನ್) ಕ್ರಿ. ವಿ. ಮಧ್ಯದಲ್ಲಿ,ನಡುವೆ, ನಡುವಿನ ಸಮಯದಲ್ಲಿ.

**दरवडा** (ದರವಡಾ) ಪು. ಹಿಂ. ಕಳವು, ಕನ್ನಹಾಕಿ' ಶಸ್ತ್ರಸಜ್ಜರಾಗಿ ಮಾಡಿದ ಕಳವು.

**दरवडेखोर** (ದರವಡೇಖೋರ್) ಪು. ತುಡುಗ, ಹಿಂಸಿಸಿ ಕಳವು ಮಾಡುವವ.

**दरवळ** (ದರವಳ್) ಪು. ವಾಸನೆ ಇಡುಗುವಿಕೆ.

**दरवळणे** (ದರವಳಣೇ) ಕ್ರಿ. ಅ. (ವಾಸನೆ) ಇಡುಗು, ಹಬ್ಬು.

**दरवाजा** (ದರವಾಜಾ) ಪು. ಫಾ. ಬಾಗಿಲ, ಪ್ರವೇಶ.

**दरवान** (ದರವಾನ್) ಪು. ಫಾ. ಕಾವಲುಗಾರ, ದ್ವಾರ ಪಾಲ.

**दरवेश** (ದರವೇಶ್) } ಪು. ಫಾ. ಫಕೀರ, ಮುಸ್ಲಿಂ ಸಾಧು, ಒಳ್ಳೆಯ ಮನುಷ್ಯ.
**दरवेशी** (ದರವೇಶೀ) } ೨. ಕರಡಿಯನ್ನು ಆಡಿಸುವವ.

**दरसाल** (ದರ್‌ಸಾಲ್) ಕ್ರಿ. ವಿ. ಫಾ. ಪ್ರತಿವರ್ಷ.

**दराखोरा** (ದರಾಖೋರಾ) ಪು. ದಿನ್ನೆ, ಬಯಲು, ಗಿರಿಕಂದರ.

**दरारा** (ದರಾರಾ) ಪು. ವರ್ಚಸ್ಸು, ಅಂಜಿಕೆ ಬರುವಂತಹ ವ್ಯಕ್ತಿಮತ್ವ.

**दरिद्र** (ದರಿದ್ರ) ವಿ. ಸಂ. ಬಡವ.

**–नाम संवत्सरे** (–ನಾಮ ಸಂವತ್ಸರೇ) ಕ್ರಿ. ವಿ. ತೀರ ಬಡತನದಲ್ಲಿದ್ದವ, ನಿಷ್ಕಾಂಚನ.

**दरिद्री** (ದರಿದ್ರೀ) ವಿ. ಕೀಳ ತರಗತಿಯ, ಸುಮಾರಾದ.

**–दशा** (ದಶಾ) ಸ್ತ್ರೀ. ಬಡತನ.

**दरी** (ದರೀ) ಸ್ತ್ರೀ. ಕಂದರ, ಎರಡು ಗುಡ್ಡಗಳ ನಡುವಿನ ಪ್ರದೇಶ.

**दरोडा** (ದರೋಡಾ) ಪು. ಕಳವು.

**दरोडेखोर** (ದರೋಡೇಖೋರ್) ಪು. ಕಳ್ಳ, ತುಡುಗ.

**दरोबस्त** (ದರೋಬಸ್ತ್) ಕ್ರಿ. ವಿ. ಫಾ. ಪ್ರತಿಯೊಬ್ಬನು ೨. ಎಲ್ಲರೂ.

**दर्ज** (ದರ್ಜ) ಸ್ತ್ರೀ. ಫಾ. ಭೇದ, ತೂತು, ಬಿರುಕು.

**दर्जा** (ದರ್ಜಾ) ಪು. ಫಾ. ತರಗತಿ, ಸ್ತರ- ಶ್ರೇಷ್ಠತೆ.

**दर्जेदार** (ದರ್ಜೇದಾರ್) ವಿ. ಫಾ. ಉತ್ತಮ, ಶ್ರೇಷ್ಠ ತರಗತಿಯ.

**दर्द** (ದರ್ದ) ಪು. ಫಾ. ರೋಗ, ನೋವು. ೨. ಕರುಣೆ, ೩. ಚಿಂತೆ.

**–भरी** (–ಭರೀ) ವಿ. ಕರುಣಾಸ್ಪದ, ಕನಿಕರಹುಟ್ಟುವ.

**दर्दुर** (ದರ್ದುರ) ಪು. ಸಂ. ಕಪ್ಪೆ.

**दर्प** (ದರ್ಪ) ಪು. ಸಂ. ಹೆಮ್ಮೆ. ೨. ಉಗ್ರವಾದವಾಸನೆ, ಕೆಟ್ಟ ನಾತ.

**दर्पण** (ದರ್ಪಣ) ಪು. ಸಂ. ಕನ್ನಡಿ.

**दर्पोक्ति** (ದರ್ಪೋಕ್ತಿ) ಸ್ತ್ರೀ. ಸಂ. ಸೊಕ್ಕಿನ ಮಾತು, ಗರ್ವೋಕ್ತಿ.

**दर्भ** (ದರ್ಭ) ಪು. ಸಂ. ಹುಲ್ಲು ದರ್ಭೆ. ಪೂಜೆಯಲ್ಲಿಯ ಒಣಹುಲ್ಲು.

**दर्या** (ದರ್ಯಾ) ಪು. ಫಾ. ಸಮುದ್ರ, ದೊಡ್ಡಹೊಳೆ.

**–में खसखस** (–ಮೆಂ ಖಸ್‌ಖಸ್) ನಾಣ್ಣುಡಿ. ಅತ್ಯಲ್ಪ. (ಸಮುದ್ರದಲ್ಲಿ ಒಗೆದ ಕಸಕಸಿ)

**–सारंग** (–ಸಾರಂಗ್) ಪು. ಹಡೆಗುಪಡೆಯ ಅಧಿಕಾರಿ, ಶ್ರೇಷ್ಠ ನಾವಿಕ.

**–वर्दी** (–ವರ್ದೀ) ವಿ. ಹಡೆಗುಪಡೆಯ.

**दर्श** (ದರ್ಶ) ಪು. ಸಂ. ಅಮಾವಾಸ್ಯೆ.

**दर्शक** (ದರ್ಶಕ) ವಿ. ಸಂ. ತೋರಿಸುವ- (ಪ್ರತ್ಯಯ) ೨. ಪು. ನೋಡುವವ, ಪ್ರೇಕ್ಷಕ.

**दर्शन** (ದರ್ಶನ) ನ. ಸಂ. ಕಾಣುವಿಕೆ, ತೋರುವಿಕೆ. ೨. ಭೆಟ್ಟಿ.

**–पट्टी** (–ಪಟ್ಟೀ) ಸ್ತ್ರೀ. ತೋರಿಕೆಯ, (ಗುರುತು ಕೊಡುವ) ಹಲಗೆ.

**दर्शनी** (ದರ್ಶನೀ) ವಿ. ಕಾಣುವ, ಕಂಡುಬರುವ, ಮೇಲೆ ಕಾಣುವ, ತೋರಿಕೆಯ, ತೋರಿಸುವ.

**–हुंडी** (–ಹುಂಡೀ) ಸ್ತ್ರೀ. ಬರಿ ತೋರಿಸುವುದರಿಂದ ಹಣಸಿಗುವ ಹುಂಡಿ.

**–बाजू** (–ಬಾಜೂ) ವಿ. ತೋರುವ ಬದಿ, ಮುಂದಿನ ನೋಟ. ಮುಮ್ಮಗ್ಗಲಿನ ದೃಶ್ಯ.

**–मूल्य** (–ಮೂಲ್ಯ) ನ. ಸಂ. ಬರೆದಿಟ್ಟ ಬೆಲೆ.

**दर्शनीय** (ದರ್ಶನೀಯ) ವಿ. ಸುಂದರ, ಕಾಣಲಿಕ್ಕೆ ಅಂದವಾದ.

**दर्शनेंद्रिय** (ದರ್ಶನೇಂದ್ರಿಯ) ನ. ಸಂ. ಕಣ್ಣು, ನೋಡುವ ಇಂದ್ರಿಯ.

**दर्शविणे** (ದರ್ಶವಿಣೇ) ಕ್ರಿ. ಸ. ತೋರಿಸಿಕೊಡು, ತೋರಿಸು. ೨. ನಟಿಸು, ಆಭಾಸಮಾಡು.

**दल** (ದಲ್) ನ. ಎಲೆ, ದಳ. ೨. ದಂಡು.

**दलदल** (ದಲದಲ್) ಸ್ತ್ರೀ. ಹಾವಸೆ, ನೀರಲ್ಲಿ ಮುಳುಗಿದ ನೆಲ. ೨. ಕೆಸರು, ರಾಡಿ.

**दलदलीत** (ದಲದಲೀತ್) ವಿ. ಹಾವಸೆಯಾದ ನೀರು, ತುಂಬಿದ.

**दलभार** (ದಲಭಾರ್) ಪು. ಸಂ. ದಂಡು, ಸೈನ್ಯ.

**दलाल** (ದಲಾಲ್) ಪು. ಅರ. ದಳ್ಳಾಳಿ, ಕಮಿಶನ್ ಎಜೆಂಟ್.

**दलाली** (ದಲಾಲೀ) ಸ್ತ್ರೀ. ಅರ. ದಳ್ಳಾಳಿನ ವ್ಯವಸಾಯ, ಕಮಿಶನ್ ಏಜೆನ್ಸಿ. ೨. ದಳ್ಳಾಳನಿಗೆ ಕೊಡಬೇಕಾದ ಹಣ.

**दलित** (ದಲಿತ) ವಿ. ಸಂ. ಹಿಮ್ಮೆಟ್ಟಿದ, ಅಸ್ಪೃಶ್ಯ, ಪೀಡಿಸಿದ.

**–वर्ग** (–ವರ್ಗ) ಪು. ಅಸ್ಪೃಶ್ಯ, ಹಿಂದುಳಿದ ವರ್ಗ.

**दव** (ದವ್) ಪು. ದಾವಾಗ್ನಿ, ಬೆಂಕಿ.

**दवडणे** (ದವಡಣೇ) ಕ್ರಿ. ಸ. (ಸೈನ್ಯ) ಕಳಿಸು, ರವಾನಿಸು. ೨. ಕಳೆದುಕೊ, (ಸಂಧಿಯನ್ನು) ಬಿಡು.

**दवडादवड** (ದವಡಾದವಡ್) ಸ್ತ್ರೀ. (ಪತ್ರ, ಆಳು ಮುಂ.) ಮೇಲಿಂದ ಮೇಲೆ ಕಳಿಸುವಿಕೆ.

**दवंडी** (ದವಂಡೀ) ಸ್ತ್ರೀ. ಡಂಗುರ, ಸಾರುವಿಕೆ, ವಾರ್ತಾಪ್ರಸಾರ.

**–पिटणे** (–ಪಿಟಣೇ) ಕ್ರಿ. ಸ. ಸಾರು, ಡಂಗುರ ಬಾರಿಸಿ ಹೇಳು.

**दवंड्या** (ದವಂಡ್ಯಾ) ಪು. ಡಂಗುರ ಸಾರುವವ, ಸುದ್ದಿಯನ್ನು ಸಾರುವವ.

**दवणा** (ದವಣಾ) ಪು. ಒಂದು ಸುವಾಸನೆಯ ಎಲೆ, ದವನ. ೨. ದನಗಳ ದಳ್ಳಾಳ.

**दवणे** (ದವಣೇ) ನ. ಮಣ್ಣು ಹುಳ.

**दवा** (ದವಾ) ಪು. ಫಾ. ಔಷಧ.

**–खाना** (–ಖಾನಾ) ಪು. ಔಷಧಾಲಯ, ದವಾಖಾನೆ.

**दवाग्नि** (ದವಾಗ್ನಿ) ಪು. ಸಂ. ಅರಣ್ಯದಲ್ಲಿಯ ಬೆಂಕಿ, ೨. ಬೆಂಕಿಯ ಅನಾಹುತ.

**दश** (ದಶ) ವಿ. ಸಂ. ಹತ್ತು (೧೦).

**दशक** (ದಶಕ್) ನ. ಹತ್ತರ ಗಂಟು. ೨. ಹತ್ತು ವರ್ಷಗಳ ಕಾಲ.

**दशकंठ** (ದಶಕಂಠ) ಪು. ಸಂ. ರಾವಣ.

**दशकोन** (ದಶಕೋನ) ಪು. ಸಂ. ಹತ್ತು ಕೋನಗಳುಳ್ಳ ಆಕೃತಿ.

**दशग्रंथी** (ದಶಗ್ರಂಥೀ) ವಿ. ವೇದದ ವಿಷಯದಲ್ಲಿ ಹತ್ತು ಗ್ರಂಥಗಳನ್ನು ಓದಿದವ (ಉದಾ. ಬ್ರಾಹ್ಮಣ, ಆರಣ್ಯಕ, ಶಿಕ್ಷಾ, ಕಲ್ಪ, ವ್ಯಾಕರಣ, ನಿಘಂಟು, ನಿರುಕ್ತ, ಛಂದ, ಜ್ಯೋತಿಷ.)

**दशग्रीव** (ದಶಗ್ರೀವ) ಪು. ರಾವಣ, (ಹತ್ತು ಕುತ್ತಿಗೆಯುವ).

**दशदिशा** (ದಶದಿಶಾ) ಸ್ತ್ರೀ. ಹತ್ತು ದಿಕ್ಕುಗಳು, ಎಲ್ಲ ಜಗತ್ತು.

**दशन** (ದಶನ) ನ. ಸಂ. ಹಲ್ಲು.

**दशम** (ದಶಮ) ವಿ. ಸಂ. ಹತ್ತನೆಯ.

**–ग्रह** (–ಗ್ರಹ) ಪು. ಹತ್ತನೆಯ ಗ್ರಹ, (ಅಳಿಯ).

**दशमी** (ದಶಮೀ) ಸ್ತ್ರೀ. ಹತ್ತನೆಯ ತಿಥಿ. ೨. ಹಾಲಿನಲ್ಲಿ ಮಾಡಿದ ರೊಟ್ಟಿ.

**दशमुख** (ದಶಮುಖ) ಪು. ರಾವಣ.

**दशा** (ದಶಾ) ಸ್ತ್ರೀ. ಪರಿಸ್ಥಿತಿ, ಸ್ಥಿತಿ, ನೆಲೆ, ದಶೆ. ೨. (ಕೆಟ್ಟ) ಸ್ಥಿತಿ. ೩. ಕರಿ, (ಕಂಬಳಿಯ) ತುದಿ.

**दशानन** (ದಶಾನನ) ಪು. ರಾವಣ.

**दशावतार** (ದಶಾವತಾರ) ಪು. ವಿಷ್ಣುವಿನ ಹತ್ತು ಅವತಾರಗಳು.

**दशांश** (ದಶಾಂಶ) ಪು. ಹತ್ತನೆಯ ಭಾಗ. ೨. ದಶಾಂಶ ಪದ್ಧತಿ (ಡೆಸಿಮಲ್ ಸಿಸ್ಟಮ್)

**दशाश्व** (ದಶಾಶ್ವ) ಪು. ಸಂ. ಚಂದ್ರ.

**दशी** (ದಶೀ) ಸ್ತ್ರೀ. (ಕಂಬಳಿಯ) ತುದಿ, ಕರಿ.

**दष्ट** (ದಷ್ಟ) ವಿ. ಸಂ. ಕಡಿಯಲ್ಪಟ್ಟ, ಕಡಿದ.

**दसकत दस्कत** (ದಸಕತ್–ದಸ್ಕತ್) ಸ್ತ್ರೀ. ರುಜು, ಸಹಿ.

**दसरा** (ದಸರಾ) ಪು. ವಿಜಯ ದಶಮಿ, ದಸರಾ ಹಬ್ಬ, ದಸರೆ, ನಾಡಹಬ್ಬ.

**दस्त** (ದಸ್ತ) ಪು. ಫಾ. ತೆರಿಗೆ, ಸುಂಕ. ೨. ಅಧಿಕಾರ, ವರ್ಚಸ್ಸು. ೩. (ಇಸ್ಟೇಟಿನ) ಪೆಟ್ಟು.

**–ऐवज** (–ಐವಜ್) ಪು. ದಸ್ತಾವೇಜು, ಕಾನೂನಿನ ಬರೆಹ.

**दस्तक** (ದಸ್ತಕ್) ನ. ಫಾ. ಪಾಸು, ಪರವಾನಿಗೆಯ ಪತ್ರ. ೨. ಬಾಗಿಲ ಬಾರಿಸುವಿಕೆ.

**दस्तखत** (ದಸ್ತಖತ್) ಸ್ತ್ರೀ. ಸಹಿ, ರುಜು.

**दस्तगीरी** (ದಸ್ತಗೀರೀ) ಸ್ತ್ರೀ. ಫಾ. ಸಹಾಯ, ನೆರವು, ಆಶ್ರಯ. ೨. ಸೆರೆ, ಹಿಡಿಯುವಿಕೆ.

**दस्ता** (ದಸ್ತಾ) ಪು. ಫಾ. ಹಾಳೆಯ (ಕಾಗದದ) ಕ್ವಾಯರ್. ೨. ಹಿಡಿಕೆ.

**दस्ताना** (ದಸ್ತಾನಾ) ಪು. ಕ. ಛುಕ್ಕಿನ ಕೈಚೀಲ.

**दस्तुर** (ದಸ್ತುರ್) ಪು. ಫಾ. ಪಾರಸಿಕರ ಪುರೋಹಿತ.

**दस्तुरी** (ದಸ್ತುರೀ) ಸ್ತ್ರೀ. ಫಾ. ತೆರಿಗೆ. ೨. ಮಾಮೂಲು, ಲಂಚ.

**दस्तूर** (ದಸ್ತೂರ್) ಪು. ಫಾ. ಪದ್ಧತಿ, ರೂಢಿ.

**–खुद्द** (ಖುದ್ದ) ಸಹಿ, ರುಜು.

**दस्तैवज** (ದಸ್ತೈವಜ್) ಪು. ಫಾ.ಕಾನೂನಿನ ಕಾಗದ, ಸರಕಾರೀ ಕಾಗದ ೨. ಮೊಕದ್ದಮೆಯ ಪತ್ರವ್ಯವಹಾರ.

**दहन** (ದಹನ್) ನ. ಸಂ. ದಹನ, ಸುಡುವಿಕೆ, ಅಂತ್ಯ ಕರ್ಮ.

**दहनीय** (ದಹನೀಯ) ವಿ. ಸಂ. ದಹನ, ಸುಡಲು ಯೋಗ್ಯವಾದ.

**दहशत** (ದಹಶತ್) ಸ್ತ್ರೀ. ಅರ. ಅಂಜಿಕೆ, ಬೆದರಿಕೆ, ಆತಂಕ, ಕುತ್ತು.

**दहशती** (ದಹಶತೀ) ವಿ. ಅರ. ಭಯಂಕರ, ಅಂಜಿಕೆಯಾಗುವ.

**दहशतवाद** (ದಹಶತ್‌ವಾದ) ಪು. ಅರ+ಸಂ. ಕೊಲೆ ಸುಲಿಗೆಗಳ ವಿಕೋಪ. ೨. ಆತಂಕವಿಲ್ಲದ.

**दहा** (ದಹಾ) ವಿ ಹತ್ತು (೧೦)

**दहिवर** (ದಹಿವರ್) ನ. ಇಬ್ಬನ್ನಿ.

**दहिवरणे** (ದಹಿವರಣೇ) ಕ್ರಿ. ಅ. ಇಬ್ಬನ್ನಿಯಿಂದ ಹಸಿಯಾಗು.

**दही** (ದಹೀ) ನ. ಮೊಸರು.

**दही खाऊ की मही खाऊ** (ದಹೀ ಖಾಊ ಕೀ ಮಹೀ ಖಾಊ)ನಾಣ್ಣುಡಿ ಮನಸ್ಸಿನಲ್ಲಿಯಇಬ್ಬಗೆ, ಅನಿರ್ಧಾರ.

**दह्याची कवडी** (ದಹ್ಯಾಚೀ ಕವಡೀ) ಸ್ತ್ರೀ. ಮೊಸರಿನ ಕರಣೆ.

**दही हंडी** (ದಹೀ ಹಂಡೀ) ಸ್ತ್ರೀ. ಮೊಸರಿನ ಗಡಿಗೆ.

**दळ** (ದಳ್) ನ. ದಂಡು, ಸೈನ್ಯ.

**दळण** (ದಳಣ್) ನ. ಬೀಸುವಿಕೆ, ಬೀಸುವ ಧಾನ್ಯ.

**–कांडण** (–ಕಾಂಡಣ) ನ. ಬೀಸುವಿಕೆ, ಕುಟ್ಟುವಿಕೆ, ಮನೆಗೆಲಸ.

**–वळण** (–ವಳಣ್). ನ. ಸಾಗಾಣೆ, ಸಾರಿಗೆ.

**दळणावळ** (ದಳಣಾವಳ್) ಸ್ತ್ರೀ. ಬೀಸುವ ಕೂಲಿ.

**दळणे** (ದಳಣೇ) ಕ್ರಿ. ಸ. ಬೀಸು.

**दळदार** (ದಳದಾರ್) ವಿ. ತುಂಬಿದ, ರಸಭರಿತ.

**दळप** (ದಳಪ) ನ. ಬೀಸುವ ಸಲುವಾಗಿ ಒಯ್ದಧಾನ್ಯ.

**दळभद्रचा** (ನಳಭದ್ರ್ಯಾ) ವಿ. ಅದೃಷ್ಟವಿಲ್ಲದವ. ೨. ಅಂಜುಬುರುಕ.

**दळभार** (ದಳಭಾರ್) ಪು. ಸೈನ್ಯ, ದಂಡು, ಪದಾತಿ.

**दळवी** (ದಳವೀ) ಪು. ಸೇನಾಪ್ರಮುಖ.

**दळिद्र** (ದಳಿದ್ರ) ನ. ದರಿದ್ರತೆ, ಬಡತನ, ಕೀಳು ಪರಿಸ್ಥಿತಿ.

**दळूबाई** (ದಳೂಬಾಈ) ವಿ. ಅಂಜುಬುರುಕ. ೨.ಕೈಲಾಗದವ.

**दळे** (ದಳೇ) ನ. ಕತ್ತಿಯ ಒರೆ.

**दळचा** (ದಳ್ಯಾ) ವಿ. ಕೈಲಾಗದವ, ಹೇಡಿ.

**दक्ष** (ದಕ್ಷ) ವಿ. ಚತುರ, ಸಮರ್ಥ, ದಕ್ಷತೆಯುಳ್ಳವ. ೨. ಪಾರ್ವತಿಯ ತಂದೆ.

**दक्षता** (ದಕ್ಷತಾ) ಸ್ತ್ರೀ. ದಕ್ಷತೆ,ಶೀಘ್ರತೆ. ೨.ಯೋಚನೆ.

**दक्षिण** (ದಕ್ಷಿಣ) ವಿ. ಸಂ. ದಕ್ಷಿಣ ಬದಿಯ, ತೆಂಕಣ, ೨. ಬಲಗಡೆಯ, ದಕ್ಷಿಣ ದಿಶೆ.

**दक्षिणा** (ದಕ್ಷಿಣಾ) ಸ್ತ್ರೀ. ದಕ್ಷಿಣೆ, ಪುರೋಹಿತರಿಗೆ ಕೊಡುವ ಧನದಾನ.

**दक्षिणायन** (ದಕ್ಷಿಣಾಯನ್) ನ. ಸಂ. ಚಳಿಗಾಲದಲ್ಲಿಯ ಸೂರ್ಯನ ದಕ್ಷಿಣದ ಕಡೆಗೆ ಉದಯಿಸುವಿಕೆ.

**दक्षिणी** (ದಕ್ಷಿಣೀ) ವಿ. ಸಂ. ದಕ್ಷಿಣದ (ಗಾಳಿ, ಜನರು)

**दक्षिणोत्तर** (ದಕ್ಷಿಣೋತ್ತರ) ಕ್ರಿ. ವಿ. ಉತ್ತರ ದಕ್ಷಿಣಗಳ ಅಂತರ.

**दंग** (ದಂಗ್) ವಿ. ಮಗ್ನ, ಮುಳುಗಿದ, ತಲ್ಲೀನ.

**दंगल** (ದಂಗಲ್) ಸ್ತ್ರೀ ಹಿಂ. ಗಲಭೆ, ಜನ ಸಮುದಾಯ, ದಂಗೆ, ಕೋಲಾಹಲ

**दंगा** (ದಂಗಾ) ಪು ಹಿಂ ದಂಗೆ, ಗಲಭೆ, ಕಲಹ

**–धोपा** (–ಧೋಪಾ) ಪು. ಪುಂಡಾಟಿಕೆ, ಗಲಭೆ, ದಂಗೆ.

**दंड** (ದಂಡ) ಪು. ದಂಡನೆ, ಶಿಕ್ಷೆ, ಜುಮ್ಮಾನೆ. ೨. ಕೋಲು, ಬಡಿಗೆ.

**दंडक** (ದಂಡಕ) ಪು. ಅಭ್ಯಾಸ, ರೂಢಿ, ಆಚಾರ.

**दंडगी** (ದಂಡಗೀ) ಸ್ತ್ರೀ. ಜ್ಯೋತಿ, ದೀಪ.

**दंडन** (ದಂಡನ್) ನ. ಸಂ. ದಂಡನೆ, ಶಿಕ್ಷೆ.

**दंडनीति** (ದಂಡನೀತಿ) ಸ್ತ್ರೀ. ಸಂ. ನೀತಿಧರ್ಮ, ನೀತಿಶಾಸ್ತ್ರ.

**दंडनीय** (ದಂಡನೀಯ) ವಿ. ಸಂ. ದಂಡಿಸತಕ್ಕ, ಶಿಕ್ಷೆಗೆ ಯೋಗ್ಯ.

**दंडवत** (ದಂಡವತ್) ನ. ಸಂ. ಸಾಷ್ಟಾಂಗ ನಮಸ್ಕಾರ, ಕಾಲು ಬೀಳುವಿಕೆ.

**दंडस्नान** (ದಂಡಸ್ನಾನ) ನ. ಸಂ. ಬೇಗ ಬೇಗಮಾಡಿದ ಜಳಕ.

**दंडाधिकार** (ದಂಡಾಧಿಕಾರ) ಪು. ದಂಡಿಸುವ ಅಧಿಕಾರ, ಮ್ಯಾಜಿಸ್ಟ್ರೇಟನ ಅಧಿಕಾರ.

दंडी (ದಂಡೀ) ವಿ. ಸಂ. ಯತಿ-ಸ್ವಾಮಿ.
दंडका (ದಂಡಕಾ) ಪು. ಕ. ಸಣ್ಣ ಬಡಿಗೆ, ಜವಾನರ ಕೋಲು-ಬ್ಯಾಟನ್
दंडुकेशाही (ದಂಡುಕೇಶಾಹೀ) ಸ್ತ್ರೀ. ದಬ್ಬಾಳಿಕೆ.
दंडेली (ದಂಡೇಲೀ) ಸ್ತ್ರೀ. ಉದ್ಧತ ಆಚರಣ, ಉನ್ಮತ್ತತೆ, ಆಕ್ರಮಣ ಪ್ರವೃತ್ತಿ.
दंड्य (ದಂಡ್ಯ) ವಿ. ಸಂ. ದಂಡನೆಗೆ ಯೋಗ್ಯವಾದ.
दंत (ದಂತ) ಪು. ಹಲ್ಲು, (ಹಸ್ತಿ) ದಂತ, ದಂತ.
–कथा (–ಕಥಾ) ಕಲ್ಪಿತ ಕಥೆ, ಕತೆ, ಆಖ್ಯಾಯಿಕೆ.
–धावन (–ಧಾವನ) ನ. ಹಲ್ಲು ತಿಕ್ಕುವಿಕೆ.
–पांक्ति (–ಪಂಕ್ತಿ) ಸ್ತ್ರೀ. ಹಲ್ಲುಸಾಲು, ಹಲ್ಲುಗಳು.
–भग्न (–ಭಗ್ನ) ವಿ. ಹಲ್ಲು ಮುರಿದುಕೊಂಡವ.
–व्रण (–ವ್ರಣ) ಪು. ಕಚ್ಚುವುದರಿಂದಾದ ಗಾಯ.
–शूळ (–ಶೂಳ್) ಪು. ಹಲ್ಲು ನೋವು.
–वैद्य (–ವೈದ್ಯ) ಪು. ಹಲ್ಲಿನ ವೈದ್ಯ.
दंताळा (ದಂತಾಳಾ) ವಿ. ಹಲ್ಲುಬೀರ, ಮುಂದೆ ಹಲ್ಲು ಹಾಯ್ದವ.
दंताळे (ದಂತಾಳೇ) ನ. ಕೊರಕಲುಗಳುಳ್ಳ, ಆಯುಧ.
दंती (ದಂತೀ) ವಿ. ಆನೆ.
दंतुर (ದಂತುರ) ವಿ. ಸಂ. ಹಲ್ಲು ಬೀರ.
दंत्य (ದಂತ್ಯ) ವಿ. ಸಂ. (ವ್ಯಾಕರಣ) ತ ವರ್ಗದ (ಅಕ್ಷರಗಳು) ದಂತ್ಯಾಕ್ಷರಗಳು.
दंदशूक (ದಂದಶೂಕ) ಪು. ಹಾವು, ಸರ್ಪ.
दंपती (ದಂಪತೀ) ಪು. ದಾಂಪತ್ಯ, ಗಂಡಹೆಂಡತಿ.
दंभ (ದಂಭ) ಪು. ಜಂಬ, ಡಂಭ, ಸೊಕ್ಕು, ಡೌಲು.
दंभाजी (ದಂಭಾಜೀ) ಪು. ಒಂಟಿಯನ್ನು ನಡೆಸುವವ.
दंभी (ದಂಭೀ) ವಿ. ಸಂ. ಜಂಬ ಬಡಿಯುವವ, ದಾಂಭಿಕ.
दंव (ದಂವ್) ಪು. ನ. ಇಬ್ಬನ್ನಿ.
दंश (ದಂಶ್) ಪು. ಸಂ. ದಂಶ, ಕಡಿತ.
दंशक (ದಂಶಕ್) ವಿ. ಸಂ. ಕಚ್ಚುವ, ಕಡಿಯುವ.
दंशी (ದಂಶೀ) ವಿ. ಸಂ. ಕಚ್ಚುವ, ಕಡಿಯುವ.
दाइमी (ದಾ ಇಮೀ) ವಿ. ಅರ. ಶಾಶ್ವತವಾದ, ಉಳಿಯುವ.
दाई (ದಾಈ) ಸ್ತ್ರೀ. ದಾಸಿ. ೨. ಮೊಲೆ ಕುಡಿಸುವ ತೊತ್ತು.
दाखल (ದಾಖಲ್) ವಿ. ಅರ. ಬಂದ, ಪ್ರವೇಶಿಸಿದ, (ರಜಿಸ್ಟರಿನಲ್ಲಿ) ಸೇರ್ಪಡಿಸಿದ, ಪ್ರವಿಷ್ಟ.
दाखला (ದಾಖಲಾ) ಪು. ಅರ. ಸರ್ಟಿಫಿಕೇಟು. ೨. ನಮೂನೆ. ೩. ಉದಾಹರಣೆ.
दाखविणे (ದಾಖವಿಣೇ) ಕ್ರಿ. ಸಂ. ತೋರಿಸು, ತೋರಿಸಿಕೊಡು.
दागिना (ದಾಗಿನಾ) ಪು. ಪೋ. ಆಭರಣ, ವಸ್ತು, ಒಡವೆ.
दाट (ದಾಟ್) ವಿ. ದಟ್ಟವಾದ, ಗಟ್ಟಿಯಾದ, ನಿಬಿಡ.
दाटण (ದಾಟಣ್) ಸ್ತ್ರೀ. ಕ. ದಟ್ಟಣೆ, ಜನಸಮೂಹ.
दाटणी (ದಾಟಣೀ) ಸ್ತ್ರೀ. ಕ. ಜನಸಮುದಾಯ.
दाटणे (ದಾಟಣೇ) ಕ್ರಿ. ಸ. ಒತ್ತಿಕ್ಕು. ೨. ಜಬರಿಸು. ಕ್ರಿ. ಅ. ತುಂಬಿಬಿರು (ಕಂಠ)
दाटा (ದಾಟಾ) ಪು. ಬೂಚು, ಮುಚ್ಚಳಿಕೆ.
दाटी (ದಾಟೀ) ಸ್ತ್ರೀ. ಕ. ಜನರ ಗುಂಪು, ದಟ್ಟಣೆ ಬಹಳ ಮಂದಿ ನೆರೆಯುವಿಕೆ.
दाटून (ದಾಟೂನ್) ವಿ. ತುಂಬಿ, ಪೂರ್ಣವಾಗಿ.
दाढ (ದಾಢ) ಸ್ತ್ರೀ. ಒಸಡೆಯ ಹಲ್ಲು.
दाढी (ದಾಢೀ) ಸ್ತ್ರೀ. ಗಡ್ಡ.
–करणे (–ಕರಣೇ) ಕ್ರಿ. ಸಂ. ಮುಖಕ್ಷೌರಮಾಡು, ಗಡ್ಡ ಬೋಳಿಸು, ಶೇವಿಂಗ್ ಮಾಡು.
–धरणे (–ಧರಣೇ) ಕ್ರಿ. ಅ. ಅಂಗಲಾಚಿಬೇಡಿಕೊ.
दाणा (ದಾಣಾ) ಪು. ಕಾಳು.
–पाणी (–ಪಾಣೀ) ನ. ಅನ್ನ ನೀರು.
–गोटा (–ಗೋಟಾ) ಪು. ಕಾಳುಕಡಿ. ೨. ದನಗಳಿಗೆ ಕೊಡುವ ಕಾಳು.
–दाण (–ದಾಣ್) ಸ್ತ್ರೀ. ಅವ್ಯವಸ್ಥೆ.
दाणी (ದಾಣೀ) ಪು. ಧಾನ್ಯ ತೆರಿಗೆ ವಸೂಲು ಮಾಡುವವ.
–दाणी (–ದಾಣೀ) ಸ್ತ್ರೀ. ಪ್ರತ್ಯಯ-ಪಾತ್ರೆ.
अत्तर– (ಅತ್ತರ್–) ಅತ್ತರಿನ ಪಾತ್ರೆ.
दाणेआळी (ದಾಣೇಆಳೀ) ಸ್ತ್ರೀ. ಕಾಳಿನ ಅಂಗಡಿಯ ಸಾಲು.
दाणेदार (ದಾಣೇದಾರ್) ವಿ. ರವೆಯುಳ್ಳ, ಬಿಡಿಯಾದ. ೨. ಉತ್ತಮ.
दाता (ದಾತಾ) ಪು. ಕೊಡುವವ-ದಾತೃ.
दातार (ದಾತಾರ್) ವಿ. ಉದಾರ, ಕೊಡುಗೈಯವ.
दातृत्व (ದಾತೃತ್ವ) ನ. ಉದಾರತನ, ದಾನಶೂರತೆ.
दाद (ದಾದ್) ಸ್ತ್ರೀ. ಫಾ. ನ್ಯಾಯ. ೨. ತಲೆದೂಗುವಿಕೆ.
–देणे (–ದೇಣೇ) ಕ್ರಿ. ಸಂ. ಲಕ್ಷಗೊಡು, ಗಮನಿಸು.
–लागणे (–ಲಾಗಣೇ) ಕ್ರಿ. ಅ. ನ್ಯಾಯ ಲಭಿಸು.

**दादड** (ದಾದಡ್) ನ. ದದ್ರು, ಗಜಕರ್ಣ, ತದ್ದು.
**दादडणे** (ದಾದಡಣೇ) ಕ್ರಿ. ವಿ. ತದ್ದಾಗು, ತದ್ದು ಏಳು.
**दादर** (ದಾದರ) ನ. ಪಾವಟಣಿಗೆ. ೨. ಅಟ್ಟ.
**दादरा** (ದಾದರಾ) ಪು. ಪಾತ್ರೆಯ ಬಾಯಿಗೆ ಕಟ್ಟಿದ ವಸ್ತ್ರ. ೨. ಒಂದು ರಾಗ ಪದ್ಧತಿ.
**दादला** (ದಾದಲಾ) ಪು. ಗಂಡ.
**दादा** (ದಾದಾ) ಪು. ಹಿರಿಯ ಬಂಧು, ಅಣ್ಣ.
**–बाबा करणे** (–ಬಾಬಾ ಕರಣೇ) ಅಂಗಲಾಚು, ಬೇಡಿಕೊ, ವಿನಂತಿ ಮಾಡು.
**दादुला** (ದಾದುಲಾ) ಪು. ಗಂಡ.
**दान** (ದಾನ್) ನ. ಕೊಡುಗೆ, ದಾನ. ೨. (ಪಗಡೆಯ ಆಟದಲ್ಲಿ) ಕೈ. ೨. ಆನೆಯ ಮದ.
**दानत** (ದಾನತ್) ಸ್ತ್ರೀ. ಅರ. (ದಯಾನತ್) ನೀತಿ, ಸದಾಚಾರ, ಪ್ರಾಮಾಣಿಕತೆ.
**दानधर्म** (ದಾನಧರ್ಮ) ಪು. ಸಂ. ದಾನಧರ್ಮ, ಉದಾರಕೊಡುಗೆ.
**दानपत्र** (ದಾನಪತ್ರ) ನ. ಸಂ. ದಾನಕೊಟ್ಟುದರ ಬರೆಹ.
**दानव** (ದಾನವ್) ಪು. ರಾಕ್ಷಸ, ದೈತ್ಯ.
**दानशील** (ದಾನಶೀಲ್) ವಿ. ಉದಾರ.
**दानशूर** (ದಾನಶೂರ) ವಿ. ಸಂ. ಉದಾರ, ಕೊಡುಗೈಯವ.
**दानव** (ದೊನವ್) ಪು. ದೈತ್ಯ, ರಾಕ್ಷಸ
**दाब** (ದಾಬ್) ಪು. ಒತ್ತಡ, ಒತ್ತಾಯ.
**रक्त–** (ರಕ್ತ–) ಪು. ನೆತ್ತರದ ಒತ್ತಡ.
**दाबणे** (ದಾಬಣೇ) ಕ್ರಿ. ಸಂ. ಒತ್ತು, ಒತ್ತಿಕ್ಕು, ೨. ಅಂಜಿಸು ೩. ನಿಯಂತ್ರಣಮಾಡು.
**दाबखीळ** (ದಾಬ್‌ಖೀಳ್) ಸ್ತ್ರೀ. ಸ್ಕ್ರ್ಯು, ಕ್ಲಿಪ್.
**दाबादाबी** (ದಾಬಾದಾಬೀ) ಸ್ತ್ರೀ. ಒತ್ತುವಿಕೆ, ಹಾಸೆ, (ಸುದ್ದಿಯನ್ನು) ಮುಚ್ಚಿಡುವಿಕೆ.
**दाभण** (ದಾಭಣ್) ಪು. ದೊಡ್ಡಸೂಜಿ.
**–काठी** (–ಕಾಠೀ) ವಿ, ಸಣ್ಣಅಂಚಿನ (ಪಂಜೆ) ಕತ್ತರಿಸಿದ (ಸಣ್ಣ) ಮೀಸೆ.
**दाम** (ದಾಮ್) ಪು. ಫಾ. ಹಣ, ಧನ, ಕಿಮ್ಮತ್ತು, ಬೆಲೆ ೨. ಸಂ. ಜಾಲ, ಹಾರ.
**–चुंबक** (–ಚುಂಬಕ್) ಪು. ಜಿಪುಣ.
**दामट** (ದಾಮಟ್) ವಿ. ಹಸಿಯಾದ, ಆರ್ದ್ರ.
**दामटणे** (ದಾಮಟಣೇ) ಕ್ರಿ. ಸಂ. ಜಬರಿಸು, ಗದ್ದರಿಸು ೨. ಉಪಯೋಗಿಸು, ಸಾಗಿಸು, ಕೆಲಸ ಬಗೆ ಹರಿಸು
**दामटी** (ದಾಮಟೀ) ಸ್ತ್ರೀ. (ಸಣ್ಣ) ರೊಟ್ಟಿ.
**दामदुप्पट** (ದಾಮ್‌ದುಪ್ಪಟ್) ವಿ. ಎರಡುಪಟ್ಟು ದುಬಾರಿ ೨. ಮೊಬಲಗು ಬಡ್ಡಿ ಕೂಡಿ ಎರಡು ಪಟ್ಟು ಆದ ರಕಮು.
**दामदौलत** (ದಾಮ್‌ದೌಲತ್) ಸ್ತ್ರೀ. ಸಿರಿವಂತಿಕೆ, ಒಡೆತನ, ಐಶ್ವರ್ಯ.
**दामनगीर** (ದಾಮನ್‌ಗೀರ್) ವಿ. ಫಾ. ಬಾಧ್ಯತೆಯುಳ್ಳ ಹಕ್ಕುದಾರ.
**दामाजीपंत** (ದಾಮಾಜಿಪಂತ್) ಪು. ರೊಕ್ಕ, ಹಣ.
**दामिनी** (ದಾಮಿನೀ) ಸ್ತ್ರೀ ಮಿಂಚು.
**दामोदर** (ದಾಮೋದರ್) ವಿ. ಸಂ. ಐಶ್ವರ್ಯವಂತ, ಭಾಗ್ಯವಂತ.
**दाय** (ದಾಯ) ಪು. ಸಂ. ಪೂರ್ವಜರ ಗಳಿಕೆ, ಸೊತ್ತು ಆಸ್ತಿ.
**–भाग** (–ಭಾಗ್) ಪು. ಆಸ್ತಿಯಪಾಲು.
**दायरा** (ದಾಯರಾ) ಪು. ಅರ. ವರ್ತುಳ ೨. ಕಬರಿ ಸ್ಥಾನ.
**दायाद** (ದಾಯಾದ) ಪು. ಆಸ್ತಿಯ ಪಾಲುಗಾರ, ಆಪ್ತ, ನೆಂಟ.
**दायित्व** (ದಾಯಿತ್ವ) ಪು. ಸಾಲ – ೨. ಹೊಣೆ.
**दार** (ದಾರ್) ನ. ಬಾಗಿಲ.
**दारकस** (ದಾರ್‌ಕಸ್) ನ. (ಬಾಗಿಲಿನ) ಕಂಬ, ತೋಳು.
**दारग्रहण** (ದಾರಗ್ರಹಣ) ನ. ಮದುವೆ, ವಿವಾಹ.
**दारमदार** (ದಾರಮದಾರ್) ಪು. ಕರಾರು, ಕಟ್ಟಳೆ ೨. ಒಪ್ಪಂದ ೩. ಆಧಾರ, ಭರವಸೆ.
**दारवठा** (ದಾರವಠಾ) ಪು. ಹೊಸ್ತಿಲ.
**दारा** (ದಾರಾ) ಸ್ತ್ರೀ. ಸಂ. ಹೆಂಡತಿ.
**दारिद्र्य** (ದಾರಿದ್ರ್ಯ) ನ. ಸಂ. ಬಡತನ.
**दारिवठा** (ದಾರಿವಠಾ) ಪು. ಬಾಗಿಲ.
**दारु** (ದಾರು) ಸ್ತ್ರೀ. ಸಂ. ಕಟ್ಟಿಗೆ.
**दारुड्या** (ದಾರುಡ್ಯಾ) ಪು. ಹೆಂಡ ಕುಡಿಯುವವ, ಕುಡುಕ.
**दारुण** (ದಾರುಣ) ವಿ. ಸಂ. ಕಠಿಣ, ಭಯಂಕರ.
**दारू** (ದಾರೂ) ಸ್ತ್ರೀ. ಫಾ. ಸೆರೆ, ಸರಾಯಿ, ಹೆಂಡ, ಮದ್ಯ. ೨. ಪಟಾಕ್ಷಿ, ಮದ್ದು ಗುಂಡು.
**–काम** (ಕಾಮ್) ನ. ಶೋಭೆಯ ಮದ್ದುಗುಂಡು.

**–गोळा** (–ಗೋಳಾ) ಪು. ಯುದ್ಧದ ಮದ್ದು ಗುಂಡು.

**–बंदी** (–ಬಂದೀ) ಸ್ತ್ರೀ. ಮದ್ಯ ನಿಷೇಧ.

**–बाज** (–ಬಾಜ್) ವಿ. ಸೆರೆ ಕುಡಿಯುವವ.

**दार्ढ्र्य** (ದಾರ್ಢ್ಯ) ನ. ಸಂ. ದೃಢತೆ, ಸ್ಥಿರತೆ.

**दार्शनिक** (ದಾರ್ಶನಿಕ) ಪು. ಸಂ. ದರ್ಶನ ಸಾಹಿತ್ಯದ ಅಭ್ಯಾಸಕ, ತತ್ವಜ್ಞಾನಿ.

**दालचीनी** (ದಾಲಚೀನೀ) ಸ್ತ್ರೀ. ಫಾ. ದಾಲಚಿನ್ನಿ.

**दालन** (ದಾಲನ್) ನ. ಫಾ. ಕೊಟ್ಟಿಗೆ, ಭಾಗ,(ಮನೆಯ) ಕೋಣೆ.

**दाली** (ದಾಲೀ) ಸ್ತ್ರೀ. ಖಡ್ಗದ ನಡುಕಟ್ಟು.

**दाव** (ದಾವ್) ಪು. ಅರಣ್ಯ, ಅಡವಿ.

**दावण** (ದಾವಣ್) ಸ್ತ್ರೀ. ದನಗಳನ್ನು ಕಟ್ಟುವ ಹಗ್ಗ, ಡಾವಣಿ.

**दावा** (ದಾವಾ) ಪು. ಅರ. ಮೊಖದ್ದಮೆ, ಖಟ್ಲೆ, ವ್ಯಾಜ್ಯ.

**दावाग्नी–दावानल** (ದಾವಾಗ್ನಿ–ದಾವಾನಲ್) ಪು. ಅಡವಿಯಲ್ಲಿಯ ಬೆಂಕಿ.

**दावें** (ದಾವೇಂ) ನ. ದನಗಳನ್ನು ತಡೆದು ಹಾಕುವುದಕ್ಕಾಗಿ ಕಟ್ಟುವ ಹಗ್ಗ.

**दावेकरी** (ದಾವೇಕರೀ), **दावेदार** (ದಾವೇದಾರ್) } ವಿ. ಅರ. ವ್ಯಾಜ್ಯ ಹೂಡಿದವ, ವಿರುದ್ಧಪಕ್ಷದವ, ೨. ಹಗೆ, ಪ್ರತಿಸ್ಪರ್ಧಿ.

**दावेदारी** (ದಾವೇದಾರೀ) ಸ್ತ್ರೀ. ಅರ. ವ್ಯಾಜ್ಯ. ೨. ಬಾಧ್ಯತೆ.

**दास** (ದಾಸ್) ಪು. ಸಂ. ಆಳು, ದಾಸ, ಕಿಂಕರ, ಗುಲಾಮ, ೨. ಆಜ್ಞಾಧಾರಕ.

**दासानुदास** (ದಾಸಾನುದಾಸ್) ಪು. ಸಂ. ಅತಿ ಆಜ್ಞಾಧಾರಕ.

**दासी** (ದಾಸೀ) ಸ್ತ್ರೀ. ಸಂ. ದಾಸಿ, ತೊತ್ತು.

**–पुत्र** (–ಪುತ್ರ) ಪು. ಸೂಳೆಯಮಗ, ಅನೌರಸ ಮಗ.

**दास्तान** (ದಾಸ್ತಾನ್) ನ. ಫಾ. ೧. ಕಥೆ, ಅಭ್ಯಾಸ. ೨. ಧಾನ್ಯ ಸಂಗ್ರಹ.

**–दार** (–ದಾರ್) ಪು. ಭಂಡಾರಿ, ಧಾನ್ಯದ ಅಧಿಕಾರಿ.

**दास्य** (ದಾಸ್ಯ) ನ. ಸಂ. ದಾಸತ್ವ, ಪರಾವಲಂಬಿತ್ವ

**दाह** (ದಾಹ್) ಪು. ಸಂ. ಉರಿತ, ಸೆಕೆ, ಉಷ್ಣತೆ. ಕಾವು.

**दाहक** (ದಾಹಕ) ವಿ. ಸಂ. ಸುಡುವ. ೨. ತೊಂದರೆ ಕೊಡುವ.

**दाहोत्रा** (ದಾಹೋತ್ರಾ) ವಿ. ನೂರಕ್ಕೆ ಹತ್ತರಂತೆ ಬಡ್ಡಿಯದರ.

**दाह्य** (ದಾಹ್ಯ) ವಿ. ಸಂ. ಸುಟ್ಟು ಹೋಗುವ, ದಹನಶೀಲ.

**दाक्षिणात्य** (ದಾಕ್ಷಿಣಾತ್ಯ) ವಿ. ದಕ್ಷಿಣ ಭಾರತದ.

**दाक्षिण्य** (ದಾಕ್ಷಿಣ್ಯ) ನ. ಸಂ. ಆದರ ೨. ದಯೆ, ಕರುಣೆ.

**दांड** (ದಾಂಡ್) ವಿ. ಅವಿಚಾರಿ, ಹುಂಬ. ೨. ಪು. ದೊಡ್ಡಗಳ, ಕೋಲು.

**दांडकणे** (ದಾಂಡಕಣೇ) ಕ್ರಿ. ಸ. ಹೊಡೆ, ಬಡಿ.

**दांडका** (ದಾಂಡಕಾ) ಪು. ಕ. ಜಡವಾದ ಸಣ್ಣ ಬಡಿಗೆ, ಕೋಲು.

**दांडगा** (ದಾಂಡಗಾ) ಪು. ಸ್ಥೂಲ, ದೊಡ್ಡ, ವಿಶಾಲ, ೨. ಅಡಮುಠ್ಠ, ಮುಠ್ಠಾಳ.

**–व्यासंग** (ವ್ಯಾಸಂಗ್) ಪು. ವಿಶಾಲ ವಾಚನ.

**दांडगाई** (ದಾಂಡಗಾಈ) ಸ್ತ್ರೀ. ಅನುಚಿತ ಆಚರಣ, ಗುದಮುರಿಗೆ.

**दांडगेला** (ದಾಂಡಗೇಲಾ) ವಿ. ದೊಡ್ಡ, ಸ್ಥೂಲ, ದಪ್ಪ.

**दांडदपट** (ದಾಂಡ್‌ದಪಟ್) ಸ್ತ್ರೀ. ಬೆದರಿಸುವಿಕೆ, ಅಂಜಿಸುವಿಕೆ.

**दांडपट्टा** (ದಾಂಡ್‌ಪಟ್ಟಾ) ಪು. ಕತ್ತಿ, ಢಾಲು, ಕೋಲು ಇವುಗಳನ್ನು ತೆಗೆದುಕೊಂಡು ಮಾಡುವ ವ್ಯಾಯಾಮ.

**दांडा** (ದಾಂಡಾ) ಪು. ಹಿಡಿಕೆ, ಕೊಡಲಿಯ ಕಾವು, ಸಣ್ಣ ಕೋಲು.

**दांडी** (ದಾಂಡೀ) ಸ್ತ್ರೀ. ಪಲ್ಲಕ್ಕಿಯ) ಹೊರುವ ಗಳ ೨. ಭೂಶಿರ, ಸಮುದ್ರದಲ್ಲಿ ಸೇರುವ ನೆಲ.

**–मारणे** (ಮಾರಣೇ) ಕ್ರಿ. ಸ. (ಕೆಲಸ, ಕ್ಲಾಸು) ತಪ್ಪಿಸು, ರಜಾ) ತೆಗೆದುಕೊ.

**दांडू** (ದಾಂಡೂ) ಪು. ಕ. (ಚಿಣಿಫಣಿ ಆಟದ) ಉದ್ದ ಕೋಲು.

**दांडूक** (ದಾಂಡೂಕ್) ನ. ಕ. ದಪ್ಪ, ಕಟ್ಟಿಗೆ, ಕೋಲು.

**दांडोरा** (ದಾಂಡೋರಾ) ಪು. ಡಂಗುರ, ಘೋಷಣೆ.

**दांत** (ದಾಂತ್) ಪು. ಹಲ್ಲು.

**–काढणे, दाखविणे** (–ಕಾಢಣೇ, ದಾಖವಿಣೇ) ಕ್ರಿ. ಸ. ಅಣಕಿಸು, ಉಪಹಾಸ ಮಾಡು. ನಗು.

**–कोरून पोट भरणे** (ಕೋರೂನ್ ಪೋಟ್ ಭರಣೇ) ಕ್ರಿ. ಸ. ಜಿಪುಣತನ ಮಾಡು.

**–खाणे** (–ಖಾಣೇ) ಕ್ರಿ. ಅ. ಸಿಟ್ಟಾಗು, ದ್ವೇಷ ಮಾಡು.

**–ठेवणे धरणे** (–ಠೇವಣೇ, ಧರಣೇ) ಕ್ರಿ. ಸ. ಕುನುಸು ಹಿಡಿ, ಹಗೆತನಮಾಡು.

**–पडणे** (–ಪಡಣೇ) ಕ್ರಿ. ಅ. ಸೋಲು ಕಷ್ಟವಾಗು.

**–पाडणे** (–ಪಾಡಣೇ) ಕ್ರಿ. ಸ. ಪಾರುಪತ್ಯ ಮಾಡು, ಸೋಲಿಸು.

**दाताच्या कण्या करणे** ಕ್ರಿ. ವಿ. ಅಂಗಲಾಚು, ಶ್ರಮಬಟ್ಟು ಕಲಿಸು.

**दाती तृण धरणे** (ದಾತೀ ತೃಣ ಧರಣೇ) ಕ್ರಿ. ಅ. ನಮ್ರನಾಗು.

**खाण्याचे दांत वेगळे, दाखवायचे वेगळे** (ಖಾಣ್ಯಾಚೇ ದಾತ್ ವೇಗಳೇ ದಾಖವಾಯಚೇ ವೇಗಳೇ) ನಾಣ್ಣುಡಿ, ದಂಭಾಚಾರ, ದಾಂಭಿಕವೃತ್ತಿ.

**दातखिळी बसणे** (ದಾತ್‌ಖಿಳೀ ಬಸಣೇ) (ಅಂಜಿಕೆಯಿಂದ) ಬಾಯಿ ಬಂದಾಗು, ಮಾತಾಡಲಿಕ್ಕೆ ಕಠಿಣ ವಾಗು.

**दात विचकणे** (ದಾತ್ ವಿಚಕಣೇ) ಕ್ರಿ. ಅ. ಹಲ್ಲು ಕಿರಿ, ಉಪಹಾಸಮಾಡು.

**दात होठ खाणे** (ದಾತ್ ಓಠ್ ಖಾಣೇ) ಕ್ರಿ. ಅ. ಸಿಟ್ಟಾಗು, ರೊಚ್ಚಿಗೇಳು.

**दात किटवणे** (ದಾತ್ ಕಿಟವಣೇ) ಕ್ರಿ. ಸ. ಅಂಗ ಲಾಚಿ ಬೇಡು.

**आपलेच दात आपलेच ओठ** (ಆಪಲೇಚ್ ದಾತ್ ಆಪ ಲೇಚ್ ಓಠ್) ನಾಣ್ಣುಡಿ ತನ್ನ ತಪ್ಪಿನಿಂದ ಕಷ್ಟ ವಾಗು.

**दात आहेत तर चणे नाहीत–चणे आहेत तर दात नाहीत** (ದಾತ ಆಹೇತ ತರ ಚಣೇ ನಾಹೀತ– ಚಣೇ ಆಹೇತ ತರ ದಾತ ನಾಹೀತ) ಕ್ರಿ. ನಾಣ್ಣುಡಿ ಹಲ್ಲಿರುವಾಗ ಕಡಲೆಯಿಲ್ಲ–ಕಡಲೆಯಿದ್ದಾಗ ಹಲ್ಲು ಗಳಿಲ್ಲ

**दातखीळ** (ದಾತ್‌ಖೀಳ್) ಸ್ತ್ರೀ. ಅಂಜಿಕೆಯಿಂದ ಬಾಯಿ ತೆಗೆಯಲಿಕ್ಕೆ ಕಷ್ಟವಾಗುವಿಕೆ.

**दातके** (ದಾತಕೇ) ನ. ಕುಂಟೆ, ಹಲುಬೆ.

**दात कोरणे** (ದಾತ್ ಕೋರಣೇ) ನ. ಹಲ್ಲುಕಡ್ಡಿ.

**दातवण** (ದಾತ್‌ವಣ) ನ. ಹಲ್ಲುಹಿಟ್ಟು, ಹಲ್ಲಿಟ್ಟು, ಹಲ್ಲುಪುಡಿ, ೨. ಹಲ್ಲುಉಜ್ಜುವ ಸಲುವಾಗಿ ಉಪ ಯೋಗಿಸುವ ಕಡ್ಡಿ.

**दाता** (ದಾತಾ) ಪು. ಹಣಿಗೆಯ ಹಲ್ಲುಗಳು.

**दाताळे** (ದಾತಾಳೇ) ನ. ಕುಂಟೆ, ಹಲುಬೆ.

**दातरड्या** (ದಾತರಡ್ಯಾ) ಸ್ತ್ರೀ. ಬಹು. ಹಲ್ಲುಗಳು.

**दांपत्य** (ದಾಂಪತ್ಯ) ನ. ಸಂ. ದಂಪತ್ತು, ಗಂಡ ಹೆಂಡತಿ.

**दांभिक** (ದಾಂಬಿಕ್) ಪು. ೧. ವಿ. ಡಂಭಾಚಾರ ಮಾಡುವವ.

**दिक्कत** (ದಿಕ್ಕತ್) ಸ್ತ್ರೀ.ಅರ. ತೊಂದರೆ, ಪೀಕಲಾಟ. ೨. ಅನುಮಾನ ಸಂಕಟ.

**–खोर** (–ಖೊರ್) ವಿ. ಸಂಶಯ ವೃತ್ತಿಯುಳ್ಳವ, ಶಂಕಿಸುವವ.

**दिक्काल** (ದಿಕ್ಕಾಲ್) ಪು. ದಿಕ್ಕು ಮತ್ತು ಕಾಲ.

**दिक्पाल** (ದಿಕ್ಪಾಲ್) ಪು. ದಿಕ್ಕಿನ ಸ್ವಾಮಿ, ಪಾಲಕ.

**दिखाऊ** (ದಿಖಾಊ) ವಿ. ತೋರಿಕೆಯ, ನಿಜವಲ್ಲದ.

**दिगंत** (ದಿಗಂತ್) ವಿ. ಸಂ. ದಿಕ್ಕಿನ ಕೊನೆ, ಅತಿ ವಿಶಾಲ.

**दिगंबर** (ದಿಗಂಬರ್) ಪು. ಸಂ. ದತ್ತಾತ್ರೇಯ, ೨. ಶಿವ, ೩. ಜೈನಪಂಥ. ೪. ನಗ್ನ.

**दिग्गज** (ದಿಗ್ಗಜ) ಪು. ದಿಕ್ಕುಗಳನ್ನು ಹೊರುವ ಆನೆ.

**दिग्दर्शन** (ದಿಗ್ದರ್ಶನ) ನ. ಸಲಹೆ, ಮಾರ್ಗ ತೋರಿ ಸುವಿಕೆ, ದಿಗ್ದರ್ಶನ.

**दिग्विजय** (ದಿಗ್ವಿಜಯ) ಪು. ಸಂ. ನಾಲ್ಕೂ ದಿಕ್ಕಿನಲ್ಲಿ ಹೋರಾಡಿ ರಾಜ್ಯ ಬೆಳೆಸುವಿಕೆ, ಯಶಃ ಸಂಪಾದನೆ

**दिग्विजयी** (ದಿಗ್ವಿಜಯೀ) ವಿ. ಸಂ. ಯಶಸ್ವಿ, ಎಲ್ಲ ರನ್ನೂ ಸೋಲಿಸುವವ.

**दिङ्मंडल** (ದಿಙ್ಮಂಡಲ್) ನ. ಸಂ. ಕ್ಷಿತಿಜ, ಸಪಾಟು ಭೂಮಿ.

**दिडका** (ದಿಡಕಾ) ಪು. ಒಂದುವರೆ ಪಟ್ಟಿನ ಅಳತೆಯ.

**दिडकी** (ದಿಡಕೀ) ಸ್ತ್ರೀ. ದುಡ್ಡು, (ಹಳೆಯ) ಮೂರು ಕಾಸು, ಬಿಲ್ಲಿ.

**दिडोत्रा** (ದಿಡೋತ್ರಾ) ಪು. ನೂರಕ್ಕೆ ತಿಂಗಳಿಗೆ ರೂ. ೧ – ೫೦ ರಂತೆ (ಬಡ್ಡಿಯದರ)

**दिढी** (ದಿಢೀ) ಕ್ರಿ. ವಿ. ಒಂದುವರೆ ಪಟ್ಟು.

**दिधणे** (ದಿಧಣೆ) ಕ್ರಿ. ಸಂ. ಕೊಡು, ದಾನಮಾಡು.

**दिन** (ದಿನ) ಪು. ಸಂ. ದಿವಸ, ಹೊತ್ತು.

**दिनकर** (ದಿನಕರ್) ಪು. ಸಂ. ಸೂರ್ಯ.

**दिनचर्या** (ದಿನಚರ್ಯಾ) ಪು. ಸಂ. ದಿನಚರಿ, ದಿನ ಚರ್ಯೆ, ಪ್ರತಿನಿತ್ಯದ ವ್ಯವಹಾರ.

**दिनदर्शिका** (ದಿನದರ್ಶಿಕಾ) ಸ್ತ್ರೀ. ಸಂ. ಪಂಚಾಂಗ, ತಾರೀಖು ತೋರಿಸುವ ಪಟ್ಟಿ, ಕ್ಯಾಲೆಂಡರ್.

**दिनमणी** (ದಿನಮಣಿ) ಪು. ಸಂ. ಸೂರ್ಯ.

**दिनमान** (ದಿನಮಾನ್) ನ. ಸಂ. ದಿವಸದ ಸಮಯ (ಸಣ್ಣ ಅಥವಾ ದೊಡ್ಡ ಮುಂ) ೨. ಪರಿಸ್ಥಿತಿ.

**दिनार** (ದಿನಾರ್) ಪು. ಫಾ. ಹೊನ್ನು, ದೀನಾರ್.

**दिनावधि** (ದಿನಾವಧಿ) ಸ್ತ್ರೀ. ತಡ, ವಿಲಂಬ.

**दिपणे** (ದಿಪಣೇ) ಕ್ರಿ. ಸ. ಕಣ್ಣು ಕುಕ್ಕು.

**दिपवाळी** (ದಿಪವಾಳೀ) ಸ್ತ್ರೀ. ದೀಪಾವಳಿ, ದೀವಳಿಗೆ.

**दिमाख** (ದಿಮಾಖ್) ಪು. ಅರ. ಡೌಲು, ದಿಮ್ಮಾಕ, ಜಂಭ.

**दिम्मत** (ದಿಮ್ಮತ್) ಸ್ತ್ರೀ. ಫಾ. ನಿಯಂತ್ರಣ.

**दिरंगाई** (ದಿರಂಗಾಈ) ಸ್ತ್ರೀ. ತಡ, ಸಾವಕಾಶವಾದ ಕೆಲಸ, ಆಲಸ್ಯ.

**दत्फर–** (ದಫ್ತರ್) ಸ್ತ್ರೀ. ಸರಕಾರೀ ಕಚೇರಿಗಳಲ್ಲಿ ನಡೆಯುವ ಸಾವಕಾಶವಾದ ಕೆಲಸ.

**दिल** (ದಿಲ್) ನ. ಫಾ. ಹೃದಯ. ೨. ಪ್ರೇಮ.

**–खुलास** (ಖುಲಾಸ್) ವಿ. ಬಿಚ್ಚಿ ಸ್ಪಷ್ಟವಾಗಿ, ಸಂಕೋಚವಿಲ್ಲದೆ.

**–खुशी** (–ಖುಶೀ) ಸ್ತ್ರೀ. ಆನಂದ, ಸಂಭ್ರಮ.

**–खेचक** (–ಖೇಚಕ್) ವಿ. ಆಕರ್ಷಕ.

**–गिरी** (ಗಿರೀ) ಸ್ತ್ರೀ. ಖೇದ, ಪಶ್ಚಾತ್ತಾಪ.

**दिलगीर** (ದಿಲಗೀರ್) ವಿ. ಫಾ. ಖಿನ್ನ. ೨. ತಪ್ಪು ಒಪ್ಪುವವ.

**दिलदार** (ದಿಲ್‌ದಾರ್) ವಿ. ಫಾ. ಉದಾರ, ಶೂರ.

**दिलदारी** (ದಿಲ್‌ದಾರೀ) ಸ್ತ್ರೀ. ಫಾ. ಔದಾರ್ಯ, ದೊಡ್ಡ ಮನಸ್ಸು.

**दिलवर** (ದಿಲವರ್) ವಿ. ಫಾ. ಶೂರ.

**दिलासा** (ದಿಲಾಸಾ) ಪು. ಫಾ. ಸಾಂತ್ವನ, ಸಮಾಧಾನ ಹೇಳುವಿಕೆ.

**दिवटा** (ದಿವಟಾ) ಪು. ಕುಲಕಳಂಕ. ೨. ದೀವಟಿಗೆ.

**दिवटी** (ದಿವಟೀ) ಸ್ತ್ರೀ. ಸಣ್ಣ ದೀವಟಿಗೆ.

**दिवटया** (ದಿವಟ್ಯಾ) ಪು. ದೀವಟಿಗೆ ಹಿಡಿಯುವವ.

**दिवली** (ದಿವಲೀ) ಸ್ತ್ರಿ. ಎಣ್ಣೆ ತೆಗೆದುಕೊಳ್ಳು ಪಾತ್ರೆ. ೨. ದೀಪ.

**दिवस** (ದಿವಸ್) ಪು. ಸಂ. ದಿನ, ದಿವಸ. ೨. ಹಗಲು ಹೊತ್ತು.

**–काढणे** (ಕಾಢಣೇ) / **–लोटणे** (ಲೋಟಣೇ) } ಕ್ರಿ. ಅ. ಕಷ್ಟದಿಂದ ಜೀವಿಸು.

**–फिरणे** (–ಫಿರಣೇ) ಕ್ರಿ. ಅ. ಕೇಡು ಒದಗು.

**दिवसा उजेडी** (ದಿವಸಾ ಉಜೇಡೀ) ಕ್ರಿ. ವಿ. ಹಗಲು ಹೊತ್ತಿನಲ್ಲಿ, ಸಂಜೆಯ ಮುಂಚಿತ.

**दिवसा ढवळया** (ದಿವಸಾ ಢವಳ್ಯಾ) ಕ್ರಿ. ವಿ. ಹಗಲು ಹೊತ್ತಿನಲ್ಲಿ (ಮಾಡಿದ ಪಾಪ)

**चार दिवस सासूचे, चार दिवस सुनेचे** (ಚಾರ ದಿವಸ್ ಸಾಸೂಚೇ, ಚಾರ ದಿವಸ್ ಸುನೇಚೇ) ನಾಣ್ಣುಡಿ. ಕೆಲವು ದಿನ ಅತ್ತೆಗೆ ಸುಖ ಕೆಲವು ದಿನ ಸೊಸೆಗೆ ಸುಖ.

**अजून पहिला दिवस आहे** (ಅಜೂನ್ ಪಹಿಲಾ ದಿವಸ ಆಹೇ) ನಾಣ್ಣುಡಿ. ಏನೂ ಬದಲಾಗಿಲ್ಲ.

**दिवस जाणे, राहणे,** (ದಿವಸ ಜಾಣೇ, ರಾಹಣೇ) ಕ್ರಿ. ಅ. ಗರ್ಭವತಿಯಾಗು.

**दिवसांत असणे** (ದಿವಸಾತ್ ಅಸಣೇ) ಕ್ರಿ. ಅ. ಹಡೆಯಲಿಕ್ಕೆ ಆಗಿರು.

**दिवसगत** (ದಿವಸ್‌ಗತ್) ಸ್ತ್ರೀ. ತಡ.

**दिवसा** (ದಿವಸಾ) ಕ್ರಿ. ವಿ. ಹಗಲು ಹೊತ್ತಿನಲ್ಲಿ.

**–ढवळया** (–ಢವಳ್ಯಾ) ಕ್ರಿ. ವಿ. ಹಗಲಿನಲ್ಲಿಯೇ.

**–दिवसा दिवाळी** (–ದಿವಸಾ ದಿವಾಳೀ) ಸ್ತ್ರೀ. ಅಪರಿಮಿತ ಖರ್ಚು.

**दिवसेदिवस** (ದಿವಸೇದಿವಸ) ಪ್ರತಿದಿನ.

**दिवा** (ದಿವಾ) ಪು. ದೀಪ. ೨. ಕ್ರಿ. ವಿ. ಹಗಲು ಹೊತ್ತಿನಲ್ಲಿ.

**दिव्याखाली अंधार** (ದಿವ್ಯಾಖಾಲೀ ಅಂಧಾರ) ನಾಣ್ಣುಡಿ. ಘನವಂತನ ದೋಷ,ಕೊರತೆ. (ದೀಪದ ಕೆಳಗಿನ ಕತ್ತಲೆ).

**दिवे लावणे** (ದಿವೇ ಲಾವಣೇ) ಕ್ರಿ. ಸ. (ವ್ಯಂಗ್ಯ) ಅಪಕೀರ್ತಿ ತರು.

**घरात दिवा तर देवळात दिवा** (ಘರಾತ್ ದಿವಾ ತರ್ ದೇವಳಾತ್ ದಿವಾ) ನಾಣ್ಣುಡಿ. ಮೊದಲು ಮನೆಯಲ್ಲಿ ಏರ್ಪಾಡು ಮಾಡಿ ನಂತರ ಗುಡಿಯಲ್ಲಿ ಮಾಡಬೇಕು.

**दिव्यास निरोप देणे** (ದಿವ್ಯಾಸ್ ನಿರೋಪ್ ದೇಣೇ) ಕ್ರಿ. ಸ. ದೀಪ ಆರಿಸು.

**दिव्याने रात्र काढणे** (ದಿವ್ಯಾನೇ ರಾತ್ರ ಕಾಢಣೇ) ಕ್ರಿ. ಅ. ಜಾಗರಣೆ ಮಾಡು.

**दिवाण, दिवाणजी** (ದಿವಾಣ, ದಿವಾಣಜೀ) ಪು. ಫಾ. ಮುಖ್ಯ ವ್ಯವಸ್ಥಾಪಕ, ಮಂತ್ರಿ.

**दिवाणखाना** ( ದಿವಾಣ್‌ಖಾನಾ ) ಪು. ನಡುಮನೆ, ಮನೆಯಲ್ಲಿಯ ಸಭಾಸ್ಥಾನ.

**दिवाणगीरी** (ದಿವಾಣಗಿರೀ) ಸ್ತ್ರೀ. ಫಾ. ಮುಖ್ಯ ವ್ಯವಸ್ಥಾಪಕ, ಮಂತ್ರಿ, ಮುಂ. ಪದ, ಅಧಿಕಾರ.

**दिवाणा** (ದಿವಾಣಾ) ವಿ. ಫಾ. ಹುಚ್ಚ, ಮೂಢ.

**दिवाणी** (ದಿವಾಣೀ) ವಿ. ಫಾ. ಮುಲಕೀ (ನ್ಯಾಯಾಲಯ).

**–अदालत** (–ಅದಾಲತ್) ಸ್ತ್ರೀ. ಅರ. ಹಣಕಾಸಿನ ವ್ಯವಹಾರಗಳ ನ್ಯಾಯಾಲಯ, ಸಿವಿಲ್ ಕೋರ್ಟ.

**दिवान्ध** (ದಿವಾಂಧ) ವಿ. ಸಂ. ಹಗಲು ಕಣ್ಣು ಕಾಣದವ.

**दिवाभीत** (ದಿವಾಭೀತ) ವಿ. ಸಂ. ಹಗಲುಹೊತ್ತು ಅಡ್ಡಾಡದವ, ಅಡಗಿ ಕೂಡುವವ. ೨. ಗೂಗೆ(ಪು).

**दिवार** (ದಿವಾರ್) ಸ್ತ್ರೀ. ಫಾ. ಗೋಡೆ.

**दिवाळखोर** ( ದಿವಾಳ್‌ಖೋರ್ ) ಪು. ಹಿಂ. ಸಾಲ ಮುಣುಗಿಸುವವ, ದಿವಾಳಿ ತೆಗೆದವ, ದರಿದ್ರನಾದವ.

**दिवाळसण** (ದಿವಾಳ್‌ಸಣ) ಪು. ಮದುವೆಯ ನಂತರ ಬರುವ ದೀವಳಿಗೆಗೆ ಅಳಿಯನನ್ನು ಸತ್ಕರಿಸುವ ಸಮಾರಂಭ.

**दिवाळी** (ದಿವಾಳೀ) ಸ್ತ್ರೀ ದೀವಳಿಗೆ, ದೀಪಾವಲಿ.

**दिवाळे** (ದಿವಾಳೇ) ನ. ದಿವಾಳಿ ತೆಗೆಯುವಿಕೆ, ಸಾಲ ಮಾಡುವಿಕೆ.

**दिवास्वप्न** ( ದಿವಾಸ್ವಪ್ನ ) ನ. ಸಂ. ಹಗಲುಗನಸು, ವೃಥಾ ಮನೋರಥ. ೨. ಮೂರ್ಖ ವಿಚಾರ.

**दिवेलावणी** (ದಿವೇಲಾವಣೀ) ಸ್ತ್ರೀ. ಮುಚ್ಚಂಜೆ.

**–ची वेळ** (–ಚೀ ವೇಳ್) ಸ್ತ್ರೀ. ಸಂಜೆ, ಮುಚ್ಚಂಜೆ.

**दिव्य** ( ದಿವ್ಯ ) ವಿ. ಸಂ. ಉತ್ತಮ, ದೇವಲೋಕದ.

**–दृष्टी** (–ದೃಷ್ಟಿ) ಸ್ತ್ರೀ. ದಿವ್ಯಜ್ಞಾನ.

**–ज्ञान** (–ಜ್ಞಾನ್) ನ. ಅಸಾಮಾನ್ಯ ಜ್ಞಾನ.

**दिव्याची अवस** (ದಿವ್ಯಾಚೀ ಅವಸ್) ಸ್ತ್ರೀ. ದೀಪದ ಅಮಾವಾಸ್ಯೆ, ಆಷಾಢ ಅಮಾವಾಸ್ಯೆ.

**दिशा** (ದಿಶಾ) ಸ್ತ್ರೀ. ಸ. ದಿಕ್ಕು, ಬದಿ.

**चारी दिशा मोकळ्या होणे** (ಚಾರೀದಿಶಾ ಮೋಕಳ್ಯಾ ಹೋಣೇ) ಸಂಪೂರ್ಣ ಸ್ವಾತಂತ್ರ್ಯವಿರು.

**–फाकणे** (ಫಾಕಣೇ) ಕ್ರಿ. ಅ. ಎಲ್ಲ ಕಡೆಗೆ ಬೆಳಕು ಕಾಣಿಸು.

**–दाखवणे** (–ದಾಖವಣೇ) ಕ್ರಿ. ಸ. ದಿಕ್ಕು ತೋರಿಸು, ಮಾರ್ಗದರ್ಶನ ಮಾಡು.

**दिशाभूल** (ದಿಶಾಭೂಲ್) ಸ್ತ್ರೀ. ತಪ್ಪುದಾರಿ ತೋರಿಸುವಿಕೆ, ತಪ್ಪು ಕಲ್ಪನೆಯನ್ನು ಮಾಡಿ ಕೊಡುವಿಕೆ.

**दिसणे** (ದಿಸಣೇ) ಕ್ರಿ.ಅ. ಕಾಣಿಸು, ತೋರು, ಅನಿಸು.

**दिसंदीस** (ದಿಸಂದೀಸ್) ಕ್ರಿ.ವಿ. ದಿನಂಪ್ರತಿ, ಪ್ರತಿನಿತ್ಯ.

**दिंड** (ದಿಂಡ್) ನ. ಬಟ್ಟೆಯ ಗಂಟು.

**दिंडी** (ದಿಂಡೀ) ಸ್ತ್ರೀ. ಸಣ್ಣ ಬಾಗಿಲ. ೨. ಒಂದು ವಾದ್ಯ. ೩. ಮೆರವಣಿಗೆ. ೪. ಒಂದು (ಕವಿತೆಯ) ವೃತ್ತ.

**दीड** (ದೀಡ್) ವಿ. ಒಂದೂವರೆ

**–शहाणा** (–ಶಹಾಣಾ) ವಿ. ಮೂರ್ಖ, ದಡ್ಡ.

**–दमडीचा** (–ದಮಡೀಚಾ) ವಿ. ಕೆಲಸಕ್ಕೆಬಾರದವ, ಹೀನ, ನಿಕೃಷ್ಟ.

**दीन** (ದೀನ್) ವಿ. ಸ. ದೀನ, ನಮ್ರ, ಬಡವ. ೨. ವಿ. ಅರ. ಮುಸಲ್ಮಾನರ ಯುದ್ಧಘೋಷಣೆ.

**–दयाळ** (–ದಯಾಳ) ವಿ. ಕರುಣಾಳು.

**–बंधु** (–ಬಂಧು) ವಿ. ಬಡವರ ಸಹಾಯಕ.

**–वत्सल** (–ವತ್ಸಲ) ವಿ. ಬಡವರನ್ನು ಕಾಪಾಡುವವ.

**–वाणा** (–ವಾಣಾ) ವಿ. ದೀನ, ದುಃಖಿತ.

**दीप-क** (ದೀಪ-ಕ) ಪು. ಸಂ. ದೀಪ.

**–गृह** (–ಗೃಹ) ಪು. ಸಮುದ್ರದಲ್ಲಿಯ ದೀಪಗೃಹ.

**–माळ** (–ಮಾಳ್) ಸ್ತ್ರೀ. ದೀಪಮಾಲೆ, ದೀಪಸ್ತಂಭ.

**दीपावली** (ದೀಪಾವಲೀ) ಸ್ತ್ರೀ. ದೀಪದ ಸಾಲು, ಸಾಲು ದೀಪ. ೨. ದೀವಳಿಗೆ.

**दीपोत्सव** (ದೀಪೋತ್ಸವ) ಪು. ದೀಪದ ಉತ್ಸವ, ದೀಪದ ಹಬ್ಬ.

**दीप्ति** (ದೀಪ್ತಿ) ಸ್ತ್ರೀ. ದೀಪದ ತೇಜ, ಹೊಳಪು.

**–मान** (–ಮಾನ್) ವಿ. ಹೊಳೆಯುವ.

**दीर** (ದೀರ್) ಪು. ಗಂಡನ ತಮ್ಮ-ಅಣ್ಣ, ಮೈದುನ, ಭಾವ.

**दीर्घ** (ದೀರ್ಘ) ವಿ. ಉದ್ದನ್ನ, ಬೆಳೆಸಿದ.

**–प्रयत्न** (–ಪ್ರಯತ್ನ) ಪು. ಸತತೋದ್ಯೋಗ.

**–कालिक** (ಕಾಲಿಕ) ವಿ. ಬಹಳ ಸಮಯದ, ಹಳೆಯ, ಬಹುದಿವಸ ನಡೆಯುವ.

**–दृष्टी** (–ದೃಷ್ಟಿ) ವಿ. ಬಹಳ ಮುಂದಿನ ವಿಚಾರ ಮಾಡುವವ, ಜಾಣ. ೨. ಜಾಣತನ.

**–द्वेषी** (ದ್ವೇಷೀ) ವಿ. ಬಹಳ ಕುನುಸು ಹಿಡಿಯುವವ.

**–सूत्री** (ಸೂತ್ರೀ) ವಿ. ಬಹಳ ಆಲಸ್ಯವಂತ ಬಹಳ ಸಾವಕಾಶವಾಗಿ ಕೆಲಸ ಮಾಡುವವ.

**दीर्घायु** (ದೀರ್ಘಾಯು) ವಿ. ಸಂ. ದೀರ್ಘಕಾಲ ಬದುಕುವವ.

**दीर्घीका** (ದೀರ್ಘಿಕಾ) ಸ್ತ್ರೀ. ಸಂ. ದೊಡ್ಡ ಬಾವಿ.

**दीर्ण** (ದೀರ್ಣ) ವಿ. ಹರಿದ, ತುಂಡಾದ.

**दीक्षा** (ದೀಕ್ಷಾ) ಸ್ತ್ರೀ. ದೀಕ್ಷೆ, ಸಂಸ್ಕಾರ, ಮುದ್ರೆ.

**दीक्षान्त** (ದೀಕ್ಷಾಂತ) ವಿ. ಅಭ್ಯಾಸಕ್ರಮ ಮುಗಿದ ಮೇಲಿನ ಪದವಿ, ಪರೀಕ್ಷೆ ಮುಗಿದ ಮೇಲಿನ.

**दीक्षित** (ದೀಕ್ಷಿತ) ವಿ. ಧರ್ಮ ಸಂಸ್ಕಾರಗಳ ದೀಕ್ಷೆ ಪಡೆದ, ದೀಕ್ಷಿತ.

**दुआब** (ದುಆಬ್) ಪು. ಫಾ. ಎರಡು ನದಿಗಳ ನಡುವಿನ ಪ್ರದೇಶ.

**दुकटा** (ದುಕಟಾ) ವಿ. ಬೇರೊಬ್ಬನ ಜೊತೆಯಲ್ಲಿ.

**दुकान** (ದುಕಾನ್) ನ. ಫಾ. ಅಂಗಡಿ, ವ್ಯಾಪಾರದ ಸ್ಥಳ.

**–काढणे** (–ಕಾಢಣೇ) ಕ್ರಿ. ಸಂ. ಅಂಗಡಿ ತೆಗೆ.

**–मांडणे** (–ಮಾಂಡಣೇ) ಕ್ರಿ. ಸಂ. (ವ್ಯಂಗ್ಯ) ಮಾರಲಿಕ್ಕೆ ಇಡು.

**–दार** (–ದಾರ್) ಪು. ಅಂಗಡಿಕಾರ.

**–दारी** (–ದಾರೀ) ಸ್ತ್ರೀ. ವ್ಯಾಪಾರ.

**दुष्काळ** (ದುಷ್ಕಾಳ್) ಪು. ಬರ, ಕ್ಷಾಮ.

**दुकूल** (ದುಕೂಲ್) ನ. ರೇಷ್ಮೆಯ ಬಟ್ಟೆ.

**दुक्कल** (ದುಕ್ಕಲ್) ಸ್ತ್ರೀ. ಜೊತೆ, ಇಬ್ಬರಾಗಿ ಬರುಹೋಗುವವರು.

**दुःख** (ದುಃಖ) ನ. ಸಂ. ದುಃಖ, ಕಷ್ಟ, ಸಂಕಟ.

**–वेशीस टांगणे** (–ವೇಶೀಸ್ ಟಾಂಗಣೇ) ಕ್ರಿ. ಸಂ. ಗೋಳು ಹೇಳಿಕೊಳ್ಳು.

**दुःखावर डागण्या देणे** (ದುಃಖಾವರ್ ಡಾಗಣ್ಯಾ ದೇಣೇ) ಕ್ರಿ. ಸಂ. ದುಃಖಿತನನ್ನು ಹೆಚ್ಚಾಗಿ ಪೀಡಿಸು.

**दुखणाईत** (ದುಖಣಾಈತ್) ವಿ. ಬೇನೆಬಿದ್ದವ, ರೋಗಿ.

**दुखणेकरी** (ದುಖಣೇಕರೀ) ವಿ. ಬೇನೆಬಿದ್ದವ, ರೋಗಿ.

**दुखणेबाहणे** (ದುಖಣೇಬಾಹಣೇ) ನ. ಜಡ್ಡುಜಾಪತ್ರಿ, ಬೇನೆ.

**दुखरा** (ದುಖರಾ) ವಿ. ದುಃಖವಾಗುವ, ನೋಯುವ, ಕೋಮಲ, ಉರಿಯುವ.

**दुखवटा** (ದುಖವಟಾ) ಪು. ಶೋಕಸಂತಾಪ, ಸತ್ತವನ ಸಲುವಾಗಿ ಮಾಡುವ ಶೋಕಪ್ರಸ್ತಾಪ.

**दुखवणे** (ದುಖವಣೇ) ಕ್ರಿ. ಸಂ. ನೋಯಿಸು, ಪೀಡಿಸು, ದುಃಖವಾಗುವಂತೆ ಮಾಡು.

**दुखावणे** (ದುಖಾವಣೇ) ಕ್ರಿ. ಅ. ನೋವಾಗು, ದುಃಖವಾಗು, ಪೆಟ್ಟು ಹತ್ತು.

**दुखापत** (ದುಖಾಪತ್) ಸ್ತ್ರೀ. ನೋವು, ದುಃಖ, ಗಾಯ.

**दुःखित** (ದುಃಖಿತ) ವಿ. ದುಃಖ ಹೊಂದಿದ, ದುಃಖಿತ.

**दुःखी** (ದುಃಖೀ) ವಿ. ಕಷ್ಟಹೊಂದಿದವ, ದುಃಖಿತ.

**दुगस्ता** (ದುಗಸ್ತಾ) ಕ್ರಿ. ವಿ. ಕಳೆದ ವರ್ಷ.

**दुगाणी** (ದುಗಾಣೀ) ಸ್ತ್ರೀ. ಕ. ದುಗ್ಗಾಣಿ, ಎರಡು ದುಡ್ಡಿನ ನಾಣ್ಯ. ೨. ಹಿಂದಿನ ಕಾಲುಗಳು.

**दुगाण्या झाडणे** (ದುಗಾಣ್ಯಾ ಝಾಡಣೇ) ಕ್ರಿ. ಸಂ. ಒದೆ, ಪ್ರಹಾರ ಮಾಡು.

**दुग्ध** (ದುಗ್ಧ) ನ. ಸಂ. ಹಾಲು.

**दुजा** (ದುಜಾ) ಪು. ಎರಡನೆಯವ, ಬೇರೊಬ್ಬ.

**–भाव** (–ಭಾವ್) ಪು. ಪರಕೀಯತೆ, ಇಬ್ಬಗೆಯ ವರ್ತನ, ಅನಾಸ್ಥೆ.

**दुजोरा** (ದುಜೋರಾ) ಪು. ಸಹಾಯ.

**दुटप्पी** (ದುಟಪ್ಪೀ) ವಿ. ಎರಡೂ ಬದಿಯಿಂದ ಮಾತನಾಡುವ, ಅಪ್ರಾಮಾಣಿಕ.

**दुट्टा** (ದುಟ್ಟಾ) ಪು. ಹಾಳೆ, ಕಾಗದ.

**दुडकी** (ದುಡಕೀ) ವಿ. ಸಣ್ಣ, ಗಿಡ್ಡ.

**–चाल** (ಚಾಲ್) ಕುಂಟುತ್ತ ನಡೆಯುವಿಕೆ, ತಡವರಿಸುವಿಕೆ.

**दुडदुड** (ದುಡ್‌ದುಡ್) ಕ್ರಿ. ವಿ. ದುಡುದುಡು, ಬೇಗನೆ.

**दुणणे** (ದುಣಣೇ) ಕ್ರಿ. ಸ. ಮಡಿಚು, ಮಡಿಕೆಹಾಕು.

**दुणा** (ದುಣಾ) ವಿ. ಎರಡರಷ್ಟು.

**दुणावणे** (ದುಣಾವಣೇ) ಕ್ರಿ. ಅ. ಎರಡು ಪಟ್ಟಾಗು, ಹೆಚ್ಚಾಗು, ಬೆಳೆ.

**दुतर्फा** (ದುತರ್ಫಾ) ವಿ. ಫಾ. ಎರಡೂ ಬದಿಗೆ ಇರುವ.

**दुतोंडे** (ದುತೋಂಡೇ) ನ. ಎರಡು ತಲೆಯುಳ್ಳ ನಂಜಿನ ಹಾವು.

**दुतोंडचा** (ದುತೋಂಡ್ಯಾ) ವಿ. ಮೋಸಗಾರ, ಒಬ್ಬರಿಗೊಂದು ಮತ್ತೊಬ್ಬನಿಗೆ ಮತ್ತೊಂದು ಹೇಳುವವ.

**दुथडी** (ದುಥಡೀ) ವಿ. ಎರಡೂ ದಂಡೆಗೆ (ತುಂಬಿ ಹರಿಯುವ)

**दुधाणी** (ದುಧಾಣೀ) ಸ್ತ್ರೀ. ಹಾಲು ಕಾಯಿಸುವ ಪಾತ್ರೆ.

**दुधाळ** (ದುಧಾಳ್) ವಿ. ಹಾಲಿನಂತ, ಬೆಳ್ಳನ್ನ. ೨. ಹಾಲು ಕೊಡುವ.

**दुधारू–ळू** (ದುಧಾರೂ–ಳೂ) ವಿ. ಹಾಲು ಹಿಂಡುವ.

**दुध्या** (ದುಧ್ಯಾ) ಪು. ಹಾಲುಗುಂಬಳ.

**दुनिया** (ದುನಿಯಾ) ಸ್ತ್ರೀ. ಅರ. ಜಗತ್ತು, ಪೃಥ್ವಿ.

**दुपट्टा** (ದುಪಟ್ಟಾ) ಪು. ಹಿಂ. ಶಾಲು ಹೊರುವ ವಸ್ತ್ರ.

**दुपटे** (ದುಪಟೇ) ನ. ಸಣ್ಣ ಹುಡುಗರ ಸಲುವಾಗಿ ತಯಾರಿಸಿದ ಹಾಸು, ವಸ್ತ್ರ.

**दुपाखी** (ದುಪಾಖೀ) ವಿ. ಎರಡೂ ಬದಿಗೆ ಇಳುಕಲುಗಳುಳ್ಳ.

**दुपार** (ದುಪಾರ್) ಸ್ತ್ರೀ. ಮಧ್ಯಾಹ್ನ.

**दुपारी** (ದುಪಾರೀ) ಕ್ರಿ. ವಿ. ಮಧ್ಯಾಹ್ನದಲ್ಲಿ.

**दुपारची सोय करणे** (ದುಪಾರಚೀ ಸೋಯ ಕರಣೇ) ಕ್ರಿ. ಸ. ಹೊಟ್ಟೆ ತುಂಬುವ ವ್ಯವಸ್ಥೆ ಮಾಡು, ಮಧ್ಯಾಹ್ನದ ಊಟದ ಯೋಚನೆ ಮಾಡು.

**दुपेटा** (ದುಪೇಟಾ) ಪು. ರೇಶ್ಮೆಯ ವಸ್ತ್ರ.

**दुप्पट** (ದುಪ್ಪಟ್) ಕ್ರಿ. ವಿ. ಎರಡು ಪಟ್ಟು.

**दुफळी** (ದುಫಳೀ) ಸ್ತ್ರೀ. ಒಡಕು, ಅಂತಸ್ಥ ಕಲಹ.

**दुबळा** (ದುಬಳಾ) ವಿ. ಅಶಕ್ತ, ಶಕ್ತಿಹೀನ, ಸೀರ, ಬಡಕ, ತೆಳ್ಳನ್ನ.

**दुबार** (ದುಬಾರ್) ಕ್ರಿ. ವಿ. ಎರಡುಪಟ್ಟು.

**दुबारी** (ದುಬಾರೀ) ವಿ. ಎರಡರಷ್ಟು.

**दुबेरजी** (ದುಬೇರಜೀ) ಎರಡು ಸಲ ಬರೆದ ಒಂದೇ ಖರ್ಚು.

**दुबेळके** (ದುಬೇಳಕೇ) ನ. ಗಿಡದ ಟೊಂಗೆಗಳ ನಡುವಿನ ಬೊಡ್ಡೆ.

**दुभती** (ದುಭತೀ) ವಿ. ಹಾಲು ಕೊಡುವ ಹಿಂಡುವ.

**दुभते** (ದುಭತೇ) ನ. ಹಾಲು, ಮೊಸರು, ಹೈನ.

**दूध–** (ದೂಧ್–) ನ. ಹಾಲು, ಮೊಸರು, ಸಮೃದ್ಧಿ.

**दुभागणी** (ದುಭಾಗಣೀ) ಸ್ತ್ರೀ. ಎರಡಾಗಿ ಹಂಚುವಿಕೆ.

**दुभागणे** (ದುಭಾಗಣೇ) ಕ್ರಿ. ಸ. ಎರಡು ಪಾಲು ಮಾಡು.

**दुभाष्या** (ದುಭಾಷ್ಯಾ) ಪು. ಎರಡು ಭಾಷೆಗಳನ್ನು ಅರಿತವ.

**दुमची** (ದುಮಚೀ) ಸ್ತ್ರೀ. ತು. (ಕುದುರೆಯ) ಬಾಲದ ಪಟ್ಟಿ.

**दुमजली** (ದುಮಜಲೀ) ವಿ. ಫಾ. ಎರಡಂತಸ್ತಿನ.

**दुमड** (ದುಮಡ್) ಸ್ತ್ರೀ. ನೀರಿಗೆ, ಪಟ್ಟಿ, ಮಡಿಕೆ.

**दुमडणे** (ದುಮಡಣೇ) ಕ್ರಿ. ವಿ. ನೀರಿಗೆ ಹಾಕು, ಮಡಿಚು.

**दुमदुमणे** (ದುಮದುಮಣೇ) ಕ್ರಿ. ಅ. ಸದ್ದು ಹಬ್ಬು ಹರಡು, ನಿನಾದವಾಗು.

**दुमदुमीत** (ದುಮದುಮೀತ್) ವಿ. ಎಳೆದ, ಜಗ್ಗಿದ. ೨. ಸಿರಿವಂತನಾದ.

**दुमाडी** (ದುಮಾಡೀ) ಸ್ತ್ರೀ. ಗಡಿಬಿಡಿ, ಲಗುಬಗೆ.

**दुय्यम** (ದುಯ್ಯಮ್) ವಿ. ಫಾ. ಎರಡನೆಯ ತರಗತಿಯ ಗೌಣ. ೨. ಮುಖ್ಯವಲ್ಲದ.

**दुरंगी** (ದುರಂಗೀ) ವಿ. ಎರಡು ಬಣ್ಣಗಳುಳ್ಳ.

**दुरकी चाल** (ದುರಕೀ ಚಾಲ್) ಸ್ತ್ರೀ. **दुडकी चाल** ನೋ.

**दुरडी** (ದುರಡೀ) ಸ್ತ್ರೀ. ಗಳದ ಬಿದಿರಿನ ಬುಟ್ಟಿ. ೨. ಜರಡಿ, ಮೊರ.

**दुरंत** (ದುರಂತ) ವಿ. ಸಂ. ಕೊನೆಯಿಲ್ಲದ, ಮುಗಿಯದ.

**दुरतिक्रम** (ದುರತಿಕ್ರಮ) ವಿ. ಸಂ. ತಳ್ಳಲಾಗದ, ತೊಲಗದ, ಜಯಿಸಲಿಕ್ಕಾಗದ.

**दुरत्यय** (ದುರತ್ಯಯ) ವಿ. ಉಪಾಯ ನಡೆಯದ, ಪಾರಾಗದ, ಪಾರು ಮಾಡಲಿಕ್ಕಾಗದ.

**दुरधिगम्य** (ದುರಧಿಗಮ್ಯ) ವಿ. ಪಡೆಯಲಿಕ್ಕೆ ಅಸಾಧ್ಯವಾದ. ೨. ತಿಳಿಯದ.

**दुरबीण** (ದುರಬೀಣ್) ಸ್ತ್ರೀ. ಫಾ. ದೂರದರ್ಶಕ ಯಂತ್ರ.

**दुरभिमान** (ದುರಭಿಮಾನ) ಪು. ಗರ್ವ, ಸೊಕ್ಕು.

**दुरवबोध** (ದುರವಬೋಧ) ವಿ. ತಿಳಿಯಲಿಕ್ಕೆ ಕಠಿಣವಾದ.

**दुराग्रह** (ದುರಾಗ್ರಹ) ಪು. ಹಟ, ಹಟಮಾರಿತನ.

**दुराग्रही** (ದುರಾಗ್ರಹೀ) ವಿ. ಹಟಮಾರಿ, ತನ್ನ ಮಾತನ್ನೇ ನಡೆಸುವವ.

**दुराचरण** (ದುರಾಚರಣ) ನ. ಸಂ. ಕೆಟ್ಟ ನಡತೆ.

**दुराचार** (ದುರಾಚಾರ) ಪು. ಸಂ. ಕೆಟ್ಟ ನಡತೆ.

**दुराचरणी, दुराचारी** (ದುರಾಚರಣೀ, ದುರಾಚಾರೀ) ವಿ. ಸಂ. ಕೆಟ್ಟ ನಡತೆಯುಳ್ಳವ, ದುರ್ಜನ.

**दुरात्मा** (ದುರಾತ್ಮಾ) ಪು. ಸಂ. ಹೀನ, ದುಷ್ಟ.

**दुराप** (ದುರಾಪ) ವಿ. ಸಂ. ದೊರೆಯಲಿಕ್ಕೆ ಅಸಾಧ್ಯ, ಸಿಗದ.

**दुरापास्त** (ದುರಾಪಾಸ್ತ್) ವಿ. ಸಂ. ಕಠಿಣವಾದ, ದೊರೆಯದ.

**दुराराध्य** (ದುರಾರಾಧ್ಯ) ವಿ. ಸಂತೋಷಪಡಿಸಲಿಕ್ಕೆ ಅಸಾಧ್ಯವಾದ, ಮಾತು ಕೇಳದ, ಒಪ್ಪದ.

**दुरावणे** (ದುರಾವಣೇ) ಕ್ರಿ. ಅ. ಅಲಗು, ದೂರ ಹೋಗು, ಪರಕೀಯನಾಗು.

**दुरावा** (ದುರಾವಾ) ಪು. ಪರಕೀಯತೆ, ಅಗಲುವಿಕೆ.

**दुराशा** (ದುರಾಶಾ) ಸ್ತ್ರೀ. ಸಂ. ಕೆಟ್ಟ ಆಸೆ.

**दुरासद** (ದುರಾಸದ್) ವಿ. ದೊರೆಯದ, ಅಪರೂಪ.

**दुरित** (ದುರಿತ) ನ. ಸಂ. ಪಾಪ, ಕೆಟ್ಟ ಕೃತ್ಯ, ಹೀನ ಕೆಲಸ.

**दुरुक्ति** (ದುರುಕ್ತಿ) ಸ್ತ್ರೀ. ಬಿರುಸು ಮಾತು, ಕೆಟ್ಟ ನುಡಿ, ಅಪಶಬ್ದ.

**दुरुत्तर** (ದುರುತ್ತರ) ನ. ಸಂ. ಅಸಭ್ಯ ಉತ್ತರ.

**दुरुस्त** (ದುರುಸ್ತ್) ವಿ. ಫಾ. ನೆಟ್ಟಗಿದ್ದ, ನೆಟ್ಟಗಾದ, ಸುಧಾರಿಸಿದ.

**दुरुस्ती** (ದುರುಸ್ತೀ) ವಿ. ಸುಧಾರಣೆ, ನೆಟ್ಟಗೆ ಮಾಡುವಿಕೆ, ರಿಪೇರಿ.

**दुरून** (ದುರೂನ್) ಕ್ರಿ. ವಿ. ದೂರದಿಂದ.

**–डोंगर साजरा** (ಡೋಂಗರ್ ಸಾಜರಾ) ನಾಣ್ಣುಡಿ. ದೂರವಿದ್ದುದೇ ಚಂದ ಕಾಣಿಸುತ್ತದೆ.

**दुर्ग** (ದುರ್ಗ) ವಿ. ಸಂ. ಕೋಟೆ.

**दुर्गत** (ದುರ್ಗತ) ವಿ. ಸಂ. ಬಡವ, ಕೆಟ್ಟ ಸ್ಥಿತಿಯಲ್ಲಿರುವವ. ೨. ಸ್ತ್ರೀ. ಕೆಟ್ಟ ಸ್ಥಿತಿ, ದುರ್ಗತಿ.

**दुर्गंध** (ದುರ್ಗಂಧ) ಪು. ಸಂ. ಕೆಟ್ಟ ವಾಸನೆ.

**दुर्गंधी** (ದುರ್ಗಂಧೀ) ಸ್ತ್ರೀ. ಕೆಟ್ಟ ವಾಸನೆ.

**दुर्गम** (ದುರ್ಗಮ) ವಿ. ಸಂ. ಹೋಗಲಿಕ್ಕೆ, ಏರಲಿಕ್ಕೆ ಕಠಿಣವಾದ,

**दुर्गमता** (ದುರ್ಗಮತಾ) ಸ್ತ್ರೀ. ಹೋಗಲಿಕ್ಕೆ ಕಠಿಣವಾಗಿರುವಿಕೆ.

**दुर्गा** (ದುರ್ಗಾ) ಸ್ತ್ರೀ. ಸಂ. ಪಾರ್ವತಿ, ದುರ್ಗಾದೇವಿ.

**दुर्गुण** (ದುರ್ಗುಣ) ಪು. ಸಂ. ಕೆಟ್ಟಗುಣ, ದುರ್ಗುಣ.

**दुर्गुणी** (ದುರ್ಗುಣೀ) ವಿ. ಕೆಟ್ಟಗುಣಗಳುಳ್ಳವ.

**दुर्घट** (ದುರ್ಘಟ) ವಿ. ಘಟಿಸದ, ಸಂಭವಿಸದ, ಅಸಾಧ್ಯ.

**दुर्घटना** (ದುರ್ಘಟನಾ) ಪು. ಸಂ. ಆಕಸ್ಮಿಕ ಆಪತ್ತು, ದುರ್ಘಟನೆ, ಪ್ರಮಾದ.

**दुर्जन** (ದುರ್ಜನ) ಪು. ಕೆಟ್ಟ ಮನುಷ್ಯ, ಹೀನ ಮನುಷ್ಯ.

**दुर्दम्य** (ದುರ್ದಮ್ಯ) ವಿ. ಅ. ತಡೆಯಲಿಕ್ಕಾಗದ, ಸಾಕಲಿಕ್ಕಾಗದ.

**दुर्दर्श** (ದುರ್ದರ್ಶ) ವಿ. ಸಂ. ಕಾಣದ, ಕಾಣಿಸಿದ, ನೋಡಲಿಕ್ಕೆ ಅಸಾಧ್ಯ.

**दुर्दशा** (ದುರ್ದಶಾ) ಸ್ತ್ರೀ. ಕೆಟ್ಟ ಸ್ಥಿತಿ, ದುಃಸ್ಥಿತಿ.

**दुर्दिन** (ದುರ್ದಿನ) ನ. ಕೆಟ್ಟ ದಿವಸ, ಮಳೆಯ ಸಮಯ, ಮಳೆ.

**दुर्दैव** (ದುರ್ದೈವ) ನ. ಸಂ. ಕೆಟ್ಟ ಅದೃಷ್ಟ.

**दुर्दैवी** (ದುರ್ದೈವೀ) ವಿ. ಸಂ. ಅದೃಷ್ಟಹೀನ, ಕೆಟ್ಟ.

**दुर्धर** (ದುರ್ಧರ) ವಿ. ಸಂ. ಸೈರಿಸಲಿಕ್ಕಾಗದ, ದುರ್ದಮ್ಯ.

**दुर्धर्ष** (ದುರ್ಧರ್ಷ) ವಿ. ಸಂ. ನಿಯಂತ್ರಿಸಲು ಅಸಾಧ್ಯವಾದ.

**दुर्निवार** (ದುರ್ನಿವಾರ) ವಿ. ಸಂ. ನಿವಾರಿಸಲಿಕ್ಕೆ ಕಠಿಣವಾದ.

**दुर्बळ** (ದುರ್ಬಳ್) ವಿ. ಅಶಕ್ತ, ದುರ್ಬಲ.

**दुर्बीण** (ದುರ್ಬೀಣ) ಸ್ತ್ರೀ. ಫಾ. ದೂರದರ್ಶಕ ಯಂತ್ರ.

**दुर्बुद्ध** (ದುರ್ಬುದ್ಧ) ವಿ. ಸಂ. ದುಷ್ಟಬುದ್ಧಿ, ದುರ್ಜನ.

**दुर्बुद्धी** (ದುರ್ಬುದ್ಧಿ) ಸ್ತ್ರೀ. ಸಂ. ಕೆಟ್ಟ ಬುದ್ಧಿ, ಕೆಟ್ಟ ವಿಚಾರ.

**दुर्बोध** (ದುರ್ಬೋಧ) ವಿ. ಸಂ. ತಿಳಿಯಲಿಕ್ಕೆ ಕಠಿಣವಾದ.

**दुर्भाग** (ದುರ್ಭಗ) ವಿ. ಸಂ. ಅದೃಷ್ಟಹೀನ.

**दुर्भर** (ದುರ್ಭರ) ವಿ. ಸಂ. ಸಂತೈಸಲಿಕ್ಕೆ ಅಸಾಧ್ಯ. ನ. ಹೊಟ್ಟೆ ಹಸಿವೆ.

**दुर्भाग्य** (ದುರ್ಭಾಗ್ಯ) ನ. ಹೀನ, ಅದೃಷ್ಟ.

**दुर्भिक्ष** (ದುರ್ಭಿಕ್ಷ) ನ. ಸಂ. ಬರ, ಬರಗಾಲ.

**दुर्भेद्य** (ದುರ್ಭೇದ್ಯ) ವಿ. ಸಂ. ಒಡೆಯಲಿಕ್ಕಾಗದ, ಜಯಿಸಲಿಕ್ಕಾಗದ.

**दुर्भति** (ದುರ್ಮತಿ) ಸ್ತ್ರೀ. ಕೆಟ್ಟ ಬುದ್ಧಿಯವ.

**दुर्मद** (ದುರ್ಮದ) ವಿ. ಸಂ. ಸೊಕ್ಕಿನವ, ಉದ್ಧತ.

**दुर्मनस्क** (ದುಃರ್ಮನಸ್ಕ) ವಿ. ಖಿನ್ನ, ಮನಸ್ಸಿಗೆ ಕೆಡಕು ಅನಿಸಿಕೊಳ್ಳುವವ.

**दुर्मरण** (ದುರ್ಮರಣ) ನ. ಸಂ. ಅಕಾಲ ಮೃತ್ಯು.

**दुर्मिळ** (ದುರ್ಮಿಳ್) ವಿ. ದೊರೆಯದ, ಅಪರೂಪ.

**दुर्मुखणें** (ದುರ್ಮುಖಣೇ) ಕ್ರಿ. ಸ. ದುಃಖ ತೋರಿಸು, ಕೆಟ್ಟಮೋರೆ ಮಾಡು.

**दुर्मुखलेला** (ದುರ್ಮುಖಲೇಲಾ) ವಿ. ಕೆಟ್ಟ ಮೋರೆಯನ್ನು ಮಾಡಿದವ.

**दुर्लंघ्य** (ದುರ್ಲಂಘ್ಯ) ವಿ. ಸಂ. ದಾಟಲಿಕ್ಕಾಗದ.

**दुर्लभ** (ದುರ್ಲಭ) ವಿ. ಸಂ. ಲಭಿಸದ, ದೊರೆಯದ, ಅಪರೂಪ.

**दुर्लक्ष** (ದುರ್ಲಕ್ಷ) ನ. ಸಂ. ದುರ್ಲಕ್ಷ, ಅವಹೇಲನೆ.

**दुर्लक्षण** (ದುರ್ಲಕ್ಷಣ) ನ. ಸಂ. ಅಪಶಕುನ, ಕೆಟ್ಟ ಲಕ್ಷಣ.

**दुर्लक्षणी** (ದುರ್ಲಕ್ಷಣೀ) ವಿ. ಸಂ. ಕೆಟ್ಟ ಲಕ್ಷಣಗಳುಳ್ಳ, ಅಪಶಕುನವುಂಟಾಗುವ.

**दुर्लौकिक** (ದುರ್ಲೌಕಿಕ) ಪು. ಸಂ. ಅಪಕೀರ್ತಿ.

**दुर्वचन** (ದುರ್ವಚನ) ನ. ಸಂ. ಕೆಟ್ಟ ಮಾತು, ಬಿರುಸು ಮಾತು.

**दुर्वर्तन** (ದುರ್ವರ್ತನ) ನ. ಕೆಟ್ಟ ನಡತೆ, ದುರ್ವರ್ತನೆ.

**दुर्वह** (ದುರ್ವಹ) ವಿ. ಸಂ. ಹೊರಲಿಕ್ಕೆ ಅಸಾಧ್ಯ.

**दुर्वास** (ದುರ್ವಾಸ) ಪು. ಸಂ. ಶೀಘ್ರ ಕೋಪಿ, ದುರ್ವಾಸ ಋಷಿ.

**दुर्वासना** (ದುರ್ವಾಸನಾ) ಸ್ತ್ರೀ. ಸಂ. ದ್ವೇಷ, ಅಸೂಯೆ, ಕೆಟ್ಟ ಭಾವನೆ.

**दुर्विदग्ध** (ದುರ್ವಿದಗ್ಧ) ವಿ. ಸಂ. ಮೂರ್ಖ, ಮೂಢ.

**दुर्विपाक** (ದುರ್ವಿಪಾಕ) ಪು. ಸಂ. ದುರಂತ, ಕೆಟ್ಟ ಪರಿಣಾಮ.

**दुर्वृत्त** (ದುರ್ವೃತ್ತ) ನ. ಸಂ. ಕೆಟ್ಟನಡತೆ.

**दुर्व्यसन** (ದುರ್ವ್ಯಸನ) ನ. ಸಂ. ಕೆಟ್ಟ ಚಟ, ದುಶ್ಚಟ, ಕೆಟ್ಟರೂಢಿ- ಅಭ್ಯಾಸ.

**दुर्व्यसनी** (ದುರ್ವ್ಯಸನೀ) ವಿ. ದುಶ್ಚಟಗಳುಳ್ಳ, ಲೋಲುಪ.

**दुलई** (ದುಲಈ) ಹಿಂ. ಕೌದೆ, ಕವದೆ, ಅರಳೆ ಹಾಕಿ ಹೊಲಿದ ಹೊದಿಕೆ.

**दुलदुलीत** (ದುಲದುಲೀತ್) ವಿ. ಕೊಬ್ಬಿದ, ಜಡವಾದ.

**दुलहन** (ದುಲಹನ್) ಸ್ತ್ರೀ. ಹಿಂ. ಮದುಮಗಳು.

**दुवा** (ದುವಾ) ಪು. ಅರ. ೧. ಆಶೀರ್ವಾದ. ೨. ಸರಪಣಿಯ ತುಂಡು. ೩. ಇಸ್ಪೇಟಿನಲ್ಲಿಯ 'ಎರಡು'.

**दुवेत** (ದುವೇತ್) ನ. ಗರ್ಭಸ್ರಾವ, ಹಲಿಯುಳಿಯುವಿಕೆ.

**दुवेतणे** (ದುವೇತಣೇ) ಕ್ರಿ. ಸ. ಹಲಿವುಳಿ, ಗರ್ಭವನ್ನು ಕೆಡವು.

**दुव्वा** (ದುವ್ವಾ) ಪು. ಇಸ್ಪೇಟಿನಲ್ಲಿಯ ಎರಡು.

**दुश्मन** (ದುಶಮನ್) ಪು. ಫಾ. ಹಗೆ, ವೈರಿ.

**दुशमनकी–दुशमनी** (ದುಶಮನ್‌ಕೀ-ದುಶಮನೀ) ಸ್ತ್ರೀ. ಹಗೆತನ, ವೈರ.

**दुश्चिन्ह** (ದುಶ್ಚಿನ್ಹ) ನ. ಸಂ. ಅಪಶಕುನ, ಕೆಟ್ಟ ಲಕ್ಷಣ.

**दु:शाप** (ದುಃಶಾಪ) ಪು. ಕೆಟ್ಟ ಶಾಪ, ಭಯಂಕರ ಶಾಪ.

**दु:शील** (ದುಃಶೀಲ) ವಿ. ಸಂ. ಕೆಟ್ಟ ನಡತೆಯುವ.

**दुष्कर** (ದುಷ್ಕರ) ವಿ. ಕಠಿಣವಾದ.

**दुष्कर्म** (ದುಷ್ಕರ್ಮ) ನ. ಸಂ. ಕೆಟ್ಟ ಕೆಲಸ, ಪಾಪ.

**दुष्कर्मी** (ದುಷ್ಕರ್ಮೀ) ವಿ. ಸಂ. ಪಾಪ ಮಾಡುವವ, ಪಾಪಿ.

**दुष्काळ** (ದುಷ್ಕಾಳ್) ಪು. ಬರ, ಬರಗಾಲ.

**दुष्कीर्ती** (ದುಷ್ಕೀರ್ತೀ) ಸ್ತ್ರೀ. ಅಪಕೀರ್ತಿ.

**दुष्कृति** (ದುಷ್ಕೃತಿ) ಸ್ತ್ರೀ. ಸಂ. ಕೆಟ್ಟ ಕೆಲಸ, ದುಷ್ಕರ್ಮ.

**दुष्ट** (ದುಷ್ಟ) ವಿ. ಸಂ. ದುಷ್ಟ, ಕೆಟ್ಟವ.

–**बुद्धी** (–ಬುದ್ಧಿ) ವಿ. ಕೆಟ್ಟಬುದ್ಧಿಯುವ.

**दुष्टाई** (ದುಷ್ಟಾಈ) ಸ್ತ್ರೀ.
**दुष्टावा** (ದುಷ್ಟಾವಾ) ಪು.
**दुष्टपणा** (ದುಷ್ಟಪಣಾ) ಪು.
} ದುಷ್ಟತನ, ನೀಚತನ.

**दुष्टात्मा** (ದುಷ್ಟಾತ್ಮಾ) ವಿ. ಸಂ. ಕೆಟ್ಟ (ಮನುಷ್ಯ) ಕೆಟ್ಟವ, ನೀಚ.

**दुष्प्राप्य** (ದುಷ್ಪ್ರಾಪ್ಯ) ವಿ. ಸಂ. ದೊರೆಯಲಿಕ್ಕೆ ಅಸಾಧ್ಯವಾದ.

**दु:संग** (ದುಃಸಂಗ) ಪು. ಸಂ. ಕೆಟ್ಟ ಸಹವಾಸ.

**दुसडी** (ದುಸಡೀ) ವಿ. ಎರಡು ಸಲ ಕುಟ್ಟಿದ (ಅಕ್ಕಿ).

**दुसरा** (ದುಸರಾ) ವಿ. ಎರಡನೆಯ, ಬೇರೆಯುವ.

**दुसऱ्याने, दुसऱ्यांदा** (ದುಸರ್‍ಯಾನೇ, ದುಸರ್‍ಯಾಂದಾ) ಕ್ರಿ. ವಿ. ಎರಡನೆಯ ಸಲ, ಎರಡನೆಯ ಬಾರಿ.

**दुसवास** (ದುಸವಾಸ್) ಪು. ಸಿಟ್ಟು, ದ್ವೇಷ, ಮಾತ್ಸರ್ಯ.

**दु:सह** (ದುಃಸಹ) ವಿ. ಸಂ. ಸೈರಿಸಲಿಕ್ಕಾಗದ, ಅಸಹ್ಯ.

**दु:साध्य** (ದುಃಸಾಧ್ಯ) ವಿ. ಸಂ. ಕಠಿಣ. ೨. ಅಸಾಧ್ಯ.

**दुस्तर** (ದುಸ್ತರ್) ವಿ. ಸಂ. ದಾಟಲಿಕ್ಕಾಗದ, ಕಠಿಣ.

**दु:स्वप्न** (ದುಃಸ್ವಪ್ನ) ನ. ಸಂ. ಕೆಟ್ಟ, ಕನಸು.

**दु:स्वभाव** (ದುಃಸ್ವಭಾವ) ಪು. ಸಂ. ಕೆಟ್ಟ ಸ್ವಭಾವ.

**दुहिता** (ದುಹಿತಾ) ಸ್ತ್ರೀ. ಮಗಳು.

**दुही** (ದುಹೀ) ಸ್ತ್ರೀ. ಒಡಕು, ಅಂತಸ್ಥ ಕಲಹ, ಒಳಜಗಳ.

**दुहेरी** (ದುಹೇರೀ) ವಿ. ಎರಡು ಪದರಿನ, ಇಬ್ಬಗೆಯ.

**दुहोत्रा** (ದುಹೋತ್ರಾ) ವಿ. ಶೇಕಡ ತಿಂಗಳಿಗೆ ೨ ರಂತೆ (ಬಡ್ಡಿಯ ದರ).

**दुंदुभि** (ದುಂದುಭಿ) ಪು. ಸಂ. ಹಲಗೆ, ಡೊಳ್ಳು, ಡಂಗುರ.

**दूड** (ದೂಡ್) ಸ್ತ್ರೀ. ಕರಿಯ ಮಣಿಯ ಆಭರಣ.

**दूण** (ದೂಣ್) ಸ್ತ್ರೀ. ಮಡಿಕೆ, ನೀರಿಗೆ.

**दूत** (ದೂತ್) ಪು. ಸಂ. ದೂತ, ರಾಯಭಾರಿ, ಆಳು.

**दूध** (ದೂಧ್) ನ. ಹಾಲು.

**दुधाचे दात** (ದುಧಾಚೇ ದಾತ್) ಪು. ಹಸುಗೂಸಿನ ಹಲ್ಲುಗಳು.

**—केंद्र** (—ಕೇಂದ್ರ) ನ. ಹಾಲಿನ ಕೇಂದ್ರ.

**—खुळा** (—ಖುಳಾ) ವಿ. ಎಬಡ, ದಡ್ಡ.

**—दुभते** (—ದುಭತೇ) ನ. ಹೈನ.

**दूर** (ದೂರ್) ವಿ. ಸಂ. ದೂರ.

**—गामी** (—ಗಾಮೀ) ವಿ. ದೂರದ ವರೆಗಿನ.

**—चित्रवाणी** (—ಚಿತ್ರವಾಣೀ) ಸ್ತ್ರೀ. ಟೆಲಿವಿಜನ್.

**दूरतः** (ದೂರತಃ) ಕ್ರಿ. ವಿ. ದೂರಿನಿಂದ, ದೂರಿಂದ.

**दूरदर्शी** (ದೂರದರ್ಶೀ) ವಿ. ಸಂ. ದೂರನೋಟ ವುಳ್ಳವ, ಜಾಣ.

**दूरदृष्टी** (ದೂರದೃಷ್ಟಿ) ಸ್ತ್ರೀ. ಮುಂದಿನ ಸಂಗತಿ ಗಳನ್ನು ವಿಚಾರಿಸಿ ತಿಳಿದುಕೊಳ್ಳುವಿಕೆ, ಜಾಣತನ.

**दूरध्वनी** (ದೂರಧ್ವನೀ) ಪು. ಟೆಲಿಫೋನ್.

**दूरवर** (ದೂರವರ್) ಕ್ರಿ. ವಿ. ದೂರದ ವರೆಗೆ.

**दूरश्रवण यंत्र** (ದೂರಶ್ರವಣ ಯಂತ್ರ) ನ. ಟೆಲಿ ಫೋನ್.

**दूरस्थ** (ದೂರಸ್ಥ) ದೂರದಲ್ಲಿಯ.

**दूरीकरण** (ದೂರೀಕರಣ) ನ. ಸಂ. ಅಗಲಿಸುವಿಕೆ.

**दूर्वा** (ದೂರ್ವಾ) ಸ್ತ್ರೀ. ಸಂ. ಕರಿಕೆ.

**दूषक** (ದೂಷಕ) ವಿ ಕೆಡಿಸುವ. ೨. ನಿಂದೆಮಾಡುವವ.

**दूषणीय** (ದೂಷಣೀಯ) ವಿ. ಸಂ. ಅಪರಾಧವೆನಿಸುವ.

**दूषित** (ದೂಷಿತ) ವಿ. ಸಂ. ಕೆಟ್ಟುಹೋದ, ಹೊಲ ಸಾದ, ಅಶುದ್ಧ.

**दृक्पात** (ದೃಕ್ಪಾತ) ಪು. ಸಂ. ನೋಟ, ನೋಡುವಿಕೆ, ದೃಷ್ಟಿಪಾತ.

**दृक्प्रत्यय** (ದೃಕ್ಪ್ರತ್ಯಯ) ಪು. ಸಂ. ಪ್ರತ್ಯಕ್ಷ ನೋಡಿ ದುದರ ಸಾಕ್ಷಿ.

**दृग्गोचर** (ದೃಗ್ಗೋಚರ) ವಿ. ಸಂ. ಕಣ್ಣಿಗೆ ಕಾಣುವ.

**दृढ** (ದೃಢ) ವಿ. ದೃಢವಾದ, ಗಟ್ಟಿಮುಟ್ಟಿಯಾದ.

**—भाजक** (ಭಾಜಕ) ಪು. (ಗಣಿತ) ದೃಢಭಾಜಕ.

**—भाव** (—ಭಾವ್) ಪು. ಸಂ. ಪರಮಾಸಕ್ತಿ.

**दृप्त** (ದೃಪ್ತ) ವಿ. ಸಂ. ಗರ್ವವುಳ್ಳ, ಹೆಮ್ಮೆಯ, ಬಿಂಕದ ಸೊಕ್ಕಿನ.

**दृश्य** (ದೃಶ್ಯ) ನ. ಸಂ. ನೋಟ, ದೃಶ್ಯ. ವಿ. ನೋಡುವ, ಕಣ್ಣಿಗೆ ಬೀಳುವ, ಗೋಚರ.

**—काव्य** (—ಕಾವ್ಯ) ಹಾವಭಾವದ ಹಾಡು, ನಾಟಕ.

**दृश्यमान** (ದೃಶ್ಯಮಾನ) ವಿ. ಸಂ. ಕಣ್ಣಿಗೆ ಬೀಳುವ, ಕಂಡುಬರುವ.

**दृष्ट** (ದೃಷ್ಟ) ವಿ- ಸಂ. ನೋಡಿದ, ಕಂಡ. ೨. ಸ್ತ್ರೀ. ಮ. (ಕೆಟ್ಟ) ದೃಷ್ಟಿ. ಹತ್ತುವ ದೃಷ್ಟಿ.

**—काढणे** (—ಕಾಢಣೇ) ಕ್ರಿ. ಸಂ. ದೃಷ್ಟಿ ತೆಗೆ, ನಿವಾ ಳಿಸಿ ಒಗೆ.

**—लागणे** (—ಲಾಗಣೇ) ಕ್ರಿ. ಅ. ದೃಷ್ಟಿ ಹತ್ತು.

**—पडणे** (—ಪಡಣೇ) ಕ್ರಿ. ಅ. ದೃಷ್ಟಿ ಹತ್ತು.

**—मणि** (—ಮಣಿ) ಪು. ದೃಷ್ಟಿಯು ಹತ್ತಬಾರದಾಗಿ ಹಾಕಿದ ಕರಿಯ ಮಣಿಗಳ ಬಿಂದಲಿ.

**दृष्टांत** (ದೃಷ್ಟಾಂತ್) ಪು. ಸಂ. ಉದಾಹರಣೆ. ೨. (ಕನಸಿನಲ್ಲಿ) ಸಂಭವಿಸಿದ ಸಾಕ್ಷಾತ್ಕಾರ, ದರ್ಶನ.

**दृष्टादृष्ट** (ದೃಷ್ಟಾದೃಷ್ಟ) ಸ್ತ್ರೀ. ಒಬ್ಬರಿಗೊಬ್ಬರು ಕಣ್ಣಿಗೆ ಬೀಳುವಿಕೆ.

**दृष्टाळणे** (ದಷ್ಟಾಳಣೇ) ಕ್ರಿ. ಅ. ದೃಷ್ಟಿ ಹತ್ತು.

**दृष्टी** (ದೃಷ್ಟಿ) ಸ್ತ್ರೀ. ಸಂ. ೧. ನೋಟ. ೨. ಕಣ್ಣು. ೩. ನೋಡುವ ಸಾಮರ್ಥ್ಯ. ೪. ವಿಚಾರ.

**—कोन** (—ಕೋನ್) ಪು. ವಿಚಾರ ಮಾಡುವ ನೆಲೆ.

**—आड सृष्टी** (—ಆಡ್‌ಸೃಷ್ಟಿ) ನಾಣ್ನುಡಿ, ಕಣ್ಮರೆ ಯಾದ ವಸ್ತುವು ತೋಚುವುದಿಲ್ಲ.

**—खालून घालणे** (—ಖಾಲೂನ್ ಘಾಲಣೇ) ಕ್ರಿ. ಸಂ. ನೋಡು ಪರೀಕ್ಷಿಸು.

**दृष्टीस पडणे** (ದೃಷ್ಟೀಸ್ ಪಡಣೇ) ಕ್ರಿ. ಅ. ಕಾಣಿಸು, ತೋರು.

**दृष्टी फाकणे** (ದೃಷ್ಟಿ ಫಾಕಣೇ) ಕ್ರಿ. ಅ. ಆಶ್ಚರ್ಯ ವಾಗು.

**दृष्टी ओळखणे** (ದೃಷ್ಟಿ ಓಳಖಣೇ) ಕ್ರಿ. ಅ. ನೋಟ ದಿಂದ ತಿಳಿದುಕೊ.

**दृष्टी चुकविणे** (ದೃಷ್ಟೀ ಚುಕವಿಣೇ) ಕ್ರಿ. ಸಂ. ಕಣ್ಣು ತಪ್ಪಿಸು. ೨. ಲಜ್ಜಿತನಾಗು.

**दृष्टी निवळणे** (ದೃಷ್ಟೀ ನಿವಳಣೇ) ಕ್ರಿ. ಅ. ಒಳ್ಳೆಯ ವಿಚಾರ ಬರು, ಮಾಡು.

**दृष्टी फाटणे** (ದೃಷ್ಟೀ ಫಾಟಣೇ) ಕ್ರಿ. ಅ. ಮಹತ್ವಾ ಕಾಂಕ್ಷೆ ಪಡು.

**दृष्टी मरणे** (ದೃಷ್ಟೀ ಮರಣೇ) ಕ್ರಿ. ಅ. ಕಂಡ ಮೇಲೆ ಏನೂ ಭಾವ ತೋರದಿರು.

**दृष्टीचे पारणे फिटणे** (ದೃಷ್ಟಿಚೇ ಪಾರಣೇ ಫಾಟಣೇ) ಕಂಡು ಹರ್ಷಪಡು, ಸಂತುಷ್ಟನಾಗು.

**वाईट दृष्टीने पाहणे** (ವಾಈಟ್ ದೃಷ್ಟೀನೆ ಪಾಹಣೇ) ಕ್ರಿ. ಅ. ಕೆಟ್ಟ ಗಣ್ಣಿನಿಂದ ನೋಡು.

**दृष्टी गोचर** (ದೃಷ್ಟಿ ಗೋಚರ) ವಿ. ಸಂ. ಕಣ್ಣಿಗೆ ಕಾಣುವ.

**दृष्टीभेट** (ದೃಷ್ಟಿ ಭೇಟ) ಸ್ತ್ರೀ. ಒಬ್ಬರನ್ನೊಬ್ಬರು ಕಂಡು ಭೇಟಿಯಾಗುವಿಕೆ.

**दृष्टोत्पत्ती** (ದೃಷ್ಟೋತ್ಪತ್ತಿ) ಸ್ತ್ರೀ. ಸಂ. ಸ್ವಂತದ ಅನುಭವ, ಮನವರಿಕೆ.

**दृष्टोत्पत्तीस येणे** (ದೃಷ್ಟೋತ್ಪತ್ತೀಸ್ ಯೇಣೇ) ಕ್ರಿ. ಅ. ಕಂಡುಬರು, ಮನವರಿಕೆಯಾಗು.

**देऊळ** (ದೇಊಳ್) ನ. ದೇವಸ್ಥಾನ, ದೇಗುಲ.

**देखणा** (ದೇಖಣಾ) ವಿ. ಚಲುವ, ಸುಂದರ.

**देखत** (ದೇಖತ್) ಕ್ರಿ. ವಿ. ಸಮಕ್ಷ, ಎದುರಿಗೆ.

**देखरेख** (ದೇಖ್‌ರೇಖ್) ಸ್ತ್ರೀ. ಮೇಲ್ವಿಚಾರಣೆ, ವ್ಯವಸ್ಥಾಪನೆ.

**देखावा** (ದೇಖಾವಾ) ಪು. ತೋರಿಕೆ, ದೃಶ್ಯ, ನೋಟ—ದರ್ಶನ.

**देखील** (ದೇಖೀಲ್) ಕ್ರಿ. ಸಂ. ಸಹ, ಕೂಡ, ಆದರೂ

**देखीव** (ದೇಖೀವ್) ವಿ. ನೋಡಿದ, ಕಂಡ, ಕಣ್ಣಾರೆ ಕಂಡ.

**देज** (ದೇಜ್) ನ. ಹಿಂ. ಅಳಿಯನು ಮಾವನಿಗೆ ಕೊಡುವ ಹಣ.

**देठ** (ದೇಠ್) ನ. ದೇಟು, ಎಲೆಯ ತುಂಬು.

**देणगी** (ದೇಣಗೀ) ಸ್ತ್ರೀ. ಕೊಡುಗೆ, ದಾನ, ಪ್ರತಿಫಲ, ಸತ್ಕಾರ.

**देणावळ** (ದೇಣಾವಳ್) ಸ್ತ್ರೀ. ಸಂಬಳ, ಕೂಲಿ, ಕೊಡಬೇಕಾದ ಹಣ.

**देणे** (ದೇಣೇ) ಕ್ರಿ. ಸಂ. ಕೊಡು, ದಾನಮಾಡು. ೨. ನ. ಸಾಲ ಕೊಡಬೇಕಾದ, ಹಣ, ಉದ್ದರಿ.

**कान—** (ಕಾನ್—) ಕ್ರಿ. ಸಂ. ಕಿವಿಗೊಡು.

**निरोप—** (ನಿರೋಪ್—) ಕ್ರಿ. ಸಂ. ಕಳಿಸು, ರವಾನಿಸು.

**शिवी—** (ಶಿವೀ—) ಕ್ರಿ. ಸಂ. ಬಯ್ಯಿ.

**देणेकरी** (ದೇಣೇಕರೀ) ಪು. ಸಾಲಗಾರ, ಸಾಲತೆಗೆದುಕೊಂಡವ.

**देणेघेणे** (ದೇಣೇಘೇಣೇ) ನ. ಕೊಡಕೊಳ್ಳುವಿಕೆ, ವ್ಯವಹಾರ, ಲಾವಾದೇವಿ.

**देता** (ದೇತಾ) ಪು. ಕೊಡುವವ.

**देदीप्यमान** (ದೇದೀಪ್ಯಮಾನ) ವಿ. ಬಹಳ ತೇಜಸ್ಸುಳ್ಳ

**देय** (ದೇಯ) ವಿ. ಸಂ. ಕೊಡಬೇಕಾದ ಹಣ, ಸಾಲ, ಉದ್ದರಿ.

**देव** (ದೇವ) ಪು. ಸಂ. ದೇವರು.

**देवासारखा बसणे** (ದೇವಾಸಾರಖಾ ಬಸಣೇ) ಕ್ರಿ. ವಿ. ತಣ್ಣಗೆಕೂಡು, ನಿಷ್ಕ್ರಿಯನಾಗಿರು.

**न देवाय न धर्माय** (ನ ದೇವಾಯ ನ ಧರ್ಮಾಯ) ಕ್ರಿ. ವಿ. ಯಾವಕೆಲಸಕ್ಕೂ ಬಾರದ ವ್ಯರ್ಥ.

**देव देव्हारात नसणे** (ದೇವ ದೆವ್ಹಾರಾತ್ ನಸಣೇ) ಕ್ರಿ. ನ. ಮನಸ್ಸಿಗೆ ಕೆಡಕೆನಿಸು, ಲಕ್ಷವಿಲ್ಲದಿರು.

**देव पावणे—** (ದೇವ ಪಾವಣೆ—) ಮನೋರಥ ಪೂರ್ಣನಾಗು.

**देवा पुढचा** (ದೇವಾ ಪುಢಚಾ) ಪು. ಶಂಖ ೨. ದಡ್ಡ.

**देवाकडे जाणे** (ದೇವಾಕಡೇ ಜಾಣೇ) ಕ್ರಿ. ಸಾಯು.

**देवावर हवाला ठेवणे** (ದೇವಾವರ ಹವಾಲಾ ಠೇವಣೆ) ಕ್ರಿ. ನ. ದೇವರ ಮೇಲೆ ಭಾರಹಾಕು.

**देवक** (ದೇವಕ್) ನ. ಮನೆಯಲ್ಲಿ ಕಾರ್ಯವಾದಾಗ ಮಾಡುವ ಮಂಗಲಾ ಚರಣೆ.

**—ठेवणे** (—ಠೇವಣೇ) ಕ್ರಿ. ನ. ಪುಣ್ಯಾಹವಾಚನ ಮಾಡುವಿಕೆ.

**देवकळा** (ದೇವಕಳಾ) ಪು. ದೇವರ ಐಶ್ವರ್ಯ.

**देवकार्य** (ದೇವಕಾರ್ಯ) ನ. ಸಂ. ಧರ್ಮ, ದೇವರ ಪೂಜೆ.

**देवघर** (ದೇವಘರ್) ನ. ದೇವರ ಕೋಣೆ.

**देवघेव** (ದೇವಘೇವ್) ಸ್ತ್ರೀ. ಕೊಡಕೊಳ್ಳುವ ವ್ಯವಹಾರ.

**देवडी** (ದೇವಡೀ) ಸ್ತ್ರೀ. ಮನೆಯ (ಬಂಗಲೆಯ) ಮುಂದಿನ ಪ್ರವೇಶ, ಮಂಡಪ.

**देवता** (ದೇವತಾ) ಸ್ತ್ರೀ. ದೇವತೆ.

**देवतार्चन** (ದೇವತಾರ್ಚನ) ನ. ಸಂ. ದೇವರ ಪೂಜೆ.

**देवदत्त** (ದೇವದತ್ತ) ವಿ. ದೇವರುಕೊಟ್ಟ.

**देवदया** (ದೇವದಯಾ) ಸ್ತ್ರೀ. ಸಂ. ದೇವರ ದಯೆ.

**देवदारु** (ದೇವದಾರು) ನ. ದೇವದಾರು ವೃಕ್ಷ.

**देवदासी** (ದೇವದಾಸೀ) ಸ್ತ್ರೀ. ದೇವದಾಸಿ, ದೇಗುಲದ ದಾಸಿ.

**देवदूत** (ದೇವದೂತ) ಪು. ದೇವರು ಕಳಿಸಿದ ದೂತ.

**देवदेव** (ದೇವದೇವ್) ನ. ಪೂಜೆ ಪುನಸ್ಕಾರ.

**–करणे** (–ಕರಣೇ) ದೇವರ ಪೂಜೆಗೆತೊಡಗು. ೨. ನಿರಾಶನಾಗು.

**देवद्वार** (ದೇವದ್ವಾರ್) ನ. ಪವಿತ್ರ ಸ್ಥಳ.

**देवधर्म** (ದೇವಧರ್ಮ) ಪು. ಧಾರ್ಮಿಕ ಕೃತ್ಯಗಳು.

**देवनागरी** (ದೇವನಾಗರೀ) ಸ್ತ್ರೀ. ಸಂಸ್ಕೃತ ಭಾಷೆಯ ಲಿಪಿ.

**देवपण** (ದೇವಪಣ) ನ. ದೇವರ ಪದವಿ, ಮಟ್ಟ.

**देवपूजा** (ದೇವಪೂಜಾ) ಸ್ತ್ರೀ. ಸಂ. ದೇವರ ಪೂಜೆ.

**देवप्रतिष्ठा** (ದೇವಪ್ರತಿಷ್ಠಾ) ಸ್ತ್ರೀ. (ಪೂಜೆಗಾಗಿ) ದೇವರ ಪ್ರತಿಷ್ಠಾಪನೆ.

**देवभोळा** (ದೇವಭೋಳಾ) ಪು. ಧಾರ್ಮಿಕ, ಕರ್ಮಠ, ಆಸ್ತಿಕ.

**देवमाणूस** (ದೇವಮಾಣೂಸ್) ಪು. ಅತಿ ಒಳ್ಳೆಯ ಮನುಷ್ಯ.

**देवर** (ದೇವರ್) ಪು. ಭಾವ, ಮೈದುನ.

**देवलोक** (ದೇವಲೋಕ್) ಪು. ಸಂ. ಸ್ವರ್ಗ.

**देववाणी** (ದೇವವಾಣೀ) ಸ್ತ್ರೀ. ಸಂ. ಸಂಸ್ಕೃತ ಭಾಷೆ. ೨. ದೇವರ (ಆಕಾಶ) ವಾಣಿ.

**देवस्थान** (ದೇವಸ್ಥಾನ) ನ. ಸಂ. ದೇಗುಲ, ದೇವಸ್ಥಾನ.

**देवस्व** (ದೇವಸ್ವ) ನ. ಸಂ. ದೇವರ (ದೇಗುಲದ) ಸೊತ್ತು.

**देवळी** (ದೇವಳೀ) ಸ್ತ್ರೀ. ಗೂಡು, ಮಾಡ.

**देवांगना** (ದೇವಾಂಗನಾ) ಸ್ತ್ರೀ. ಅಪ್ಸರೆ.

**देवाणघेवाण** (ದೇವಾಣ್‌ಘೇವಾಣ್) ಸ್ತ್ರೀ. ಕೊಡ ಕೊಳ್ಳುವ ವ್ಯವಹಾರ.

**देवाधिदेव** (ದೇವಾಧಿದೇವ) ಪು. ಸಂ. ಪರಮದೇವತೆ.

**देवाधिन होणे** (ದೇವಾಧೀನ್ ಹೋಣೆ) ಕ್ರಿ. ಅ. ಸಾಯು, ಮಡಿ.

**देवालय** (ದೇವಾಲಯ) ನ. ಸಂ. ದೇಗುಲ.

**देवाज्ञा** (ದೇವಾಜ್ಞಾ) ಪು. ಸಂ. ಸಾವು, ಮರಣ.

**–होणे** (–ಹೋಣೇ) ಕ್ರಿ. ಅ. ಸಾಯು, ಮಡಿ.

**देव्हारा** (ದೇವ್ಹಾರಾ) ಪು. ದೇವರ ಮಂಡಪ, ದೇವರ ಮೂರ್ತಿಗಳ ಪೆಟ್ಟಿಗೆ.

**देव्हारे माजविणे** (ದೇವ್ಹಾರೇ ಮಾಜವಿಣೇ) ಕ್ರಿ. ಸ. ದೇವರ ಪೂಜೆಯ ಅತಿರೇಕ.

**देश** (ದೇಶ) ಪು. ಸಂ. ದೇಶ, ನಾಡು. ೨. ಘಟ್ಟದ ಮೇಲಿನ ಬಯಲು ಪ್ರದೇಶ–ಕೊಂಕಣದ ಹೊರಗಿನ ಮಹಾರಾಷ್ಟ್ರ–ಕರ್ನಾಟಕ ಪ್ರದೇಶ.

**देशकाल वर्तमान** (ದೇಶಕಾಲ ವರ್ತಮಾನ್) ನ. ದೇಶದ ಸದ್ಯದ ಪರಿಸ್ಥಿತಿ.

**देशत्याग** (ದೇಶತ್ಯಾಗ್) ಪು. ಸಂ. ದೇಶಬಿಟ್ಟುಹೋಗುವಿಕೆ.

**देशमुख** (ದೇಶಮುಖ್) ಪು. ದೇಶಮುಖ, ದೇಶಪಾಂಡೆ.

**देशमुखी** (ದೇಶಮುಖೀ) ಸ್ತ್ರೀ. ದೇಶಮುಖನ ಪದವಿ.

**देशस्थ** (ದೇಶಸ್ಥ) ಪು. ಘಟ್ಟದ ಮೇಲಿನ ಬ್ರಾಹ್ಮಣರ ಒಂದು ಒಳಜಾತಿ.

**देशाचार** (ದೇಶಾಚಾರ) ಪು. ಸಂ. ದೇಶದಲ್ಲಿಯ ರೂಢಿ.

**देशाटन** (ದೇಶಾಟನ್) ನ. ಸಂ. ದೇಶ ಸಂಚಾರ, ಪ್ರವಾಸ.

**देशांतर** (ದೇಶಾಂತರ) ನ. ಒಂದು ದೇಶವನ್ನು ಬಿಟ್ಟು ಬೇರೊಂದಕ್ಕೆ ಹೋಗುವಿಕೆ.

**देशांतर्गत** (ದೇಶಾಂತರ್ಗತ) ವಿ. ಸಂ. ದೇಶದ ಒಳಗಿನ ಅಂತಸ್ಥ.

**देशी** (ದೇಶೀ) ವಿ. ದೇಶದಲ್ಲಿಯ, ದೇಶದಲ್ಲಿತಯಾರಾದ.

**देशोधडी** (ದೇಶೋಧಡೀ) ಕ್ರಿ. ವಿ. ಗುಳೆಕಟ್ಟಿ (ಊರಿಂದೂರಿಗೆ) ಹೋಗು, ೨. ಮನೆ ಹಾಳು.

**देह** (ದೇಹ) ಪು. ಸಂ. ದೇಹ, ಶರೀರ, ಮೈ.

**–त्याग** (–ತ್ಯಾಗ್) ಪು. ತ್ಯಾಗ.

**–दंड** (–ದಂಡ್) ಪು. ಶರೀರಕ್ಕೆ ದಂಡನೆ, ಹೊಡೆತ, ಏಟು.

**–धर्म** (–ಧರ್ಮ) ಪು. ಶಾರೀರಿಕ ಕ್ರಿಯೆ.

**–धारणा** (–ಧಾರಣಾ) ಸ್ತ್ರೀ. ಸಂ. ಶರೀರ ಧಾರಣೆ ಬದುಕುವಿಕೆ.

**–धारी** (ಧಾರೀ) ವಿ. ಶರೀರವುಳ್ಳವ.

**–भान** (–ಭಾನ್) ನ. ಶರೀರದ ಅರಿವು ಎಚ್ಚರ.

**–स्वभाव** (–ಸ್ವಭಾವ) ಪು. ಶರೀರ ಸ್ವಭಾವ, ನೈಸರ್ಗಿಕ ಕ್ರಿಯೆ.

**देहली** (ದೇಹಲೀ) ಸ್ತ್ರೀ. ಸಂ. ಹೊಸ್ತಿಲು.

**–दीपन्याय** (–ದೀಪನ್ಯಾಯ) ಪು. ಒಂದೇ ಮಾತಿನಿಂದ ಎರಡು ವಿಷಯಗಳ ಬೋಧೆಯಾಗುವ ನ್ಯಾಯ.

**देहान्त** (ದೇಹಾಂತ್) ಪು. ಸಂ. ಸಾವು, ಮರಣ.

**–प्रायश्चित्त** (–ಪ್ರಾಯಃಚಿತ್ತ) ನ. ಸಂ. ಮರಣ ದಂಡನೆ.

**देहात्मवाद** (ದೇಹಾತ್ಮವಾದ್) ।ಪು. ಸ ದೇಹಾತ್ಮ ವಾದ, ಭೌತಿಕ–ಐಹಿಕ–ವಾದ.

**देहात्मवादी** (ದೇಹಾತ್ಮವಾದೀ) ವಿ. ಸಂ. ಭೌತಿಕ, ಐಹಿಕದಲ್ಲಿ ನಂಬುವವ.

**देहावसान** (ದೇಹಾವಸಾನ್) ನ. ಸಂ. ಸಾವು.

**देही** (ದೇಹೀ) ಪು. ದೇಹಧಾರಿ, ಮನುಷ್ಯಪ್ರಾಣಿ. ೨. ದೇಹದ ಸ್ವಾಮಿ, ಆತ್ಮ.

**दैन्य** (ದೈನ್ಯ) ನ. ಸಂ. ದೀನತೆ. ೨. ನಮ್ರತೆ. ೩. ಶೋಕ. ೪. ಬಡತನ.

**दैत्य** (ದೈತ್ಯ) ಪು. ಸಂ. ರಾಕ್ಷಸ.

**दैनंदिन** (ದೈನಂದಿನ) ವಿ.ಸಂ. ನಿತ್ಯದ, ವಾಡಿಕೆಯ.

**दैनंदिनी** (ದೈನಂದಿನೀ) ಸ್ತ್ರೀ. ಸಂ. ದಿನಚರ್ಯೆ, ಡಾಯರಿ.

**दैना** (ದೈನಾ) ಸ್ತ್ರೀ. ಕನಿಕರ ಪಡಬೇಕಾದ ಸ್ಥಿತಿ, ಕರುಣಾಜನಕ ಪರಿಸ್ಥಿತಿ.

**दैनिक** (ದೈನಿಕ್) ವಿ.ಸಂ. ನಿತ್ಯದ, ಪ್ರತಿದಿವಸದ. ೨. ನಾ. ದೈನಿಕ ವರ್ತಮಾನಪತ್ರ.

**दैन्य** (ದೈನ್ಯ) ನ. ಸಂ. ಬಡತನ, ವಿಪನ್ನಾವಸ್ಥೆ.

**दैर्घ्य** (ದೈರ್ಘ್ಯ) ನ. ಸಂ. ದೀರ್ಘತೆ. ೨. ತಡ, ಉದ್ದ.

**दैव** (ದೈವ) ನ. ಸಂ. ದೈವ, ಅದೃಷ್ಟ.

–**काढणे** (–ಕಾಢಣೇ) ಘನತೆಗೇರು.

**दैवाने हात देणे** (ದೈವಾನೇ ಹಾತ್ ದೇಣೇ) (ದೈವವು) ಅನುಕೂಲವಾಗಿರು.

**दैवावर हवाला** (ದೈವಾವರ್ ಹವಾಲಾ) ಪು. ದೈವದ ಮೇಲೆ ಭಾರ.

–**गति** (–ಗತಿ) ಸ್ತ್ರೀ. ದೈವಲೀಲೆ.

–**घटना** (ಘಟನಾ) ಸ್ತ್ರೀ. ಅಕಸ್ಮಾತ್ತಾಗಿ ಒದಗುವ ಪ್ರಸಂಗ.

**दैवत** (ದೈವತ್) ನ. ಸಂ. ದೇವತೆ, ದೇವಿ.

**दैवदशा** (ದೈವದಶಾ) ಸ್ತ್ರೀ. ಸಂ. ದೈವ, ಅದೃಷ್ಟ.

**दैवयोग** (ದೈವಯೋಗ್) ಪು. (ಕೇವಲ) ಅದೃಷ್ಟದ ಸಹಾಯ.

**दैववशात्** (ದೈವವಶಾತ್) ಕ್ರಿ. ವಿ. ಆಕಸ್ಮಿಕವಾಗಿ, ಅಕಸ್ಮಾತ್ತಾಗಿ.

**दैववाद** (ದೈವವಾದ್) ಪು. ಸಂ. ದೈವದಲ್ಲಿ ನಂಬಿಕೆ.

**दैववादी** (ದೈವವಾದೀ) ವಿ. ದೈವದಲ್ಲಿ ನಂಬಿಕೆಯುಳ್ಳವ.

**दैववान्** (ದೈವವಾನ್) ವಿ. ದೈವವುಳ್ಳವ, ಅದೃಷ್ಟ ಶಾಲಿ.

**दैवहीन** (ದೈವಹೀನ) ವಿ. ಅದೃಷ್ಟವಿಲ್ಲದವ, ದುರ್ದೈವಿ.

**दैवज्ञ** (ದೈವಜ್ಞ) ಪು. ದೈವಬಲ್ಲವ. ೨. ಜ್ಯೋತಿಷಿ. ೩. ಒಂದು ಜಾತಿ.

**दैवाचा** (ದೈವಾಚಾ) ವಿ. ಭಾಗ್ಯಶಾಲಿ.

–**पुतळा** (–ಪುತಳಾ) ಪು. ಭಾಗ್ಯಶಾಲಿ.

–**भोपळा** (–ಭೋಪಳಾ) ಪು. ದೈವಹೀನ.

**दैवाची कहाणी** (ದೈವಾಚೀ ಕಹಾಣೀ) ಸ್ತ್ರೀ. ದೈವದ ಕತೆ, ಕಷ್ಟ.

**दैवाधीन** (ದೈವಾಧೀನ್) ವಿ. ದೈವದ ವಶದಲ್ಲಿದ್ದ.

**दैवी** (ದೈವೀ) ವಿ. ಸಂ. ದೇವರ, ದೈವದ.

**दोघे** (ದೋಘೇ) ಕ್ರಿ. ವಿ. ಇಬ್ಬರು.

**दोण** (ದೋಣ) ಸ್ತ್ರೀ. ಕ. ದೋಣಿ, ಡೋಣಿ.

**दोन** (ದೋನ್) ವಿ. ಎರಡು.

–**दिवसांचा** (–ದಿವಸಾಂಚಾ) ವಿ. ಅಲ್ಪಕಾಲ ಬಾಳುವ.

**दोन दिवस सासूचे दोन दिवस सुनेचे** (ದೋನ್ ದಿವಸ್ ಸಾಸೂಚೇ ದೋನ್ ದಿವಸ್ ಸುನೇಚೇ) ನ. ಕೆಲವು ದಿನ ಅತ್ತೆಗೆ ಸುಖ, ಕೆಲವು ದಿನ ಸೊಸೆಗೆ ಸುಖ.

–**प्रहर** (–ಪ್ರಹರ್) ಪು. ಮಧ್ಯಾಹ್ನ.

–**प्रहरची काळजी** (–ಪ್ರಹರಚೀ ಕಾಳಜೀ) ಸ್ತ್ರೀ. ಹೊಟ್ಟೆಯ ಚಿಂತೆ.

**दोर** (ದೋರ್) ಪು. ಹಿಂ. ಹಗ್ಗ.

–**खंड** (–ಖಂಡ್) ಪು. ದಪ್ಪನ್ನ ಹಗ್ಗ.

**दोरवा** (ದೋರವಾ) ಪು. ಹಿಂ. ಪಟ್ಟೆಪಟ್ಟೆಯುಳ್ಳ ಬಟ್ಟೆ, ಅರಿವೆ.

**दोरा** (ದೋರಾ) ಪು. ಹಿಂ. ದಾರ.

**दोरी** (ದೋರೀ) ಸ್ತ್ರೀ. ಹಗ್ಗ, ನೆಲನನ್ನಳೆಯುವ ಹಗ್ಗ.

–**सैल सोडणे** (–ಸೈಲ್ ಸೋಡಣೇ) ಕ್ರಿ.ಸ. ನಿಯಮವನ್ನು ಸಡಿಲು ಮಾಡು.

**दोला** (ದೋಲಾ) ಪು. ಜೋಕಾಲಿ, ತೂಗುಮಣೆ.

**दोलायमान** (ದೋಲಾಯಮಾನ) ಪು. ವಿ. ಅಗಳಾಡುವ, ಅಲ್ಲಾಡುವ.

**दोष** (ದೋಷ) ಪು. ಸಂ. ಕುಂದುಕೊರತೆ, ದೋಷ.

–**दृष्टि** (–ದೃಷ್ಟಿ) ಸ್ತ್ರೀ. ತಪ್ಪು ತೆಗೆಯುವ ಸ್ವಭಾವ.

**दोषा** (ದೋಷಾ) ಸ್ತ್ರೀ. ಸಂ. ರಾತ್ರಿ.

**दोषारोप** ( ದೋಷಾರೋಪ ) ಪು. ಸಂ. ದೋಷಾ ರೋಪಣೆ, ತಪ್ಪು ಹೊರಿಸುವಿಕೆ.

**दोषी** (ದೋಷೀ) ವಿ. ತಪ್ಪು ಮಾಡಿದವ, ಅಪರಾಧಿ.

**दोस्त** (ದೋಸ್ತ್) ಪು. ಫಾ. ಗೆಳೆಯ, ಮಿತ್ರ.

**दोस्ती** (ದೋಸ್ತೀ) ಸ್ತ್ರೀ. ಫಾ. ಗೆಳೆತನ.

**दोहद** (ದೋಹದ) ಪು.ಸಂ. (ಗರ್ಭಿಣಿಯ) ಬಯಕೆ, ಇಚ್ಛೆ.

**दोहन** (ದೋಹನ್) ನ.ಸಂ. ಹಾಲು ಕರೆಯುವಿಕೆ.

**दोहरा** (ದೋಹರಾ) ಪು.ಫಾ. ದ್ವಿಪದಿ (ಕಾವ್ಯ).

**दोहोत्रा** (ದೋಹೋತ್ರಾ) ವಿ. ನೂರಕ್ಕೆ ತಿಂಗಳಿಗೆ ಎರಡರಂತೆ ಬಡ್ಡಿಯದರ.

**दोंद** (ದೋಂದ್) ನ.ಹಿಂ. ಹೊಟ್ಟೆ ಮುಂದೆ ಬರುವಿಕೆ.
**आईजीच्या दोंदावर बाईजी उदार** (ಆಈಜೀಚ್ಯಾ ದೋಂದಾವರ ಬಾಈಜೀ ಉದಾರ) ನಾಣ್ಣುಡಿ. ಹೆರವರ ಸಂಪತ್ತಿನ ಮೇಲೆ ಔದಾರ್ಯ ತೋರಿ ಸುವಿಕೆ.

**दौड** (ದೌಡ್) ಸ್ತ್ರೀ. ಹಿಂ. ಓಟ, ಪಲಾಯನ.

**दौडणे** (ದೌಡಣೇ) ಕ್ರಿ. ಅ. ಓಡು.

**दौत** (ದೌತ್) ಸ್ತ್ರೀ. ಮಸಿಯ ಪಾತ್ರೆ, ದೌತಿ.

**दौत्य** (ದೌತ್ಯ) ನ. ಸಂ. ದೂತನ ಕೆಲಸ, ಸುದ್ದಿ ಮುಟ್ಟಿಸುವಿಕೆ.

**दौर्जन्य** (ದೌರ್ಜನ್ಯ) ನ. ಸಂ. ಕೆಟ್ಟ ಸ್ವಭಾವ, ದುಷ್ಟ ತನ.

**दौरा** (ದೌರಾ) ಪು. ಸಂಚಾರ, ಅಡ್ಡಾಟ, ಯಾತ್ರೆ.

**दौर्बल्य** ( ದೌರ್ಬಲ್ಯ ) ನ. ಪು. ಸಂ. ದುರ್ಬಲತೆ, ಅಶಕ್ತತೆ.

**दौर्भाग्य** (ದೌರ್ಭಾಗ್ಯ) ನ. ಸಂ. ದುರದೃಷ್ಟ.

**दौर्मनस्य** (ದೌರ್ಮನಸ್ಯ) ನ. ಸಂ. ಖೇದ, ಮನಸ್ಸಿನ ಉದಾಸೀನತೆ. ೨. ದುಷ್ಟತನ, ಹಗೆತನ.

**दौलत** (ದೌಲತ್) ಸ್ತ್ರೀ. ಅರ. ಸಂಪತ್ತು. ೨. ರಾಜ್ಯ.
**—जादा** (—ಜಾದಾ) ಸ್ತ್ರೀ. ತಮಾಷಾ ಆಟದಲ್ಲಿ ಹೆಂಗಸನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು ಹಣ ಕೊಡುವಿಕೆ.

**दौहित्र** (ದೌಹಿತ್ರ) ಪು.ಸಂ. ಮಗಳಮಗ, ಮೊಮ್ಮಗ.

**द्युति** (ದ್ಯುತಿ) ಸ್ತ್ರೀ. ಸಂ. ಪ್ರಕಾಶ.

**द्युमणि** (ದ್ಯುಮಣಿ) ಪು. ಸಂ. ಸೂರ್ಯ.

**द्यूत** (ದ್ಯೂತ) ಪು. ಸಂ. ಜೂಜು.
**—कार** (—ಕಾರ್) ಪು. ಜೂಜಾಡುವವ.

**द्योतक** (ದ್ಯೋತಕ) ವಿ. ಸಂ. ತೋರಿಸುವಂತಹ, ದರ್ಶಕ.

**द्रव** (ದ್ರವ) ಪು. ಸಂ. ಹರಿಯುವ ಪದಾರ್ಥ, ದ್ರವ.

**द्रवणे** (ದ್ರವಣೇ) ಕ್ರಿ. ಅ. ನೀರಾಗು, ಕರಗು, ಹರಿದು ಹೋಗು.

**द्रवीभवन** (ದ್ರವೀಭವನ್) ನ. ದ್ರವರೂಪ ಹೊಂದು ವಿಕೆ.

**द्रव्य** (ದ್ರವ್ಯ) ನ. ಸಂ. ಹಣ. ೨. ಒಡವೆ, ವಸ್ತು, ಸಾಮಾನು, ಔಷಧ ದ್ರವ್ಯ.
**—हीन** (—ಹೀನ) ವಿ. ಬಡವ, ನಿರ್ಧನ.

**द्रष्टा** ( ದ್ರಷ್ಟಾ ) ಪು. ಸಂ. ಕಂಡುಹಿಡಿಯುವವ, ದ್ರಷ್ಟಾರ.

**द्राव** ( ದ್ರಾವ ) ಪು. ಸಂ. ದ್ರವಣ, ನೀರು, ನೀರು ಬಿಡುವಿಕೆ.

**द्रावक** (ದ್ರಾವಕ್) ಪು. ಸಂ. ಕರಗಿಸುವ, ನೀರು ಬಿಡಿ ಸುವ, ಪದಾರ್ಥ.

**द्राविडी प्राणायाम** (ದ್ರಾವಿಡೀ ಪ್ರಾಣಾಯಾಮ) ಪು. ಸಾಮಾನ್ಯ ಕೆಲಸವನ್ನು ಕಷ್ಟಕರ ರೀತಿಯಿಂದ ಮಾಡುವಿಕೆ.

**द्राव्य** (ದ್ರಾವ್ಯ) ವಿ. ಸಂ. ಕರಗುವ, ನೀರಾಗುವ.

**द्राक्ष** (ದ್ರಾಕ್ಷ) ನ. ದ್ರಾಕ್ಷೆ.

**द्राक्षालता** (ದ್ರಾಕ್ಷಾಲತಾ) ಸ್ತ್ರೀ.ಸಂ. ದ್ರಾಕ್ಷೆಯ ಬಳ್ಳಿ.

**द्राक्षारस** (ದ್ರಾಕ್ಷಾರಸ) ಪು. ದ್ರಾಕ್ಷಾರಸ.

**द्राक्षासव** (ದ್ರಾಕ್ಷಾಸವ) ನ. ದ್ರಾಕ್ಷೆಯ ರಸದ ಔಷಧಿ.

**द्रुम** (ದ್ರುಮ) ಪು. ಸಂ. ಗಿಡ.

**द्रुत** (ದ್ರುತ) ವಿ. ಕ್ರಿ. ವಿ. ಸಂ. ಬೇಗ. ೨. ಚಪಲ.

**द्रोण** (ದ್ರೋಣ್) ಪು. ಸಂ. ಎಲೆಯಿಂದ ಮಾಡಿದ ಪಾತ್ರೆ, ದೊನ್ನೆ.

**द्रोह** (ದ್ರೋಹ) ಪು. ಸಂ. ವಂಚನೆ, ದ್ರೋಹ. ೨. ಹಗೆತನ.

**द्रोही** (ದ್ರೋಹೀ) ವಿ. ವಂಚಕ, ಹಗೆತನವುಳ್ಳವ.

**द्वय** (ದ್ವಯ) ನ. ಸಂ. ಎರಡು, ಜೋತು, ಜೊತೆ ಇಬ್ಬರು.

**द्वंद्व** (ದ್ವಂದ್ವ) ನ. ಸ. ಜೋಡು. ೨. ಇಬ್ಬರ ಕದನ. ೩. ಇಬ್ಬಗೆಯ ಆಲೋಚನೆ. ೪. ಪರಸ್ಪರ ಭಿನ್ನ ವಾದ ಎರಡು ವಿಚಾರಗಳು. ೫. ಒಂದು ಸಮಾಸ.
**—गीत** (ಗೀತ) ನ. ಇಬ್ಬರು ಕೂಡಿ (ಹೆಣ್ಣು ಗಂಡು) ಹಾಡುವ ಪದ.
**—युद्ध** (ಯುದ್ಧ) ನ. ಇಬ್ಬರೊಳಗಿನ ಕದನ.

**द्वाड** (ದ್ವಾಡ್) ವಿ. ಮುತ್ಠಾಳ, ಜಗಳಗಂಟ.

**द्वादश** (ದ್ವಾದಶ) ವಿ. ಸಂ. ಹನ್ನೆರಡು. ೧೨.

**द्वादशी** (ದ್ವಾದಶೀ) ಸ್ತ್ರೀ. ಸಂ. ಹನ್ನೆರಡನೆಯ ತಿಥಿ.

**द्वापार** (ದ್ವಾಪಾರ್) ಪು. ಸಂ. ಒಂದು ಯುಗ.

**द्वार** (ದ್ವಾರ್) ಪು. ಸಂ. ಬಾಗಿಲ, ಹತ್ತರ ಹೋಗುವ ಹಾದಿ.

**–पाल** (–ಪಾಲ) ಪು. ಕಾವಲುಗಾರ.

**–मंडप** (–ಮಂಡಪ) ಪು. ಬಾಗಿಲದಲ್ಲಿಯ ಮಂಡಪ.

**–रक्षक** (–ರಕ್ಷಕ) ಪು. ಕಾವಲುಗಾರ.

**द्वारा** (ದ್ವಾರಾ) ಕ್ರಿ. ವಿ. ಮುಖಾಂತರ, ಪರವಾಗಿ.

**द्वाही** (ದ್ವಾಹೀ) ಸ್ತ್ರೀ. ಸಾರುವಿಕೆ, ಘೋಷಣೆ.

**द्वि** (ದ್ವಿ) ವಿ. ಎರಡು.

**–गुणित** (–ಗುಣಿತ) ವಿ. ಎರಡು ಪಟ್ಟಾದ.

**–घात** (ಘಾತ್) ವಿ. ಒಂದು ಸಂಖ್ಯೆಯನ್ನು ಅದರಿಂದಲೇ ಗುಣಿಸಿ ಬರುವ ಸಂಖ್ಯೆ, ವರ್ಗ, ಸ್ಕ್ವೆಯರ್.

**द्विज** (ದ್ವಿಜ) ಪು. ಸಂ. ಬ್ರಾಹ್ಮಣ. ೨. ಪಕ್ಷಿ. ೩. ಹಲ್ಲು.

**द्विजिव्ह** (ದ್ವಿಜಿಹ್ವ) ಪು. ಹಾವು. ವಿ. ದೂರುವವ, ಸುಳ್ಳುಮಾತನಾಡುವವ, ವಂಚಕ.

**द्वितीय** (ದ್ವಿತೀಯ) ವಿ. ಸಂ. ಎರಡನೆಯ.

**–संबंध** (–ಸಂಬಂಧ) ವಿ. ಎರಡನೆಯ ಹೆಂಡತಿ.

**द्वितीया** (ದ್ವಿತೀಯಾ) ಸ್ತ್ರೀ. ಸಂ. ಬಿದಿಗೆ, ಎರಡನೆಯ ತಿಥಿ.

**द्वित्त** (ದ್ವಿತ್ತ) ಸ್ತ್ರೀ. ಸಂ. ದ್ವಿಗುಣಿತ.

**द्वित्व** (ದ್ವಿತ್ವ) ನ. ಸಂ. ಎರಡು ಪದಾರ್ಥಗಳ ಗಂಟು ಜೋಡು ಗಂಟು.

**द्विदल** (ದ್ವಿದಲ) ವಿ. ಎರಡು ದಳಗಳುಳ್ಳ ೨. ನ. ಬೇಳೆ.

**–राज्य पद्धती** (–ರಾಜ್ಯ ಪದ್ಧತಿ) ಇಬ್ಬರು ಒಡೆಯರುಳ್ಳ ರಾಜ್ಯ ಪದ್ಧತಿ.

**द्विधा** (ದ್ವಿಧಾ) ವಿ. ಸಂ. ಎರಡು ರೀತಿಯಿಂದ, ಇಬ್ಬಗೆಯಾಗಿ. ೨. ಸ್ತ್ರೀ. ಸಂದೇಹ, ಸಂಶಯ.

**द्विपाद** (ದ್ವಿಪಾದ) ವಿ. ಸಂ. ಎರಡು ಕಾಲುಗಳುಳ್ಳ.

**द्विरुक्त** (ದ್ವಿರುಕ್ತ) ವಿ. ಸಂ. ಎರಡು ಸಲ ಹೇಳಿದ.

**द्विरुक्ति** (ದ್ವಿರುಕ್ತಿ) ಸ್ತ್ರೀ. ಸಂ. ಒಂದೇಮಾತನ್ನು ಎರಡು ಸಲ ಹೇಳುವಿಕೆ.

**द्विरेफ** (ದ್ವಿರೇಫ) ಪು. ಸಂ. ಗುಂಗಾಡು.

**द्विवचन** (ದ್ವಿವಚನ) ನ. ಸಂ. (ವ್ಯಾಕರಣ) ದ್ವಿವಚನ.

**द्विवार्षिक** (ದ್ವಿವಾರ್ಷಿಕ) ವಿ. ಸಂ. ಎರಡು ವರ್ಷಗಳಿಗೆ ಒಮ್ಮೆ ಬರುವ.

**द्विविध** (ದ್ವಿವಿಧ) ವಿ. ಎರಡು ಬಗೆಯ.

**द्विशतक** (ದ್ವಿಶತಕ್) ನ. ಸಂ. (ಕ್ರಿಕೆಟ್) ಎರಡು ನೂರು ಓಟಗಳು, ರನ್‌ಗಳು.

**द्विसमत्रिभुज** (ದ್ವಿಸಮತ್ರಿಭುಜ) ಪು. ಸಮದ್ವಿಭುಜ. (ಭೂಮಿತಿ)

**द्वीप** (ದ್ವೀಪ) ನ. ಸಂ. ದ್ವೀಪ, ನಡುಗಡ್ಡೆ.

**–कल्प** (ಕಲ್ಪ) ನ. ದ್ವೀಪಕಲ್ಪ.

**द्वेष** (ದ್ವೇಷ) ಪು. ಸಂ. ಹಗೆತನ, ವೈರತ್ವ.

**–बुद्धि** (–ಬುದ್ಧಿ) ಸ್ತ್ರೀ. ದುಷ್ಟ ಬುದ್ಧಿ.

**द्वेष्टा** (ದ್ವೇಷ್ಟಾ) ಪು. ಸಂ. ದ್ವೇಷಿಸುವವ, ಹಗೆ.

**द्वेष्य** (ದ್ವೇಷ್ಯ) ವಿ. ಸಂ. ಕೀಳು, ನೀಚ, ತುಚ್ಛ.

**द्वैत** (ದ್ವೈತ) ನ. ಸಂ. ಇಬ್ಬಗೆ, ಒಡುಕು, ಕಲಹ.

**–भाव** (ಭಾವ) ಪು. ಭಿನ್ನತೆ, ಒಡಕು.

**द्वैध** (ದ್ವೈಧ) ನ. ಎರಡು ತರದ ವ್ಯವಸ್ಥೆ, ಅನಾವಸ್ಥೆ.

**द्वयर्थी** (ದ್ವ್ಯರ್ಥೀ) ವಿ. ಸಂ. ಎರಡು ಅರ್ಥಗಳುಳ್ಳ.

## ध ಧ

**ध** (ಧ) 'ತ' ವರ್ಗದ ೪ ನೆಯ ಅಕ್ಷರ.

**ध चा मा करणे** (ಧ ಚಾಮಾ ಕರಣೇ) ನಾಣ್ನುಡಿ. ಕೆಟ್ಟ ಹೇತುವಿನಿಂದ ಬರೆಹದಲ್ಲಿ ಬದಲಾವಣೆ ಮಾಡು. (ಪೇಶ್ವೆ ರಘುನಾಥ ರಾಯನ ಹೆಂಡತಿ ಆನಂದೀಬಾಯಿಯು ರಘುನಾಥ ರಾಯನಿಗೆ ಪೇಶ್ವೆ ಪದ ಸಿಗಬೇಕೆಂದು ಬಯಸಿ, ಪೇಶ್ವೆ ನಾರಾಯಣ ರಾಯನನ್ನು ಹಿಡಿಯಬೇಕು ("**ध**" **रावे**) ಎಂಬುದನ್ನು ತಿದ್ದಿ ("**मा**" **रावे**) ಎಂದು ಬದಲಾಯಿಸಿದಳು. ಅದರ ಮೂಲಕ ನಾರಾಯಣರಾಯನ ಕೊಲೆಯಾಯಿತು.)

**धकणे** (ಧಕಣೇ) ಕ್ರಿ. ಅ. ಹೇಗಾದರೂ ಬಾಳು ಸಾಗಿಸು.

**धक्का** (ಧಕ್ಕಾ) ಪು. ತಳ್ಳುವಿಕೆ, ದೂಕುವಿಕೆ, ತಾಡನ.

**धकाधकी** (ಧಕಾಧಕೀ) ಸ್ತ್ರೀ. ಜಗಳ, ವ್ಯಾಜ್ಯ.

**–चा मामला** (–ಚಾ ಮಾಮಲಾ) ಸ್ತ್ರೀ. ಬಹು ಕಷ್ಟದ ಕೆಲಸ.

**धक्काबुक्की** (ಧಕ್ಕಾಬುಕ್ಕೀ) ಸ್ತ್ರೀ. ಜನಸಂದಟ್ಟಣಿಯಲ್ಲಿಯ ಜನರ ತಿಕ್ಕಾಟ.

**धग** (ಧಗ್) ಸ್ತ್ರೀ. ಉರಿಯ ಕಾವು, ಪ್ರಕಾಶ, ಉಷ್ಣತೆ.

**धगड** (ಧಗಡ್) ಪು. ಪ್ರಿಯಕರ, ಪ್ರೇಮಿಕ, ಜಾರ, ಮಿಂಡ.

**धगधगणे** (ಧಗಧಗಣೇ) ಕ್ರಿ. ಅ. ಸುಡು, ಉರಿ, ಪ್ರಕಾಶಿಸು.

**धगधगीत** (ಧಗಧಗೀತ್) ವಿ. ಉಷ್ಣ, ಕಾಯುವ, ಕಾಯ್ದ, ಹೊಳೆಯುವ.

**धजणे** (ಧಜಣೇ) ಕ್ರಿ. ಅ. ಧೈರ್ಯಮಾಡು, ದೊಡ್ಡ ಕೆಲಸ ಮಾಡಲು ಉದ್ಯುಕ್ತನಾಗು.

**धटिंगण** (ಧಟಿಂಗಣ) ಪು. ಮುಠ್ಠಾಳ, ಟೊಣಪ.

**धट्टाकट्टा** (ಧಟ್ಟಾಕಟ್ಟಾ) ವಿ. ಆರೋಗ್ಯ ಸಂಪನ್ನ, ಗಟ್ಟಿಮುಟ್ಟಿಯಾದವ.

**धड** (ಧಡ್) ನ. ತಲೆಯಿಲ್ಲದ, ರುಂಡ ಹಾರಿಸಿದ ಶರೀರ. ೨. ವಿ. ಸುದೃಢ, ಪೂರ್ಣ. ಕ್ರಿ. ವಿ. ಸಂಪೂರ್ಣವಾಗಿ, ಪೂರಾ.

**–धाकट** (–ಧಾಕಟ್) ವಿ. ಗಟ್ಟಿಮುಟ್ಟಿಯಾದ.

**धडक** (ಧಡಕ್) ಸ್ತ್ರೀ. ತಳ್ಳುವಿಕೆ, ತಾಕಲಾಟ. ೨. ಧೈರ್ಯ, ಉತ್ಸಾಹ. ೩. ಅನುಮಾನ.

**बे–** (ಬೇ–) ಕ್ರಿ. ವಿ. ಅನುಮಾನವಿಲ್ಲದೆ.

**धडकणे** (ಧಡಕಣೇ) ಕ್ರಿ. ಅ. ತಾಗು, ತಾಕಲಾಡು, ಅಪ್ಪಳಿಸು. ೨. (ಮುಂದೆ) ಬಂದು ನಿಲ್ಲು. ೩. (ಬಂದು) ಮುಟ್ಟು, ತಳವೂರು.

**धडका** (ಧಡಕಾ) ವಿ. ಇಡಿಯದಾದ, ತುಂಬಿದ, ಹರಿದುದಲ್ಲದ. ೨. ಪು. ತಳ್ಳುವಿಕೆ, ಅಪ್ಪಳಿಸುವಿಕೆ,

**धडकावणे** (ಧಡಕಾವಣೇ) ಕ್ರಿ. ಅ. ಸಂಕೋಚವಿಲ್ಲದೆ ಮಾತಾಡು. ೨. ಗರ್ಜಿಸು.

**धडकी** (ಧಡಕೀ) ಸ್ತ್ರೀ. ಅಂಜಿಕೆ, ಎದೆಗುದಿ.

**–भरणे** (–ಭರಣೇ) ಕ್ರಿ. ವಿ. ಅಂಜಿಕೆ ಬರು.

**धडगत** (ಧಡಗತ್) ಸ್ತ್ರೀ. ಅವಸ್ಥೆ, ಪರಿಣಾಮು, ಸುಸ್ಥಿತಿ ಅರೆ.

**धडधडणे** (ಧಡಧಡಣೇ) ಕ್ರಿ. ಅ. ಎದೆಗುದಿಯಾಗು. ಎದೆಹಾರು.

**धडधडाट** (ಧಡಧಡಾಟ್) ಪು. ಸಪ್ಪಳ, ಶಬ್ದ.

**धडधडीत** (ಧಡಧಡೀತ್) ಕ್ರಿ. ವಿ. ಸ್ಪಷ್ಟವಾಗಿ, ನಿಃಸಂಶಯವಾಗಿ, ಶುದ್ಧವಾಗಿ.

**धडधाकट–ड** (ಧಡಧಾಕಟ್–ಡ್) ವಿ. ಗಟ್ಟಿಮುಟ್ಟಿಯಾದ, ಆರೋಗ್ಯಸಂಪನ್ನ.

**धडपड** (ಧಡಪಡ್) ಸ್ತ್ರೀ. ಪ್ರಯತ್ನ, ಹೋರಾಟ, ಪರಿಶ್ರಮ.

**धडपडणे** (ಧಡಪಡಣೇ) ಕ್ರಿ. ಸ. ಪ್ರಯತ್ನಮಾಡು, ದೀರ್ಘೋದ್ಯೋಗಮಾಡು.

**धडपडाट** (ಧಡಪಡಾಟ್) ಪು. ಪ್ರಯತ್ನ, ಪರಿಶ್ರಮ, ಕಷ್ಟ.

**धडपा** (ಧಡಪಾ) ಪು. ಸಣ್ಣ ತುಂಡು, ಚೂರು.

**धडफडणे** (ಧಡಫಡಣೇ) ಕ್ರಿ. ಅ. ನೆಳಲು, ಬೇನೆಬೀಳು,

**धडा** (ಧಡಾ) ಪು. ಪಾಠ, ಉದಾಹರಣೆ.

**–देणे** (–ದೇಣೇ) ಕ್ರಿ. ಸ. ಕಲಿಸು, ಪಾಠಕಲಿಸು. ೨. ದಂಡನೆಮಾಡು.

**–घेणे** (–ಘೇಣೇ) ಕ್ರಿ. ಅ. ಪಾಠಕಲಿ, ಜಾಣತನ ಮಾಡು.

**धडाका** (ಧಡಾಕಾ) ಪು. ಬಹಳ ಪ್ರಯತ್ನ ಪಡುವಿಕೆ, ಬಹಳ ಉತ್ಸಾಹದಿಂದ ಕಾರ್ಯಮಾಡುವಿಕೆ.

**पहिल्या धडाक्याने** (ಪಹಿಲ್ಯಾ ಧಡಾಕ್ಯಾನೇ) ಕ್ರಿ. ವಿ. ಮೊದಲನೆಯ ಪ್ರಯತ್ನದಿಂದಲೇ.

**धडाडणे** (ಧಡಾಡಣೇ) ಕ್ರಿ. ಅ. ಒದರು, ಚೀರು. ೨. ಮುರಿದು ಬೀಳು.

**धडाडी** (ಧಡಾಡೀ) ಸ್ತ್ರೀ.ಧೈರ್ಯ,ಸಾಹಸ,ಉತ್ಸಾಹ.

**धडाधड** (ಧಡಾಧಡ್) ಕ್ರಿ. ವಿ. ಧಡಲ್ ಎಂದು. ೨. ಬೇಗನೆ, ಅವಸರದಿಂದ.

**धडेवाटप** (ಧಡೇವಾಟಪ್) ನ. ಆಸ್ತಿಯನ್ನು ಹಂಚಿ ಕೊಳ್ಳುವಿಕೆ, ಪೈತೃಕ ವಿಭಾಜನೆ.

**धडोती** (ಧಡೋತೀ) ಸ್ತ್ರೀ. ನಿತ್ಯದ ಬಳಕೆಗೆ ಬೇಕಾಗುವ ಉರುಟು ಬಟ್ಟೆ.

**धतुरा** (ಧತುರಾ) ಪು.ಹಿಂ. ಮೋಸ, ಕುಚೋದ್ಯತನ.

**–देणे** (–ದೇಣೇ) ಕ್ರಿ. ಸ. ಮೋಸಗೊಳಿಸು. ೨. ಹಿಂ. ಧತ್ತೂರಿ ಹೂ.

**धन** (ಧನ) ನ. ಸಂ. ಸಂಪತ್ತು, ಹಣ, ಹೊನ್ನು.

**धनको** (ಧನಕೋ) ಪು. ಸಾಲ ಕೊಡುವವ.

**धनगर** (ಧನಗರ್) ಪು. ದನಕಾಯುವವ, ಕುರಿಕಾಯುವವ, ಕುರುಬ.

**धनतेरस (धनत्रयोदशी)** (ಧನತೇರಸ್, ಧನತ್ರಯೋದಶೀ) ಸ್ತ್ರೀ. ಆಶ್ವೀನ ಮಾಸದ (ಕೃಷ್ಣ ಪಕ್ಷದ) ತ್ರಯೋದಶಿ,ನೀರು ತುಂಬುವ ಹಬ್ಬ, ಹಟ್ಟೀಹಬ್ಬ.

**धनद** (ಧನದ) ಪು. ಸಂ. ಕುಬೇರ.

**धनदौलत** (ಧನದೌಲತ್) ಸ್ತ್ರೀ.ಫಾ. ಧನ,ಸಂಪತ್ತು.

**धनधान्य** (ಧನಧಾನ್ಯ) ನ. ಸಂ. ಸಂಪತ್ತು, ಕಾಳುಕಡಿ.

**धनरेषा** (ಧನರೇಷಾ) ಸ್ತ್ರೀ. ಅಂಗೈಮೇಲಿರುವ ಸಂಪತ್ತನ್ನು ತೋರಿಸುವ ಗೆರೆ.

**–उमटणे** (–ಉಮಟಣೇ) ಕ್ರಿ. ಅ. ಅನಪೇಕ್ಷಿತ ರೀತಿಯಿಂದ ಧನ ದೊರೆಯುವಿಕೆ.

**धनलोभी** (ಧನಲೋಭೀ) ಪು. ಹಣದ ಆಸೆ ಪಡುವವ.

**धनवान** (ಧನವಾನ್) ವಿ. ಸಂ. ಸಿರಿವಂತ, ಸಾಹುಕಾರ.

**धना** (ಧನಾ) ಪು. ಹಿಂ. ಕೊತ್ತುಂಬರಿ ಬೀಜ.

**धनाढ्य** (ಧನಾಢ್ಯ) ವಿ. ಸಂ. ಸಿರಿವಂತ, ಸಾಹುಕಾರ.

**धनांध** (ಧನಾಂಧ) ವಿ. ಸಂಪತ್ತಿನಿಂದ ಕಣ್ಣು ತಿರುಗಿದವ, ಸಿರಿವಂತಿಕೆಯಿಂದ ಸೊಕ್ಕಿಗೇರಿದವ.

**धनाध्यक्ष** (ಧನಾಧ್ಯಕ್ಷ) ಪು. ಹಣಕಾಸುಗಳ ಅಧಿಕಾರಿ. ೨. ಕುಬೇರ.

**धनिक** (ಧನಿಕ) ವಿ. ಸಿರಿವಂತ, ಸಾವಕಾರ.

**धनिष्ठा** (ಧನಿಷ್ಠಾ) ಸ್ತ್ರೀ. ಸಂ. ಒಂದು ನಕ್ಷತ್ರ.

**धनी** (ಧನೀ) ಪು. ಹಿಂ. ಸಾಹುಕಾರ. ೨. ಒಡೆಯ, ಸ್ವಾಮಿ. ೩. ಗಂಡ.

**धनीण** (ಧನೀಣ್) ಸ್ತ್ರೀ. ಒಡತಿ, ಯಜಮಾನತಿ.

**धनु** (ಧನು) ನ. ಬಿಲ್ಲು. ೨. ಸ್ತ್ರೀ. ಧನುರಾಶಿ.

**धनुकली** (ಧನುಕಲೀ) ಸ್ತ್ರೀ. ಸಣ್ಣ ಬಿಲ್ಲು, ಗುಲೇಲು, ಹತ್ತಿ ಹಿಂಜುವ ಬಿಲ್ಲು.

**धनुर्धर, धनुर्धारी** (ಧನುರ್ಧರ, ಧನುರ್ಧಾರೀ) ಪು. ಬಿಲ್ಲುಗಾರ, ಧನುರ್ಧಾರಿ.

**धनुर्मास** (ಧನುರ್ಮಾಸ್) ಪು. ಸಂ. ಸೂರ್ಯನು ಧನು ರಾಶಿಯಲ್ಲಿ ಸೇರಿದ ಸಮಯ (ಕಾರ್ತಿಕ ಮಾರ್ಗಶೀರ್ಷ)

**धनुर्वात** (ಧನುರ್ವಾತ್) ಪು. ಸಂ. ಸೆಟೆಯುವ ಬೇನೆ ಧನುರ್ವಾತ.

**धनुर्विद्या** (ಧನುರ್ವಿದ್ಯಾ) ಸ್ತ್ರೀ. ಧನುರ್ವಿದ್ಯೆ, ಬಿಲ್ಲುಗಾರಿಕೆ.

**धनुष्य** (ಧನುಷ್ಯ) ನ. ಸಂ. ಬಿಲ್ಲು.

**इंद्र–** (ಇಂದ್ರ–) ನ. ಕಾಮನಬಿಲ್ಲು.

**धनेश्वर** (ಧನೇಶ್ವರ) ಪು. ಸಂ. ಸಿರಿವಂತ. ೨. ಕುಬೇರ.

**धन्य** (ಧನ್ಯ) ವಿ. ಸಂ. ಕೃತಾರ್ಥ, ಧನ್ಯ.

**धन्यवाद** (ಧನ್ಯವಾದ್) ಪು. ಸಂ. ಆಭಾರ ಪ್ರದರ್ಶನ. ಉಪಕೃತ ಭಾವನೆಯನ್ನು ಸೂಚಿಸುವಿಕೆ.

**धन्वंतरी** (ಧನ್ವಂತರೀ) ಪು. ಸಂ. ದೇವತೆಗಳ ವೈದ್ಯ, ಧನ್ವಂತರಿ.

**धन्वी** (ಧನ್ವೀ) ಪು. ಸಂ. ಬಿಲ್ಲುಗಾರ, ಧನುರ್ವಿದ್ಯೆ, ಬಲ್ಲವ.

**धपकत** (ಧಪಕತ್) ಅ. ದೊಪ್ಪನೆ, ಸಪ್ಪಳದಿಂದ.

**धपका** (ಧಪಕಾ) ಪು. ಆಘಾತ, ಹೊಡೆತ, ಏಟು.

**धपकावणे** (ಧಪಕಾವಣೇ) ಕ್ರಿ. ಸಂ. ಹೊಡೆ, ಬಡಿ, ಏಟುಕೊಡು.

**धपाटा** (ಧಪಾಟಾ) ಪು. ಹೊಡೆತ, ಏಟು.

**धप्पा** (ಧಪ್ಪಾ) ಪು. ಗುದ್ದುವಿಕೆ, ಹೊಡೆತ, ಏಟು.

**धबकणे** (ಧಬಕಣೇ) ಕ್ರಿ. ಅ. ಬೀಳು, ಕುಸಿಬೀಳು. ೨. ಕಿವಿ ಹಿಂಡು.

**धबधबा** (ಧಬಧಬಾ) ಪು. ಜಲಪ್ರಪಾತ, "ಫಾಲ್ಸ್"

**धबाधब** (ಧಬಾಧಬ್) ಕ್ರಿ. ವಿ. ಒಂದೇಸವನೆ, ಒಂದರ ಮೇಲೊಂದಾಗಿ.

**धमक** (ಧಮಕ್) ಸ್ತ್ರೀ. ಧೈರ್ಯ, ಉತ್ಸಾಹ, ಕಸುವು.

**धमकावणी** (ಧಮಕಾವಣೀ) ಸ್ತ್ರೀ. ಅಂಜಿಸುವಿಕೆ, ಬೆದರಿಸುವಿಕೆ.

**धमकावणे** (ಧಮಕಾವಣೇ) ಕ್ರಿ. ಸಂ. ಬೆದರಿಸು, ಅಂಜಿಸು, ಗದ್ದರಿಸು.

**धमकी** (ಧಮಕೀ) ಸ್ತ್ರೀ. ಬೆದರಿಸುವಿಕೆ.

**धमणी** (ಧಮಣೀ) ಸ್ತ್ರೀ. ಹಿಂ. ಧಮಣಿ (ಎತ್ತಿನ ಬಂಡಿ)

**धमनी** (ಧಮನೀ) ಸ್ತ್ರೀ. ಮುಖ್ಯ ರಕ್ತವಾಹಿನಿ, ಧಮನಿ.

**धमाल** (ಧಮಾಲ್) ವಿ. ದೊಡ್ಡ, ಪ್ರಚಂಡ. ೨. ಸ್ತ್ರೀ. ಒದರಾಟ, ಚೀರಾಟ, ಗೊಂದಲ.

**धम्मकलाडू** (ಧಮ್ಮಕಲಾಡೂ) ಪು. ಬೆನ್ನಿನ ಮೇಲೆ ಗುದ್ದುವಿಕೆ.

**धरण** (ಧರಣ) ನ. ಅಣೆಕಟ್ಟು, ಡ್ಯಾಮ್.

**धरणी** (ಧರಣೀ) ಸ್ತ್ರೀ. ಸಂ. ಪೃಥ್ವಿ. ೨. ಬಗೆ, ಪ್ರಕಾರ.

**–कंप** (–ಕಂಪ್) ಪು. ಭೂಕಂಪ.

**–तल** (–ತಲ) ಪು. ಜಗತ್ತು ಪೃಥ್ವಿ.

**धरणीधर** (ಧರಣೀಧರ್) ಪು. ಗುಡ್ಡ, ಪರ್ವತ.

**धरणे** (ಧರಣೇ) ಕ್ರಿ. ಸಂ. ಹಿಡಿ, ಹಿಡಿದುಕೋ. ೨. ಗಿರಫ್ತಾರಿ ಮಾಡು, ಸೆರೆಹಿಡಿ. ೩. ನ. ಒತ್ತಾಯ, ಸತ್ಯಾಗ್ರಹ.

**–करी** (–ಕರೀ) ಪು. ಸಾಲದ ಸಲುವಾಗಿ ಒತ್ತಾಯ ಪಡಿಸುವವ.

**धरती** (ಧರತೀ) ಸ್ತ್ರೀ. ಧರಿತ್ರಿ, ಜಗತ್ತು. ೨. ರೀತಿ, ತರ, ಬಗೆ.

**धरपकड** (ಧರಪಕಡ್) ಸ್ತ್ರೀ. ಸೆರೆಹಿಡಿಯುವಿಕೆ, ಬಂಧನ.

**धरपकडीचा व्यवहार** (ಧರಪಕಡೀಚಾ ವ್ಯವಹಾರ) ಪು. ದಸ್ತಗಿರಿಯ ಉದ್ಯೋಗ.

**धरबंद** (ಧರಬಂದ್) ಪು. ಅಳತೆ, ಪರಿಸೀಮೆ. ೨. ನಿಯಂತ್ರಣ.

**धरमेळ** (ಧರಮೇಳ್) ಪು. ಸರಿಹೊಂದುವಿಕೆ, ಹೊಂದಿಕೆ.

**धरवणी** (ಧರವಣೀ) ನ. ಮಳೆಯ ನೀರನ್ನು ಸಂಗ್ರಹಿಸುವಿಕೆ, ಹಿಡಿದಿಟ್ಟ ಮಳೆಯ ನೀರು.

**धरसोड** (ಧರಸೋಡ್) ಸ್ತ್ರೀ. ದೃಢ ನಿಶ್ಚಯವಿಲ್ಲದಿರುವಿಕೆ.

**धरा** (ಧರಾ) ಸ್ತ್ರೀ. ಸಂ. ಪೃಥ್ವಿ, ಜಗತ್ತು.

**धराधर** (ಧರಾಧರ) ಪು. ಸಂ. ಗುಡ್ಡ, ಪರ್ವತ.

**धरून** (ಧರೂನ್) ಕ್ರಿ. ವಿ. ಸೇರಿ, ಕೂಡಿಸಿ. ೨. ಹಿಡಿದು, ಪರ್ಯಂತವಾಗಿ.

**धर्ती** (ಧರ್ತೀ) ಸ್ತ್ರೀ. ಬಗೆ, ತರ, ತರಹ, ಮಾದರಿ.

**धर्म** (ಧರ್ಮ) ಪು. ಸಂ. ಧರ್ಮ, ಕರ್ತವ್ಯ, ಗುಣ.
**–कार्य** (–ಕಾರ್ಯ) ನ. ಪೂಜೆ ಪುರಸ್ಕಾರ.
**–पत्नी** (–ಪತ್ನೀ) ಸ್ತ್ರೀ. ಮದುವೆಯ ಹೆಂಡತಿ.

**धर्मपर** (ಧರ್ಮಪರ) ವಿ. ಸಂ. ಧರ್ಮವನ್ನು ನಿಷ್ಠೆಯಿಂದ ಆಚರಿಸುವವ.

**धर्मपरायण** (ಧರ್ಮಪರಾಯಣ) ವಿ. ಸಂ. ಪರಮ ಧಾರ್ಮಿಕ.

**धर्मपुत्र** (ಧರ್ಮಪುತ್ರ) ಪು. ಸಂ. ತಿಳಿದುಕೊಂಡ (ಮಾನಸ)ಪುತ್ರ.

**धर्मबंधु** (ಧರ್ಮಬಂಧು) ಪು. ಸಂ. ತಿಳಿದುಕೊಂಡ (ಮಾನಸ) ಬಂಧುವು.

**धर्मबुद्धी** (ಧರ್ಮಬುದ್ಧಿ) ಸ್ತ್ರೀ. ಸಂ. ಧಾರ್ಮಿಕ ಪ್ರವೃತ್ತಿ.

**धर्ममार्ग** (ಧರ್ಮಮಾರ್ಗ) ಪು. ಸಂ. ಸತ್ಯಮಾರ್ಗ, ಯೋಗ್ಯಮಾರ್ಗ.

**धर्मयुद्ध** (ಧರ್ಮಯುದ್ಧ) ಪು. ಸಂ. ಧರ್ಮದ ಸಲುವಾಗಿ ಮಾಡಿದ ಶಾಸ್ತ್ರೋಕ್ತ ಬಗೆಯ, ಯುದ್ಧ.

**धर्मराज** (ಧರ್ಮರಾಜ) ಪು. ಸಂ. ಸದಾಚಾರಿಯಾದ ಮನುಷ್ಯ. ೨. ಹಿರಿಯ ಪಾಂಡವ.

**धर्मराज्य** (ಧರ್ಮರಾಜ್ಯ) ನ. ಸಂ. ಆದರ್ಶ ಆಡಳಿತ.

**धर्मशास्त्र** (ಧರ್ಮಶಾಸ್ತ್ರ) ನ. ಸಂ. ಧರ್ಮವಿಷಯಕ ಶಾಸ್ತ್ರ. ೨. ಮನುಧರ್ಮಶಾಸ್ತ್ರ.

**धर्मशाळा** (ಧರ್ಮಶಾಳಾ) ಸ್ತ್ರೀ. ಧರ್ಮಶಾಲೆ.

**धर्मशील** (ಧರ್ಮಶೀಲ) ವಿ. ಸಂ. ಧಾರ್ಮಿಕ.

**धर्मसंतति** (ಧರ್ಮಸಂತತಿ) ಸ್ತ್ರೀ. ಸಂ. ದತ್ತಕ ಮಗ.

**धर्मसभा** (ಧರ್ಮಸಭಾ) ಸ್ತ್ರೀ. ಸಂ. ಧರ್ಮದ, ನ್ಯಾಯದ, ಸಭೆ.

**धर्मसम्मत** (ಧರ್ಮಸಮ್ಮತ) ವಿ. ಸಂ. ಧರ್ಮದಲ್ಲಿ ಆಜ್ಞಾಪಿಸಿದ.

**धर्मसंस्थापना** (ಧರ್ಮಸಂಸ್ಥಾಪನಾ) ಸ್ತ್ರೀ. ಸಂ. (ಹೊಸ ಧರ್ಮದ ಸ್ಥಾಪನೆ.

**धर्मज्ञ** (ಧರ್ಮಜ್ಞ) ವಿ. ಸಂ. ಧರ್ಮ, ಕರ್ತವ್ಯ, ಮುಂ.ಗಳನ್ನು ಬಲ್ಲದ.

**धर्माचरण** (ಧರ್ಮಾಚರಣ) ನ. ಸಂ. ಧರ್ಮದ ಆಚರಣೆ.

**धर्मांतर** (ಧರ್ಮಾಂತರ) ನ. ಸಂ. ಒಂದು ಧರ್ಮವನ್ನು ಬಿಟ್ಟು ಬೇರೆಧರ್ಮಕ್ಕೆ ಸೇರುವಿಕೆ.

**धर्मात्मा** (ಧರ್ಮಾತ್ಮಾ) ವಿ. ಸಂ. ಧಾರ್ಮಿಕ, ಸತ್ಪುರುಷ.

**धर्मादाय** (ಧರ್ಮಾದಾಯ) ಪು. ಸಂ. ಧರ್ಮದ ಸಲುವಾಗಿ ಕೊಟ್ಟದಾನ.

**धर्माधिकारी** (ಧರ್ಮಾಧಿಕಾರಿ) ಪು. ಸಂ. ಧಾರ್ಮಿಕ ವ್ಯಾಜ್ಯಗಳನ್ನು ಪರಿಹಾರ ಮಾಡುವವ.

**धर्मार्थ** (ಧರ್ಮಾರ್ಥ) ವಿ. ಸಂ. ಧರ್ಮದ ಸಲುವಾಗಿ ನಡೆಸಿದ ೨. ಉಚಿತ, ಪುಕ್ಕಟ್ಟೆ.

**धर्मावतार** (ಧರ್ಮಾವತಾರ) ಪು. ಪರಮ ಧಾರ್ಮಿಕ ಪುರುಷ.

**धर्मासन** (ಧರ್ಮಾಸನ) ನ. ಸಂ. ನ್ಯಾಯಾಧೀಶನ ಸ್ಥಾನ.

**धर्मिष्ठ** (ಧರ್ಮಿಷ್ಠ) ವಿ. ಸಂ. ಧಾರ್ಮಿಕ ಪ್ರವೃತ್ತಿಯುಳ್ಳವ.

**धर्मी** (ಧರ್ಮೀ) ವಿ. ಸಂ. ಗುಣಧರ್ಮವುಳ್ಳ ೨. ಧಾರ್ಮಿಕ.

**धर्मोपदेश** (ಧರ್ಮೋಪದೇಶ) ಪು. ಸಂ. ಧರ್ಮದ ಉಪದೇಶ.

**धर्मोपदेशक** (ಧರ್ಮೋಪದೇಶಕ) ಪು. ಸಂ. ಧರ್ಮವನ್ನು ಉಪದೇಶಿಸುವವ.

**धलपा** (ಧಲಪಾ) ಪು. ಕಟ್ಟಿಗೆಯ, ತೊಗಟೆಯ, ಚೂರು.

**धव** (ಧವ) ಪು. ಸಂ. **ಗಂಡ, ಪತಿ.**

**धवल** (ಧವಲ) ವಿ. ಬಿಳಿಯ, ಶುಭ್ರ, ಅಕಲಂಕಿತ.

**धवशा** (ಧವಶಾ) ಪು. ಹುರುಪು, ಉತ್ಸಾಹ.

**धष्टपुष्ट** (ಧಷ್ಟಪುಷ್ಟ) ವಿ. ಸಂ. ಗಟ್ಟಿಮುಟ್ಟಿಯಾದ.

**धस** (ಧಸ) ಪು. ಮೊಳೆ, ಚೂರು, ಇಳುಕಲು, ಅಕಲ್ಪಿತ ಆಘಾತ.

**धसास लावणे** (ಧಸಾಸ ಲಾವಣೇ) ಕ್ರಿ. ಸಂ. ಬಗೆಹರಿಸು, (ಕೆಲಸ) ತೀರಿಸು, ಮುಕ್ತಾಯ ಮಾಡು.

**धसक पसक** (ಧಸಕ ಪಸಕ್) ಸ್ತ್ರೀ. ಹುಂಬತನದ ಆಚರಣೆ, ಅವಿನೀತವಾದ ನಡೆನುಡಿ.

**धसका** (ಧಸಕಾ) ಪು. ಅಕಸ್ಮಾತ್ತಾಗಿ ಒದಗಿದ ಅಂಜಿಕೆ, ಬೆದರಿಕೆ, ಆಘಾತ.

**धसफस** (ಧಸಫಸ್) ಸ್ತ್ರೀ. ಸಿಟ್ಟು ಸೆಡುವು.

**धसमुसळा** (ಧಸಮುಸಳಾ) ವಿ. ಹುಂಬ, ಅವಿಚಾರಿ ಯೋಗ್ಯ ಬಗೆಯನ್ನು ಅರಿಯದವ.

**धसफसा** (ಧಸಫಸಾ) ವಿ. ಅವಸರದಿಂದ ವಿಚಾರ ಮಾಡದೆ.

**धस्स** (ಧಸ್ಸ್) ನ. ಮನಸ್ಸಿನ ಮೇಲೆ ಆದ, (ಆಗುವ ಆಘಾತ.

**धंतर मंतर** (ಧಂತರ ಮಂತರ) ನ. ಮಾಯ, ಮಾಟ.

**धंदा** (ಧಂದಾ) ಪು. ಹಿಂ. ಉದ್ಯೋಗ, ಬಾಳ್ವೆ, ಉದ್ದಿಮೆ, ಬದುಕು.

**धंदेवाईक** (ಧಂದೇವಾಈಕ್) ವಿ. ವ್ಯವಹಾರದ, ಉದ್ಯೋಗದ, ವ್ಯಾವಸಾಯಿಕ.

**धाक** (ಧಾಕ್) ಪು. ಅಂಜಿಕೆ ೨. ವರ್ಚಸ್ಸು.

**–दाखवणे** (–ದಾಖವಣೇ) ಕ್ರಿ. ಸಂ. ಅಂಜಿಕೆಯನ್ನು ಉತ್ಪನ್ನಮಾಡು.

**धाकटा** (ಧಾಕಟಾ) ವಿ. ಸಣ್ಣವ, ಚಿಕ್ಕವ.

**धाकधूक** (ಧಾಕಧೂಕ್) ಸ್ತ್ರೀ. ಎದೆಗುದಿ, ಅಂಜಿಕೆ.

**धाकला** (ಧಾಕಲಾ) ವಿ. ಚಿಕ್ಕವ, ಸಣ್ಣವ.

**धागधुगी** (ಧಾಗಧುಗೀ) ಸ್ತ್ರೀ. ಹೃದಯಸ್ಪಂದನ, ಎದೆಹಾರುವಿಕೆ.

**धागा** (ಧಾಗಾ) ಪು. ನೂಲು, ಎಳೆ.

**धागादोरा** (ಧಾಗಾದೋರಾ) ಪು. ಪತ್ತೆದಾರೀ, ಸಂಬಂಧ ತೋರಿಸುವ ಗುರುತು, ಕುರುಹು ಮುಂ.

**धाटणी** (ಧಾಟಣೀ) ಸ್ತ್ರೀ. ಆಕಾರ, ಆಕೃತಿ, ಮಾದರಿ, ಬಗೆ.

**धाड** (ಧಾಡ್) ಸ್ತ್ರೀ. ಮುತ್ತಿಗೆ, ಸಂಕಟ, ಆಪತ್ತು, ಆಕ್ರಮಣ.

**धाडकन्–धाडदिशी** (ಧಾಡಕನ್, ಧಾಡದಿಶೀ) ಕ್ರಿ. ವಿ. ಒಮ್ಮೆಲೆ, ಒಮ್ಮಿಂದೊಮ್ಮೆ.

**धाडणे** (ಧಾಡಣೇ) ಕ್ರಿ. ಸ. ಕಳಿಸು, ಕಳಿಸಿಕೊಡು, ಹೇಳಿಕಳಿಸು.

**धाडधाड** (ಧಾಡ್‌ಧಾಡ್) ಅ. ಧಡಲ್ ಎಂದು, ರಭಸದಿಂದ.

**धाडस** (ಧಾಡಸ್) ನ. ಸಾಹಸ, ಧೈರ್ಯ.

**धाडसी** (ಧಾಡಸೀ) ವಿ. ಸಾಹಸಿ, ಪರಾಕ್ರಮಿ, ಸಾಹಸದ (ಕೆಲಸ).

**धाता** (ಧಾತಾ) ಪು. ಸಂ. ಸೃಷ್ಟಿಕರ್ತ.

**धातु** (ಧಾತು) ಪು. ಸಂ. ಧಾತು, ಖನಿಜ ದ್ರವ್ಯ. ೨. ಕ್ರಿಯಾಪದದ ಮೂಲರೂಪ. ೩. ವೀರ್ಯ (ಶರೀರದ) ಮೂಲರಸ.

**धातुमय** (ಧಾತುಮಯ) ವಿ. ಸಂ. ಧಾತುವಿನಿಂದ ಮಾಡಿದ.

**धातुवर्धक** (ಧಾತುವರ್ಧಕ) ವಿ. ವೀರ್ಯವನ್ನು ಹೆಚ್ಚಿಸುವ (ಔಷಧ).

**धातुसाधित** (ಧಾತುಸಾಧಿತ) ವಿ. (ವ್ಯಾಕರಣ) ಕ್ರಿಯಾರೂಪದಿಂದ ನಿರ್ಮಿತವಾದ.

**धात्री** (ಧಾತ್ರೀ) ಸ್ತ್ರೀ. ಸಂ. ಮೊಲೆಕುಡಿಸುವ ಹೆಂಗಸು, ಪರಿಚಾರಿಕೆ, ದಾಯಿ.

**धादांत** (ಧಾದಾಂತ್) ಕ್ರಿ. ವಿ. ಸರ್ವಥಾ, ರವಷ್ಟೂ, ಎಳ್ಳಷ್ಟೂ. ೨. ನಿಃಸಂದೇಹವಾಗಿ.

**धान्य** (ಧಾನ್ಯ) ನ. ಸಂ. ಧಾನ್ಯ, ಕಾಳುಕಡಿ.

**–फराळ** (–ಫರಾಳ್) ಅವಲಕ್ಕಿ ಅರಳು ಮುಂತಾದ ಫಳಾರ.

**धान्यवसुली** (ಧಾನ್ಯವಸುಲೀ) ಸ್ತ್ರೀ ಸಂ. ಅರ. ತೆರಿಗೆಗಾಗಿ ಕಾಳುಕಡಿ ತೆಗೆದುಕೊಳ್ಳುವಿಕೆ.

**धाप** (ಧಾಪ್) ಸ್ತ್ರೀ. ದಣಿವು, ದಮ್ಮು, ಉಸಿರು.

**धापा टाकणे** (ಧಾಪಾ ಟಾಕಣೇ) ಕ್ರಿ. ಅ. ದಮ್ಮು ಹತ್ತು, ಆಯಾಸಪಡು.

**धापा** (ಧಾಪಾ) ಪು. ಹರವಾದ ಹಂಚು.

**–करणे** (–ಕರಣೇ) ಕ್ರಿ. ಸ. ನಾಶಗೊಳಿಸು.

**धाबळ** (ಧಾಬಳ್) ಸ್ತ್ರೀ. ಉಣ್ಣೆಯ ಪಂಚೆ, ಧಾಬಳಿ.

**धाबे** (ಧಾಬೇ) ನ. ಮಣ್ಣಿನ ಸಪಾಟು ರಾಶಿ.

**–दणाणणे** (–ದಣಾಣಣೇ) ಕ್ರಿ. ಅ. ಅಂಜಿಕೆಯಾಗು, ಏನೂ ತಿಳಿಯದಂತಾಗು.

**धाब्यावर बसविणे** (ಧಾಬ್ಯಾವರ ಬಸವಿಣೆ) ಕ್ರಿ. ಸ. ಬದಿಗಿರಿಸು, ದುರ್ಲಕ್ಷಮಾಡು.

**धाम** (ಧಾವ್ರ್) ನ. ಸಂ. ಮನೆ, ಬಿಡಾರ, ಆಶ್ರಮ.

**धामण** (ಧಾಮಣ್) ಸ್ತ್ರೀ. ಒಂದು ವಿಷಯುಕ್ತ ಸರ್ಪ.

**धामधूम** (ಧಾಮ್‌ಧೂಮ್) ಸ್ತ್ರೀ. ಗಡಿಬಿಡಿ, ಉತ್ಸಾಹ, ಉಲ್ಲಾಸ.

**धाय** (ಧಾಯ) ಸ್ತ್ರೀ. ಉಚ್ಚಸ್ವರದಲ್ಲಿ ಮಾಡಿದ ಆಕ್ರೋಶ.

**धाया** (ಧಾಯಾ) ಸ್ತ್ರೀ. ದಾಯಿ, ದಾಸಿ.

**धार** (ಧಾರ) ಸ್ತ್ರೀ. ಧಾರೆ. ೨. ಹದ, ಹರಿತತನ, ಮೊನೆ. ತೀಕ್ಷ್ಣ ತುದಿ. ೩. ಹಾಲು ಹಿಂಡುವಿಕೆ.

**–काढणे** (ಕಾಢಣೇ) ಹಾಲು ಕರೆ.

**धारेवर धरणे** (ಧಾರೇವರ ಧರಣೇ) ಹತೋಟಿಯಲ್ಲಿರುಸು.

**–देणे** (–ದೇಣೇ) ಹದಮಾಡು, ಹರಿತವಾಗಿ ಮಾಡು, ಸಾಣಿ ಹಿಡಿ.

**धारकरी** (ಧಾರಕರೀ) ಪು. ಸೈನಿಕ.

**धार (जि) जिणा** (ಧಾರ(ರ್ಜ)ಜಿಣಾ) ವಿ. ಮೆಚ್ಚುಗೆಯುಳ್ಳ. ೨. ಪಕ್ಷಪಾತಿ.

**धारण** (ಧಾರಣ) ಸ್ತ್ರೀ. ಧಾರಣೆ, ಬೆಲೆ, ನ. ಸಂ. ಧರಿಸುವಿಕೆ.

**–करणे** (–ಕರಣೇ) ಕ್ರಿ. ಸ. ಧರಿಸು, ಹೊರು.

**धारणा** (ಧಾರಣಾ) ಸ್ತ್ರೀ. ಸಂ. ವಿಚಾರ. ೨. ನೆನಪು, ಜ್ಞಾಪಕಶಕ್ತಿ.

**धारराव** (ಧಾರರಾವ್) ಪು. ಬಾಯಿಬಡಕ, ಮಾತಿನ ಮಲ್ಲ.

**धारा** (ಧಾರಾ) ಸ್ತ್ರೀ. ರೂಢಿ. ೨. ವಿಚಾರಸರಣಿ. ೩. ತೆರಿಗೆ.

**–तीर्थ** (–ತೀರ್ಥ) ನ. ಸಮರಭೂಮಿ.

**–वाहिक** (–ವಾಹಿಕ) ವಿ. ಮುಂದುವರೆಯುವ (ಕಥೆ ಮುಂ.)

**धारिष्ठ** (ಧಾರಿಷ್ಟ) ನ. ಧೈರ್ಯ.

**–वान** (–ವಾನ್) ಧೈರ್ಯವಂತ, ಧೀರ.

**धारे** (ಧಾರೇ) ನ. ಮಾಳಿಗೆ, ಚಪ್ಪರ, ಇವುಗಳಲ್ಲಿ, ಹೊಗೆ ಹೋಗುವುದಕ್ಕೆ ಅಥವಾ ಪ್ರಕಾಶ ಬರುವುದಕ್ಕೆ ಮಾಡಿದ ತೂತು, ಕಿಂಡಿ–ಮುಂ.

**धारेकरी** (ಧಾರೇಕರೀ) ಪು. ಕುಳ, ರಯತ, ತೆರಿಗೆ ಕೊಡುವವ, ಲಾವಣಿ ಸಲ್ಲಿಸುವವ, ಒಕ್ಕಲು.

**धारेबंदी** (ಧಾರೇಬಂದೀ) ಸ್ತ್ರೀ. ಹೊಲದ ತೆರಿಗೆಯನ್ನು ನಿಶ್ಚಯಿಸುವಿಕೆ.

**धारोष्ण** (ಧಾರೋಷ್ಣ) ವಿ. ಸಂ. ಅದೇ ಕರೆದ (ಹಾಲು)

**धार्मिक** (ಧಾರ್ಮಿಕ) ವಿ. ಸಂ. ಧರ್ಮಶೀಲ.

**धाष्टर्च** (ಧಾರ್ಷ್ಟ್ಯ) ನ. ಧೈರ್ಯ, ಹುಮ್ಮಸ.

**धाव** (ಧಾವ್) ಸ್ತ್ರೀ. ಓಟ (ಕ್ರಿಕೆಟ್) "ರನ್ಸ್" ಗಾಲಿಯ ಕಬ್ಬಿಣದ ಕವಚ.

**–धावपळ** (–ಧಾವ್‌ಪಳ್) ಸ್ತ್ರೀ. ಓಡಾಟ, ಗಡಿಬಿಡಿ.

**–घेणे** (–ಘೇಣೇ) ಕ್ರಿ. ಅ. ಮೊರೆಯಿಡು.

**धावणे** (ಧಾವಣೇ) ಸ್ತ್ರೀ. ಓಡು.

**–दोरा** (–ದೋರಾ) ಪು. ಕಚ್ಚಾ ಹೊಲಿಗೆ.

**धावता** (ಧಾವತಾ) ವಿ. ಓಡುವ, ಓಡುತ್ತಿರುವ, ಸಂಕ್ರಾಮಕ.

**धावती नजर** (ಧಾವತೀ ನಜರ್) ಸ್ತ್ರೀ. ಸ್ಥೂಲ ಅವಲೋಕನ.

**धावती भेट** (ಧಾವತೀಭೇಟ್) ಸ್ತ್ರೀ. ಗಡಿಬಿಡಿಯಿಂದ ಭೆಟ್ಟಿಯಾಗುವಿಕೆ.

**धावते पाणी** (ಧಾವತೇ ಪಾಣೀ) ಸ್ತ್ರೀ. ಹರಿಯುವ ನೀರು.

**धावन** (ಧಾವನ) ನ. ಹರಿಯುವಿಕೆ, ಉಜ್ಜುವಿಕೆ.

**धावपट्टी** (ಧಾವಪಟ್ಟೀ) ಸ್ತ್ರೀ. ವಿಮಾನ ನಿಲ್ದಾಣದಲ್ಲಿಯ ವಿಸ್ತೀರ್ಣ ದಾರಿ.

**धावफलक** (ಧಾವಫಲಕ್) ಪು. (ಕ್ರಿಕೆಟ್) ಸ್ಕೋರ್ ಬೋರ್ಡ್, ಓಟಗಳ ಫಲಕ.

**धावबाद** (ಧಾವ್‌ಬಾದ್) ವಿ. (ಕ್ರಿಕೆಟ್) ಓಡುವಾಗ "ಔಟ" ಆದವ.

**धावसंख्या** (ಧಾವ್‌ಸಂಖ್ಯಾ) ಸ್ತ್ರೀ. (ಕ್ರಿಕೆಟ್) ಓಟಗಳ ಸಂಖ್ಯೆ.

**धावा** (ಧಾವಾ) ಪು. ದೇವರಿಗೆ ಮೊರೆಯಿಡುವಿಕೆ, ಶರಣು ಹೋಗುವಿಕೆ.

**धावाधाव** (ಧಾವಾಧಾವ್) ಸ್ತ್ರೀ. ಗಡಿಬಿಡಿ, ಓಡಾಟ, ಎಡತಾಕುವಿಕೆ.

**धास्ती** (ಧಾಸ್ತೀ) ಸ್ತ್ರೀ. ಅಂಜಿಕೆ, ಬೆದರಿಕೆ.

**धांगडधिंगा** (ಧಾಂಗಡಧಿಂಗಾ) ಪು. ಒದರಾಟ, ಚೀರಾಟ, ಗೊಂದಲ, ಕೋಲಾಹಲ.

**धांदरट** (ಧಾಂದರಟ್) ವಿ. ದುರ್ಲಕ್ಷ ಮಾಡುವವ. ಮುಬ್ಬು ಸ್ವಭಾವದವ.

**धांदल** (ಧಾಂದಲ್) ಸ್ತ್ರೀ. ಗಡಿಬಿಡಿ, ಅವಸರ.

**धांदल्या** (ಧಾಂದಲ್ಯಾ) ವಿ. ಅವಸರದಿಂದ ಕೆಲಸ ಮಾಡುವವ.

**धांदोटी** (ಧಾಂದೋಟೀ) ಸ್ತ್ರೀ. ನೂಲು, ಕರಿ, (ಹರಕು ಬಟ್ಟೆಯ) ನೂಲು.

**धिक्कार** (ಧಿಕ್ಕಾರ್) ಪು. ಧಿಕ್ಕಾರ, ಅನಾದರ.

**धिटाई** (ಧಿಟಾಈ) ಸ್ತ್ರೀ. ಧೈರ್ಯ. ೨. ಹುಂಬತನ, ಅವಿಚಾರ.

**धिप्पाड** (ಧಿಪ್ಪಾಡ್) ವಿ. ದಪ್ಪನಾದ, ದೊಡ್ಡ, ಸ್ಥೂಲ.

**धिमा** (ಧಿಮಾ) ವಿ. ಸಾವಕಾಶವಾಗಿ ಕೆಲಸ ಮಾಡುವವ, ತಣ್ಣಗೆ ಕೂಡುವವ.

**धिमेपणा** (ಧಿಮೇಪಣಾ) ಪು. ಸಾವಕಾಶ ಕೆಲಸಮಾಡುವಿಕೆ, ತಾಳ್ಮೆ, ಸಹನಶೀಲತೆ.

**धिरडे** (ಧಿರಡೇ) ನ. ಉತ್ತಪ್ಪ, ದೋಸೆ.

**धिवसा** (ಧಿವಸಾ) ಪು- ಪ್ರಬಲ ಇಚ್ಛೆ, ಅಂಜಿಕೆ.

**धिंगा** (ಧಿಂಗಾ) } ಪು. ಗಡಿಬಿಡಿ,
**धिंगाणा** (ಧಿಂಗಾಣಾ) } ಗೊಂದಲ.

**धिंगामस्ती** (ಧಿಂಗಾಮಸ್ತೀ) ಸ್ತ್ರೀ. ಒದರಾಟ, ಚೀರಾಟ. ಗೊಂದಲ.

**धिंड** (ಧಿಂಡ್) ಸ್ತ್ರೀ. ಅಪರಾಧಿಯ ಮೆರವಣಿಗೆ.

**धिंडका** (ಧಿಂಡಕಾ) ವಿ. ಕುಚೋದ್ಯತನದ, ಪುಂಡ.

**धिंडवडा** (ಧಿಂಡವಡಾ) ಪು. ಪ್ರಕಟ ಧಿಕ್ಕಾರ, ಅಪಮಾನ, ಅಪಕೀರ್ತಿ.

**धी** (ಧೀ) ಸ್ತ್ರೀ. ಬುದ್ಧಿ, ಜ್ಞಾನ.

**धीट** (ಧೀಟ್) ವಿ. ಕ. ದಿಟ್ಟ, ಸಾಹಸಿ, ಧೈರ್ಯವಂತ.

**धीमान** (ಧೀಮಾನ್) ವಿ. ಜಾಣ, ಬುದ್ಧಿವಂತ.

**धीर** (ಧೀರ್) ವಿ. ಧೈರ್ಯವಂತ, ಧೀರ.
**–करणे** (–ಕರಣೇ) ಕ್ರಿ. ಅ. ದಿಟ್ಟತನಮಾಡು.
**–चेपणे** (–ಚೇಪಣೇ) ಧೈರ್ಯಮಾಡು.
**–देणे** (–ದೇಣೇ) ಕ್ರಿ. ವಿ. ಧೈರ್ಯವನ್ನುಂಟುಮಾಡು, ಹುರಿದುಂಬಿಸು.
**धीराचा** (ಧೀರಾಚಾ) ವಿ. ಧೈರ್ಯವಂತ.
**धीरोदात्त** (ಧೀರೋದಾತ್ತ) ವಿ. ಧೀರಗಂಭೀರ.
**धीरोद्धत** ( ಧೀರೋದ್ಧತ ) ವಿ. ಧೈರ್ಯವಂತನಾಗಿದ್ದು, ಉದ್ಧಟತನ ಮಾಡುವವ.

**धीवर** (ಧೀವರ್) ಪು. ಮೀನಗಾರ.

**धुके** (ಧುಕೆ) ನ. ಇಬ್ಬನ್ನಿ, ಮುಸುಮುಸುಕಾದ ಆಕಾಶ.

**धुंगधुगी** (ಧುಗಧುಗೀ) ಸ್ತ್ರೀ. ಅಂಜಿಕೆ, ಎದೆಗುದಿ.

**धुडकावणे** (ಧುಡಕಾವಣೇ) ಕ್ರಿ. ಸ. ಹೊಡೆದುಹಾಕು, ಹೊರಗೆ ಹಾಕು, ಅಟ್ಟಿಹಾಕು.

**धुडगूस** (ಧುಡಗೂಸ್) ಪು. ಗೊಂದಲ, ಕೋಲಾಹಲ.

**धुणावण** (ಧುಣಾವಣ್) ಸ್ತ್ರೀ. ಒಗೆಯುವ ಕೂಟ.

**धुणे** (ಧುಣೇ) ನ. ಒಗೆಯುವ ಬಟ್ಟೆಗಳು. ಕ್ರಿ. ಸ. ಒಗೆ, ಸ್ವಚ್ಛಮಾಡು.

**धुतरा** (ಧುತರಾ) ಪು. ದತ್ತೂರಿ, ವಿಷಯುಕ್ತ ವನಸ್ಪತಿ.

**धुतलेला** (ಧುತಲೇಲಾ) ವಿ. ಒಗೆದ, ಸ್ವಚ್ಛಮಾಡಿದ.
**–तांदूळ** (–ತಾಂದೂಳ್) ಪು. ಸಚ್ಚರಿತ್ರ, ನಿಷ್ಕಲಂಕ.

**धुनी** (ಧುನೀ) ಸ್ತ್ರೀ. ನದಿ.

**धुपट** (ಧುಪಟ್) ವಿ. ಒಗೆದ, ಸ್ವಚ್ಛಗೊಳಿಸಿದ.

**धुपणी** (ಧುಪಣೀ) ಸ್ತ್ರೀ. (ಶ್ವೇತ, ರಕ್ತ) ಪ್ರದರ, ಒಂದು ಸ್ತ್ರೀ ರೋಗ.

**धुपणे** (ಧುಪಣೇ) ಕ್ರಿ.ಅ. ಸ್ವಚ್ಛವಾಗು. ೨. ಕೃಶನಾಗು.

**धुपविणे** (ಧುಪವಿಣೇ) ಕ್ರಿ. ಸ. ಹೊಗೆಮಾಡು, ಹೊಗೆಯಲ್ಲಿಇಡು, ಧೂಪಹಾಕು.

**धुपाटणे** (ಧುಪಾಟಣೇ) ನ. ಲೋಬಾನ ಪಾತ್ರೆ.

**धुपारती** (ಧುಪಾರತೀ) ಸ್ತ್ರೀ. ಲೋಬಾನದ ಆರತಿ.

**धुमश्चक्री** (ಧುಮಶ್ಚಕ್ರೀ) ಸ್ತ್ರೀ. ವಿಪುಲತೆ. ೨. ಅವ್ಯವಸ್ಥಿತತನ.

**धुमस** (ಧುಮಸ್) ಪು. ಬಡಿಯುವ ಕೋಲು.

**धुमसणे** (ಧುಮಸಣೇ) ಕ್ರಿ. ಸ. ಬಡಿ, ಹೊಡೆ. ೨. ಗುಪ್ತವಾಗಿ ಉಗಿ.

**धुमाकूळ** (ಧುಮಾಕೂಳ್) ಪು. ಉಪದ್ರವ, ಕಾಟ.

**धुमारा** (ಧುಮಾರಾ) ಪು. (ಗಿಡದ) ಅಂಕುರ.

**धुमाळ** (ಧುಮಾಳ್) ಪು. (ರಾಗ, ತಾಳ ಮುಂ.) ರೀತಿ.

**धुमाळी** (ಧುಮಾಳೀ) ಸ್ತ್ರೀ. ಕೋಲಾಹಲ.

**धुरकट** (ಧುರಕಟ್) ವಿ. ಹೊಗೆ ತುಂಬಿದ, ಹೊಗೆಯಡಗಿದ.

**धुरकटणे** (ಧುರಕಟಣೇ) ಕ್ರಿ. ಅ. ಹೊಗೆಯಿಂದ ಹೊಲಸಾಗು.

**धुरंधर** (ಧುರಂಧರ್) ವಿ. ನಿಪುಣ, ಜಾಣ, ಮುಖಂಡ.

**धुरळा** (ಧುರಳಾ) ಪು. ಧೂಳ, ಹಾರಿದ ಮಣ್ಣು.

**धुरा** (ಧುರಾ) ಸ್ತ್ರೀ. ಸಂ. ಅಂಚು, ಗಡಿ, ಗಡಿಕಲ್ಲು. ೨. ಪರಿಸೀಮೆ, ಕೊನೆಯ ಕಂತ. ೩. ಗಡಿನಾಡಿನ ಕಾವಲು ಗಿಡ. ೪. (ಸೈನ್ಯದ) ಅಗ್ರಭಾಗ. ೫. ಬೆನ್ನುಮೂಳೆ. ೬. ಸೇವಾನಿ. ೭. ಬಂಡಿಯ ಅಚ್ಚು. ೮. ನೊಗ. ೯. (ಲಾ) ಭಾರ, ಉತ್ತರದಾಯಿತ್ವ, ಹೊಣೆಗಾರಿಕೆ.

**धुरा** (ಧುರಾ) ಪು. ಬಹಳ, ಚತುರ ಮನುಷ್ಯ.

**धुराटी** (ಧುರಾಟೀ) ಸ್ತ್ರೀ. ಹೊಗೆ. ೨. ಹೊಗೆಯ ಮೂಲಕ ಮುಸುಕಾದ ಆಕಾಶ. ೩. ಕೊಳೆ, ಹೊಲಸು. ೪. ಕಗ್ಗತ್ತಲೆ.

**धुराड** (ಧುರಾಡ್) ವಿ. ನೊಗದ ಬದಿಯಿಂದ ಜಡ ವಿದ್ದ ಬಂಡಿ.

**धुराडे (धुराडें)** (ಧುರಾಡೆ (ಧುರಾಂಡೇ) ನ. ಮನೆ ಯಲ್ಲಿಯ ಹೊಗೆ ಹೊರಗೆ ಹೋಗುವುದಕ್ಕಾಗಿ ಮಾಡಿದ ಕಿಂಡಿ, ಹೊಗೆಗಿಂಡಿ.

**धुराणी** (ಧುರಾಣೀ) ಸ್ತ್ರೀ. ನೊಗದ ಕೀಲ.

**धुरवणे** (ದುರಾವಣೇ) ಕ್ರಿ. ಸ. ಹೊಗೆ ಹಾಯಿಸು, ಧೂಪಮಾಡು.

**धुराळा** (ಧುರಾಳಾ) ಪು. ಧೂಳ, ಧೂಲಿ.

**धुरी** (ಧುರೀ) ಸ್ತ್ರೀ. ಪಾದದ ಬೆರಳು ಕಡೆಗಿನ ಭಾಗ, (ಲಾ) ಮುಂಭಾಗ. ೨. ಸಾರಥಿಯ ಆಸನ. ೩. ಹೊಣೆಗಾರಿಕೆ.

**धुरी** (ಧುರೀ) ಸ್ತ್ರೀ. ಧೂಪ,ಆಜವಾನಮುಂ. ಗಳನ್ನು ಸುಟ್ಟು ಹೊಗೆಯ ಉಪಚಾರ ಮಾಡುವಿಕೆ.

**–देणे** (–ದೇಣೆ) ಕ್ರಿ. ಸ. ಹೊಗೆಯ ಉಪಚಾರ ಮಾಡು.

**–भोंदणे** (–ಭೊಂದಣೇ) ಕ್ರಿ. ಸ. ಮೋಸಗೊಳಿಸು.

**–घालणे** (–ಘಾಲಣೇ) ಕ್ರಿ. ಸ. ಬಾಣಂತಿಗೆ ಹೊಗೆಯ ಉಪಚಾರಮಾಡು.

**धुरीण** (ಧುರೀಣ) ವಿ. ಮುಖಂಡ, ನಿಪುಣ.

**धुरुई** (ಧುರುಈ) ಸ್ತ್ರೀ. ನೇಗಿಲ, ನೇಗಿಲದ ಎತ್ತು.

**धुरू** (ಧುರೂ) ಪು. ಸುಂಕದ ಕಟ್ಟೆಯ ಅಧಿಕಾರಿ. ೨. ಧ್ರುವ ಬಾಲಕ, ಧ್ರುವ ಚಿಕ್ಕೆ. ೩. ವಿ. ಶಾಶ್ವತ ವಾದ, ನಿಜವಾದ.

**धुरे** (ಧುರೇ) ವಿ. ಸರ್ವೋತ್ತಮ, ಉತ್ಕೃಷ್ಟ. ೨. ಹೊಗೆ ಹಾಯುವ (ಸುಡುತ್ತಿರುವ) ಕಟ್ಟಿಗೆ.

**–ऐटक** (–ಐಟಕ) ನ. ಎತ್ತು ಹೂಡುವ ಹಗ್ಗ, ಮಿಣಿ.

**–कट** (–ಕಟ್) ಬಂಡಿ, ನೊಗ ಇವುಗಳನ್ನು ಕೂಡಿಸುವ ಹಗ್ಗ.

**करी** (–ಕರೀ) ಬಂಡಿಗಾರ, ಸಾರಿಗೆ ಮಾಡುವವ. ೨. ನೊಗ ಹೊರುವ ಎತ್ತುಗಳು.

**धुरोडा** (ಧುರೋಡಾ) ಪು. ಹೊಗೆ. ೨. ಮೇಲೆ ಹಾರಿದ ಧೂಳ.

**धुरोळे** (ಧುರೋಳೇ) ಪು. ಹೊಗೆಗಿಂಡಿ.

**धुर्ताई** (ಧುರ್ತಾಈ) ಸ್ತ್ರೀ. ಧೂರ್ತತನ, ಜಾಣತನ.

**धुर्य** (ಧುರ್ಯ) ವಿ. ಸಂ. ಮುಖಂಡ. ೨. ನೊಗ ಹೊರುವ ಎತ್ತು.

**धुऱ्या** (ಧುರ್ಯಾ) ಮುಖಂಡ.

**–वर बसविणे** (–ವರ್ ಬಸವಿಣೇ) ಉಪೇಕ್ಷೆ ಮಾಡು, ಅವಗಣಿಸು.

**धुलाई** (ಧುಲಾಈ) ಸ್ತ್ರೀ. ಹಿಂ. ಒಗೆಯುವಿಕೆ, ಬಟ್ಟೆ ಗಳನ್ನು ಹಸನು ಮಾಡುವಿಕೆ.

**धुवट** (ಧುವಟ್) ವಿ. ಒಗೆದ, ಅಚ್ಚ ಹೊಸದಲ್ಲದ. ೨. ಸ್ವಚ್ಛಮಾಡುವ. ೩. ಅಗಸನು ಒಗೆದು ತಂದ (ಬಟ್ಟೆ).

**धुवडी** (ಧುವಡೀ) ಸ್ತ್ರೀ. ಅಣ್ಣನ, ತಮ್ಮನ ಮಗಳು.

**धुवण** (ಧುವಣ) ನ. ಕಾಳುಕಡಿ ತೋಯಿಸಿ ಬಸಿದ ನೀರು, ಕಲಗಚ್ಚು.

**धुवा** (ಧುವಾ) ಪು. ಪರಾಜಯ, ಸೋಲು. ೨. ಧ್ವಂಸ.

**–उडणे** (ಉಡಣೇ) ಕ್ರಿ. ಅ. ವಿನಾಶ ಒದಗು.

**धुवा** (ಧುವಾ) ವಿ. (ಒಗೆದು, ತೋಯಿಸಿ) ಹಸನು ಮಾಡಿದ.

**धुवाटी** (ದುವಾಟೀ) ಸ್ತ್ರೀ. ಮಸುಕು, ಇಬ್ಬನಿ.

**धुवाडी** (ಧುವಾಡೀ) ಸ್ತ್ರೀ. ನೋ.

**धुवाधार** (ಧುವಾಧಾರ್) ಕ್ರಿ. ವಿ. ಧಾರೆಗರೆದು, ಅತಿಶಯ ಬೀಳುವ (ಮಳೆ). ೨. ವಿ. ಸುಲಿದ, ಬತ್ತಲೆ ಮಾಡಿದ.

**धुवारोटी** (ಧುವಾರೋಟೀ) ವಿ. ಜೀನ, ಜಿಪುಟ, ಕೃಪಣ.

**धुवासाखर** (ಧುವಾಸಾಖರ್) ಪು. ಬಿಳಿದಾಗಿ ಮಾಡಿದ ಸಕ್ಕರೆ.

**धुव्वा** (ಧುವ್ವಾ) ಪು. **धुवा** ನೋ.

**धुशरे** (ಧುಶರೇ) ನ. ಕುಂಕುಮ, ಅರಿಶಿಣ, ಗುಲಾಲು ಮುಂ. ಪುಡಿ, ಹುಡಿ,

**धुशा** (ಧುಶಾ) ಪು. ಉಣ್ಣೆಯ, ಉರುಟು ವಸ್ತ್ರ.

**धुश्श** (ಧುಶ್) ವಿ. ಪ್ರತ್ಯಯ, ಕರು(ಗಪ್ಪು), ಕಡು.

**धुसकट** (ಧುಸಕಟ್) ಸ್ತ್ರೀ. ಕೊಲೆ, ಸುಲಿಗೆ, ವಿನಾಶ.

**धुसका फुसका** (ಧುಸಕಾ ಫುಸಕಾ) ವಿ. ಕೈಲಾಗದವ, ಅಶಕ್ತ.

**धुसधुस** (ಧುಸ್‌ಧುಸ್) ಸ್ತ್ರೀ. ಸಿಟ್ಟೆಗೆದ್ದು, ಒದರುವಿಕೆ.

**धुसधुसणी** (ಧುಸಧುಸಣೀ) ಸ್ತ್ರೀ. ನೋವು, ಉರಿ ಯುವಿಕೆ.

**धुसधुसणे** (ಧುಸಧುಸಣೇ) ಕ್ರಿ. ಅ. ನೋವಾಗು, ಬೇನೆಯಿಂದ ಬಳಲು.

**धुसफस** (ಧುಸ್‌ಫಸ್) ಸ್ತ್ರೀ. ಸಿಟ್ಟಿನ ಮಾತು.

**धुस–फुसणे** (ಧುಸ್–ಫುಸಣೇ) ಕ್ರಿ. ಅ. ಸಿಟ್ಟಿನಿಂದ ಮಾತನಾಡು.

**धुसमुस** (ಧುಸ್‌ಮುಸ್) ಸ್ತ್ರೀ. ಸಿಟ್ಟಿನಿಂದ (ಬಾಯಲ್ಲಿ) ಮಾತಾಡು, ಸಣ್ಣ ದನಿಯಿಂದ ಬೈಯ್ಯಿ.

**धुसमुसणे** (ಧುಸಮುಸಣೇ) ಕ್ರಿ. ಅ. ಸಿಟ್ಟಿನಿಂದ ಮಾತಾಡು.

**धुसर** (ಧುಸರ್) ಪು. ಸುಗಂಧ, ಸುಗಂಧಿ ದ್ರವ್ಯ.

**धुसा** (ಧುಸಾ) ಪು. ಹಿಂ. ಉರುಟಾದ ಉಣ್ಣೆಯ ವಸ್ತ್ರ.

**धुस्कारा** (ಧುಸ್ಕಾರಾ) ಪು. ಹಾವಿನ ಉಸಿರು, ಫೂತ್ಕಾರ.

**धुळकट** (ಧುಳಕಟ್) ವಿ. ಧೂಳದಿಂದ ಹೊಲಸಾದ.

**धुळपट** (ಧುಳಪಟ್) ಪು. ತೊಂದರೆ, ಕಷ್ಟ, ಪರಾಭವ, ವಿನಾಶ.

**धुळवट** (ಧುಳವಟ್) ಪು. ಧೂಳದಿಂದ ಹೊಲಸಾದ.

**धुळवड** (ಧುಳವಡ್) ಪು. ಹೋಳಿಯ ಹಬ್ಬದ ಮರು ದಿನ ರಾಡಿ, ಕೀಲೆಣ್ಣೆ ಮುಂ. ಹಾರಿಸುವ ಸಂಭ್ರಮ.

**धुळवडणे** (ಧುಳವಡಣೇ) ಕ್ರಿ. ಹೋಳಿಯ ಹಬ್ಬದಲ್ಲಿ ಬಣ್ಣ ಹಾಕು.

**धुळवडी** (ಧುಳವಡೀ) ಸ್ತ್ರೀ. ಹೋಳಿಯ ಹಬ್ಬದ ಸಂಭ್ರಮ.

**धुळवरा** (ಧುಳವರಾ) ಪು. ಧೂಳ.

**धुळवाड** (ಧುಳವಾಡ್) ಸ್ತ್ರೀ. **धुळवड** ನೋ.

**धुळाक्षर** (ಧುಳಾಕ್ಷರ) ನ. ಮೂಲಾಕ್ಷರ. ೨. ಧೂಳ ದಲ್ಲಿ ಬರೆದ (ಕಲಿಯುವಾಗ) ಅಕ್ಷರ.

**धुळी** (ಧುಳೀ) ಸ್ತ್ರೀ. ವಿನಾಶ.

**वरचे सारवण** (ವರಚೇ ಸಾರವಣ) ನ. ಧೂಳದ ಮೇಲೆ ಸಾರಿಸುವಿಕೆ, ಕೆಲಸಕ್ಕೆ ಬಾರದ ಪರಿಶ್ರಮ.

**धुळोरा** (ಧುಳೋರಾ) ಪು. ಧೂಳ.

**धुंणणे** (ಧುಂಡಣೇ) ಕ್ರಿ. ಸ. ಹುಡುಕು, ಕಂಡು ಹಿಡಿ.

**धुंडाळणे** (ಧುಂಡಾಳಣೇ) ಕ್ರಿ. ಅ. ಹುಡುಕು.

**धुंद** (ಧುಂದ್) ವಿ. ಮಗ್ನ, ಕಣ್ಣು ತಿರುಗಿವ ಸೊಕ್ಕಿನ, ಒಚ್ಚರಿಕೆಯಿಲ್ಲದ ಸರಾಯಿ ಕುಡಿದ.

**धुंदी** (ಧುಂದೀ) ಸ್ತ್ರೀ. ಸೊಕ್ಕು. ೨. ನಶೆ, ಅಮಲು. ೩. ಅವಿಚಾರ.

**धूड** (ಧೂಡ್) ನ. ಸ್ಥೂಲ, ಜಡ ಮನುಷ್ಯ, ಜಡ ಭರತ.

**धूत्कार** (ಧೂತ್ಕಾರ್) ಪು. ಸಂ. ಹಾವಿನ ಉಸಿರು, ಫೂತ್ಕಾರ.

**धूत** (ಧೂತ) ವಿ. ಸಂ. ಒಗೆದ, ಸ್ವಚ್ಛಮಾಡಿದ.

**धून** (ಧೂನ್) ಸ್ತ್ರೀ. ಲಯ, ಮಧುರಸ್ವರ, ಇಂಚರ.

**धूप** (ಧೂಪ) ಪು. ಲೋಬಾನ, ಧೂಪ.

**–दाखवणे** (–ದಾಖವಣೆ) ಕ್ರಿ. ಸ. ಪೂಜಿಸು, ಲೋಬಾನದ ಆರತಿ ಮಾಡು.

**धूपारती** (ಧೂಪಾರತೀ) ಸ್ತ್ರೀ. ಧೂಪದ ಆರತಿ, ಲೋಬಾನದ ಹೊಗೆಯನ್ನು ಬೆಳಗುವಿಕೆ.

**धूम** (ಧೂಮ) ಪು. ಸಂ. ಹೊಗೆ. ೨. ಧೂಮ್. ಪು. ಗೊಂದಲ. ೨. ಓಟ.

**–ठोकणे** (ಠೋಕಣೇ) ಕ್ರಿ. ಸ. ಓಡಿ ಹೋಗು.

**–केतु** (–ಕೇತು) ಪು. ಧೂಮಕೇತು, ಅಶುಭ ಅಶುಭ ನಕ್ಷತ್ರ.

**–धडाका** (ಧಡಾಕಾ) ಪು. ಅತಿ ಉತ್ಸಾಹದ ಕೆಲಸ, ಸಂಭ್ರಮ.

**धूम्र** (ಧೂಮ್ರ) ಪು. ಹೊಗೆ.

**–पत्र** (–ಪತ್ರ) ನ. ತಂಬಾಕದ ಎಲೆ, ಹೊಗೆ ಸಪ್ಪು.

**–पान** (–ಪಾನ್) ನ. ತಂಬಾಕ (ಬೀಡಿ ಸಿಗರೇಟು) ಸೇದುವಿಕೆ.

**धूर** (ಧೂರ್) ಪು. ಹೊಗೆ.

**धूर्त** (ಧೂರ್ತ) ವಿ. ಸಂ. ಚತುರ, ಚಾಣ.

**धूर्तता–धूर्तपणा** (ಧೂರ್ತತಾ–ಧೂರ್ತಪಣಾ) ಪು. ಜಾಣತನ.

**धूलीवंदन** (ಧೂಲೀವಂದನ) ನ. ಸಂ. ಹೋಳಿಯ ಹುಣ್ಣಿಮೆಯಲ್ಲಿ ಬಣ್ಣ ರಾಡಿ ಚಿಮ್ಮುವ ಆಟ.

**धूसर** (ಧೂಸರ್) ವಿ. ಸಂ. ಮಸುಕಾದ.

**धूळ** (ಧೂಳ್) ಸ್ತ್ರೀ. ಧೂಳ.

**–चारणे** (–ಚಾರಣೇ) ಕ್ರಿ. ಸ. ಸೋಲಿಸು.

**धुळीस मिळणे** (ಧುಳೀಸ್ ಮಿಳಣೇ) ಕ್ರಿ. ಅ. ನಾಶ ಹೊಂದು.

**–धाण** (ಧಾಣ್) ಸ್ತ್ರೀ. ಸೋಲು. ವಿನಾಶ.

**धूळपाटी** (ಧೂಳ್‌ಪಾಟೀ) ಸ್ತ್ರೀ. ಚಿಕ್ಕ ಮಕ್ಕಳಿಗೆ ಅಕ್ಷರ ಕಲಿಸುವುದಕ್ಕೆ ಹರಡಿದ ಧೂಳ.

**–भेट** (–ಭೇಟ್) ಸ್ತ್ರೀ. ಬೇಗ, ಅವಸರದಿಂದ ಭಟ್ಟಿಯಾಗುವುದು.

**धृतराष्ट्र** (ಧೃತರಾಷ್ಟ್ರ) ಪು. ಸಂ. ಕೌರವರ ತಂದೆ, ೨. ಕುರುಡ.

**धृति** (ಧೃತಿ) ಸ್ತ್ರೀ. ಸಂ. ಧೈರ್ಯ.

**धृष्ट** (ಧೃಷ್ಟ) ವಿ. ಧೈರ್ಯಶಾಲಿ.

**धेड** (ಧೇಡ್) ಪು. ಅಂತ್ಯಜ.

**–गुजरी** (–ಗುಜರೀ) ವಿ. ಮಿಶ್ರ (ಭಾಷೆ.)

**धेनु** (ಧೇನು) ನ. ಸಂ. ಆಕಳು.

**धेंड** (ಧೇಂಡ್) ಪು. ದಪ್ಪ ಮನುಷ್ಯ. ೨. ಪ್ರಸಿದ್ಧ ಪುರುಷ.

**धैर्य** (ಧೈರ್ಯ) ನ. ಸಂ. ಧೈರ್ಯ, ಸಾಹಸ.

**–वान्** (–ವಾನ್) } ವಿ. ಸಾಹಸಿಗ, ಧೈರ್ಯವಂತ.
**–शाली** (–ಶಾಲೀ) }

**धैर्यावलंबन** (ಧೈರ್ಯಾವಲಂಬನ) ನ. ಧೈರ್ಯದಿಂದ ಕೆಲಸ ಮಾಡುವಿಕೆ.

**धैवत** (ಧೈವತ) ಪು. ಸಂ. ಗಾಯನದ ಒಂದು ಸ್ವರ.

**धोकटी** (ಧೋಕಟೀ) ಸ್ತ್ರೀ. ಹಜಾಮನ ಪೆಟ್ಟಿಗೆ, ಅಡಪ, ಹಡಪ.

**धोका** (ಧೋಕಾ) ಪು. ಗಂಡಾಂತರ, ಕುತ್ತು.

**–दायक** (–ದಾಯಕ) ವಿ. ಗಂಡಾಂತರವುಳ್ಳ.

**धोटा** (ಧೋಟಾ) ಪು. ಆವರಣ, ಪೆಟ್ಟಿಗೆ. ೨. ನೇಕಾರನ ಲಾಳಿ.

**धोण्या** (ಧೋಣ್ಯಾ) ಪು. ಮಂಗಗಳ ಮುಖಂಡ.

**धोत** (ಧೋತ್) ಪು. ಜಲಪಾತ. ೨. ಜ್ವಾಲೆ.

**धोतर** (ಧೋತರ) ನ. ಧೋತರ, ಪಂಜೆ.

**–सोडणे** (ಸೋಡಣೇ) ಧೋತರ ಕಳೆ, (ಲಾ) ನಾಚಿಕೆ ಬಿಡು.

**–जोडा** (–ಜೋಡಾ) ಪು. ಎರಡು ಧೋತರಗಳು.

**धोतरा** (ಧೋತರಾ) ಪು. ಒಂದು ವಿಷಯುಕ್ತ ವನಸ್ಪತಿ, ಧತ್ತೂರಿ.

**धोधाट** (ಧೋಧಾಟ್) ಪು. ಸತತವಾಗಿ ಬರುವ ನೀರು.

**धोधो** (ಧೋಧೋ) ಕ್ರಿ. ವಿ. ವಿಪರೀತವಾಗಿ (ಮಳೆ)

**धोपट** (ಧೋಪಟ್) ವಿ. ಸರಳವಾದ, ನಿಷ್ಕಪಟವಾದ, ಯಥೋಚಿತ.

**धोपटणे** (ಧೋಪಟಣೇ) ಕ್ರಿ. ಸ. (ದೊಣ್ಣೆಯಿಂದ) ಹೊಡೆ.

**धोपटमार्ग** (ಧೋಪಟಮಾರ್ಗ) ಪು. ಛಲ ಕಪಟವಿಲ್ಲದ ನಡತೆ, ಉಚಿತ ವರ್ತನ.

**धोपटमार्गी** (ಧೋಪಟಮಾರ್ಗೀ) ವಿ. ಸರಳ ಸ್ವಭಾವದವ.

**धोबी** (ಧೋಬೀ) ಪು. ಮಡಿವಾಳ, ಅಗಸ, ಬಟ್ಟೆಗಳನ್ನು ಒಗೆಯುವವ.

**धोबीण** (ಧೋಬೀಣ) ಸ್ತ್ರೀ. ಅಗಸತಿ, ಅಗಸಗಿತ್ತಿ.

**धोरण** (ಧೋರಣ) ಪು. ಮತ, ವಿಚಾರ, ಪ್ರವೃತ್ತಿ ೨. ಆದರ್ಶ ೩. ನೆಲೆ.

**धोरणी** (ಧೋರಣೀ) ವಿ. ಚತುರ, ವಿಚಾರಮಾಡಿ ಕೆಲಸ ಮಾಡುವವ.

**धोरे** (ಧೋರೇ) ನ. ಹೊಗೆಗಿಂಡಿ.

**धोशा** (ಧೋಶಾ) ಪು. ಉತ್ಸಾಹ, ಸತತೋದ್ಯೋಗ.

**धोंगडे** (ಧೋಂಗಡೆ) ನ. ಕಂಬಳಿ, ಉರುಟು ಬಟ್ಟೆ.

**धोंड** (ಧೋಂಡ್) ಸ್ತ್ರೀ. ಬಂಡೆಗಲ್ಲು. ೨. ಅಡ್ಡಿ, ಆತಂಕ. ೩. ಆಪತ್ತು.

**–फोडचा** (–ಫೋಡ್ಯಾ) ಪು. ಕಲ್ಲು ಕಡಿಯುವವ.

**–मास** (–ಮಾಸ್) ಪು. ಅಧಿಕಮಾಸ.

**धोंडा** (ಧೋಂಡಾ) ಪು. ಕಲ್ಲು.

**–महिना** (–ಮಹಿನಾ) ಪು. ಅಧಿಕಮಾಸ.

**धोंडे मारू लागणे** (ಧೋಂಡೆ ಮಾರೂ ಲಾಗಣೇ) ಕ್ರಿ. ಅ. ಹುಚ್ಚು ಹಿಡಿ.

**धोंडचा खाली हात सांपडणे** (ಧೋಂಡ್ಯಾ ಖಾಲೀ ಹಾತ್ ಸಾಪಡಣೇ) ಕ್ರಿ. ಅ. ಸಿಲುಕಿ ಬೀಳು, ಲುಕ್ಸಾನಿ ಹೊಂದು.

**धौत** (ಧೌತ) ವಿ. ಸಂ. ಒಗೆದ, ಸ್ವಚ್ಛಗೊಳಿಸಿದ.

**ध्यान** (ಧ್ಯಾನ್) ನ. ಸಂ. ಧ್ಯಾನ. ೨. ಲಕ್ಷ. ೩. ವಿ. ದಡ್ಡ.

**ध्यानीमनी नसणे** (ಧ್ಯಾನೀಮನೀ ನಸಣೇ) ಕಲ್ಪನೆಯೂ, ಕಲ್ಪನೆಯಲ್ಲಿಯೂ ಇಲ್ಲದಿರು, ಅಕಸ್ಮಾತ್ತಾಗಿ ಒದಗು.

**–धारणा** (–ಧಾರಣಾ) ಸ್ತ್ರೀ. ಧ್ಯಾನಧಾರಣೆ.

**–मुद्रा** (ಮುದ್ರಾ) ಸ್ತ್ರೀ. ಧ್ಯಾನಮುದ್ರೆ.

**–योग** (ಯೋಗ) ಪು. ಧ್ಯಾನಯೋಗ.

**–स्थ** (–ಸ್ಥ) ವಿ. ಧ್ಯಾನ ಮಾಡುತ್ತಿರುವ.

**ध्यास** (ಧ್ಯಾಸ್) ಪು. ಸಂ. ಹಂಬಲ, ಬಯಕೆ.

**ध्येय** (ಧ್ಯೇಯ) ನ. ಸಂ. ಧ್ಯೇಯ, ಆದರ್ಶ.

**ध्रुपद** (ಧ್ರುಪದ) ನ. ಸಂ. (ಸಂಗೀತ) ಧ್ರುಪದ.

**ध्रुव** (ಧ್ರುವ) ಪು. ಧ್ರುವ ನಕ್ಷತ್ರ, ಉತ್ತರ–ದಕ್ಷಿಣ ಧ್ರುವಪ್ರದೇಶ. ವಿ. ಸ್ಥಿರ, ಖಂಡಿತ, ಶಾಶ್ವತ.

**–पद** (–ಪದ್) ನ. ಶಾಶ್ವತ ಸ್ಥಾನ, ಧ್ರುವ ಚಿಕ್ಕೆಯ ಸ್ಥಾನ.

**–वृत्त** (–ವೃತ್ತ) ಧ್ರುವ ಪ್ರದೇಶದ ವಲಯ.

**ध्वज** (ಧ್ವಜ) ಪು. ಗುಡಿ, ಪತಾಕೆ, ಬಾವುಟ.

**–लावणे** (ಲಾವಣೇ) ಕ್ರಿ. ಸ. ಪತಾಕೆ ಏರಿಸು, (ವ್ಯಂಗ್ಯ) ಅಪಕೀರ್ತಿಗೀಡಾಗು.

**–दिन** (–ದಿನ್) ಧ್ವಜ ದಿವಸ, ಸ್ವಂತಂತ್ರತೆಯ ದಿವಸ.

**–स्तंभ** (–ಸ್ತಂಭ) ಪು. ಧ್ವಜದ ಕೋಲು, ಕಂಬ.

**ध्वजारोपण** (ಧ್ವಜಾರೋಪಣ) ಪು. ಧ್ವಜ ನಟ್ಟಿಸುವ ದಿವಸ, ಧ್ವಜಸ್ಥಾಪನೆ.

**ध्वनि** (ಧ್ವನಿ) ಪು. ಸಂ. ಶಬ್ದ, ಸದ್ದು, ಸಪ್ಪಳ, ದನಿ, ಧ್ವನಿ.

**–काव्य** (–ಕಾವ್ಯ) ನ. ಗೀತದಲ್ಲಿ ಗಂಭೀರ ಅರ್ಥ ಕೊಡುವ ಕಾವ್ಯ.

**–मुद्रिका** (–ಮುದ್ರಿಕಾ) ಸ್ತ್ರೀ. ಮುದ್ರಿತ ಹಾಡು 'ರಿಕಾರ್ಡ' ಗ್ರಾಮೋಫೋನ್ ಪ್ಲೇಟುಗಳು.

**–शास्त्र** (–ಶಾಸ್ತ್ರ) ನ. ಧ್ವನಿಶಾಸ್ತ್ರ.

**–क्षेपक** (–ಕ್ಷೇಪಕ್) ಪು. ಮಾತಾಡಿದುದನ್ನು ಹೆಚ್ಚಿಗೆ ಸ್ಪಷ್ಟಮಾಡುವ ಯಂತ್ರ, ಮಾಯ ಕ್ರೋಫೋನ್, ಲಾವುಡ್ ಸ್ಪೀಕರ್.

**–क्षेपण** (–ಕ್ಷೇಪಣ) ನ. ರೇಡಿಯೋ ಪ್ರಸಾರ.

**क्षेपित करणे** (ಕ್ಷೆಪಿಲ್) ಕ್ರಿ. ವಿ. ಬಾನ್ನೋಲಿಯಲ್ಲಿ ಪ್ರಸಾರಮಾಡು.

**ध्वस्त** (ಧ್ವಸ್ತ) ವಿ. ಸಂ. ನಾಶಹೊಂದಿದ.

**ध्वंस** (ಧ್ವಂಸ) ಪು. ಸಂ. ನಾಶ, ವಿನಾಶ, ಸಂಹಾರ.

**ध्वांत** (ಧ್ವಾಂತ) ಪು. ಸಂ. ಕಗ್ಗತ್ತಲೆ.

**ध्वांक्ष** (ಧ್ವಾಂಕ್ಷ) ಪು. ಸಂ. ಕಾಗೆ.

# न ನ

**न** (ನ) ತವರ್ಗದ ಅನುನಾಸಿಕ, ೨. ಇಲ್ಲ, ಅಲ್ಲ.

**नऊ** (ನಉ) ವಿ. ಒಂಬತ್ತು (೯)

**नकटा** (ನಕಟಾ) ವಿ. ಮೊಂಡ ಮೂಗಿನ, ಕೂತ ಮೂಗಿನ ೨. ನ್ಯೂನ್ಯವುಳ್ಳ.

**नकल** (ನಕಲ್) ಸ್ತ್ರೀ. ಅರ. ಪ್ರತಿ – ೨. ಅಣಕ – ಸೋಗು, ಚೇಷ್ಟೆ.

**नकली** (ನಕಲೀ) ವಿ. ಅರ. ಖೊಟ್ಟಿ, ಕೃತ್ರಿಮ.

**नकल्या, नकलाकार** (ನಕಲ್ಯಾ ನಕಲಾಕಾರ) ಪು. ಅರ + ಸಂ. ನಕಲು, ತಮಾಷೆ ಅಣಕುಹಾಸ್ಯ ಮಾಡುವವ ೨. ಅನುಕರಣ ಮಾಡುವವ.

**नकशा** (ನಕ್ಶಾ) ಪು. ಅರ. ಸೊಕ್ಕು, ಜಂಭ. (–ಉತರಣೇ) ಕ್ರಿ. ಅ. ಗರ್ವಹರಣವಾಗು.

**नकशी** (ನಕಶೀ) ಪು. ಅರ. ಚಿತ್ರಕಲೆ, ಕಲಾಕುಸುರು ಕೊರೆದ ಚಿತ್ರ.

**नका** (ನಕಾ) ಅವ್ಯಯ, ಬೇಡ, ಬೇಡಿರಿ.

**नकार** (ನಕಾರ್) ಪು. ಇಲ್ಲ – ಅಲ್ಲ ಅನ್ನುವಿಕೆ, ಅಲ್ಲಗಳೆಯುವಿಕೆ.

**–अधिकार** (–ಅಧಿಕಾರ್) ಪು. ಪ್ರತಿ ಭಟಿಸುವ, ಹೊಡೆದುಹಾಕುವ ಅಧಿಕಾರ, ವ್ಹೆಟೋ ಅಧಿಕಾರ.

**नकाशा** (ನಕಾಶಾ) ಪು. ಅರ. ನಕಾಶೆ, ಮಾನಚಿತ್ರ, ಭೂಮಿಯ ಚಿತ್ರ.

**नकीब** (ನಕೀಬ್) ಪು. ಅರ. ಅರಸನಿಗೆ ಬೇರೆ ಅಭ್ಯಾಗತರ ಪರಿಚಯ ಮಾಡಿಕೊಡುವ ಅಧಿಕಾರಿ.

**नकुल** (ನಕುಲ) ನ. ಸಂ. ಮುಂಗುಲಿ.

**नको** (ನಕೋ) ಅವ್ಯಯ ಬೇಡ, ಕೂಡದು.

**नक्की** (ನಕ್ಕೀ) ಕ್ರಿ. ವಿ. ಅರ. ಸ್ಪಷ್ಟವಾಗಿ, ಖಂಡಿತವಾಗಿ, ನಿಶ್ಚಿತ ರೂಪದಿಂದ.

**नक्त** (ನಕ್ತ) ನ. ಸಂ. ಕೇವಲ ರಾತ್ರಿಯಲ್ಲಿ ಭೋಜನ ಮಾಡುವ ಒಂದು ವ್ರತ. ೨. ಅರ. ನಗದು, ಹಣ ಕಾಸು.

**–भोजी** (–ಭೋಜೀ) ವಿ. ರಾತ್ರಿಯಲ್ಲಿ ಊಟಮಾಡುವ ವ್ರತಮಾಡಿದವ.

**नक्तम्** (ನಕ್ತಮ್) ಅವ್ಯಯ ರಾತ್ರಿಯ ಕಾಲದಲ್ಲಿ.

**नक्तेल** (ನಕ್ತೇಲ್) ನ. ಅರ + ಸಂ. ಟರಪೆಂಟಾಯಿನ್.

**नक्तंचर** (ನಕ್ತಂಚರ್) ಪು. ರಾಕ್ಷಸ, ನಿಶಾಚರ.

**नक्र** (ನಕ್ರ) ಪು. ಸಂ. ಮೊಸಳೆ.

**नक्शी** (ನಕ್ಶೀ) ಸ್ತ್ರೀ. ಅರ. ಕಸೂತಿ, ಕೊರೆದಚಿತ್ರ, ನಕ್ಷಿ.

**नख** (ನಖ್) ನ. ಸಂ. ಉಗುರು.

**–देखील दृष्टीस न पडणे** (–ದೇಖೀಲ್ ದೃಷ್ಟೀಸ್ ನ ಪಡಣೇ) ಏನೇನೂ ಕಾಣದಿರು, ಅಡಗಿಹೋಗು.

**–देणे** (ದೇಣೆ) ಕ್ರಿ. ಸಂ. (ಕೂಸನ್ನು) ಹಿಚಿಕಿಕೊಲ್ಲು.

**नखाने काम होते तेथे कुऱ्हाड कशाला?** (ನಖಾನೆ ಕಾಮ್ ಹೋತೇ ತೇಥೇ ಕುರ್ಹಾಡ್‌ಕಶಾಲಾ ?) ಉಗುರಿನಿಂದ ಕೆಲಸವಾಗುತ್ತಿದ್ದರೆ ಕೊಡಲಿ ಏಕೆ ಬೇಕು.

**नखात देखील दोष नाही** (ನಖಾತ್ ದೇಖೀಲ್ ದೋಷ್ ನಾಹೀ) ಕೊಂಚ ದೋಷವೂ ಇಲ್ಲ.

**–नखा एवढे नख भर** (–ನಖಾ ಏವಢೇ ನಖ್‌ಭರ್) ಅತ್ಯಲ್ಪ, ತೀರತುಸು.

**–जीन** (–ಜೀನ್) ನ- ಉಗುರು ತೆಗೆಯುವ ಚೂರಿ.

**नखरा** (ನಖರಾ) ಪು. ನಖರೆ, ದಿಮಾಕ, ಡೌಲು.

**नखरेबाज** (ನಖರೇಬಾಜ್) ವಿ. ಡೌಲುಮಾಡುವ, ದಾಂಭಿಕ.

**नखरूड** (ನಖರೂಡ್) ನ. ಉಗುರುಸುತ್ತು, ನೋಯುವ ಉಗುರು.

**नखशिखांत** (ನಖಶಿಖಾಂತ್) ಕ್ರಿ. ವಿ. ಮೈತುಂಬ, ಮೈಯಲ್ಲೆಲ್ಲ ಆಪಾದ ಮಸ್ತಕ.

**नखी** (ನಖೀ) ಸ್ತ್ರೀ. ತಂತು ವಾದ್ಯ ಬಾರಿಸುವವರು ಹಾಕುವ ಬೆರಳು ಪಟ್ಟಿ.

**नखुरडे** (ನಖುರಡೇ) ನ. ಉಗುರುಸುತ್ತು.

**नख्त** (ನಖ್ತ್) ನ. ನಗದು.

**नग** (ನಗ್) ಪು. ಒಂದು ವಸ್ತು. ೨. ಆಭರಣ. ೩. ಸಂ. ಪರ್ವತ.

**नगद** (ನಗದ್) ವಿ. ಅರ. ರೋಖು, ರೊಕ್ಕಕೊಟ್ಟು.

**–विक्री** (–ವಿಕ್ರೀ) ಸ್ತ್ರೀ. ರೋಖು ಮಾರಾಟ.

**–माल** (–ಮಾಲ್) ಪು. ಉತ್ತಮ ಮಾಲು, ರೊಕ್ಕ ಕೊಟ್ಟು ತಂದ ಮಾಲು.

**नगदी** (ನಗದೀ) ವಿ. ಅರ. ರೊಕ್ಕಕೊಟ್ಟು ಮಾಡಿದ (ವ್ಯವಹಾರ)

**–कारकून** (–ಕಾರಕೂನ್) ಪು. ಹಣಕಾಸು, ಸ್ವೀಕರಿಸುವ, ಕೊಡುವ, ಕಾರಕೂನ, ಕ್ಯಾಶ್ಯರ್.

**नगर** (ನಗರ್) ನ. ಸಂ. ಊರು, ಪಟ್ಟಣ.

**–पाल** (–ಪಾಲ್) ಪೋಲೀಸ, ಜವಾನ.

**–पालिका** (–ಪಾಲಿಕಾ) ಸ್ತ್ರೀ. ಮುನಿಸಿಪಾಲಟಿ.

**–पिता** (–ಪಿತಾ) ಪು. ಮುನಿಸಿಪಲ್ ಕೌನ್ಸಿಲರ್, ಸದಸ್ಯ.

**नगराध्यक्ष** (ನಗರಾಧ್ಯಕ್ಷ) ಪು. ಮುನಿಸಿಪಾಲಿಟಿಯ ಮೇಯರ್ ಪ್ರಸಿಡೆಂಟ್.

**–भवानी** (–ಭವಾನೀ) ಸ್ತ್ರೀ. ಊರಲ್ಲಿ ಉದ್ಯೋಗ ವಿಲ್ಲದೆ ತಿರುಗುವ ಹೆಂಗಸು, ತಿರುಗಲುತಿಪ್ಪೆ.

**नगरी** (ನಗರೀ) ಸ್ತ್ರೀ. ಸಣ್ಣ ಊರು, ಚಿಕ್ಕ ಪಟ್ಟಣ.

**नगाधिराज** (ನಗಾಧಿರಾಜ) ಪು. ಸಂ. ಶ್ರೇಷ್ಠ ಪರ್ವತ.

**नगारखाना** (ನಗಾರಖಾನಾ) ಪು. ನಗಾರೆಯ ಮನೆ.

**नगारजी** (ನಗಾರಜೀ) ಪು. ಫಾ. ನಗಾರೆ ಬಾರಿಸುವವ.

**नगारा** (ನಗಾರಾ) ಪು. ಫಾ. ಡೊಳ್ಳು ನಗಾರೆ.

**नग्न** (ನಗ್ನ) ವಿ. ಸಂ. ಬತ್ತಲೆಯಾಗ.

**–दीक्षा** (–ದೀಕ್ಷಾ) ಸ್ತ್ರೀ. ನಗ್ನತೆಯವ್ರತ.

**नजर** (ನಜರ್) ಸ್ತ್ರೀ. ಅರ. ದೃಷ್ಟಿ. ೨. ಕೆಟ್ಟದೃಷ್ಟಿ. ೩. ಉದ್ದೇಶ. ೪. ಉಪಹಾರ, ಕೊಡುಗೆ, ನಜರಾಣೆ.

**–फाकणे** (–ಫಾಕಣೇ) ಸ್ತ್ರೀ. ದೃಷ್ಟಿ ಮಬ್ಬಾಗು, (ಲಾ) ಮಹತ್ವಾಕಾಂಕ್ಷಿಯಾಗು.

**–मरणे** (–ಮರಣೇ) ಕ್ರಿ. ಅ. ಭಾವನೆಯಿಲ್ಲದಾಗು ಉದಾಸೀನನಾಗು.

**–गहाण** (–ಗಹಾಣ್) ಒತ್ತೆಇಟ್ಟ ವಸ್ತು, ಮುಡುಪಾಗಿಟ್ಟ ಆಸ್ತಿ. (ಸಾಲಗಾರನ ಬಳಿಯಲ್ಲಿ)

**–नजराणा** (–ನಜರಾಣಾ) ಪು. ಉಡುತೊಡುವ ವಸ್ತು ಕೊಡುಗೆ, ಭೇಟಿ.

**–चूक** (–ಚೂಕ್) ವಿ. ಅಲಕ್ಷ್ಯದ ಮೂಲಕ ಆದ ತಪ್ಪು.

**–बन्दी** (–ಬಂದೀ) ಸ್ತ್ರೀ. ಮಾಟ, ಮಾಯ. ೨. ಪಹರೆಯಲ್ಲಿಯ ಬಂಧನ.

**–बाग** (–ಬಾಗ್) ಮನೆಯ ಮುಂಭಾಗದಲ್ಲಿಯ ತೋಟ.

**नजरानजर** (ನಜರಾನಜರ್) ಸ್ತ್ರೀ. ಅರ. ಒಬ್ಬರಿಗೊಬ್ಬರು ನೋಡುವಿಕೆ.

**नजीक** (ನಜೀಕ್) ವಿ. ಫಾ. ಹತ್ತಿರ, ಬಳಿ.

**नट** (ನಟ್) ಪು. ಸಂ. ನಟ, ನಾಟಕದಲ್ಲಿ ಭಾಗವಹಿಸುವವ.

**नटखट** (ನಟಖಟ್) ವಿ. ಉಪದ್ರವಿ, ತುಂಟ. ೨. ಚತುರ, ಕಾಯಕ ಮಾಡುವವ.

**नटणे** (ನಟಣೇ) ಕ್ರಿ. ಸಂ. ಅಂದಕಾಣುವ ಪ್ರಯತ್ನ ಮಾಡು, ಸಿಂಗಾರಮಾಡು.

**नटनर्तक** (ನಟನರ್ತಕ) ಪು. ನಾಟಕದಲ್ಲಿಯ ಪಾತ್ರ ವಿವರ.

**नटमोगरा** (ನಟಮೋಗರಾ) ಪು. ಹಿಂ. ಒಳ್ಳೆಯ ಬಟ್ಟೆಗಳನ್ನು ಧರಿಸಿದವನು.

**नटवर्य–वर्य** (ನಟವರ್–ವರ್ಯ) ಪು. ಸಂ. ಶ್ರೇಷ್ಠ ನಟ, ಪ್ರಸಿದ್ಧನಟ.

**नटवा** (ನಟವಾ) ಪು. ಸೊಕ್ಕಿನವ, ಜಂಬಮಾಡುವವ.

**नटविणे** (ನಟವಿಣೇ) ಕ್ರಿ. ಸಂ. ಸಿಂಗರಿಸು, ಶೋಭಾಯುಕ್ತವನ್ನಾಗಿ ಮಾಡು.

**नटवी** (ನಟವೀ) ಸ್ತ್ರೀ. ಬಿಂಕದ ಹೆಣ್ಣು, ಮೋಹಿನಿ.
**नटी** (ನಟೀ) ಸ್ತ್ರೀ. ನಟಿ, ನಾಟಕದಲ್ಲಿ ಪಾತ್ರವಹಿಸುವವಳು.
**नट्टन थट्टन** (ನಟೂನ್‌ಥಟೂನ್) ಕ್ರಿ. ವಿ. ಒನಪಿನಿಂದ, ಒಯ್ಯಾರದಿಂದ ಡೌಲಿನ ಉಡುಗೆ ತೊಟ್ಟು.
**नटेश** (ನಟೇಶ) ಪು. ಸಂ. ಮಾಯಾ ನಾಟಕವನ್ನಾಡುವ, ಸ್ವಾಮಿ ಭಗವಂತ.
**नटेश्वर** (ನಟೇಶ್ವರ) ಪು. ಸಂ. ಶ್ರೇಷ್ಠನಟ, ಭಗವಂತ.
**नट्टापट्टा** (ನಟ್ಟಾಪಟ್ಟಾ) ಪು. ಒನಪು, ಒಯ್ಯಾರ, ವಿಭ್ರಮ, ವಿಲಾಸ.
**नड** (ನಡ್) ಸ್ತ್ರೀ. ಅವಶ್ಯಕತೆ. ೨. ಅಡ್ಡಿ, ಅಡಚಣಿ.
**नडणे** (ನಡಣೀ) ಕ್ರಿ. ಅ. ಅಡ್ಡಿಯಾಗು, ಹರಕತ್ತಾಗು, ಬೇಕಾಗಿರು.
**नडविणे** (ನಡವಿಣೀ) ಕ್ರಿ. ಸ. ತಡೆಮಾಡು, ಅಡ್ಡಿಯನ್ನುಂಟುಮಾಡು, ಅವಶ್ಯಕತೆಯನ್ನುಂಟುಮಾಡು.
**नणंद** (ನಣಂದ್) ಸ್ತ್ರೀ. ಅ. ಗಂಡನ ಅಕ್ಕ, ತಂಗಿ, ನಾದಿನಿ.
**नत** (ನತ) ವಿ. ಸಂ. ಬಗ್ಗಿದ, ಒಲಿದ.
**नतद्रष्ट** (ನತದ್ರಷ್ಟ) ವಿ. ಜಿಪುಣ, ಹೀನ, ಬಡವ, ದರಿದ್ರ.
**नति** (ನತಿ) ಸ್ತ್ರೀ. ಬಾಗುವಿಕೆ. ೨. ಆದರ, ಸಾಧುತ್ವ. ೩. ನಮಸ್ಕಾರ.
**नति–ती–जा** (ನತಿ–ತೀ–ಜಾ) ಪು. ಅರ. ಪರಿಣಾಮ.
**नत्र** (ನತ್ರ) ಸ್ತ್ರೀ. ಇಂ. ನೈಟ್ರೋಜನ್, ನತ್ರವಾಯು.
**नथ** (ನಥ್) ಸ್ತ್ರೀ. ಹಿಂ. ನತ್ತು, ಮೂಗುತಿ.
**नथू** (ನಥೂ) ಪು. ಮೂಗುಚುಚ್ಚಿದ ಮಗು. ಮುಂಚಿನ ಮಕ್ಕಳು ಸತ್ತ ಮೇಲೆ ಬದುಕಿದ ಮಗು.
**नद** (ನದ್) ಪು. ದೊಡ್ಡ ಹೊಳೆ.
**नदी** (ನದೀ) ಸ್ತ್ರೀ. ನದಿ, ಹೊಳೆ.
**न देवाय न धर्माय** (ನ ದೇವಾಯ ನ ಧರ್ಮಾಯ) ನಾಣ್ಣುಡಿ. ಸಂ. ವ್ಯರ್ಥ ಹಣ ಖರ್ಚು (ಮಾಡುವಿಕೆ).
**नपुंसक** (ನಪುಂಸಕ) ವಿ. ಸಂ. ಷಂಢ. ೨. ಪೌರುಷವಿಲ್ಲದ, ಹೇಡಿ. (ವ್ಯಾಕರಣ) ನಪುಂಸಕ ಲಿಂಗ.
**नपुंसकत्व** (ನಪುಂಸಕತ್ವ) ನ. ಸಂ. ಷಂಢತನ. ೨. ಹೇಡಿತನ.
**नप्ता** (ನಪ್ತಾ) ಪು. ಮೊಮ್ಮಗ.
**नप्त्री** (ನಪ್ತ್ರೀ) ಸ್ತ್ರೀ. ಮೊಮ್ಮಗಳು.
**नफा** (ನಫಾ) ಪು. ಅರ. ಲಾಭ, ಉತ್ತಮ ಪ್ರತಿಫಲ.
**नफेची बाब** (ನಫೇಚೀ ಬಾಬ್) ಸ್ತ್ರೀ. ಲಾಭದಾಯಕ ವ್ಯವಸಾಯ.
**–तोटा** (–ತೋಟಾ) ಪು. ಲಾಭಹಾನಿ.
**नफेबाजी** (+ನಫೇಬಾಜೀ) ಸ್ತ್ರೀ. ಲಾಭಬಡಕತನ.
**नबळा** (ನಬಳಾ) ವಿ. ನಿರ್ಬಲ, ದುರ್ಬಲ, ಅಶಕ್ತ.
**नभ** (ನಭ) ನ. ಸಂ. ಆಕಾಶ.
**–स्थल** (–ಸ್ಥಲ) ಆಕಾಶ.
**नभोमंडप** (ನಭೋಮಂಡಪ) ಪು. ಆಕಾಶ.
+ **नभोमंडल** (ನಭೋಮಂಡಲ) ನ. ಆಕಾಶ.
**नभोवाणी** (ನಭೋವಾಣೀ) ಸ್ತ್ರೀ. ಬಾನುಲಿ, ಆಕಾಶವಾಣಿ, ರೇಡಿಯೋ.
**न भूतो न भविष्यति** (ನ ಭೂತೋ ನ ಭವಿಷ್ಯತಿ) ಸಂ. ಹಿಂದೆ ಆಗಿಲ್ಲ ಮುಂದೆ ಎಂದೂ ಆಗಲಿಕ್ಕಿಲ್ಲ. ೨. ಅದ್ಭುತ ಸಂಗತಿ.
**नमणे** (ನಮಣೀ) ಕ್ರಿ. ಸ. ಬಾಗು, ಬಗ್ಗು. ೨. ನಮಸ್ಕರಿಸು. ೩. ಆಜ್ಞೆಪಾಲಿಸು.
**नमता** (ನಮತಾ) ವಿ. ಬಾಗುವ, ಬಗ್ಗಿದ, ಆಜ್ಞಾಧಾರಕ.
**नमते** (ನಮತೇ) ನ. ವಿನಯ, ಆಜ್ಞಾಧಾರಕತೆ.
**घेणे** (–ಘೇಣೀ) ಕ್ರಿ. ಅ. ಆಜ್ಞಾಧಾರಕನಾಗು.
**नमदा** (ನಮದಾ) ಪು. ಫಾ. ಕಂಬಳಿ, ಉಣ್ಣೆಯ ಗುಡಾರ.
**नमन** (ನಮನ್) ನ. ಸಂ. ಬಾಗು. ೨. ನಮಸ್ಕಾರ. ೩. ವಿನೀತತೆ.
**नमविणे** (ನಮವಿಣೀ) ಕ್ರಿ. ಸ. ಬಗ್ಗಿಸು, ವಶಕ್ಕೆ ತರು, ಅಧೀನನನ್ನಾಗಿಮಾಡು. ೨. ಪಾರುಪತ್ಯ ಮಾಡು.
**नमस्कार** (ನಮಸ್ಕಾರ) ಪು. ನಮಸ್ಕಾರ, ವಂದನೆ.
**नमाज** (ನಮಾಜ್) ಪು. ಅರ. ನಮಾಜು.
**नमुना** (ನಮುನಾ) ಪು. ಫಾ. ನಮೂನೆ, ಮಾದರಿ.
**नमुनेदार** (ನಮುನೇದಾರ್) ವಿಚಿತ್ರ ಸೋಜಿಗದ.
**नमूद** (ನಮೂದ್) ವಿ. ಫಾ. ತೋರಿಸಿದ, ಬರೆದಿಟ್ಟ.
**नमोनमः** (ನಮೋನಮಃ) ಅವ್ಯಯ. ಸಂ. ನಮಸ್ಕಾರ, ಸಾಕಪ್ಪ ಮಹಾರಾಯ!
**नम्र** (ನಮ್ರ) ವಿ. ಸಂ. ವಿನೀತ, ಸಾಧು.
**नम्रता** (ನಮ್ರತಾ) ಸ್ತ್ರೀ. ಸಂ. ನಮ್ರತೆ, ವಿನೀತತ್ವ.
**नय** (ನಯ) ಪು. ಸಂ. ನ್ಯಾಯ, ನೀತಿ. ೨. ಪರದೇಶದೊಡನೆ ವ್ಯವಹಾರ, ರಾಜನೀತಿ.

**नयन** (ನಯನ್) ಪು. ಸಂ. ಕಣ್ಣು.

**नर** (ನರ) ಪು. ಗಂಡಸು. ೨. ಮನುಷ್ಯ. ವಿ– ೩. ಗಂಡು (ದನಕರುಗಳಲ್ಲಿ.)

**नरक** (ನರಕ್) ಪು. ನರಕ. ೨. ಹೊಲಸು.

**–चतुर्दशी** (–ಚತುರ್ದಶೀ) ಸ್ತ್ರೀ. ಆಶ್ವಿನ ವದ್ಯ ಚತುರ್ದಶಿ.

**–केसरी** (–ಕೇಸರೀ) ಪು. ಶ್ರೇಷ್ಠಪುರುಷ, ಮನುಷ್ಯ.

**नरटी** (ನರಟೀ) ಸ್ತ್ರೀ. ತಲೆ ಬುರುಡೆ. ೨. ತೆಂಗಿನ ಕಾಯಿಯ ಪರಟೆ.

**नरडी–नरडे** (ನರಡೀ–ನರಡೇ) ೧. ಸ್ತ್ರೀ. ೨. ನ. ಗಂಟಲ.

**नरडीचा घोट घेणे** (ನರಡೀ ಚಾ ಘೋಟ್ ಘೇಣೇ) ಕ್ರಿ. ಸಂ. ಗಂಟಲ ಹಿಚಿಕಿ ಕೊಲ್ಲು.

**नरद** (ನರದ್) ಪು. ಫಾ. ಚದುರಂಗದಲ್ಲಿಯ ಪಗಡೆಗಳು.

**नरदेह** (ನರದೇಹ್) ಪು. ಸಂ. ಮನುಷ್ಯ ದೇಹ.

**नरपति** (ನರಪತಿ) ಪು. ಅರಸ.

**नरपशु** (ನರಪಶು) ಪು. ಅವಿವೇಕಿ, ಪಶುತುಲ್ಯ ಮನುಷ್ಯ.

**नरबलि** (ನರಬಲಿ) ಪು. ಮನುಷ್ಯನನ್ನು ಬಲಿಕೊಡುವಿಕೆ.

**नरम** (ನರಮ್) ವಿ. ಫಾ. ಮೃದು, ನಯವಾದ, ನರ್ಮ.

**नरमणे** (ನರಮಣೇ) ಕ್ರಿ. ಅ. ಶಾಂತನಾಗು, ಸಿಟ್ಟು ಕಡಿಮೆಯಾಗು.

**नरमाई** (ನರಮಾಈ) ಸ್ತ್ರೀ. ನಮ್ರತೆ, ದೈನ್ಯ. ೨. ಕೊರತೆ, ಬಡತನ.

**नरमादी** (ನರಮಾದೀ) ವಿ. ಫಾ. ಹೆಣ್ಣು ಗಂಡು (ದನಕರು)

**नरमेध** (ನರಮೇಧ್) ಪು. ಮನುಷ್ಯನನ್ನು ಬಲಿಕೊಟ್ಟು ಮಾಡಿದ ಯಜ್ಞ.

**नरवर** (ನರವರ್) ಪು. ಸಂ. ಶ್ರೇಷ್ಠ ಮನುಷ್ಯ.

**नरसाळे** (ನರಸಾಳೇ) ನ. ಲಾಳಿಕೆ, ಎಣ್ಣೆ ತೆಗೆಯುವ ಯಂತ್ರ.

**नराणी** (ನರಾಣೀ) ಸ್ತ್ರೀ. ಉಗುರು ಸರಿಮಾಡುವ ಸಾಧನ.

**नरेंद्र** (ನರೇಂದ್ರ) ಪು. ಮನುಷ್ಯರ ಸ್ವಾಮಿ, ಅರಸ.

**नरोटी** (ನರೋಟೀ) ಸ್ತ್ರೀ. ತಲೆ ಬುರುಡೆ, ತೆಂಗಿನ ಪರಟೆ.

**–हातात घेणे** (–ಹಾತಾತ್ ಘೇಣೇ) ಕ್ರಿ. ಅ. ಬಿಕ್ಕೆಬೇಡು,

**नरोवा कुंजरोवा** (ನರೋವಾ ಕುಂಜರೋವಾ) ಪು. 'ಗೊತ್ತಿಲ್ಲ ಎಂಬುದಾಗಿ ನಟಿಸು.

**नर्तक** (ನರ್ತಕ) ಪು. ಸಂ. ನಟ ನೃತ್ಯಮಾಡುವವ, ಕುಣಿಯುವವ.

**नर्तकी** (ನರ್ತಕೀ) ಸ್ತ್ರೀ. ಸಂ. ಕುಣಿಯುವವಳು, ನರ್ತಿಕೆ, ಪಾತರದವಳು.

**नर्तन** (ನರ್ತನ) ನ. ಸಂ. ಕುಣಿತ.

**नर्म** (ನರ್ಮ) ನ. ಸಂ. ಆಟ, ಹುಡುಗಾಟ. ೨. ಚತುರ ಮಾತು.

**–सचीव** (–ಸಚಿವ) ಪು. ವಿದೂಷಕ, ನಗೆಚಾಟಿಕೆ ಮಾಡಿ ಮನರಂಜಿಸುವವ. ೨. ಭಟ್ಟಂಗಿ, ಸ್ತುತಿ ಪಾಠಕ.

**नलिका** (ನಲಿಕಾ) ಸ್ತ್ರೀ. ಕೊಳವೆ.

**नलिन** (ನಲಿನ) ನ. ಸ. ಕಮಲ.

**नलिनी** (ನಲಿನೀ) ಸ್ತ್ರೀ. ಸಂ. ಕಮಲ.

**नलिनी पत्र** (ನಲಿನೀ ಪತ್ರ) ನ. ಸಂ. ಕಮಲದ ಎಲೆ.

**नव** (ನವ) ವಿ. ಹೊಸ. ೨. ಒಂಬತ್ತು. (೯)

**नवकोट नारायण** (ನವಕೋಟ ನಾರಾಯಣ್) ಪು. ಸಂ. ಕೋಟ್ಯಾಧೀಶ.

**नवखा** (ನವಖಾ) ವಿ. ಹೊಸಬ, ಅಪರಚಿತ.

**नवग्रह** (ನವಗ್ರಹ) ಪು. ಒಂಬತ್ತು ಗ್ರಹಗಳು. ೨. ಕಿಡಿಗೇಡಿಗಳು.

**नवजीवन** (ನವಜೀವನ) ನ. ಸಂ. ಹೊಸಬಾಳು.

**नवज्वर** (ನವಜ್ವರ) ಪು. ಸ. ಅಂತ್ರಜ್ವರ, 'ಟಾಯಿಫಾಯಿಡ್'

**नवटाक** (ನವಟಾಕ್) ಪು. ಪಕ್ಕಾ ಸೇರಿನ ೩ ಭಾಗ.

**नवती** (ನವತೀ) ಸ್ತ್ರೀ. ಹರೆ, ಪ್ರಾಯ. ೨. ಹರೆಯದವಳು. ೩. ಹೊಸ ಚಿಗರು.

**नवथर** (ನವಥರ್) ವಿ. ಇತ್ತೀಚಿನ, ಹೊಸದಾದ.

**नवनवती** (ನವನವತೀ) ಸ್ತ್ರೀ. ತಾರುಣ್ಯ, ಪ್ರಾಯ.

**नवनीत** (ನವನೀತ) ನ. ಸಂ. ಬೆಣ್ಣೆ, ಸಾರ, ತಿರುಳು.

**नवबिंदुवृत्त** (ನವಬಿಂದುವೃತ್ತ) ನ. ಸಂ. ಒಂಬತ್ತು ಬಿಂದುವಿನ ವೃತ್ತ.

**नवम** (ನವಮ) ಒಂಬತ್ತನೆಯ.

**नवमी** (ನವಮೀ) ಸ್ತ್ರೀ. ಒಂಬತ್ತನೆಯ ತಿಥಿ, ನವಮಿ.

**नवयौवना** (ನವಯೌವನಾ) ಸ್ತ್ರೀ. ಹರೆಯದ ಹೆಂಗಸು.

**नवरदेव** ( ನವರದೇವ) ಪು. ಮದುಮಗ.

**नवरा** ( ನವರಾ) ಪು. ಗಂಡ, ಪತಿ.

**नवरात्र** ( ನವರಾತ್ರ) ನ. ಸಂ. ನವರಾತ್ರಿ,ನಾಡಹಬ್ಬ.

**नवरी** ( ನವರೀ) ಸ್ತ್ರೀ. ಮದುಮಗಳು.

**नवरोज** ( ನವರೋಜ್) ಪು. ಪಾರಸಿಕರ ನೂತನವರ್ಷ

**नवल** ( ನವಲ್) ನ. ಆಶ್ಚರ್ಯ ಸೋಜಿಗದ ಸಂಗತಿ.

**–कथा** ( ಕಥಾ) ಕಾಲ್ಪನಿಕಕಥೆ, ಕಾದಂಬರಿ,

**–विशेष** ( ವಿಶೇಷ) ವಿ. ಹೇಳಬೇಕಾದ ಹೊಸದಾಗಿ ತಿಳಿದ.

**नवलाई** ( ನವಲಾಈ) ಸ್ತ್ರೀ. ಆಶ್ಚರ್ಯ, ಆಶ್ಚರ್ಯಕರವಾದ ಸಂಗತಿ – ಅಪರೂಪ – ಅಪರೂಪ ವಿಷಯ

**नववधु** ( ನವವಧೂ) ಸ್ತ್ರೀ. ಸ್ತ್ರೀ, ಹೊಸತಾಗಿ ಮದುವೆಯಾದ ಸ್ತ್ರೀ.

**नवविधा भक्ति** ( ನವವಿಧಾ ಭಕ್ತಿ) ಸ್ತ್ರೀ. ಒಂಬತ್ತು ಬಗೆಯ ಭಕ್ತಿ.

**नवशिका** ( ನವಶಿಕಾ) ಪು. ೨. ವಿ. ಹೊಸಬ, ಕೆಲಸ ಕಲಿಯುವವ.

**नवस** ( ನವಸ್) ಪು. ದೇವಾರಿಗೆ ಬೇಡಿಕೊಳ್ಳುವಿಕೆ ೨. ವ್ರತ.

**–सायास** (–ಸಾಯಾಸ್) (ಪು) ದೇವರಿಗೆ ಕೇಳಿಕೊಂಡ ಬೇಡಿಕೆ.

**नवसागर** ( ನವಸಾಗರ್) ಪು. ಸಂ. ಅಮೋನಿಯನ್ ಕ್ಲೋರಿಕ್ ಆಸಿಡ್, ಅಮೋನಿಯಾ, ನವಸಾಗರ.

**नवा** ( ನವಾ) ಏ. ಹೊಸ, ಹೊಸದಾದ, ನೂತನ.

**नव्याचे नऊ दिवस** ( ನವ್ಯಾಚೆ ನಊ ದಿವಸ್) ಸೋಜಿಗದ ಮಾತು ಕಡಿಮೆಕಾಲ ತಾಳುತ್ತದೆ– (ಸೋಜಿಗವಿಲ್ಲದಾಗುತ್ತದೆ)

**–तरणा** (–ತರಣಾ) ವಿ. ತರುಣ, ಕಾಮುಕ.

**–नवसाचा** ( ನವಸಾಚಾ) ವಿ. ದೇವರಿಗೆ ಬೇಡಿಕೊಂಡು ದೊರೆತ.

**नव्या उमेदीचा** ( ನವ್ಯಾ ಉಮೇದೀಚಾ) ವಿ. ಹೊಸ ಹುರುಪಿನ.

**नव्या ताणाचा** ( ನವ್ಯಾ ತಾಣಾಚಾ) ವಿ. ಹೊಸತಾಗಿ ಹೆಣೆದ.

**नवार** ( ನವಾರ್) ಸ್ತ್ರೀ. ಫಾ. ಮಂಚಕ್ಕೆ ಹೆಣೆಯುವ ಪಟ್ಟಿ.

**नवाळी** / **नव्हाळी** } ಸ್ತ್ರೀ. ಲಾಭ, ಫಾಯದೆ.

**नवीन** ( ನವೀನ್) ವಿ. ಸಂ. ಹೊಸತಾದ.

**नवी–नवती** ( ನವೀ–ನವತೀ) ವಿ. ಹರೆಯದ ಸ್ತ್ರೀ.

**नवोढा** ( ನವೋಢಾ) ಸ್ತ್ರೀ. ಹೊಸತಾಗಿ ಮದುವೆಯಾದ ಹುಡಿಗೆ.

**नव्याने** ( ನವ್ಯಾನೆ) ಕ್ರಿ. ವಿ. ಹೊಸತಾಗಿ, ಮೊದಮೊದಲು.

**नव्याण्णव** ( ನವ್ಯಾಣ್ಣವ್) ವಿ. ತೊಂಬತ್ತೊಂಬತ್ತು (೯೯)

**–हिश्यानी** (–ಹಿಶ್ಯಾನೀ) ಕ್ರಿ. ವಿ. ಖಂಡಿತವಾಗಿ, (ನೂರರಲ್ಲಿ ೯೯ ಪಾಲು)

**नव्वद** ( ನವ್ವದ್) ವಿ. ತೊಂಬತ್ತು (೯೦)

**नशा** ( ನಶಾ) ಸ್ತ್ರೀ. ಅರ. ಅಮಲು, ನಶೆ.

**–खोर** (–ಖೋರ್) ಸೆರೆಬಡಕ, ಗಾಂಜಿಬಡಕ.

**नशीब** ( ನಶೀಬ್) ನ. ಅರ. ಅದೃಷ್ಟ, ದೈವ.

**–शिकंदर असणे** (–ಶಿಕಂದರ್ ಅಸಣೇ) ಕ್ರಿ. ಅ. ಅದೃಷ್ಟ ಬಹಳ ಚೆನ್ನಾಗಿರು.

**–वान** ( ವಾನ್) ವಿ. ಭಾಗ್ಯಶಾಲಿ.

**नश्वर** ( ನಶ್ವರ್) ವಿ. ಸಂ. ಹಾಳಾಗುವ, ನಾಶಹೊಂದುವ.

**नष्ट** ( ನಷ್ಟ) ವಿ. ಸಂ. ನಷ್ಟಹೊಂದಿದ, ಹಾಳಾದ.

**–चर्य**(–ಚರ್ಯ) ನ. ಸಂ. ದುರ್ಭಾಗ್ಯ, ದುರ್ದೈವ

**नस** ( ನಸ್) ಸ್ತ್ರೀ. ಫಾ. ನರ, ನಾಡಿ.

**नसणे** ( ನಸಣೇ) ಕ್ರಿ. ಅ. ಇಲ್ಲದಿರು.

**नसता** ( ನಸತಾ) ವಿ. ಬೇಡಾದ, ಅನಾವಶ್ಯಕವಾದ, ವ್ಯರ್ಥವಾದ.

**नसीयत** ( ನಸೀಯತ್) ಸ್ತ್ರೀ. ಅರ. ( ನಸೀಹತ್) ದಂಡ, ಶಿಕ್ಷೆ.

**नहर** ( ನಹರ್) ಪು. ಫಾ. ಕಾಲುವೆ.

**नहला** ( ನಹಲಾ) ಪು. ಉಸ್ಪಾರನ (ಸಣ್ಣ) ಉಪಕರಣ.

**नहाण** ( ನಹಾಣ್) ನ. ಮೈನೆರೆಯುವಿಕೆ, ಹುಡಿಗೆ ವಯಸ್ಸಿಗೆ ಬರುವಿಕೆ, ಋತುಪ್ರಾಪ್ತಿ.

**नहाणी** ( ನಹಾಣೀ) ಸ್ತ್ರೀ. ಬಚ್ಚಲ, ಬಚ್ಚಲಮನೆ.

**नहाणे** ( ನಹಾಣೇ) ಕ್ರಿ.ಅ. ಎರಕೊ, ಸ್ನಾನಮಾಡು. ೨. ಎಣ್ಣೆಹಚ್ಚಿಕೊಂಡು ಜಳಕಮಾಡು (ವಿಶೇಷವಾಗಿ ಹೆಂಗಸರ ಸಂಬಂಧದಿಂದ ಉಪಯೋಗಿಸುತ್ತಾರೆ.)

**नळ** ( ನಳ್) ಪು. ಹಿಂ. ನಲ್ಲಿ, ತೊಟ್ಟಿ, ನಳ. ೨. ದೊಡ್ಡ ಕರಳು.

(**–कंडे – कांडे** (–ಕಂಡೆ–ಕಾಂಡೇ) ನ. ಕೊಳಾಯಿ, ಗಳದ ತುಂಡು.

**नळगूत** (ನಳಗೂತ್) ನ. ಜಲೋದರದಂಥ ಬೇನೆ.

**नळा** (ನಳಾ) ಪು. ಹಾರಿಸುವ ಮದ್ದು, ಬಾಣ.

**गाडचाबरोबर नळचाची यात्रा** (ಗಾಡ್ಯಾ ಬರೋಬರ್ ನಳ್ಯಾಚೀ ಯಾತ್ರಾ) ನಾಣ್ಣುಡಿ. ದೊಡ್ಡವರೊಡನೆ ಸಾಮಾನ್ಯರಿಗೆ ಸಂಧಿ ದೊರೆಯುತ್ತದೆ.

**नळी** (ನಳೀ) ಸ್ತ್ರೀ. ಟ್ಯೂಬ್–ಕೊಳಾಯಿ, ಪೈಪ್, ನಲಿಕೆ, ಕಾಲಿನ ಮೂಳೆ.

**नक्षत्र** (ನಕ್ಷತ್ರ) ನ. ಸಂ. ಚಿಕ್ಕೆ, ತಾರೆ, ನಕ್ಷತ್ರ.

**हातावर नक्षत्र पडणे** (ಹಾತಾವರ್ ನಕ್ಷತ್ರ ಪಡಣೇ) ಕ್ರಿ. ಅ. ಕಡಿಯುವ ದುಷ್ಟಟವಿರು.

**पायावर नक्षत्र पडणे** (ಪಾಯಾವರ್ ನಕ್ಷತ್ರ ಪಡಣೇ) ಕ್ರಿ. ಅ. ಒಂದೇಸವನೆ ಅಡ್ಡಾಡು.

**तोंडावर नक्षत्र पडणे** (ತೋಂಡಾವರ್ ನಕ್ಷತ್ರ ಪಡಣೇ) ಕ್ರಿ. ಅ. ಒಂದೇಸವನೆ ಮಾತಾಡು.

**–विद्या** (–ವಿದ್ಯಾ) ಸ್ತ್ರೀ. ಸಂ. ಜ್ಯೋತಿಷ್ಯ.

**नक्षा** (ನಕ್ಷಾ) ಪು. ಅರ. ಕೀರ್ತಿ, ಪ್ರತಿಷ್ಠೆ.

**–उतरणे** (–ಉತರಣೇ) ಕ್ರಿ. ಅ. ಅಪಮಾನ ಹೊಂದು.

**उतरविणे** (ಉತರವಿಣೇ) ಕ್ರಿ. ಅ. ಅಪಮಾನ ಮಾಡು.

**नंग** (ನಂಗ್) ಪು. ಫಾ. ಕೀರ್ತಿ, ಹೆಸರು.

**नंगा** (ನಂಗಾ) ವಿ. ಹಿಂ. ಬತ್ತಲೆಯಾದ, ಬಟ್ಟೆಯಿಲ್ಲದ, ನಗ್ನ. ೨. ದರಿದ್ರ.

**–नाच** (–ನಾಚ್) ಪು. ಅಯೋಗ್ಯವರ್ತನೆ.

**नंतर** (ನಂತರ್) ಕ್ರಿ. ವಿ. ಆ ನಂತರ, ಆ ಮೇಲೆ.

**नंद** (ನಂದ್) ಪು. ದಳ್ಳಾಳಿಯ ವ್ಯವಸಾಯ ಮಾಡುವವ.

೨. ಮೂರ್ಖ. ೩. ಹೆಮ್ಮೆ, ಸೊಕ್ಕು.

**नंदन** (ನಂದನ್) ಪು. ಸಂ. ಮಗ, ಕುಮಾರ. ೨. ವಿ. ಆನಂದವನ್ನುಂಟು ಮಾಡುವವ.

**नंदादीप** (ನಂದಾದೀಪ್) ಪು. ಸಂ. ನಂದದ ದೀಪ, ಹಗಲಿರುಳು ಉರಿಯುವ ದೀಪ.

**नंदिनी** (ನಂದಿನೀ) ಸ್ತ್ರೀ. ಮಗಳು.

**नंदी** (ನಂದೀ) ಪು. ಸಂ. ಶಿವನ ವಾಹನ, ನಂದಿ, ಬಸವಣ್ಣ.

**–बैल** (ಬೈಲ್) ಪು. ಕವಲೆತ್ತು, ಹೇಳಿದಂತೆ ಮಾಡುವವ. ೨. ದಡ್ಡ.

**–पुत्र** (ಪುತ್ರ) ಪು. ದಡ್ಡ, ಮೂರ್ಖ.

**नंदुली** (ನಂದುಲೀ) ಸ್ತ್ರೀ. ನಾದಿನಿ.

**नंनाचा पाढा वाचणे** (ನಂನಾಚಾ ಪಾಢಾ ವಾಚಣೇ) ಕ್ರಿ. ಅ. ಅದು ಇಲ್ಲ – ಇದು ಇಲ್ಲ ಅನ್ನು.

**ना** (ನಾ) ಪು. ಅಲ್ಲಗಳೆಯುವಿಕೆ, ನಕಾರ.

**ना इलाज** (ನಾ ಇಲಾಜ್) ಪು. ಅರ+ಸಂ. ಉಪಾಯವಿಲ್ಲದಿರುವಿಕೆ.

**नाइक** (ನಾಇಕ್) ಪು. ಮುಖ್ಯ, ಪ್ರಮುಖ, ಮುಖಂಡ.

**नाइब** (ನಾಇಬ್) ಪು. ಅರ. ಡೆಪ್ಯೂಟಿ. ೨. ಉಪ ಪ್ರಮುಖ.

**नाक** (ನಾಕ್) ನ. ಮೂಗು, (ಬೀಜದ) ಕಣ್ಣು, ಸೂಜಿಯ ಮೊನೆ. ೨. ವಿ. ಪ್ರಮುಖ, ಶ್ರೇಷ್ಠ.

**–कापणे** (–ಕಾಪಣೇ) ಕ್ರಿ. ಅ. ಅಪಮಾನಹೊಂದು. ಸ. ಕ್ರಿ. ಅಪಮಾನ ಮಾಡು.

**–खाली होणे** (ಖಾಲೀ ಹೋಣೇ) ಕ್ರಿ. ಅ. ಅಪಮಾನವಾಗು.

**–मुरडणे** (ಮುರಡಣೇ) ಕ್ರಿ. ಅ. ಸೇರದಾಗು.

**–ठेचणे** (–ಠೇಚಣೇ) ಕ್ರಿ. ಅ. ಅಪಮಾನವಾಗು. ಕ್ರಿ. ಸಂ. ಅಪಮಾನಮಾಡು.

**–धरून बसणे** (ಧರೂನ್ ಬಸಣೇ) ಕ್ರಿ. ಸ. ಯಾವಾಗಲೂ ಧಾರ್ಮಿಕ ವಿಧಿಯಲ್ಲಿರು, ಜಪಮಾಡು.

**–वर करून** (–ವರ್ ಕರೂನ್) ಸೊಕ್ಕಿನಿಂದ, ಗರ್ವದಿಂದ. ೨. ಮಾನದೊಂದಿಗೆ.

**नाकात काडचा घालणें** (ನಾಕಾತ್ ಕಾಡ್ಯಾ ಘಾಲಣೇ) ಕ್ರಿ. ಸ. ಪೀಡಿಸು, ಕಾಡು.

**नाकात बोलणे** (ನಾಕಾತ್ ಬೋಲಣೇ) (ಅನುಸ್ವಾರಯುಕ್ತ) ಹೆಣ್ಣುದನಿಯಿಂದ ಮಾತನಾಡು.

**नाकाने कांदे सोलणे** (ನಾಕಾನೇ ಕಾಂದೇ ಸೋಲಣೇ) ಕ್ರಿ. ಸ. ಜಂಬ ಬಡಿ, ೨. ಹೆರವರನ್ನು ಉಪೇಕ್ಷಿಸು.

**नाकावर माशी बसू न देणे** (ನಾಕಾವರ್ ಮಾಶೀ ಬಸೂ ನ ದೇಣೇ) ಕ್ರಿ. ಅ. ಬಹಳ ಅಭಿಮಾನಪಡು.

**नाकाशी सूत धरणे** (ನಾಕಾಶೀ ಸೂತ್ ಧರಣೇ) ಕ್ರಿ. ಅ. ಪ್ರಾಣವಿದೆಯೊ ಇಲ್ಲವೊ ಎಂಬುದನ್ನು ಪರೀಕ್ಷಿಸು, ಮರಣೋನ್ಮುಖನ ಪರೀಕ್ಷೆ ಮಾಡು.

**नाकात वेसण घालणे** (ನಾಕಾತ್ ವೇಸಣ್ ಘಾಲಣೆ) ಮೂಗುದಾಣೆ ಹಾಕು – ನಿಯಂತ್ರಿಸು.

**मुठीत धरून जाणे** (ಮುಠೀತ್ ಧರೂನ್ ಜಾಣೇ) ಕ್ರಿ. ಅ. ಅಂಜಿಕೊಂಡು, ವಿನಯದಿಂದ ಕೆಲಸ ಮಾಡು.

**नाक गेले तरी भोके राहिली आहेत** (ನಾಕ್ ಗೇಲೆ ತರೀ ಭೋಕೇ ರಾಹಿಲೀ ಆಹೇತ್) ನಾ. ಬಹಳ ಗರ್ವ ತೋರಿಸು, ಅಪಮಾನ ಹೊಂದಿದರೂ ಉದ್ಧಟತನ ಮಾಡು.

**नाक धरल्यास तोंड उघडते** (ನಾಕ್ ಧರಲ್ಯಾಸ್ ತೋಂಡ್ ಉಘಡತೆ) ನಾ. ಕೆಲಸವಾಗಬೇಕಿದ್ದರೆ ಒತ್ತಾಯಪಡಿಸಬೇಕಾಗುತ್ತದೆ.

**नाकापेक्षा मोतीजड** (ನಕಾಪೇಕ್ಷಾ ಮೋತೀಜಡ್) ಸಂ. ಸಾಮಾನ್ಯರೊಡನೆ ದೊಡ್ಡವರ ಸಂಬಂಧ.

**नाकावर टिच्चून देणे** (ನಾಕಾವರ ಟಿಚ್ಚೂನ್ ದೇಣೇ) ಕ್ರಿ. ಸ. ಅಪಮಾನ ಮಾಡು, ಅಪಮಾನ ಪೂರ್ವಕವಾಗಿ ಕೊಡು.

**नाकी नव येणे** (ನಾಕೀ ನವ್ ಯೇಣೇ) ಕ್ರಿ. ಅ. ಸಾಕಾಗು, ದಣಿವಾಗು.

**आपले नाक कापून दुसऱ्याला अपशकुन करणे** (ಆಪಲೇ ನಾಕ್ ಕಾಪೂನ್ ದುಸರ್ಯಾಲಾ ಅಪಶಕೂನ್ ಕರಣೇ) ಕ್ರಿ.ಅ. ತನ್ನ ಹಾನಿಯನ್ನು ಉಪೇಕ್ಷಿಸಿ ಬೇರೆಯವರಿಗೆ ಕೇಡು ಬಗೆ.

**नाकातील बाल** (ನಾಕಾತೀಲ್ ಬಾಲ್) ವಿ. ಬಹಳ ಬೇಕಾದವ.

**नाक घासणे** (ನಾಕ್ ಘಾಸಣೇ) ಕ್ರಿ. ಅ. ದೈನ್ಯ ತೋರಿಸು. ೨. ಕ್ಷಮೆ ಬೇಡು.

**नाकाच्या बोंडिवर राग असणे** (ನಾಕಾಚ್ಯಾ ಬೋಂಡೀವರ್ ರಾಗ್ ಅಸಣೇ) ಕ್ರಿ. ಸ. ತಟ್ಟನೆ ರೇಗು, ಬೇಗ ಸಿಟ್ಟು ಬರು.

**नाक साफ करणे** (ನಾಕ್ ಸಾಫ್ ಕರಣೇ) ಕ್ರಿ.ಅ. ಮೂಗು ಸ್ವಚ್ಛವಾಗಿ ಮಾಡು.

**नाकावर पाय देणे** (ನಾಕಾವರ ಪಾಯ ದೇಣೇ) ಕ್ರಿ. ಸ. ದುರ್ಲಕ್ಷಿಸು, ಅಪಮಾನಮಾಡು.

**नाकाचा दांडा** (ನಾಕಾಚಾ ದಾಂಡ್) ಪು. ಮೂಗಿನ ಆಕೃತಿ, ಕಮಾನು.

**नाकाचा पडदा** (ನಾಕಾಚಾ ಪಡದಾ) ಪು. ಹೊರಳೆಗಳ ನಡುವಿನ ಮಾಂಸ.

**नाकाची बोंडी** (ನಾಕಾಚೀ ಬೋಂಡೀ) ಕ್ರಿ. ಸ. ಮೂಗಿನ ತುದಿ.

**नाकझरी** (ನಾಕ್‌ಝುರೀ) ಸ್ತ್ರೀ. ನೀರು ಹರಿದು ಹೋಗುವ ದಾರಿ.

**नाकतोडा** (ನಾಕ್‌ತೋಡಾ) ಪು. ಜಿಟ್ಟೆ.

**नाकदुरई** (ನಾಕ್ ದುರಈ) ಸ್ತ್ರೀ. ನಮ್ರತೆ.

**नाकपुडी** (ನಾಕ್‌ಪುಡೀ) ಮೂಗಿನ ಹೊರಳೆ.

**ना कबुली** (ನಾ ಕಬುಲೀ) ಸ್ತ್ರೀ. ಅರ. ಒಪ್ಪದಿರುವಿಕೆ.

**ना कबूल** (ನಾ ಕಬೂಲ್) ವಿ. ಅರ. + ಫಾ. ಸಮ್ಮತವಿಲ್ಲದಿರು.

**नाका डोळयाचा वैद्य** (ನಾಕಾ ಡೋಳ್ಯಾಚಾ ವೈದ್ಯ) ಪು. ಸಾಮಾನ್ಯ ವೈದ್ಯ, ಅಶಿಕ್ಷಿತ ವೈದ್ಯ, ಗಾವಠೀ ಔಷಧ ಮಾರುವವ.

**नाका** (ನಾಕಾ) ಪು. ಹಿಂ. ಕೂಟ, ನಾಕೆ, ಸಂಗಮ ಸ್ಥಾನ, ಚೌಕು.

**नाकारणे** (ನಾಕಾರಣೇ) ಕ್ರಿ.ಸ. ಇಲ್ಲ–ಅಲ್ಲ ಎನ್ನು, ಒಪ್ಪದಿರು.

**नाकीडोळी नीटस –नेटस** (ನಾಕೀಡೋಳೀ ನೀಟಸ್ – ನೇಟಸ್) ವಿ. ಅಂದ–ಚಂದ ಕಾಣುವ, ಕಣ್ಣು, ಮೂಗು ಚನ್ನಾಗಿರುವ.

**नाके** (ನಾಕೇ) ನ. ಹಿಂ. ಎರಡು ಹಾದಿಗಳು ಕೂಡುವ ಸ್ಥಳ, ನಾಕೆ, ಕೂಟ. ೨. ಜಕಾತಿ ಕಟ್ಟೆಯ ಸ್ಥಳ.
**–दार** (–ದಾರ್) ಪು. ಜಕಾತಿ ವಸೂಲುಮಾಡುವವ.
**–बंदी** (–ಬಂದೀ) ಸ್ತ್ರೀ. ಹಿಂ. ಎಲ್ಲ ದಾರಿಗಳನ್ನು ತಡೆಹಿಡಿದು ಬೇರ್ಪಡಿಸುವಿಕೆ.

**नाकेला** (ನಾಕೇಲಾ) ಪು ಉದ್ದ–ನಿಡಿದಾದ ಮೂಗಿನವ.

**नाखवा** (ನಾಖವಾ) ಪು. ಫಾ. (ನಾಖುದಾ) ಹಡಗದ ಒಡೆಯ.

**नाखुष** (ನಾಖುಷ್) ವಿ. ಫಾ. ಅಸಮಾಧಾನ ಹೊಂದಿದವ, ಅತೃಪ್ತ.

**नाग** (ನಾಗ್) ಪು. ಸಂ. ನಾಗರಹಾವು. ೨. ಆನೆ.
**–कन्या** (–ಕನ್ಯಾ) ಸ್ತ್ರೀ. ನಾಗಕನ್ಯೆ, ಮೋಹಿನಿ.
**–चाफा** (–ಚಾಫಾ) ಪು. ಹೊನ್ನುಸಂಪಿಗೆ.

**नागडा** (ನಾಗಡಾ) ವಿ. ಬತ್ತಲೆಯಾಗಿದ್ದ, ವಸ್ತ್ರವಿಲ್ಲದ.

**नागपंचमी** (ನಾಗಪಂಚಮೀ) ಸ್ತ್ರೀ. ನಾಗರಪಂಚಮಿ.

**नागफणी** (ನಾಗಫಣೀ) ಸ್ತ್ರೀ. ಒಂದು ಮುಳ್ಳಿನ ಕಂಟಿ.

**नागबळी** (ನಾಗಬಳೀ) ಸ್ತ್ರೀ. ನಾಗಬಲಿ ವ್ರತ, ಹಾವು ಕೊಂದ ಪ್ರಾಯಃಶ್ಚಿತ್ತ. ೨. ಮಕ್ಕಳು ಹುಟ್ಟುವುದಕ್ಕಾಗಿ ಮಾಡುವ ವ್ರತ.

**नागमोडी** (ನಾಗಮೋಡೀ) ಸ್ತ್ರೀ. ಅಂಕು ಡೊಂಕಾದ.
**–वळण** (–ವಳಣ್) ನ. ಅಂಕು ಡೊಂಕಾಗಿರುವ ರಸ್ತೆ.

**नागर** (ನಾಗರ) ಪು. ಸಂ. (೧) ನಗರನಿವಾಸಿ. (೨) ವಿ. ಗುಜರಾತೀ ಬ್ರಾಹ್ಮಣರ ಒಂದು ಜಾತಿ. ಸುಸಂಸ್ಕೃತ (೩) ನಗರಕ್ಕೆ ಸಂಬಂಧಿಸಿದ.

**नागरिक** (ನಾಗರಿಕ) ಪು. ಸಂ. ನಗರನಿವಾಸಿ.

**–शास्त्र** (–ಶಾಸ್ತ್ರ) ಸಮಾಜಶಾಸ್ತ್ರ, ಸಾಮಾಜಿಕ ಸಂಬಂಧದ ಜ್ಞಾನ.

**नागरी** (ನಾಗರೀ) ವಿ. ಸಂ. ನಗರದ–ನಾಗರಿಕನ. "ಸಿವಿಲ್" ೨. ಅಸೈನಿಕ. ೩. ಸ್ತ್ರೀ. ದೇವನಾಗರೀ ಲಿಪಿ.

**नागवणूक** (ನಾಗವಣೂಕ್) ಸ್ತ್ರೀ. ಅಪಹಾರ, ಸುಲಿಗೆ ಬಕ್ಕಬರಿದು ಮಾಡುವಿಕೆ, ಶೋಷಣ, ಹೀರುವಿಕೆ.

**नागवणे** (ನಾಗವಣೇ) ಕ್ರಿ. ಸಂ. ಅಪಹರಿಸು, ಸುಲಿಗೆ ಮಾಡು, ಶೋಷಣಮಾಡು, ಹೀರು.

**नागवा** (ನಾಗವಾ) ವಿ. ಬತ್ತಲೆಯಾದ, ವಸ್ತ್ರಹೀನ.

**–पाऊस** (–ಪಾಊಸ್) ಪು. ಬಿಸಿಲಿದ್ದಾಗ ಬೀಳುವ ಮಳೆ.

**नागवे नाचणे** (ನಾಗವೇ ನಾಚಣೇ) ಕ್ರಿ. ಅ. ಕುಣಿದಾಡು, ಹುಚ್ಚುಹುಚ್ಚಾಟ ಮಾಡು.

**नागवे कोल्हे भेटणे** (ನಾಗವೇ ಕೋಲ್ಹೇ ಭೇಟಣೇ) ಕ್ರಿ. ಅ. (ಭಾಗ್ಯ) ಉದಯಿಸು.

**नागवेल** (ನಾಗವೇಲ್) ವಿ. ವೀಳ್ಯದ ಎಲೆಯ ಬಳ್ಳಿ.

**नागसरी** (ನಾಗಸರೀ) ಸ್ತ್ರೀ. ನಾಗರಹಾವನ್ನು ರಂಜಿಸುವ ವಾದ್ಯ, ಪುಂಗಿ.

**नागीण** (ನಾಗೀಣ್) ಸ್ತ್ರೀ. ಹೆಣ್ಣು ನಾಗರಹಾವು.

**नागोबा** (ನಾಗೋಬಾ) ಪು. ನಾಗರಹಾವು.

**आयत्या पिठचावर नागोबा**–(ಆಯತ್ಯಾ ಪಿಠಾವರ್ ನಾಗೋಬಾ) ನಾಂ. ಬೇರೆಯವರ ಶ್ರಮದ ಮೇಲೆ ಜೀವಿಸುವವ, ಶೋಷಕ. ೨. ಸೋಮಾರಿ.

**नाच** (ನಾಚ್) ಪು. ಹಿಂ. ಕುಣಿತ, ನೃತ್ಯ.

**नाचक्की** (ನಾಚಕ್ಕೀ) ಸ್ತ್ರೀ. ಅಪಮಾನ, ಮಾನಹಾನಿ.

**नाचणी** (ನಾಚಣೀ) ಸ್ತ್ರೀ. ರಾಗಿ, ಒಂದು ಧಾನ್ಯ.

**नाचणे** (ನಾಚಣೇ) ಕ್ರಿ. ಅ. ಕುಣಿ, ಕುಣಿದಾಡು. ೨. ಹಾರಾಡು, ಸಂತೋಷಪಡು.

**नाचता येईना अंगण वाकडे** (ನಾಚತಾ ಏಈನಾ ಅಂಗಣವಾಕಡೇ) ಕ್ರಿ. ನಾ. ಸುಳ್ಳುನೆಪ, ಕೈಲಾಗದ ಮಾತಿಗೆ ಏನಾದರೂ ನೆಪ ಹೇಳುವಿಕೆ.

**नाचरा** (ನಾಚರಾ) ವಿ. ಕುಣಿದಾಡುವವ, ಉತ್ಸಾಹಿ, ತೋರಿಕೆಯ ಸಲುವಾಗಿ ಹಾತೊರೆಯುವವ. ೨. ತಾಳ್ಮೆಯಿಲ್ಲದವ.

**नाचरी** (ನಾಚರೀ) ಸ್ತ್ರೀ. ಕೆಟ್ಟ ನಡತೆಯ ಹೆಂಗಸು.

**नाच्या पोऱ्या** (ನಾಚ್ಯಾ ಪೋರ್‍ಯಾ) ಪು. ಹೆಣ್ಣಿನ ಸೋಗು ಹಾಕಿ ಕುಣಿಯುವ ಹುಡುಗ.

**नाचवणे** (ನಾಚವಣೇ) ಕ್ರಿ. ಸ. ಕುಣಿಸು, ಕುಣಿದಾಡಿಸು. ೨. ಹೇಳಿದಂತೆ ಕೇಳಹಚ್ಚು.

**नाजूक** (ನಾಜೂಕ್) ವಿ. ಅರ. ಕೋಮಲ, ಸೂಕ್ಷ್ಮ, ಭಂಗುರ, ತಾಳಿಕೆಗೆ ಬರದ.

**–काम** (–ಕಾಮ) ಪು. ಹುಷಾರಿಯಿಂದ ಮಾಡಬೇಕಾದ ಕೆಲಸ.

**–जागा** (–ಜಾಗಾ) ಸ್ತ್ರೀ. ಶರೀರದ ಕೋಮಲ (ಗುಪ್ತ) ಭಾಗ, ಅವಯವ.

**–मसलत** (–ಮಸಲತ್) ಸ್ತ್ರೀ. ಅರ. ಸೂಕ್ಷ್ಮ ಸಂಕೇತದ (ಗುಪ್ತ) ಸಲಹೆ.

**नाजर** (ನಾಜರ್) ಪು. ಅರ. ಕೋರ್ಟಿನಲ್ಲಿಯ ಅಧಿಕಾರಿ ನಾಜರ್.

**नाट** (ನಾಟ್) ಪು. ಅಶುಭ ಮಾತು. ೨. ದುರ್ದೈವ. ೩. ಕುತ್ತು. ೪. ಕುಣಿದಾಟ. ೫. ಹಾನಿ, ಲುಕಸಾನು.

**नाटक** (ನಾಟಕ್) ನ. ಸಂ. ನಾಟಕ.

**–गृह** (–ಗೃಹ) ನಾಟಕ ಗೃಹ, ಥೇಟರ್, ರಂಗಮಂದಿರ.

**नाटकी** (ನಾಟಕೀ) ವಿ. ನಟನೆಯ, ತೋರಿಕೆಯ.

**नाटिका** (ನಾಟಿಕಾ) ಸ್ತ್ರೀ. ಸಣ್ಣ ನಾಟಕ.

**नाटच** (ನಾಟ್ಯ) ನ. ಸಂ. ನಾಟಕ ವಾಙ್ಮಯ, ನಾಟಕ, ಲೇಖನೆ ನಟಿಸುವ ವಿದ್ಯೆ, ನಟನೆ.

**–गीत** (–ಗೀತ್) ನ. ನಾಟಕದ ಹಾಡು.

**–छटा** (–ಛಟಾ) ಸ್ತ್ರೀ. ಸಂ. ಸ್ವಗತ ಭಾಷಣ. ೨. ಒಂದು ಸಾಹಿತ್ಯದ ಮಾದರಿ.

**–पूर्ण** (ಪೂರ್ಣ) ವಿ. ನಾಟಕದಲ್ಲಿ ಕಂಡಂತೆ ಇರುವ, ಸೋಜಿಗದ (ವಿಷಯ)

**–मंदिर** (–ಮಂದಿರ್) ನ. ಸಂ. ನಾಟಕ ಗೃಹ, ಥೇಟರ್.

**–शाला** (–ಶಾಲಾ) ಸ್ತ್ರೀ. ಸಂ. ನಾಟಕ ಗೃಹ.

**नाठाळ** (ನಾಠಾಳ್) ವಿ. ಅವಿನೀತ, ಅಡನಾಡಿ, ತಿಳುವಳಿಕೆಯಿಲ್ಲದವ. ೨. ದುಷ್ಟ.

**नाड** (ನಾಡ್) ಸ್ತ್ರೀ. ನಾಡಿ, ನರ. ೨. ಕಠಿಣಪ್ರಸಂಗ. ೩. ಮೋಸ.

**नाडणूक** (ನಾಡಣೂಕ್) ಸ್ತ್ರೀ. ಪೇಚಿನಲ್ಲಿ ಸಿಕ್ಕುವನನ್ನು ಸುಲಿಯುವಿಕೆ, ಪೀಡಿಸುವಿಕೆ.

**नाडणे** (ನಾಡಣೇ) ಕ್ರಿ. ಸ. ಠಕ್ಕಿಸು, ಇಕ್ಕಟ್ಟಿನಲ್ಲಿತರು.

**नाडा** (ನಾಡಾ) ಪು. ಹಿಂ. (ಇಜಾರಿನ, ಷರಾಯಿಯ) ನಾಡಿ, ಕಟ್ಟುದಾರ.

**नाडी** (ನಾಡೀ) ಸ್ತ್ರೀ. ಸಂ. ನಾಡಿ, ನರ, ರಕ್ತವಾಹಿನಿ. ೨. (ಇಜಾರಿನ) ಕಟ್ಟುದಾರ.

**–चक्र** (–ಚಕ್ರ) ನ. ರಕ್ತಾಭಿಸರಣದ ಅವಯವಗಳು.

**–परीक्षा** (–ಪರೀಕ್ಷಾ) ಸ್ತ್ರೀ. ನಾಡಿಯ ಪರೀಕ್ಷೆ.

**–ज्ञान** (–ಜ್ಞಾನ್) ನ. ನಾಡಿ ನೋಡುವ ಶಾಸ್ತ್ರ.

**नाडेकरी** (ನಾಡೇಕರೀ) ಪು. ಹಗ್ಗದ ಮೇಲೆ ಕುಣಿಯುವವ, ಡೊಂಬರ ಆಟ ಮಾಡುವವ.

**नाडेभोरीप** (ನಾಡೇಭೋರೀಪ್) ನ. ಡೊಂಬರ ಆಟ, ಹಗ್ಗದ ಮೇಲೆ ಕುಣಿತ.

**नाणावलेला** (ನಾಣಾವಲೇಲಾ) ವಿ. ಪ್ರಸಿದ್ಧನಾದವ, ಹೆಸರಾದವ.

**नाणेफेक** (ನಾಣೇಫೇಕ್) ಸ್ತ್ರೀ. ದುಡ್ಡು ತೂರುವಿಕೆ (ದೈವ ನೋಡಲಿಕ್ಕೆ.)

**नाणेवटी** (ನಾಣೇವಟೀ) ಪು. ಗುಜ. ದುಡ್ಡಿನ (ಬದಲಾವಣೆಯ) ವ್ಯವಹಾರ ಮಾಡುವವ.

**नाणे** (ನಾಣೇ) ನ. ನಾಣ್ಯ, ದುಡ್ಡು.

**नात** (ನಾತ್) ಸ್ತ್ರೀ. ಮೊಮ್ಮಗಳು.

**नातलग** (ನಾತಲಗ್) ಪು. ನೆಂಟ, ಸಂಬಂಧಿಕ, ಆಪ್ತ.

**नातवंड** (ನಾತ್‌ವಂಡ್) ನ. ಮೊಮ್ಮಕ್ಕಳು.

**नातसून** (ನಾತಸೂನ್) ಸ್ತ್ರೀ. ಮೊಮ್ಮಗನ ಹೆಂಡತಿ.

**नाताळ** (ನಾತಾಳ್) ಪು. ಪೋ. ಏಸುಕ್ರಿಸ್ತನ ಹುಟ್ಟು ದಿನ, ಕ್ರಿಸಮಸ್ ಹಬ್ಬ.

**नातू** (ನಾತೂ) ಪು. ಮೊಮ್ಮಗ.

**नाते, नातेगोते** (ನಾತೇ, ನಾತೇಗೋತೇ) ನ. ನೆಂಟತನ, ಶರೀರ ಸಂಬಂಧ.

**नाथ** (ನಾಥ್) ಪು. ಸಂ. ಸ್ವಾಮಿ, ದೊರೆ. ೨. ಗಂಡ, ಯಜಮಾನ.

**नाद** (ನಾದ್) ಪು. ಸಂ. ಶಬ್ದ–ಸಪ್ಪಳ. ೨. ದನಿ. ೩. ಹವ್ಯಾಸ, ನಲ್ಮೆಯ ಉದ್ಯೋಗ, ಪ್ರೀತಿಯ ಪರಿಪಾಠ. ೪. ಕೆಟ್ಟ ಚಟ-ಚಾಳಿ.

**–लुब्ध** (–ಲುಬ್ಧ) ವಿ. ಸಂ. (ಸಂಗೀತ) ರಸಿಕ.

**नादान** (ನಾದಾನ್) ವಿ. ಫಾ. ಅಜ್ಞಾನಿ, ತಿಳಿಗೇಡಿ. ೨. ಹೇಡಿ, ಕೈಲಾಗದವ.

**नादार** (ನಾದಾರ್) ವಿ. ಫಾ. ದರಿದ್ರ, ದಿವಾಳಿತೆಗೆದವ.

**नादारी** (ನಾದಾರೀ) ಸ್ತ್ರೀ. ಫಾ. ದಾರಿದ್ರ್ಯ, ಬಡತನ. ೨. (ಬಡವರಿಗೆ ಕೊಡುವ, ಬಡವಿದ್ಯಾರ್ಥಿಗೆ ಕೊಡುವ) ಸಹಾಯ, ರಿಯಾಯತಿ, 'ಫೀಮಾಫೀ'

**नादावणे** (ನಾದಾವಣೇ) ಕ್ರಿ. ಅ. ತದೇಕ ಧ್ಯಾನದಲ್ಲಿರು, ಮಗ್ನನಾಗಿರು. ೨. ಕೆಟ್ಟರೂಢಿ (ಅಭ್ಯಾಸ–ಹವ್ಯಾಸ–) ಯಿರು.

**नादिष्ट-नादी** (ನಾದಿಷ್ಟ–ನಾದೀ) ವಿ. ಒಂದೇಮಾತಿನ ಧ್ಯಾಸ ಹಿಡಿಯುವವ. ೨. ಹುಚ್ಚ.

**नाना** (ನಾನಾ) ವಿ. ಸಂ. ಬಗೆ ಬಗೆಯ.

**–प्रकारे** (ಪ್ರಕಾರೇ) ಕ್ರಿ. ವಿ. ಬಗೆಬಗೆಯಿಂದ.

**नानावटी** (ನಾನಾವಟೀ) ಪು. ಗುಜ. ಸರಾಫ, ಚಿನಿವಾಲ, ನಾಣ್ಯ-ಬದಲಾವಣೆ ಮಾಡುವವ.

**नानाविध** (ನಾನಾವಿಧ) ವಿ. ಸಂ. ಅನೇಕ ಬಗೆಯ.

**नानू** (ನಾನೂ) ನ. ಅನುಮಾನ, ಅಂಜಿಕೆ, ಅನಿರ್ಣಯ.

**नापत** (ನಾಪತ್) ಸ್ತ್ರೀ. ಹಿಂ. ಪ್ರತಿಷ್ಠೆ, ಪತ್ತು, ಇಲ್ಲದಾಗುವಿಕೆ, ಸಾಲ-ಉದ್ದರಿ ಸಿಗದಾಗುವಿಕೆ.

**नापसंत** (ನಾಪಸಂತ) ವಿ. ಫಾ. ಸೇರದ, ಬೇಡಾದ.

**नापास** (ನಾಪಾಸ್) ವಿ. ಮ+ಇಂ. ಪಾಸಾಗದ, ತೇರ್ಗಡೆ ಹೊಂದದ, 'ಫೇಲ್' ಆದ.

**नापित** (ನಾಪಿತ್) ಪು. ಸಂ. ನಾಪಿತ, ಕೆಲಸಿಗ, ಕ್ಷೌರ ಮಾಡುವವ, ಹಜಾಮ.

**नापीक** (ನಾಪೀಕ) ವಿ. ಬೆಳೆ ಬರದ.

**नाबाद** (ನಾಬಾದ) ವಿ. (ಕ್ರಿಕೆಟ್‌ನಲ್ಲಿ) "ಔಟ್" ಆಗದೆ ಹಿಂಬರುವ ಕೊನೆಯ ಆಟಗಾರ.

**नाभा** (ನಾಭಾ) ಪು. ಬಂಡಿಯ ಅಚ್ಚು.

**नाभि** (ನಾಭಿ) ಸ್ತ್ರೀ. ಸಂ. ಹೊಕ್ಕುಳ, ನಾಭಿ.

**–कमल** (–ಕಮಲ) ನ. ಅಂದವಾದ ಹೊಕ್ಕುಳ.

**नाम** (ನಾಮ್) ನ. ಸಂ. ಹೆಸರು. ೨. (ವ್ಯಾಕ.) ನಾಮಪದ, ಹಣೆಯ ಮೇಲಿನ ಗಂಧದ ಚಿನ್ಹೆ, ನಾಮ.

**–करणे** (–ಕರಣ) ನ. ಸಂ. ಕೂಸಿಗೆ ಹೆಸರಿಡುವ ಸಂಸ್ಕಾರ.

**नामंजूर** (ನಾಮಂಜೂರ) ವಿ. ಫಾ+ಅರ. ಮಂಜೂರಾಗದ, ಮನ್ನಣೆ ದೊರೆಯದ.

**–करणे** (ಕರಣೇ) ಕ್ರಿ. ಸ. ಮನ್ನಣೆ ಕೊಡದಿರು, ರದ್ದುಗೊಳಿಸು.

**नामदार** (ನಾಮ್‌ದಾರ್) ಪು. ಫಾ. ಕೀರ್ತಿಯುತ, ಮಂತ್ರಿಯ ಬಿರುದು.

**नामधातु** (ನಾಮಧಾತು) ಪು. ಸಂ. (ವ್ಯಾ.) ಧಾತು ಸಾಧಿತ ನಾಮದಲ್ಲಿಯ ಕ್ರಿಯಾಪದ.

**नामधारी** ( ನಾಮಧಾರೀ ) ವಿ. ಹೆಸರಿಗೆ ಮಾತ್ರ ಇರುವ. ೨. ಅಧಿಕಾರವುಳ್ಳ.

**नामधेय** (ನಾಮಧೇಯ) ನ. ಸಂ. ಹೆಸರು.

**नामनिर्देश** ( ನಾಮನಿರ್ದೇಶ ) ಪು. ಸಂ. ಹೆಸರಿನ ಉಲ್ಲೇಖ.

**नामरूप** (ನಾಮರೂಪ) ನ. ಹೆಸರು ಮತ್ತು ರೂಪ, ಸೊಬಗು, ಆಕೃತಿ ಮಂ.

**नामरूपातीत** (ನಾಮರೂಪಾತೀತ್) ವಿ. ಸಂ. ನಾಮ, ರೂಪ ಇಂಥ ವಿಚಾರಗಳ ಹೊರಗಿನ, ಅಗಾಧ.

**नामर्द** (ನಾಮರ್ದ) ವಿ. ಫಾ. ಪೌರುಷವಿಲ್ಲದ, ಷಂಢ.

**नामशेष** ( ನಾಮಶೇಷ್ ) ವಿ. ಸಂ. (ನಷ್ಟವಾಗಿ) ಹೆಸರಿಗೆ ಮಾತ್ರ ಉಳಿದ, ನಾಶಹೊಂದಿದ.

**नामसंकीर्तन** (ನಾಮಸಂಕೀರ್ತನ) ನ. ಸಂ. ಭಜನೆ, ಹರಿಕಥೆ.

**नामस्मरण** (ನಾಮಸ್ಮರಣ) ನ. ಸಂ. ನಾಮಸ್ಮರಣೆ, ಜಪ.

**नामांकित** (ನಾಮಾಂಕಿತ) ವಿ. ಸಂ. ಹೆಸರಾದ.

**नामाभिधान** (ನಾಮಾಭಿಧಾನ್) ನ. ಸಂ. ಹೆಸರು, ಇಟ್ಟ ಹೆಸರು.

**नामावली** (ನಾಮಾವಲೀ) ಸ್ತ್ರೀ. ಸಂ. ಹೆಸರುಗಳ ಪಟ್ಟಿ, ಹೆಸರುಗಳು.

**नामी** (ನಾಮೀ) ವಿ. ಫಾ. ಒಳ್ಳೆಯ, ಹೆಸರಾದ.

**नामुष्की** (ನಾಮುಷ್ಕೀ) ಸ್ತ್ರೀ. ಅರ. ಅಪಮಾನ, ನಾಚಿಕೆ.

**नामोहरम** (ನಾಮೋಹರಮ್) ವಿ. ಅರ. ಸೋತ, ಅಪಮಾನಿತ, ದಣಿದ.

**नायक** (ನಾಯಕ) ಪು. ಸಂ. ನಾಯಕ, ಮುಖಂಡ.

**नायकीण** (ನಾಯಕೀಣ್) ಸ್ತ್ರೀ. ಕುಣಿಯುವಾಕೆ, ನರ್ತಕಿ, ವೇಶ್ಯೆ, ಸೂಳೆ.

**नायटा** (ನಾಯಟಾ) ಪು. ತದ್ದು, ದದ್ರು, ಗಜಕರ್ಣ.

**नायनाट** (ನಾಯನಾಟ್) ಪು. ವಿನಾಶ, ನಾಶ.

**नायब** (ನಾಯಬ್) ವಿ. ಅರ. ಉಪಪ್ರಮುಖ, ಸರದಾರ.

**नायिका** (ನಾಯಿಕಾ) ಸ್ತ್ರೀ. ಸಂ. (ನಾಟಕದ, ಕಥೆಯ) ಮುಖ್ಯ ಪಾತ್ರವಿದ್ದ ಹೆಂಗಸು, ನಾಯಿಕೆ. ೨. ಸುಂದರಿ.

**नार, नारी** (ನಾರ್, ನಾರೀ) ಸ್ತ್ರೀ. ನಾರಿ, ಹೆಂಗಸು.

**नारकत** (ನಾರಕತ್) ಸ್ತ್ರೀ. ಹಿಂ. ಡೊಂಕು ಕತ್ತಿ, ಚೂರಿ.

**नारळ** (ನಾರಳ್) ಪು. ತೆಂಗಿನಕಾಯಿ.

**–हाती देणे** (–ಹಾತೀ ದೇಣೇ) ಕ್ರಿ. ಸ. ಕೆಲಸದ ಮೇಲಿಂದ ತೆಗೆದುಹಾಕು.

**–फोडणे** (–ಫೋಡಣೇ) ಕ್ರಿ. ಸ. ಪ್ರಾರಂಭ ಮಾಡು.

**नारळी पौर्णिमा** (ನಾರಳೀ ಪೌರ್ಣಿಮಾ) ಸ್ತ್ರೀ. ಶ್ರಾವಣದ ಹುಣ್ಣಿವೆ.

**नारा** (ನಾರಾ) ಪು. ಹೆಣ್ಣಿನ ಸೋಗುಹಾಕಿ ಕುಣಿಯುವ ಹುಡುಗ.

**नाराज** (ನಾರಾಜ್) ವಿ. ಅರ. ಸಿಟ್ಟಿಗೇರಿದ, ಅಸಮಾಧಾನಗೊಂಡ.

**नाराजी** (ನಾರಾಜೀ) ಸ್ತ್ರೀ. ಅರ. ಅಸಮಾಧಾನ. ೨. ಕೋಪ, ಬೇಜಾರ, ಜಿಗುಪ್ಸೆ.

**नारिकेल** (ನಾರಿಕೇಲ್) ಪು. ಸಂ. ತೆಂಗಿನಕಾಯಿ.

**नारिंग** (ನಾರಿಂಗ್) ನ. ಕಿತ್ತಳೆಹಣ್ಣು.

**नारिंगी** (ನಾರಿಂಗೀ) ವಿ. ಕಿತ್ತಳೆ ಬಣ್ಣದ, ಕೆಂಪು, ಹಳದಿ ಮಿಶ್ರ ಬಣ್ಣದ

**नारी** (ನಾರೀ) ಸ್ತ್ರೀ ಸಂ. ಹೆಂಗಸು.

**नारू** (ನಾರೂ) ಪು. ಹಿಂ. ನಾರು, ಕಾಲಿನಲ್ಲಿ ಆಗುವ (ಉದ್ದನ್ನ ಹುಳದ) ಬೇನೆ.

**नाल** (ನಾಲ್) ಪು. ಅರ. ಕುದುರೆಯ ಕಾಲಿನ ಕಬ್ಬಿಣದ ಪಟ್ಟಿ, ನಾಲು.

**–करी** (–ಕರೀ) ಸ್ತ್ರೀ. ಕುದುರೆಗೆ ನಾಲು ಬಡಿಯುವವ, ನಾಲುಗಾರ.

**नालकी** (ನಾಲಕೀ) ಸ್ತ್ರೀ. ಪಲ್ಲಕ್ಕಿ.

**नालबंद** (ನಾಲಬಂದ್) ಪು. ಅರ. + ಫಾ. ನಾಲು ಬಡಿಯುವವ. ೨. ಕಪ್ಪ, ಕಾಣಿಕೆ.

**नालबंदी** (ನಾಲ್‌ಬಂದೀ) ಸ್ತ್ರೀ. ಕುದುರೆಗೆ ನಾಲು ಬಡಿಯುವಿಕೆ.

**नालस्ती** (ನಾಲಸ್ತೀ) ಸ್ತ್ರೀ. ಫಾ (ನಾಲಿಶ್) ಅಪಮಾನ, ದೂಷಣೆ.

**नाला** (ನಾಲಾ) ಪು. ಹಿಂ. ಹಳ್ಳ, ಹರಿಯುವ ನೀರು, ಚರಂಡಿ.

**नालायक** (ನಾಲಾಯಕ್) ವಿ. ಫಾ. ಅರ. ಅಪಾತ್ರ.

**नाली** (ನಾಲೀ) ಸ್ತ್ರೀ. ಸಂ. ಕೊಳವೆ, ಕೊಳಾಯಿ. ೨. ರಕ್ತವಾಹಿನಿ.

**नाव** (ನಾವ್) ಸ್ತ್ರೀ. ನೌಕೆ, ದೋಣಿ. ೨. **नांव** ನೋ.
**–करी** (–ಕರೀ) ದೋಣಿಯನ್ನು ನಡೆಸುವವ, ಅಂಬಿಗ.

**नावड** (ನಾವಡ್) ಸ್ತ್ರೀ. ಅಪ್ರೀತಿ, ಸೇರದಿರುವಿಕೆ.

**नावडणे** (ನಾವಡಣೇ) ಕ್ರಿ.ಸ. ಸೇರದಿರು, ಸೇರದಾಗು.

**नावडता** (ನಾವಡತಾ) ವಿ. ಸೇರದ, ಅಪ್ರಿಯ.

**नावाडी** (ನಾವಾಡೀ) ಪು. ಅಂಬಿಗ.

**नाविक** (ನಾವಿಕ) ವಿ. ಸಂ. ಅಂಬಿಗ.

**नावेकरी** (ನಾವೇಕರೀ) ಪು. ಅಂಬಿಗ.

**नाव्य** (ನಾವ್ಯ) ವಿ. ಸಂ. ಹಡಗ ನಡೆಯುವಷ್ಟು ದೊಡ್ಡದಾದ (ನದಿ).

**नाश** (ನಾಶ) ಪು. ಸಂ. ನಾಶ, ವಿನಾಶ.

**नाशक** (ನಾಶಕ) ವಿ. ಸಂ. ನಾಶಗೊಳಿಸುವ. ಪು. ನಾಶಮಾಡುವವ.

**नाशवंत** (ನಾಶವಂತ್) ವಿ. ಸಂ. ನಾಶಹೊಂದುವ, ನಶ್ವರ.

**नाशह** (ನಾಶಹ್) ಪು. (ಚದುರಂಗದಲ್ಲಿ) ರಾಜನಿಗೆ ಬಿದ್ದ ಶಹವನ್ನು ತಪ್ಪಿಸುವಿಕೆ.

**नाशिनी** (ನಾಶಿನೀ) ಸ್ತ್ರೀ. ಸಂ. ನಾಶಗೊಳಿಸುವವಳು

**नास** (ನಾಸ್) ಪು. ನಾಶ, ಹಾನಿ.
**–घूस** (–ಘೂಸ್) ಸ್ತ್ರೀ. ನಾಶ, ಹಾಳಾಗುವಿಕೆ, ಹಾಳುಮಾಡುವಿಕೆ.

**नासणे** (ನಾಸಣೇ) ಕ್ರಿ. ಅ. ಕೆಡು, ಕೆಟ್ಟುಹೋಗು.

**नासवणी** (ನಾಸವಣೀ) ನ. ಕೆಟ್ಟನೀರು. ೨. ಬೆಳೆಯನ್ನು ಕೆಡಿಸುವ ಮಳೆ.

**नासा** (ನಾಸಾ) ಸ್ತ್ರೀ. ಸಂ. ಮೂಗು ೨. ಬಾಗಿಲದ ಮೇಲ್ಭಾಗದ ಹಲಗೆ.

**नासाड–डी** (ನಾಸಾಡ್–ಡೀ) ಸ್ತ್ರೀ. ಹಾಳು, ಅಪವ್ಯಯ, ವಿನಾಶ.

**नासापुट** (ನಾಸಾಪುಟ್) ನ. ಸಂ. ಮೂಗಿನ ಸೊರಳೆ

**नासावणे** (ನಾಸಾವಣೇ) ಕ್ರಿ. ಅ. ಹಲಿವುಳಿ, ಗರ್ಭಪಾತವಾಗು.

**नासावंश** (ನಾಸಾವಂಶ) ಪು. ಮೂಗಿನ ಆಕೃತಿ, ಎಲುಬು.

**नासिका** (ನಾಸಿಕಾ) ಸ್ತ್ರೀ. ಸಂ. ಮೂಗು.

**नास्ता** (ನಾಸ್ತಾ) ಪು. ಫಾ. ಫರಾಳ, ಅಲ್ಪಾಹಾರ.

**नास्तिक** (ನಾಸ್ತಿಕ) ವಿ. ಸಂ. ದೇವರನ್ನು ನಂಬದವ.
**–पणा** (ಪಣಾ) ಪು. ನಾಸ್ತಿಕತೆ,
**–वाद** (ವಾದ್) ಪು. ನಾಸ್ತಿಕತೆ, ಅನಾಚಾರ.
**–वादी** (ವಾದೀ) ವಿ. ನಾಸ್ತಿಕ.

**नास्तिपक्ष** (ನಾಸ್ತಿಪಕ್ಷ) ಪು. ವಿರೋಧಕರ, ಅಲ್ಲಗಳೆಯುವವರ ಪಕ್ಷ.

**नाहक** (ನಾಹಕ್) ವಿ. ಅರ. ಅನ್ಯಾಯದ, ಅನಾವಶ್ಯಕ.

**नाहणी** (ನಾಹಣೀ) ಸ್ತ್ರೀ. ಸ್ನಾನಗೃಹ, ಬಚ್ಚಲಮನೆ.

**नाहणे** (ನಾಹಣೇ) ಕ್ರಿ. ಸ. ಜಳಕಮಾಡು, ಸುರಿದುಕೊ, ಎರೆದುಕೊ, ಅಭ್ಯಂಗಸ್ನಾನಮಾಡು.

**नाहणोली** (ನಾಹಣೋಲಿ) ಸ್ತ್ರೀ. ಮೊದಲನೆಯ ಸಾರಿ ಮುಟ್ಟಾದ ಹುಡಿಗೆ, ಋತುಪ್ರಾಪ್ತ ಕನ್ಯೆ.

**नाहतीधुती** (ನಾಹತೀಧುತೀ) ವಿ. ಪ್ರಾಯಕ್ಕೆ ಬಂದ ಹುಡಿಗೆ, ಬೆಳೆದ ಹುಡಿಗೆ.

**नाही** (ನಾಹೀ) ಅವ್ಯಯ, ಇಲ್ಲ.
**नाहीसा होणे** (ನಾಹೀಸಾ ಹೋಣೆ) ಕ್ರಿ. ಅ. ಇಲ್ಲದಾಗು, ಮಾಯವಾಗು.
**–तरी** (–ತರೀ) ಅವ್ಯ. ಇಲ್ಲವೆಂದರೂ.
**–तेच** (–ತೇಚ್) ವಿ. ತೀರ ಹೊಸದಾದ, ವಿಚಿತ್ರವಾದ (ಮಾತು.)
**–पेक्षा** (–ಪೇಕ್ಷಾ) ಅವ್ಯ. ಇಲ್ಲವಾದರೆ.

**नाळ** (ನಾಳ್) ಪು. ಹೊಸದಾಗಿ ಹುಟ್ಟಿದ ಕೂಸಿನ ಹೊಕ್ಕುಳಬಳ್ಳಿ.

**नांगर** (ನಾಂಗರ್) ಪು. ನೇಗಿಲ. ೨. ಹಡಗದ ಸರಪಣಿ, ಲಂಗುರ.

**नांगरकी** (ನಾಂಗಾರಕೀ) ಸ್ತ್ರೀ. ಬೇಸಾಯ, ಕೃಷಿ.

**नांगरणी** (ನಾಂಗರಣೀ) ಸ್ತ್ರೀ. (ಹೊಲದ) ಸಾಗುವಳಿ, ಹರಗುವಿಕೆ.

**नांगरमोथा** (ನಾಂಗರ್‌ಮೋಥಾ) ಪು. ಸುವಾಸನೆಯ ಹುಲ್ಲು.

**नांगरवट** (ನಾಂಗರ್‌ವಟ್) ವಿ. ಹರಗಿದ, ಸಾಗುವಳಿ ಮಾಡಿದ.

**नांगऱ्या** (ನಾಂಗರ್ಯಾ) ಪು. ಹೊಲ ಹರಗುವವ, ಬೇಸಾಯುಗಾರ.

**नांगी** (ನಾಂಗೀ) ಸ್ತ್ರೀ. ಕೊಂಡೆ (ಚೇಳಿನ)
**–मारणे** (–ಮಾರಣೇ) ಕ್ರಿ. ಸಂ. ಕಚ್ಚು ಪೀಡಿಸು.
**–टाकणे** (–ಟಾಕಣೇ) ಕ್ರಿ. ಅ. ಸೋಲು.

**नांदणूक** (ನಾಂದಣೂಕ್) ಸ್ತ್ರೀ. ಸುಖದಿಂದ ಬಾಳುವಿಕೆ.

**नांदणे** (ನಾಂದಣೇ) ಕ್ರಿ. ಅ. ಸುಖದಿಂದ (ಅತ್ತೆಯ ಮನೆಯಲ್ಲಿ ಬಾಳು)

**नांदतेघर** (ನಾಂದತೇಘರ್) ನ. ಸುಖದ ಪ್ರಪಂಚ, ಸೌಖ್ಯದಿಂದಿರುವ ಕುಟುಂಬ.

**नांदी** (ನಾಂದೀ) ಸ್ತ್ರೀ. ಸಂ. (ನಾಟಕ) ಪ್ರಾರಂಭದ ಗೀತ, ಪದ ೨. (ಲಗ್ನ ಮುಂಜಿವೆಯಲ್ಲಿ) (ಗಂಡ ಹೆಂಡತಿಯರ) ಪುಣ್ಯಾಹವಾಚನ.

**नांव** (ನಾಂವ್) ನ. ಹೆಸರು. ಅಭಿಧಾನ. ೨. ಕೀರ್ತಿ.
**–चे नांव न घेणे** (–ಚೇ ನಾವ್ ನ ಘೇಣೇ) ಕ್ರಿ. ಸ. ಹೆಸರು ಅನ್ನದಿರು, ಸಂಬಂಧವನ್ನು ಮುಗಿಸು.
**नावावर** (ನಾವಾವರ್) ಅವ್ಯಯ ಹೆಸರಿನ ಮೇಲೆ ಖಾತೆಯ ಮೇಲೆ, ನೆಪದಿಂದ.
**नावावर पाणी घालणे** (ನಾವಾವರ್ ಪಾಣೀ ಘಾಲಣೇ) ಕ್ರಿ. ಅ. ಹೆಸರು ಕೆಡಿಸು.
**–ठेवणे** (–ಠೇವಣೇ) ಕ್ರಿ. ಸ. ಹಳಿ, ದೂಷಿಸು.
**–सोडणे** (–ಸೋಡಣೇ) ಕ್ರಿ. ಸ. ಸಂಬಂಧ ಮುಗಿಸು, ದ್ವೇಷ ಮಾಡು.
**ज्याचे नावते** (ಜ್ಯಾಚೇ ನಾವತೇ) ಅವ್ಯಯ. ಏನೂ ಇಲ್ಲ.
**च्या नावाने पूज्य** (ಜ್ಯಾ ನಾವಾನೇ ಪೂಜ್ಯ) ನಾಣ್ಣುಡಿ. (ಒಂದು ಗುಣ) ಅಪೂಟ ಇಲ್ಲದಿರುವಿಕೆ.
**–मिळवणे** (–ಮಿಳವಣೇ) ಕ್ರಿ. ಅ. ಹೆಸರಾಗು, ಕೀರ್ತಿ ಪಡೆ.
**–निशाण** (ನಿಶಾಣ) ನ. ಗುರುತು, ಚಿನ್ಹ.
**नावनिशी** (ನಾವನಿಶೀ) ಸ್ತ್ರೀ. ಸಾಮಾನು ಹೆಸರುಗಳ ಪಟ್ಟಿ.
**नावनिशीवार** (ನಾಂವ್‌ನಿಶೀವಾರ್) ಅವ್ಯಯ. ಹೆಸರುಗಳಂತೆ, ಹೆಸರುಗಳ ಕ್ರಮದಿಂದ.
**–बुडव्या** (–ಬುಡವ್ಯಾ) ಪು. ಅಪಕೀರ್ತಿ ತರುವವ.
**–रूप** (–ರೂಪ್) ನ. ಸಂ. ಹೆಸರು, ಕೀರ್ತಿ.
**नावा रूपास येणे** (ನಾವಾ ರೂಪಾಸ್ ಯೇಣೇ) ಕ್ರಿ. ಅ. ಪ್ರಸಿದ್ಧನಾಗು.
**–नावां रूपासआणणे** (ನಾವಾ ರೂಪಾಸ ಆಣಣೇ) ಕ್ರಿ. ಸ. ಕೀರ್ತಿ ಬರುವಂತೆಮಾಡು, ಊರ್ಜಿತಾವಸ್ಥೆಗೆ ತರು.
**–लौकिक** (–ಲೌಕಿಕ್) ನ. ಕೀರ್ತಿ, ಲೋಕ ಪ್ರಿಯತೆ.

**नावाजणी** (ನಾವಾಜಣೀ) ಸ್ತ್ರೀ. ಸ್ತುತಿ, ಸ್ತವನ.

**नावाजणे** (ನಾವಾಜಣೇ) ಕ್ರಿ. ಸ. ಸ್ತುತಿಮಾಡು.

**नावानिराळा** (ನಾವಾನಿರಾಳಾ) ವಿ. ದೋಷಮುಕ್ತನಾದವ, ಯಾರೂ ಹೆಸರಿಡದ.

**नांवे** (ನಾಂವೇ) ಅವ್ಯಯ. ಹೆಸರಿನಲ್ಲಿ, ಹೆಸರಿನಿಂದ, ೨. ಖಾತೆಗೆ (ಜಮಾ ಅಥವಾ ಖರ್ಚು.)

**नि** (ನಿ) ಅವ್ಯಯ, **'आणि'** ಇದರ ಲಘುರೂಪ.

**निकट** (ನಿಕಟ) ಕ್ರಿ. ವಿ. ಸಂ. ಹತ್ತಿರ, ಬದಿಗೆ, ಬಳಿಗೆ ಸಮೀಪ.
**–वर्ती** (ವರ್ತಿ) ವಿ. ಸಂ. ಸಮೀಪದಲ್ಲಿರುವ, ಬಳಿಯಲ್ಲಿಯ.

**निकड** (ನಿಕಡ್) ಸ್ತ್ರೀ. ಆವಶ್ಯಕತೆ. ೨. ಬಹಳ ಬೇಕಾಗಿರುವಿಕೆ. ೩. ಅಡಚಣಿ, ಹರಕತ್ತು, ಕೊರತೆ.

**निकर** (ನಿಕರ್) ಪು. ಆವೇಶ, ಹುರುಪು.

**निकष** (ನಿಕಷ್) ಪು. ಒರೆಗಲ್ಲು, ಸರಿಹೊಂದಿಸಿ ನೋಡುವಿಕೆ.

**निकस** (ನಿಕಸ್) ವಿ. ಸತ್ವವಿಲ್ಲದ, ನಿಃಸತ್ವ.

**निका** (ನಿಕಾ) ಪು. ಅರ. (ಮುಸಲ್ಮಾನರ) ಮದುವೆ.

**निकाढा** (ನಿಕಾಢಾ) ಪು. ಔಷಧಿ ವನಸ್ಪತಿಗಳನ್ನು ಎರಡನೆಯ ಸಲ ಕುದಿಸಿ ತೆಗೆದ ಕಷಾಯ.

**निकामी** (ನಿಕಾಮೀ) ವಿ. ಕೆಲಸಕ್ಕೆ ಬಾರದ, ವ್ಯರ್ಥ.

**निकाल** (ನಿಕಾಲ್) ಪು. ನಿರ್ಣಯ. ಪರೀಕ್ಷೆಯ ಪರಿಣಾಮ, ಪರೀಕ್ಷಾಫಲ.
**–लागणे** (ಲಾಗಣೇ) ಕ್ರಿ. ಅ. ನಾಶಹೊಂದು, ತೀರು, ಹಾಳಾಗು.
**निकालात काढणे** (ನಿಕಾಲಾತ್ ಕಾಢಣೇ) ಕ್ರಿ. ಸ. ಬಗೆಹರಿಸು, ನಿರ್ಣಯಿಸು.
**–पत्रक** (–ಪತ್ರಕ್) ನ. ಪರೀಕ್ಷಾಫಲದ ಪತ್ರಕ ರಿಜಲ್ಟ್ ಶೀಟ್.
**–हुकूम** (–ಹುಕೂಮ್) ಪು. ಮ+ಅರ. ಕೋರ್ಟಿನ ತೀರ್ಪು.

**निकाली** (ನಿಕಾಲೀ) ವಿ. ನಿಶ್ಚಿತ, ಖಂಡಿತ, ನಿರ್ಣಾಯಕ.

**निकाळजी** (ನಿಕಾಳಜೀ) ವಿ. ಚಿಂತೆಯಿಲ್ಲದ, ಯಾವ ಚಿಂತೆಯೂ ಇಲ್ಲದ, ಉಪೇಕ್ಷೆಮಾಡುವವ, ಮನಸ್ಸಿನ ಮೇಲೆ ತೆಗೆದುಕೊಳ್ಳದವ.

**निकुंज** (ನಿಕುಂಜ) ಪು. ದಟ್ಟವಾಗಿ ಬೆಳೆದ ಗಿಡಗಂಟಿ, ಹೂವಿನ ಗಿಡಗಳು.

**निकृष्ट** (ನಿಕೃಷ್ಟ) ವಿ. ಸಂ. ಕೀಳು ಬಗೆಯ.

**निके** (ನಿಕೇ) ವಿ. ಸ್ವಚ್ಛವಾದ, ಹಸನಾದ.

**निकेतन** (ನಿಕೇತನ) ನ. ಸಂ. ನಿಲಯ, ಮನೆ.

**निकोप** (ನಿಕೋಪ್) ವಿ. ಆರೋಗ್ಯವುಳ್ಳ.

**निखर्व** (ನಿಖರ್ವ) ವಿ. ಹತ್ತು ಸಾವಿರ ಕೋಟಿ (ಸಂಖ್ಯೆ).

**निखळ** (ನಿಖಳ್) ವಿ. ಶುದ್ಧ, ಪೂರ್ಣ.

**निखळणे** (ನಿಕಳಣೇ) ಕ್ರಿ. ಅ. ಬಿಚ್ಚಿಬೀಳು, ಹೊರಗೆ ಬರು.

**निखारा** (ನಿಖಾರಾ) ಪು. ಬೆಂಕಿಯ ಕೆಂಡ.

**निखालस** (ನಿಖಾಲಸ್) ವಿ. ಅರ! (ಖಾಲಿಸ್) ಒಳ್ಳೆಯ ಪ್ರಾಮಾಣಿಕ. ಕ್ರಿ. ವಿ. ಪ್ರಾಮಾಣಿಕ ತನದಿಂದ.

**निखिल** (ನಿಖಿಲ) ವಿ. ಸಂ. ಸರ್ವ, ಎಲ್ಲ.

**निगड** (ನಿಗಡ್) ಪು. ಸರಪಣಿ, ಬಂಧನ.

**निगडित** (ನಿಗಡಿತ್) ವಿ. ಕಟ್ಟಿದ, ಸಂಬಂಧಪಟ್ಟ.

**निगम** (ನಿಗಮ್) ಪು. ಸಂ. ವೇದ. ೨. ಸಂಸ್ಥೆ. ೩. ವಿಷಯ. ೪. ನಿಧಿ.

**निगमन** (ನಿಗಮನ) ನ. ಸಂ. ಹೊರಬೀಳುವಿಕೆ. ೨. ಸಾರ. ೩. ತರ್ಕ.

**निगरगट्ट** (ನಿಗರ್‌ಗಟ್ಟ) ವಿ. ಮನಸ್ಸನ್ನು ಕಲ್ಲಾಗಿ ಮಾಡಿದ. ೨. ನಾಚಿಕೆ ಇಲ್ಲದ. ೩. ನಿಂದೆಯನ್ನು ಲೆಕ್ಕಿಸದ.

**निगरण** (ನಿಗರಣ) ನ. ಸಂ. ನುಂಗುವಿಕೆ.

**निगर्वी** (ನಿಗರ್ವೀ) ವಿ. ಸಂ. ಗರ್ವವಿಲ್ಲದ, ಅಹಂಕಾರ ವಿಲ್ಲದ.

**निगा** (ನಿಗಾ) ಸ್ತ್ರೀ. ಫಾ. ದೃಷ್ಟಿ. ೨. ಜೋಕೆ. ೩. ಜೋಪಾನ.

**निग्रह** (ನಿಗ್ರಹ) ಪು. ಸಂ. ತಡೆ, ಆತಂಕ. ೨. ದೃಢತೆ, ದೃಢ ನಿಶ್ಚಯ, ನಿಯಂತ್ರಣ.

**निग्रहानुग्रह** (ನಿಗ್ರಹಾನುಗ್ರಹ) ಪು. ಶಿಕ್ಷೆ ಮಾಡುವ ಅಥವಾ ಬಹುಮಾನ ಮಾಡುವ (ಶಕ್ತಿ).

**निग्रही** (ನಿಗ್ರಹೀ) ವಿ. ದೃಢ ನಿಶ್ಚಯವುಳ್ಳ.

**निघंटु** (ನಿಘಂಟು) ಪು. ಸಂ. ವೇದದ ಭಾಷೆಯ (ಸಂಸ್ಕೃತದ) ವ್ಯುತ್ಪತ್ತಿ ಕೋಶ, ನಿಘಂಟು.

**निघणे** (ನಿಘಣೇ) ಕ್ರಿ. ಅ. ಹೊರಡು, ಹೊರಬೀಳು, ಕಳಚಿಬೀಳು, ಇಳಿದುಬೀಳು.

**निघ्न** (ನಿಘ್ನ) ವಿ. ಆಶ್ರಿತ, ಅವಲಂಬಿಸಿದ.

**निचरणे** (ನಿಚರಣೇ) ಕ್ರಿ. ಅ. ಹನಿಹನಿಯಾಗಿ ಹೊರ ಬರು, ಸೋರು; ಬಸಿ.

**निचरा** (ನಿಚರಾ) ಪು. ಹನಿಹನಿಯಾಗಿ ಬಸಿಯುವಿಕೆ.

**निचल** (ನಿಚಲ್) ವಿ. ನಿಶ್ಚಲ, ಸ್ಥಿರ, ಅಗಳಾಡದ.

**निचिंत** (ನಿಚಿಂತ್) ವಿ. ಚಿಂತೆಯಿಲ್ಲದ, ಯೋಚನೆ ಇಲ್ಲದ.

**निचेत** (ನಿಚೇತ್) ವಿ. ನಿಃಚೇಷ್ಟ, ಅಗಳಾಡದ ೨. ಅರಿವು ಇಲ್ಲದ, ಪ್ರಾಣವಿಲ್ಲದ.

**निचेष्ट** (ನಿಚೇಷ್ಟ) ವಿ. ಅಗಳಾಡದ, ಪ್ರಾಣವಿಲ್ಲದ.

**निज** (ನಿಜ) ವಿ. ಸಂ. ತನ್ನ, ಸ್ವಂತದ, ಸ್ವೀಯ.

**निजणे** (ನಿಜಣೇ) ಕ್ರಿ.ಅ. ಮಲಗು, ನಿದ್ರೆ ಮಾಡು.

**निजधाम** (ನಿಜಧಾಮ್) ನ. ಸಂ. ತನ್ನ ಮನೆ, ಸ್ವಗೃಹ. ೨. ಸ್ವರ್ಗ.

**निजधामास जाणे** (ನಿಜಧಾಮಾಸ್ ಜಾಣೇ) ಕ್ರಿ. ಅ. ಮರಣಹೊಂದು.

**निजध्यास** (ನಿಜಧ್ಯಾಸ್) ಪು. ಸಂ. ಸತತವಾಗಿ ಯೋಚಿಸುವಿಕೆ.

**निजविणे** (ನಿಜವಿಣೇ) ಕ್ರಿ. ಸ. ಮಲಗಿಸು, ಅಡ್ಡ ಹಾಕು.

**निजसुरा** (ನಿಜಸುರಾ) ವಿ. ನಿದ್ದೆಗಣ್ಣಿನಲ್ಲಿದ್ದ.

**निजानिज** (ನಿಜಾನೀಜ್) ಸ್ತ್ರೀ. ಎಲ್ಲರೂ ಮಲಗಿ ಕೊಂಡಿರುವಿಕೆ.

**निझर** (ನಿಝರ್) ಪು. ಹನಿಹನಿಯಾಗಿ ಬೀಳುವಿಕೆ, ಹೊರಸೂಸುವಿಕೆ.

**निर्झर** (ನಿರ್ಝರ) ಪು. ಸೆಲೆ, ಬುಗ್ಗೆ, ಸ್ರೋತ.

**निझरणे** (ನಿಝರಣೇ) ಕ್ರಿ. ಅ. ಹೊರಸೂಸು, ಹನಿ ಹನಿಯಾಗಿ ಬೀಳು.

**निठवे** (ನಿಠವೇ) ಸ್ತ್ರೀ. ಅರ್ಧಸೇರಿನ ಅಳತೆ.

**निडर** (ನಿಡರ್) ವಿ. ಅಂಜದ, ಶೂರ.

**निढल** (ನಿಢಳ್) ನ. ಹುಬ್ಬು, ಹಣೆ. ೨. ದುರದೃಷ್ಟ.

**निढळाच्या घामाचा** (ನಿಢಳಾಚಾ ಘಾಮಾಚಾ) ಕಷ್ಟದಿಂದ ದೊರಕಿಸಿದ ವಿ. ಸ್ವಂತದ.

**निर्णय** (ನಿರ್ಣಯ) ಪು. ಸಂ. ನಿರ್ಣಯ, ತೀರ್ಪು, ತೀರ್ಮಾನ.

**निर्णायक** (ನಿರ್ಣಾಯಕ) ವಿ. ಕೊನೆಯ, ಖಂಡಿತ, ನಿಶ್ಚಿತ.

**नित** (ನಿತ) ಕ್ರಿ. ವಿ. ನಿತ್ಯವಾಗಿ, ಪ್ರತಿನಿತ್ಯ.

**नितकोर** (ನಿತಕೋರ್) ಪು. ರೊಟ್ಟಿಯ ತುಣುಕು.

**नितंब** (ನಿತಂಬ) ಪು. ಅಂಡು, ಜಘನ, ಪೃಷ್ಠಭಾಗ.

**नितंबिनी** (ನಿತಂಬಿನೀ) ಸ್ತ್ರೀ. ಸಂ. ದೊಡ್ಡ ಪೃಷ್ಠದ ಹೆಂಗಸು, ಸುಂದರಿ.

**नितराम** (ನಿತರಾಂ) ಕ್ರಿ. ವಿ. ಸಂ. ಬಹಳ, ಬೇಕಾದಷ್ಟು.

**नितळ** (ನಿತಳ್) ವಿ. ಶುದ್ಧ, ತಿಳಿಯಾದ.

**नितळणा** (ನಿತಳಣಾ) ಪು. ಚಿನಿವಾಲನು ಒಪ್ಪ ಹಾಕುವುದಕ್ಕೆ ಉಪಯೋಗಿಸುವ ಉಪಕರಣ.

**नितान्त** (ನಿತಾಂತ್) ಕ್ರಿ. ವಿ. ಬಹಳಷ್ಟು, ಸಾಕ ಷ್ಟಾದ, ಅತಿಶಯ.

**नित्य** (ನಿತ್ಯ) ಕ್ರಿ. ವಿ. ಪ್ರತಿನಿತ್ಯ.

**–कर्म** (ಕರ್ಮ) ಸ. ನಿತ್ಯದ ಪೂಜೆ ಪುನಸ್ಕಾರ ಗಳು. ೨. ನಿತ್ಯದ ಕೆಲಸಗಳು.

**नित्यनवा** (ನಿತ್ಯನವಾ) ವಿ. ಯಾವಾಗಲೂ ಹೊಸ ದಾಗಿ ಕಾಣುವ.

**नित्यनेम** (ನಿತ್ಯನೇಮ) ಪು. ಪ್ರತಿದಿವಸ ಮಾಡಲಿಕ್ಕೆ ನಿಶ್ಚಯಿಸಿದ (ಕೆಲಸ).

**नित्यपाठ** (ನಿತ್ಯಪಾಠ) ಪು. ಸಂ. ಪ್ರತಿದಿನವೂ ಓದುವ ಪಾಠ.

**नित्यविधि** (ನಿತ್ಯವಿಧಿ) ಪು. ಸಂ. ಪ್ರತಿನಿತ್ಯದ, ಕೆಲಸ ಗಳು. (ಶೌಚ, ಮಾರ್ಜನ ಇತ್ಯಾದಿ)

**नित्यशः** (ನಿತ್ಯಶಃ) ಕ್ರಿ. ವಿ. ಪ್ರತಿನಿತ್ಯವೂ.

**निथळ** (ನಿಥಳ್) ವಿ. ಸ್ವಚ್ಛವಾದ, ಹೊಳೆಯುವ.

**निथळणे** (ನಿಥಳಣೇ) ಕ್ರಿ. ಅ. ಹೊರಸೂಸು, ಹನಿಹನಿ ಯಾಗಿ ಬೀಳು.

**निदर्शन** (ನಿದರ್ಶನ) ನ. ಸಂ. ಅವಲೋಕನ, ಜ್ಞಾಪಕ ನೋಟ. ೨. ವಿನೋದ ಪ್ರದರ್ಶನ (ಡಿಮಾನ್- ಸ್ಟ್ರೇಶನ್)

**निदर्शनास आणणे** (ನಿದರ್ಶನಾಸ ಆಣಣೇ) ಕ್ರಿ. ಸ. ತಿಳಿಸು, ತಿಳಿಯುವಂತೆ ಮಾಡು, ತೋರಿಸಿಕೊಡು.

**निदर्शनास येणे** (ನಿದರ್ಶನಾಸ್ ಯೇಣೇ) ಕ್ರಿ. ಅ. ತಿಳಿದು ಬರು, ಕಂಡು ಬರು, ಕಾಣಿಸು.

**निदाघ** (ನಿದಾಘ) ಪು. ಸಂ. ಬಿಸಿಲು, ಕಾವು.

**निदान** (ನಿದಾನ್) ನ. ಕಾರಣ, ಮೂಲಕಾರಣ. ರೋಗ ಪರೀಕ್ಷೆ. ೨. ಕ್ರಿ. ವಿ. ಕೊಂಚ ಮಟ್ಟಿಗೆ, ತೀರ ಕಡಿಮೆ ಎಂದರೂ.

**–पक्ष-पक्षी** (–ಪಕ್ಷ-ಪಕ್ಷೀ) ಕ್ರಿ. ವಿ. ಏನಿಲ್ಲೆಂದರೂ.

**निदिध्यास** (ನಿದಿಧ್ಯಾಸ) ಪು. ಸಂ. ಧ್ಯಾನ, ಅವಗಾಹನೆ.

**निदेश** (ನಿದೇಶ) ಪು. ಸಂ. ಆಜ್ಞೆ.

**निदेशानुसार** (ನಿದೇಶಾನುಸಾರ) ಕ್ರಿ. ವಿ. ಆಜ್ಞೆಯ ಮೇರೆಗೆ.

**निद्रा** (ನಿದ್ರಾ) ಸ್ತ್ರೀ. ಸಂ. ನಿದ್ದೆ.

**–भ्रमण** (–ಭ್ರಮಣ) ನ. ನಿದ್ದೆಯಲ್ಲಿ ನಡೆಯುವಿಕೆ.

**निद्रालु** (ನಿದ್ರಾಲು) ವಿ. ಸಂ. ನಿದ್ದೆಬಡಕ.

**निद्रित** (ನಿದ್ರಿತ) ವಿ. ಸಂ. ಮಲಗಿಕೊಂಡ.

**निधडक** (ನಿಧಡಕ್) ಕ್ರಿ. ವಿ. ಜೋರಾಗಿ. ೨. ಅಂಜದೆ, ಧೈರ್ಯದಿಂದ.

**निधडा** (ನಿಧಡಾ) ವಿ. ಧೈರ್ಯಶಾಲಿ.

**निधन** (ನಿಧನ) ನ. ಸಂ. ಮರಣ.

**निधान** (ನಿಧಾನ) ನ. ಸಂಗ್ರಹ, ಗಂಟು.

**निधी** (ನಿಧಿ) ಪು. ನ್ಯಾಸ, ಸಂಗ್ರಹ, ಇಡುಗಂಟು.

**निनाद** (ನಿನಾದ) ಪು. ಸಂ. ಸದ್ದು, ಸಪ್ಪಳ.

**निनावी** (ನಿನಾವೀ) ವಿ. ಹೆಸರಿಲ್ಲದ.

**निपचित** (ನಿಪಚಿತ) ವಿ. ನಿಶ್ಚೇಷ್ಟ.

**निमज्जन** (ನಿಮಜ್ಜನ) ನ. ಸಂ. ಮುಳುಗುವಿಕೆ.

**निमंत्रण** (ನಿಮಂತ್ರಣ) ನ. ಸಂ. ಔತಣ, ನಿಮಂತ್ರಣ

**निमंत्रणे** (ನಿಮಂತ್ರಣೇ) ಕ್ರಿ. ಸ. ಔತಣಕೊಡು.

**निमंत्रित** (ನಿಮಂತ್ರಿತ) ವಿ. ಸ. ಔತಣಕೊಟ್ಟ.

**निमपट** (ನಿಮಪಟ್) ವಿ. ಅರ್ಧದಷ್ಟು.

**निमसरकारी** (ನಿಮಸರಕಾರೀ) ವಿ. ಅರ್ಧ ಸರಕಾರೀ.

**निमित्त** (ನಿಮಿತ್ತ) ನ. ಸಂ. ನೆಪ. ೨. ಉದ್ದೇಶ. ೩. ಕಾರಣ.

**निमित्तास टेकणे** (ನಿಮಿತ್ತಾಸ್ ಟೇಕಣೇ) ಯಾವು ದಾದರೊಂದು ನೆಪ ಹೇಳುವುದಕ್ಕೆ ಪ್ರಯತ್ನಿಸು.

**निमित्ताचा धनी** (ನಿಮಿತ್ತಾಚಾ ಧನೀ) ಪು. ಏನಾ ದರೂ ಕಾರಣ ಹೇಳಿ ಶಿಕ್ಷೆಗೆ ಗುರಿಪಟ್ಟವ.

**–खोर** (–ಖೋರ್) ವಿ. ನೆಪಹೇಳುವವ.

**निमिष** (ನಿಮಿಷ) ನ. ಒಂದು ನಿಮಿಷ, ಮಿನಿಟು.

**निमीलन** (ನಿಮೀಲನ್) ನ. ಸಂ. ಕಣ್ಣುಮುಚ್ಚುವಿಕೆ.

**निमुळता** (ನಿಮುಳತಾ) ವಿ. ಸೀರವಾಗುತ್ತ ಹೋಗುವ ಕೋನಾಕೃತಿಯ.

**निमूट-पणे** (ನಿಮೂಟ್-ಪಣೇ) ಕ್ರಿ. ವಿ. ಸುಮ್ಮನೆ, ಒಳ್ಳೆಯ ಮಾತಿನಿಂದ.

**निम्न** (ನಿಮ್ನ) ವಿ. ಸಂ. ಕೆಳಗಿನ.

**–लिखित** (–ಲಿಖಿತ) ವಿ. ಕೆಳಗೆ ಬರೆದ.

**निम्नगा** (ನಿಮ್ನಗಾ) ಸ್ತ್ರೀ. ಸಂ. ನದಿ.

**निम्नश्रेणी** (ನಿಮ್ನಶ್ರೇಣೀ) ಸ್ತ್ರೀ. ಸಂ. ಕೆಳಗಿನ ತರಗತಿ.

**निम्नोन्नत** (ನಿಮ್ನೋನ್ನತ) ಕ್ರಿ. ವಿ. ಏರುಬೀಳುಗಳು, ಹಳ್ಳತಿಟ್ಟುಗಳು.

**नियत** (ನಿಯತ್) ವಿ. ಸಂ. ನಿಶ್ಚಿತ, ನಿಯಂತ್ರಿತ.

**–कालिक** (–ಕಾಲಿಕ) ನ. ಸಂ. ಗೊತ್ತಾದ ಸಮ ಯಕ್ಕೆ ಹೊರಡುವ (ವರ್ತಮಾನ ಪತ್ರ ಮುಂ.)

**नियंता** (ನಿಯಂತಾ) ಪು. ಸಂ. ನಿಯಂತ್ರಿಸುವವ, ಸ್ವಾಮಿ, ದೊರೆ.

**नियंतृत्व** (ನಿಯಂತೃತ್ವ) ನ. ಸಂ. ನಿಯಂತ್ರಕನ ಸ್ಥಾನ, ಪದೆ.

**नियति** (ನಿಯತಿ) ಸ್ತ್ರೀ. ಸಂ. ನಿಸರ್ಗ, ದೈವ.

**–वाद** (–ವಾದ್) ಪು. ದೈವವಾದ.

**नियतेंद्रिय** (ನಿಯತೇಂದ್ರಿಯ) ವಿ. ಸಂ. ಇಂದ್ರಿಯ ಗಳನ್ನು ವಶದಲ್ಲಿಟ್ಟುಕೊಂಡವ.

**नियंत्रक** (ನಿಯಂತ್ರಕ) ಪು. ಸಂ. ನಿಯಂತ್ರಣ ಮಾಡುವವ, ಮೇಲಧಿಕಾರಿ.

**नियंत्रण** (ನಿಯಂತ್ರಣ್) ನ. ಸಂ. ನಿಯಂತ್ರಣ, ಮೇಲ್ವಿಚಾರಣೆ.

**नियम** (ನಿಯಮ) ಪು.ಸಂ. ನಿಯಮ, ಕಟ್ಟುಪಾಡು, ಕಟ್ಟಳೆ, ವ್ರತ.

**–निष्ठा** (–ನಿಷ್ಠಾ) ಸ್ತ್ರೀ. ಭಕ್ತಿಯಿಂದ ವ್ರತಾ ಚರಣೆ ಮಾಡುವಿಕೆ.

**नियमन** (ನಿಯಮನ) ನ. ಸಂ. ನಿಯಂತ್ರಣ, ಮೇಲ್ವಿ ಚಾರಣೆ.

**नियमित** (ನಿಯಮಿತ) ಕ್ರಿ. ವಿ. ಸಂ. ನಿಯಮಿತ ವಾಗಿ, ಕ್ರಿ. ವಿ. ತಪ್ಪದೆ,ಬಿಟ್ಟುಬಿಡದೆ. ೨. ನಿಯಮ ಬದ್ಧ, ಕ್ರಮಬದ್ಧ.

**नियामक** (ನಿಯಾಮಕ) ವಿ. ಸಂ. ಆಡಳಿತವನ್ನು ನೋಡುವ (ಸಮಿತಿ).

**नियुक्त** (ನಿಯುಕ್ತ) ವಿ. ಸಂ. ನಿಯಮಿಸಿದ, ನಿಯ ಮಿಸಿಕೊಟ್ಟ.

**नियुक्ति** (ನಿಯುಕ್ತಿ) ಸ್ತ್ರೀ. ಸಂ. ಕೆಲಸಕ್ಕೆ ಹಚ್ಚು ವಿಕೆ, ನಿಯಮಿಸುವಿಕೆ, ನಿಯುಕ್ತಿ.

**–पत्र** (–ಪತ್ರ) ನ. ಸಂ. ಕೆಲಸಕ್ಕೆ ಹಚ್ಚಿದ ವಿಷ ಯಕ್ಕೆ ಬರೆದ ಪತ್ರ.

**नियुत** (ನಿಯುತ್) ನ. ಸಂ. ಒಂದು ಕೋಟಿ.

**नियोग** (ನಿಯೋಗ) ಪು. ಸಂ. ಆದೇಶ, ಹುಕುಮು, ಅಪ್ಪಣೆ.

**नियोजन** (ನಿಯೋಜನ್) ನ. ಸಂ. ಕಟ್ಟುಪಾಡು, ನಿಯೋಜನೆ.

**नियोजणे** (ನಿಯೋಜಣೇ) ಕ್ರಿ. ಸ. ಅಪ್ಪಣೆಮಾಡು, ಹುಕುಮುಮಾಡು, ಕಟ್ಟುಪಾಡುಮಾಡು.

**नियोजन मंडळ** (ನಿಯೋಜನ ಮಂಡಳ್) ನ. ಸಂ. ದೇಶದ ಅಭಿವೃದ್ಧಿ ಮಂಡಳ.

**निरंकुश** (ನಿರಂಕುಶ) ವಿ.ಸಂ. ಅಂಕುಶವಿಲ್ಲದ, ಮನ ಸ್ಸಿಗೆ ಬಂದಂತೆ ನಡೆಯುವವ.

**निरखणे** (ನಿರಖಣೇ) ಕ್ರಿ. ಸ. ಲಕ್ಷ್ಯಪೂರ್ವಕವಾಗಿ ನೋಡು, ನಿರೀಕ್ಷಿಸು. ದಿಟ್ಟಿಸಿ ನೋಡು.

**निरगांठ** (ನಿರಗಾಠ್) ಸ್ತ್ರೀ. ಗಟ್ಟಿಯಾಗಿ ಬಿದ್ದ ಗಂಟು, ಬಿಚ್ಚಲಿಕ್ಕೆ, ಬಿಡಿಸಲಿಕ್ಕೆ ಕಷ್ಟಕರವಾದ ಗಂಟು.

**निरंजन** (ನಿರಂಜನ್) ವಿ. ಸಂ. ಅನಾಸಕ್ತ, ಯೋಗಿ. ೨. ನ. ನೀಲಾಂಜನ.

**निरत** (ನಿರತ) ವಿ. ಸಂ. ಕೆಲಸದಲ್ಲಿ ಮಗ್ನನಾದ.

**निरंतर** (ನಿರಂತರ್) ಕ್ರಿ. ವಿ. ಒಂದೇಸಮನೆ, ಬಿಟ್ಟು ಬಿಡದೆ, ಯಾವಾಗಲೂ.

**निरतिशय** (ನಿರತಿಶಯ) ಕ್ರಿ. ವಿ. ಅತಿಶಯ, ಬಹಳ, ತೀರ.

**निरपत्रप** (ನಿರಪತ್ರಪ) ವಿ. ಸಂ. ನಾಚಿಕೆಯಿಲ್ಲದ.

**निरपराध** (ನಿರಪರಾಧ) ವಿ. ಸಂ. ಅಪರಾಧಮಾಡದ, ನಿರ್ದೋಷ.

**निरपवाद** (ನಿರಪವಾದ್) ವಿ. ಸಂ. ಯಾವ ಬಗೆಯ ಆತಂಕ, ಕಲ್ಮಷವಿಲ್ಲದ.

**निरपेक्ष** (ನಿರಪೇಕ್ಷ) ವಿ. ಸಂ. ಸ್ವತಂತ್ರ, ಬೇರೊಂ ದಕ್ಕೆ ಸಂಬಂಧಪಡದ. ೨. ಯಾವ ಅಪೇಕ್ಷೆಯೂ ಇಲ್ಲದ, ಸಾತ್ವಿಕ, ನಿಃಸ್ವಾರ್ಥ.

**निरपेक्षता** (ನಿರಪೇಕ್ಷತಾ) ಸ್ತ್ರೀ. ಸಂ. ಸ್ವತಂತ್ರತೆ. ೨. ನಿಃಸ್ವಾರ್ಥತೆ, ಆಸೆ ಅಪೇಕ್ಷೆ ಇಲ್ಲದಿರುವಿಕೆ.

**निरभिमानी** (ನಿರಭಿಮಾನೀ) ವಿ. ಸಂ. ಹೆಮ್ಮೆ ಅಭಿ ಮಾನಗಳಿಲ್ಲದವ.

**निरभ्र** (ನಿರಭ್ರ) ವಿ. ಸಂ. ಮೋಡಗಳಿಲ್ಲದ, ಸ್ವಚ್ಛ (ನೀಲಿಯ ಬಣ್ಣದ ಆಕಾಶ).

**निरभिमान** (ನಿರಭಿಮಾನ್) ವಿ. ಗರ್ವ, ಅಹಂಕಾರ– ವಿಲ್ಲದ.

**निरय** (ನಿರಯ) ಪು. ಪಾತಾಳ, ನರಕ.

**निरर्गल** (ನಿರರ್ಗಲ) ವಿ. ಯಾವ ಬಗೆಯ ನಿಯಂತ್ರ ಣವೂ ಇಲ್ಲದ.

**निरर्थक** (ನಿರರ್ಥಕ) ವಿ. ಅರ್ಥಶೂನ್ಯ, ಸಾರವಿಲ್ಲದ, ಹುರುಳಿಲ್ಲದ, ವ್ಯರ್ಥ.

**निरलस** (ನಿರಲಸ) ವಿ. ಆಲಸ್ಯವಿಲ್ಲದ, ಚಟುವಟಿಕೆ ಯುಳ್ಳ, ಸಕ್ರಿಯ.

**निरवकाश** (ನಿರವಕಾಶ) ವಿ.ಸಂ. ಪೊಳ್ಳು, ರಿಕ್ತಸ್ಥಾನ ವಿಲ್ಲದ, ನಿಬಿಡ. ೨. ಪುರುಸೊತ್ತಿಲ್ಲದ.

**निरवधि** (ನಿರವಧಿ) ವಿ. ಸಂ. ಅಸೀಮ, ನಿಃಸ್ಸೀಮ, ಕೊನೆಯಿಲ್ಲದ, ತೆರಪಿಲ್ಲದ.

–वर्षासन (–ವರ್ಷಾಸನ) ನ. ಖಂಡಿತವಾಗದ ಸಂಬಳ.

निरवयव (ನಿರವಯುವ) ವಿ. ಸಂ. ಅವಯುವ, ಬಿಡಿ ಭಾಗಗಳಿಲ್ಲದ, ಏಕ, ಅಖಂಡ.

निरवा निरव (ನಿರವಾ ನಿರವ್) ಸ್ತ್ರೀ. (ಪ್ರವಾಸ, ದೀರ್ಘ ಪರದೇಶ ವಾಸ ಅಥವಾ ಮೃತ್ಯುವಿಗೆ ಮುಂಚಿತ ವಾಗಿ) ಎಲ್ಲ ಏರ್ಪಾಡು ಮಾಡುವಿಕೆ.

निरशन (ನಿರಶನ್) ನ. ಸಂ. ಅನಶನ, ಉಪವಾಸ.

निरसन (ನಿರಸನ್) ನ. ಸಂ. (ಸಂದೇಹ ಮುಂ.) ಪರಿಹಾರ, ದೂರಪಡಿಸುವಿಕೆ.

निरसा (ನಿರಸಾ) ವಿ. ಕಾಯಿಸದ, ತಾಜಾ (ಹಾಲು)

निरस्त (ನಿರಸ್ತ್) ವಿ. ಒಗೆದ, ತೆಗೆದುಹಾಕಿದ.

निरहंकार ನ. ಪು. ಅಹಂಕಾರವಿಲ್ಲದ, ಸಾಧಾವೃತ್ತಿಯ.

निरक्षर (ನಿರಕ್ಷರ) ವಿ. ಸಂ. ಅಕ್ಷರಜ್ಞಾನವಿಲ್ಲದ, ಅಶಿಕ್ಷಿತ.

निराकरण (ನಿರಾಕರಣ) ನ. ಸ. ಅಲ್ಲಗಳೆಯುವಿಕೆ, ಪ್ರತಿಭಟನೆ.

निराकार (ನಿರಾಕಾರ) ವಿ. ಸಂ. ಆಕಾರವಿಲ್ಲದ.

निरांजन (ನಿರಾಂಜನ) ನ. ನೀಲಾಂಜನ, (ಆರತಿಯ) ದೀಪ.

निराधार (ನಿರಾಧಾರ) ವಿ. ಸಂ. ಆಧಾರವಿಲ್ಲದ.

निरामय (ನಿರಾಮಯ) ವಿ. ಸಂ. ಆರೋಗ್ಯಸಂಪನ್ನ.

निरामिष (ನಿರಾಮಿಷ) ವಿ. ಸಂ. ಮಾಂಸರಹಿತ ಶಾಕಾಹಾರದ.

निरालस्य (ನಿರಾಲಸ್ಯ) ವಿ. ಸಂ. ಆಲಸ್ಯವಿಲ್ಲದ.

निराश (ನಿರಾಶ) ವಿ. ಸಂ. ಉದಾಸೀನ, ಉತ್ಸಾಹ ವಿಲ್ಲದ, ಖಿನ್ನ.

निराश्रित (ನಿರಾಶ್ರಿತ) ವಿ. ಸಂ. ಗತಿಗೇಡಾದ, ಗತಿ ಯಿಲ್ಲದ, ನಿರಾಧಾರ.

निरास (ನಿರಾಸ) ಪು. ಸಂ. ದೂರುಪಡಿಸುವಿಕೆ. ತೆಗೆದುಹಾಕುವಿಕೆ.

भ्रम– (ಭ್ರಮ–) ಪು. ಸಂ. (ಶ್ರೇಷ್ಠತೆಯ) ತಪ್ಪು ಕಲ್ಪನೆ ತೊಲಗುವಿಕೆ.

निराहार (ನಿರಾಹಾರ) ಪು. ಸಂ. ಪೂರ್ಣ ಉಪವಾಸ, ನಿರಾಹಾರ.

निराळा (ನಿರಾಳಾ) ವಿ. ಬೇರೆ. ೨. ಅಲೌಕಿಕ. ೩. ಹೊರತಾಗಿ ಇರುವ.

निरिच्छ (ನಿರಿಚ್ಛ) ವಿ. ಸಂ. ಇಚ್ಛೆಯಿಲ್ಲದ, ಸ್ವಾರ್ಥ ವಿಲ್ಲದ, ಅನಾಸಕ್ತ.

निरी (ನಿರೀ) ಸ್ತ್ರೀ. ಮಡಿಕೆ, ಪದರು, ಸುಕ್ಕು.

निरीम (ನಿರೀಮ್) ಪು. ಕಸ, ಕಲ್ಲುಮಣ್ಣು, ಕಲ್ಲು ಪುಡಿ.

निरीश्वरवादी (ನಿರೀಶ್ವರವಾದೀ) ವಿ. ಸ. ನಾಸ್ತಿಕ, ದೇವರಲ್ಲಿ ನಂಬದವ.

निरीक्षक (ನಿರೀಕ್ಷಕ) ನ. ಸಂ. ಮೇಲ್ವಿಚಾರಣೆ ಮಾಡು ವವ, ಅವಲೋಕನ ಮಾಡುವವ, ಅಭ್ಯಾಸಕ.

निरीक्षण (ನಿರೀಕ್ಷಣ) ನ. ಸಂ. ಲಕ್ಷಗೊಟ್ಟು ನೋಡು ವಿಕೆ, ಪರಿಶೀಲನೆ, ಅವಲೋಕನ.

निरीक्षणे (ನಿರೀಕ್ಷಣೆ) ಕ್ರಿ. ಸ. ಲಕ್ಷಗೊಟ್ಟು ನೋಡು, ನಿರೀಕ್ಷಿಸು, ಹಾದಿನೋಡು.

निरुक्त (ನಿರುಕ್ತ) ನ. ಸಂ. ನಿಘಂಟು. ೨. ವ್ಯುತ್ಪತ್ತಿ. ೩. ವೇದದಲ್ಲಿಯ ಕಠಿಣ ಶಬ್ದಗಳ ಅರ್ಥಕೊಡುವ ಕೋಶ.

निरुत्तर (ನಿರುತ್ತರ) ವಿ. ಸಂ. ಬೆಪ್ಪನಾದ, ಮರು ಮಾತಾಡದ.

निरुत्साह (ನಿರುತ್ಸಾಹ) ವಿ. ಸಂ. ಉತ್ಸಾಹ ಶೂನ್ಯ, ಉದಾಸೀನ.

निरुद्योगी (ನಿರುದ್ಯೋಗೀ) ವಿ. ಸಂ. ಉದ್ಯೋಗವಿಲ್ಲ ದವ, ಕೆಲಸವಿಲ್ಲದವ. ೨. ಸೋಮಾರಿ.

निरुपद्रवी (ನಿರುಪದ್ರವೀ) ವಿ. ಸಂ. ಉಪದ್ರವ ಕೊಡದ, ಕಾಡದ, ಸಾದಾ, ಈಲಾದ, ಸೌಮ್ಯ.

निरुपम (ನಿರುಪಮ) ವಿ. ಸಂ. ಉಪಮೆಯಿಲ್ಲದ, ಅತುಲ್ಯ, ಶ್ರೇಷ್ಠ.

निरुपयोगी (ನಿರುಪಯೋಗೀ) ವಿ. ಸಂ. ಉಪಯೋಗ ವಿಲ್ಲದ.

निरुपाधि (ನಿರುಪಾಧಿ) ವಿ. ಸಂ. ತೊಂದರೆಯಿಲ್ಲದ, ಕಾಟವಿಲ್ಲದ, ಭಾರವಿಲ್ಲದ.

निरुपाय (ನಿರುಪಾಯ) ಪು. ಸಂ. ಉಪಾಯತೋಚದ, ಭ್ರಾಂತ ಪರಿಸ್ಥಿತಿ, ಗತಿಯಿಲ್ಲದಾಗುವಿಕೆ.

निरूपण (ನಿರೂಪಣ) ನ. ಸಂ. ನಿರೂಪಣ, ತಿಳಿಸಿ ಹೇಳುವಿಕೆ, ಸ್ಪಷ್ಟೀಕರಣ.

नरूपणीय (ನಿರುಪಣೀಯ) ವಿ. ಸಂ. ತಿಳಿಸಿ ಹೇಳತಕ್ಕ, ಸ್ಪಷ್ಟಪಡಿಸಬೇಕಾದ.

निरूपणे (ನಿರುಪಣೇ) ಕ್ರಿ. ಸಂ. ತಿಳಿಸಿ ಹೇಳು, ವರದಿ ಕೊಡು, ಹೇಳು.

निरूपित (ನಿರೂಪಿತ) ವಿ. ಸಂ. ವರದಿ ಮಾಡಿದ, ತಿಳಿಸಿ ಹೇಳಿದ.

**निरोगी** (ನಿರೋಗೀ) ವಿ. ಸಂ. ರೋಗವಿಲ್ಲದ, ಆರೋಗ್ಯ ಸಂಪನ್ನ.

**निरोध** (ನಿರೋಧ) ಪು. ಸಂ. ತಡೆ – ಆತಂಕ, ಪ್ರತಿಕಾರ, ಪ್ರತಿಬಂಧ.

**निरोधन** (ನಿರೋಧನ) ನ. ಸಂ. ನಿಲ್ಲಿಸುವಿಕೆ, ತಡೆ ಮಾಡುವಿಕೆ, ಬಹಿಷ್ಕಾರ, '–ಪಿಕೆಟಿಂಗ್'.

**निरोप** (ನಿರೋಪ್) ಪು. ಬೀಳ್ಕೊಡುವಿಕೆ. ೨. ಸಂದೇಶ ೩. ಹೇಳಿ ಕಳಿಸುವಿಕೆ.

**निरोपा निरोपी** (ನಿರೋಪಾ ನಿರೋಪಿ) ಸ್ತ್ರೀ. ಒಬ್ಬರಿಗೊಬ್ಬರು, ಪತ್ರ ಹಾಕುವಿಕೆ, ಸಂದೇಶ ಕಳಿಸುವಿಕೆ.

**निरोप्या** (ನಿರೋಪ್ಯಾ) ಪು. ಸುದ್ದಿಯನ್ನು ಮುಟ್ಟಿಸುವ ಆಳು.

**निर्गम** (ನಿರ್ಗಮ) ಪು. ಸಂ. ಅಂತಿಮ ನಿರ್ಣಯ, ತೀರ್ಪು, ತೀರ್ಮಾನ, ಕೊನೆಯ ಮಾತು.

**निर्गुण** (ನಿರ್ಗುಣ) ವಿ. ಸಂ. ಗುಣಾತೀತ (ದೇವರು) ಗುಣಗಳನ್ನು ಹೇಳಬೇಕಾದ. ೨. (ಧರ್ಮ) ಸಗುಣವಲ್ಲದ.

**निर्घृण** (ನಿರ್ಘೃಣ) ವಿ. ಸಂ. ಕಠೋರ,ಕರುಣೆಯಿಲ್ಲದ ನಿರ್ದಯ.

**निर्घोर** (ನಿರ್ಘೋರ) ವಿ. ಸಂ. ಸಹಜವಾದ, ತೊಂದರೆಯಿಲ್ಲದ, ಯೋಚನೆ ಮಾಡಬೇಕಾಗದ.

**निर्घोष** (ನಿರ್ಘೋಷ) ಪು. ಸಂ. ನಾದ, ಶಬ್ದ, ಸಪ್ಪಳ

**निर्जन** (ನಿರ್ಜನ) ವಿ. ಸಂ. ಜನರಿಲ್ಲದ, ಬಟ್ಟ ಬಯಲಾದ, ಏಕಾಂತವುಳ್ಳ, ಹಾಳುಬಿದ್ದ.

**निर्जंतुक** (ನಿರ್ಜಂತುಕ) ವಿ. ಅ. ಸಂ. ಜಂತುರಹಿತ, ಶುದ್ಧ ಪಡಿಸಿದ.

**निर्जर** (ನಿರ್ಜರ) ವಿ. ಸಂ. ಮುಪ್ಪಿಲ್ಲದ, ಅಶಕ್ತನಾಗದ, ಸವೆಯದ. ೨. ಪು. ದೇವರು.

**निर्जल** (ನಿರ್ಜಲ) ವಿ. ಸಂ. ೧. ನೀರಿಲ್ಲದ. ೨. ನೀರು ಸಹ ಕುಡಿಯದ (ಉಪವಾಸ) ೩. ನೀರು ಕಲಸದಿದ್ದ, ಶುದ್ಧ, ಮಡಿಯ.

**निर्जित** (ನಿರ್ಜಿತ) ವಿ. ಸಂ. ಗೆದ್ದುಕೊಂಡ, ಸೋಲಿಸಿದ

**निर्जीव** (ನಿರ್ಜೀವ) ವಿ. ಸಂ. ಜೀವವಿಲ್ಲದ. ೨. ಪ್ರಾಣವಿಲ್ಲದ ೩. ಹುರುಳಿಲ್ಲದ, ಸತ್ವವಿಲ್ಲದ ೪. ಜಡ, ನಿಷ್ಪ್ರಾಣ.

**निर्झर** (ನಿರ್ಝರ) ಪು. ಸಂ. ಸೆಲೆ, ಬುಗ್ಗೆ – ೨. ಪ್ರವಾಹ, ಹಳ್ಳ.

**निर्ढावणे** (ನಿರ್ಢಾವಣೇ) ಕ್ರಿ. ಸಂ. ಅ. ರೂಢಿಯಾಗು ೨. ನಾಚಿಕೆ ಯಿಲ್ಲದಾಗು ೩. ಸಂಕೋಚವಿಲ್ಲದಾಗು

**निर्णय** (ನಿರ್ಣಯ) ಪು. ಸಂ. ತೀರ್ಪು, ತೀರ್ಮಾನ.

**निर्णायक** (ನಿರ್ಣಾಯಕ್) ವಿ. ಸಂ. ನಿರ್ಣಯಿಸಲಿಕ್ಕೆ ಯೋಗ್ಯವಾದ ೨. ಕೊನೆಯ ೩. ಖಂಡಿತವಾದ ೪. ತೀರ್ಪು ಕೊಡಲು ಯೋಗ್ಯವಾದ.

**निर्णीत** (ನಿರ್ಣೀತ) ವಿ. ಸಂ. ನಿರ್ಣಯಿಸಿದ, ನಿಶ್ಚಿತಗೊಳಿಸಿದ.

**निर्दय** (ನಿರ್ದಯ) ವಿ. ಸಂ. ದಯೆಯಿಲ್ಲದ, ಕಠೋರ

**निर्दलन** (ನಿರ್ದಲನ್) ನ. ಸಂ. ಹೊಡೆದು ಹಾಕುವಿಕೆ ನಷ್ಟ ಪಡಿಸುವಿಕೆ, ಹಾಳುಮಾಡುವಿಕೆ ಧ್ವಂಸ.

**निर्दिष्ट** (ನಿರ್ದಿಷ್ಟ) ವಿ. ಸಂ. ಹೇಳಲಾದ, ಹೇಳಿದ, ಬಣ್ಣಿಸಿದ, ಕಾಣಿಸಿದ.

**उपरि–** (ಉಪರಿ–) ವಿ. ಮೇಲೆ ಕಾಣಿಸಿದ, ಹೇಳಲಾದ.

**निर्देश** (ನಿರ್ದೇಶ) ಪು. ಸಂ. ಆಜ್ಞೆ, ಅಪ್ಪಣೆ.

**निर्देशांक** (ನಿರ್ದೇಶಾಂಕ್) ಪು. ಸಂ. (ಬೆಲೆಯ) ಸ್ಥಿತಿ, ಬೆಳವಣಿಗೆಗಳನ್ನು ಸೂಚಿಸುವ ಸಂಖ್ಯೆ.

**निर्दोष** (ನಿರ್ದೋಷ) ವಿ. ಸಂ. ದೋಷ ರಹಿತ, ನಿರ್ದೋಷ.

**निर्दोषी** (ನಿರ್ದೋಷಿ) ವಿ. ಸಂ. ತಪ್ಪು ಮಾಡದವ, ಅಪರಾಧ ಮಾಡದವ, ದೋಷರಹಿತ.

**निर्द्रव** (ನಿರ್ದ್ರವ) ವಿ. ಸಂ. ಕರಗಿ ನೀರಾಗದ, ದ್ರವಿಸದ.

**निर्द्वंद्व** (ನಿರ್ದ್ವಂದ್ವ) ವಿ. ಸಂ. ಎರಡು ಬಗೆಯಿಲ್ಲದ. ೨. ಅದ್ವೈತ. ೩. (ಇಬ್ಬರಲ್ಲಿಯ) ವ್ಯಾಜ್ಯವಿಲ್ಲದ.

**निर्धन** (ನಿರ್ಧನ) ವಿ. ಸಂ. ಬಡವ, ಧನಹೀನ.

**निर्धार** (ನಿರ್ಧಾರ) ಪು. ಸಂ. ನಿಶ್ಚಯ. ೨. ದೃಢ ಸಂಕಲ್ಪ. ೩. ತೀರ್ಪು, ತೀರ್ಮಾನ.

**निर्धारक** (ನಿರ್ಧಾರಕ್) ಪು. ಸಂ. ನಿರ್ಧರಿಸುವವ, ತೀರ್ಪು ಕೊಡುವವ, ಗೊತ್ತುಪಡಿಸುವವ.

**निर्धारण** (ನಿರ್ಧಾರಣ) ನ. ಸಂ. ಗೊತ್ತುಪಡಿಸುವಿಕೆ, ನಿಶ್ಚಯಪಡಿಸುವಿಕೆ.

**निर्धारित** (ನಿರ್ಧಾರಿತ) ವಿ. ಸಂ. ನಿರ್ಧರಿಸಿದ, ಗೊತ್ತುಪಡಿಸಿದ ಠರಾಯಿಸಿದ, ಬಗೆಹರಿಸಿದ ಕೊನೆಗಾಣಿಸಿದ.

**निर्धास्त** (ನಿರ್ಧಾಸ್ತ್) ವಿ. ಚಿಂತೆ, ಅಂಜಿಕೆ ಇಲ್ಲದ, ಕ್ಷೇಮಕರ, ಭದ್ರವಾದ.

**निर्धोक** (ನಿರ್ಧೋಕ್) ವಿ. ಗಂಡಾಂತರವಿಲ್ಲದ, ಕುತ್ತಿನಿಂದ ಪಾರಾದ.

**निर्नायकी** (ನಿರ್ನಾಯಕೀ) ಸ್ತ್ರೀ. ಅರಾಜಕ, ಅವ್ಯವಸ್ಥೆ, ಗತಿಗೇಡು.

**निर्निमित्त** (ನಿರ್ನಿಮಿತ್ತ) ವಿ. ಸಂ. ಯಾವ ಕಾರಣವೂ ಇಲ್ಲದ, ನೆಪ ಹೇಳಲಿಕ್ಕೆ ಬಾರದ.

**निर्बंध** (ನಿರ್ಬಂಧ) ಪು. ಸಂ. ತಡೆ, ಅಡ್ಡಿ. ೨. ಷರತ್ತು. ೩. ಕಟ್ಟಳೆ. ೪. ಒತ್ತಾಯಪಡಿಸುವಿಕೆ.

**निर्बळ** (ನಿರ್ಬಳ್) ವಿ. ಸಂ. ನಿರ್ಬಲ, ಅಶಕ್ತ, ದುರ್ಬಲ.

**निर्बीज** (ನಿರ್ಬೀಜ) ವಿ. ಬೀಜರಹಿತ, (ಧಾತುವಿನಲ್ಲಿ) ಪ್ರಜನನ ಕ್ಷಮತೆಯಿಲ್ಲದ.

**निर्बीजीकरण** (ನಿರ್ಬೀಜೀಕರಣ) ನ. ಸಂ. ಪ್ರಜನನ ಮಾಡುವ ಬೀಜಗಳನ್ನು ನಾಶಗೊಳಿಸುವಿಕೆ. ೨. (ದನಗಳ) ತರಡು ಬಡಿಯುವಿಕೆ.

**निर्बुद्ध** (ನಿರ್ಬುದ್ಧ) ವಿ. ಸಂ. ದಡ್ಡ, ತಿಳುವಳಿಕೆಯಿಲ್ಲದ, ಎಬಡ.

**निर्भय** (ನಿರ್ಭಯ) ವಿ. ಸಂ. ಭಯವಿಲ್ಲದ, ಭದ್ರವಾದ.

**निर्भर** (ನಿರ್ಭರ) ವಿ. ಸಂ. ತುಂಬಿದ, ಪೂರ್ಣ.

**निर्भत्सना** (ನಿರ್ಭತ್ಸನಾ) ಸ್ತ್ರೀ. ಸಂ. ಕಿವಿಹಿಂಡುವಿಕೆ, ಬುದ್ಧಿಗಲಿಸುವಿಕೆ, ದೂರುವಿಕೆ.

**–करणे** (–ಕರಣೇ) ಕ್ರಿ. ಸಂ. ಜಬರಿಸು, ಬುದ್ಧಿ ಹೇಳು.

**निर्भीड** (ನಿರ್ಭೀಡ್) ವಿ. ಅನುಮಾನಮಾಡದ, ಸಂಕೋಚಪಡದ.

**निर्भेद्य** (ನಿರ್ಭೇದ್ಯ) ವಿ. ಸಂ. ಜಯಿಸಲಿಕ್ಕೆ ಬಾರದ, ಭೇದಿಸಲಿಕ್ಕೆ ಅಸಾಧ್ಯವಾದ.

**निर्भेळ** (ನಿರ್ಭೇಳ್) ವಿ. ಶುದ್ಧ, ಮಿಶ್ರಣವಿಲ್ಲದ, ಬೆರಕೆ ಮಾಡದ.

**निर्भ्रांत** (ನಿರ್ಭ್ರಾಂತ) ವಿ. ಸಂ. ಸಂದೇಹಪಡದ, ಖಂಡಿತವಾದ.

**निर्भ्रांति** (ನಿರ್ಭ್ರಾಂತಿ) ಸ್ತ್ರೀ. ನಿಶ್ಚಿತತೆ, ನಿಃಸಂದೇಹ.

**निर्मत्सर** (ನಿರ್ಮತ್ಸರ) ವಿ. ಸಂ. ಅಸೂಯೆ, ಹೊಟ್ಟೆಕಿಚ್ಚು ಇಲ್ಲದ.

**निर्मनुष्य** (ನಿರ್ಮನುಷ್ಯ) ವಿ. ಸಂ. ವಸತಿಯಿಲ್ಲದ ಹಾಳುಬಿದ್ದ, ಬಟ್ಟಾಬಯಲಾದ.

**निर्मम** (ನಿರ್ಮಮ) ವಿ. ಸಂ. ಆಸಕ್ತಿಯಿಲ್ಲದ, ಅಸಂಗ. ೨. ದಯೆಯಿಲ್ಲದ, ನಿರ್ದಯ.

**निर्ममत्व** (ನಿರ್ಮಮತ್ವ) ನ. ಸಂ. ಅನಾಸಕ್ತಿ, ನಿಃಸಂಗ. ೨. ಕಠೋರ ಸ್ವಭಾವ, ನಿರ್ದಯತೆ.

**निर्मर्याद** (ನಿರ್ಮರ್ಯಾದ) ವಿ. ಸಂ. ಅಳತೆಯಿಲ್ಲದ, ಅಳತೆ ಮೀರಿದ.

**निर्मळ** (ನಿರ್ಮಳ) ವಿ. ಸಂ. ನಿರ್ಮಲ, ಶುದ್ಧ.

**निर्माण** (ನಿರ್ಮಾಣ) ವಿ. ಸಂ. ನಿರ್ಮಿಸಿದ, ಹುಟ್ಟಿಸಿದ, ಉತ್ಪನ್ನ ಮಾಡಿದ. ೨. ನ. ಸಂ. ನಿರ್ಮಾಣ, ಹುಟ್ಟಿಸುವಿಕೆ, ತಯಾರಿಸುವಿಕೆ.

**निर्माल्य** (ನಿರ್ಮಾಲ್ಯ) ನ. ಸಂ. (ದೇವರ ಪೂಜೆ ಮಾಡಿದ ಮೇಲೆ) ಬಾಡಿದ ಹೂಗಳು. ೨. ಕಸ. ೩. ನಿಃಸತ್ವ ವಸ್ತು.

**निर्मिणे** (ನಿರ್ಮಿಣೇ) ಕ್ರಿ. ಸಂ. ನಿರ್ಮಿಸು, ಉತ್ಪನ್ನ ಮಾಡು.

**निर्मित** (ನಿರ್ಮಿತ) ವಿ. ಸಂ. ನಿರ್ಮಿಸಿದ, ಉತ್ಪನ್ನ ಮಾಡಿದ, ಉಂಟುಮಾಡಿದ.

**निर्मूलन** (ನಿರ್ಮೂಲನ) ವಿ. ಸಂ. ಸಂಹಾರ, ನಾಶಗೊಳಿಸುವಿಕೆ.

**निर्याण** (ನಿರ್ಯಾಣ) ನ. ಸಂ. ಹೊರಟು ಹೋಗುವಿಕೆ. ೨. ಮುಕ್ತಿ.

**निर्लज्ज** (ನಿರ್ಲಜ್ಜ) ವಿ. ಸಂ. ನಾಚಿಕೆಯಿಲ್ಲದ, ಹೇಸದ.

**निर्लेप** (ನಿರ್ಲೇಪ್) ವಿ. ನೀರು ಹಾಕದ, ಶುದ್ಧ ಉಪವಾಸಕ್ಕೆ ಉಪಯೋಗಿಸಬಹುದಾದ.

**निर्लोभी** (ನಿರ್ಲೋಭೀ) ವಿ. ಸಂ. ದುರಾಶೆಯಿಲ್ಲದ, ಸ್ವಾರ್ಥಬುದ್ಧಿಯಿಲ್ಲದ.

**निर्वंश** (ನಿರ್ವಂಶ) ವಿ. ವಂಶ, ಕುಲ, ಹಾಳಾದ, ಮಕ್ಕಳಿಲ್ಲದ.

**निर्वाचन** (ನಿರ್ವಾಚನ) ನ. ಸಂ. ಚುನಾವಣೆ, ಆಯ್ಕೆ.

**निर्वाण** (ನಿರ್ವಾಣ) ನ. ಸಂ. ಮೋಕ್ಷ, ಮುಕ್ತಿ, ಸದ್ಗತಿ.

**निर्वाणीचा** (ನಿರ್ವಾಣೀಚಾ) ವಿ. ಕೊನೆಯ, ಮೊರೆಯಿಟ್ಟು ಮಾಡಿದ (ಪ್ರಾರ್ಥನೆ).

**–शब्द** (ಶಬ್ದ) ಪು. ಕೊನೆಯ ಮಾತು.

**निर्वात** (ನಿರ್ವಾತ್) ವಿ. ಸಂ. ಗಾಳಿ ಹಾಯದ, (ಡಬ್ಬಿಯಲ್ಲಿ ಹಾಕಿ) ಗಾಳಿ ಹೋಗದಂತೆ ಭದ್ರಪಡಿಸಿದ.

**निर्वासित** (ನಿರ್ವಾಸಿತ್) ವಿ. ಸಂ. ಹೊರಗೆ ಹಾಕಿದ, ಹೊರಗೆ ಅಟ್ಟಿದ. ೨. ಓಡಿಬಂದ. ೩. ಶರಣಾರ್ಥಿ.

**निर्वाह** (ನಿರ್ವಾಹ) ಪು. ನಿರ್ವಾಹ, ಸಜ್ಜುಪಡಿಸುವಿಕೆ, ಕೆಲಸವನ್ನು ಕೊನೆಗಾಣಿಸುವಿಕೆ.

**उदर–** (ಉದರ–) ಪು. ಹೊಟ್ಟೆಯ ಯೋಚನೆ, ಉದರಂಭರಣ.

**निर्वाळा** (ನಿರ್ವಾಳಾ) ಪು. ತೀರ್ಪು, ನಿರ್ಣಯ. ೨. ಹವಿ, ಗ್ಯಾರಂಟಿ, ಆಶ್ವಾಸನ.

**निर्विकल्प** (ನಿರ್ವಿಕಲ್ಪ) ವಿ. ಸಂ. ಇಬ್ಬಗೆ, ಸಂದೇಹವಿಲ್ಲದ, ಖಂಡಿತವಾದ.

**निर्विकार** (ನಿರ್ವಿಕಾರ) ವಿ. ಸಂ. ವಿಕಾರಹೊಂದದ, ಬದಲಾಗದ.

**–चेहरा** (–ಚೇಹರಾ) ಪು. ಮೋರೆಯ ಮೇಲೆ ಯಾವ ಭಾವವೂ ಕಾಣದಿರುವಿಕೆ.

**निर्विघ्न** (ನಿರ್ವಿಘ್ನ) ವಿ. ಸಂ. ಕುತ್ತು, ಗಂಡಾಂತರವಿಲ್ಲದ, ಸುಸೂತ್ರವಾದ.

**–पणे** (–ಪಣೇ) ಕ್ರಿ. ವಿ. ಯಾವ ತೊಂದರೆಯೂ ಇಲ್ಲದೆ.

**निर्विवाद** ( ನಿರ್ವಿವಾದ ) ವಿ. ಸಂ. ವಿವಾದವಿಲ್ಲದ, ಖಂಡಿತವಾದ, ಸಂದೇಹವಿಲ್ಲದ.

**निर्विवादता** (ನಿರ್ವಿವಾದತಾ) ಸ್ತ್ರೀ. ಸಂ. ವಿವಾದಾಸ್ಪದವಲ್ಲದ.

**निर्विवेक** (ನಿರ್ವಿವೇಕ) ವಿ. ಸಂ. ತಾರತಮ್ಯವನ್ನು ವಿಚಾರಿಸದ.

**निर्विष** (ನಿರ್ವಿಷ) ವಿ. ಸಂ. ವಿಷರಹಿತವಾದ, ವಿಷವಿಲ್ಲದ.

**निर्वीर्य** (ನಿರ್ವೀರ್ಯ) ವಿ. ಸಂ. ಹೇಡಿ. ೨. ಶಕ್ತಿಯಿಲ್ಲದವ. ೩. ನಪುಂಸಕ. ೪. ವೀರರಿಲ್ಲದಿರುವ.

**निर्वेद** (ನಿರ್ವೇದ) ನ. ಸಂ. ಬೇಸರ, ಖಿನ್ನತೆ, ಜಿಗುಪ್ಸೆ.

**निर्वेध** (ನಿರ್ವೇಧ) ವಿ. ಸಂ. ಚಿಂತೆಯಿಲ್ಲದ, ತಡೆ, ಪ್ರತಿಬಂಧವಿಲ್ಲದ.

**निर्वैर** (ನಿರ್ವೈರ) ನ. ಸಂ. ವೈರತ್ವ, ಶತ್ರುತ್ವವಿಲ್ಲದಿರುವಿಕೆ.

**निर्व्यसनी** (ನಿರ್ವ್ಯಸನೀ) ವಿ. ಸಂ. ದುಶ್ಚಟ ಕೆಟ್ಟ ಅಭ್ಯಾಸಗಳಿಲ್ಲದ.

**निर्व्याज** (ನಿರ್ವ್ಯಾಜ) ವಿ. ಸಂ. ಸರಳವಾದ, ಒಳ್ಳೆಯ ಸ್ವಭಾವದ.

**निलाजरा** (ನಿಲಾಜರಾ) ವಿ. ಸಂ. ನಾಚಿಕೆಯಿಲ್ಲದವ.

**निलीम** (ನಿಲೀಮ್) ನ. **निरीम** ನೋ.

**निवड** (ನಿವಡ) ಸ್ತ್ರೀ. ಆಯ್ಕೆ, ಆರಿಸುವಿಕೆ, ಸಂಕಲನ, ಚಯನ.

**आवड–** (ಆವಡ್–) ಸ್ತ್ರೀ. ಬೇಕಾದ ಬೇಡಾದ ಸಂಗತಿಗಳು.

**निवडक** (ನಿವಡಕ್) ವಿ. ಆರಿಸಿ ತೆಗೆದ, ಉತ್ತಮವಾದ.

**निवडणूक** (ನಿವಡಣೂಕ್) ಸ್ತ್ರೀ. ಚುನಾವಣೆ, ಆಯ್ಕೆ.

**निवडणे** (ನಿವಡಣೇ) ಕ್ರಿ. ಸಂ. ಆರಿಸು, ಆಯ್ಕೆ ಮಾಡು.

**निवणे** (ನಿವಣೇ) ಕ್ರಿ. ಅ. ಆರು, ಆರಿಹೋಗು.

**निवर्तणे** (ನಿವರ್ತಣೇ) ಕ್ರಿ. ಅ. ಹಿಂತಿರುಗು. ಕ್ರಿ. ಸ. ತಿರುಗಿಕೊಡು, ನಿಲ್ಲಿಸು.

**निववणे** (ನಿವವಣೇ) ಕ್ರಿ. ಸ. ಆರಿಸು, ತಣ್ಣಗೆ ಮಾಡು.

**निवळ** (ನಿವಳ್) ವಿ. ಸ್ವಚ್ಛ, ಶುದ್ಧ, ಕೇವಲ. ಕ್ರಿ.ವಿ. ತೀರ ಅಪ್ಪಟ, ತುಂಬಾ.

**निवळणे** (ನಿವಳಣೇ) ಕ್ರಿ. ಅ. ಚನ್ನಾಗಿ ಆಗು, ಸುಧಾರಿಸು. ೨. ಸ್ವಚ್ಛವಾಗು. ೩. ತಿಳಿಯಾಗು. ೪. ಶಾಂತವಾ(ನಾ)ಗು.

**निवळी** (ನಿವಳೀ) ಸ್ತ್ರೀ. ಸುಣ್ಣ, ತೊಪ್ಪೆ, ಮುಂ.ಗಳ ತಿಳಿ ನೀರು.

**निवाडा** (ನಿವಾಡಾ) ಪು. ತೀರ್ಪು, ನಿರ್ಣಯ.

**–पत्र** (ಪತ್ರ) ನ. ನಿರ್ಣಯ ಪತ್ರ.

**निवांत** (ನಿವಾಂತ) ವಿ. ಏಕಾಂತವುಳ್ಳ, ಗದ್ದಲವಿಲ್ಲದ, ಪ್ರಶಾಂತವಾದ.

**निवारक** (ನಿವಾರಕ್) ವಿ. ಸಂ. ತಡೆಯುವ, ನಿಗ್ರಹಿಸುವ, ಹೋಗಲಾಡಿಸುವ.

**निवारण** (ನಿವಾರಣ) ನ. ನಿಲ್ಲಿಸುವಿಕೆ, ತಡೆದು ಹಾಕುವಿಕೆ, ಪ್ರತಿಬಂಧ.

**निवारणे** (ನಿವಾರಣೇ) ಕ್ರಿ. ಸ. ನಿಲ್ಲಿಸು, ತಡೆದು ಹಾಕು.

**निवारा** (ನಿವಾರಾ) ಪು. ಆಶ್ರಯ. ೨. ವಾಸಸ್ಥಳ.

**निवार्य** (ನಿವಾರ್ಯ) ವಿ. ಸಂ. ತಡೆಯಬಹುದಾದ, ನಿಲ್ಲಿಸಬಹುದಾದ.

**निवास** (ನಿವಾಸ) ಪು. ವಾಸಸ್ಥಳ, ನಿಲಯ, ಇರುವ ಸ್ಥಾನ.

**–व्यवस्था** (–ವ್ಯವಸ್ಥಾ) ಸ್ತ್ರೀ. ಇರಲಿಕ್ಕೆ, ವಾಸಮಾಡಲಿಕ್ಕೆ ಅನುವು ಮಾಡಿಕೊಡುವಿಕೆ.

**निवासी** (ನಿವಾಸೀ) ವಿ. ಸಂ. ವಾಸಮಾಡುವವ, ಇರುವವ. ೨. ನಾಗರಿಕ, ಗ್ರಾಮಸ್ಥ.

**निविदा** (ನಿವಿದಾ) ಸ್ತ್ರೀ. ಸಂ. ಕಟ್ಟಡ, ಸಾಮಾನು ಪೂರೈಕೆ ಇವುಗಳಿಗಾಗಿ ಕೊಟ್ಟ ಗುತ್ತಿಗೆ, ಅರ್ಜಿ– "ಟೆಂಡರ್"

**निविष्ट** (ನಿವಿಷ್ಟ) ವಿ. ಸಂ. ರಜಿಸ್ಟರದಲ್ಲಿ ಅಥವಾ ಖಾತೆಯಲ್ಲಿ ಬರೆದ (ಫಾರ್ಮಿನಲ್ಲಿ) ತುಂಬಿದ.

**निवीत** (ನಿವೀತ) ನ. ಸಂ. ಜನಿವಾರ.

**निवृत्त** (ನಿವೃತ್ತ) ವಿ. ಸಂ. ಹಿಂತಿರುಗಿದ. ೨. ಕೆಲಸ ಮುಗಿಸಿದ, ಸೇವಾನಿವೃತ್ತ, ಪೆನ್‌ಶನ್ ಪಡೆದ, ಅನಾಸಕ್ತ.

**निवृत्ति** (ನಿವೃತ್ತಿ) ಸ್ತ್ರೀ. ಸಂ. ಹಿಂತಿರುಗುವಿಕೆ– ನಿವೃತ್ತಿ, ಸೇವಾನಿವೃತ್ತಿ, ಪೆನ್‌ಶನ್.

**–पूर्व** (–ಪೂರ್ವ) ವಿ. ಪೆನ್‌ಶನ್ ಪಡೆಯುವ ದಕ್ಕಿಂತ ಮುಂಚಿತ.

**–मार्ग** (–ಮಾರ್ಗ) ಪು. ಅನಾಸಕ್ತಿ, ನಿಃಸಂಗ.

**–वेतन** (–ವೇತನ್) ಸಂ. ಪೆನ್‌ಶನ್.

**निवेदक** (ನಿವೇದಕ್) ಪು. ಸಂ. ಹೇಳುವವ, ನಿರೂಪಿಸುವವ.

**निवेदन** (ನಿವೇದನ್) ನ. ಸಂ. ನಿವೇದನ, ನಿರೂಪಣ, ಹೇಳ್ಕೆ, ಉಕ್ತಿ.

**निवेद्य** (ನಿವೇದ್ಯ) ನ. ಸಂ. **नैवेद्य** ನೋ.

**निवेश** (ನಿವೇಶ) ಪು. ಸಂ. ಒಳಹೋಗುವಿಕೆ, ಪ್ರವೇಶ. ೨. (ಫಾರ್ಮು ಇಂ.) ತುಂಬುವಿಕೆ.

**नि:शंक** (ನಿಃಶಂಕ) ವಿ. ಸಂ. ಸಂದೇಹ, ಚಿಂತೆ, ಇಲ್ಲದ.

**–पणे** (–ಪಣೇ) ಕ್ರಿ. ವಿ. ಏನೂ ಚಿಂತೆಮಾಡಿದ.

**नि:शब्द** (ನಿಃಶಬ್ದ) ಕ್ರಿ. ವಿ. ಏನೂ ಸದ್ದು, ಸಪ್ಪಳ ವಿಲ್ಲದ ಶಾಂತ.

**निशा** (ನಿಶಾ) ಸ್ತ್ರೀ. ಸಂ. ರಾತ್ರಿ. ೨. ನಶೆ, ಅಮಲು.

**–कर** (–ಕರ್) ಪು. ಚಂದ್ರ.

**–चर** (–ಚರ್) ಪು. ರಾಕ್ಷಸ, ಭೂತ, ಪಿಶಾಚಿ.

**निशाण** (ನಿಶಾಣ) ನ. ಫಾ. ಚಿನ್ಹ. ೨. ಬಾವುಟ. ೩. ಗುರುತು, ನಿಶಾನೆ.

**निशाणी** (ನಿಶಾಣೀ) ಸ್ತ್ರೀ. ಫಾ. ಗುರುತು, ಚಿನ್ಹ, ಬಾವುಟ, ನಿಶಾನೆ.

**निशापति** (ನಿಶಾಪತಿ) ಪು. ಸಂ. ಚಂದ್ರ.

**निशापाणी** (ನಿಶಾಪಾಣೀ) ಸ್ತ್ರೀ. ಹಿಂ. ಸೆರೆಕುಡಿಯುವಿಕೆ.

**निशिगंध** (ನಿಶಿಗಂಧ) ಪು. ಒಂದು ಸುವಾಸಿಕ ಹೂ.

**निशित** (ನಿಶಿತ) ವಿ. ಸಂ. ಹದನವಾದ, ಹರಿತಾದ, ತೀಕ್ಷ್ಣ.

**निशिदिनी** (ನಿಶಿದಿನೀ) ಕ್ರಿ. ವಿ. ಹಗಲಿರುಳೂ

**–निशी** (–ನಿಶೀ) (ಪ್ರತ್ಯಯ) ಒಡನೆ, ಕೂಡ, ಸಮೇತ.

**निशीथ** (ನಿಶೀಥ) ಪು. ಸಂ. ನಡುರಾತ್ರಿ, ಅರ್ಧ ರಾತ್ರಿ.

**नि:शेष** (ನಿಃಶೇಷ) ವಿ. ಪೂರ್ಣ, ಸಂಪೂರ್ಣ. ಕ್ರಿ. ವಿ. ಪೂರಾ ಏನೂ ಉಳಿಸದೆ.

**निश्चय** (ನಿಶ್ಚಯ) ಪು. ಸಂ. ನಿಶ್ಚಯ, ಸಂಕಲ್ಪ, ಗೊತ್ತುಪಡಿಸುವಿಕೆ (ವಧೂವರರನ್ನು).

**निश्चळ, निश्चल** (ನಿಶ್ಚಳ, ನಿಶ್ಚಲ) ವಿ. ಅಳುಗಾಡದ, ಸ್ಥಿರ, ಅಲಗಾಡದ.

**निश्चित** (ನಿಶ್ಚಿತ) ವಿ. ಸಂ. ಖಂಡಿತ, ಗೊತ್ತುಪಡಿಸಿದ, ಠರಾಯಿಸಿದ.

**निश्चितार्थ** (ನಿಶ್ಚಿತಾರ್ಥ) ಪು. ಸಂ. ಖಂಡಿತವಾದ ಮಾತು.

**निश्चिंत** (ನಿಶ್ಚಿಂತ) ವಿ. ಚಿಂತೆಮಾಡದ, ತೃಪ್ತ. ಕ್ರಿ. ವಿ. ಚಿಂತೆಮಾಡದೆ.

**निश्चिंती** (ನಿಶ್ಚಿಂತೀ) ಸ್ತ್ರೀ. ಚಿಂತೆಯಿಲ್ಲದಾಗುವಿಕೆ, ಸಮಾಧಾನ.

**निश्चेष्ट** (ನಿಶ್ಚೇಷ್ಟ) ವಿ. ಸಂ. ಅಲಗಾಡದ, ಬಿದ್ದುಕೊಂಡ, ಕೈಕಾಲು ತಣ್ಣಗಾದ.

**निश्चेतन** (ನಿಶ್ಚೇತನ) ವಿ. ಸಂ. ಪ್ರಾಣವಿಲ್ಲದ, ನಿಷ್ಪ್ರಾಣ.

**नि:श्वास** (ನಿಃಶ್ವಾಸ) ಪು. ಸಂ. ಉಸಿರು, ನಿಟ್ಟುಸಿರು. ೨. ದುಃಖ, ಉದ್ವೇಗ.

**निषाद** (ನಿಷಾದ) ಪು. ಸಂ. ಗುಡ್ಡಗಾಡು ಪ್ರದೇಶದವ, ಗಿರಿಜನ. ೨. ಅಸ್ಪೃಶ್ಯ. ೩. ಏಳು ಸ್ವರಗಳಲ್ಲಿ (ಸಾ, ರೇ, ಗ, ಮ, ಪ ಧ-ನಿ–) ಕೊನೆಯ ಸ್ವರ. "ನಿ".

**निषिद्ध** (ನಿಷಿದ್ಧ) ವಿ. ಸಂ. ನಿಲ್ಲಿಸಿದ, ತಡೆಮಾಡಿದ, ಅಗ್ರಾಹ್ಯ–ಧರ್ಮವಿರುದ್ಧ. ೨. ಅಲ್ಲಗಳೆಯುವಿಕೆ. ೩. ಖಂಡನೆ. ೪. ನಿಂದೆ.

**निष्क** (ನಿಷ್ಕ) ಪು. ಸಂ. ಬಂಗಾರದ (ನಾಣ್ಯ).

**निष्कंटक** (ನಿಷ್ಕಂಟಕ) ವಿ. ಸಂ. ಮುಳ್ಳು–ಆತಂಕ– ಅಡ್ಡಿಯಿಲ್ಲದ.

**निष्कपट** (ನಿಷ್ಕಪಟ) ವಿ. ಸಂ. ಕಪಟವಿಲ್ಲದ, ಸರಳ ಸ್ವಭಾವದ.

**निष्करुण** (ನಿಷ್ಕರುಣ) ವಿ. ಸಂ. ಕರುಣೆಯಿಲ್ಲದ, ನಿರ್ದಯ.

**निष्कर्ष** (ನಿಷ್ಕರ್ಷ) ಪು. ಸಂ. ಸಾರ, ತಿರುಳು, ಸಿದ್ಧಾಂತ, ತರ್ಕ.

**निष्कलंक** (ನಿಷ್ಕಲಂಕ) ವಿ. ಸಂ. ಕಲಂಕವಿಲ್ಲದ, ನಿರ್ದೋಷವಾದ.

**निष्कांचन** (ನಿಷ್ಕಾಂಚನ) ವಿ. ಸಂ. ದುಡ್ಡಿಲ್ಲದವ, ದರಿದ್ರ.

**निष्काम** (ನಿಷ್ಕಾಮ) ವಿ. ಸಂ. ಇಚ್ಛೆ, ಆಸ್ಥೆಯಿಲ್ಲದ. ನಿಃಸ್ವಾರ್ಥ.

**निष्कारण** (ನಿಷ್ಕಾರಣ) ಕ್ರಿ. ವಿ. ಸಂ. ಕಾರಣವಿಲ್ಲದೆ, ವ್ಯರ್ಥವಾಗಿ.

**निष्कासन** (ನಿಷ್ಕಾಸನ) ನ. ಪು. ಹೊರಗೆ ಹಾಕುವಿಕೆ.

**निष्क्रिय** (ನಿಷ್ಕ್ರಿಯ) ವಿ. ಸಂ. ಏನೂ ಕೆಲಸಮಾಡದ ಸ್ವಸ್ಥವಾಗಿ ಕೂಡುವ.

**निष्ठ** (ನಿಷ್ಠ) ವಿ. ಸಂ. ನಿಷ್ಠೆಯುಳ್ಳ, ತದೇಕ ಧ್ಯಾನ ವುಳ್ಳ, ಪ್ರಾಮಾಣಿಕ.

**निष्ठा** (ನಿಷ್ಠಾ) ಸ್ತ್ರೀ. ಸಂ. ಭಕ್ತ ಮೆಚ್ಚುಗೆ, ವಿಶ್ವಾಸ.

**निष्ठुर** (ನಿಷ್ಠುರ) ವಿ. ಸಂ. ಕಠೋರ, ನಿರ್ದಯ.

**निष्णा** (ನಿಷ್ಣಾ) ಪು. ಸಂ. ಸಾಣೆಕಲ್ಲು.

**निष्णात** (ನಿಷ್ಣಾತ) ವಿ. ಸಂ. ಕಲಾವಿದ, ಅನುಭವ ವುಳ್ಳ.

**निष्पन्न** (ನಿಷ್ಪನ್ನ) ವಿ. ಸಂ. ಸಿದ್ಧವಾದ, ತರ್ಕ ಮಾಡಿದ. ೨. ಹುಟ್ಟಿಸಿದ. ೩. ಉಂಟಾದ.

**निष्पत्ति** (ನಿಷ್ಪತ್ತಿ) ಸ್ತ್ರೀ. ಉಂಟಾಗುವಿಕೆ. ೨. ತರ್ಕ. ೩. ಉತ್ಪತ್ತಿ. ೪. ಲಾಭ, ಹಿತ.

**निष्पर्ण** (ನಿಷ್ಪರ್ಣ) ವಿ. ಸಂ. ಎಲೆ ಉದುರಿದ, ಒಣ ಗಿದ, ಬರಿದಾದ (ಗಿಡ)

**निष्पक्षपात** (ನಿಷ್ಪಕ್ಷಪಾತ) ಪು. ಪಕ್ಷಪಾತವಿಲ್ಲದಿರು ವಿಕೆ, ತಟಸ್ಥತೆ, ನ್ಯಾಯ ಸಮೇತವಾಗಿರುವಿಕೆ.

**निष्पक्षपाती** (ನಿಷ್ಪಕ್ಷಪಾತೀ) ಪು. ಸಂ. ತಟಸ್ಥ, ಪಕ್ಷ ಪಾತವಿದಿಲ್ಲದ.

**निष्पादन** (ನಿಷ್ಪಾದನ) ನ. ಸಂ. ಸಂಪಾದನೆ, ಪ್ರಾಪ್ತಿ, ಗಳಿಸುವಿಕೆ, ಲಾಭ.

**निष्पाप** (ನಿಷ್ಪಾಪ) ವಿ. ಸಂ. ಪಾಪವಿಲ್ಲದ, ಸೌಮ್ಯ, ಒಳ್ಳೆಯ, ನಿರ್ದೋಷ.

**निष्प्रभ** (ನಿಷ್ಪ್ರಭ) ವಿ. ಸಂ. ತೇಜವಿಲ್ಲದ ಮಂದ ವಾದ, ಕತ್ತಲೆಯ ಗಿಡದ ೨. ಪ್ರಭಾವವಿಲ್ಲದ.

**निष्प्रयोजन** (ನಿಷ್ಪ್ರಯೋಜನ) ವಿ. ಸಂ. ಪ್ರಯೋಜನ ವಿಲ್ಲದ, ನಿರರ್ಥಕ.

**निष्फल-ळ** (ನಿಷ್ಫಲ-ಳ) ವಿ. ಸಂ. ಫಲವಿಲ್ಲದ, ವ್ಯರ್ಥ.

**निसंग** (ನಿಸಂಗ್) ವಿ. ಸಂಗ, ಆಸಕ್ತಿಯಿಲ್ಲದ.

**निसटणे** (ನಿಸಟಣೇ) ಕ್ರಿ. ಅ. ಹೊರಟುಹೋಗು, ಪಾರಾಗು, ಓಡಿಹೋಗು.

**निसणा** (ನಿಸಣಾ) ಪು. ಸಾಣೆಯಕಲ್ಲು.

**निसणे** (ನಿಸಣೇ) ಕ್ರಿ. ಸ. ಚರ್ಮ, ತೊಗಟೆ ಮುಂ. ದನ್ನು ಸುಲಿ.

**निसंतान** (ನಿಸಂತಾನ) ವಿ. ಸಂ. ಸಂತಾನವಿಲ್ಲದ, ಮಕ್ಕಳಿಲ್ಲದ.

**नि:सत्व** (ನಿಃಸತ್ವ) ವಿ. ಸಂ. ಸಾರವಿಲ್ಲದ, ತಿರುಳಿಲ್ಲದ.

**नि:संदेह** (ನಿಃಸಂದೇಹ) ವಿ. ಸ. ಸಂದೇಹವಿಲ್ಲದ, ಖಂಡಿತವಾದ. ಕ್ರಿ. ವಿ ಖಂಡಿತವಾಗಿ.

**नि:संदिग्ध** (ನಿಃಸಂದಿಗ್ಧ) ವಿ.ಸಂ. ಸ್ಪಷ್ಟವಾದ, ಸಂದೇಹ ವಲ್ಲದ.

**–पणे** (–ಪಣೇ) ಕ್ರಿ. ವಿ. ಸಂದೇಹವಿಲ್ಲದೆ, ಖಂಡಿತ ವಾಗಿ.

**निसबत** (ನಿಸಬತ್) ಕ್ರಿ. ವಿ. ಅರ. ಸಂಬಂಧ. ೨. ಸಂಬದ್ಧ.

**निरगाठ** (ನಿರಗಾಠ) ಸ್ತ್ರೀ. ಬಿಡಿಸಲಿಕ್ಕೆ ಕಠಿಣವಾದ ಗಂಟು.

**निसरडा** (ನಿಸರಡಾ) ವಿ. ಜಾರುವ, ಜಾರಿಬೀಳು ವಂತಹ.

**निसरडे** (ನಿಸರಡೇ) ನ. ಜಾರಿ ಬೀಳುವಂತಹ ಸ್ಥಳ ಹಾವಸೆ, ಕಾಲು ಜಾರುವಂತಹ ಸ್ಥಳ.

**निसरणे** (ನಿಸರಣೇ) ಕ್ರಿ. ವಿ. ಜಾರಿಹೋಗು.

**निसर्ग** (ನಿಸರ್ಗ) ಪು. ಸಂ. ದೈವ, ನಿಯತಿ, ನಿಸರ್ಗ.

**–प्रेरणा** (–ಪ್ರೇರಣಾ) ಪು. ನಿಸರ್ಗದ ಪ್ರೇರಣೆ.

**–रम्य** (–ರಮ್ಯ) ವಿ. ಸಂ. ಚಂದ ಕಾಣುವ, ನೈಸರ್ಗಿಕ (ದೃಶ್ಯ)

**निसवणे** (ನಿಸವಣೇ) ಕ್ರಿ. ಅ. ತೆನೆಬರು, ಪಕ್ವವಾಗು. ೨. ನಾಚಿಕೆಬಿಡು, ನಿರ್ಲಜ್ಜನಾಗು.

**नि:संशय** (ನಿಃಸಂಶಯ) ಕ್ರಿ. ವಿ. ಸಂಶಯವಿಲ್ಲದೆ, ಖಂಡಿತವಾಗಿ.

**निस्तरणे** (ನಿಸ್ತರಣೇ) ಕ್ರಿ. ಸಂ. ಹೇಗಾದರೂ ಮಾಡಿ ಮುಗಿಸು, ಕೆಟ್ಟ ಕೆಲಸದ ಶಿಕ್ಷೆ ಅನುಭವಿಸು.

**निस्तारण** (ನಿಸ್ತಾರಣ) ನ. ಸಂ. ಹಾನಿ ತುಂಬಿ ಕೊಡುವಿಕೆ. ೨. ಬಿಡುವು, ಬಿಡುಗಡೆ.

**निस्तारणे** (ನಿಸ್ತಾರಣೇ) ಕ್ರಿ. ಸ. ಮಾಡಿ ತಪ್ಪಿ.

**निस्तेज** (ನಿಸ್ತೇಜ) ವಿ. ಸಂ. ತೇಜವಿಲ್ಲದ, ನಿಷ್ಪ್ರಭ, ಪ್ರಭಾವವಿಲ್ಲದ.

**निस्पंद** (ನಿಸ್ಪಂದ) ವಿ. ಸ್ಥಿರ, ಅಗಳಾಡದ.

**निस्नेह** (ನಿಸ್ನೇಹ) ವಿ. ಸಂ. ಎಣ್ಣೆಯಿಲ್ಲದ, ಗೆಳೆತನ ವಿಲ್ಲದ.

**निस्पंद** (ನಿಸ್ಪಂದ) ವಿ. ಸಂ. ಸೂಸುವ. ೨. ರಸ, ಸಾರ.

**नि:सीम** (ನಿಃಸೀಮ) ವಿ. ಸಂ. ಅಳತೆಗೆಟ್ಟ, ಅಳತೆ ಮೀರಿದ, ಪರಿಮಿತಿಯಿಲ್ಲದ.

**निस्पृह** (ನಿಸ್ಪೃಹ) ವಿ. ಸಂ. ನಿರಿಚ್ಛ, ಸ್ವಾರ್ಥವಿಲ್ಲದವ.

**नि:संग** (ನಿಃಸಂಗ) ವಿ. ಸಂ. ಆಸಕ್ತಿಯಿಲ್ಲದವ, ಅನಾ ಸಕ್ತ.

**–निहाय** (–ನಿಹಾಯ) ಪ್ರತ್ಯಯ. ಅರ. ತಲೆಗೊಂದು ೨. ಕ್ರಮದಿಂದ ೩. ಪ್ರತಿಯೊಂದು.

**निहाळणे** (ನಿಹಾಳಣೇ) ಕ್ರಿ. ಸ. ಸೂಕ್ಷ್ಮವಾಗಿ ನೋಡು, ಪರೀಕ್ಷಿಸು ಪತ್ತೆದಾರಿ ಮಾಡು.

**निहित** (ನಿಹಿತ) ವಿ. ಸಂ. ಇಟ್ಟ, ಸ್ಥಾಪಿತ.

**–स्वार्थ** (–ಸ್ವಾರ್ಥ) ಪು. (ಬಂಡವಾಳ, ಬಳಗ ಮುಂ. ಬಗೆಗೆ) ಸ್ವಾರ್ಥ ಸಾಧನೆಯ ವ್ಯವಸ್ಥೆ.

**निळा** (ನೀಳಾ) ವಿ. ನೀಲಿ ಬಣ್ಣದ.

**निळे** (ನಿಳೇ) ವಿ. ನೀಲೆಯ ಬಣ್ಣದ ೨. ಹಸಿಹುಲ್ಲು.

**निक्षिप्त** (ನಿಕ್ಷಿಪ್ತ) ವಿ ಸಂ. ಇಟ್ಟ, ವಶದಲ್ಲಿ ಕೊಟ್ಟ ಇಡುಗಂಟು, ಠೇವಣಾತಿ.

**निक्षून** (ನಿಕ್ಷೂನ್) ಕ್ರಿ. ವಿ. ಮುಚ್ಚುಮರೆ ಮಾಡದೆ, ಸ್ಪಷ್ಟವಾಗಿ.

**निक्षेप** (ನಿಕ್ಷೇಪ್) ಪು. ಸಂ. ನಿಧಿ, ಸಂಗ್ರಹ ೨. ಹೂಳಿಟ್ಟಧನ– ೩. ಭೂಗರ್ಭ. ದಲ್ಲಿಯ ಸಂಪತ್ತು.

**निंदक** (ನಿಂದಕ) ಪು. ಸಂ. ನಿಂದಿಸುವವ, ನಿಂದೆ ಮಾಡುವವ.

**निंदणे** (ನಿಂದಣೇ) ಕ್ರಿ. ಸಂ. ನಿಂದಿಸು, ಟೀಕಿಸು, ದೂರುಹೇಳು, ಹಳಿ.

**निंदनीय** (ನಿಂದನೀಯ) ವಿ. ಸಂ. ನಿಂದಿಸತಕ್ಕ, ನಿಂದ್ಯ.

**निंदा** (ನಿಂದಾ) ಸ್ತ್ರೀ. ಸಂ. ಬಿರುನುಡಿ, ದೂರು, ದೂಷಣೆ, ನಿಂದೆ.

**–पर,व्यंजक** (ಪರ ವ್ಯಂಜಕ) ವಿ. ನಿಂದಿಸುವ, ನಿಷೇಧ ತೋರಿಸುವ.

**–खोर** (ಖೋರ್) ವಿ. ಹಳಿಯುವವ.

**निंदित** (ನಿಂದಿತ) ವಿ. ಸಂ. ನಿಂದಿಸಿದ, ಹಳಿದ, ಟೀಕಿ ಸಿದ.

**निंद्य** (ನಿಂದ್ಯ) ವಿ. ಸಂ. ನಿಂದಿಗೆ ಯೋಗ್ಯವಾದ, ಹಳಿಯತಕ್ಕ.

**निंब** (ನಿಂಬ) ಪು. ಬೇವಿನ ಗಿಡ, ತೊಪ್ಪಲ.

**–लोण** (ಲೋಣ) ನ. ಸಂ. ದೃಷ್ಟಿಯಾಗಬಾರ ದೆಂದು ಕಟ್ಟಿದ ಬೇವಿನ ಎಲೆ.

**निंबोणी** (ನಿಂಬೋಣೀ) ಸ್ತ್ರೀ. ಬೇವಿನಮರ.

**निमा** (ನಿಮ್ಮಾ) ವಿ. ಫಾ. ಸಂ. ಅರ್ಧದಷ್ಟು, ಅರ್ಧ.

**निमेशिमे** (ನಿಮೆಶಿಮೆ) ವಿ. ಸುಮಾರು ಅರ್ಧದಷ್ಟು.

**नी, नि** (ನೀ, ನಿ) ಅವ್ಯಯ, **आणि** ನೋಡಿರಿ.

**नीच** (ನೀಚ) ವಿ. ಸಂ. ನೀಚ ಮನುಷ್ಯ.

**–गा** (–ಗಾ) ಸ್ತ್ರೀ. ನದಿ.

**–ग्रह** (ಗ್ರಹ) ಪು. ಕಡಿಮೆ ತರಗತಿಯ ಗ್ರಹ.

**नीज** (ನೀಜ) ಸ್ತ್ರೀ. ನಿದ್ದೆ, ನಿದ್ರೆ.

**नीट** (ನೀಟ್) ಕ್ರಿ. ವಿ. ಒಳಿತಾಗಿ, ಚನ್ನಾಗಿ, ೨. ವಿ. ಉತ್ತಮ.

**–नेटका** (–ನೇಟಕಾ) ವಿ. ವ್ಯವಸ್ಥಿತ ಅಚ್ಚುಕ ಟ್ಟಾದ.

**–नीटकरणे** (ನೀಟ್‌ಕರಣೇ) ಕ್ರಿ. ಸ. ನೆಟ್ಟಗೆ ಮಾಡು, ದುರಸ್ತುಮಾಡು. ೨. (ಕಾಳುಕಡಿ) ಆರಿಸು.

**नीड** (ನೀಡ್) ನ. ಸಂ. ಗೂಡು, ಪಕ್ಷಿಯಮನೆ.

**नीति** (ನೀತಿ) ಸ್ತ್ರೀ. ಸಂ. ನೀತಿ, ನಯ, ಸದಾಚಾರ, ಲೋಕಾಚಾರ.

**–मत्ता** (–ಮತ್ತಾ) ಸ್ತ್ರೀ. ಸಂ. ನೀತಿಯಿಂದ ನಡೆ ಯುವಿಕೆ, ನೈತಿಕತೆ.

**–मान्** (–ಮಾನ್) ವಿ. ನೀತಿವಂತ, ಸದಾಚಾರಿ.

**नीर** (ನೀರ) ನ. ಸಂ. ನೀರು, ಜಲ.

**नीरज** (ನೀರಜ) ಪು. ಸಂ. ಕಮಲ.

**नीरस** (ನೀರಸ್) ವಿ. ಸಂ. ಸ್ವಾರಸ್ಯವಿಲ್ಲದ, ಸಪ್ಪ ಗಾದ.

**नीरांजन** (ನೀರಾಂಜನ) ನ. ಸಂ. ನೀಲಾಂಜನ, ಆರ ತಿಯ ದೀಪ.

**नील, नीळ** (ನೀಲ ನೀಳ್) ಸ್ತ್ರೀ. ನೀಲಿ, ನೀಲಿಯ ಬಣ್ಣ.

**–कंठ** (–ಕಂಠ) ಪು. ಶಿವ, ನಂಜುಂಡ. ೨. ನವಿಲು.

**–गाय** (ಗಾಯ) ಸ್ತ್ರೀ. ಕರಿಯ ಬಿಳಿಗಾಲಿನ ಎರಳೆ

**नीलिमा** (ನೀಲಿಮಾ) ನ. ಪು. ನೀಲಿಯ ಬಣ್ಣ, ನೀಲ. ವರ್ಣ.

**नीली** (ನೀಲೀ) ಸ್ತ್ರೀ. ನೀಲಿಯ ಬಣ್ಣ.

**नीवी** (ನೀವೀ) ಸ್ತ್ರೀ. ಹೆಂಗಸರು ಟೊಂಕಕ್ಕೆ ಸುತ್ತಿ ಕೊಳ್ಳುವ ವಸ್ತ್ರ.

**नीळ** (ನೀಳ್) ಸ್ತ್ರೀ. ನೀಲಿ.

**नुकता ,नुक्ता** (ನುಕತಾ) (ನುಕ್ತಾ) ವಿ. ತೀರಹೊಸ ಕ್ರಿ. ವಿ. ಅದೇ, ತೀರ ಹೊಸತಾಗಿ.

**नुकसान** (ನುಕ್‌ಸಾನ್) ನ. ಅರ. ಹಾನಿ, ಲುಕ್ಸಾನಿ, ಕಷ್ಟ ನಷ್ಟ.

**नुपेक्षा** (ನುಪೇಕ್ಷಾ) ಸ್ತ್ರೀ. ಉಪೇಕ್ಷೆ, ಅವಹೇಲನ, ದುರ್ಲಕ್ಷ ಮಾಡದಿರುವಿಕೆ.

**नुमगणे** (ನುಮುಗಣೇ) ಕ್ರಿ. ಅ. ತಿಳಿಯದಾಗು, ಕಾಣ ದಂತಾಗು, ತೋಚದಾಗು.

**नुरणे** (ನುರಣೇ) ಕ್ರಿ. ಅ. ಉಳಿಯದಿರು, ಅಳಿದುಹೋಗು.

**नुसता–नुस्ता** (ನುಸತಾ–ನುಸ್ತಾ) ವಿ. ಕೇವಲ, ಕೇವಲವಾಗಿ.

**नूतन** (ನೂತನ) ವಿ. ಸಂ. ಹೊರತಾದ, ಹೊಸ, ನೂತನ, ನವ್ಯ.

**नूतनीकरण** (ನೂತನೀಕರಣ) ನ. ಸಂ. ಹೊಸತಾಗಿ ಮಾಡು, ಪುನರುಜ್ಜೀವನಮಾಡು.

**नूपुर** (ನೂಪುರ) ನ. ಸಂ. ಕಾಲಿನಸರಪಣಿ, ಪೈಜಣ.

**नूर** (ನೂರ್) ಪು. ಅರ. ತೇಜ. ೨. ಮುಖಮುದ್ರೆ. ೩. ನಡಾವಳಿ.

**नृत्य** (ನೃತ್ಯ) ನ. ಸಂ. ಕುಣಿತ.

**नृप, नृपति नृपाळ** (ನೃಪ, ನೃಪತಿ, ನೃಪಾಳ್) ಪು. ಸಂ. ಅರಸ, ರಾಜ.

**नृशंस** (ನೃಶಂಸ) ವಿ. ಸಂ ದುಷ್ಟ, ದುರಾಚಾರಿ.

**ने–आण** (ನೇಆಣ್) ಸ್ತ್ರೀ. ಸರಕು, ಸಾಮಾನುಗಳನ್ನು ತರುವಿಕೆ, ಒಯ್ಯುವಿಕೆ ಮತ್ತು ಮುಟ್ಟಿಸುವಿಕೆ, ಸಾಗಾಣಿಕೆ.

**नेक** (ನೇಕ್) ವಿ. ಫಾ. ಒಳ್ಳೆಯವ, ಸುಸ್ವಭಾವಿ, ಸಜ್ಜನ.

**–नामदार** (–ನಾಮದಾರ್) ವಿ. ಬ್ರಿಟಿಶ್, ಪಾರ್ಲಿಮೆಂಟಿನ, ಪ್ರಿವ್ಹಿ, ಕೌನ್ಸಿಲನ ಸದಸ್ಯ, ರೈಟ್ ಆನರೇಬಲ್.

**नेकी** (ನೇಕೀ) ಸ್ತ್ರೀ. ಒಳ್ಳೆಯತನ, ಸೌಜನ್ಯ.

**नेचा** (ನೇಚಾ) ಪು. ಫಾ. ವೇಣು. ೨. ಕೊಳವೆ, (ಗುಡಗುಡಿಯ)

**नेट** (ನೇಟ್) ಪು. ಪರಿಶ್ರಮ. ೨. ಒತ್ತಾಯ. ೩. ಪ್ರಯತ್ನ.

**नेटका** (ನೇಟಕಾ) ವಿ. ಕ. ಸುವ್ಯವಸ್ಥಿತ, ನೆಟ್ಟಗಿದ್ದ. (ನೆಟ್ಟಗೆ)

**नीट–** (ನೀಟ್–) ವಿ. ಚಂದ, ಡೌಲಾದ, ಚೊಕ್ಕಟ್ಟಾದ.

**नेटणे** (ನೇಟಣೇ) ಕ್ರಿ. ಸಂ. ಸಾಗಿಸು, ಪ್ರಯತ್ನಿಸು, ಮುಂದುವರಿಸು.

**नेटावा** (ನೇಟಾವಾ) ಪು. ಪ್ರಯತ್ನ. ೨. ಬೆಂಬಲ, ಅತಿ ಪ್ರಯತ್ನ.

**नेढ–नेढे** (ನೇಢ, ನೇಢೆ) ನ. ಸಂ. ಸೂಜಿಯ ಕಣ್ಣು.

**नणणे** (ನೇಣಣೇ) ಕ್ರಿ. ಅ. ತಿಳಿಯದಿರು, ತಿಳಿಯಲು ಅಸಾಧ್ಯವಾಗಿರು.

**नेणता** (ನೇಣತಾ) ವಿ. ಅಜ್ಞಾನಿ, ಅಶಿಕ್ಷಿತ.

**नेणतेपण** (ನೇಣತೆಪಣ್) ನ. ಅಜ್ಞಾನ, ತಿಳುವಳಿಕೆ ಯಿಲ್ಲದಿರುವಿಕೆ.

**नेणे** (ನೇಣೇ) ಕ್ರಿ. ಸ. ಒಯ್ಯು, ತೆಗೆದುಕೊಂಡು ಹೋಗು.

**नेता** (ನೇತಾ) ಪು. ಸಂ. ನೇತಾರ, ಮುಖಂಡ, ಪುಢಾರಿ.

**नेतृत्व** (ನೇತೃತ್ವ) ನ. ಸಂ. ನೇತೃತ್ವ, ಧುರೀಣತ್ವ.

**नेत्र** (ನೇತ್ರ) ಸ. ಸಂ. ಕಣ್ಣು.

**–कटाक्ष** (–ಕಟಾಕ್ಷ) ಪು. ಓರೆನೋಟ, ಕಾಮಚೇಷ್ಟೆ.

**–पल्लव** (–ಪಲ್ಲವ) ರೆಪ್ಪೆ.

**–पल्लवी** (–ಪಲ್ಲವೀ) ಸ್ತ್ರೀ. ಕಣ್ಣುಸನ್ನೆ.

**–हीन** (–ಹೀನ) ವಿ. ಕುರುಡ.

**नेपथ्य** (ನೇಪಥ್ಯ) ನ. ಸಂ. ನಾಟಕದಲ್ಲಿಯ ವೇಷ ಭೂಷೆ. ೨. ಪಡೆದೆ, ೩. ಬಣ್ಣಹಚ್ಚುವ ಕೋಣೆ. ೪. ಉಡಿಗೆ ತೊಡಿಗೆ.

**नेभळट** (ನೆಭಳಟ್) ವಿ. ಅಸಡ್ಡಾಳ, ಅಸ್ತಾವ್ಯಸ್ತ. ೨. ತಿಳುವಳಿಕೆ ಇಲ್ಲದವ, ತಿಳಿಗೇಡಿ.

**नेम** (ನೇಮ್) ಪು. ನಿಯಮ, ವ್ರತ, ತಪ್ಪದೆಮಾಡುವ ಸಂಗತಿ.

**नेमका** (ನೇಮಕಾ) ವಿ. ಅದೇ, ಬೇಕಾದುದೇ. ೨. ಕ್ರಿ. ವಿ. ಬೇಡಿದುದೇ. ೩. ಬೇಡಾದುದೇ.

**नेमणूक** (ನೇಮಣೂಕ್) ಸ್ತ್ರೀ. ನಿಯುಕ್ತಿ, ಕೆಲಸಕ್ಕೆ ಹಚ್ಚುವಿಕೆ.

**नेमणे** (ನೇಮಣೇ) ಕ್ರಿ. ವಿ. ನಿಯಮಿಸು.

**नेमधर्म** (ನೇಮಧರ್ಮ) ಪು. ಸಂ. ವ್ರತಪಾಲನ, ಪೂಜೆ, ಪುನಸ್ಕಾರ.

**नेमस्त** (ನೇಮಸ್ತ) ವಿ. ಮಧ್ಯಮ ಮಾರ್ಗದ, ಅತಿ ರೇಕಿಯಲ್ಲದ.

**नेमानेम** (ನೇಮಾನೇಮ್) ಪು. ದೈವಗತಿ. ೨. ಕಟ್ಟಳೆ ಕಾನೂನು. ೩. ಆಗುಹೋಗು.

**नेसणे** (ನೆಸಣೇ) ಕ್ರಿ. ಸ.ಧರಿಸು,ತೊಡು, ಉಟ್ಟುಕೊ.

**नेसवणे** (ನೇಸವಣೇ) ಕ್ರಿ. ಸ. ಉಡಿಸು, ಧಾರಣ ಮಾಡಿಸು, ತೊಡಿಸು.

**नेस्तनाबूद** (ನೇಸ್ತ್‌ನಾಬೂದ್) ವಿ. ಸಂ. ನಾಶ ಹೊಂದಿದ, ನಷ್ಟವಾದ.

**–करणे** (–ಕರಣೇ) ಕ್ರಿ. ಸ. ನಾಶಗೊಳಿಸು, ಧ್ವಂಸ ಮಾಡು.

**नेहमी** (ನೇಹಮೀ) ಕ್ರಿ. ವಿ. ಯಾವಾಗಲೂ, ವಾಡಿಕೆ ಯಾಗಿ.

**नैतिक** (ನೈತಿಕ) ವಿ. ಸಂ. ನೀತಿಯ, ನೈತಿಕ, ಸದಾ ಚಾರ ವಿಷಯದ.

**नैपुण्य** (ನೈಪುಣ್ಯ) ನ. ಸಂ. ನಿಪುಣತೆ, ಕುಶಲತೆ.

**नैमित्तिक** (ನೈಮಿತ್ತಿಕ) ವಿ. ಸಂ. ಯಾವಾಗಲಾದ ರೊಮ್ಮೆ ಒದಗುವ, ನಿತ್ಯವಾಗಿ ಸಂಭವಿಸಿದ.

**नैयायिक** (ನೈಯ್ಯಾಯಿಕ್) ವಿ. ಸಂ. ನ್ಯಾಯ ಶಾಸ್ತ್ರವನ್ನು ಬಲ್ಲವ, ನ್ಯಾಯಶಾಸ್ತ್ರ ವಿಶಾರದ.

**नैरंतर्य** (ನೈರಂತರ್ಯ) ನ.ಸಂ. ನಿರಂತರವಾಗಿ ನಡೆ ಯುವಿಕೆ, ಅಖಂಡತ್ವ.

**नैऋत्य** (ನೈಋತ್ಯ) ಸ್ತ್ರೀ. ನೈರುತ್ಯ ದಿಕ್ಕು, ದಕ್ಷಿಣ–ಪಶ್ಚಿಮ ದಿಗ್ಭಾಗ.

**नैराश्य** (ನೈರಾಶ್ಯ) ನ. ಸಂ. ನಿರಾಶೆ, ಉತ್ಸಾಹ ಹೀನತೆ, ನಿರುತ್ಸಾಹ.

**नैवेद्य** (ನೈವೇದ್ಯ) ನ. ಸಂ. ನೇವೇದ್ಯ, ದೇವರಿಗೆ ಅರ್ಪಿಸಿದ ಹಣ್ಣು-ಅನ್ನ ಇತ್ಯಾದಿ.

**नैष्कर्म्य** (ನೈಷ್ಕರ್ಮ್ಯ) ವಿ. ಸಂ. ಏನನ್ನೂ ಮಾಡ ದಿರುವಿಕೆ. ೨. ಕೃತಿಹೀನತೆ. ೩. ಕರ್ಮಪರಿತ್ಯಾಗ.

**नैष्ठिक** (ನೈಷ್ಠಿಕ) ವಿ. ಸಂ. ನಿಷ್ಠಾವಂತ, ಭಾವಿಕ. ಭಕ್ತ.

**–ब्रम्हचर्य** (–ಬ್ರಹ್ಮಚರ್ಯ) ನಿಷ್ಠಾಪೂರ್ವಕ ಬ್ರಹ್ಮಚರ್ಯ ವ್ರತಪಾಲನ.

**नैसर्गिक** (ನೈಸರ್ಗಿಕ) ವಿ. ಸಂ. ಸಹಜವಾದ, ನಿಯತಿ ಗನುಸರಿಸಿರುವ, ನಿಸರ್ಗ ನಿಯಮಕ್ಕನುಸರಿಸುವ.

**नोक** (ನೋಕ್) ಪು. ಅಂದ.

**–झोक** (–ಝೋಕ್) ಪು. ಡೌಲು, ಸೊಬಗು.

**नोकर** (ನೋಕರ್) ಪು. ಫಾ. ಆಳು, ದೂತ, ನೌಕರಿ ಮಾಡುವವ, ಊಳಿಗದವ, ಸಿಬ್ಬಂದಿಯವ.

**–शाही** (–ಶಾಹೀ) ಸ್ತ್ರೀ. ನೌಕರರ ಅಧಿಕಾರಿ ವರ್ಗದ ಇಚ್ಛೆಯ ಮೇರೆಗೆ ನಡೆದ ಆಡಳಿತ.

**नोर** (ನೋರ್) ಪು. ದೋಣಿಯ ಹಡಗದ ಬಾಡಿಗೆ.

**नोहे** (ನೋಹೇ) ಅವ್ಯಯ. ಅಲ್ಲ, ಹಾಗಲ್ಲ.

**नोंद** (ನೋಂದ್) ಸ್ತ್ರೀ. ಫಾ. (ನಮೂದ್) ರಜಿಸ್ಟರ ದಲ್ಲಿ ಸೇರ್ಪಡೆ, ಬರೆಹ, ಲಿಖಿತ.

**नोंदणी** (ನೋಂದಣೀ) ಸ್ತ್ರೀ. ರಜಿಸ್ಟ್ರೇಷನ್‌ಬರೆದಿಡು ವಿಕೆ.

**नोंदणे** (ನೊಂದಣೇ) ಕ್ರಿ. ಸ. ಬರೆದಿಡು, ಉಲ್ಲೇ ಖಿಸು, ರಜಿಸ್ಟರ್ ಮಾಡು.

**नौका** (ನೌಕಾ) ಸ್ತ್ರೀ. ಸಂ. ನೌಕೆ, ನಾವೆ, ದೋಣಿ, ಹಡಗ.

**–खाते** (ಖಾತೆ) ನ. (ಸಮುದ್ರದಲ್ಲಿಯ) ಸಾಗಣೆ ಹಡಗುಪಡೆಯ ವಿಭಾಗ.

**–दंड** (–ದಂಡ್) ಪು. ನೌಕೆಯ ಹುಟ್ಟು.

**–दल** (ದಲ್) ನ. ಸಂ. ಹಡಗುಪಡೆ, ಸಮುದ್ರ ಸಂರಕ್ಷಕ ದಲ.

**–नयन शास्त्र** (–ನಯನ ಶಾಸ್ತ್ರ) ನ. ಹಡಗವನ್ನು ನಡೆಸುವ ವಿಷಯದಲ್ಲಿಯ ಶಾಸ್ತ್ರ.

**–विहार** (–ವಿಹಾರ್) ಪು. ನೌಕೆಯಲ್ಲಿ ಕುಳಿತು ಮಾಡುವ ಸುಖವಿಹಾರ.

**नौदल** (ನೌದಲ) ನ. ಸಂ. ಯುದ್ಧದ ಹಡಗುಪಡೆ.

**नौबत** (ನೌಬತ್) ಸ್ತ್ರೀ ಫಾ. ನಗಾರೆ, ನೌಬತ್ತು.

**नौसेना** (ನೌಸೇನಾ) ಸ್ತ್ರೀ. ಸಂ. ಯುದ್ಧದ ಹಡಗ ದಲ್ಲಿಯ ಸೈನ್ಯ.

**–न्यायालय** (–ನ್ಯಾಯಾಲಯ) ನೌಕಾ ಸೈನ್ಯದ ನ್ಯಾಯಾಲಯ.

**न्याय** (ನ್ಯಾಯ) ಪು. ಅ. ಔಚಿತ್ಯ. ೨. ನ್ಯಾಯ. ೩. ತರ್ಕ. ೪. ಉಪಮೆ.

**–इनसाफ** (–ಇನ್‌ಸಾಫ್) ಪು. ನ್ಯಾಯ,ನ್ಯಾಯ ಬುದ್ಧಿ.

**–नीती** (–ನೀತೀ) ಸ್ತ್ರೀ. ಸದಾಚಾರ.

–मनसूबा (–ಮನಸೂಬಾ) ಪು. ನ್ಯಾಯಾಲಯ ದಲ್ಲಿ ನಡೆದ ಕಜ್ಜೆ.

–मंदिर (ಮಂದಿರ) }
–सभा (ಸಭಾ) } ನ. ನ್ಯಾಯಾಲಯ

**न्यायाधीन** (ನ್ಯಾಯಾಧೀನ) ವಿ. ಕೋರ್ಟಿನಲ್ಲಿ ವಿಚಾರಾಧೀನವಿದ್ದ ಪ್ರಕರಣ.

**न्यायाधीश** (ನ್ಯಾಯಾಧೀಶ) ಪು. ನ್ಯಾಯಾಧೀಶ.

**न्यायशास्त्र** (ನ್ಯಾಯಶಾಸ್ತ್ರ) ನ. ಹಿಂದುಗಳ ಆರು ದರ್ಶನಗಳಲ್ಲಿಯ ಒಂದು ಶಾಸ್ತ್ರ, ನ್ಯಾಯ ಶಾಸ್ತ್ರ.

**न्यायासन** (ನ್ಯಾಯಾಸನ) ನ. ಜಡ್ಜನ ಆಸನ 'ಬೆಂಚ್'.

**न्यायी** (ನ್ಯಾಯೀ) ವಿ. ಸಂ. ನ್ಯಾಯವಂತ, ದೋಷಾ ರೋಪಣೆಯನ್ನು ಪರೀಕ್ಷಿಸುವವ.

**न्याय्य** (ನ್ಯಾಯ್ಯ) ವಿ. ಸಂ. ನ್ಯಾಯಸಿದ್ಧ, ಹಿತಕರ ವಾದ, ನ್ಯಾಯಪೂರ್ವಕವಾಗಿ ದೊರೆಯಬೇಕಾದ.

**न्यारा** (ನ್ಯಾರಾ) ವಿ. ಹಿಂ. ಬೇರೆ. ೨. ಉತ್ತಮ. ೩. ಅಲೌಕಿಕ.

**न्यास** (ನ್ಯಾಸ) ಪು. ಸಂ. ಇಡುಗಂಟು, ಇಟ್ಟಗಂಟು, ಠೇವಣಾತಿ.

**न्याहरी** (ನ್ಯಾಹರೀ) ಸ್ತ್ರೀ. ಬೆಳಗಿನಲ್ಲಿಯ ಅಲ್ಪಾ ಹಾರ, ತಿನಿಸು, ತಿಂಡಿ.

**न्याहाळणे** (ನ್ಯಾಹಾಳಣೇ) ಕ್ರಿ. ಸ. ಲಕ್ಷ್ಯಪೂರ್ವಕವಾಗಿ ನೋಡುವಿಕೆ.

**न्यून** (ನ್ಯೂನ) ನ. ಕುಂದು, ಕೊರತೆ, ನ್ಯೂನ.

–गंड (–ಗಂಡ) ಪು. ತಾನು ಕೀಳನೆಂಬ ಭಾವನೆ, ಅರಿವು.

**न्यूनता** (ನ್ಯೂನತಾ) ಸ್ತ್ರೀ. ಸಂ. ನ್ಯೂನ್ಯ, ಕುಂದು, ಕೊರತೆ.

**न्यूनाधिक** (ನ್ಯೂನಾಧಿಕ) ವಿ. ಕ್ರಿ. ವಿ. ಹೆಚ್ಚುಕಡಿಮೆ.

**न्हाण** (ನ್ಹಾಣ) ನ. ಮೈನೆರೆಯುವಿಕೆ (ಪ್ರಥಮ) ಋತುಪ್ರಾಪ್ತಿ.

**न्हाणी** (ನ್ಹಾಣೀ) ಸ್ತ್ರೀ. ಬಚ್ಚಲಮನೆ.

**न्हाणे** (ನ್ಹಾಣೇ) ಕ್ರಿ. ಅ. ಎರೆದುಕೊಳ್ಳುವಿಕೆ, ಎಣ್ಣೆ ಹಚ್ಚಿ ಜಳಕ ಮಾಡುವಿಕೆ.

**न्हाणोली** (ನ್ಹಾಣೋಲೀ) ಸ್ತ್ರೀ. ಮೈನೆರದ ಹುಡಿಗೆ.

**न्हावी** (ನ್ಹಾವೀ) ನಾಪಿತ, ಕೆಲಸಿಗ, ಕ್ಷೌರ ಮಾಡು ವವ.

**न्हावेर** (ನ್ಹಾವೇರ್) ನ. ವಿಧವಾ ವಿವಾಹ.

## प ಪ

**प** (ಪ) ವರ್ಗದ ಮೊದಲನೆಯ ಅಕ್ಷರ.

**–प** (–ಪ) ಪ್ರತ್ಯಯ, ಸಂ. ಪಾಲಿಸುವವ, ಧರಿಸು ವವ.

**पईलवान** (ಪಇಲ್‌ವಾನ್) ಪು. ಫಾ. ಜಟ್ಟಿ, ಮಲ್ಲ, ಕುಸ್ತಿಯವ.

**पंक** (ಪಂಕ) ಪು. ಸಂ. ಕೆಸರು, ಕುದಸಿದ ಬೆಲ್ಲ, –ಸಕ್ಕರೆ, ಅಣ, ಪಾನಕ.

**पंकज** (ಪಂಕಜ) ನ. ಸಂ. ಕಮಲ, ತಾವರೆ, ಕೆಸರಿ ನಲ್ಲಿ ಹುಟ್ಟಿದ್ದು.

**पकड** (ಪಕಡ್) ಸ್ತ್ರೀ. ಹಿಡಿಯುವಿಕೆ, ಪೇಚು, ಹಿಡಿತ (ಕುಸ್ತಿಯಲ್ಲಿ) ಭಾಷಾದೋಷ.

**पकड धरून बोलणे** (ಪಕಡ ಧರೂನ ಬೋಲಣೆ) ಕಾದಿಟ್ಟು ಮಾತಾಡು, ಮಾತಿನಲ್ಲಿ ಸಿಕ್ಕಿಸಿ ಮಾತಾಡು, ತಪ್ಪು ತಿಳಿದು ಮಾತಾಡು, ಜಾಣ್ಮೆ ಯಿಂದ ಮಾತನಾಡು, ಜಾಗರೂಕತೆಯಿಂದ ಮಾತಾಡು.

**पकडणी** (ಪಕಡಣೀ) ಹಿಡಿತ, ಆಕಲನ, ಅರ್ಥಜ್ಞಾನ ಹಿಡಿಯುವಿಕೆ.

**पकडणे** (ಪಕಡಣೇ) ಕ್ರಿ. ಸ. ಹಿಡಿ ಆಕಲನ ಮಾಡು, ಅರ್ಥತಿಳಿದುಕೊ.

**पकड समान** (ಪಕಡ ಸಮಾನ್) ನ. ಸೆರೆಹಿಡಿಯು ವಿಕೆ, ಕೈದುಮಾಡುವಿಕೆ, ತಡೆಗಟ್ಟುವಿಕೆ, ಆಟ ತಡೆಯುವಿಕೆ, ಚಿತ್ತ ಆಕರ್ಷಿಸುವಿಕೆ.

**पकवा** (ಪಕವಾ) ಹೆಣ್ಣು ಮಕ್ಕಳ ಆಟದ ಗೊಂದಲ.

**पक्का** (ಪಕ್ಕಾ) ವಿ. ಹಿಂ. ಹಣ್ಣಾದ, ಕುದಿಸಿದ, ತಯಾರಾದ, ಪೂರ್ಣ, ಚುರುಕು, ಚಪಲ, ಬಾಳಿಕೆ ಬರುವ, ಸಮರ್ಥ, ಪಾರಾಂಗತ, ನಿಪುಣ, ಜಾಣ, ಗಟ್ಟಿಗ, ಬಹುದಿನ ಬಾಳುವ, ತಾಳಿಕೆಯ.

**पक्काखरडा** (ಪಕ್ಕಾಖರಡಾ) ಪು. }
**पक्का हिशोब** (ಪಕ್ಕಾಹಿಶೋಬ್) ಪು. } ಪಕ್ಕಾಕಿರ್ದಿ, ಜಾಂಗಡವಹಿ ಯೊಳಗಿಂದ ಬರೆದ ಪಕ್ಕಾಲೆಕ್ಕ, ಶುದ್ಧಲೆಕ್ಕ, ಪಕ್ಕಾ ಖತಾವಣಿ.

**पक्कीजप्ती** (ಪಕ್ಕೀಜಪ್ತಿ) ಸ್ತ್ರೀ. ಹಿಂ. (ಕಾಯ್ದೆಯಲ್ಲಿ) ನಿರ್ಣಯದ ನಂತರ ಮಾಡಿದ ಜಪ್ತಿ, ನ್ಯಾಯಾಲಯದ ತೀರ್ಪಿನ ಬಳಿಕ ಮಾಡಿದ ಜಪ್ತಿ.

**पक्की मुदत** (ಪಕ್ಕೀ ಮುದತ್) ಸ್ತ್ರೀ. ನಿರ್ದಿಷ್ಟ ಅವಧಿ ಮೀರಿದಹುಂಡಿ, ಹುಂಡಿಯು ಅವಧಿ ಮೀರುವಿಕೆ.

**पंक्ति** (ಪಂಕ್ತಿ) ಸ್ತ್ರೀ. ಸಂ. ಒಂದುಗೆರೆ ಅಥವಾಸಾಲು, ಊಟಕ್ಕೆ ಕೂತಜನರ ಸಾಲು, ಸಮಾಜ, ಮಿತ್ರತ್ವ ಸಂಘ, ಸಮಿತಿ, ಮಂಡಲ.

**पंक्तिदोष** (ಪಂಕ್ತಿದೋಷ) ಪು. ಸಂ. ಪಂಕ್ತಿಯ ಅಪವಿತ್ರತೆ, ಪಂಕ್ತಿ ಮೈಲಿಗೆಯಾಗುವಿಕೆ.

**पंक्तिपठाण** (ಪಂಕ್ತಿಪಠಾಣ) **पंक्तिबारगीर** (ಪಂಕ್ತಿಬಾರಗೀರ್) ಪು. ಕೂಳುಬಕ್ಕ, ಹೊಟ್ಟೆಬಾಕ, ಪರೋಪಜೀವಿ, ಪರಪಿಂಡಿ.

**पंक्तिपावन** (ಪಂಕ್ತಿಪಾವನ್) ವಿ. ಸಂ. ಪಂಕ್ತಿಗೆಯೋಗ್ಯ, ಪಂಕ್ತಿಗೆ ತಕ್ಕ, ಪಂಕ್ತಿ ವ್ಯವಹಾರಯೋಗ್ಯ, ರೊಟ್ಟಿ ವ್ಯವಹಾರಕ್ಕೆ ತಕ್ಕ.

**पंक्ति प्रपंच** (ಪಂಕ್ತಿ ಪ್ರಪಂಚ) ಪು. ಸಂ. ಭೇದಬುದ್ಧಿ, ಪಕ್ಷಪಾತ, ಪಂಕ್ತಿಯಲ್ಲಿ ಮಾಡುವ ಪಕ್ಷಪಾತ.

**पंक्तिबाह्य** (ಪಂಕ್ತಿಬಾಹ್ಯ) ವಿ. ಸಂ. ಪಂಕ್ತಿಗೆ ನಿಷಿದ್ಧ, ಪಂಕ್ತಿಗೆ ಅನರ್ಹ.

**पंक्तिभाऊ** (ಪಂಕ್ತಿಭಾಊ) ಪು. ಊಟದ ಬಂಧು, ಒಂದೇಮನೆಯಲ್ಲಿ ಉಣ್ಣುವ ಭೋಜನ ಬಂಧು.

**पंक्तिभेद** (ಪಂಕ್ತಿಭೇದ) ಪು. ಸಂ. **पंक्ति प्रपंच** ನೋ.

**पंक्तिभ्रष्ट** (ಪಂಕ್ತಿಭ್ರಷ್ಟ) ವಿ. ಸಂ. **पंक्तिबाह्य** ವಿ. ನೋ. ಪಂಕ್ತಿಯಿಂದ ಹೊರಹಾಕಲ್ಪಟ್ಟ.

**पंक्तिलाभ** (ಪಂಕ್ತಿಲಾಭ) ಪು. ಸಂ. ಊಟಮಾಡುವ ಲಾಭ, ಕೂಡಿ ಉಣ್ಣುವ ಗೌರವ.

**पंक्तिव्यवहार** (ಪಂಕ್ತಿ ವ್ಯವಹಾರ) ಪು. ಸಂ. ಊಟ ವ್ಯವಹಾರ, ಭೋಜನ ವ್ಯವಹಾರ, ಕೂಡಿ ಉಣ್ಣುವಿಕೆ.

**पक्व** (ಪಕ್ವ) ವಿ. ಸಂ. ಹಣ್ಣಾದ, ಪ್ರೌಢ, ಬಲಿತ, ಕುದಿಸಿದ, ಬೇಯಿಸಿದ, ಜೀರ್ಣಿಸಿದ, ಜೀರ್ಣವಾದ.

**पक्वान्न** (ಪಕ್ವಾನ್ನ) ನ. ಸಂ. ಕುದಿಸಿದ ಅನ್ನ, ಸಿಹಿ ಅನ್ನ, ಸಿಹಿ ಭೋಜನ, ಬೇಯಿಸಿದ ಸವಿ ಅನ್ನ, ಮಧುರಾನ್ನ.

**पक्वाशय** (ಪಕ್ವಾಶಯ) ನ. ಸಂ. ಹೊಟ್ಟೆ, ಉದರ, ಅನ್ನಕೋಶ, ಅನ್ನಾಶಯ, ಪಕ್ವಾಶಯ.

**पंख** (ಪಂಖ) ಪು. ಪಕ್ಕ, ರೆಕ್ಕೆ, ಪಕ್ಷ, ವರ್ಗ.

**पंखफुटणे** (ಪಂಖಫುಟಣೇ) ಕ್ರಿ. ಅ. ರೆಕ್ಕೆಬರು, ದೊಡ್ಡದಾಗು, ವಯಸ್ಸಿಗೆ ಬರು, ಪ್ರೌಢನಾಗು, ಮೋಸಗಾರಿಕೆಯಲ್ಲಿ ಮುಂದುವರೆ.

**पखरडा** (ಪಖರಡಾ) ಪು.
**पखळ** (ಪಖಳ್) ಸ್ತ್ರೀ.
**पखळण** (ಪಖಳಣ್) ಸ್ತ್ರೀ. } ತೀರ ಅವ್ಯವಸ್ಥೆ, ಅಸ್ತಾವ್ಯಸ್ತತೆ, ಚೆಲ್ಲಾಪಿಲ್ಲಿಯಾಗಿರುವಿಕೆ.

**पखरणे–ळणे** (ಪಖರಣೇ–ಳಣೇ) ಕ್ರಿ. ಅ. ಅವ್ಯವಸ್ಥೆ ಮಾಡು, ಆಚೆ ಈಚೆ ಒಗೆ.

**पखवाज** (ಪಖವಾಜ್) ಪು. ಹಿಂ. ಮೃದಂಗ, ಮದ್ದಲೆ.

**पखवाजी** (ಪಖವಾಜೀ) ಪು. ಹಿಂ.
**पखवाजची–जी** (ಪಖವಾಜಚೀ–ಜೀ) ಹಿಂ. } ಮೃದಂಗವಾದಕ, ಮದ್ದಳೆ ಬಾರಿಸುವವ.

**पंखा** (ಪಂಖಾ) ಪು. ಬೀಸಣಿಕೆ, ದೊಡ್ಡ ಬೀಸಣಿಕೆ, ಕುಪ್ಪುಸದ ಅರ್ಧ ಭಾಗ.

**पखाल** (ಪಖಾಲ್) ಸ್ತ್ರೀ. ಪಕಾಲಿ, ನೀರಿನ ತೊಗಲಿನ ಚೀಲ, ದೊಡ್ಡ ಹೊಟ್ಟೆ.

**पखालची** (ಪಖಾಲಚೀ) ಪು.
**पखालजी** (ಪಖಾಲಜೀ) ಪು. } ಪಕಾಲಿಯವ, ಪಕಾಲಿಯಿಂದ ನೀರು ಮಾರುವವ.

**पखाल पार्वती** (ಪಖಾಲ್ ಪಾರ್ವತೀ) ಸ್ತ್ರೀ. ದೊಡ್ಡ ಹೊಟ್ಟೆಯ ಕುರೂಪ ಹೆಂಗಸು, ಸ್ಥೂಲ ಹೆಂಗಸು.

**पखाल्या** (ಪಖಾಲ್ಯಾ) ಪು. **पखालची** ನೋ.

**पग** (ಪಗ್) ನ. ಹಿಂ. ಕಾಲು, ಅಡಿ, ಪಾದ, ಚರಣ, ಚದುರಂಗದಾಟದ ಚದರು.

**पगीधरणे** (ಪಗೀಧರಣೇ) ಕ್ರಿ. ಸಂ ಶಬ್ದದಲ್ಲಿ ಹಿಡಿ, ಮಾತಿನಲ್ಲಿ ಸಿಕ್ಕಿಸು.

**पगी सांपडणे** (ಪಗೀ ಸಾಪಡಣೇ) ಕ್ರಿ. ಅ. ಮಾತಿನಲ್ಲಿ ಸಿಗು, ಮಾತಿನಲ್ಲಿ ಸಿಕ್ಕು ಬೀಳು.

**पगडबंध–द** (ಪಗಡ್‌ಬಂಧ್–ದ್) ಪು. ಹಿಂ. ಪಗಡಿ ತಯಾರು ಮಾಡುವವ, ಪಗಡಿಕಟ್ಟುವ ಉದ್ಯೋಗದವ.

**पगडा** (ಪಗಡಾ) ಪು. ವರ್ಚಸ್ಸು, ಗುರುತು, ಕಳೆ, ಪ್ರವೇಶ, ವೃದ್ಧಿ.

**पगडी** (ಪಗಡೀ) ಸ್ತ್ರೀ. ಹಿಂ. ಪಗಡಿ, ಶಿರಸ್ತ್ರಾಣ, ಟೊಪ್ಪಿಗೆ.

**पगडी घेणे** (ಪಗಡೀಘೇಣೇ) ಕ್ರಿ. ಸಂ. ಮೇಲಧಿಕಾರಿಯ ಮೇಲೆ ಪ್ರಭಾವಬೀರು, ಪಗಡಿಯನ್ನು ಧರಿಸು.

**पगडी फिरविणे** (ಪಗಡೀ ಫಿರವಿಣೇ) ಕ್ರಿ. ಸಂ. ಪಗಡಿ ತಿರುವು, ವಿಚಾರ ಬದಲಾಯಿಸು, ವಚನ ಪರಿವರ್ತಿಸು.

**पगडी फेकणे** (ಪಗಡೀ ಫೇಕಣೇ) ಕ್ರಿ. ಸಂ. ಮೋಸ ಮಾಡು, ಠಕ್ಕಿಸು.

**पगडीभाईकरणे** (ಪಗಡೀಭಾಈಕರಣೇ) ಕ್ರಿ. ಸಂ. ಟೊಪ್ಪಿಗೆ ಬದಲಾಯಿಸಿ ಬಂಧುತ್ವ ತೋರಿಸು, ಒಬ್ಬನ ಟೊಪ್ಪಿಗೆ ಇನ್ನೊಬ್ಬನಿಗೆ ಹಾಕು.

**पंगत** (ಪಂಗತ್) ಸ್ತ್ರೀ. **पंक्ति** ನೋಡಿರಿ.

**पंगत चुकणे** (ಪಂಗತ್ ಚುಕಣೇ) ಕ್ರಿ. ಅ. ಊಟ ತಪ್ಪು, ಭೋಜನ ತಪ್ಪು ದೊರೆಯದಿರು.

**पंगत मांडणे** (ಪಂಗತ್ ಮಾಂಡಣೇ) ಕ್ರಿ. ವಿ. ಪಂಕ್ತಿಗೆ ಕೂಡಿಸು, ಪಂಕ್ತಿ ಸಿದ್ಧಪಡಿಸು.

**पंगत वाजविणे** (ಪಂಗತ್ ವಾಜವಿಣೇ) ಕ್ರಿ. ಸ. ಭೋಜನ ಕಾಲಕ್ಕೆ ಹಾಡು–ಗಾಯನಮಾಡು–ಬಾರಿಸು.

**पंगत वाढणे** (ಪಂಗತ್ ವಾಢಣೇ) ಕ್ರಿ. ಸ. ಊಟಕ್ಕೆ ಬಡಿಸು–ನೀಡು.

**पंगत साधणे** (ಪಂಗತ್ ಸಾಧಣೇ) ಕ್ರಿ. ಸ. ಊಟಕ್ಕೆ ಸರಿಯಾಗಿ ಬರು, ಊಟದ ಕಾಲಕ್ಕೆ ಬರು.

**पंगतींस घेणे** (ಪಂಗತೀಸ್ ಘೇಣೆ) ಕ್ರಿ. ಸ. ಪಂಕ್ತಿಯಲ್ಲಿ ಕೂಡ್ರಿಸಿಕೊಳ್ಳು.

**पंगतींस बसणे** (ಪಂಗತೀಸ್ ಬಸಣೇ) ಕ್ರಿ. ಅ. ಊಟಕ್ಕೆ ಕೂಡು.

**पगदस्त,पगदस्ती** (ಪಗದಸ್ತ್,ಪಗದಸ್ತೀ) ವಿ. ಚದುರಂಗದಾಟದ ಒಂದು ಆಟದ–ಒಂದು ಕೈಯ.

**पगदस्ती धरणे आणणे** (ಪಗದಸ್ತೀ ಧರಣೇ ಆಣಣೇ) ಕ್ರಿ. ಸಂ. ಮಾತಿನಲ್ಲಿ ಹಿಡಿ, ಶಬ್ದದಲ್ಲಿ ಸಿಕ್ಕಿಸು.

**पगदस्ती सांपडणे** (ಪಗದಸ್ತೀ ಸಾಪಡಣೇ) ಕ್ರಿ. ಅ. ಮಾತಿನಲ್ಲಿ ಸಿಗಬೀಳು, ಶಬ್ದದಲ್ಲಿ ಸಿಗು.

**पगार** (ಪಗಾರ್) ಪು. ಪೋ. ಸಂಬಳ, ವೇತನ, ಕೂಲಿ, ತಲಬು.

**पगार पत्रक** (ಪಗಾರ ಪತ್ರಕ್) ನ. ಪಗಾರ ಪತ್ರಿಕೆ, ವೇತನ ಪತ್ರಿಕೆ, ಪಗಾರಪಟ್ಟಿ.

**पगिस्त** (ಪಗಿಸ್ತ್) ವಿ. ಕುಂಟ.

**पंगु–गू** (ಪಂಗು–ಗೂ) ವಿ. ಹೆಳವ, ಕುಂಟ ಕಾಲು ಇಲ್ಲದ, (ಲಾ) ದರಿದ್ರ, ಸ್ನೇಹಿತರಿಲ್ಲದ.

**पघळणे** (ಪಘಳಣೇ) ಕ್ರಿ. ಅ. ವಿಸ್ತಾರವಾಗು, ಕರಗು, ಕರಗಿಸು, ಕೊನೆಗಾಣಿಸು, ಕನಿಕರಪಡು.

**पघळ** (ಪಘಳ್) ವಿ. ವಿಸ್ತಾರವಾದ, ಇಂಬಾದ, ವಿಸ್ತೃತ, ಉದ್ದ ಬೆಳೆದ (ಭಾಷಣ)

**पघा** (ಪಘಾ) ಪು. ಮಾದರಿ, ನಮೂನೆ, ಅಚ್ಚು, ಪಡಿಯಚ್ಚು.

**पच** (ಪಚ್) ವಿ. ಕುದಿದು ಮೆತ್ತಗಾಗುವ, ಕುದಿಯುವ.

**पंच** (ಪಂಚ) ವಿ. ಐದು, ೨. ಪು. ಪಂಚರು, ಹಿರಿಯ, ಪಂಚರಲ್ಲಿಯ ಒಬ್ಬ, ಪಂಚಾಯತ್ತಿನವರು.

**पंचक** (ಪಂಚಕ್) ನ. } ಐದರ ಗುಂಪು
**पंचकडी** (ಪಂಚಕಡೀ) ಸ್ತ್ರೀ. }

**पंचकर्म** (ಪಂಚಕರ್ಮೇ) ಪು. ಬಹುವ. ಐದು ಧಾರ್ಮಿಕ ಕರ್ಮ. ೨. ಐದು ಬಗೆಯ ಶೌಚ ಕರ್ಮ (ಮಲ, ಮೂತ್ರ, ಉಗುಳು ಇತ್ಯಾದಿ).

**पंचकल्याण–णी** (ಪಂಚಕಲ್ಯಾಣ–ಣೀ) ವಿ. ಐದು ಶುಭ ಚಿಹ್ನದ (ಕುದುರೆ), ಪಂಚಕಲ್ಯಾಣಿ.

**पंचकोण** (ಪಂಚಕೋಣ್) ಪು. ಸಂ. ಪಂಚಕೋಣ–(ನ), ಪಂಚಕೋಣಾಕೃತಿ (ಭೂಮಿತಿಯಲ್ಲಿ) ಐದು ಭುಜಗಳ ಆಕೃತಿ.

**पंचकोश–ष** (ಪಂಚಕೋಶ–ಷ) ಪು.ಸಂ. ಐಮೂಲೆ, ಮಾನವ ಶರೀರದ ಐದು ಕೋಶ, (ಜ್ಞಾನಮಯ, ಅನ್ನಮಯ, ಶರೀರಮಯ, ಮನೋಮಯ, ಪ್ರಾಣಮಯ)

**पंचकोश–क्रोश** (ಪಂಚಕೋಶ–ಕ್ರೋಶ) ಪು. } ಐದು
**पंचक्रोशी** (ಪಂಚಕ್ರೋಶೀ) ಸ್ತ್ರೀ. } ಹರದಾರಿಯೊಳಗಿನ ಭೂಭಾಗ.

**पंचखाद्य** (ಪಂಚಖಾದ್ಯ) ನ. ಸಂ. ಪಂಚಖಾದ್ಯ, ಯಜ್ಞದೊಳಗಿನ ಐದು ಜೀನಸು, ಯಜ್ಞಾಹುತಿಯ ಐದು ಜೀನಸು, ಪ್ರಸಾದದ ಪದಾರ್ಥಗಳು.

**पचकन** (ಪಚಕನ್) ಕ್ರಿ. ವಿ. ಪಚ್ಚನೆ, (ಉಗುಳು) ಪಚ್ಚೆಂದು.

**पचकरणे** (ಪಚಕರಣೇ) ಕ್ರಿ. ಅ. ಆಕಲನಮಾಡು, ತಿಳಿ, ತಿಳಿದುಕೊಳ್ಳು.

**पचकळ** (ಪಚಕಳ್) ವಿ. ಪೊಳ್ಳಾದ, ಹಗುರಾದ, ಮೂರ್ಖತನದ, ಅಜ್ಞಾನದ.

**पचंग–गी** (ಪಚಂಗ್–ಗೀ) ಸ್ತ್ರೀ. ಗದ್ದಗಂಟು, ಧೋತರ ನೈಗೆ ಸುತ್ತುವ ಪದ್ಧತಿ.

**पंचगव्य** (ಪಂಚಗವ್ಯ) ನ.ಸಂ. ಆಕಳ ಐದು ಜೀನಸುಗಳ ಮಿಶ್ರಣ (ಹಾಲು, ಮೊಸರು, ತುಪ್ಪ, ಸಗಣಿ, ಮೂತ್ರ).

**पंचगौड** (ಪಂಚಗೌಡ) ಪು. ಗೌಡ, ಬ್ರಾಹ್ಮಣರ ಐದು ಉಪಜಾತಿ, (ಗೌಡ, ಕನೋಜ, ಮೈಥಿಲ, ಮಿಶ್ರ, ಗುರ್ಜರ).

**पंचग्रंथ** (ಪಂಚಗ್ರಂಥ) ಪು. ಬಹುವ. ಐದು ಗ್ರಂಥಗಳು, ಯಜುರ್ವೇದದ ಐದು ಗ್ರಂಥಗಳು (ಸಂಹಿತಾ, ಬ್ರಾಹ್ಮಣ, ಅರಣ್ಯ, ಪದ ಪಾಠ, ಕ್ರಮು).

**पंचग्रही** (ಪಂಚಗ್ರಹೀ) ಸ್ತ್ರೀ. ಸಂ. ಒಂದೇ ರಾಶಿಯಲ್ಲಿಯ ಪಂಚಗ್ರಹಯೋಗ.

**पंचतत्वें** (ಪಂಚತತ್ವೇ) ನ. ಬಹು. ಪಂಚತತ್ವಗಳು (ಜಲ, ವಾಯು, ಅಗ್ನಿ, ಆಕಾಶ, ಭೂಮಿ) ಪಂಚಮಹಾಭೂತಗಳು.

**पंचद्र (द्राविड)** (ಪಂಚದ್ರ (ದ್ರಾವಿಡ) ಸಂ. ದಕ್ಷಿಣದಲ್ಲಿಯ ಬ್ರಾಹ್ಮಣರ ಐದು ಜಾತಿಗಳ ಸಮಾಹಾರ (ತೇಲಂಗ, ದ್ರಾವಿಡ, ಮಹಾರಾಷ್ಟ್ರ, ಕೊಂಕಣ, ಕರ್ನಾಟಕ.

**पचणी** (ಪಚಣೀ) ಸ್ತ್ರೀ. ಪಚನಕ್ರಿಯೆ.

**पचणीस पडणे** (ಪಚಣೀಸ್ ಪಡಣೇ) ಕ್ರಿ.ಅ. ಅಸಾಧ್ಯ ರೋಗಗ್ರಸ್ತನಾಗು, ಅಸಾಧ್ಯ ರೋಗದಿಂದ ಹಾಸಿಗೆ ಹಿಡಿ, ಸಮ್ಮತವಾಗು, ರೂಢಿಯಾಗು, ಚಟಹತ್ತು.

**पचणे** (ಪಚಣೇ) ಕ್ರಿ. ಅ. ಜೀರ್ಣವಾಗು, ಪಚನವಾಗು, ರೋಗದಿಂದ ನೆಲಹಿಡಿ.

**पंचत्व** (ಪಂಚತ್ವ) ನ. ಸಂ. ಮರಣ, ಸಾವು, ಮೃತ್ಯು.

**पचन** (ಪಚನ್) ನ. ಸಂ. ಜೀರ್ಣವಾಗುವಿಕೆ, ಜೀರ್ಣಿಸುವಿಕೆ, ರೋಗದಿಂದ ನೆಲಹಿಡಿಯುವಿಕೆ, ಸೊರಗುವಿಕೆ.

**पंचपक्वान्ने** (ಪಂಚ ಪಕ್ವಾನ್ನೇ) ನ. ಬಹು. ಐದು ಮಧುರಾನ್ನಗಳು, ಐದು ಪಕ್ವಾನ್ನಗಳು.

**पचपच–चा** (ಪಚ್‌ಪಚ್–ಚಾ) ಕ್ರಿ. ವಿ. ಪಚಪಚನೆ, ಪಚಪಚ ಎಂದು. "**पचकन**" ನೋ.

**पचपच** (ಪಚಪಚ್) ಸ್ತ್ರೀ. ಕೆಸರಿನಲ್ಲಿಯ ನಡಿಗೆಯ ಸಪ್ಪಳ "ಪಚಪಚ" ಶಬ್ದ.

**पचपचीत** (ಪಚಪಚೀತ್) ವಿ. ರುಚಿಯಿಲ್ಲದ, ಸಪ್ಪಗಿರುವ, ನೀರಸ, ರುಚಿಹೀನ (ಅನ್ನ).

**पंचपंच उषःकाल** (ಪಂಚಪಂಚ್ ಉಷಃಕಾಲ) ಪು. ಉಷಃಕಾಲ, ಬೆಳಗು ಮುಂಜಾನೆ.

**पंचपात्र** (ಪಂಪಫಾತ್ರ) ನ. ಸಂ., **पंचपात्री** (ಪಂಚಪಾತ್ರೀ) ಸ್ತ್ರೀ. ನೀರು ಕುಡಿಯುವ ಬಟ್ಟಲು, ಸಂಧ್ಯಾವಂದನೆಯ ಬಟ್ಟಲು.

**पंचपाळें** (ಪಂಚಪಾಳೇ) ಸಂ. ಐದು ಬಗೆಯ ಪದಾರ್ಥಗಳನ್ನು ಹಾಕಿಡಲಿಕ್ಕೆ ಬರುವ ಪಾತ್ರೆ, ಹಿತ್ತಾಳಿಯ ಐದು ಖಾನೆಗಳ ಪಾಳಿ, ಕಟ್ಟಿಗೆಯ ಐದು ಖಾನೆಗಳ ಪಾಳಿ.

**पंचप्राण** (ಪಂಚಪ್ರಾಣ) ಪು. ಜೀವ, ಪಂಚಪ್ರಾಣ. ೨. ಅತಿಪ್ರಿಯ.

**पंचप्राणाहुती** (ಪಂಚಪ್ರಾಣಾಹುತಿ) ಸ್ತ್ರೀ. ಪಂಚಪ್ರಾಣಗಳಿಗೆ ಕೊಟ್ಟ ಆಹುತಿ, ಭೋಜನ ಪ್ರಾರಂಭದಲ್ಲಿ ಪಂಚಪ್ರಾಣಗಳಿಗೆ ಕೊಟ್ಟ ಆಹುತಿ.

**पंचबाण** (ಪಂಚಬಾಣ) ಪು. ಸಂ. ಐದು ಬಾಣಗಳುಳ್ಳವ, ಕಾಮ, ಮದನ, ಮನ್ಮಥ, ಕಾಮದೇವ.

**पंचभूतातीत** (ಪಂಚಭೂತಾತೀತ್) ವಿ. ಸಂ. ಪಂಚಭೂತಗಳಿಗೆ ಮೀರಿದ, ಪಂಚಮಹಾಭೂತಗಳಾಚೆಗಿನ.

**पंचभूतात्मक** (ಪಂಚಭೂತಾತ್ಮಕ) ವಿ. ಸಂ. ಪಂಚಮಹಾಭೂತಗಳೊಡಗೊಂಡ, ಪಂಚಮಹಾಭೂತಗಳಿಂದ ಕೂಡಿದ.

**पंचभेळ** (ಪಂಚಭೇಳ್) ಸ್ತ್ರೀ. "**पंचमिसळ**" ನೋ.

**पंचम** (ಪಂಚಮ) ಪು., **पंचमस्वर** (ಪಂಚಮಸ್ವರ) ಪು. ಪಂಚಮಸ್ವರ, ಸಂಗೀತದಲ್ಲಿಯ ಪಂಚಮಸ್ವರ 'ಪ'.

**पंचमहाभूतें** (ಪಂಚಮಹಾಭೂತೇ) ಬಹುವ. ಪಂಚಮಹಾಭೂತಗಳು, ಐದು ಮಹಾಭೂತಗಳು.

**पंचमणे** (ಪಂಚಮಣೇ) ಕ್ರಿ. ಅ. ನಿಲ್ಲು, ಪಾಲಿಗೆ ಬರು, ತಲೆಗೆ ಅಪ್ಪಳಿಸು.

**पंचमत** (ಪಂಚಮತ್) ನ. ಸಂ. ಪಂಚರ ಅಭಿಪ್ರಾಯ, ಪಂಚರ ತೀರ್ಪು.

**पंचमहापातकें** (ಪಂಚಮಹಾಪಾತಕೇ) ನ. ಬಹುವ. ಐದು ಮಹಾಪಾಪಗಳು (ಬ್ರಾಹ್ಮಣ, ಸ್ತ್ರೀ. ಬಾಲ, ಗೋ, ಮುನಿ).

**पंचमहायज्ञ** (ಪಂಚಮಹಾಯಜ್ಞ) ಪು. ಬಹುವ. **पंचयज्ञ** (ಪಂಚಯಜ್ಞ) ಪು. ಸಂ. ಐದು ದೊಡ್ಡ ಯಜ್ಞಗಳು (ದೇವ, ಸೂತ್ರ–(ಬ್ರಹ್ಮ), ಋಷಿ (ಅತಿಥಿ) ಪಿತೃ, ಮನುಷ್ಯ).

**पंचमिसळ** (ಪಂಚಮಿಸಳ್) ಸ್ತ್ರೀ. ಐದು ಧಾನ್ಯಗಳ ಮಿಶ್ರಣ.

**पंचमी** (ಪಂಚಮೀ) ಸ್ತ್ರೀ. ಸಂ. ಐದನೆಯ ತಿಥಿ, ಪಂಚಮೀವಿಭಕ್ತಿ (ವ್ಯಾಕರಣದಲ್ಲಿ).

**पंचरंगी** (ಪಂಚರಂಗೀ) ವಿ. ಐದು ಬಣ್ಣಗಳುಳ್ಳ, (ಕ್ರಿಕೆಟ್) ಐದು ಜಾತಿಗಳ ಜನಾಂಗಗಳ ಸಂಘದಲ್ಲಿಯ ಆಟ.

**पंचरंगी राव्** (ಪಂಚರಂಗೀ ರಾವೂ) ಪು. ಐದು ಬಣ್ಣಗಳ ಗಿಳಿ, ಪಂಚರಂಗಿ ಶುಕ.

**पचरट** (ಪಚರಟ್) ವಿ. ಅಗಲವಾದ, ಕೆಟ್ಟ ವಾಸನೆಯ, ದುರ್ಗಂಧದ, ನೀಚ, ಹುಚ್ಚ, ಅವಿಚಾರಿ, ಬುದ್ಧಿಯಿಲ್ಲದ, ಮೂರ್ಖ.

**पंचरत्न** (ಪಂಚರತ್ನ) ನ. ಐದು ರತ್ನ, ಪಂಚರತ್ನ.

**पंचरसी** (ಪಂಚರಸೀ) ವಿ. ಐದು ರಸ ಕೂಡಿದ, ಐದು ಧಾತು ಕೂಡಿದ, ಪಂಚ ರಸಯುಕ್ತ.

**पंचराशिक** (ಪಂಚರಾಶಿಕ) ನ. ಸಂ. ಐದು ರಾಶಿಗಳ ಗಣಿತ, ಪಂಚರಾಶಿಕ.

**पंचविणे** (ಪಂಚವಿಣೇ) ಕ್ರಿ. ಸ. ಜೀರ್ಣ ಮಾಡು, ಜೀರ್ಣಿಸು, ಪಚನಮಾಡು, ಕರಗಿಸು, (ಲಾ) ಅಪರಾಧಿ ಮಾಡಿ ಪಾರಾಗು.

**पंचविशी** (ಪಂಚವಿಶೀ) ಸ್ತ್ರೀ. ಮೊದಲನೆಯ ಇಪ್ಪತ್ತೈದನೆಯ ವಯಸ್ಸು, ಇಪ್ಪತ್ತೈದು ವರ್ಷದವ.

**गद्धे–** (ಗದ್ದೇ–) ಸ್ತ್ರೀ. ತಪ್ಪು ತಡರು ಮಾಡುವ ಪ್ರಾಯ.

**पंचविशीतले पोरगे** (ಪಂಚವಿಶೀತಲೇ ಪೋರಗೇ) ಪು. ಸಂ. ಇಪ್ಪತ್ತೈದು ವರ್ಷದ ಹುಡುಗ, ಪ್ರೌಢ.

**पंचविषय** (ಪಂಚವಿಷಯ) ಪು. ಐದು ವಿಷಯುಗಳು (ಶಬ್ದ, ಸ್ಪರ್ಶ, ರೂಪ, ರಸ, ಗಂಧ)

**पंचवीस** (ಪಂಚವೀಸ್) ವಿ. ಇಪ್ಪತ್ತೈದು.

**पंचहत्यारी** (ಪಂಚಹತ್ಯಾರೀ) ವಿ. ಐದು ಖಡ್ಗಗಳ, (ಢಾಲು, ಖಡ್ಗ, ಧನುಷ್ಯ, ಬಾಣ, ಕೋವಿ (ಬಂದೂಕು), ಪಟು, ಯೋಗ್ಯತೆಯುಳ್ಳ, (ವ್ಯಂಗ್ಯಾರ್ಥದಲ್ಲಿ) ಶೂರ, ಬಂಟ.

**पंचा** (ಪಂಚಾ) ಪು. ಪಂಚೆ, ಲಂಡಧೋತರ, ಗಿಡ್ಡ ಧೋತರ.

**पंचाईत** (ಪಂಚಾಈತ್) ಸ್ತ್ರೀ. ಪಂಚರ ಆಲೋಚನೆ, ಪಂಚರ ಅಭಿಪ್ರಾಯ, ಪಂಚಾಯತ್ತು. ೨. ಕಷ್ಟ, ಬಿಕ್ಕಟ್ಟು.

**प(पं)चांग** (ಪಂಚಾಂಗ) ನ. ಸಂ. ಪಂಚಾಂಗ, ಜ್ಯೋತಿಷ್ಯ ಗ್ರಂಥ.

**पंचाग्नि** (ಪಂಚಾಗ್ನಿ) ಪು. ಸಂ. ಪಂಚಾಗ್ನಿ, ಐದು ಅಗ್ನಿಗಳು, ಪೂಜೆ, ಸಾಧನೆ.

**पंचाग्नि साधन** (ಪಂಚಾಗ್ನಿ ಸಾಧನ) ನ. ಐದು ಅಗ್ನಿಗಳಿಂದ ಮಾಡಿದ ಸಾಧನ, ನಾಲ್ಕೂ ಅಗ್ನಿಯನ್ನು ಇಟ್ಟು ನಡುವೆ ಕೂತು ಮಾಡಿದ ಸಾಧನ (ತಪಸ್ಸು).

**पंचानन** (ಪಂಚಾನನ) ಪು.ಸಂ. ಶಿವ, ಸಿಂಹ,ಹುಲಿ.

**पंचामृत** (ಪಂಚಾಮೃತ) ನ. ಸಂ. ಐದು ಜೀನಸು ಕೂಡಿಸಿ ತಯಾರು ಮಾಡಿದ ದೇವರ ತೀರ್ಥ (ಹಾಲು,ಮೊಸರು,ತುಪ್ಪ,ಜೇನುತುಪ್ಪ,ಸಕ್ಕರೆ).

**पंचायतन** (ಪಂಚಾಯತನ) ನ. ಸಂ. ಐದು ದೇವತೆಗಳು (ಶಿವ, ವಿಷ್ಣು, ಸೂರ್ಯ, ಗಣಪತಿ, ದೇವಿ.)

**पंचारणे** (ಪಂಚಾರಣೇ) ಕ್ರಿ. ಅ. ಐದು ವಯಸ್ಸಿನದಾಗು (ಕುದುರೆ), ಕೈಮೀರಿ ಹೋಗು.

**पंचारत–ती** (ಪಂಚಾರತ–ತೀ) ಸ್ತ್ರೀ. ಪಂಚಾರತಿ, ಐದು ನೀಲಾಂಜನಗಳ ಆರತಿ.

**पंचावन्न** (ಪಂಚಾವನ್ನ್) ವಿ. ಐವತ್ತೈದು.

**पंचाळ** (ಪಂಚಾಳ್) ಪು. ಐದು ಜಾತಿಗಳು (ಪತ್ತಾರ, ಬಡಿಗ, ಬಳೆಗಾರ, ಕಮ್ಮಾರ, ಕಲ್ಲುಕುಟ್ಟಿಗ.)

**पंचाळ** (ಪಂಚಾಳ್) ವಿ. ವಾಚಾಳ, ಬಡಬಡಿಸುವ, ಬಾಯಿಬಡಕ.

**पंचाक्षरी** (ಪಂಚಾಕ್ಷರೀ) ಪು. ಪಂಚಾಕ್ಷರಿ, ಭೂತ ಬಿಡಿಸುವವ.

**पंचेचाळ–चाळीस** (ಪಂಚೇಚಾಳ್–ಚಾಳೀಸ್) ವಿ. ನಾಲ್ವತ್ತೈದು.

**पंचेंद्रिय** (ಪಂಚೇಂದ್ರಿಯ) ನ. ಸಂ. ಐದು ಇಂದ್ರಿಯಗಳು, ಐದು ಜ್ಞಾನೇಂದ್ರಿಯಗಳು (ಕಣ್ಣು, ಕಿವಿ, ಮೂಗು, ನಾಲಿಗೆ, ತ್ವಚೆ).

**पंचोत्रा–तरा** (ಪಂಚೋತ್ರಾ–ತರಾ) ಪು. ನೂರಕ್ಕೆ ಐದರಂತೆ ಬಡ್ಡಿಯ ದರ, ಐದರ ಬಡ್ಡಿ.

**पंचोपचार** (ಪಂಚೋಪಚಾರ್) ಪು. ಪಂಚ ಜೀನಸುಗಳಿಂದ ಪರಮಾತ್ಮನನ್ನು ಪೂಜಿಸುವಿಕೆ (ಗಂಧ, ಪುಷ್ಪ, ದೀಪ, ಧೂಪ, ನೈವೇದ್ಯ).

**पंचोपाख्यानी** (ಪಂಚೋಪಾಖ್ಯಾನೀ) ಸ್ತ್ರೀ. ವಿ. ಐದು ಕತೆಗಳುಳ್ಳ, ಕಟ್ಟುಕತೆಗಳುಳ್ಳ, ಕಲ್ಪಿತಕತೆಯ, ದಂತಕತೆಯ.

**पच्ची** (ಪಚ್ಚೀ) ಕ್ರಿ. ವಿ. ಅವಸರದಿಂದ, ಗಡಬಡಿಯಿಂದ, ಧೈರ್ಯದಿಂದ, ದೃಢ ಮನಸಿನಿಂದ. ೨. ಮಾನಹಾನಿ, ಅವಮರ್ಯಾದೆ, ವಿಡಂಬನೆ, ವಿಕಟತನ, ಹಾಸ್ಯ.

**पंच्याऐशी** (ಪಂಚಾಐಶೀ) ವಿ. ಎಂಬತ್ತೈದು.

**पंच्याण्णव** (ಪಂಚ್ಯಾಣ್ಣವ) ವಿ. ತೊಂಬತ್ತೈದು.

**पंच्चाहत्तर** (ಪಂಚ್ಯಾಹತ್ತರ್) ಎಪ್ಪತ್ತೈದು.

**पछाडणीं** (ಪಛಾಡಣೀ) ಸ್ತ್ರೀ. ಹಿಡಿಯುವಿಕೆ, ಕುಸ್ತಿಯ ಪೇಚು, ಎಬ್ಬಿಸಿ ಅಪ್ಪಳಿಸುವಿಕೆ. ೨. ದೆವ್ವಬಡಿ.

**पछाडणे** (ಪಛಾಡಣೇ) ಸ್ತ್ರೀ. ಹಿಡಿ, ಅಪ್ಪಳಿಸು, ಒಗೆ, ಚೆಲ್ಲು, ಕುಸ್ತಿಗೆಲ್ಲು, ಜಯ ಪಡೆ, ಹಿಂಜರಿಸು, ಹಿಂದೆ ಸರಿಸು, ಕಸುವಿನಿಂದ ಹಿಡಿ, (ದೆವ್ವ) ಹಿಡಿ-ಹತ್ತು.

**पंज** (ಪಂಜ್) ಸ್ತ್ರೀ. ಐದು ವರ್ಷಗಳ (ಕುದುರೆ).

**पंजडी** (ಪಂಜಡೀ) ಸ್ತ್ರೀ. ಐದರಕ್ಕೈ (ಪಗಡೆಯಾಟದಲ್ಲಿ).

**पंजर** (ಪಂಜರ) ಪು. ಪಂಜರ, ಗೂಡು, (ಮನುಷ್ಯನ ಶರೀರದ) ಅಸ್ಥಿಪಂಜರ, ದೇಹದ ಗೂಡು, ಎಲುಬಿನ ಗೂಡು. ೨. ಬಹಿರಾಕೃತಿ.

**पंजा** (ಪಂಜಾ) ಪು. ಇಸ್ಪೇಟಿನ ಐದರ ಎಲೆ, ಮುಂಗೈ, ಹುಲಿಯ ಪಂಜರ, ಹುಲಿಯ ಉಗುರು, ಮಂಗದ ಮುಂಗೈ, ಮೋಹರಮ್‌ದ ಪಂಜರ.

**पट** (ಪಟ್) ಸ್ತ್ರೀ. ಚದುರಂಗದ ಪಟ, ಪಗಡೆಯ ಪಟ, ಚಿತ್ರದ ಪಟ, ಬಾಗಿಲ ಪಟಕ. ೨.ಕ್ರಿ.ವಿ. ಕೆಳ ಮೋರೆಯಾಗಿ.

**पटकन्–दिशी** (ಪಟಕನ್–ದಿಶೀ) ಕ್ರಿ. ವಿ. ಪಟಕ್ಕನೆ, ಒಮ್ಮೆಲೆ, ಕೂಡಲೆ, ಅವಸರದಿಂದ.

**पटई** (ಪಟಈ) ಸ್ತ್ರೀ. **पटाई** ನೋ.

**पटकणे** (ಪಟಕಣೇ) ಕ್ರಿ. ಕೆಳಗೆ ಅಪ್ಪಳಿಸು, ದೊಪ್ಪನೆ ಚೆಲ್ಲು–ಒಗೆ.

**पटका** (ಪಟಕಾ) ಪು. ರುಮಾಲ, ತಲೆಯ ವಸ್ತ್ರ, ಮುಂಡಾಸ.

**पटकावणे** (ಪಟಕಾವಣೇ) ಕ್ರಿ. ಸ. ಗಪ್ಪನೆ ಹಿಡಿ, ಬಿಗಿ ಹಿಡಿ. ೨. ಗೆಲ್ಲು.

**पटकी** (ಪಟಕೀ) ಸ್ತ್ರೀ. ಕಾಲರಾ, ಮಾರಿ.

**पटकूर** (ಪಟಕೂರ್) ನ. ಹರಿದ ಬಟ್ಟೆ, ಹರಕ ಬಟ್ಟೆ, ರಗಟೆಯ ತುಂಡು, ತಟ್ಟಿನ ತುಂಡು.

**पटं(टां)गण** (ಪಟ(ಟಾಂ)ಗಣ) ನ. ಅಂಗಳ, ಬೈಲಂಗಳ, ಬೈಲು.

**पटणी–नी** (ಪಟಣೀ–ನೀ) ಒಂದು ಜಾತಿಯ ಅಕ್ಕಿ.

**पटणे** (ಪಟಣೇ) ಕ್ರಿ. ಅ. ಮನಸ್ಸಿಗೆ ಒಪ್ಪಿಗೆಯಾಗು, ಯಾದಿ ಒಪ್ಪಿಕೊಳ್ಳು, ನಾಣ್ಯ ಸ್ವೀಕೃತವಾಗು, ಮಾನ್ಯವಾಗು, ಒಪ್ಪು, ಸರಿಬೀಳು.

**पटपट–टा** (ಪಟಪಟ್–ಟಾ) ಕ್ರಿ. ವಿ. ಪಟಪಟನೆ, ಪಟಪಟ ಎಂದು, ಬೇಗನೆ.

**पटल** (ಪಟಲ್) ನ. ಸಂ. ಮೇಲಿನ ಆವರಣ, ಮೋಡ, ಮುಚ್ಚಳಿಕೆ, ಕಣ್ಣಿನ ರೆಪ್ಪೆ.

**पटवारी** (ಪಟವಾರೀ) ಪು. ಹಿಂ. ಹಳ್ಳಿಯ ಸರಕಾರಿ ಅಧಿಕಾರಿ, ಗ್ರಾಮಾಧಿಕಾರಿ, ಶಾನಭೋಗ.

**पटविणे** (ಪಟವಿಣೇ) ಕ್ರಿ. ಸ. ಮನವರಿಕೆಯಾಗುವಂತೆ ಮಾಡು, ಮಾನ್ಯಮಾಡಿಸು, ಆಭರಣಗಳನ್ನು ರೇಶಿಮೆಯ ದಾರದಿಂದ ಕಟ್ಟಿಸು.

**पटवेकर–करी** (ಪಟವೇಕರ–ಕರೀ) ಪು. **पटवेगार** ಪಟವೇಗಾರ್) ಪು. ಆಭರಣಗಳನ್ನು ರೇಶಿಮೆಯಿಂದ ಕಟ್ಟುವವರು, ಪಟ್ಟೆಗಾರರು.

**पटाई** (ಪಟಾಈ) ಸ್ತ್ರೀ. ಚಪ್ಪರದ ಹಲಿಗೆ.

**पटांगण** (ಪಟಾಂಗಣ್) **पटंगण** ನೋ.

**पटाटा** (ಪಟಾಟಾ) ಕ್ರಿ. ವಿ. ಪಟಪಟ ಎಂದು.

**पटाड** (ಪಟಾಡ್) ಸ್ತ್ರೀ. ಕುದುರೆಯ ನಡುಕಟ್ಟು, ಎತ್ತಿನ ನಡುಪಟ್ಟಿ, (ಕಟ್ಟು)

**पटाडा** (ಪಟಾಡಾ) ಪು. **फटाडा** ನೋ.

**पटापट** (ಪಟಾಪಟ್) ಕ್ರಿ. ವಿ. ಪಟಪಟನೆ, ಪಟ್ಟ ಪಟ್ಟೆಂದು.

**पटाशी** (ಪಟಾಶೀ) ಸ್ತ್ರೀ. ಒಂದು ಪ್ರಕಾರದ ಉಳಿ, ಬಂಕ, ಕಲ್ಲುಳಿ, ಕೆತ್ತಿಗೆಯ ಸಾಧನ.

**पटु** (ಪಟು) ವಿ. ಸಂ. ಶೂರ, ಜಾಣ, ಬಂಟ, ಚುರುಕು, ಕುಶಲ, ತೀಕ್ಷ್ಣ, ನಿಪುಣ, ತಜ್ಞ.

**पटेकरी** (ಪಟೇಕರೀ) ಪು. **'पट्टेकरी'** ನೋ.

**पट्ट** (ಪಟ್ಟ) ಪು. ನೆಯ್ದ ರೇಶಿಮೆ.

**पट्टण–न** (ಪಟ್ಟಣ–ನ) ನ. ಪಟ್ಟಣ, ದೊಡ್ಡ ಊರು.

**पट्टराणी** (ಪಟ್ಟರಾಣೀ) ಸ್ತ್ರೀ. ಪಟ್ಟದರಾಣಿ, ಪಟ್ಟ ಮಹಿಷಿ, ಹಿರಿಯರಾಣಿ.

**पट्टशिष्य** (ಪಟ್ಟಶಿಷ್ಯ) ಪು. ಮುಖ್ಯ ಶಿಷ್ಯ.

**पट्टा** (ಪಟ್ಟಾ) ಪು. ಒಂದು ಪ್ರಕಾರದ ಕತ್ತಿ, ಅಗಲ ಗೆರೆ, ಪಟ್ಟಿ, ಪಟ್ಟೆ, ದೆಬ್ಬೆ, ಬಾಸುಂಡೆ.

**पट्टा ओढणे** (ಪಟ್ಟಾ ಓಢಣೇ) ತಲೆಯ ಕ್ಷೌರ ಪಟ್ಟೆ ತೆಗೆ, ನಡುಪಟ್ಟಿ, ಇನಾಮಿನ ಸನದಪಟ್ಟಿ.

**कामाचा पट्टा ओढणे** (ಕಾಮಾಚಾ ಪಟ್ಟಾ ಓಡಣೇ) ಕ್ರಿ. ಸ. ಕೆಲಸ ಪ್ರಾರಂಭಿಸು.

**पट्टयाचा हात फिरवणे** (ಪಟ್ಟ್ಯಾಚಾ ಹಾತ್ ಫಿರವಿಣೇ) ಕ್ರಿ. ಸ. ಕತ್ತಿಯನ್ನು ತಿರುಗಿಸುವಿಕೆ, ಕತ್ತಿ ತಿರುವು, ಖಡ್ಗ ತಿರುವು.

**पट्टा परजणे** (ಪಟ್ಟಾ ಪರಜಣೇ) ಕ್ರಿ. ಸ. ಕತ್ತಿಯಿಂದ ಕದನಮಾಡು.

**पटाईत** (ಪಟಾಈತ್) ವಿ. ಖಡ್ಗ ತಿರುವುವವ. ನ. ಖಡ್ಗ ತಿರುವುವವನು. ವಿ. ನಿಪುಣ, ಬುದ್ಧಿವಂತ.

**पट्टाईत** (ಪಟ್ಟಾಈತ್) ವಿ. ಪಟ್ಟೆ ಪಟ್ಟೆಯ (ಹುಲಿ).

**पट्टाईतवाघ** (ಪಟ್ಟಾಈತವಾಘ್) ಪು. ಪಟ್ಟೆ ಪಟ್ಟೆಯ ಹುಲಿ, ಚಿರ್ಚು.

**पट्टाईत शराईत** (ಪಟಾಈತ್ ಶರಾಈತ್) ನಿಪುಣ, ತಜ್ಞ, ಬಲ್ಲವ.

**पट्टाधिकार** (ಪಟ್ಟಾಧಿಕಾರ್) ಪು. ಮುಖ್ಯಮಂತ್ರಿ ಪದ, ಪ್ರಧಾನಿಯ ಅಧಿಕಾರ.

**पट्टाभिषिक्त** (ಪಟ್ಟಾಭಿಷಿಕ್ತ) ವಿ. ಸಂ. ಪಟ್ಟಾಭಿಷೇಕವಾದ, ಸಿಂಹಾಸನಾರೂಢ, ಸಿಂಹಾಸನವನ್ನೇರಿದ.

**पट्टाभिषेक** (ಪಟ್ಟಾಭಿಷೇಕ್) ಪು. ಪಟ್ಟಾಭಿಷೇಕ, ರಾಜ್ಯಾಭಿಷೇಕ, ಸಿಂಹಾಸನಾರೋಹಣ, ರಾಜ್ಯಾಭಿಷೇಕ, ತಿಲಕ ಇಡುವಿಕೆ.

**पट्टी** (ಪಟ್ಟೀ) ಸ್ತ್ರೀ. ಪಟ್ಟಿ, ತುಂಡು, ಮೊಟಕು, ಬಟ್ಟೆಯ ತುಂಡು, ವರ್ಗಣಿ, ಚಂದಾ, ಕಾಗದದ ತುಂಡು.

**पट्टीचा वैदिक** (ಪಟ್ಟೀಚಾ ವೈದಿಕ್) ಪು. ಶ್ರೇಷ್ಠ ವೇದ ಸಂಪನ್ನ.

**पट्टीतला** (ಪಟ್ಟೀತಲಾ) ವಿ. ಯೋಗ್ಯತೆಯುಳ್ಳ, ತಜ್ಞ, ವೇದಾಧ್ಯಯನದ, ವೈದಿಕರ ಪಂಕ್ತಿಗೆಅರ್ಹ.

**पट्टू** (ಪಟ್ಟೂ) ಸ್ತ್ರೀ. ಉಣ್ಣೆಯ ಹಾಸಿಗೆ, ಉಣ್ಣೆಯ ಕಾಲ್ಪಟ್ಟಿ, ಕಾಲ ಒರಸುಗ.

**पट्टे** (ಪಟ್ಟೇ) ನ. ಅಗಲು (ವಸ್ತ್ರದ) ಅಗಲಳತೆ.

**पट्टेकरी** (ಪಟ್ಟೇಕರೀ) ಪು. } ಆಳು, ಸೇವಕ,
**पट्टेवाला** (ಪಟ್ಟೇವಾಲಾ) ಪು. } ಜವಾನ, ಪೇದೆ.

**पठडा** (ಪಠಡಾ) ವಿ. ಗಟ್ಟಿಗ, ಗಿಡ್ಡ, ಬಲವುಳ್ಳ, ಚಪ್ಪಟೆ, ಅಡ್ಡಗಲ.

**पठणे** (ಪಠಣೇ) ಕ್ರಿ. ಸ. ಓದು, ಅನ್ನು, ಪಾಠ ಮಾಡು, ಓದಿಹೇಳು, ಗಟ್ಟಿಯಾಗಿ ಓದು, ಅಭ್ಯಾಸ ಮಾಡು. ಬಾಯಿಪಾಠ ಹೇಳು, ಕಲಿಸು.

**पठण–न** (ಪಠಣ್–ನ್) ಓದುವಿಕೆ, ಒದರಿ ಓದುವಿಕೆ, ಬಾಯಿಪಾಠ ಅನ್ನುವಿಕೆ, ಅಭ್ಯಾಸ ಮಾಡುವಿಕೆ.

**पठाड** (ಪಠಾಡ್) ಸ್ತ್ರೀ. ಕುದುರೆಯ ತಂಗು, ಕುದುರೆಯ ನಡುಕಟ್ಟು, ಹೊರೆ (ಭಾರ) ಹಾಕುವುದಕ್ಕೆ ಅನುಕೂಲವಾದ ಜೀನು.

**पठाडी** (ಪಠಾಡೀ) ಸ್ತ್ರೀ. **पठाड** ನೋ.

**–गोम** (–ಗೋಮ್) ಸ್ತ್ರೀ. ಗಂಭೀರ ದೋಷ, ದೊಡ್ಡಕುಂದು, ಮಹತ್ಕಲಂಕ.

**पठाण** (ಪಠಾಣ) ಪು. ಮುಸಲ್ಮಾನರ ಒಂದು ಜಾತಿ, ಪಠಾಣ.

**पठाणी** (ಪಠಾಣೀ) ಪು. ಪಠಾಣರಂಥ.

**पठाणी खाते** (ಪಠಾಣೀ ಖಾತೇ) ನ. ಅವ್ಯವಸ್ಥಿತಲೆಕ್ಕ, ಸುಳ್ಳುಲೆಕ್ಕ ಇಡುವಿಕೆ.

**पठाणी मिरची** (ಪಠಾಣೀ ಮಿರಚೀ) ಸ್ತ್ರೀ. ದೊಡ್ಡ ಉದ್ದ ಮೆಣಸಿನಕಾಯಿ, ಡೊಣ್ಣ ಮೆಣಸಿನಕಾಯಿ

**पठार** (ಪಠಾರ್) ನ. ತಪ್ಪಲು ಭೂಮಿ, ತಪ್ಪಲು ಪ್ರದೇಶ, ಪರ್ವತದ ಮೇಲಿನ ಬೈಲು.

**पठारा** (ಪಠಾರಾ) ವಿ. ಅಗಲ ಬೆನ್ನಿನ, ವಿಸ್ತಾರ ಬೆನ್ನಿನ.

**पठित** (ಪಠಿತ್) ವಿ. ಪಾಠಮಾಡಿದ, ಓದಿದ, ಅಭ್ಯಾಸ ಮಾಡಿದ, ಓದಿದ.

**पठ्ठया–ठ्ठ्या** (ಪಠ್ಯಾ–ಠ್ಯಾ) ವಿ. ಬಲಿಷ್ಠ, ಬಡ್ಡು, ಬಂಟ, ಮೈಕಟ್ಟಿನ, ಶೂರ, ವೀರ.

**पड** (ಪಡ್) ವಿ. ಗೌಣ, ಮಾನವಿಲ್ಲದ, ಕಡಿಮೆ ಬೆಲೆಯ.

**पड** (ಪಡ್) ಸ್ತ್ರೀ. ಪಡ, ಸಾಗು ಆಗದಿದ್ದಭೂಮಿ, ಬಿದ್ದಹಣ್ಣು, ಉದುರಿದಹಣ್ಣು, ದುರ್ದೈವ.

**पडखाणे** (ಪಡ್‌ಖಾಣೇ) ಕ್ರಿ. ಅ. ಸಮಾಧಾನ ಹಿಡಿ, ಹಿಂತೆಗೆದುಕೊಳ್ಳು, ಹಿಂಜರಿ, ಅಪಜಯ ಒಪ್ಪು.

**पडचाकर** (ಪಡಚಾಕರ್) ಪು. ಆಳಿನ ಆಳು, ತೀರ ಕಡಿಮೆ ತರಗತಿಯ.

**पडजीभ** (ಪಡಜೀಭ್) ಕಿರಿನಾಲಿಗೆ.

**पडकय** (ಪಡಕಯ್) ಸ್ತ್ರೀ. ಕೈಗಡ, ಅದಬದಲು, ಧನ ಅಥವಾ ಮಂದಿ ಕೈಗಡ ಕೊಡುವಿಕೆ.

**पडकर** (ಪಡಕರ್) ವಿ. ಸಾಗುವಳಿಯಿಲ್ಲದ, ಬಿದ್ದ, ಕೆಲಸವಿಲ್ಲದ.

**पडका** (ಪಡಕಾ) ವಿ. ಬೀಳುವ, ಹಾಳಾಗುವ, ಬಿದ್ದು ಹಾಳಾದ.

**पडकेल** (ಪಡಕೇಲ್) ವಿ. ಕೈಗಡ ಬಂದ, ಸಹಾಯಕ್ಕೆ ಬಂದ, (ಮನುಷ್ಯ)

**पडकेश** (ಪಡಕೇಶ್) ಕಣ್ಣುಬೇನೆ, ಕಣ್ಣುರೆಪ್ಪೆಗೆ ಒಳಬದಿ ಕೂದಲು ಬರುವ ಬೇನೆ ಎವೆಗೂದಲ ಬೇನೆ.

**पडकोट** (ಪಡಕೋಟ್) ಪು. ಕೋಟೆಯ ಹೊರಗೋಡೆ ಕೋಟೆಯ ಸುತ್ತು ಗೋಡೆ.

**पडगा** (ಪಡಗಾ) ಪು. ಓಡ, ಕಟ್ಟಿಗೆಯ ಪಾತ್ರೆ, ಪಂಚಪಾತ್ರೆ, ಕಟ್ಟಿಗೆಯ ಬೋಗುಣಿ.

**पडगाहाण** (ಪಡ್‌ಗಾಹಾಣ್) ನ. ಒತ್ತೆಯಿಟ್ಟ ಜೀನಸನ್ನು ಒತ್ತೆ ಇಡುವಿಕೆ, ಅವಾನ್ನ ಅಡವು.

**पडगी–घी** (ಪಡಗೀ–ಘೀ) ಪಾತ್ರೆಯ ಬುಡ, ಅಚ್ಚು, ಸಂಬಾಳದ ಪಡಗ, ಪಡಗ.

**पडगे–घे** (ಪಡಗೇ–ಘೇ) ನಗಾರಿಯ ಪಡಗ, ನಗಾರಿಯ ಪಾತ್ರೆ.

**पडघम** (ಪಡಘಮ್) ನ. ಮೃದಂಗ, ಡೋಲು, ಡೊಳ್ಳು, ಮದ್ದಳೆ, ನಗಾರಿ, ಭೇರಿ, ಕರ್ಣಪಟಲ. ಕೊಳವೆ, ಪೀಪಾಯಿ.

**पडछाया** (ಪಡಛಾಯಾ) ಸ್ತ್ರೀ. ನೆರಳು, ಬಿಂಬ, ಛಾಯೆ, ಜತೆಗಾರ, ಭೂತ, ಪಿಶಾಚಿ.

**पडजीभ** (ಪಡಜೀಭ) ಸ್ತ್ರೀ. ಕಿರಿನಾಲಿಗೆ, ಕರುನಾಲಿಗೆ.

**पडझड** (ಪಡಝುಡ್) ಸ್ತ್ರೀ. ಕಸಮುಸುರೆ, ಎಲೆ ಕಸ, ಕಟ್ಟಿಗೆ ತೊಪ್ಪಲ.

**पडण** (ಪಡಣ್) ನ. ವಿಶ್ರಾಂತಿಸ್ಥಳ, ನಿಶ್ಚಿತಕಾಲ, ಹಂಗಾಮು.

**पडणीस येणे** (ಪಡಣೀಸ್ ಏಣೇ) ಸ್ತ್ರೀ. ಬಗ್ಗು, ಬಾಗು, ಕಾಳು ಒಣಗು, ತೆನೆ ಒಣಗು, ಕೊಳೆಯಲು ಬರು, ಹಾನಿಯಾಗು, ದಿವಾಳಿತೆಗೆ.

**पडणे** (ಪಡಣೇ) ಕ್ರಿ. ಅ. ಬೀಳು, ನಿಲ್ಲು, ಮುಗಿಸು.

**पडूं पडूं होणें** (ಪಡೂ ಪಡೂ ಹೋಣೇ) ಸ್ತ್ರೀ. ದಣಿ, ಬೀಳುವಂತಾಗು, ಶ್ರಮವಾಗು.

**पडत** (ಪಡತ್) ಸ್ತ್ರೀ. ತೆರಿಗೆಯ ಸೂಟು, ತೆರಿಗೆಯ ರಿಯಾಯತಿ.

**पडत झडत** (ಪಡತ್ ಝುಡತ್) ಕ್ರಿ. ವಿ. ಬೀಳುತ್ತ, ಏಳುತ್ತ, ಬೀಳೇಳುತ್ತ.

**पडत(ता)ळणे** (ಪಡತ(ತಾ)ಳಣೇ) ಕ್ರಿ. ಸ. ಪರೀಕ್ಷಿಸು, ಪ್ರಯೋಗಿಸು, ಅಳೆ, ಹೋಲಿಸು.

**पडत(ता)ळा** (ಪಡತ(ತಾ)ಳಾ) ಪು. ಪ್ರಯೋಗ ಮಾಡುವಿಕೆ, ಹೋಲಿಸಿ ನೋಡುವಿಕೆ.

**पडता पाया** (ಪಡತಾ ಪಾಯಾ) ಪು. ಸರಿಹಚ್ಚುವಿಕೆ. ಪರಾಜಯ, ಹಾನಿ, ಕೆಟ್ಟಕಾಲ.

**पडदणी** (ಪಡದಣೀ) ಸ್ತ್ರೀ. ಪಂಚೆ, ಕಿರಿದೋತರ, ಪಂಜೆ.

**पडदतळ** (ಪಡದತಳ್) ನ. ಪ್ರವಾಸದ ಸಾಮಾನು.

**पडद(दा)ळे** (ಪಡದ(ದಾ)ಳೇ) ನ. ಖಡ್ಗದ ನಡುಪಟ್ಟಿ.

**पडदा** (ಪಡದಾ) ಪು. ಫಾ. ಪರದೆ, ತೆರೆ, ಮರೆ, ಅಂತರಪಟ, ವಿಶ್ರಾಂತಿಸ್ಥಾನ, ನಾಚಿಕೆ, ಕಣ್ಣುರೆಪ್ಪೆ.

**पडदा उडवणे** (ಪಡದಾ ಉಡವಣೇ) ಕ್ರಿ. ಸ. ನಿರ್ಲಜ್ಜನಾಗು, ಲಜ್ಜಾಹೀನನಾಗು.

**पडदा पडणे** (ಪಡದಾ ಪಡಣೇ) ಕ್ರಿ. ಅ. ಮುಗಿ, ಆಟಮುಗಿ, ತೀರು.

**पडद्यात बसणे** (ಪಡದ್ಯಾತ್ ಬಸಣೇ) ಗುಪ್ತಸ್ಥಾನದಲ್ಲಿರು, ಅಡಗಿರು, ಭೂಗತನಾಗು.

**पडदानशीन** (ಪಡದಾನ್‌ಶೀನ್) ವಿ. ಫಾ. ಪರದೆಯಲ್ಲಿರುವ, (ಹೆಂಗಸು) ಬುರುಕೆಯಲ್ಲಿರುವ.

**पडदी** (ಪಡದೀ) ಸ್ತ್ರೀ. ಒಂದು ಇಟ್ಟಂಗಿಯ ಗೋಡೆ, ಪಡದೆ, ತೆರೆ.

**पडनांव** (ಪಡನಾವ್) ನ. ಬಿದ್ದ ಹೆಸರು, ನಿಂದೆಯ ಹೆಸರು.

**पडप** (ಪಡಪ್) ನ. ಅತಿ ಸ್ನೇಹ, ಅತಿ ಸ್ತುತಿ, ನಾವೀನ್ಯ, ಗರ್ವ, ಸೊಕ್ಕು.

**पडपापणी** (ಪಡಪಾಪಣೀ) ಸ್ತ್ರೀ. '**पडकेर**' ನೋ.

**पडपेंड** (ಪಡಪೇಂಡ್) ಸ್ತ್ರೀ. ಕೂಲಂಕುಷ ಸಂಗತಿ, ಇತ್ಥಂಭೂತ ಸಂಗತಿ, ಉಗಮ, ಬೆಳೆವಣಿಗೆ.

**पडभिंत** (ಪಡಭಿಂತ್) ಸ್ತ್ರೀ. ಹೊರಗೋಡೆ, ಹೆಚ್ಚಿನ ಗೋಡೆ.

**पडम** (ಪಡಮ್) ನ. ಹಾಸಿಗೆಯ ಅರಳೆ, ಕಡಿಮೆ ತರಗತಿಯ ಅರಳೆ.

**पडलाझडला** (ಪಡಲಾಝುಡಲಾ) ವಿ. '**पडझड**' ನೋ.

**पडलेपान** (ಪಡಲೇಪಾನ್) ನ. ಹಳ್ಳಿಯ ಸರ್ವಾಧಿಕಾರಿ, ಗ್ರಾಮಾಧಿಕಾರಿ.

**पडल्या पानावर हक्क असणे** (ಪಡಲ್ಯಾ ಪಾನಾವರ ಹಕ್ಕ ಅಸಣೇ) ಕ್ರಿ. ಅ. ಸರ್ವಾಧಿಕಾರ ನಡೆಯಿಸು, ಹಳ್ಳಿಗೆ ಒಡಿಯನಾಗಿರು.

**पडल्या पडल्या** (ಪಡಲ್ಯಾ ಪಡಲ್ಯಾ) ಕ್ರಿ. ವಿ. ಸಹಜವಾಗಿ, ಅನಾಯಾಸವಾಗಿ.

**पडल्या पडल्या करणे** (ಪಡಲ್ಯಾ ಪಡಲ್ಯಾ ಕರಣೇ) ಕ್ರಿ. ಸ. ಸಹಜವಾಗಿ ಗೆಲ್ಲು, ನಿರಾಯಾಸವಾಗಿ ಗೆಲ್ಲು.

**पडवळ** (ಪಡವಳ್) ನ. ಪಡುವಲಕಾಯಿ.

**हातापायाचे पडवळ होणे** (ಹಾತಾಪಾಯಾಚೇ ಪಡವಳ್ ಹೋಣೆ) ಅತ್ಯಂತ ಸೊರಗು, ಕೃಶವಾಗು.

**पडवी** (ಪಡವೀ) ಸ್ತ್ರೀ. ಪಡಸಾಲೆ, ಹೊರಪಡಸಾಲೆ, ಮಳಿಗೆ, ಛಪ್ಪರ.

**पडशाळा** (ಪಡಶಾಳಾ) ಪು. ಹೊರಮನೆ, ಸಣ್ಣಮನೆ.

**पडशी** (ಪಡಶೀ) ಸ್ತ್ರೀ. ಹೆಗಲುಚೀಲ, ಹಸಿಬೆ.

**पडस(सा)र** (ಪಡಸ(ಸಾ)ರ್) ವಿ. ನಿರ್ಜನ, ವಸತಿಯಿಲ್ಲದ, ಜನರಿಲ್ಲದ, ಹಾಳಾದ.

**पडसाद** (ಪಡಸಾದ್) ಪು. ಪ್ರತಿಧ್ವನಿ, ಮರುಧ್ವನಿ. ಸರಿಯಾದ ಅನುಕರಣ.

**पडसावली** (ಪಡಸಾವಲೀ) ಸ್ತ್ರೀ. ಪ್ರತಿಛಾಯೆ, ನೆರಳು.

**पडसाळ** (ಪಡಸಾಳ್) ಸ್ತ್ರೀ. ಹೊರಮನೆ, ನಡುಮನೆ, ಪಡಸಾಲೆ.

**पडसाक्ष** (ಪಡಸಾಕ್ಷ) ಸ್ತ್ರೀ. ಸಾಕ್ಷಿದಾರನಿಗೆ ಬೆಂಬಲ ಕೊಡುವ ಸಾಕ್ಷಿ, ಸಾಕ್ಷಿಯ ಸಾಕ್ಷಿದಾರ.

**पडसाक्षी** (ಪಡಸಾಕ್ಷೀ) ಪು. ಸಾಕ್ಷಿದಾರನಿಗೆ ಬೆಂಬಲ ಕೊಡುವ ಸಾಕ್ಷಿದಾರ.

**पडसे** (ಪಡಸೇ) ನ. ನೆಗಡಿ, ಮೂಗುಸೋರುವಿಕೆ.

**पडळ** (ಪಡಳ್) ನ. ಕಣ್ಣಿನಪರದೆ, ಕಣ್ಣಿನಪರೆ.

**पडळी** (ಪಡಳೀ) ಸ್ತ್ರೀ. ಪಡಸಾಲೆ ಹೊರಪಡಸಾಲೆ, ದಾಳಿ (ಜಿಟ್ಟಿಯ)

**पडाव** (ಪಡಾವ) ಪು. ದೋಣಿ ಇಪ್ಪತ್ತೈದು ಖಂಡಗದ ನಾವೆ.

**पंडित** (ಪಂಡಿತ್) ಪು. ಪಂಡಿತ, ವಿದ್ವಾಂಸ, ಜ್ಞಾನಿ (ವ್ಯಂಗ್ಯ) ಅಜ್ಞಾನಿ.

**पंडितंमन्य** (ಪಂಡಿತಂಮನ್ಯ) ತಾನೇ ಜಾಣನೆಂದು ತಿಳಿಯುವವ, ವಿದ್ಯೆಯಗರ್ವಿಷ್ಠ.

**पंडितराव** (ಪಂಡಿತರಾವ್) ಪು. ರಾಜದರಬಾರ ಪಂಡಿತ, ಓಲಗದ ಪಂಡಿತ, ಅಷ್ಟ ಪ್ರಧಾನರಲ್ಲಿ ಒಬ್ಬ.

**पडिपाड** (ಪಡಿಪಾಡ್) ಪು. ಸ್ಪರ್ಧೆಗಾರ, ಹೋರಾಡುವವ, (ಕಾವ್ಯದಲ್ಲಿ)

**पडिभार–वार** (ಪಡಿಭಾರ್–ವಾರ್) ಪು. **बडिवार** ನೋ. ಒ..ಡಾಲು.

**पडीत** (ಪಡೀತ್) ಪಡಬಿದ್ದ, ಸಾಗುವಳಿ ಆಗದ.

**पडीतचाराव** (ಪಡಿತ್‌ಚಾರಾವ) ಪು. ತುರುಮಂದಿ, ಬೀಳುಭೂಮಿ, ಪಡಭೂಮಿ, ದನಮೇಯಿಸುವ ಭೂಮಿ.

**पंडुछाया** (ಪಂಡುಛಾಯಾ) ಸ್ತ್ರೀ. ಕಾಮಿಣಿ ಪ್ರಾರಂಭ ಲಕ್ಷಣ, ಪಾಂಡುರೋಗ ಲಕ್ಷಣ.

**पंडू** (ಪಂಡೂ) ಪು. ಕಾಮಿಣಿಬೇನೆ, ಪಂಡುರೋಗ

**पडे** (ಪಡೇ) ನ. ಸತ್ತಪಶು,ಪಶವಿನ ಮೃತದೇಹ, ಸತ್ತದನ.

**पडोशी** (ಪಡೋಶಿ) ಸ್ತ್ರೀ. ನೆರೆಮನೆಯವ, ನೆರೆಹೊರೆಯವ.

**पडोस** (ಪಡೋಸ್) ವಿ. ಅಕ್ಕಪಕ್ಕದ, ನೆರೆಹೊರೆಯ.

**पडोसरी** (ಪಡೋಸರೀ) ಸ್ತ್ರೀ. ಹಿಂಪಡಸಾಲೆ.

**पडोसा** (ಪಡೋಸಾ) ಪು. ನೆರೆಹೊರೆ, ಸಾಮೀಪ್ಯ, ಸಮೀಪದಲ್ಲಿರುವಿಕೆ.

**पडोसा पाहणे** (ಪಡೋಸಾ ಪಾಹಣೇ) ಕ್ರಿ. ಸ. ಹೊಂದಿಸಿ ನೋಡು, ಹೋಲಿಸಿನೋಡು, ಸರಿಹಚ್ಚಿ ನೋಡು.

**पडोशास उतरणें** (ಪಡೋಶಾಸ್ ಉತರಣೇ) ಹೊಂದು ಹೋಲು, ಪರೀಕ್ಷೆಯಲ್ಲಿ ಉತ್ತೀರ್ಣನಾಗು.

**पडोसा ताडून पाहणें** (ಪಡೋಸಾ ತಾಡೂನ್ ಪಾಹಣೇ) ಕ್ರಿ. ಸ. ಹೋಲಿಸಿ ನೋಡು, ಹೊಂದಿಸಿ ನೋಡು.

**पडोळ** (ಪಡೋಳ್) ನ. **पडवल** ನೋಡಿರಿ.

**पड्या** (ಪಡ್ಯಾ) ವಿ. ದಡ್ಡ, ಮಂದ, ತೂಕಡಿಸುವವ, ಶ್ರಮಸಹಿಸದವ, ದಣುವಿಗೆ ಅಂಜುವವ.

**उड्या पुरवतो, पड्या पुरवत नाही** (ಉಡ್ಯಾ ಪುರವತೋ, ಪಡ್ಯಾ ಪುರವತ್‌ನಾಹೀ) ನಾಣ್ಣುಡಿ. ಸೋಮಾರಿಗಿಂತ ತುಂಟನೇ ಲೇಸು, ಹಿಂಜರಿಯುವವನಿಗಿಂತ ಮುಂಜರಿಯುವವ ಮೇಲು.

**पंड्या** (ಪಂಡ್ಯಾ) ಪು. ಬ್ರಾಹ್ಮಣರ ಜಾತಿ, ಕ್ಷೇತ್ರದ ಪೂಜಾರಿ, ಒಂದು ಜಾತಿಯ ಕಬ್ಬು.

**पड्याल** (ಪಡ್ಯಾಲ್) ಅವ್ಯಯ. ಬದಿಗೆ, ಆಚೆಗೆ.

**पढणे** (ಪಢಣೇ) ಕ್ರಿ. ಸ. ಓದು, ಅಭ್ಯಾಸಮಾಡು, ಮತಕೊಡು, ಅಭಿಪ್ರಾಯಕೊಡು. ೨. ನ. ವಿದ್ಯೆ, ಪಾಂಡಿತ್ಯ, ತಜ್ಞತೆ.

**पढत पशु** (ಪಢತ್ ಪಶು) ಪು., **पढत मूर्ख** (ಪಢತ್ ಮೂರ್ಖ) ವಿ. ಕಲಿತ ಹುಚ್ಚ, ಓದಿದ ಮೂರ್ಖ. ಪುಸ್ತಕದ ಹುಳ.

**पंढरी** (ಪಂಢರೀ) ಸ್ತ್ರೀ. ಪಂಢರಪುರ, ಪಂಢರಪುರ ಕ್ಷೇತ್ರ. ಧರ್ಮಕ್ಷೇತ್ರ.

**पंढरी पिकणे** (ಪಂಢರೀ ಪಿಕಣೇ) ಕ್ರಿ. ಅ. ಅಭ್ಯುದಯವಾಗು, ಪ್ರಗತಿಯಾಗು, ಏಳ್ಗೆಯಾಗು.

**पढियंता** (ಪಢಿಯಂತಾ) ವಿ. (ಕಾವ್ಯದಲ್ಲಿ) ಪ್ರೀತಿಯ, ಪ್ರೀತಿಯುಳ್ಳ.

**पढीक** (ಪಢಿಕ್) ವಿ. ಕೇವಲ ಓದಿದವ. (ಓದಿದ ವಿದ್ಯೆ).

**पण** (ಪಣ್) ಪು.ಸಂ. ಪ್ರತಿಜ್ಞೆ,ಜಿದ್ದು. ೨.ಅವ್ಯಯ, ಆದರೆ.

**पणात येणे** (ಪಣಾತ್ ಯೇಣೇ) ಕ್ರಿ.ಅ. ಅಭಿವಚನ ದಲ್ಲಿ ಸಿಕ್ಕಿಕೊಳ್ಳು.

**पणजा** (ಪಣಜಾ) ಪು. ಅಜ್ಜನ ತಂದೆ, ಮುತ್ತಜ್ಜ.

**पणजी** (ಪಣಜೀ) ಸ್ತ್ರೀ. ಮುತ್ತಜ್ಜಿ.

**पणजोळ–जवळ** (ಪಣಜೋಳ್–ಜವಳ್) ನ. ಅಜ್ಜನ ಮನೆ, ಮುತ್ತಜ್ಜನ ಮನೆ.

**पणत** (ಪಣತ್) ಸ್ತ್ರೀ. ಮೊಮ್ಮಗಳ ಮಗಳು, ೨. ಪಣತಿ, ಹಂತಿ.

**पणतसून** (ಪಣತ್‌ಸೂನ್) ಸ್ತ್ರೀ. ಮೊಮ್ಮಗನ ಸೊಸೆ.

**पणती–तोली** (ಪಣತೀ–ತೋಲೀ) ಸ್ತ್ರೀ. ಪಣತಿ, ದೀಪದ ಪಣತಿ.

**पणतवंड** (ಪಣತವಂಡ್) ನ. ಮರಿಮಕ್ಕಳು

**पणतू** (ಪಣತೂ) ಪು. ಮರಿಮಗ.

**पणपणे** (ಪಣಪಣೇ) ಕ್ರಿ. ಅ. ಹಿಂ. ಏಳ್ಗೆಯಾಗು, ಅಭ್ಯುದಯವಾಗು.

**पणस–फणस** (ಪಣಸ್–ಫಣಸ್) ಹಲಸು, ಹಲಸಿನ ಹಣ್ಣು.

**–पणा** (–ಪಣಾ) ತದ್ಧಿತಪ್ರತ್ಯಯ. "ತನ".

**पणित** (ಪಣಿತ) ವಿ. ಸಂ. ಜೂಜಿಗೆ ಹಚ್ಚಿದ.

**पण्य** (ಪಣ್ಯ) ನ. ಸಂ. ಮಾರುವ, ಮಾರತಕ್ಕ, ಮಾರಲಿಕ್ಕೆ ಯೋಗ್ಯ (ಸರಕು).

**पण्यांगना** (ಪಣ್ಯಾಂಗನಾ) ವೇಶ್ಯೆ, ಸೂಳೆ, ಗಣಿಕೆ.

**पंत** (ಪಂತ್) ಪು. ಮಹಾರಾಯ, ಮಂತ್ರಿಗಳಿಗೆ ಕೊಡುವ ಗೌರವಸೂಚಕ ಶಬ್ದ, ಆದರಕೊಡುವ ಶಬ್ದ.

**पंत अमात्य** (ಪಂತ್ ಅಮಾತ್ಯ) ಪು. ಮುಖ್ಯಪ್ರಧಾನಿ.

**पंत प्रतिनिधी** (ಪಂತ ಪ್ರತಿನಿಧೀ) ಪು. ಪ್ರಧಾನಿಗಳಲ್ಲಿ ಒಬ್ಬ.

**पंतप्रधान** (ಪಂತ್ ಪ್ರಧಾನ್) ನ. ಪ್ರಧಾನ ಮಂತ್ರಿ, ಪ್ರೈಮ್ ಮಿನಿಸ್ಟರ್.

**पत** (ಪತ್) ಸ್ತ್ರೀ. ಹಿಂ. ಮಾನ ಮರ್ಯಾದೆ, ಆರ್ಥಿಕ ಬಲ.

**पतीवर पाणी पडणे** (ಪತೀವರ್ ಪಾಣೀ ಪಡಣೇ) ಕ್ರಿ. ನಂಬಿಗೆಗೇಡಿಯಾಗು, ಪ್ರತಿಷ್ಠೆ ಮಣ್ಣುಗೂಡು, ಸಾಲಸಿಗದ ಹಾಗೆ ಆಗು.

**पतचढणे – वाढणे** (ಪತಚಢಣೇ – ವಾಢಣೇ) ಕ್ರಿ. ನಂಬುಗೆ ಹೆಚ್ಚಾಗು, ವಿಶ್ವಾಸ ಬೆಳೆ, ಪ್ರತಿಷ್ಠೆ ಹೆಚ್ಚಾಗು.

**पत(थ)क** (ಪತ(ಥ)ಕ) ನ.ಸಂ. ಕುದುರೆಯ ದಂಡು, ಅಶ್ವದಳ.

**पतकर–रा** (ಪತಕರ್–ರಾ) ಪು. ಹೊಣೆಗಾರಿಕೆ, ಜವಾಬದಾರಿ, ಗುತ್ತಿಗೆಹೊರುವಿಕೆ.

**पतक(का)रणे** (ಪತಕ(ಕಾ)ರಣೇ) ಕ್ರಿ. ಸ. ಹೊಣೆ ಹೊರು, ಒಪ್ಪು, ಕಬೂಲಾಗು.

**पतक्या** (ಪತಕ್ಯಾ) ಪು. ಅಶ್ವದಲದ ಮುಖ್ಯಾಧಿಕಾರಿ, ಅಶ್ವಸೇನಾಧಿಕಾರಿ, ಕುದುರೆಯ ದಂಡಿನೊಡೆಯ.

**पतकी** (ಪತಕೀ) ಪು. ತೆರಿಗೆಯ ಅಧಿಕಾರಿ, ಸುಂಕದ ಅಧಿಕಾರಿ, ಸುಂಕವಸೂಲಿಗ.

**पतखल** (ಪತಖಲ್) ಸ್ತ್ರೀ.<br>**फतकल** (ಫತಕಲ್) ಸ್ತ್ರೀ. } ಚೌಕಾಗಿ ಕೂಡುವಿಕೆ, ಚಕ್ಕಳಿ ಮುಕ್ಕಳಿ ಹಾಕಿ ಕೂಡುವಿಕೆ.

**पतंग** (ಪತಂಗ್) ಪು. ಗಾಳಿಯಪಟ, ೨. ದೀಪದ ಹುಳ, ೩. ಸಂ. ಪಕ್ಷಿ – ೪. ಸಂ. ಸೂರ್ಯ.

**पतंग फुगडी** (ಪತಂಗ್ ಫುಗಡೀ) ಸ್ತ್ರೀ- ಫುಗಡಿಯಾಟ ಹೆಣ್ಣುಮಕ್ಕಳು ಆಡುವ ಒಂದು ಆಟ.

**पतन** (ಪತನ್) ನ. ಸಂ. ಬೀಳುವಿಕೆ, ಹಾಳಾಗುವಿಕೆ, ಹಾನಿಯಾಗುವಿಕೆ, ಹಾನಿ, ಸೋಲು.

**–पावणे** (–ಪಾವಣೇ) ಕ್ರಿ. ಅ. ಬೀಳು, ಸೋಲು, ಕೆಳಗಿಳಿ, ಕೆಳತರಗತಿಗೆ ಹೋಗು, ಅವಮಾನಿತ ನಾಗು.

**पत(थ्य)पाणी** (ಪತ)(ಥ್ಯ)ಪಾಣೀ) ನ. ಪಥ್ಯ, ಪಥ್ಯನೀರು, ಬಾಯಿಕಾಯುವಿಕೆ.

**पतळी** (ಪತಳೀ) ಸ್ತ್ರೀ. ಪಾತಳಿ, ಉಳಿ.

**पताका** (ಪತಾಕಾ) ಸ್ತ್ರೀ. ನಿಶಾನಿ, ಧ್ವಜ, ಬಾವುಟ.

**पताडा** (ಪತಾಡಾ) ವಿ. ಅಗಲವಾದ, **फताडा** ನೋಡಿರಿ.

**पति** (ಪತಿ) ಪು. ಸಂ. ಗಂಡ, ಧನಿ, ಒಡೆಯ, ಮುಖ್ಯಸ್ಥ.

**पतिंगा** (ಪತಿಂಗಾ) ಪು. ಹಡಗದ ಹುಟ್ಟು, ನಾವೆಯ ಹುಟ್ಟು.

**पतित** (ಪತಿತ್) ವಿ. ಸಂ. ಬಿದ್ದ, ಹಾಳಾದ, ಅವಮಾ ನಿತನಾದ, ಪಾಪಿ, ದುರಾಚಾರಿ.

**–पावन** (–ಪಾವನ್) ವಿ. ಪಾಪಿಗಳ ಉದ್ಧಾರಕ, ದೀನೋದ್ಧಾರಕ.

**पतिंवरा** (ಪತಿಂವರಾ) ಸ್ತ್ರೀ. ಸಂ. ಮದುವೆಗಾದಕನ್ಯೆ, ಹರೆಯದಕನ್ಯೆ.

**पतिव्रता** (ಪತಿವ್ರತಾ) ಸ್ತ್ರೀ. ಸಂ. ಪತಿವ್ರತೆ, ಹದಿಬದೆ.

**पंतेगारी** (ಪಂತೆಗಾರಿ) ಸ್ತ್ರೀ. ಅತಿವೇಗದ ಹಡಗ, ತೀವ್ರವೇಗದ ನಾಕೆ.

**पंतोजी** (ಪಂತೋಜೀ) ಪು. ಗುರುಗಳು, ಶಿಕ್ಷಕ, ಮೇಷ್ಟ್ರು.

**पत्तन** (ಪತ್ತನ್) ನ. ಸಂ. ಪಟ್ಟಣ, ನಗರ.

**पत्तर** (ಪತ್ತರ್) ನ. ಓಡ, ಭಿಕ್ಷಾಪಾತ್ರೆ, ಕಟ್ಟಿಗೆಯ ಭಿಕ್ಷಾಪಾತ್ರೆ.

**बाबू जेवले पत्तर पालथे केले** (ಬಾಬು ಜವಲೇ ಪತ್ತರ ಪಾಲಥೆ ಕೇಲೆ) (ಗಾದೆಯಮಾತು) ಗಂಡ ಉಂಡ ನೆಂದರೆ ಹೆಂಡತಿಗೆ ಗೋಳು.

**पत्ता** (ಪತ್ತಾ) ಪು. ಹಿಂ. ವಿಳಾಸ, ಅಂಚೆ ವಿಳಾಸ, ಶೋಧ, ಗುರುತು, ಸುದ್ದಿ.

**पत्तादोरा** (ಪತ್ತಾದೋರಾ) ಪು. ಶೋಧ, ಇರುವ ಸ್ಥಾನ.

**पत्तामुद्दा** (ಪತ್ತಾಮುದ್ದಾ) ಪು. ಪುರಾವೆ, ಆಧಾರ, ಪುರಾವೆಯ ವಿಳಾಸ.

**पत्त्यामुद्द्यानिशी** (ಪತ್ತ್ಯಾಮುದ್ದ್ಯಾನಿಶಿ) ಕ್ರಿ. ವಿ. ಪುರಾವೆ ಸಹಿತವಾಗಿ, ಆಧಾರಸಹಿತವಾಗಿ.

**पत्ती** (ಪತ್ತೀ) ಸ್ತ್ರೀ. ಸಣಬಿನ ಎಲೆ, ಬಂಗಿನಾರಿನಎಲೆ

**पत्तेवार** (ಪತ್ತೇವಾರ್) ವಿ. ವಿಳಾಸ ಸಹಿತವಾದ, ಎಲ್ಲ ವಿವರಗಳುಳ್ಳ.

**पत्थर** (ಪತ್ಥರ್) ಪು. ಕಲ್ಲು, ದಡ್ಡ ಮೂರ್ಖ ಮನುಷ್ಯ, ಬುದ್ಧಿಗೇಡಿ ೨. ಭಾವನೆಯಿಲ್ಲದವ.

**पत्नी** (ಪತ್ನೀ) ಸ್ತ್ರೀ. ಸಂ. ಹೆಂಡತಿ, ಸ್ತ್ರೀ, ಧರ್ಮಪತ್ನಿ

**पत्र** (ಪತ್ರ) ನ. ಸಂ. ಓಲೆ, ಕಾಗದ, ಚೀಟಿ, ಬರೆದ ಕಾಗದ, ಹೂವಿನ ಪಕಳೆ, ಪುಸ್ತಕದ ಎಲೆ.

**पत्रदर्शनी** (ಪತ್ರದರ್ಶನೀ) ಕ್ರಿ. ವಿ. ಪತ್ರ ಕಂಡ ಕೂಡಲೆ.

**पत्रद्वारा** (ಪತ್ರದ್ವಾರಾ) ಕ್ರಿ. ವಿ. ಪತ್ರಮುಖೇನ, ಪತ್ರ ಮುಖಾಂತರ, ಪತ್ರ ಬರಿದು.

**पत्रक** (ಪತ್ರಕ್) ಪ್ರಕಟನೆ, ಹೇಳಿಕೆ.

**पत्रवल्ली** (ಪತ್ರವಲ್ಲಿ) ಸ್ತ್ರೀ. ಸಂ. ಪತ್ರಾವಳಿ ಊಟದ ಎಲೆ.

**पत्रावली** (ಪತ್ರಾವಲೀ) ಸ್ತ್ರೀ. ಎಲೆಯ ಮಾಲೆ.

**पत्रा** (ಪತ್ರಾ) ಪು. ಹಿಂ. ತಗಡು.

**पत्राज** (ಪತ್ರಾಜ್) ಸ್ತ್ರೀ. ಫಾ. ಬಿಂಕ, ಗರ್ವ, ಸೊಕ್ಕು, ಹೆಮ್ಮೆ, ಒಣಹಮ್ಮು, ಅಹಂಕಾರ, ಕಲ್ಪನೆ, ಊಹೆ.

**पत्राजी** (ಪತ್ರಾಜೀ) ವಿ. ಬಿಂಕದ, ಗರ್ವಿಷ್ಠ, ಸೊಕ್ಕಿನ, ಹೆಮ್ಮೆಯುಳ್ಳ, ಅಹಂಕಾರದ.

**पत्रावळ** (ಪತ್ರಾವಳ್) ಸ್ತ್ರೀ.ನ. ಪತ್ರಾವಲಿ, ಊಟದ ಎಲೆ, ಪತ್ರೋಳಿ.

**पत्रावळ उडणे** (ಪತ್ರಾಳ್ ಉಡಣೇ) ಕ್ರಿ. ಫಜೀತಿ ಯಾಗು, ತೀರ ಹಾನಿಯಾಗು.

**भर पत्रावळीत राख घालणे** (ಭರ ಪತ್ರಾವಳೀತ ರಾಖ ಘಾಲಣೇ) ಕ್ರಿ. ತುಂಬಿದ ತಟ್ಟೆಯಲ್ಲಿ ತಾಡು ಹಾಕು.

**भरली पत्रावळ ओढणे** (ಭರಲೀ ಪತ್ರಾವಳ್ ಓಢಣೇ) ಕ್ರಿ. ಸಂ. ಬಡಿಸಿದ ತಟ್ಟೆ ಎಳೆ, ಬಾಯ್ಗಿಯ ತುತ್ತು ಕಸಿದುಕೊ, ಉಪಜೀವನ ಸಾಧನ ನಾಶಮಾಡು.

**पत्रावळी वरून उठवणे** (ಪತ್ರಾವಳೀ ವರೂನ್ ಉಠವಣೇ) ಕ್ರಿ. ಸಂ. ಎಲೆಯ ಮೇಲಿಂದ ಎಬ್ಬಿಸು, ಊಟಕ್ಕೆ ಹಾಕದಿರು.

**पत्रिका** (ಪತ್ರಿಕಾ) ಸ್ತ್ರೀ. ಸಂ. ಜಾತಕ, ಕುಂಡಲಿ, ಕಾಗದ, ಪತ್ರ, ಪತ್ರಿಕೆ.

**पत्रिका पूजन** (ಪತ್ರಿಕಾ ಪೂಜನಾ) ಪತ್ರಿಕೆಯ ಪೂಜೆ ಜಾತಕ ಪೂಜೆ, ಲಗ್ನ ಪತ್ರಿಕಾ ಪೂಜೆ.

**पत्री** (ಪತ್ರೀ) ಸ್ತ್ರೀ. ಬಿಲ್ವಪತ್ರಿ, ಎಲೆ, ಗರಿ, ದೊಣ್ಣೆ, ಮುದ್ರೆಕೋಲು ಜಾಯಪತ್ರಿ, ತಂಬಾಕಿನ ಎಲೆ, ದೇವತಾರ್ಚನಪತ್ರಿ.

**पत्री घालणे** (ಪತ್ರೀ ಘಾಲಣೇ) ಕ್ರಿ. ಸಂ. ಪತ್ರೀ ಏರಿಸು, ಪತ್ರಿ ಅರ್ಚಿಸು.

**पत्र्या हरताळ** (ಪತ್ರ್ಯಾ ಹರತಾಳ) ಪು. ನಾ. ಹರಿದಳ, ಅರಿಸಿಣ ಎಲೆ.

**पंथ** (ಪಂಥ್) ಪು. ಜಾತಿ, ಪಂಗಡ, ಧಾರ್ಮಿಕ ಪಂಥ ದಾರಿ, ಮಾರ್ಗ, ಧಾರ್ಮಿಕ ಸಾಂಪ್ರದಾಯ.

**एकपंथ दो काज** (ಏಕ್‌ಪಂಥ್ ದೋ ಕಾಜ್) ನಾಣ್ಣುಡಿ. ಒಂದು ಕೆಲಸದಲ್ಲಿಯೇ ಎರಡು ಮಾತು ಗಳನ್ನು ಸಾಧಿಸುವಿಕೆ.

**आल्या पंथे** (ಆಲ್ಯಾ ಪಂಥೇ) ಬಂದ ದಾರಿಯಿಂದ, ಬಂದ ಮಾರ್ಗದಿಂದ.

**पंथास टेकणे–लागणे** (ಪಂಥಾಸ್ ಟೇಕಣೇ–ಲಾಗಣೇ) ಕ್ರಿ. ಸಂ. ಸಾಯಲಾಗು, ಮಾರ್ಗಕ್ಕೆ ಹತ್ತು.

**पंथास पोहोचणे** (ಪಂಥಾಸ ಪೋಹೋಚಣೇ) ಕ್ರಿ. ಸಾಯು, ಮಾರ್ಗಹಿಡಿ.

**पथ** (ಪಥ್) ಪು. ಮಾರ್ಗ, ಹಾದಿ, ಕಾಲು ಹಾದಿ.

**पथक** (ಪಥಕ್) ನ. ಮೇಳ, ದಂಡು.

**पथारी** (ಪಥಾರೀ) ಸ್ತ್ರೀ. ಹಿಂ. ಹಾಸಿಗೆ, ಹಾಸುವ ಬಟ್ಟೆ, ಗೋಸಾವಿಯ ಹಾಸಿಗೆ.

**पंथी** (ಪಂಥೀ) ಕ್ರಿ. ಸಂ. ಶಿಷ್ಯ, ಅನುಯಾಯಿ, ಧಾರ್ಮಿಕ ಗುರುಭಕ್ತ.

**पथ्य** (ಪಥ್ಯ) ನ. ಪಥ್ಯ, ಬಾಯಿ ಕಾಯುವಿಕೆ, ಆಹಾರ ಯೋಜನೆ, ಪಥ್ಯಕ್ರಮ ಉಪಯೋಗಕ್ಕೆ ಬರು.

**पथ्यावर पडणे** (ಪಥ್ಯಾವರ ಪಡಣೇ) ಕ್ರಿ. ವಿ. ಲಾಭ ವಾಗು, ಅನುಕೂಲವಾಗು.

**पथ्यावर असणे** (ಪಥ್ಯಾವರ್ ಅಸಣೇ) ಕ್ರಿ. ಅ. ಪಥ್ಯ ಮಾಡು, ಸಂಯಮದಿಂದಿರು, ಬಾಯಿಕಾಯು.

**पथ्यापाणी** (ಪಥ್ಯಾಪಾಣೀ) ನ. **पथ्य** ನೋ.

**पथ्यपाणी करणे** (ಪಥ್ಯಾಪಾಣೀ ಕರಣೇ) **पथ्यावर असणे** ನೋ.

**पथ्यकर – पथ्याचा** (ಪಥ್ಯಯಕರ – ಪಥ್ಯಾಚಾ) ವಿ. ಪಥ್ಯದ, ಆಹಾರ ಯೋಜನೆಯ.

**पद** (ಪದ್) ನ. ಸಂ. ಕವಿತೆ, ಅಧಿಕಾರಸ್ಥಾನ, ಪದ (ವ್ಯಾಕರಣದಲ್ಲಿ) ಕಾವ್ಯಭಾಗ, ವರ್ಗಮೂಲ (ಗಣಿತದಲ್ಲಿ).

**पदक** (ಪದಕ್) ನ. ಪದಕ, ಬಿಲ್ಲೆ, ಕಂಠಾಭರಣ, ಕೊರಳ ಪದಕ.

**पदचिन्ह** (ಪದಚಿನ್ಹ) ನ. ಕಾಲಿನ ಗುರುತು, ಹೆಜ್ಜೆಯ ಗುರುತು.

**पदच्छेद** (ಪದಚ್ಛೇದ್) ಪು. ಸಂ. ಪದಬಿಡಿಸುವಿಕೆ, (ಕವಿತೆಯ) ಪದವಿಗ್ರಹ.

**पदच्युत** (ಪದಚ್ಯುತ್) ವಿ. ಸಂ., **पदभ्रष्ट** (ಪದಭ್ರಷ್ಟ) ವಿ. ಸ್ಥಾನದಿಂದಿಳಿದ, ಅಧಿಕಾರ ಕಳಕೊಂಡ, ಅವ ಮಾನಹೊಂದು.

**पदयोजना** (ಪದಯೋಜನಾ) ಸ್ತ್ರೀ. ಸಂ. ಅಧಿಕಾರ ಯೋಜನೆ, ಪದಯೋಜನೆ, ಪದಕೂಡಿಸುವಿಕೆ, ಸಂಧಿ (ವ್ಯಾಕರಣದಲ್ಲಿ) ಪ್ರಬಂಧ, ಕವನ, ರಚನೆ, ಕೃತಿ.

**पदर** (ಪದರ್) ಪು. ಸೆರಗು, ಬಟ್ಟೆಯ ಅಂಚು. ೨. (ಹೆಂಗಸರ) ಪ್ರಾಯ, ಹರೆ.

**–पसरणे** (–ಪಸರಣೇ) ಕ್ರಿ. ಸ. ಸೆರಗು ಒಡ್ಡು.

**पदरचा** (ಪದರಚಾ) ವಿ. ಕೈಯಿಂದ ಖರ್ಚಾದ, ಸ್ವಂತದ (ದುಡ್ಡು, ಮಾತು ಮುಂ.)

**पदर मोडणे** (ಪದರ್ ಮೋಡಣೇ) ಕ್ರಿ. ಅ. ಸ್ವಂತ ಖರ್ಚಿನಿಂದ ಜೀವಿಸು.

**पदरांत घालणे** (ಪದರಾತ್ ಘಾಲಣೇ) ಕ್ರಿ. ಸ. ಸೆರಗಿ ನಲ್ಲಿ ಹಾಕು, ದೋಷಾರೋಪಮಾಡು, (ಅಪರಾಧ) ಕೊರಳಲ್ಲಿ ಕಟ್ಟು.

**पदर घालणे–गमावणे** (ಪದರ್ ಘಾಲಣೇ–ಗಮಾವಣೇ) ಕ್ರಿ. ಹಾನಿಹೊಂದು.

**पदर पसरणे** (ಪದರ್ ಪಸರಣೇ) ಕ್ರಿ. ಸ. ಸೆರಗೊಡ್ಡು, ಬಿಕ್ಕೆ ಬೇಡು, ದೀನತನ ತೋರಿಸು.

**पदर फाडून देणे** (ಪದರ್ ಫಾಡೂನ್ ದೇಣೇ) ಕ್ರಿ. ಸ. ಸಂಬಂಧ ಕಡಿದುಕೊಳ್ಳು ಸೆರಗು ಹರಿ.

**पदरी पडणे** (ಪದರೀ ಪಡಣೇ) ಕ್ರಿ. ಅ. ಆಶ್ರಯ ಹೊಂದು, ಮದುವೆಯಾಗು.

**पदरी पडले पवित्र झाले** (ಪದರೀ ಪಡಲೇ ಪವಿತ್ರ ಝಾಲೇ) ನಾಣ್ಣುಡಿ. ಸೆರಗಿಗೆ ಬಿದ್ದು ಮದುವೆ ಯಾಗಿ ಶುಚಿಯಾದಳು.

**पदरास गांठ बांधणे** (ಪದರಾಸ್ ಗಾಠ್ ಬಾಂಧಣೇ) ಕ್ರಿ. ಅ. ನಿಶ್ಚಯಮಾಡು, ಸ್ಮರಣೆಯಲ್ಲಿಡು, ಸೆರ ಗಿಗೆ ಗಂಟುಹೊಡೆ.

**पदराला खार लागणे** (ಪದರಾಲಾ ಖಾರ್ ಲಾಗಣೇ) ಕ್ರಿ. ಅ. ಹಾನಿ ಸಹಿಸು, ಹಾನಿಗೆ ಗುರಿಯಾಗು,

**पदरी असणे** (ಪದರೀ ಅಸಣೇ) ಕ್ರಿ. ಅ. ಆಶ್ರಯ ದಲ್ಲಿರು, ಅವಲಂಬಿತನಾಗಿರು.

**पदरी बांधणे–माप घालणे** (ಪದರೀ ಬಾಂಧಣೇ–ಮಾಪ್ ಘಾಲಣೇ) ಕ್ರಿ. ತಿಳಿಸಿಕೊಡು, ಚೆನ್ನಾಗಿತೋರಿಸು, ಸಿದ್ಧಮಾಡು.

**पदरी घेणे** (ಪದರೀ ಘೇಣೇ) ಕ್ರಿ.ಅ. ಒಪ್ಪು, ಆಶ್ರಯ ನೀಡು, ಜಾಗರೂಕತೆ ವಹಿಸು.

**पदर–री धरणे** (ಪದರ–ರೀ ಧರಣೇ) ಕ್ರಿ. ಅ. ಸೆರಗು ಹಿಡಿ, ಅಪರಾಧ ಶೋಧಿಸು, ಅಪರಾಧಕಟ್ಟು.

**पदरगांठ** (ಪದರ್‌ಗಾಠ್) ಸ್ತ್ರೀ. ಸ್ವಂತದ ಹಣ, ಸ್ವಧನ.

**पदरमोड** (ಪದರ್‌ಮೋಡ್) ಸ್ತ್ರೀ. ಸ್ವಂತ ಹಣ ಖರ್ಚು ಮಾಡುವಿಕೆ.

**पदर येणे** (ಪದರ್ ಯೇಣೆ) ಕ್ರಿ. ಅ. ಋತುಮತಿ ಯಾಗು, ಸೆರಗು ಬರು, ಮೈನೆರೆ.

**पदर पडणे** (ಪದರ್ ಪಡಣೇ) ಕ್ರಿ. ಸ. ಸೆರಗುಬೀಳು, ದೃಷ್ಟಿಯಾಗು, ಲಜ್ಜಿತನಾಗು.

**पदरचना** (ಪದರಚನಾ) ಸ್ತ್ರೀ. ಸಂ. ಕಾವ್ಯರಚನೆ, ಪ್ರಬಂಧ ರಚನೆ.

**पदलालित्य** (ಪದಲಾಲಿತ್ಯ) ನ. ಸಂ. ಭಾವಸೌಂದರ್ಯ.

**पदवी** (ಪದವೀ) ಸ್ತ್ರೀ. ಸಂ. ಬಿರುದು, ಅಧಿಕಾರಸ್ಥಾನ, ಉಚ್ಚಸ್ಥಾನ, ಪದವಿ.

**पदशः** (ಪದಶಃ) ಕ್ರಿ. ವಿ. ಶಬ್ದಶಃ, ಪದಶಃ ಹೆಜ್ಜೆ ಹೆಜ್ಜೆಗೆ, ಅಡಿಗಡಿಗೆ, ಕ್ರಮವಾಗಿ.

**पदसंवाहन** (ಪದಸಂವಾಹನ) ನ. ಸಂ. ಪದಮರ್ದನ, ಕಾಲು ಒತ್ತುವಿಕೆ

**पदाति** (ಪದಾತಿ) ಪು. ಕಾಲಾಳು, ಪದಾತಿ, ಸಿಪಾಯಿ, ಪಾದಚಾರಿ.

**पदार्थ** (ಪದಾರ್ಥ) ಪು. ಸಂ. ಪದಾರ್ಥ, ವಸ್ತು, ಪದದ ಅರ್ಥ, ಸುಗ್ರಾಸ ಅನ್ನ, ವಾಕ್ಯಾರ್ಥ, ತರ್ಕ, ತರ್ಕ ಶಾಸ್ತ್ರಾರ್ಥ, ಕೀಳು ಪ್ರಾಣಿ.

**पदार्थ विज्ञान** (ಪದಾರ್ಥ ವಿಜ್ಞಾನ) ನ. ಸಂ. ಭೌತ ವಿಜ್ಞಾನ, ಪದಾರ್ಥ ವಿಜ್ಞಾನ, ಸೃಷ್ಟ ವಸ್ತು ವಿಜ್ಞಾನ.

**पदार्थ विज्ञानशास्त्र** (ಪದಾರ್ಥ ವಿಜ್ಞಾನಶಾಸ್ತ್ರ) ನ. ಸಂ. ಭೌತವಿಜ್ಞಾನ ಶಾಸ್ತ್ರ, ಪದಾರ್ಥವಿಜ್ಞಾನ ಶಾಸ್ತ್ರ.

**पदोपदी** (ಪದೋಪದೀ) ಕ್ರಿ. ವಿ. ಹೆಜ್ಜೆ ಹೆಜ್ಜೆಗೆ, ಅಡಿಗಡಿಗೆ, ಕ್ಷಣಕ್ಷಣಕ್ಕೆ.

**पद्धत–ति** (ಪದ್ಧತ್–ತಿ) ಸ್ತ್ರೀ. ಸಂ. ಪದ್ಧತಿ, ರೀತಿ, ಕ್ರಮ, ಮಾರ್ಗ, ಪ್ರಕಾರ, ಪಂಕ್ತಿ, ಮಾದರಿ.

**पद्धतवार–शीर** (ಪದ್ಧತ್‌ವಾರ್–ಶೀರ್) ಕ್ರಿ. ವಿ. ಪದ್ಧತಿಗನುಸರಿಸಿ. ೨. ಹೊಂಚುಹಾಕಿ.

**पद्म** (ಪದ್ಮ) ನ. ಸಂ. ಪದ್ಮ, ಕಮಲ, ತಾವರೆ, (ಸಂಖ್ಯೆ) ಪದ್ಮ, ನೂರು ನಿಖರ್ವ.

**पद्मनाभ** (ಪದ್ಮನಾಭ) ಪು. ಪದ್ಮನಾಭ, ಕಮಲ ನಾಭ, ವಿಷ್ಣುವು.

**पद्मराग** (ಪದ್ಮರಾಗ್) ಪು. ಸಂ. ಒಂದು ರತ್ನ, ಪದ್ಮರಾಗ.

**पद्महस्त** (ಪದ್ಮಹಸ್ತ) ವಿ. ದೈವವುಳ್ಳವ, ಅದೃಷ್ಟಶಾಲಿ.

**पद्मासन** (ಪದ್ಮಾಸನ) ನ. ಸಂ. ಕಮಲಾಸನ, ಪದ್ಮಾಸನ, ಧ್ಯಾನಾಸನ.

**पद्मिनी** (ಪದ್ಮಿನೀ) ಸ್ತ್ರೀ. ಪದ್ಮಿನಿ, ಕಮಲಿನಿ, ಸುಂದರಿ, ಶುಭಾಂಗಿ.

**पद्य** (ಪದ್ಯ) ನ. ಸಂ. ಪದ್ಯ, ಕವಿತೆ, ಹಾಡು, ಶ್ಲೋಕ, ಕಾವ್ಯ.

**पद्या** (ಫದ್ಯಾ) ಬ್ರಾಹ್ಮಣರ ಒಂದು ಜಾತಿ, ಪದ್ಯಾ ಬ್ರಾಹ್ಮಣ.

**पंधरवडा** (ಪಂಧರವಡಾ) ಪು. ಹದಿನೈದು ದಿವಸ, ಅರ್ಧ ತಿಂಗಳು.

**पंधरा** (ಪಂಧರಾ) ಹದಿನೈದು (೧೫).

**पंधाड** (ಪಂಧಾಡ್) ನ. } ಒಂದು ಜಾತಿಯ ಹುಲ್ಲು,
**पंधे** (ಪಂಧೇ) ನ. } ಉರುಟು ಹುಲ್ಲು, ಕರಡು ಹುಲ್ಲು.

**पनस** (ಪನಸ್) ಪು. ಹಲಸು, ಹಲಸಿನಕಾಯಿ ಗಿಡ, '**फणस**' ನೋಂ.

**पनेर** (ಪನೇರ್) ನ. ಫಾ. ಗಿಣ್ಣ, ಹಾಲುಗಡ್ಡೆ.

**पन्नग** (ಪನ್ನಗ) ಪು. ಸಂ. ನಾಗರಹಾವು.

**पन्ना** (ಪನ್ನಾ) ಪು. ಹಿಂ. ಪಚ್ಚೆ, ಮರಕತ, ಪನ್ನಾ.

**पन्नास** (ಪನ್ನಾಸ್) ವಿ. ಐವತ್ತು, (೫೦)

**पन्नाशी** (ಪನ್ನಾಶೀ) ಸ್ತ್ರೀ. ಐವತ್ತರ ವಯಸ್ಸು.

**–उलटणे** (–ಉಲಟಣೇ) ಕ್ರಿ. ಅ. (ವಯಸ್ಸು) ಐವತ್ತಕ್ಕೆ ಮೀರು.

**पन्याकार** (ಪನ್ಯಾಕಾರ) ಪು. ಮೇಜವಾನಿ, ಸಮಾರಾಧನೆ, ಭಿಕ್ಷದ ಅಡಿಗೆ, ಬೀಗರಿಗೆ ಕೊಟ್ಟ ಮೇಜವಾನಿ.

**पन्हळ** (ಪನ್ಹಳ್) ಪ್ರಣಾಲಿಕೆ, ಪನ್ನಾಳಿಗೆ, ಹಂಚಿನ ನಳಿಗೆ, ಇಕ್ಕಟ್ಟುದಾರಿ, ದನದ ಬೆನ್ನ ಹರಿ.

**पन्हळी** (ಪನ್ಹಳೀ) ಸ್ತ್ರೀ. ಸಣ್ಣ ನಳಿಗೆ, ನೀರಹರಿ. ಹರಿಗಾಲುವೆ.

**–कौल** (ಕೌಲ) ನ. ಹರಿಯುವ ಹಂಚು, ನಳಿಗೆಯ ಹಂಚು.

**पन्हाळी** (ಪನ್ಹಾಳೀ) ಸ್ತ್ರೀ. ಅಕ್ಕಸಾಲಿಗನ ಉಪಕರಣ, ಪತ್ತಾರನ ಉಪಕರಣ, ಮಣಿ, ನಲಿಕೆ.

**पन्हा** (ಪನ್ಹಾ) ಪು. ಫಾ. ಬಟ್ಟೆಯ ಅಗಲ, ಅಗಲಳತೆ.

**पन्हे** (ಪನ್ಹೇ) ನ. ಹಿಂ. ಪಾನಕ, (ಮಾವಿನಕಾಯಿಯ)

**पन्हेरी** (ಪನ್ಹೇರೀ) ಸ್ತ್ರೀ. ಹಿಂ. ಅರವಟ್ಟಿಗೆ.

**पपन(न्न)स** (ಪಪ್‌ನ(ನ್ನ)ಸ್) ಪು. ನ. ಒಂದು ಜಾತಿಯ ಹಣ್ಣು, ಪಪನಸ.

**पपई** (ಪಪಈ) ಸ್ತ್ರೀ. } ಪಪಾಯಿ.
**पपैय्या** (ಪಪೈಯಾ) ಪು. }

**पय** (ಪಯ) ನ. ಸಂ. ಹಾಲು, ನೀರು, ಜಲ.

**पयस्विनी** (ಪಯಸ್ವಿನೀ) ಸ್ತ್ರೀ. ನದಿ, ತೊರೆ, ವಾಹಿನಿ. ಹಿಂಡುವ ಆಕಳು, ಎಮ್ಮೆ.

**पयोधर** (ಪಯೋಧರ್) ಪು. ಮೋಡ, ಕೆಚ್ಚಲು, ಮೊಲೆ, ಸ್ತನ.

**पयल्‌–पैल्‌** (ಪಯಲೂ–ಪೈಲೂ) ಪು. ಫಾ. ಅಂಚು, ಪಾರ್ಶ್ವ.

**पयेण** (ಪಯೇಣ್) ನ. ಒಣ ಹುಲ್ಲು, ಒಣಗಿದ ಹುಲ್ಲು, ಕಡ್ಡಿ, ತಳಹುಲ್ಲು.

**पर** (ಪರ್) ಸ್ತ್ರೀ. ಪ್ರಕಾರ, ಪದ್ಧತಿ, ಮಾದರಿ,

**परीचा** (ಪರೀಚಾ) ವಿ. ಅಸಾಮಾನ್ಯ, ಅಸಾಧಾರಣ.

**परीपरीनें** (ಪರೀಪರೀನೇಂ) ಕ್ರಿ. ವಿ. ನಾನಾರೀತಿಯಿಂದ, ಬಗೆಬಗೆಯಾಗಿ, ಅನೇಕ ರೀತಿಯಿಂದ.

**परफुटणे** (ಪರಫುಟಣೇ) ಕ್ರಿ. ಅ. ರೆಕ್ಕೆಬರು, ಬೆಳೆ, ಗರ್ವಿಷ್ಠನಾಗು, ಬುದ್ಧಿ ಬರು.

**पर लावून जाणे** (ಪರ ಲಾಊನ್ ಜಾಣೇ) ಕ್ರಿ. ಅ. ಅವಸರದಿಂದ ಓಡು, ಗಡಿಬಿಡಿಯಿಂದ ಹೋಗು.

**पराचा कावळा** (ಪರಾಚಾ ಕಾವಳಾ) ಪು. ಸಾಮಾನ್ಯ ಸಂಗತಿಯನ್ನು ಗಂಭೀರವನ್ನಾಗಿ ಮಾಡುವಿಕೆ.

**परकर** (ಪರಕರ್) ಪು. ಪರಕಾರ್, ಲಂಗ, ಹುಡುಗೆಯರ ಉಡುಪು, ಪವಾಡ.

**परकळा** (ಪರಕಳಾ) ಪು. ಒಂದು ಪ್ರಕಾರದ ಅರಿವೆಯ ಅಂಚು, ಅಂಚು.

**परका** (ಪರಕಾ) ವಿ. ಪರಕೀಯ, ಅನ್ಯ, ಭಿನ್ನ ಜಾತಿಯ, ಹೊಸ, ಅಪರಿಚಿತ.

**परकामिनी** (ಪರಕಾಮಿನೀ) ಸ್ತ್ರೀ. ಪರಗೃಹಿಣಿ, ಪರಸ್ತ್ರೀ.

**परकाय(या) प्रवेश** (ಪರಕಾಯ (ಯಾ) ಪ್ರವೇಶ) ಬೇರೊಂದು ದೇಹದಲ್ಲಿ ಹೋಗುವಿಕೆ.

**परकाळा** (ಪರಕಾಳಾ) ಪು. (ಪರಕಾಳೇ) ನ. 'परकळा' ನೋ.

**परकी** (ಪರಕೀ) / **परकीय** (ಪರಕೀಯ) } ವಿ. ಎರಡನೆಯ ಬೇರೆ ಸಂಬಂಧದ, ಬೇರೆಯವರ(ಸೊತ್ತು).

**परकोट** (ಪರಕೋಟ್) ಪು. ಕೋಟೆಯ ಹೊರಗೋಡೆ.

**परगणा** (ಪರಗಣಾ) ಪು. ಫಾ. ಪರಗಣೆ, ಜಿಲ್ಹೆ, ವಿಶಿಷ್ಟ ರಾಜಕೀಯ ಭಾಗ, ವಿಶಾಲ ಉದ್ಯೋಗ.

**परगमन** (ಪರಗಮನ್) ನ. ಸಂ. ಪರಗಮನ, ವ್ಯಭಿಚಾರ, ಜಾರತನ, ಪರಸ್ತ್ರೀ ಇಲ್ಲವೆ ಪರಪುರುಷ ಗಮನ.

**परगोत्री** (ಪರಗೋತ್ರೀ) ವಿ. ಸಂ. ಬೇರೆಗೋತ್ರದ, ಅನ್ಯಗೋತ್ರದ, ಬೇರೆವಂಶದ.

**परघर** (ಪರಘರ್) ನ. ಎರಡನೆಯವರ ಮನೆ, ಬೇರೆಯವರ ಮನೆ, ವ್ಯಭಿಚಾರ.

**परघर पाहणे–शिरणे** (ಪರಘರ್ ಪಾಹಣೇ–ಶಿರಣೇ) ಕ್ರಿ. ಅ. ಎರಡನೆಯ ಮನೆಹೋಗು, ವ್ಯಭಿಚಾರ ಮಾಡು.

**परचक्र** (ಪರಚಕ್ರ) ನ. ಸಂ. ಪರಚಕ್ರ, ವೈರಿಗಳ ದಂಡು, ಶತ್ರುವಿನ ದಾಳಿ, ಪರರಾಜ್ಯಾಧಿಕಾರ.

**परचुरण** (ಪರಚುರಣ) ನ. ಗುಜ. ಚಿಲ್ಲರೆನಾಣ್ಯ, ಬಿಡಿ ನಾಣ್ಯ.

**परज** (ಪರಜ) ಪು. ಕತ್ತಿಯ– ಖಡ್ಗದ ಹಿಡಿಕೆ.

**परजणे** (ಪರಜಣೇ) ಕ್ರಿ. ಸ. ಖಡ್ಗಹಿರಿ, ಕತ್ತಿಹಿರಿ.

**परटी** (ಪರಟೀ) ಸ್ತ್ರೀ. ಕ. ಪರಟೆ, ಚಿಪ್ಪು, ತೆಂಗಿನ ಚಿಪ್ಪು. ೨. ಅಗಸನ ಉದ್ಯೋಗ, ಅಗಸನ ಅರಿವೆ.

**परटीण** (ಪರಟೀಣ್) ಸ್ತ್ರೀ. ಅಗಸಗಿತ್ತಿ.

**परटीस** (ಪರಟೀಸ್) ಕ್ರಿ. ವಿ. ಒಗೆಯಲಿಕ್ಕೆಂದು (ಕೊಟ್ಟ ಬಟ್ಟೆ.)

**परटीहून** (ಪರಟೀಹೂನ್) ಒಗೆದು ಬಂದಂತಹ, ಅಗಸನು ತಂದ.

**परडी** (ಪರಡೀ) ಸ್ತ್ರೀ. ಗಳದಬುಟ್ಟಿ, ಬಿದಿರುಬುಟ್ಟಿ. ೨. ಬೆಳ್ಳಿಯ ಹೂವಿನ ಪಾತ್ರೆ.

**परडूल** (ಪರಡೂಲ್) ನ. ಹಿತ್ತಲ, ಹಿತ್ತಿಲು.

**परडे** (ಪರಡೇ) ನ. ತಕ್ಕಡಿಯ ಪರಡಿಗೆ, ಚವುಕಿಯ ಮುಂಭಾಗ.

**परडी उतरणे** (ಪರಡೀ ಉತರಣೇ) ಕ್ರಿ. ಅ. ಕಡಿಮೆ ತೂಕವಾಗು, ಮಹತ್ವ ಕಡಿಮೆಯಾಗು.

**परडी जड होणे** (ಪರಡೀ ಜಡ್ ಹೋಣೇ) ಕ್ರಿ. ಅ. ಹೆಚ್ಚು ತೂಕವಾಗು, ಅಧಿಕಾರಬೆಳೆ, ಮಹತ್ವಬರು.

**परणाळी** (ಪರಣಾಳೀ) ಸ್ತ್ರೀ. ನೀರಕಾಲುವೆ, ಪ್ರಣಾಳಿ, ಹರಿನಾಳಿಗೆ, ಪದ್ಧತಿ.

**परत** (ಪರತ್) ಕ್ರಿ. ವಿ. ತಿರುಗಿ, ಮತ್ತೆ, ಪುನಃ, ಹಿಂದೆ, ಮತ್ತೊಮ್ಮೆ, ಇನ್ನೊಮ್ಮೆ.

**परत जाणे-येणे** (ಪರತ್ ಜಾಣೇ-ಯೇಣೇ) ಸ್ತ್ರೀ. ತಿರುಗಿ ಬರು–ಹೋಗು.

**परत परत** (ಪರತ್ ಪರತ್) ಕ್ರಿ. ವಿ. ಮತ್ತು ಮತ್ತು, ತಿರುತಿರುಗಿ, ಪುನಃ ಪುನಃ, ಮತ್ತೆಮತ್ತೆ, ಮೇಲಿಂದ ಮೇಲೆ.

**परत–परती** (ಪರತ್–ಪರತೀ) ಮುಟ್ಟಿಸುವಿಕೆ, ತಿರುಗಿ ಕೊಡುವಿಕೆ ತುಂಬುವಿಕೆ, ವಾಪಸು ಮಾಡುವಿಕೆ.

**परत अर्जी** (ಪರತ್ ಅರ್ಜೀ) ಸ್ತ್ರೀ. ವಿನಂತಿ, ಮರಳಿ ಮಾಡಿದ ಅರ್ಜಿ–ವಿನಂತಿಪತ್ರ, ಅಪೀಲು.

**परत अहेर** (ಪರತ್ ಅಹೇರ್) ಪು. ಮರು ಆಹೇರ, ಮರುಮುಯ್ಯಿ.

**परतगोष्ट** (ಪರತ್‌ಗೋಷ್ಟ) ಸ್ತ್ರೀ. ಉತ್ತರ, ಮಾರುತ್ತರ, ತಿರುಗಿಕೊಟ್ಟಹವಾಯಿ.

**परतजमा** (ಪರತಜಮಾ) ಸ್ತ್ರೀ. ತಿರುಗಿ ಜಮೆಮಾಡುವಿಕೆ, ತಿರುಗಿ ತುಂಬಿದ ಹಣ, ಮರುಮುಟ್ಟಿಸಿದ ಸಾಲ–ಹಣ.

**परत जवाब** (ಪರತ ಜವಾಬ್) ಪು. ಮಾರುತ್ತರ, ಮರುಹೇಳಿಕೆ. ತಿರುಗಿ ಹೇಳಿದ ಜವಾಬ, ಎದುರುತ್ತರ.

**परतजाब** (ಪರತಜಾಬ್) ಪು. ಎದುರುಕೊಟ್ಟ ಉತ್ತರ, ಮಾರುತ್ತರ.

**परत जिम्मा** (ಪರತ್ ಜಿಮ್ಮಾ) ಪು. ನಂಬಿಗೆ, ನೆಚ್ಚಿಗೆ, ಹೊಣೆ, ತಿರುಹವಾಲಿ.

**परतणे** (ಪರತಣೇ) ಕ್ರಿ. ಅ. ತಿರುಗಿ, ಹಿಂದಿರುಗು, ತಿರುವಿಹಾಕು, ತಿರುವು, ಸ್ಥಾನಪರಿವರ್ತಿಸು, ತಿರುಗಿ ಕೊಡು, ತಿರುಗಿಕಳಿಸು.

**परत बोली** (ಪರತ್ ಬೋಲೀ) ಸ್ತ್ರೀ. ಹಿಂತಿರುಗಿ ಕೊಡುವ–ವಾಪಸು ಮಾಡುವ (ಮಾತು.)

**परत फैसला** (ಪರತ್ ಫೈಸಲಾ) ಪು. ಅರ+ಮ. ಮರುನಿರ್ಣಯ, ದ್ವಿತೀಯ ನಿರ್ಣಯ.

**परत भाडे** (ಪರತ್ ಭಾಡೆ) ನ. ಹಿಂತಿರುಗಿ ಬರುವ ಹಾಸಲು, ಬಾಡಿಗೆ.

**परत मोकद्दमा** (ಪರತ್ ಮೊಕದ್ದಮಾ) ಪು. ಮರುವ್ಯಾಜ್ಯ, ತಿರುಗಿ ವಿಚಾರಕ್ಕೆ ಬಂದ ವ್ಯಾಜ್ಯ, ಮರುವಿಚಾರಣೆಯ ವ್ಯಾಜ್ಯ.

**परतवण** (ಪರತ್‌ವಣ್) ನ. ತಿರುಗಿ ಕಳಿಸುವಿಕೆ, ಸೊಸೆ ತವರೂರಿನಿಂದ ಬರುವಿಕೆ, ಮಗಳನ್ನು ಮರಳಿ ಕಳಿಸುವಿಕೆ.

**परतवेल** (ಪರತ್‌ವೇಲ್) ಸ್ತ್ರೀ. ಎದುರು–ಬದುರು, ಸಂಬಂಧ, ತಿರುಸಂಬಂಧ.

**परतवेळ** (ಪರತ್‌ವೇಳ್) ಸ್ತ್ರೀ. ಮಧ್ಯಾಹ್ನ, ನಡುಹಗಲು.

**परत हुंडी** (ಪರತ್ ಹುಂಡಿ) ತಿರುಗಿಬಂದ ಹುಂಡಿ, ತ್ಯಕ್ತಹುಂಡಿ, ನಿರಾಕರಿಸಿದ ಹುಂಡಿ.

**परतंत्र** (ಪರತಂತ್ರ) ವಿ. ಸಂ. ಪರಸ್ವಾಧೀನ.

**परतळा–परताळा** (ಪರತಳಾ–ಪರತಾಳಾ) ಪು. **पडताळा** ನೋ.

**परता(ता)ळणे** (ಪಡ(ತಾ)ಳಣೇ) ಕ್ರಿ. ಅ. **पडतळणे** ನೋ.

**परता** (ಪರತಾ) ಕ್ರಿ. ವಿ. '**पडता**' ನೋ. ಎರಡನೆಯ ಬದಿಯು, ಬೇಕಾದರೆ, ಇಚ್ಛಿಸಿದರೆ, ಹೊರತು.

**परतीर** (ಪರತೀರ್) ನ. ಪರತೀರ, ಎರಡನೆಯದಂಡೆ, ಆಚೆಯ ಬದಿ, ಎದುರಿನತೀರ.

**परंतु** (ಪರಂತು) ಅ. ಸಂ. ಆದರೆ, ಇನ್ನು, ತಥಾಪಿ, ಆದರೂ ಸಹ.

**परंतु रामायण** (ಪರಂತು ರಾಮಾಯಣ್) ನ. ಅಡಚಣಿಗಳನ್ನು ಹೇಳುವ ಚಟ.

**परतून** (ಪರತೂನ್) ಕ್ರಿ. ವಿ. ತಿರುಗಿ, ಮತ್ತೆ, ಹೊರಳಿ, ಮತ್ತೊಮ್ಮೆ.

**परत्र** (ಪರತ್ರ) ನ. ಸಂ. ಪರಲೋಕ, ಆಜಗತ್ತು, ಸ್ವರ್ಗ, ಭಾವೀಜನ್ಮ. ೨. ಕ್ರಿ. ವಿ. ಬೇರೆ ಕಡೆಗೆ.

**परत्रगति** (ಪರತ್ರಗತಿ) ಸ್ತ್ರೀ. ಸಂ. ಪರಗತಿ, ಭಾವೀಜನ್ಮಾವಸ್ಥೆ, ಪರಲೋಕಾವಸ್ಥೆ.

**परत्त्वे** (ಪರತ್ವೆ) ಕ್ರಿ. ವಿ. ಮುಖಾಂತರವಾಗಿ, ಮೂಲಕ, ದ್ವಾರದಿಂದ, ಕಾರಣಕ್ಕಾಗಿ.

**परदारा** (ಪರದಾರಾ) ಸ್ತ್ರೀ. ಸಂ. ಎರಡನೆಯವರ ಹೆಂಡತಿ, ಪರಸ್ತ್ರೀ, ಪರನಾರಿ.

**परदेश** (ಪರದೇಶ) ಪು. ಸಂ. ಪರರಾಷ್ಟ್ರ, ವಿದೇಶ, ಪರದೇಶ.

**परदेशी** (ಪರದೇಶೀ) ಪು. ಪರರಾಷ್ಟ್ರದವ. ೨. ಅನಾಥ

**परधन** (ಪರಧನ) ನ. ಸಂ. ಪರಧನ, ಎರಡನೆಯವರ ಸೊತ್ತು, ಸ್ತ್ರೀಧನ, ಹೆಂಗಸರಿಗೆ ಕೊಟ್ಟ ಕಾಣಿಕೆ.

**परधार्जिण्या–धारजिणा** (ಪರಧಾರ್ಜಿಣ್ಯಾ–ಧಾರಜಿಣಾ) ವಿ. ಪರರಿಗೆ ಅನುಕೂಲವಿದ್ದ, ಹೆಣ್ಣುಮಗಳು.

**परनारी** (ಪರನಾರೀ) ಸ್ತ್ರೀ. ಸಂ. ಎರಡನೆಯವನ ಹೆಂಡತಿ.

**परनिष्ठ** (ಪರನಿಷ್ಠ) ವಿ. ಸಂ. ಆಸ್ತಿಕ, ಪರಲೋಕನಿಷ್ಠ, ಈಶ್ವರಭಕ್ತಿಯುಳ್ಳವ.

**परनिष्ठा** (ಪರನಿಷ್ಠಾ) ಸ್ತ್ರೀ ಸಂ. ಈಶ್ವರಭಕ್ತಿ, ಪರೋಪಕಾರ, ದಯಾಬುದ್ಧಿ, ದಯಾವರ್ತನ, ಉಪಕಾರ, ಧರ್ಮಗುಣ, ಔದಾರ್ಯ.

**परपर–रा** (ಪರಪರ–ರಾ) ಕ್ರಿ. ವಿ. ಪರಪರನೆ, ಪರಪರ ಎಂದು, (ಬಟ್ಟೆ ಹರಿಯುವಿಕೆ)

**परंपरा** (ಪರಂಪರಾ) ಸ್ತ್ರೀ. ಸಂ. ಪರಂಪರೆ, ನಡೆದು ಬರುವಿಕೆ, ಹಿಂದಿನಿಂದ ಬರುವಿಕೆ.

**परंपरागत** (ಪರಂಪರಾಗತ) ವಿ. ಹಿಂದಿನಿಂದ ನಡೆದು ಬಂದ, ಪರಂಪರೆಯಿಂದ ಬಂದ.

**परंपराविटाळ** (ಪರಂಪರಾವಿಟಾಳ್) ಪು. ಪರಂಪರಾಗತ ಅಪವಿತ್ರತೆ, ಹಿಂದಿನಿಂದ ಬಂದ ಅಶುಚಿ, ವಂಶಾನುಗತಾಶುಚಿ.

**परंपरा संबंध** (ಪರಂಪರಾ ಸಂಬಂಧ) ಪು. ಹಿಂದಿನಿಂದ ಬಂದ ಸಂಬಂಧ, ನಡೆದು ಬಂದ ಸಂಬಂಧ.

**परपांडित्य** (ಪರಪಾಂಡಿತ್ಯ) ನ. ಸಂ. ಎರಡನೆಯವರಿಗೆ ಹೇಳುವ ಬುದ್ಧಿ, ಎರಡನೆಯವರಿಗೆ ಕಲಿಸುವ ಬುದ್ಧಿಯ ಮಾತು, ಪರಪಾಂಡಿತ್ಯ.

**परपार** (ಪರಪಾರ್) ಪು. **परतीर** ನೋ.

**परपीडा** (ಪರಪೀಡಾ) ಸ್ತ್ರೀ. ಸಂ. ಪರಪೀಡೆ, ಪರರಿಗೆ ಕೊಟ್ಟ ದುಃಖ, ಪರದುಃಖ.

**परपुरुष** (ಪರಪುರುಷ) ಪು. ಸಂ. ಗಂಡನಲ್ಲದ ಪುರುಷ.

**परबाण** (ಪರಬಾಣ್) ಸ. ಹಡಗು ನಿಲ್ಲುವ ಸ್ಥಳ, ನಾವಿಕಾ ಸ್ಥಾನ.

**परबुद्धि** (ಪರಬುದ್ಧೀ) ಸ್ತ್ರೀ. ಸಂ. ಪರಬುದ್ಧಿ, ಎರಡನೆಯವರು ಕಲಿಸಿದ ಬುದ್ಧಿ.

**परभारे** (ಪರಭಾರೇ) ಕ್ರಿ. ವಿ. ಪರಸ್ಪರವಾಗಿ, ಸಂಬಂಧವಿಲ್ಲದೆ, ಹೇಳದೆ ಕೇಳದೆ.

**परभू** (ಪರಭು) ಪು. ಹಿಂದುಗಳ ಒಂದು ಉಪಜಾತಿ, ಪ್ರಭು ಕಾಯಸ್ಥ ಪ್ರಭು.

**परम** (ಪರಮ) ವಿ. ಸಂ. ಶ್ರೇಷ್ಠ, ಹೆಚ್ಚಿನ, ಮುಖ್ಯ, ಹೆಚ್ಚಿನ ತರಗತಿಯ, ವಿಪುಲ.

**परमगुरु** (ಪರಮಗುರು) ಪು. ಗುರುವಿನಗುರು, ಶ್ರೇಷ್ಠಗುರು, ಅಧಿಗುರು.

**परमतत्त्व** (ಪರಮತತ್ವ) ನ. ಸಂ. ಶ್ರೇಷ್ಠತತ್ವ, ಅಬಾಧಿತ ತತ್ವ, ಮೂಲಾಧಾರ, ಈಶ್ವರ.

**परमपुरुष** (ಪರಮ ಪುರುಷ) ಪು. ಸಂ. ಶ್ರೇಷ್ಠಪುರುಷ, ಈಶ್ವರ, ವಿಷ್ಣು.

**परमहंस** (ಪರಮಹಂಸ) ಪು. ಸಂ. ಸಂಯಮಿ ಸಾಧು, ಧ್ಯಾನಯೋಗಿ, ಪರಮಹಂಸ.

**परमा** (ಪರಮಾ) ಪು. ಗುಪ್ತೇಂದ್ರಿಯದ ರೋಗ, ಪ್ರಮೇಹ.

**परमागति** (ಪರಮಾಗತಿ) ಸ್ತ್ರೀ. ಸಂ. ಶ್ರೇಷ್ಠಗತಿ, ಮುಕ್ತಿ, ಶ್ರೇಷ್ಠಾವಸ್ಥೆ, ಈಶ್ವರಮಯಸ್ಥಿತಿ.

**परमाणु** (ಪರಮಾಣು) ಪು. ಸಂ. ಪರಮಾಣು, ಸೂಕ್ಷ್ಮಾಣು, ಅತಿಸೂಕ್ಷ್ಮಾಣು, ಅಣುರೇಣು.

**परमात्मा** (ಪರಮಾತ್ಮಾ) ಪು. ಸಂ. ಪರಮಾತ್ಮ, ದೇವರು, ಈಶ್ವರ, ಸೃಷ್ಟಿಕರ್ತ.

**परमानंद** (ಪರಮಾನಂದ್) ಪು. ಸಂ. ಆತ್ಮಾನಂದ, ಬ್ರಹ್ಮಾನಂದ, ಮೋಕ್ಷಾನಂದ, ಭಗವತ್ ಸಾಕ್ಷಾತ್ಕಾರ.

**परमायु** (ಪರಮಾಯು) ನ. ಸಂ. ಆಯುಷ್ಯ.

**परमार्थ** (ಪರಮಾರ್ಥ) ನ. ಸಂ. ಆಧ್ಯಾತ್ಮ. ೨. ವಿ. ಎರಡನೆಯವರಿಗಾಗಿ ಮಾಡಿದ, ಪರೋದ್ದೇಶಕೃತ, ಪರಹಿತಕಾರಕ.

**परमार्थतः** (ಪರಮಾರ್ಥತಃ) ಕ್ರಿ. ವಿ. ಸತ್ಯವಾಗಿ, ನಿಜವಾಗಿ, ಪ್ರಾಮಾಣಿಕತನದಿಂದ.

**परमार्थ साधन** (ಪರಮಾರ್ಥ ಸಾಧನ) ನ. ಮೋಕ್ಷಪ್ರಾಪ್ತಿ, ಈಶ್ವರಾನುಗ್ರಹ ಸಾಧನೆ, ಪರಮಾರ್ಥ ಸಾಧನೆ, ಪರಮಾರ್ಥ ಪ್ರಾಪ್ತಿ.

**परमार्थी** (ಪರಮಾರ್ಥೀ) ವಿ. ಸಂ. ಕಳಕಳಿಯ, ಪ್ರಾಮಾಣಿಕ, ನಿಷ್ಪಾಪ.

**परमावधि** (ಪರಮಾವಧಿ) ಪು. ಸಂ. ಅತ್ಯಂತ ಹೆಚ್ಚಿನ ಕಾಲ, ಕೊನೆಗಾಲ, ಕಡೆಗಾಲ, ಅಧಿಸಮಯ, ಅಂತ್ಯಾವಸ್ಥೆ, ಕೊನೆಯ ಅವಸ್ಥೆ.

**परमुलुख** (ಪರಮುಲುಖ್) ಪು. ಫಾ+ಸಂ. ಪರರಾಷ್ಟ್ರ, ವಿದೇಶ, ಎರಡನೆಯವರ ನಾಡು, ಹೊರನಾಡು.

**परमे** (ಪರಮೇ) ನ. **'परमा'** ನೋಂ.

**परमोत्कृष्ट** (ಪರಮೋತ್ಕೃಷ್ಟ) ವಿ. ಸಂ. ಪರಮೋತ್ಕೃಷ್ಟ, ಅದ್ವಿತೀಯ, ಅತಿಶ್ರೇಷ್ಠ.

**परमोन्नति** (ಪರಮೋನ್ನತಿ) ಸ್ತ್ರೀ. ಸಂ. ಪರಮೋನ್ನತಿ, ಪರಮೋತ್ಕರ್ಷ, ಶ್ರೇಷ್ಠಗತಿ, ಶ್ರೇಷ್ಠಾವಸ್ಥೆ, ಉತ್ಕರ್ಷಕ್ಕೆ ಏರುವಿಕೆ, ಅತ್ಯುನ್ನತಿಗೆ ಬರುವಿಕೆ.

**परराज्य** (ಪರರಾಜ್ಯ) ನ. ಸಂ. ಪರರಾಜ್ಯ, ಹೊರರಾಜ್ಯ, ವಿದೇಶಭೂಮಿ.

**परलोक** (ಪರಲೋಕ) ಪು. ಸಂ. ಪರಲೋಕ,ಮುಕ್ತಿ.

**परव (वा) चा** (ಪರವ(ವಾ)ಚಾ) ಪು. ಮಕ್ಕಳಿಗೆ (ಮುಂಜಾನೆ-ಸಂಜೆಗೆ) ಬಾಯಿಪಾಠ ಅನ್ನಲಿಕ್ಕೆ ಕಲಿಸಿದ ಪಾಠ, ಶ್ಲೋಕ ಮುಂ.

**परवंट** (ಪರವಂಟ್) ಪು. ಸೀರೆಯುಡುವ ಪದ್ಧತಿ.

**परवड** (ಪರವಡ್) ಸ್ತ್ರೀ. ಪ್ರಕಾರ, ಪದ್ಧತಿ, ವಿಲಕ್ಷಣ ವರ್ತನೆ, ಪದ್ಧತಿಯ ಕೆಲಸ.

**परवडीचे काम** (ಪರವಡೀಚೆ ಕಾಮ್) ಪದ್ಧತಿಯಿಂದ ಮಾಡಿದ ಕೆಲಸ, ವ್ಯವಸ್ಥೆಯಿಂದ ಮಾಡಿದ ಕೆಲಸ. ಉಚಿತ ಕಾರ್ಯ.

**परवडी करणे** (ಪರವಡೀ ಕರಣೇ) ಕ್ರಿ. ಸಂ. ವಿಧವಿಧವಾಗಿ ಕಾಡು, ತಿರಸ್ಕರಿಸು.

**परवडणे** (ಪರವಡಣೇ) ಕ್ರಿ. ಅ. ಹೊಂದು, ಅನುಕೂಲವಾಗಿರು, ಮನಸ್ಸಿಗೆ ಬರು, ಸಾಧ್ಯವಾಗು-ವದೆನಿಸು.

**परवणे** (ಪರವಣೇ) ಕ್ರಿ. ಅ. ನರಳು, ದುಃಖಬಡು, ಅಳುಮೋರೆ ಮಾಡು.

**परवत** (ಪರವತ್) ಪರಗತಿ, ಪರಲೋಕಗತಿ, ವ್ಯಾಪಾರ ಸಂಬಂಧ, ವಾಣಿಜ್ಯ ಸಂಬಂಧ, ವ್ಯಾಪಾರ, ಪರಸ್ಪರ ವ್ಯಾಪಾರ.

**परवता** (ಪರವತಾ) ಪು. '**परवचा**' ನೋಂ.

**परवर** (ಪರವರ್) ಪು. ಮನೆಯ ಪಡಸಾಲೆ, ಹೊರಸಾಲೆ, ಕಣದಲ್ಲುಳಿದ ಕಾಳು, ಕಣದ ಕಾಳು.

**परवश** (ಪರವಶ್) ವಿ. ಸಂ. ಪರತಂತ್ರದ ಪರಸ್ವಾಧೀನದ '**परतंत्र**' ನೋಂ.

**परवस्तु** (ಪರವಸ್ತು) ಸ್ತ್ರೀ. ಸಂ. ಪರವಸ್ತು, ಪರರ ಒಡವೆ, ಉತ್ತಮ ವಸ್ತು.

**परवा** (ಪರವಾ) ಕ್ರಿ. ವಿ. ಮೊನ್ನೆ, ಆಚೆಯದಿನ, ನಾಡದು, ಮೊನ್ನೆ ಮೊನ್ನೆ.

**परवा-पर्वा** (ಪರವಾ-ಪರ್ವಾ)ಸ್ತ್ರೀ.ಫಾ. ಚಿಂತೆ, ಗೊಡವೆ, ಅರಿವು, ಬೆಲೆ.

**परवानगी** (ಪರವಾನಗೀ) ಸ್ತ್ರೀ.ಫಾ. ಆಜ್ಞೆ, '**परमाणगी**' ನೋ.

**परवारी** (ಪರವಾರೀ) ಪು. ಕೀಳುಮನುಷ್ಯ, ಕೀಳು ಜಾತಿಯವ.

**परशु** (ಪರಶು) ಪು. ಸಂ. ಕೊಡಲಿ, ಪರಶು, ಕೈಬಾಚಿ, ಕೈಗೊಡಲಿ.

**परशु(श)राम** (ಪರಶು(ಶ)ರಾಮ) ಪು. ಪರಶುರಾಮ ವಿಷ್ಣುವಿನ ಅವತಾರ.

**परशुराम क्षेत्र** (ಪರಶುರಾಮ ಕ್ಷೇತ್ರ) ಪರಶುರಾಮ ಕ್ಷೇತ್ರ, ಪರಶುರಾಮನ ಪುಣ್ಯ ಸ್ಥಳ (ಚಿಪಳೂಣದ ಹತ್ತರ.)

**परस–सु** (ಪರಸ್–ಸು) ನ. ಹಿತ್ತಿಲು, ಮನೆಯ ಹಿಂಭಾಗ.

**परसातली भाजी** (ಪರಸಾತಲೀ ಭಾಜೀ) ಹಿತ್ತಿಲಪಲ್ಲೆ, ಸಹಜಕಾರ್ಯ, ನಿರಾಯಾಸ ಲಭ್ಯವಸ್ತು, ಸಹಜ ಸಿಗುವ ಒಡವೆ.

**परसदार** (ಪರಸ್‌ದಾರ್) ನ. ಹಿಂಬಾಗಿಲು, ಹಿಂದಿನ ದಾರಿ.

**परसाकडे, –डेस** (ದರಸಾಕಡೆ–ಡೇಸ್) ಕ್ರಿ.ವಿ. ಬೈಲು ಕಡೆಗೆ, ಶೌಚಕ್ಕೆ.

**परसणें** (ಪರಸಣೇ) ಕ್ರಿ. ಸ. ಕೇಳು, ಕತ್ತಿ ತಿರುವು, ಖಡ್ಗವಲಸೆ, ಕಿವಿಯಿಂದ ಕೇಳು.

**परसा** (ಪರಸಾ) ಪು. ಕಸಕಡ್ಡಿ ಬೆಂಕಿ, ಜಗಳ, ಬೆಂಕಿ.

**परसू** (ಪರಸೂ) ನ. ಹಿತ್ತಲಮನೆ, ಮನೆಯ ಹಿಂಭಾಗ.

**परस्थ** (ಪರಸ್ಥ) ವಿ. ಎರಡನೆಯವರ, ತ್ರಯಸ್ಥ.

**परस्त्री** (ಪರಸ್ತ್ರೀ) ಸ್ತ್ರೀ. '**परदारा**' ನೋ.

**परस्थळ** (ಪರಸ್ಥಳ್) ನ. ಪರಸ್ಥಳ, ಪರಊರು, ಎರಡನೆಯ ಜಾಗೆ, ಪರಗ್ರಾಮ, ಪರವಸತಿ.

**परस्पर** (ಪರಸ್ಪರ) ಕ್ರಿ. ವಿ. ಹೊರಗಿಂದ ಹೊರಗೆಯೇ. ಹೇಳದೆ ಕೇಳದೆ.

**परस्मैपद** (ಪರಸ್ಮೈಪದ್) ನ. ಸಂ. (ಸಂಸ್ಕೃತ ವ್ಯಾಕರಣದಲ್ಲಿ) ಪರಸ್ಮೈ ಪದ.

**परस्व** (ಪರಸ್ವ) ನ. ಸಂ. ಹೆರವರ ಸೊತ್ತು.

**परस्वाधीन** (ಪರಸ್ವಾಧೀನ್) ವಿ. ಸಂ. ಪರವಶನಾದ, ಬೇರೆಯವರ ಆಶ್ರಯ ಸಹಾಯ ಬೇಡುವ.

**परस्वाधीनता** (ಪರಸ್ವಾಧೀನತಾ) ಸ್ತ್ರೀ. ಪರತಂತ್ರತೆ, ಪರಸ್ವಾಧೀನತೆ.

**परहस्तगत** (ಪರಹಸ್ತಗತ್) ವಿ. ಸಂ. ಎರಡನೆಯವರ ಕೈಗೆ ಸಿಕ್ಕ, ಪರಹಸ್ತಗತ, ಎರಡನೆಯವರಿಗೆ ಸಿಕ್ಕ.

**परळ–ळी** (ಪರಳ್) ಪು. (ಪರಳೀ) ಸ್ತ್ರೀ. ಕಟ್ಟಿಗೆಯ ಬಟ್ಟಲು, ಕಟ್ಟಿಗೆಯ ಪಾಳಿ.

**पराई** (ಪರಾಈ) ಸ್ತ್ರೀ. ಪರಕೀಯ ಭಾವನೆ.

**पराकाष्ठा** (ಪರಾಕಾಷ್ಠಾ) ಸ್ತ್ರೀ. ಸಂ. ಅತ್ಯಾವಸ್ಥೆ, ಕೊನೆ, ವಿಶ್ವಪ್ರಯತ್ನ, ಅತಿಸಾಹಸ.

**पराक्रम** (ಪರಾಕ್ರಮ) ಪು. ಸಂ. ಪರಾಕ್ರಮ, ಶಕ್ತಿ, ಸಾಮರ್ಥ್ಯ, ಶೌರ್ಯ, ಸಾಹಸ.

**–करणे, गाजविणे** (–ಕರಣೇ, ಗಾಜವಿಣೇ) ಕ್ರಿ. ಸ. ಶೌರ್ಯ ತೋರಿಸು, ಸಾಹಸಮಾಡು.

**पराक्रमी** (ಪರಾಕ್ರಮೀ) ವಿ. ಸಂ. ಶೂರ, ಬಂಟ, ಸಾಹಸಿಗ, ಗಂಡಸುತನವುಳ್ಳ.

**पराक्रांत** (ಪರಾಕ್ರಾಂತ) ವಿ. ಹೆರವರು ಗೆದ್ದ, ಆಕ್ರಮಿಸಿದ, ಕಸಿದುಕೊಂಡ.

**पराग** (ಪರಾಗ್) ಪು. ಸಂ. ರೇಣು, ಪುಷ್ಪರೇಣು, ಹೂವಿನ ಹುಡಿ,

**परागंदा** (ಪರಾಗಂದಾ) ವಿ. ಫಾ. ಗಡಿಪಾರಾದ, ಭೂಗತ, ಚದುರಿದ, ಸ್ಖಲಿತ, ದೇಶಾಂತರ ಹೊಂದಿದ.

**पराङ्मुख** (ಪರಾಙ್ಮುಖ) ವಿ. ಸಂ. ಹಿಂದುರುಗಿದ, ಮೋರೆ ತಿರುವಿದ, ನಿವೃತ್ತನಾದ.

**पराचा लखोटा** (ಪರಾಚಾ ಲಖೋಟಾ) ಪು. ತ್ವರಿತ ಅಂಚೆ, ಅವಸರದ ಪತ್ರ.

**परांची** (ಪರಾಂಚೀ) ಸ್ತ್ರೀ. ಅಟ್ಟ, ಅಟ್ಟಳಿಗೆ, ಮೇಲ್ಮಾಳಿಗೆ, ನೇಣಕಂಬ, (ಗಲ್ಲಿನ ಕಂಬ).

**पराची उशी** (ಪರಾಚೀ ಉಶೀ) ಸ್ತ್ರೀ. ಪಕ್ಷಿಯ ತುಪ್ಪಳದ ತಲೆಗಿಂಬು, ಹಕ್ಕಿಪಕ್ಕದ ತಲೆದಿಂಬು, ತುಪ್ಪಳದ ತಲೆದಿಂಬು, ಕ್ಷುಲ್ಲಕ ವಸ್ತು.

**पराची गादी** (ಪರಾಚೀ ಗಾದೀ) ಸ್ತ್ರೀ. ತುಪ್ಪಳದ ಗಾದಿ, ತುಪ್ಪಳದ ಥಡಿ.

**पराजय** (ಪರಾಜಯ) ಪು. ಸಂ. ಸೋಲು, ಪರಾಜಯ, ಅಪಜಯ, ಅಯಶಸ್ಸು.

**पराजित** (ಪರಾಜಿತ) ವಿ. ಸಂ. ಗೆಲ್ಲಲ್ಪಟ್ಟ ಸೋತ, ಪರಾಜಿತ.

**पराड–डी** (ಪರಾಡ್–ಡೀ) ಸ್ತ್ರೀ. ಪರ್ವತದ ಸಾಲು, ಪರ್ವತ ಪಂಕ್ತಿ, ಬೆಟ್ಟದ ಸಾಲು.

**पराणी** (ಪರಾಣೀ) ಸ್ತ್ರೀ. ಅಂಕುಶ, ಮುಳ್ಳು, ಕೋಲು, ಪ್ರೇರಕ ವಸ್ತು.

**परात** (ಪರಾತ್) ಸ್ತ್ರೀ. ಪರಾತ, ಕೋಡಂಬಿಗೆ, ದುಂಡನ್ನಹರವಾದ ಹಿತ್ತಾಳೆಯ ಹರವಾಣ.

**परात्पर** (ಪರಾತ್ಪರ್) ವಿ. ಸಂ. ಅಧಿಕಾಧಿಕ, ಅಧಿಕೋನ್ನತ, ಅತ್ಯುನ್ನತ. ಪು. (ಈಶ್ವರ).

**परात्मा** (ಪರಾತ್ಮ) ಪು. ಸಂ. ಈಶ್ವರ, ದೇವರು, ಮಹಾತ್ಮ, ಶ್ರೇಷ್ಠಾತ್ಮ.

**पराधीन** (ಪರಾಧೀನ್) ವಿ. ಸಂ. "**परवश**" ನೋ.

**परान्न** (ಪರಾನ್ನ) ನ. ಸಂ. ಪರಾನ್ನ, ಪರರಕೂಳು, ಪರ ಪಂಕ್ತಿಯ ಊಟ, ಬೇರೊಬ್ಬರಲ್ಲಿಯ ಊಟ.

**परान्नपुष्ट** (ಪರಾನ್ನಪುಷ್ಟ) ವಿ. ಸಂ. ಪರರ ಅನ್ನದಿಂದ ಸೊಕ್ಕಿದ, ಪರಗೂಳಿನಿಂದ ಸೊಕ್ಕಿದ.

**परापरा** (ಪರಾಪರಾ) ಕ್ರಿ. ವಿ. ಪರಪರನೆ, ಪರಪರ ಎಂದು (ಬಟ್ಟೆಹರಿ). "**परपर**" ನೋ.

**पराभव** (ಪರಾಭವ) ಪು. ಸಂ. ಸೋಲು, "**पराजय**" ನೋ.

**पराभूत** (ಪರಾಭೂತ) ವಿ. ಸೋತ, ಗೆಲ್ಲಲ್ಪಟ್ಟ, ಪರಾಜಿತ.

**परामर्श** (ಪರಾಮರ್ಶ) ಪು. ಸಂ. ಉಪಚಾರ, ಚೌಕಸಿ, ವಿಚಾರಣೆ, ಶೋಧನೆ.

**परायण** (ಪರಾಯಣ) ವಿ. ಸಂ. ಪಂಡಿತ, ತೇರ್ಗಡೆಯಾದ, ಆಸಕ್ತ, ತಲ್ಲೀನ.

**परायधन** (ಪರಾಯಧನ) ನ.ಸಂ. "**परधन**" ನೋ.

**पराय–या** (ಪರಾಯ–ಯಾ) ವಿ. ವಿಜಾತೀಯ, ವಿದೇಶೀಯ.

**परार्थ** (ಪರಾರ್ಥ) ವಿ. ಸಂ. ಪರಧನ, ಎರಡನೆಯವರ ಸಂಪತ್ತು. ಕ್ರಿ. ವಿ. ಪರರ ಸಲುವಾಗಿ.

**परार्थशूर** (ಪರಾರ್ಥಶೂರ) ವಿ. ಪರೋಪಕಾರಿ, ಪರೋಪಕಾರಕ್ಕಾಗಿ ದೇಹಸವಿಸುವ, ಪರಹಿತ ಚಿಂತಕ.

**परार्ध** (ಪರಾರ್ಧ) ಪು. ಬ್ರಹ್ಮನ ಅರ್ಧಾಯುಷ್ಯ, ವಿ. ಪರಾರ್ಧ ಸಂಖ್ಯೆಯ.

**परावर्तन** (ಪರಾವರ್ತನ) ನ. ಸಂ. ತಿರುಗುವಿಕೆ, ಹೊರಳುವಿಕೆ, ಹೊರಳಿಬರುವಿಕೆ, ಪರಾವೃತ್ತಿ, ಪರಿವರ್ತನೆ, ರದ್ದುಪಡಿಸುವಿಕೆ.

**परावर्त्य व्यवहार** (ಪರಾವರ್ತ್ಯ ವ್ಯವಹಾರ) ನ. ಸಂ. ಮರುವ್ಯಾಪಾರ, ಮರುಬೇಹಾರ.

**परावा** (ಪರಾವಾ) ವಿ. ಎರಡನೆಯುವ, ವಿಜಾತೀಯ, ಹೊಸ.

**परावृत्त** (ಪರಾವೃತ್ತ) ವಿ. ಸಂ.ತಿರುಗಿಬಂದ,ತಿರುಗಿದ, ಹಿಂತೆಗೆದುಕೊಂಡ, ಪ್ರತಿಬಿಂಬಿತ.

**परावृत्ति** (ಪರಾವೃತ್ತಿ) ಸ್ತ್ರೀ. ಸಂ. ತಿರುಗಿ ಬರುವಿಕೆ, ಹೊರಳಿ ಬರುವಿಕೆ, '**परावर्तन**' ನೋ.

**परास्त** (ಪರಾಸ್ತ) ವಿ. ಸಂ. ತ್ಯಕ್ತ, ನಿರಾಕರಿಸಿದ, ಚೆಲ್ಲಿದ, ಸೋತ, ಒಗೆದ.

**परान्ह** (ಪರಾಹ್ನ) ನ. ಮಧ್ಯಾಹ್ನ, ನಡುಹಗಲು.

**पराळ** (ಪರಾಳ್) ಪು. ಕಟ್ಟಿಗೆಯ ಅಂಚು, ಕಂಬಿ.

**परि** (ಪರಿ) ಅವ್ಯಯ. ಅಂತೆ, ಹಾಗೆ, ಆರೀತಿ, ಹೊಂದಿಕೆ ತೋರಿಸುವ ಪ್ರತ್ಯಯ. ತುಲನಾತ್ಮಕ ದರ್ಶಕ ಪ್ರತ್ಯಯ.

**परिक्रम–ण** (ಪರಿಕ್ರಮ–ಣ) ಪು. ನ. ಸಂ. ಪ್ರದಕ್ಷಿಣೆ, ಸುತ್ತುವಿಕೆ, ಅಡ್ಡಾಡುವಿಕೆ.

**परिखा** (ಪರಿಖಾ) ಸ್ತ್ರೀ. ಅನ್ಯವಸ್ತು, ವಿಲಕ್ಷಣವಸ್ತು.

**परिगणन** (ಪರಿಗಣನ್) ನ. ಸಂ. }
**परिगणना** (ಪರಿಗಣನಾ) ನ. } ಎಣಿಕೆ, ಲೆಕ್ಕ ಮಾಡುವಿಕೆ, ಆರಿಸುವಿಕೆ.

**परिगृहीत** (ಪರಿಗೃಹೀತ) ವಿ. ಸ್ವೀಕರಿಸಲ್ಪಟ್ಟ, ಸ್ವೀಕೃತ, ಒಪ್ಪಿದ, ಹೂ ಅಂದ, ಆರಿಸಿದ.

**परिग्रह** (ಪರಿಗ್ರಹ್) ಪು. ಅವಲಂಬಿತ ಮನುಷ್ಯ, ಆಳು. ೨. ಸ್ವೀಕಾರ, ಅಧಿಕಾರ.

**परिघ** (ಪರಿಘ) ಪು. ಸಂ. ಪರಿಧಿ, ವರ್ತುಲದ ಸುತ್ತು ರೇಷೆ, ಹೊರಗೋಡೆ, ಸುತ್ತುಗೋಡೆ.

**परिचय** (ಪರಿಚಯ) ಪು.ಸಂ. ಗುರುತು, ಪರಿಚಯ, ಅತಿಸಂಬಂಧ, ದೃಢಸಂಬಂಧ.

**परिचर्या** (ಪರಿಚರ್ಯಾ) ಸ್ತ್ರೀ. ಸಂ. ಸೇವೆ, ಚಾಕರಿ, ಶುಶ್ರೂಷೆ; ರೋಗಿಯ ಉಪಚಾರ.

**परिचार** (ಪರಿಚಾರ) ಪು. ಪ್ರದಕ್ಷಿಣೆಹಾಕುವಿಕೆ, ಸುತ್ತುಹಾಕುವಿಕೆ, ಪ್ರಾಬಲ್ಯ, ವರ್ಚಸ್ಸು.

**परिचारक** (ಪರಿಚಾರಕ) ನ. ಸಂ. ಸೇವಕ, ಆಳು, ದಾಸ, ಸಂಗಡಿಗ, ಅನುಚರ.

**परिचारिका** (ಪರಿಚಾರಿಕಾ) ಸ್ತ್ರೀ. ಸಂ. ದಾಸಿ, ತೊತ್ತು, 'ನರ್ಸ' ಸೇವಿಕೆ.

**परिचित** (ಪರಿಚಿತ) ವಿ. ಸಂ. ಗುರುತಿನ, ಗುರುತಿದ್ದ, ಪರಿಚಿತ, ಸಲಿಗೆಯ, ಬಳಕೆಯ, ರೂಢಿಯಾದ.

**परिछिन्न** (ಪರಿಚ್ಛಿನ್ನ) ವಿ. ಸಂ. ಸ್ಪಷ್ಟವಾದ, ವಿಂಗಡಿಸಿದ.

**परिच्छेद** (ಪರಿಚ್ಛೇದ) ಪು. ಸಂ. ಖಂಡ, ಪ್ಯಾರಾಗ್ರಾಫ್, ವಾಕ್ಯಸಮುಚ್ಚಯ.

**परिजन** (ಪರಿಜನ) ಪು. ಸಂ. ಸೇವಕ, ಪರಿವಾರ, ಆಳು, ಜೊತೆಗಾರ.

**परिणति** (ಪರಣತೀ) ಸ್ತ್ರೀ. ಪಕ್ವಸ್ಥಿತಿ, ಹಣ್ಣಾಗುವಿಕೆ. ೨. ಪರಿಣಾಮ, ಅಂತಿಮರೂಪ.

**परिणय** (ಪರಿಣಯ) ಪು. ಸಂ. ವಿವಾಹ, ಮದುವೆ, ಸ್ತ್ರೀಪಾಣಿಗ್ರಹಣ, ಲಗ್ನ.

**परिणाम** (ಪರಿಣಾಮ) ಫಲ, ಫಲಶ್ರುತಿ, ಕೊನೆ, ಸಂಸ್ಕಾರ, ಗತಿ, ಕಾರ್ಯಾಂತ ಸ್ಥಿತಿ, ಸಿದ್ಧಿ.

**–शूल** (–ಶೂಲ) ನ. ನಿರ್ಣಯ, ತೀರ್ಮಾನ, ಅಸಾಧ್ಯರೋಗ, ಅಸಹನೀಯ ವ್ಯಾಧಿ, ಸಾವಿನ ಬೇನೆ, ಅಂತ್ಯಬೇನೆ, ಕ್ಷಯರೋಗ, ಜೀರ್ಣವಾದ ಬೇನೆ.

**परिणीत** (ಪರಿಣೀತ) ವಿ. ಸಂ. ವಿವಾಹಿತ, ಮದುವೆಯಾದ.

**परितुष्ट** (ಪರಿತುಷ್ಟ) ವಿ. ಸಂ. ಆನಂದಿತ, ಸಮಾಧಾನಹೊಂದಿದ.

**परितोष** (ಪರಿತೋಷ) ಪು. ಸಂ. ಆನಂದ, ಸಮಾಧಾನ, ಸಂತೋಷ.

**परितोषण** (ಪರಿತೋಷಣ) ನ. ಸಂ. ಆನಂದಪಡುವಿಕೆ, ಸಮಾಧಾನ ಹೊಂದುವಿಕೆ, ಸಂತೋಷಪಡುವಿಕೆ.

**परित्यक्त** (ಪರಿತ್ಯಕ್ತ) ವಿ. ಸಂ. ಬಿಟ್ಟ, ತ್ಯಜಿಸಿದ, ಪರಿತ್ಯಕ್ತ, ತ್ಯಕ್ತ.

**परित्याग** (ಪರಿತ್ಯಾಗ) ಪು. ಸಂ. ಬಿಟ್ಟುಬಿಡುವಿಕೆ, ತ್ಯಜಿಸುವಿಕೆ, ಪರಿತ್ಯಜಿಸುವಿಕೆ.

**परित्राण** (ಪರಿತ್ರಾಣ) ನ. ಸಂ. ರಕ್ಷಣೆ, ಕಾವಲು, ಪಾಲನೆ, ಆಶ್ರಯ, ಮರೆ.

**परित्वा** (ಪರಿತ್ವಾ) ಸ್ತ್ರೀ. ಸಂ. ಪ್ರವಾಸ, ತಿರುಗಾಡುವಿಕೆ, ಭ್ರಮಣ, ಸಂಚಾರ, ಪ್ರಯಾಣ, ಅಲೆದಾಡುವಿಕೆ.

**परिधान** (ಪರಿಧಾನ) ನ. ಸಂ. ಹೊರುವಿಕೆ, ಹೊದ್ದುಕೊಳ್ಳುವಿಕೆ, ಉಡುವಿಕೆ, ಧರಿಸುವಿಕೆ, ಹಾಕುವಿಕೆ.

**परिधि** (ಪರಿಧಿ) ಸ್ತ್ರೀ. ಪ್ರಭಾವಲಿ, ಪರಧಿ, ಪರಿಘ, ಸುತ್ತಳತೆ, ತೇಜೋಮಂಡಲ, ಕಿರಣಾವಳಿ, ಪ್ರಭಾಮಂಡಲ.

**परिपक्व** (ಪರೀಪಕ್ವ) ವಿ. ಸಂ. ಹಣ್ಣಾದ, ಪ್ರೌಢ ಜಾಣ, ಪ್ರಜ್ಞೆಹೊಂದಿದ, ನುರಿತ.

**परिपाक** (ಪರಿಪಾಕ) ಪಕ್ವತೆ, ಸಂಪೂರ್ಣಪಕ್ವತೆ, ಪರಿಣಾಮ, ಫಲಶ್ರುತಿ, ಜೀರ್ಣವಾಗುವಿಕೆ, ಅರಗುವಿಕೆ. '**परिणाम**' ನೋ.

**परिपाटी** (ಪರಿಪಾಟೀ) ಸ್ತ್ರೀ. ಸಂ. ಕ್ರಮ, ವ್ಯವಸ್ಥೆ, ರೂಢಿ, ವಾಡಿಕೆ.

**परिपाठ** (ಪರಿಪಾಠ) ಪು. ಸಂ. ರೂಢಿ, ಪದ್ಧತಿ, ಜನರೂಢಿ, ನಿಯಮ, ಮಾದರಿ, ಚಾಳಿ, ರಿವಾಜು.

**परिपालन** (ಪರಿಪಾಲನ) ಸಂಪೂರ್ಣರಕ್ಷಣೆ, ಪಾಲನೆ.

**परिपुष्ट** (ಪರಿಪುಷ್ಟ) ವಿ. ಸಂ. ಸೊಕ್ಕಿದ, ಸೊಕ್ಕೇರಿದ, ತುಂಬಿದ.

**परिपूर्ण** (ಪರಿಪೂರ್ಣ) ವಿ. ಸಂ. ತುಂಬಿದ, ಪೂರ್ಣವಾದ, ತೀರಾತುಂಬಿದ.

**परिपूर्ति** (ಪರಿಪೂರ್ತಿ) ಸ್ತ್ರೀ. ಸಂ. ಪೂರ್ತಿಯಾಗುವಿಕೆ, ಪೂರ್ಣತೆ, ಸಮಾಧಾನವೃತ್ತಿ, ಸಮಾಧಾನ.

**परिभव** (ಪರಿಭವ) ಪು. ಸಂ. ಸೋಲು, ಅಪಜಯ, ಅಪಯಶಸ್ಸು, ಗಮನಿಸದಿರುವಿಕೆ, ಅಲಕ್ಷ್ಯ, ಅನಾದರ, ಪರಾಜಯ, ಅಪಮಾನ.

**परिभाषा** (ಪರಿಭಾಷಾ) ಕ್ರಿ. ಸಂ. ವ್ಯಾಖ್ಯೆ, ವಿಶಿಷ್ಟ– ಪಾರಿಭಾಷಿಕ ಶಬ್ದ.

**परिभ्रमण** (ಪರಿಭ್ರಮಣ) ನ. ಸಂ. ತಿರುಗುವಿಕೆ, ಸಂಚಾರ, ಸುತ್ತು ತಿರುಗುವಿಕೆ.

**परिभ्रमणे** (ಪರಿಭ್ರಮಣೇ) ಕ್ರಿ. ಸಂ. ತಿರುಗು, ಸುತ್ತಿರುಗು, ಸಂಚರಿಸು, ಓಡಾಡು.

**परिमल–ळ** (ಪರಿಮಲ–ಳ) ಪು. ಸಂ. ಸುಗಂಧ, ಸುವಾಸನೆ, ಕಂಪು, ಮಧುರವಾಸನೆ.

**परिमाण** (ಪರಿಮಾಣ) ನ. ಸಂ. ಅಳತೆ, ಮಾನ, ಪ್ರಮಾಣ, ನಿಯಮ.

**परिमिति** (ಪರಿಮಿತಿ) ಸ್ತ್ರೀ. ಸಂ. ವರ್ಗ, ತರಗತಿ, ಇಯತ್ತೆ.

**परिमित** (ಪರಿಮಿತ) ಸ್ತ್ರೀ. ಸಂ. ಅಳೆದ, ಪ್ರಮಾಣದ ನಿಯಮಿತ, ತರಗತಿ ಹೊಂದಿದ.

**परिमेय** (ಪರಿಮೇಯ) ವಿ.ಸಂ. ಅಳೆಯತಕ್ಕ, ಅಳತೆ ಹೊಂದುವ, ಅಳೆಯಲು ಬರುವ.

**परिमार्जन** (ಪರಿಮಾರ್ಜನ) ನ.ಸಂ. ತೊಳೆಯುವಿಕೆ, ಸ್ವಚ್ಛಮಾಡುವಿಕೆ,ಸಮಾಧಾನಪಡಿಸುವಿಕೆ,ಶಮನ ಪಡಿಸುವಿಕೆ.

**परिमार्जित** (ಪರಿಮಾರ್ಜಿತ) ವಿ. ಸಂ. ತೊಳೆದ, ಸ್ವಚ್ಛಮಾಡಿದ, ಶಾಂತಗೊಳಿಸಿದ.

**परियेसणे** (ಪರಯೇಸಣೇ) ಕ್ರಿ. ಸಂ. ಕೇಳು, ಕಿವಿ ಯಿಂದ ಕೇಳು, ಕೇಳಿದಂತೆ ನಡೆ.

**परिवर्जन** (ಪರಿವರ್ಜನ) ನ. ಸಂ. ತ್ಯಾಗ, ತ್ಯಜಿಸು ವಿಕೆ, ವಿಸರ್ಜಿಸುವಿಕೆ.

**परिवर्जित** (ಪರಿವರ್ಜಿತ) ವಿ. ಸಂ. ತ್ಯಕ್ತ, ಬಿಡ ಲ್ಪಟ್ಟ, **परित्यक्त** ನೋ. ಚೆಲ್ಲಿದ, ಒಗೆದ.

**परिवर्त–परिवर्तन** (ಪರಿವರ್ತ–ಪರಿವರ್ತನ) ಪು. ಸಂ. ನ. ತಿರುಗುವಿಕೆ, ಪರಿಭ್ರಮಣ.

**परिवार** (ಪರಿವಾರ) ಪು. ಸಂ. ಪರಿವಾರ, ಆಶ್ರಿತ ಜನರು, ಸೇವಕರು, ಅವಲಂಬಿಸಿದವರು, ಕುಟುಂ ಬದ ಜನ.

**परिवेदन** (ಪರಿವೇದನ) ನ. ಸಂ. ಸವಿಸಾರ ಹೇಳು ವಿಕೆ, ಕೂಲಂಕುಷವಾಗಿ ಹೇಳುವಿಕೆ, ಪರಿಜ್ಞಾಪಿ ಸುವಿಕೆ.

**परिवेषण** (ಪರಿವೇಷಣ) ನ. ಸಂ. ಸುತ್ತುಹಾಕುವಿಕೆ, ಹೊದಿಸುವಿಕೆ, ಬಡಿಸುವಿಕೆ.

**परिवेष** (ಪರಿವೇಷ) ಪು. ಉಡುಪು, ತೊಡಿಗೆ, ಉಡಿಗೆತೊಡಿಗೆ.

**परिवेष्टा** (ಪರಿವೇಷ್ಟಾ) ಪು. ಸಂ. ಬಡಿಸುವವ, ಊಟಕ್ಕೆ ನೀಡುವವ, ಹಂಚುವವ.

**परिवेष्टित** (ಪರಿವೇಷ್ಟಿತ) ವಿ. ಸಂ. ಸುತ್ತುಗಟ್ಟಿದ, ಹೊದಿಸಿದ.

**परिशीलन** (ಪರಿಶೀಲನ) ನ. ಸಂ. ಅಭ್ಯಾಸ, ನಿರೀ ಕ್ಷಣೆ, ವಿಚಾರ, ವ್ಯಸನ, ಓದುವಿಕೆ, ತಲ್ಲೀನತೆ.

**परिशुद्ध** (ಪರಿಶುದ್ಧ) ವಿ. ಸಂ. ನಿರ್ಮಲವಾದ, ಶುಚಿ ಯಾದ,ಸ್ವಚ್ಛವಾದ, ಝುಳಝುಳವಾದ, ನಿಷ್ಕಲಂಕ.

**परिशेष** (ಪರಿಶೇಷ) ಪು. ಸಂ. ಉಳಿಯುವಿಕೆ, ಹೆಚ್ಚಾ ಗಿರುವಿಕೆ, ಪುರಾವೆ, ಆಧಾರ, ಪ್ರಮಾಣ, ಶೇಷಾಂಶ ಸತ್ಯಪ್ರಮಾಣ, ನಿಜಾಧಾರ.

**परिश्रम** (ಪರಿಶ್ರಮ) ಪು. ಸಂ. ಶ್ರಮ, ದಣಿವು, ದಣಿ ಯುವಿಕೆ, ಬೇಸರ, ಜಾಡ್ಯ, ಆಯಾಸ, ಪ್ರಯತ್ನ, ದೇಹಸವೆಸುವಿಕೆ.

**परिश्रान्त** (ಪರಿಶ್ರಾಂತ) ವಿ. ಸಂ. ದಣಿದ, ಬೇಸತ್ತ, ಆಯಾಸಹೊಂದಿದ, ಪ್ರಯತ್ನಿಸಿದ, ದೇಹ ಸವಿಸಿದ.

**परिसणे** (ಪರಿಸಣೇ) ಕ್ರಿ. ಸಂ. ಕೇಳು, ಆಲಿಸು, ಚಿತ್ತೈಸು, ಅವಧರಿಸು, ಹೇಳಿದಂತೆ ನಡೆ.

**परिस्पंदन** (ಪರಿಸ್ಪಂದನ) ನ. ಸಂ. ಅಲುಗಾಡುವಿಕೆ, ಸಂಚರಿಸುವಿಕೆ, ಸ್ಪಂದಿಸುವಿಕೆ, ಸರಿಯುವಿಕೆ.

**परिस्फुट** (ಪರಿಸ್ಫುಟ) ವಿ. ಸಂ. ಸ್ಪಷ್ಟವಾದ, ಬಹಿ ರಂಗಪಡಿಸಿದ, ಪ್ರಕಟಿಸಿದ. ೨. ಪ್ರಕಟಣೆ.

**परिस्फोट** (ಪರಿಸ್ಫೋಟ) ಪು. ಸಂ. ಭಾಷಣ, ವಚನ, ಅಪಕೀರ್ತಿ.

**परिहार** (ಪರಿಹಾರ) ಪು. ಸಂ. ಸಮಾಧಾನ, ಸ್ಪಷ್ಟತೆ, ತಿದ್ದುವಿಕೆ, ಪ್ರಕಟಣೆ, ಉಪಾಯ.

**परिहार्य** (ಪರಿಹಾರ್ಯ) ವಿ. ಸಂ. ಸಮಾಧಾನ ಹೊಂದತಕ್ಕ, ಸ್ಪಷ್ಟವಾಗತಕ್ಕ, ತಿದ್ದಲ್ಪಡುವ, ನಿವಾರಿಸತಕ್ಕ.

**परिहास** (ಪರಿಹಾಸ) ಪು. ಸಂ. ನಗೆ, ಹಾಸ್ಯ, ಚೇಷ್ಟೆ, ವಿನೋದ, ಚುಚ್ಚುಮಾತು, ಉಪಹಾಸ.

**परिहित** (ಪರಿಹಿತ) ವಿ. ಸಂ. ಧರಿಸಿದ, ಹೊತ್ತ, ಉಟ್ಟುಕೊಂಡ, ತೊಟ್ಟುಕೊಂಡ, ವೇಷಧರಿಸಿದ.

**परिज्ञान** (ಪರಿಜ್ಞಾನ) ನ. ಸಂ. ತಿಳುವಳಿಕೆ, ತಜ್ಞತೆ, ಸಂಪೂರ್ಣಜ್ಞಾನ, ಜಾಣ್ಮೆ.

**परी** (ಪರೀ) ಸ್ತ್ರೀ. ಫಾ. ಸುಂದರ ಸ್ತ್ರೀ, ಅಪ್ಸರೆ.

**परीकथा** (ಪರೀಕಥಾ) ಸ್ತ್ರೀ. ಅಪ್ಸರೆಯ ಕತೆ, ದೇವ ತೆಯ ಕತೆ, ಪುರಾಣ ಕಥೆ.

**परी** ( ಪರೀ ) ಅವ್ಯಯ. ಆದರೆ, ಆದರೂ ಸಹ, ಪರಂತು.

**घरापरी घर गेले बायको परी बायको गेली** (ಘರಾ ಪರೀ ಘರ್ ಗೇಲೆ ಬಾಯಕೋ ಪರೀ ಬಾಯಕೋ ಗೇಲೀ) ನಾಣ್ಣುಡಿ. ಮನೆಯಂತೂ ಮೊದಲೇ ಹೋಯಿತು, ಸತಿಯಿಂದ ಸರ್ವನಾಶವಾಯಿತು.

**परीघ** (ಪರೀಘ) ಪು. ಬೇಲಿ, ಸುತ್ತು ಗೋಡೆ, ವರ್ತುಲದ ಪರಿಘ.

**परीट** (ಪರೀಟ) ಪು. ಅಗಸ, ರಜಕ, ಬಟ್ಟೆ ಒಗೆಯು ವವ, ಮಡಿವಾಳ.

**परीट घडी** (ಪರೀಟ್ ಘಡೀ) ಸ್ತ್ರೀ. ಇಸ್ತ್ರೀ ಮಾಡಿದ ಬಟ್ಟೆ.

**परीटवाडा** (ಪರೀಟ್‌ವಾಡಾ) ಪು. ಸಂ. ಅಗಸರ ಓಣಿ, ಮಡಿವಾಳ್ಕರ ಬೀದಿ.

**परीस** (ಪರೀಸ್) ನ. ಪರುಷ ಶಿಲೆ, ಸ್ಪರ್ಶ ಶಿಲೆ, ಕಬ್ಬಿಣವನ್ನು ಬಂಗಾರ ಮಾಡುವ ಕಲ್ಲು, ಸುಂದರ ಬಾಲಕ. ಜೀವನ ಸಾಫಲ್ಯ ಹೊಂದಿದ ಮನುಷ್ಯ, ಶ್ರೀಮಂತ ಮನುಷ್ಯ.

**परीस** (ಪರೀಸ್) ಅವ್ಯಯ. ಅದಕ್ಕಿಂತ, ಅವನಿಗಿಂತ, ಅವಳಿಗಿಂತ, ಇದಕ್ಕೂ ಹೆಚ್ಚಾಗಿ.

**परीक्षक** (ಪರೀಕ್ಷಕ) ಪು. ಸಂ. ಪರೀಕ್ಷೆ ಮಾಡುವವ, ನ್ಯಾಯ ನೀಡುವವ.

**परीक्षण** (ಪರೀಕ್ಷಣ) ನ. ಸಂ. ಪರೀಕ್ಷಿಸುವಿಕೆ, ನ್ಯಾಯ ನೀಡುವಿಕೆ, ಪರೀಕ್ಷೆ, ಟೀಕೆ.

**परीक्षणे** (ಪರೀಕ್ಷಣೇ) ಕ್ರಿ. ಪರೀಕ್ಷಿಸು, ನ್ಯಾಯನೀಡು, ಟೀಕಿಸು, ಶೋಧಿಸು, ಗೊತ್ತುಪಡಿಸು, ಸಿದ್ಧಪಡಿಸು.

**परीक्षा** (ಪರೀಕ್ಷಾ) ಸ್ತ್ರೀ. ನ್ಯಾಯ, ಟೀಕೆ, ಶೋಧ, ಪ್ರಯೋಗ, ಒರೆಹಚ್ಚುವಿಕೆ, ಜ್ಞಾನ, ಕೌಶಲ್ಯ, ಅನುಭವ, ಅನುಭವಜನ್ಯ ಜ್ಞಾನ.

**परीक्षावान् -वंत** (ಪರೀಕ್ಷಾವಾನ್ -ವಂತ) ವಿ. ಸಂ. **परीक्षक** ನೋಡಿರಿ.

**परुष** (ಪರುಷ) ವಿ. ಸಂ. ನಿರ್ದಯ, ಕರ್ಕಶ, ಕಠೋರ, ಬಿರುಸು, ತೀಕ್ಷ್ಣ, ಉರುಟಾದ, ಅಸಡ್ಡಾಳ, ಕಾಡು.

**परूस** (ಪರೂಸ್) ನ. ಹಿತ್ತಲ, ಮನೆಯ ಆವಾರ, ಸುತ್ತು ಗೋಡೆ.

**परोपकार** (ಪರೋಪಕಾರ್) ಪು. ಪರೋಪಕಾರ, ಪರ ಹಿತ, ಪರಚಿಂತನೆ, ದಯೆ, ಕರುಣೆ, ಪರಸೇವೆ.

**परोपकारी लागणे** (ಪರೋಪಕಾರೀ ಲಾಗಣೇ) ಕ್ರಿ. ಪರೋಪಕಾರಕ್ಕೆ ಆರಂಭಿಸು, ಪರೋಪಕಾರ ಮಾಡು, ಪರಸೇವೆ ಮಾಡು.

**परोपकारी** (ಪರೋಪಕಾರೀ) ವಿ. ಪರಹಿತಮಾಡುವ, ದಯೆಯುಳ್ಳ, ಪರೋಪಕಾರದ.

**परोपदेश** (ಪರೋಪದೇಶ) ಪು. ಸಂ. ಪರರಿಗೆ ಮಾಡುವ ಉಪದೇಶ.

**परोपदेशपंडित** (ಪರೋಪದೇಶಪಂಡಿತ) ಪು. ಸಂ. ಎರಡನೆಯರಿಗೆ ಉಪದೇಶ ಮಾಡುವವ, ಆಚಾರ ಶೂನ್ಯ ಉಪದೇಶಕ.

**परोपदेशे पांडित्य** (ಪರೋಪದೇಶೇ ಪಾಂಡಿತ್ಯ) ನಾ. ಹೆರವರಿಗೆ ಉಪದೇಶ ಮಾಡುವುದರಲ್ಲಿ ಮಾತ್ರ ಜಾಣತನ.

**परोपरीने** (ಪರೋಪರೀನೇ) ಕ್ರಿ. ವಿ. ನಾನಾ ರೀತಿಯಾಗಿ, ಬಗೆ ಬಗೆಯಿಂದ, ಬೇರೆ ಬೇರೆ ರೀತಿಯಿಂದ, ಅನೇಕ ಬಗೆಯಾಗಿ.

**परोक्ष** (ಪರೋಕ್ಷ) ಕ್ರಿ. ವಿ. ಸಂ. ಅಪ್ರತ್ಯಕ್ಷವಾಗಿ, ಬೆನ್ನಹಿಂದೆ, ಇಲ್ಲದಾಗ, ಅನುಪಸ್ಥಿತಿಯಲ್ಲಿ (ಮರಾಠಿ) ಅಪರೋಕ್ಷ.

**पर्जन्य** (ಪರ್ಜನ್ಯ) ನ. ಸಂ. ಮಳೆ, ವೃಷ್ಟಿ.

**पर्ण** (ಪರ್ಣ) ನ. ಸಂ. ಎಲೆ, ದಳ, ಪತ್ರ, ಪರ್ಣ, ತೊಪ್ಪಲು.

**पर्णकुटी** (ಪರ್ಣಕುಟೀ), **पर्णशाला** (ಪರ್ಣಶಾಲಾ) ಸ್ತ್ರೀ. ಸಂ. ಆಶ್ರಮ, ಗುಡಿಸಲು, ಹುಲ್ಲಿನ ಮನೆ, ಹುಲ್ಲು ಗುಡಿಸಲು.

**पर्यंक** (ಪರ್ಯಂಕ) ಪು. ಸಂ. ಪಲಂಗ, ಹಾಸಿಗೆ, ಪರ್ಯಂಕ, ಮಂಚ.

**पर्यटन** (ಪರ್ಯಟನ) ನ. ಸಂ. ಸಂಚಾರ, ಪಯಣ.

**पर्यंत** (ಪರ್ಯಂತ) ಕ್ರಿ. ವಿ. ವರೆಗೆ, ತನಕ, ಅಲ್ಲಿಯವರೆಗೆ.

**पर्यवसान** (ಪರ್ಯವಸಾನ) ನ. ಸಂ. ಸಾವು, ಮೃತ್ಯು, ಸಂಪೂರ್ಣ ನಾಶ, ಕೊನೆ, ಕೊನೆಯ ಪರಿಣಾಮ, ಫಲಶ್ರುತಿ, ಫಲ.

**पर्या** (ಪರ್ಯಾ) ಸ್ತ್ರೀ. ಸಂ. ಸಣ್ಣ ಹೊಳೆ, ಝರಿ, ನದಿ, ಕಾಲುವೆ.

**पर्याप्त** (ಪರ್ಯಾಪ್ತ) ವಿ. ಸಂ. ಬಹಳಷ್ಟು ಇದ್ದ, ಸಾಕಷ್ಟು ಇದ್ದ.

**पर्याय** (ಪರ್ಯಾಯ) ಪು. ಸಂ. ಬೇರೆ ಮಾರ್ಗ, ರೀತಿ–ಪದ್ಧತಿ.

**पर्युषित** (ಪರ್ಯುಷಿತ) ವಿ. ಸಂ. ತಂಗಳ, ಹಳೆಯದಾದ, ಹಿಂದಿನ, ಹಳಸಿದ.

**पर्व** (ಪರ್ವ) ನ – ಪು. ಸಂ. ಪರ್ವ, ಪರ್ವಕಾಲ, ಪವಿತ್ರದಿನ, ಹಬ್ಬ, ಆಡಳಿತ, ಕಾರಭಾರ, ಅರಸೊತ್ತಿಗೆ, ರಾಜ್ಯದಾಡಳಿತಕಾಲ.

**–चुकणे – टळणे** (–ಚುಕಣೇ – ಟಳಣೇ) ಕ್ರಿ. ಅ. ಹಬ್ಬ ತಪ್ಪಿಸು, ಸಂಧಿ ಕಳಕೊಳ್ಳು, ಲಾಭ ತಪ್ಪಿಸಿಕೊಳ್ಳು.

**साधणे–गाठणे** (ಸಾಧಣೇ–ಗಾಠಣೇ) ಸ್ತ್ರೀ. ನ. ಸಂಧಿ ಸಾಧಿಸು, ಸಮಯಸಾಧಿಸು, ಲಾಭಮಾಡಿಕೊಳ್ಳು.

**पर्वकाल** (ಪರ್ವಕಾಲ) ಪು. ಸಂ. ಪವಿತ್ರದಿನ, ಹಬ್ಬದದಿನ, ಶುಭದಿನ, ಶುಭಸಮಯ.

**पर्वणी** (ಪರ್ವಣೀ) ಸ್ತ್ರೀ. ಹಬ್ಬ, ಸಂಕ್ರಾಂತಿಕಾಲ, ಆರಾಧನೆ, ಯಾತ್ರಾದಿನ, ಉತ್ಸವದಿನ.

**पोट भरणे** (ಪೋಟ್ ಭರಣೇ) ಕ್ರಿ. ವಿ. ಗಳಿಸು, ಉಪಜೀವಿಸು.

**पोटाचा चाकर -पाईक** (ಪೋಟಾಚಾ ಚಾಕರ–ಪಾಈಕ್) ಪು. ಹೊಟ್ಟೆಯ ಸಲುವಾಗಿ ಕೆಲಸಮಾಡುವವ, ಹೊಟ್ಟೆಗಾಗಿ ದುಡಿಯುವವ.

**पोटाचा नगारा होणे** (ಪೋಟಾಚಾ ನಗಾರಾ ಹೋಣೇ) ಕ್ರಿ. ಅ. ಹೊಟ್ಟೆ ನಗಾರಿಯಾಗು, ಶ್ರೀಮಂತನಾಗು, ಹೊಟ್ಟೆಬರು.

**पोटात कल वणे** (ಪೋಟಾತ್ ಕಾಲವಣೇ) ಕ್ರಿ. ಅ. ಹೊಟ್ಟೆಯಲ್ಲಿ ಕಸಿವಿಸಿಯಾಗು, ಸಂಕಟವಾಗು.

**पोटात घालणे** (ಪೋಟಾತ ಘಾಲಣೇ) ಕ್ಷಮಿಸು. ೨. ಕಾಪಾಡು.

**पोटात ठेवणे** (ಪೋಟಾತ್ ಠೇವಣೇ) ಹೊಟ್ಟೆಯಲ್ಲಿಡು, ಗುಟ್ಟು ಮುಚ್ಚಿಡು, ರಹಸ್ಯವಾಗಿಡು.

**पोटात शूळ उठणे** (ಪೋಟಾತ್ ಶೂಳ್ ಉಠಣೇ) ಕ್ರಿ. ಅ. ಹೊಟ್ಟೆಕಿಚ್ಚಾಗು, ಹೊಟ್ಟೆಯಲ್ಲಿ ಶೂಲಿಬರು.

**पोटात शिरणे** (ಪೋಟಾತ್ ಶಿರಣೇ) ಕ್ರಿ. ಸ. ಹೊಟ್ಟೆಯಲ್ಲಿ ಸೇರು, ಗುಪ್ತಮಾತನ್ನು ಅರಿತುಕೊ.

**पोटातून उमळणे** (ಪೋಟಾತೂನ ಉಮಳಣೇ) ಕ್ರಿ. ಅ. ಹೊಟ್ಟೆಯಲ್ಲಿ ತಳಮಳವಾಗು, ಹಲುಬು, ಮರಗು, ಲವಲವಿಸು.

**पोटावर पाय देणे,** (ಪೋಟಾವರ್ ಪಾಯದೇಣೆ) **पोटावर मारणे** (ಪೋಟಾವರ್ ಮಾರಣೇ) ಕ್ರಿ. ಸ. ಜೀವನೋಪಾಯವನ್ನು ನಿಲ್ಲಿಸು, ಕೆಲಸದಿಂದ ತೆಗೆದು ಹಾಕು.

**पोटावारी राहणे** (ಪೋಟಾವಾರೀ ರಾಹಣೇ) ಕ್ರಿ. ಸ. ಹೊಟ್ಟೆಗಾಗಿ ದುಡಿ, ಅನ್ನಕ್ಕಾಗಿ ದುಡಿ.

**पोटाशी धरणे** (ಪೋಟಾಶೀ ಧರಣೇ) ಕ್ರಿ. ಸ. ತಬ್ಬಿಕೊ. ೨. ಸಲಹು.

**पोटास तडस लागणे** (ಪೋಟಾಸ್ ತಡಸ್ ಲಾಗಣೇ) ಕ್ರಿ. ಅ. ಹೊಟ್ಟೆ ಹರಿಯುವಂತೆ ಅನ್ನಿಸು, ಬಹಳ ತಿನ್ನು, ಉಣ್ಣು.

**पोटी उतरणे** (ಪೋಟೀ ಉತರಣೇ) ಕ್ರಿ. ಅ. ಮನಗಾಣು, ಖಂಡಿತವಾಗು.

**पोटी घालणे** (ಪೋಟೀ ಘಾಲಣೇ) ಕ್ರಿ. ಸಂ. ಅಪರಾಧ ಮುಚ್ಚು, ಕ್ಷಮಿಸು.

**पोटी जन्मणे** (ಪೋಟೀ ಜನ್ಮಣೇ) ಹೊಟ್ಟೆಯಲ್ಲಿಹುಟ್ಟು ...ಯಿಂದ ಉತ್ಪನ್ನವಾಗು.

**पोटात पडणे** (ಪೋಟಾತ್ ಪಡಣೇ) ಕ್ರಿ. ಸ. ಕೈವಶವಾಗು.

**गोगलगाय पोटात पाय** (ಗೋಗಲ್‌ಗಾಯ್ ಪೋಟಾತ್ ಪಾಯ್) (ಗಾದೆಯ ಮಾತು) ಸೌಮ್ಯನಾಗಿ ಕಂಡರೂ ಭಯಂಕರ ಮನುಷ್ಯ.

**जे पोटात ते ओठात** (ಜೇ ಪೋಟಾತ್ ತೇ ಓಠಾತ್) (ಗಾದೆಯ ಮಾತು) ಹೊಟ್ಟೆಯಲ್ಲಿದ್ದುದೆ ತುಟಿಯಲ್ಲಿ ಬರುವುದು. (ಮನಸ್ಸಿನಲ್ಲಿದ್ದುದೆ ಬಾಯಿಂದ ಹೊರಗೆ ಬರುತ್ತದೆ.)

**पोट धरधरून हसणे** (ಪೋಟ್ ಧರಧರೂನ್ ಹಸಣೇ) ಕ್ರಿ. ಅ. ಗಹಿಗಹಿಸಿನಗು.

**पोट रसातळास जाणे** (ಪೋಟ್ ರಸಾತಳಾಸ ಜಾಣೇ) ಕ್ರಿ. ಅ. ಬಡಕನಾಗು.

**पोटात कावळे ओरडू लागणे** (ಪೋಟಾತ್ ಕಾವಳೇ ಓರಡೂ ಲಾಗಣೇ) ಕ್ರಿ.ಅ. ಬಹಳ ಹಸಿವೆಯಾಗು.

**पोटात ब्रम्ह राक्षस असणे** (ಪೋಟಾತ್ ಬ್ರಹ್ಮ ರಾಕ್ಷಸ ಅಸಣೇ) ಕ್ರಿ. ಅ. ಹೊಟ್ಟೆಯಲ್ಲಿ ಬ್ರಹ್ಮರಾಕ್ಷಸನಿರು, ಕೂಳಬಕ್ಕನಾಗು.

**पोटाला पाटा बांधणे** (ಪೋಟಾಲಾ ಪಾಟಾ ಬಾಂಧಣೇ)

**पोटाला बिबा घालणे** (ಪೋಟಾಲಾ ಬಿಬಾ ಘಾಲಣೆ) ಕ್ರಿ. ಅ. ಹೊಟ್ಟೆಗೆ ಕೇರುಹಾಕು, ಹೊಟ್ಟೆಗೆ ಕಲ್ಲು ಕಟ್ಟು, ಬಡತನದಿಂದ ಬದುಕು.

**ज्याचे पोट दुखेल तो ओवा मागेल** (ಜ್ಯಾಚೇ ಪೋಟ ದುಖೇಲ್ ತೋ ಓವಾ ಮಾಗೇಲ್) (ನಾಣ್ಣುಡಿ) ಬೇನೆಬಿದ್ದವನೇ ಔಷಧ ಬೇಡುತ್ತಾನೆ.

**भरल्या पोटाने** (ಭರಲ್ಯಾ ಪೋಟ್ಯಾನೇ) ಕ್ರಿ. ವಿ. ಹೊಟ್ಟೆ ತುಂಬಿದ ಮೇಲೆ, ತುಂಬಿದ ಹೊಟ್ಟೆಯಿಂದ (ನಿಶ್ಚಿಂತನಾಗಿ).

**रीकाम्या पोटाने** (ರಿಕಾಮ್ಯಾ ಪೋಟಾನೇ) ಕ್ರಿ. ವಿ. ಬರಿ ಹೊಟ್ಟೆಯಿಂದ, ಏನೂ ತಿನ್ನದೆ.

**भरल्या पोटी दही कवकवीत** (ಭರಲ್ಯಾ ಪೋಟೀ ದಹೀ ಕವಕವೀತ್) (ಗಾದೆಯ ಮಾತು) ಹೊಟ್ಟೆ ತುಂಬಿದ ಮೇಲೆ ಹುಗ್ಗಿ ಮುಳ್ಳು ಮುಳ್ಳು.

**पोटउकल** (ಪೋಟ್‌ಉಕಲ್) ಸ್ತ್ರೀ. ಮನಸ್ಸು ಬಿಚ್ಚಿ ಹೇಳುವಿಕೆ.

**पोटकूळ** (ಪೋಟ್‌ಕೂಳ್) ವಿ. ಒಳ ಬಾಡಿಗೆಯವ, ರೈತನ-ಆಳು.

**पोटकाम** (ಪೋಟ್‌ಕಾಮ್) ನ. ಒಳಗೆಲಸ.

**पोटखराब** (ಪೋಟ್‌ಖರಾಬ್) ವಿ. ಬಂಜೆ (ಭೂಮಿ) ಸಾಗುವಳಿಯಾಗದ (ಭೂಮಿ).

**पोटखर्च** (ಪೋಟ್‌ಖರ್ಚ) ಪು. ಹೊಟ್ಟೆಯ ಖರ್ಚು ಅನ್ನದ ಖರ್ಚು.

**पोटगी** (ಪೋಟಗೀ) ಸ್ತ್ರೀ. ಬಿಟ್ಟುಕೊಟ್ಟ ಹೆಂಡತಿಗೆ ಕೊಡುವ ಖರ್ಚು.

**पोटगुजारा** (ಪೋಟ್‌ಗುಜಾರಾ) ಪು. ಹೊಟ್ಟೆಪೂರ್ತಿ ಖರ್ಚು, ಅಲ್ಪಾಂಶ, ಅಲ್ಪಗಳಿಕೆ.

**पोटघडी** (ಪೋಟ್‌ಘಡೀ) ಸ್ತ್ರೀ. ಒಳಮಡಿಕೆ.

**पोटचा गोळा–लोळा** (ಪೋಟಚಾ ಗೋಳಾ–ಲೋಳಾ) ನ. ಹೊಟ್ಟೆಯ, ಸ್ವಂತದ, ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗ, ಸ್ವಂತಮಗ.

**वेडा बागडा तरी पोटचा गोळा** (ವೇಡಾ ಬಾಗಡಾ ತರೀ ಪೋಟಚಾ ಗೋಳಾ) (ಗಾದೆಯಮಾತು) ಹುಟ್ಟು ಮಗ ಹೆಗ್ಗಣದಂತಿದ್ದರೂ ಪ್ರಿಯನಾಗುವನು.

**पोटजामीन** (ಪೋಟ್‌ಜಾಮೀನ್) ಪು. ಒಳ ಹೊಣೆಗಾರ, ಹೊಣೆಗಾರನ ಜೊತೆಗಾರ.

**पोटजीभ** (ಪೋಟಜೀಭ) ಸ್ತ್ರೀ. ನಾ. ಕಿರಿನಾಲಿಗೆ, ಕಿರುನಾಲಿಗೆ, ನಂಗಿಲು, ಉಪಜಿಹ್ವೆ.

**पोट झाकणी** (ಪೋಟ್ ಝಾಕಣೀ) ಸ್ತ್ರೀ. ಮದುಮಗನ ತಾಯಿ ಮದುಮಗಳ ತಾಯಿಗೆ ಕೊಟ್ಟ ಸೀರೆ.

**पोट तिडीक** (ಪೋಟ್ ತಿಡೀಕ್) ಸ್ತ್ರೀ. ಹೊಟ್ಟೆಯ ಹಂಬಲ. ೨. ಮನಃಪೂರ್ವಕವಾಗಿ ಮಾಡುವ ಕೆಲಸ.

**पोट दुखी** (ಪೋಟ ದುಖೀ) ಸ್ತ್ರೀ. ಹೊಟ್ಟೆ ನೋವು, ಹೊಟ್ಟೆಕಿಚ್ಚು, ಹೇವ, ಮಾತ್ಸರ್ಯ.

**पोटपाणी** (ಪೋಟ್‌ಪಾಣೀ) ಕೂಳು–ನೀರು, ಹೊಟ್ಟೆಯ ಖರ್ಚು, ಉದರ ನಿರ್ವಾಹ.

**पोटा पाण्याची सोय लावणे** (ಪೋಟಾ ಪಾಣ್ಯಾಚೀ ಸೋಯ ಲಾವಣೇ) ಜೀವನೋಪಾಯ ಮಾಡು.

**पोटापाण्याची व्यवस्था** (ಪೋಟಾಪಾಣ್ಯಾಚೀ ವ್ಯವಸ್ಥಾ) ಸ್ತ್ರೀ. ಉದರ ನಿರ್ವಾಹ.

**पोटपूजा** (ಪೋಟ್ ಪೂಜಾ) ಸ್ತ್ರೀ. ಭೋಜನ, ಊಟ, ಲಂಚ.

**पोटभरू** (ಪೋಟ್‌ಭರೂ) ಪು. ಹೊಟ್ಟೆ ತುಂಬಿಕೊಳ್ಳುವ, ಸೋಮಾರಿ, ವೈಗಳ್ಳ. ೨. ಹೊಟ್ಟೆಗಾಗಿ ದುಡಿಯುವವ.

**पोटरा** (ಪೋಟರಾ) ಪು. ಕಾಳಿನ ತೆನೆ ಉಬ್ಬುವಿಕೆ, ತೆನೆಯ ಹೊಟ್ಟೆಯುಬ್ಬುವಿಕೆ.

**पोटशूळ** (ಪೋಟಶೂಳ್) ನ. ಹೊಟ್ಟೆ ಶೂಲಿ, ಹೊಟ್ಟೆ ನೋವು, ಹೊಟ್ಟೆಯ ತಳಮಳ, ಪೀಡೆಯಾಗು, ನೋಯುವಿಕೆ, ಮಾತ್ಸರ್ಯ.

**पोटहिस्सा** (ಪೋಟ್‌ಹಿಸ್ಸಾ) ಒಳಪಾಲು.

**पोटार्थी** (ಪೋಟಾರ್ಥೀ) ಹೊಟ್ಟೆ ಹೊರೆಯುವವ.

**पोटाळ** (ಪೋಟಾಳ್) ವಿ. ಸ್ಥೂಲ ಹೊಟ್ಟೆಯ, ನಗಾರಿ ಹೊಟ್ಟೆಯ.

**पोटी** (ಪೋಟೀ) ಅವ್ಯಯ. ಮೂಲಕ, ಕಾರಣದಿಂದ.

**पोटया** (ಪೋಟ್ಯಾ) ಡೊಳ್ಳು ಹೊಟ್ಟೆಯವ.

**पोत** (ಪೋತ್) ಪು. ಹೆಂಗಸರ ಕೊರಳ ಆಭರಣ ನೆಯ್ಗೆ, ಬಟ್ಟೆಯನೇಯ್ಗೆ ೩. ದೀವಟಿಗೆ.

**पोतडी** (ಪೋತಡೀ) ಸ್ತ್ರೀ. ಚೀಲ, ಸಂಚಿ, ಕೋಶ, ಬೇಟೆಗಾರನ ಕೊಳ್ಳಿ.

**पोतदार** (ಪೋತದಾರ್) ಪು. ಫಾ. ಮುದ್ರಾ ಪರೀಕ್ಷಕ, ಸಾಹುಕಾರ.

**पोतनीस** (ಪೋತನೀಸ್) ಪು. ಕೋಶಾಧಿಕಾರಿ, ಖಜೀನದಾರ, ಬೊಕ್ಕಸಿಗ, ಬೊಕ್ಕಸದವ.

**पोती** (ಪೋತೀ) ಸ್ತ್ರೀ. ಕನ್ಯೆ, ಮಗಳು.

**पोते** (ಪೋತೇ) ನ. ದೊಡ್ಡಚೀಲ, ಸರಕಾರಿ ಬೊಕ್ಕಸ

**पोतेरे** (ಪೋತೇರೆ) ನ. ಸಾರಿಸುವಿಕೆ. ೨. ಸರ್ವನಾಶ.

**पोतेरे करणे** (ಪೋತೇರೆ ಕರಣೇ) ಕ್ರಿ. ಸ. ಹಾಳು ಮಾಡು.

**पोथंडी** (ಪೋಥಂಡೀ) ಸ್ತ್ರೀ. **'पुरचुंडी'** ನೋ.

**पोथी** (ಪೋಥೀ) ಪುಸ್ತಕ, ಪುರಾಣ ಗ್ರಂಥ.

**पोपट** (ಪೋಪಟ್) ಪು. ಗಿಳಿ, ಶುಕ.

**पोपटपंची** (ಪೋಪಟ್‌ಪಂಚೀ) ಸ್ತ್ರೀ. ಗಿಳಿಯ ಓದು, ಗಿಳಿಯ ಮಾತು, ಪಾಠ ಮಾಡಿದ ಮಾತು. ೨. ಅರ್ಥಶೂನ್ಯ ಮಾತು.

**पोपट पंडित** (ಪೋಪಟ್ ಪಂಡಿತ) ಅವ್ಯವಹಾರಿ ಪಂಡಿತ, ಓದುವ ಭಟ್ಟ, ಪಾಠ ಮಾಡಿ ಜಂಬ ಬಡಿಯುವವ, ದೊಡ್ಡ ಪಂಡಿತರೊಡನೆ ವಾದಿಸುವ ಓದು ಭಟ್ಟ.

**पोपटज्ञान** (ಪೋಪಟ್‌ಜ್ಞಾನ್) ನ. **पोपटपंची** ನೋ.

**पोपटी** (ಪೋಪಟೀ) ವಿ. ಗಿಳಿಯ ಬಣ್ಣದ.

**पोपडा** (ಪೋಪಡಾ) ಪು. ಸಂ. ಕುಳ್ಳು, ಸಗಣೆಯ ಕುಳ್ಳು, ಗೋಡೆಯ ಉಬ್ಬು.

**पोपया** (ಪೋಪಯಾ) ಪು. ಪಪಾಯಿ ಗಿಡ, ಪರಂಗೀ ಹಣ್ಣು.

**पोपेरे** (ಪೋಪೇರೆ) ನ. ಪೀಪಿ, ಸೀಟಿ, ಊದು ಗೊಳವೆ.

**पोफळ, पोफळी** (ಪೋಫಳ್, ಪೋಫಳೀ) ಸ್ತ್ರೀ. ಅಡಿಕೆಯ ಗಿಡ, ಅಡಿಕೆ.

**पोबारा** (ಪೋಬಾರಾ) ಪು. ಪಲಾಯನ, ಓಟ.

**पोबारा करणे** (ಪೋಬಾರಾ ಕರಣೇ) ಓಡಿಹೋಗು, ಮಾಯವಾಗು.

**पोम** (ಪೋಮ್) ನ. ದೋಷ, ಖೊಟ್ಟಿತನ, ದುರ್ಗುಣ, ದಂಭ, ಬಕಧ್ಯಾನ, ಕಪಟ.

**पोम बाहेर पडणे** (ಪೋಮ್ ಬಾಹೇರ್ ಪಡಣೇ) ಕ್ರಿ. ಅ. ದುರ್ಗುಣ ಹೊರಬೀಳು, ಗುಟ್ಟುರಟ್ಟಾಗು.

**पोम माजविणे** (ಪೋಮ್ ಮಾಜವಿಣೇ) ಕ್ರಿ. ಅ. ಧಾಂಭಿಕತನ ಬೆಳೆಯಿಸು, ದಂಭಹಬ್ಬಿಸು, ಠಕ್ಕಿಸು, ವಂಚಿಸು.

**पोय** (ಪೋಯ್) ಸ್ತ್ರೀ. ಅರವಟ್ಟಿಗೆ.

**पोये** (ಪೋಯೇ) ನ. ಜೇನುಗೂಡು, ಜೇನುಹುಟ್ಟು, ಜೇನುತೊಟ್ಟಿ.

**पोर** (ಪೋರ್) ಪು. ಸ್ತ್ರೀ. ಹುಡುಗ, ಹುಡುಗಿ, ಕೂಸು, ಸಣ್ಣಕೂಸು, ಕರ, ಮರಿ.

**पोरकट** (ಪೋರ್ಕಟ್) ವಿ. ಹುಡುಗಾಟದ, ತಿಳಿಯದ, ಹುಡುಗಾಟಿಕೆಯ, ಕ್ಷುಲ್ಲಕ, ಅವ್ಯವಹಾರದ.

**पोरका** (ಪೋರಕಾ) ವಿ. ಅನಾಥ, ಪರದೇಶಿ, ದಿಕ್ಕಿಲ್ಲದ, ತಬ್ಬಲಿ, ತಂದೆ ತಾಯಿ ಇಲ್ಲದ.

**पोरकिडा** (ಪೋರ್ಕಿಡಾ) ಪು. ನುಸಿ, ಧಾನ್ಯದ ನುಸಿ.

**पोरखळ** (ಪೋರ್ಖೇಳ್) ಪು. ಹುಡುಗಾಟ, ಹುಡುಗಾಟಿಕೆ.

**पोरगा** (ಪೋರಗಾ) ಪು. ಹುಡುಗ, ಬಾಲಕ, ಸೇವಕ, ಕೈಯಾಳು.

**पोरगी** (ಪೋರಗೀ) ಸ್ತ್ರೀ. ಹುಡಿಗೆ, ಹುಡುಗಿ, ಬಾಲಿಕೆ, ಸೇವಕಿ, ತೊತ್ತು, ಕೈತೊತ್ತು.

**पोरचेष्टा** (ಪೋರ್ಜೇಷ್ಟಾ) ಸ್ತ್ರೀ. ಹುಡುಗಾಟಿಕೆ, ಚೇಷ್ಟೆ. "**पोरखेळ**" ನೋ.

**पोरटा** (ಪೋರಟಾ) ಪು. ತಿಳಿಗೇಡಿ ಹುಡುಗ.

**पोरबुद्धी** (ಪೋರ್ಬುದ್ಧೀ) ಸ್ತ್ರೀ. ಬಾಲಬುದ್ಧಿ, ತಿಳಿಗೇಡಿತನ, ಅಜ್ಞಾನ, ಅನನುಭವಿಕತನ.

**पोरसौदा** (ಪೋರ್ಸಾದಾ) ಪು. ಹುಡುಗರ ವ್ಯಾಪಾರ, ತಿಳಿಗೇಡಿತನ.

**पोरा** (ಪೋರಾ) ಪು. ನುಸಿ, "**पोरकिडा**" ನೋ.

**पोरापोरी, पोरासोरी** (ಪೋರಾಪೋರೀ, ಪೋರಾಸೋರೀ) ವಿ. ಹುಡುಹುಡುಗರಲ್ಲಿಯ, ಬಾಲಬಾಲರಲ್ಲಿಯ (ಜಗಳ, ಮಾತು).

**पोरेबाळे** (ಪೋರೇಬಾಳೇ)<br>**पोरेलेकरे** (ಪೋರೇಲೇಕರೇ)<br>**पोरेसोरे** (ಪೋರೇಸೋರೇ) } ಪು. ಬಹುವ. ಮಕ್ಕಳು ಮರಿ, ಹುಡುಗರು–ಹುಡುಗರು.

**पोऱ्या** (ಪೋರ್ಯಾ) ಪು. ಹುಡುಗ. "**पोरटा**" ನೋ.

**पोल–फोल** (ಪೋಲ್–ಫೋಲ್) ನ.ಹಿಂ. ತಾಡು. ಪೊಳ್ಳುಕಾಳು, ಸೊಟ್ಟುಕಾಳು.

**पोलाद** (ಪೋಲಾದ್) ನ. ಫಾ. ಉಕ್ಕು.

**पोलादी** (ಪೋಲಾದೀ) ವಿ. ಫಾ. ಉಕ್ಕಿನ, ಬಿರುಸಾದ, ಗಟ್ಟಿಯಾದ, ಬಲವುಳ್ಳ.

**पोलीस** (ಪೋಲೀಸ್) ಪು. (ಬಹುವಚನದಲ್ಲಿ ಪ್ರಯೋಗ) ಪೋಲೀಸ ಸಿಪಾಯಿ, ಜವಾನ.

**पोव** (ಪೋವ್) ಪು. ಸಗಣಿಯ ಮುದ್ದೆ.

**पोवणे** (ಪೋವಣೇ) ಕ್ರಿ. ಅ. ಈಸು, ಈಜು. ೨. ಮೆತ್ತಗಾಗು, ಹಣಿಗೆಯಲ್ಲಿ ನೂಲು ಹಾಕು ೩. ಪೋಣಿಸು, ಸೂಜಿಯಲ್ಲಿ ದಾರ ಪೋಣಿಸು.

**पोवते** (ಪೋವತೇ) ನ. ಜನಿವಾರ, ಹತ್ತಿಯ ಬಟ್ಟೆ, ಕಾರ್ಪಾಸ ವಸ್ತ್ರ.

**पोवळ–ळी** (ಪೋವಳ್–ಳೀ) ಸ್ತ್ರೀ. ಮಂದಿರದ ಆವಾರ ಗೋಡೆ, ಸುತ್ತುಗೋಡೆ.

**पोवळा** (ಪೋವಳಾ) ಪು. ಕಂದುಬಣ್ಣದ ಹೋರಿ, ಕಂದು ಹೋರಿ, ಕಂದು ಆಕಳು, ೨. ಕಾರ ಹುಣ್ಣಿವೆ.

**पोवळी** (ಪೋವಳೀ) ವಿ. ಕಂದುಬಣ್ಣದ.

**पोवळे** (ಪೋವಳೇ) ನ. ದ್ರವಾಳ, ಹವಳ, ಕೆಂಪು ರತ್ನ.

**पोवा** (ಪೋವಾ) ಪು. ನ. }<br>**पोवरी** (ಪೋವರೀ) ಸ್ತ್ರೀ. ನ. } ಮುರಲಿ, ಕೊಳಲು, ಸಣ್ಣ ಹಾವು, ಮರಿ ಹಾವು, ಯಾತ್ರಿಕರ ಗುಂಪು.

**पोवाडा** (ಪೋವಾಡಾ) ಪು. ನ. ಐತಿಹಾಸಿಕ ಹಾಡು, '**पवाडा**' ನೋ.

**पोव(वा)णी** (ಪೋವ(ವಾ)ಣಿ<br>**पोवाणी** (ಪೋವಾಣೀ) } ಸ್ತ್ರೀ. ನ. } ಈಸುವಿಕೆ, ಈಜುವಿಕೆ

**पोवे** (ಪೋವೇ) ನ. '**पोये**' ನೋ.

**पोशा** (ಪೋಶಾ) ವಿ. ಸಲುಗೆಯ, ಮುದ್ದಿನ, ಪ್ರೀತಿಯ ಲಕ್ಕ, ಕೊಬ್ಬಿದ, ಪುಷ್ಟ (ಹುಡುಗ)

**पोशाक–ख** (ಪೋಶಾಕ–ಖ) ಪು. ಉಡುಪು, ಉಡುಗೆ-ತೊಡುಗೆ. ೨. ಸನ್ಮಾನದ ಕಾಣಿಕೆ.

**पोशाकी–खी–गी** (ಪೋಶಾಕಿ–ಖೀ–ಗೀ) ವಿ. ಸುಂದರ, ಶೋಭೆಯ, ತೋರಿಕೆಯ, ಆಡಂಬರದ, ಸಿಂಗರಿಸಿದ.

**पोशाकी दागीना** (ಪೋಶಾಕೀ ದಾಗೀನಾ) ಪು. ನ. ಸುಂಧರ ಉಡುಗೆ ತೊಡುಗೆ, ಉಡುಪು, ತೊಡುಪು.

**पोशिंदा** (ಪೋಶಿಂದಾ) ವಿ. ಸಂ.+ಫಾ. ಸಂರಕ್ಷಿಸುವ, ಕಾಪಾಡುವ, ರಕ್ಷಿಸುವ, ಸಂರಕ್ಷಕ, ಆಧಾರವಾಗಿರುವ.

**पोषक** (ಪೋಷಕ) ವಿ. ಪುಷ್ಟಿಕೊಡುವ, ಬೆಳೆಯಿಸುವ, ಆಧಾರ ಕೊಡುವ.

**पोषण** (ಪೋಷಣ್) ನ. ಕಾಯುವಿಕೆ, ಪುಷ್ಟಿ, ಸಹಾಯ, ಆಧಾರ, ಬಳೆಯಿಸುವಿಕೆ.

**पोसणे** (ಪೋಸಣೇ) ಕ್ರಿ. ಸಂ. ಹೊಟ್ಟೆಗೆ ಹಾಕು, ಸಂರಕ್ಷಿಸು, ರಕ್ಷಿಸು, ಬೆಳೆಯಿಸು, ಆಧಾರಕೊಡು.

**पोषाक-ख** (ಪೋಷಾಕ್) ಪು. ಫಾ. '**पोषाक**' ನೋ.

**पोषित** (ಪೋಷಿತ್) ವಿ- ಸಹಾಯ ಮಾಡಿದ, ಬೆಳೆಯಿಸಿದ, ಸಂರಕ್ಷಿಸಿದ.

**पोस्त** (ಪೋಸ್ತ್) ಪು. (ಹಬ್ಬದ) ಖುಷಿ, ಇನಾಂ, ಮೆಚ್ಚಿಗೆಯ ಹಣ, ನೌಕರರಿಗೆ ಹಬ್ಬಕ್ಕಾಗಿ ಕೊಟ್ಟ ಹಣ.

**पोहोच** (ಪೋಹೋಚ್) ಸ್ತ್ರೀ. ಪಾವತಿ, ಮುಟ್ಟುವಿಕೆ, ಸಾಲು, ಪಂಕ್ತಿ, ಶ್ರೇಣಿ, ಅವಕಾಶ, ವೈವಿಧ್ಯ.

**पोहोचणे** (ಪೋಹೋಚಣೇ) ಕ್ರಿ. ವಿ. ಮುಟ್ಟು, ಗೊತ್ತಾಗು, ತಿಳಿದುಬರು, ಕೈಯಲ್ಲಿ ಬರು.

**पोहोचता** (ಪೋಹೋಚತಾ) ವಿ. ಬಂದುಮುಟ್ಟಿದ, ತಲುಪಿದ, ಬಂದ, ತಿಳಿದ.

**पोहोचविणे** (ಪೋಹೋಚವಿಣೇ) ಕ್ರಿ. ಅ. ಮುಟ್ಟಿಸು, ತಲುಪಿಸು, ತಿಳಿಸು, ಒಯ್ದು ಮುಟ್ಟಿಸು, ವಶಕ್ಕೆ ಕೊಡು.

**पोहची** (ಪೋಹಚೀ) **पोचा** ನೋ. ಗಂಡಸರ ಪೋಚಿ, ಮುಂಗೈಯ ಆಭರಣ.

**पोहणी** (ಪೋಹಣೀ) ಸ್ತ್ರೀ. ಈಸುವಿಕೆ, ಈಜುವಿಕೆ.

**पोहणे** (ಪೋಹಣೇ) ಕ್ರಿ. ಅ. ಈಸು, ಈಜು, ತೇಲು, ಉರುಳಾಡು, ಹೊರಳಾಡು, ತಜ್ಞನಾಗು, ನಿಪುಣನಾಗು, ಪಂಡಿತನಾಗು.

**पोहरा** (ಪೋಹರಾ) ನೀರು ಜಗ್ಗುವ ಪಾತ್ರೆ.

**पोव्हा** (ಪೋವ್ಹಾ) '**पोवा**' ನೋ.

**पोहे** (ಪೋಹೇ) ಪು. ಬಹು ವ. ಅವಲಕ್ಕಿ.

**पोहो** (ಪೋಹೋ) ಪು. ಸಗಣೆಯ ರಾಡಿ.

**पोळ** (ಪೋಳ್) ದೇವರ ಹೋರಿ, ಗೂಳಿ, ಸ್ಥೂಲ, ಸೋಮಾರಿ ಮನುಷ್ಯ.

**पोळणे** (ಪೋಳಣೇ) ಕ್ರಿ. ವಿ. ಬಿಸಿಹತ್ತು, ಚುರುಕು ಹತ್ತು, ಕಿಡಿಬೀಳು, ಹೊತ್ತು. ೨. ಹಾನಿಯಾಗು, ಕಡಿಮೆಯಾಗು.

**पोळपाट** (ಪೋಳ್‌ಪಾಟ್) ಪು. ಚಪಾತಿ ಲಟ್ಟಿಸುವ ಮಣೆ.

**पोळभाज** (ಪೋಳ್‌ಭಾಜ್) ಸ್ತ್ರೀ. ಸುಡುವಿಕೆ, ಕೊಳ್ಳಿಯಿಡುವಿಕೆ, ಬೆಂಕಿ ಹಚ್ಚುವಿಕೆ.

**पोळा** (ಪೋಳಾ) ಪು. ಕಾರಹುಣ್ಣಿವೆ ಹಬ್ಬ, ೨. ಜೇನಿನ ಹುಟ್ಟು, ಹಟ್ಟಿಹಬ್ಬ, ಪಶುಪೂಜೆಯ ಹಬ್ಬ.

**पोळी** (ಪೋಳೀ) ಸ್ತ್ರೀ. ಹೋಳಿಗೆ, ಚಪಾತಿ, ಜೇನಿನ ಹುಟ್ಟು. ೩. ದಪ್ಪ ಹೋಳಿಗೆ. ೪. ಗಂಗೆದೇಗುಲ.

**पोळी** (ಪೋಳೀ) ಕ್ರಿ. ಅ. ಲಾಭವಾಗು, ಶ್ರೀಮಂತನಾಗು, ಹೋಳಿಗೆಯ ಮೇಲೆ ತುಪ್ಪಬೀಳು.

**पोळे** (ಪೋಳೇ) ನ. ಜೇನಿನ ಹುಟ್ಟು, ಪಗಡೀ ಆಟ, ಲೆತ್ತ, ನೆತ್ತ, ಪಗಡೆ.

**पौ** (ಪೌ) ಪು. ಮುದ್ರೆ, ಮೊಹರು.

**पौगंड** (ಪೌಗಂಡ) ನ. ಸಂ. ಯೌವನ, ತಾರುಣ್ಯ, ಪ್ರಾಯ.

**पौची** (ಪೌಚೀ) ಸ್ತ್ರೀ. ಪೋಚಿ, ಮುಂಗೈಯಾಭರಣ, **पोची** ನೋ.

**पौढणे** (ಪೌಢಣೇ) ಕ್ರಿ. ಅ. ಪವಡಿಸು, ಅಡ್ಡವಾಗು, ಮಲಗು.

**पहुढणे** (ಪಹುಢಣೇ) ಕ್ರಿ. ಅ. '**पौढणे**' ನೋ.

**पौत्र** (ಪೌತ್ರ) ಪು.ಸಂ. ಮೊಮ್ಮಗ, ಮಗನಮಗ.

**पौत्री** (ಪೌತ್ರೀ) ಸ್ತ್ರೀ. ಸಂ. ಮೊಮ್ಮಗಳು, ಮಗಳ ಮಗಳು.

**पौनःपुन्य** (ಪೌನಃಪುನ್ಯ) ನ.ಸಂ. ಪುನರಾವರ್ತನೆ, ತಿರುಗಿ ಮಾಡುವದು, ಪುನರುಕ್ತಿ, ತಿರುತಿರುಗಿ ಹೇಳುವದು.

**पौनर्भव** (ಪೌನರ್ಭವ) ಪು. ಸಂ. ಪುನರ್ವಿವಾಹಿತೆಯ ಮಗು, ಉಡಿಕೆಯಾಕೆಯ ಮಗ.

**पौबारा** (ಪೌಬಾರಾ) ದ್ಯೂತದ ಅಂಕೆ, ಲೆತ್ತದ ಎಣಿಕೆ. ೨. ಪಲಾಯನ.

**पौर** (ಪೌರ) ವಿ. ಪಟ್ಟಣದ ಸಂಬಂಧದ, ನಗರದ,ನಾಗರಿಕ, ಪಟ್ಟಣದ, ಪುರದ. ೨. ಪು. ನಾಗರಿಕ.

**पौराणिक** (ಪೌರಾಣಿಕ) ವಿ. ಸಂ. ಪುರಾಣದಲ್ಲಿ ಹೇಳಿದ.

**पौरुषेय** (ಪೌರುಷೇಯ) ವಿ. ಸಂ. ಮನುಷ್ಯ ಸಂಬಂಧದ, ಮಾನವೀಯ, ಮಾನಷ.

**पौरोहित्य** (ಪೌರೋಹಿತ್ಯ) ನ. ಸಂ. ಪುರೋಹಿತ ಕಾರ್ಯ, ವೈದಿಕನ ಕಾರ್ಯ.

**पौर्णमासी** (ಪೌರ್ಣಮಾಸೀ} ಸ್ತ್ರೀ.
**पौणिमा** (ಪೌಣಿಮಾ } ಸ್ತ್ರೀ. ಹುಣ್ಣಿವೆ, ಪೌರ್ಣಿಮೆ.

**पौर्वापार्य** (ಪೌರ್ವಾಪಾರ್ಯ) ನ. ಸಂ. ಪರಂಪರೆ, ಅನುಕ್ರಮ, ಪರಿಣಾಮ, ಕ್ರಮ.

**पौष** (ಪೌಷ) ಪು. ಸಂ. ಪೌಷ ಮಾಸ.

**पौष्टिक** (ಪೌಷ್ಟಿಕ) ವಿ. ಸಂ. ಪುಷ್ಟಿಕೊಡುವ, ಬಲ ನೀಡುವ. ೨. ನ. ಬಲವರ್ಧಕ ಔಷಧ. ೩. ಸಂ. ರಾಜ್ಯವನ್ನು ರಕ್ಷಿಸುವ ಉಪಾಯ.

**प्याजी** (ಪ್ಯಾಜೀ) ವಿ. ಫಾ. ಉಳ್ಳೀಗಡ್ಡಿ ಬಣ್ಣದ, ನೀರುಳ್ಳಿ ಬಣ್ಣದ.

**प्यादा** (ಪ್ಯಾದಾ) ಪು. ಫಾ. ಕಾಲ್ದಳ, ಯೋಧ, ಕಾಲಾಳು, ಚದುರಂಗದ ಕಾಲಾಳು.

**प्याद्याचा फर्जी होणें** (ಪ್ಯಾದ್ಯಾಚಾ ಫರ್ಜಿ ಹೋಣೇ) (ಗಾದೆಯ ಮಾತು). ಆಳು ಅರಸಾಗು.

**प्यादी** (ಪ್ಯಾದೀ }
**प्यादेमात** (ಪ್ಯಾದೇಮಾತ್} ಸ್ತ್ರೀ. ಪೇದೆಯಿಂದ ಶಹ ಕೊಟ್ಟು ಆಟ ಗೆಲ್ಲುವಿಕೆ.

**प्यार** (ಪ್ಯಾರ್) ಪು.ಹಿಂ ಪ್ರೇಮ, ಪ್ರೀತಿ, ಸಲುಗೆ, ಸೇರಿಕೆ.

**प्यारा** (ಪ್ಯಾರಾ) ವಿ. ಹಿಂ. ಅಚ್ಚಿಯ, ಪ್ರೀತಿಯ.

**प्याला** (ಪ್ಯಾಲಾ) ಪು.ಹಿಂ. ಬಟ್ಟಲ, ನೀರಿನ ಬಟ್ಟಲ, ಮದ್ಯಪಾತ್ರ.

**प्र** (ಪ್ರ) (ಸಂ) (ಉಪಸರ್ಗ) ಹೆಚ್ಚಳ ತೋರಿಸು ವಿಕೆಯ ಪ್ರತ್ಯಯ, ಆಧಿಕ್ಯದರ್ಶಕ.

**प्रकट** (ಪ್ರಕಟ) ವಿ. ಸಂ. ವ್ಯಕ್ತ, ಗೊತ್ತಾದ, ಬಹಿರಂಗದ, ಘೋಷಿತ, ಬಯಲಿಗೆ ಬಂದ. ಕ್ರಿ.ವಿ. ಬಹಿರಂಗವಾಗಿ, ಪ್ರಕಟವಾಗಿ.

**प्रकटणे** (ಪ್ರಕಟಣೇ) ಕ್ರಿ. ಅ. ವ್ಯಕ್ತಪಡು, ವ್ಯಕ್ತ ಮಾಡು, ಮುಂದೆಬರು, ಪ್ರಕಟವಾಗು, ಘೋಷಿಸು ಪ್ರಸಿದ್ಧಮಾಡು, ಸಾರು.

**प्रकटित** (ಪ್ರಕಟಿತ) ವಿ. ಸಂ. ಪ್ರಸಿದ್ಧವಾದ, ಸಾರಿದ, ಪ್ರಕಟವಾದ, ಪ್ರಚುರ ಪಡಿಸಿದ.

**प्रकरण** (ಪ್ರಕರಣ) ನ. ಸಂ. ಹೇಳಿಕೆ, ಕೇಳಿಕೆ ಖಾತೆ, ವಿಭಾಗ, ಅಧ್ಯಾಯ, ಸಂಧಿ ಪರಿಚ್ಛೇದ, ಪ್ರಕರಣ, ಪಾದ್ರಿಗಳ ಸಭೆ, ವಿಷಯ, ಉದ್ಯೋಗ, ಕೆಲಸ, ಸಂಘ ಸಂಸ್ಥೆ.

**प्रकटना** (ಪ್ರಕಟನಾ) ಸ್ತ್ರೀ. ಸಂ. ಪ್ರಸಿದ್ಧೀಕರಣ, ಬಹಿರಂಗಗೊಳಿಸುವಿಕೆ.

**प्रकर्ष** (ಪ್ರಕರ್ಷ) ಪು. ಸಂ. ಹೆಚ್ಚಳ, ವಿಪುಲತೆ, ಪ್ರಸಿದ್ಧಿ, ಗುಣಾಧಿಕ್ಯ, ಗುಣೋತ್ಕರ್ಷ, ಪ್ರತಿಷ್ಠೆ, ಶ್ರೇಷ್ಠತೆ, ಉನ್ನತಿ, ಪ್ರಗತಿ. ೨. ಎತ್ತರ ದಿನ್ನೆ.

**प्रकांड** (ಪ್ರಕಾಂಡ) ವಿ. ಸಂ. ಹಬ್ಬಿದ, ವಿಪುಲವಾದ ಉನ್ನತಿಯ, ಅತಿಶ್ರೇಷ್ಠ, ಪ್ರಸಿದ್ಧವಾದ.

**प्रकार** (ಪ್ರಕಾರ) ಪು. ಸಂ. ಜಾತಿ, ಮಾದರಿ, ವೈವಿಧ್ಯ, ನಡಾವಳಿ, ಪದ್ಧತಿ.

**प्रकार करणें** (ಪ್ರಕಾರಕರಣೇ) ಕ್ರಿ. ಸಂ. ನಾನಾ ಬಗೆಯ ವರ್ತನೆ ಮಾಡು, ವಿಚಿತ್ರವಾಗಿ ವರ್ತಿಸು.

**प्रकाश** (ಪ್ರಕಾಶ) ಪು. ಸಂ. ಬೆಳಕು, ಕಾಂತಿ, ಮಿಂಚು, ಹೊಳಪು, ತೇಜಸ್ಸು, ಕೀರ್ತಿ.

**प्रकाशक** (ಪ್ರಕಾಶಕ್) ಪು. ಪ್ರಕಾಶಕ, ಪ್ರಕಟನಕಾರ,

**प्रकारणें** (ಪ್ರಕಾಶಣೇ) ಕ್ರಿ. ಸಂ. ಪ್ರಕಟ ಮಾಡು, ಪ್ರಕಾಶಿಸು.

**प्रकाशमान** (ಪ್ರಕಾಶಮಾನ್) ವಿ. ಸಂ. ಹೊಳೆಯುವ, ಮಿಂಚುವ, ಲಕಲಕಿಸುವ, ಥಳಥಳಿಸುವ, ಪ್ರವೀಣನಾಗುವ.

**प्रकीर्ण** (ಪ್ರಕೀರ್ಣ) ವಿ. ಸಂ. ಸಾರ್ವವಿಷಯಕ, ಸರ್ವ ವಿಷಯ ತುಂಬಿದ, ಸರ್ವವಿಷಯ ವಿವೇಚಿತ, ಹರಡಿದ, ಸುರಿಸಿದ, ಪಸರಿಸಿದ.

**प्रकृत** (ಪ್ರಕೃತ) ವಿ. ಸಂ. ಬಳಕೆಯಲ್ಲಿರುವ, ವಾರ್ತಮಾನಿಕ, ಸದ್ಯಸ್ಥಿತಿಯ, ಆಧುನಿಕ, ಅತ್ಯಾಧುನಿಕ.

**प्रकृति** (ಪ್ರಕೃತಿ) ಸ್ತ್ರೀ. ಸಂ. ದೇಹಾರೋಗ್ಯ, ಸ್ವಭಾವ, ಮನಸ್ಸಿನ ಬಲವು, ಸೃಷ್ಟಿ, ಮೂಲರೂಪ, ಜಗತ್ತು.

**प्रकृती बिघडणें** (ಪ್ರಕೃತಿ ಬಿಘಡಣೇ) ಕ್ರಿ. ಅ. ಪ್ರಕೃತಿ ಕೆಡು, ದೇಹಸ್ಥಿತಿ ಕೆಡು, ಅನಾರೋಗ್ಯವಾಗು, ಜಗಳ ಆರಂಭವಾಗು.

**प्रकृतीने ताळ सोडणे** (ಪ್ರಕೃತೀನೇ ತಾಳ್ ಸೋಡಣೇ) ಕ್ರಿ. ಅ. ಪ್ರಕೃತಿ ಹಾದಿಬಿಡು, ಆರೋಗ್ಯಕ್ಕೆ ಅಳುವಿಲ್ಲದಾಗು.

**प्रकृतीचा ताळ सुटणें** (ಪ್ರಕೃತೀಚಾ ತಾಳ್ ಸುಟಣೇ) ಕ್ರಿ. ಅ. ಪ್ರಕೃತಿ ಅನಿಯಮಿತವಾಗು.

**प्रकृती ताळ्यावर येणें** (ಪ್ರಕೃತೀ ತಾಳ್ಯಾವರ್ ಯೇಣೇ) ಕ್ರಿ. ಅ. ಪ್ರಕೃತಿ ಸುಧಾರಿಸು, ದೇಹಾರೋಗ್ಯ ವುಂಟಾಗು.

**प्रकृति स्वभाव** (ಪ್ರಕೃತಿ ಸ್ವಭಾವ) ಪು. ಸಂ. ಹುಟ್ಟು ಸ್ವಭಾವ, ಹುಟ್ಟುಗುಣ, ಜನ್ಮ ಗುಣ.

**प्रकृष्ट** (ಪ್ರಕೃಷ್ಟ) ವಿ. ಸಂ. ಉತ್ತಮ, ಉತ್ಕೃಷ್ಟ.

**प्रकोप** (ಪ್ರಕೋಪ್) ಪು. ಸಂ. ಭಯಂಕರ ಸಿಟ್ಟು, ಕೋಪಾಧಿಕ್ಯ, ಅತಿಶಯತೆ, ಪ್ರಕ್ಷುಬ್ಧತೆ.

**प्रखर** (ಪ್ರಖರ್) ವಿ. ಸಂ. ಅತಿತಪ್ತ, ಚುರುಕು ಹತ್ತುವ, ಭಯಂಕರ, ತೀಕ್ಷ್ಣ, ಹದನಾದ.

**प्रख्या** (ಪ್ರಖ್ಯಾ) ಸ್ತ್ರೀ. ಸಂ. ಕೀರ್ತಿ, ಪ್ರಸಿದ್ಧಿ, ಖ್ಯಾತಿ, ಯಶಸ್ಸು, ಪ್ರತಿಷ್ಠೆ.

**प्रख्यात** (ಪ್ರಖ್ಯಾತ) ವಿ. ಸಂ. ಹೆಸರಾದ, ಖ್ಯಾತಿ ಪಡೆದ, ವಿಖ್ಯಾತ, ಸುಪ್ರಸಿದ್ಧ, ಕುಪ್ರಸಿದ್ಧ.

**प्रगट** (ಪ್ರಗಟ್) ವಿ. '**प्रकट**' ನೋ.

**प्रगटणे** (ಪ್ರಕಟಣೇ) ಕ್ರಿ. ಅ. '**प्रकटणे**' ನೋ.

**प्रगति** (ಪ್ರಗತೀ) ಸ್ತ್ರೀ. ಸಂ. ಮುಂದುವರಿಯುವಿಕೆ, ಹೆಚ್ಚಳ, ಬೆಳಿಗೆ, ವೃದ್ಧಿ, ಅಭಿವೃದ್ಧಿ, ಸುಧಾರಣೆ, ಏಳಿಗೆ, ಏಳ್ಗೆ.

**प्रगल्भ** (ಪ್ರಗಲ್ಭ) ವಿ. ಸಂ. ಜ್ಞಾನಿ, ಗಂಭೀರ, ಜಾಣ, ಪ್ರೌಢ, ಹರೆಯದ, ಹೆದರದ, ನಿರ್ಭೀತ.

**प्रघात** (ಪ್ರಘಾತ್) ಪು. ಸಂ. ರೂಢಿ, ಶೈಲಿ, ನಿಯಮ, ಚಲಾವಣೆ, ಪ್ರಚಾರ, ವಾಡಿಕೆ.

**प्रचंड** (ಪ್ರಚಂಡ) ವಿ. ಸಂ. ಬಹಳ, ಮಹಾ, ಅತ್ಯಂತ, ಅತಿರೇಕದ, ಹೆಚ್ಚಿನ, ಅತಿಯಾದ, ವಿಪರೀತವಾದ.

**प्रचार** (ಪ್ರಚಾರ) ಪು. ಸಂ. ಪ್ರಚಾರ, ಹರಡಿಸುವಿಕೆ, ಹಬ್ಬಿಸುವಿಕೆ.

**प्रचीत** (ಪ್ರಚೀತ್)<br>**प्रचीति** (ಪ್ರಚೀತಿ) ಸ್ತ್ರೀ. } '**प्रती**' ನೋ.

**प्रचुर** (ಪ್ರಚುರ) ವಿ. ಸಂ. ಬಹಳ ಹೆಚ್ಚಾದ, ತುಂಬಿದ, ಹಬ್ಬಿದ, ಸಾಕಷ್ಟು ಇದ್ದ.

**प्रच्छन्न** (ಪ್ರಚ್ಛನ್ನ) ಮುಚ್ಚಿದ, ಹೊದಿಸಿದ, ಗುಪ್ತ, ಸೋಗು ಹಾಕಿದ.

**प्रच्छन्न पातक** (ಪ್ರಚ್ಛನ್ನ ಪಾತಕ್) ನ. ಸಂ. ರಹಸ್ಯದ ಪಾಪ, ಗುಪ್ತಪಾಪ.

**प्रच्छादित** (ಪ್ರಚ್ಛಾದಿತ) ವಿ. ಸಂ. '**प्रच्छन्न**' ನೋ.

**प्रच्छादणे** (ಪ್ರಚ್ಛಾದಣೇ) ಕ್ರಿ.ಸ. ಮುಚ್ಚು, ಹೊದಿಕೆ ಹಾಕು, ಗುಪ್ತವಾಗಿಡು, ಬಚ್ಚಿಡು, ಮುಚ್ಚಿಡು, ಮರೆಮಾಡು.

**प्रजा** (ಪ್ರಜಾ) ಸ್ತ್ರೀ. ಸಂ. ಪ್ರಜೆ, ನಾಗರಿಕ, ಜನರು, ಸಂತಾನ, ಪೀಳಿಗೆ, ಸಂತತಿ, ಮಕ್ಕಳುಮರಿ.

**प्रजापति** (ಪ್ರಜಾಪತಿ) ಪು.ಸಂ. ಪುರುಷಲಿಂಗ, ಬ್ರಹ್ಮ, ರಾಜ ಪುರುಷ, ಜನನೇಂದ್ರಿಯ.

**प्रजोत्पत्ति** (ಪ್ರಜೋತ್ಪತ್ತಿ) ಸ್ತ್ರೀ. ಸಂ. ಮಕ್ಕಳಾಗುವಿಕೆ, ಮಕ್ಕಳು ಹುಟ್ಟುವಿಕೆ, ಸಂತಾನ ಬೆಳೆಯುವಿಕೆ, ಸಂತತಿಹುಟ್ಟುವಿಕೆ.

**प्रजोत्पादन** (ಪ್ರಜೋತ್ಪಾದನ) ನ. ಸಂ. ಮಕ್ಕಳಾಗುವಿಕೆ, '**प्रजोत्पत्ति**' ನೋ.

**प्रज्वलन** (ಪ್ರಜ್ವಲನ) ನ. ಸಂ. ಬೆಂಕಿ ಉರಿಯುವಿಕೆ, ಬೆಂಕಿಹೊತ್ತುವಿಕೆ, ಹುರಿದುಂಬಿಸುವಿಕೆ, ಎಬ್ಬಿಸುವಿಕೆ,

**प्रज्वलित** (ಪ್ರಜ್ವಲಿತ್) ವಿ. ಸಂ. ಉರಿದ, ಬೆಂಕಿ ಹತ್ತಿದ, ಹುರಿದುಂಬಿದ, ರೇಗಿದ.

**प्रणत** (ಪ್ರಣತ್) ವಿ. ಸಂ. ನಮಸ್ಕರಿಸಿದ, ಬಗ್ಗಿದ, ನಮ್ರ, ವಿನಮ್ರಿತ.

**प्रणतवत्सल** (ಪ್ರಣತವತ್ಸಲ) ವಿ. ಸಂ. ಬಡವರ ರಕ್ಷಕ, ಬಡವರ ಮೇಲೆ ಪ್ರೇಮ ಇದ್ದ, ದೀನ ದಯಾಳು.

**प्रणती** (ಪ್ರಣತಿ) ಸ್ತ್ರೀ. ಪಣತಿ. ೨. ನಮಸ್ಕಾರ, ಪೂಜ್ಯಭಾವ, ಸನ್ಮಾನ, ವಂದನೆ, ನಮ್ರತೆ.

**प्रणय** (ಪ್ರಣಯ) ಪು ಸಂ. ಪ್ರೇಮ, ಪ್ರೀತಿ, ನಲುಮೆ.

**प्रणयकोप** (ಪ್ರಣಯ ಕೋಪ) ಪ್ರೇಮಕಲಹ, ಕೂಟ ಜಗಳ, ಪ್ರಣಯಕಲಹ.

**प्रणव** (ಪ್ರಣವ) ಪು.ಸಂ. 'ಓಂ'ಕಾರ ಶಬ್ದ, ಓಂ.

**प्रणाम** (ಪ್ರಣಾಮ) ಪು. ಸಂ. ನಮಸ್ಕಾರ, ವಂದನೆ. ನಮನ, ಮುಜುರೆ.

**प्रणिपात** (ಪ್ರಣಿಪಾತ್) ಪು. ಸಂ. ಸಾಷ್ಟಾಂಗ ನಮಸ್ಕಾರ.

**प्रणीत** (ಪ್ರಣೀತ) ವಿ. ಸಂ. ಸಂಪಾದಿತ, ಕಟ್ಟಿಸಿದ, ಸಂಗ್ರಹಿಸಿದ, ಒಟ್ಟುಮಾಡಿದ, ಸಂಗ್ರಹಿಸಿ ಬರೆದ, ಪ್ರಾರಂಭಿಸಿದ.

**प्रत** (ಪ್ರತ) ಸ್ತ್ರೀ. ಪ್ರತಿ, ನಮೂನೆ, ಮಾದರಿ. (೨) ಅವ್ಯಯ, ಸಂ. ಕಡೆಗೆ, ಕಡೆ.

**प्रतबंदी** (ಪ್ರತಬಂದೀ) ಸ್ತ್ರೀ. ವರ್ಗೀಕರಣ, ಪೃಥಃ ಕರಣ, ವಿಲೇವಾರಿ.

**प्रतवार** (ಪ್ರತವಾರ್) ಕ್ರಿ. ವಿ. ವರ್ಗಾನುಸಾರವಾದ, ಬೇರೆಬೇರೆಯಾದ.

**प्रतवारी** (ಪ್ರತವಾರೀ) ಸ್ತ್ರೀ. ಭೂಮಿಯ ವರ್ಗೀಕರಣ, ಭೂಮಿಯ ಪೃಥಃಕರಣ.

**प्रतारणा** (ಪ್ರತಾರಣಾ) ಸ್ತ್ರೀ. ಸಂ. ಮೋಸ ಮಾಡುವಿಕೆ, ವಂಚಿಸುವಿಕೆ, ಮೋಸ, ವಂಚನೆ.

**प्रताप** (ಪ್ರತಾಪ) ಪು. ಸಂ. ಶೌರ್ಯ, ವೀರ್ಯ, ಯೋಗ್ಯತೆ, ಘನತೆ, ದೊಡ್ಡತನ, ಗಾಂಭೀರ್ಯ, ೨. (ವ್ಯಂಗ್ಯ), ದೋಷ, ದುರ್ಗುಣ.

**प्रतापवान** (ಪ್ರತಾಪವಾನ್) ವಿ. ಸಂ. }
**प्रतापी** (ಪ್ರತಾಪೀ) ವಿ. ಸಂ. } ಶೂರ, ವೀರ, ಯೋಗ್ಯನಾದ, ಘನತೆಯುಳ್ಳ, ಗಂಭೀರನಾದ, ತೇಜಸ್ಸುಳ್ಳ.

**प्रतारक** (ಪ್ರತಾರಕ್) ವಿ. ಸಂ. ಮೋಸಮಾಡುವ, ವಂಚಿಸುವ, ಠಕ್ಕಿಸುವ.

**प्रतारणा** (ಪ್ರತಾರಣಾ) ಸ್ತ್ರೀ. ಸಂ. ಮೋಸ.

**प्रतारणे** (ಪ್ರತಾರಣೇ) ಕ್ರಿ. ಸಂ. ಮೋಸಮಾಡು, ವಂಚಿಸು, ಠಕ್ಕಿಸು.

**प्रती** (ಪ್ರತಿ) ಅವ್ಯಯ. ಸಂ. ಕಡೆಗೆ, ಕಡೆ.

**प्रतिकाय** (ಪ್ರತಿಕಾಯ) ಪು. ಸಂ. ಪ್ರತಿಮೆ, ಪುತ್ತಳಿ, ನಾಣ್ಯದ ಮೇಲಿನ ರೂಪ.

**प्रतिकार** (ಪ್ರತಿಕಾರ) ಪು. ಸಂ. ಉಪಾಯ, ವಿರೋಧ, ಔಷಧ, ವಿಷಹಾರಿ, ಪ್ರತಿಔಷಧ.

**प्रतिकूल** (ಪ್ರತಿಕೂಲ) ವಿ. ಸಂ. ಅಡ್ಡಿಮಾಡುವ, ಸರಿಹೊಂದದ, ವಿರುದ್ಧವಾದ.

**प्रतिकृति** (ಪ್ರತಿಕೃತಿ) ಸ್ತ್ರೀ. ಸಂ. ಅನುಕರಣ, ಪ್ರತಿಮೆ.

**प्रतिक्रिया** (ಪ್ರತಿಕ್ರಿಯಾ) ಸ್ತ್ರೀ. ಸಂ. ಕೃತ್ಯದ ವಿಷಯದ ವಿರುದ್ಧ ಕೃತ್ಯ. ೨. ಮತಪ್ರದರ್ಶನ.

**प्रतिग्रहीत** (ಪ್ರತಿಗೃಹೀತ್) ವಿ. ಸಂ. ಒಪ್ಪಿದ, ಅನುಗ್ರಹಿಸಿದ.

**प्रतिग्रह** (ಪ್ರತಿಗ್ರಹ) ಪು. ಸಂ. ಅನುಗ್ರಹ.

**प्रतिघात** (ಪ್ರತಿಘಾತ) ಪು. ಸಂ. ಮಾರುತ್ತರ. ೨. ಪ್ರತಿಕ್ರಿಯೆ.

**प्रतिछाया** (ಪ್ರತಿಛಾಯಾ) ಸ್ತ್ರೀ. ಸಂ. ನೆರಳು, ಬಿಂಬ, ಛಾಯೆ, ಜತೆಗಾರ, ಭೂತ, ಪಿಶಾಚಿ.

**प्रतिदिन–नी** (ಪ್ರತಿದಿನ–ನೀ) ಕ್ರಿ. ವಿ. ದಿನಾಲೂ, ಸತತ.

**प्रतिध्वनि** (ಪ್ರತಿಧ್ವನಿ) ಪು. ಸಂ. ಮರುಧ್ವನಿ, ಸರಿಯಾದ ಅನುಕರಣೆ, ಪ್ರತಿಧ್ವನಿ.

**प्रतिवाद** (ಪ್ರತಿವಾದ) ಪು. ಪ್ರತಿಭಟನೆ, ವಿರುದ್ಧ ಪಕ್ಷದ ಹೇಳಿಕೆ.

**प्रतिनिधि** (ಪ್ರತಿನಿಧಿ) ಪು. ಸಂ. ವಕೀಲ, ಪ್ರತಿನಿಧಿ.

**प्रतिपदा** (ಪ್ರತಿಪದಾ) ಸ್ತ್ರೀ. ಸಂ. ಪ್ರತಿಪದೆ, ಪಾಡ್ಯ.

**प्रतिपक्ष** (ಪ್ರತಿಪಕ್ಷ) ಪು. ಸಂ. ಎದುರುಪಕ್ಷ, ವಿರೋಧಿ ಪಕ್ಷ, ವಿರೋಧಿ ಪಂಗಡ, ಶತ್ರುಪಕ್ಷ.

**प्रतिपक्षी** (ಪ್ರತಿಪಕ್ಷೀ) ಪು. ಸಂ. ವಿರುದ್ಧ ಪಕ್ಷ, ಪಂಗಡ, ಎದುರಾಳಿ, ಪ್ರತಿವಾದಿ.

**प्रतिपादणे** (ಪ್ರತಿಪಾದಣೇ) ಕ್ರಿ. ಸ. ಮಂಡಿಸು, ಸಿದ್ಧ ಮಾಡು, ಸಿದ್ಧಪಡಿಸು.

**प्रतिपादन** (ಪ್ರತಿಪಾದನ) ನ. ಸಂ. ಮಂಡಿಸುವಿಕೆ, ಸಿದ್ಧಮಾಡುವಿಕೆ.

**प्रतिपाल** (ಪ್ರತಿಪಾಲ) ಪು. ಸಂ. }
**प्रतिपालन** (ಪ್ರತಿಪಾಲನ್) ನ. } ರಕ್ಷಣೆ, ಜೋಪಾನ ಮಾಡುವಿಕೆ, ಸಲಹುವಿಕೆ, ಪೋಷಣೆ, ಪಾಲನ, ಬೆಂಬಲ.

**प्रतिपालणे** (ಪ್ರತಿಪಾಲಣೆ) ಕ್ರಿ. ಸ. ರಕ್ಷಿಸು, ಜೋಪಾನ ಮಾಡು, ಸಲಹು, ಪೋಷಿಸು, ಸಾಕು, ಸಂರಕ್ಷಿಸು. ಇಟ್ಟುಕೊಂಡಿರು.

**प्रतिपाळ** (ಪ್ರತಿಪಾಳ್) '**प्रतिपाल**' ನೋ.

**प्रतिपाळक** (ಪ್ರತಿಪಾಳಕ್) ಪು. ರಕ್ಷಿಸುವ.

**प्रतिपाळण** (ಪ್ರತಿಪಾಳಣ) ನ. ರಕ್ಷಣೆ.

**प्रतिपाळणे** (ಪ್ರತಿಪಾಳಣೇ) ಕ್ರಿ. ಸ. ರಕ್ಷಿಸು.

**प्रतिफल** (ಪ್ರತಿಫಲ್) ನ. ಸಂ. ಪ್ರತಿಫಲ, ಪರಿಣಾಮ, ಬದಲು ಹಣ ಕೊಡುವಿಕೆ.

**प्रतिबद्ध** (ಪ್ರತಿಬದ್ಧ) ವಿ. ಸಂ. ನಿರೋಧಿತ, ತಡೆ ಹಾಕಿದ, ಅಡ್ಡಿಮಾಡಿದ, ಕಟ್ಟಿಹಾಕಿದ, ಪ್ರತಿಬಂಧ ಮಾಡಿದ.

**प्रतिबंध** (ಪ್ರತಿಬಂಧ) ಪು. ಸಂ. ವಿರೋಧ, ಅಡ್ಡಿ, ತಡೆ, ಪ್ರತಿಬಂಧ, ಆತಂಕ, ತೊಂದರೆ.

**प्रतिबिंब** (ಪ್ರತಿಬಿಂಬ) ಪು. ಸಂ. ಪ್ರತಿರೂಪ, ಪ್ರತಿಛಾಯೆ, ಪರಾವರ್ತನೆ, ಪ್ರತಿಬಿಂಬ.

**प्रतिबिंबणे** (ಪ್ರತಿಬಿಂಬಣೇ) ಕ್ರಿ. ಅ. ಮನವರಿಕೆಯಾಗು.

**प्रतिभास** (ಪ್ರತಿಭಾಸ) ಪು. ಸಂ. ಬಾಹ್ಯರೂಪ, ಹೋಲಿಕೆ, ತಿಳುವಳಿಕೆ, ಉಪಮೆ.

**प्रतिभू** (ಪ್ರತಿಭೂ) ಸ್ತ್ರೀ. ಸಂ. ಜಾಮೀನು, ಅಡವು, ಈಡು, ಹೊಣೆ. **प्रतिकाय** ನೋ.

**–प्रतिम** (–ಪ್ರತಿಮ) ಅವ್ಯಯ. ಅಂಥ ಹೊಂದುವ.

**प्रतिमा** (ಪ್ರತಿಮಾ) ಸ್ತ್ರೀ. ಸಂ. ಮೂರ್ತಿ, ಪ್ರತಿಮೆ, ಗೊಂಬೆ, ಬೊಂಬೆ.

**प्रतिलोम** (ಪ್ರತಿಲೋಮ) ಪು. ನ. ವ್ಯಸ್ತ, ವಾಡಿಕೆಯ ವಿರುದ್ಧ, ವಿಪರೀತ (ವಿವಾಹ).

**प्रतिवचन** (ಪ್ರತಿವಚನ) ನ. ಸಂ. ಪ್ರತ್ಯುತ್ತರ, ಎದುರುತ್ತರ, ಎದುರುಮಾತಾಡುವಿಕೆ.

**प्रतिवाद** (ಪ್ರತಿವಾದ) ಪು. ಸಂ. ಮಾರುನುಡಿ, ಎದುರು ನುಡಿ.

**प्रतिवादी** (ಪ್ರತಿವಾದೀ) ಪ್ರತಿಪಕ್ಷದವ.

**प्रतिवार्षिक** (ಪ್ರತಿವಾರ್ಷಿಕ) ವಿ. ಸಂ. ಪ್ರತಿವರ್ಷದ, ವರ್ಷವರ್ಷದ.

**प्रतिशब्द** (ಪ್ರತಿಶಬ್ದ) ಪು. ಸಂ. ಪ್ರತಿಧ್ವನಿ, ಮಾರು ಸಪ್ಪಳ, ಮಾರು ಮಾತು.

**प्रतिषिद्ध** (ಪ್ರತಿಷಿದ್ಧ) ವಿ. ಸಂ. ಪ್ರತಿಭಟಿಸಿದ, ನಿಷಿದ್ಧ.

**प्रतिषेधणे** (ಪ್ರತಿಷೇಧಣೇ) ಕ್ರಿ. ಸಂ. ನಿಷೇಧಿಸು, ಬೇಡವೆನ್ನು, ಧಿಕ್ಕರಿಸು.

**प्रतिष्ठा** (ಪ್ರತಿಷ್ಠಾ) ಸ್ತ್ರೀ. ಸ. ದೊಡ್ಡತನ, ಹಿರಿಮೆ, ಮಾನ, ಗೌರವ, ಕೀರ್ತಿ, ಪ್ರತಿಷ್ಠೆ, ಸನ್ಮಾನ, ಬಿರುದು.

**प्रतिष्ठित** (ಪ್ರತಿಷ್ಠಿತ) ವಿ. ಸಂ. ಗೌರವದ, ಸನ್ಮಾನಿತ, ಪ್ರತಿಷ್ಠಿತ, ಬಿರುದಿನ, ಕೀರ್ತಿಯುತ.

**प्रतिस्पर्धा** (ಪ್ರತಿಸ್ಪರ್ಧಾ) ಸ್ತ್ರೀ. ಸಂ. ಸ್ಪರ್ಧೆ, ಪಂದ್ಯ, ಪಂದ್ಯಾಟ.

**प्रतिस्पर्धी** (ಪ್ರತಿಸ್ಪರ್ಧೀ) ವಿ. ಸಂ. ಸ್ಪರ್ಧೆಮಾಡುವವ, ಸ್ಪರ್ಧಿಸುವವ.

**प्रतिज्ञा** (ಪ್ರತಿಜ್ಞಾ) ಸ್ತ್ರೀ. ಸಂ. ಪ್ರತಿಜ್ಞೆ, ಪಣ, ಆಣೆ, ಕೊಟ್ಟಮಾತು, ಅಭಿವಚನ, ಭರವಸೆ, ಆಶಯ, ಲಕ್ಷಣ.

**प्रतीक** (ಪ್ರತೀಕ) ನ. ಸಂ. ಕುರುಹು, ಸಂಕೇತ.

**प्रतीकार** (ಪ್ರತೀಕಾರ) ಪು. ಸಂ. '**प्रतिकार**' ನೋ.

**प्रतीची** (ಪ್ರತೀಚೀ) ಸ್ತ್ರೀ. ಪಶ್ಚಿಮದಿಕ್ಕು, ಪಶ್ಚಿಮ.

**प्रतीत** (ಪ್ರತೀತ) ಸ್ತ್ರೀ. } ಅನುಭವ, ಪ್ರತೀತಿ, ಅನು
**प्रतीति** (ಪ್ರತೀತಿ) ಸ್ತ್ರೀ. } ಭೋಗ.

**प्रतीतीस येणे** (ಪ್ರತೀತೀಸ್ ಯೇಣೇ) ಅನುಭವಕ್ಕೆ ಬರು, ಗೊತ್ತಾಗು, ಮನವರಿಕೆಯಾಗು.

**प्रतीक्षणे** (ಪ್ರತೀಕ್ಷಣೇ) ಕ್ರಿ. ಸ. ಹಾದಿನೋಡು, ದಾರಿನೋಡು, ನಿರೀಕ್ಷಿಸು, ಕಲ್ಪಿಸು.

**प्रतीक्षा** (ಪ್ರತೀಕ್ಷಾ) ಸ್ತ್ರೀ. ಸಂ. ಹಾದಿನೋಡುವಿಕೆ, ಎದುರುನೋಡುವಿಕೆ, ದಾರಿಕಾಯುವಿಕೆ, ನಿರೀಕ್ಷಿಸುವಿಕೆ.

**प्रतोद** (ಪ್ರತೋದ್) ಪು. ಸಂ. ಚಾಬೂಕು. ೨. ಪಕ್ಷದ ಜನರಿಗೆ ಆಜ್ಞೆ (ಮತಕೊಡುವುದಕ್ಕೆ) ಮಾಡುವವ.

**प्रत्यंग** (ಪ್ರತ್ಯಂಗ) ನ. ಸಂ. ಘಟಕ, ಒಂದು ಸಂಘದ ಸಾಮಾನ್ಯ ಸದಸ್ಯ, ಸಂಸ್ಥೆಯ ಸಭಾಸದ.

**प्रत्यंचा** (ಪ್ರತ್ಯಂಚಾ) ಸ್ತ್ರೀ. ಧನುವಿನ ಗುಣ, ಧನುಸ್ಸಿನ ಗುಣ, ಬಿಲ್ಲಿನ ದಾರ.

**प्रत्यंतर** (ಪ್ರತ್ಯಂತರ) ನ. ಸಂ. ಅನುಭವ, ಮನವರಿಕೆ.

**प्रत्यय** (ಪ್ರತ್ಯಯ) ಪು. ಸಂ. ಅನುಭವ, ನಿದರ್ಶನ, ಪ್ರತೀತಿ, ಅನುಭೋಗ, (ವ್ಯಾಕರಣದಲ್ಲಿ) ಪ್ರತ್ಯಯ.

**प्रत्यवाय** (ಪ್ರತ್ಯವಾಯ) ಪು. ಸಂ. ಅಡ್ಡಿ, ಆತಂಕ.

**प्रत्यही** (ಪ್ರತ್ಯಹೀ) ಕ್ರಿ. ವಿ. ದಿನಂಪ್ರತಿ.

**प्रत्यक्ष** (ಪ್ರತ್ಯಕ್ಷ) ವಿ. ಸಂ. ಕಣ್ಣೆದುರಿನ.

**प्रत्यक्षास प्रमाण कशाला?** (ಪ್ರತ್ಯಕ್ಷಾಸ್ ಪ್ರಮಾಣ ಕಶಾಲಾ?) ಪ್ರತ್ಯಕ್ಷ ಸಂಗತಿಗೆ ಸಾಕ್ಷಿ ಏಕೆ?

**प्रत्यक्ष प्रमाण** (ಪ್ರತ್ಯಕ್ಷ ಪ್ರಮಾಣ) ನ. ಸಂ. (ತರ್ಕಶಾಸ್ತ್ರದಲ್ಲಿ) ಕಣ್ಣಿನಿಂದ ನೋಡಿದುದರ ಸಾಕ್ಷಿ.

**प्रत्याख्यात** (ಪ್ರತ್ಯಾಖ್ಯಾತ) ವಿ. ಸಂ. ತಿರಸ್ಕೃತ, ವಿರೋಧಿತ, ಅಪಕೀರ್ತಿಹೊಂದಿದ, ದುಷ್ಕೀರ್ತಿತ.

**प्रत्याघात** (ಪ್ರತ್ಯಾಘಾತ) ಪು. ಸಂ. ಮತಪ್ರದರ್ಶನ.

**प्रत्यसन्न** (ಪ್ರತ್ಯಾಸನ್ನ) ವಿ. ಸಂ. ಹತ್ತಿರವಿದ್ದ, ಸಮೀಪಸ್ಥ.

**प्रत्याहार** (ಪ್ರತ್ಯಾಹಾರ) ಪು. ಸಂ. ವಿಷಯಗಳಿಂದ ಇಂದ್ರಿಯಗಳನ್ನು ಪರಾವರ್ತಿಸುವಿಕೆ, ನಿಗ್ರಹ, ಲೋಪ. (ವ್ಯಾಕರಣ) ಸಂಯಮ, ಯೌಗಿಕ ಸಾಧನೆ.

**प्रत्युत्तर** (ಪ್ರತ್ಯುತ್ತರ) ನ. ಸಂ. ಎದುರುತ್ತರ, '**प्रतिवचन**' ನೋ.

**प्रत्युपकार** (ಪ್ರತ್ಯುಪಕಾರ) ಪು. ಸಂ. ಪ್ರತ್ಯುಪಕಾರ, ಉಪಕಾರ ತೀರಿಸುವಿಕೆ, ತಿರುಗಿ ಉಪಕಾರ ಮಾಡುವಿಕೆ.

**प्रत्येक** (ಪ್ರತ್ಯೇಕ್) ವಿ. ಸಂ. ಪ್ರತಿಯೊಬ್ಬ, ಪ್ರತಿಯೊಂದು. ಕ್ರಿ. ವಿ. ಬೇರೆ ಬೇರೆ, ಬೇರೆಬೇರೆಯಾಗಿ, ಸ್ವತಂತ್ರವಾಗಿ.

**प्रथम** (ಪ್ರಥಮ್) ವಿ. ಸಂ. ಮೊದಲಿನವ, ಮೊದಲಿನ, ಮುಖ್ಯ.

**प्रथमचरण** (ಪ್ರಥಮುಚರಣ) ನ. ಸಂ. ಮೊದಲನೇ ಪದ, ಪಂಕ್ತಿ.

**प्रथमदर्शनी** (ಪ್ರಥಮುದರ್ಶನೀ) ಕ್ರಿ. ವಿ. ನೋಡಿದ ಕೂಡಲೇ, ದರ್ಶನವಾದೊಡನೆ.

**प्रथमपुरूष** (ಪ್ರಥಮುಪುರುಷ) ಪು. ಸಂ. (ವ್ಯಾಕರಣ ದಲ್ಲಿ) ತೃತೀಯ ಪುರುಷ.

**प्रथमा** (ಪ್ರಥಮಾ) ವಿ. ಸಂ. ಪ್ರಥಮಾವಿಭಕ್ತಿ (ವ್ಯಾಕರಣದಲ್ಲಿ), ಮೊದಲನೆಯ ತಿಥಿ.

**प्रथमारंभ** (ಪ್ರಥಮಾರಂಭ) ಪು. ಸಂ. ಮೂಲಾರಂಭ, ಆರಂಭ.

**प्रथा** (ಪ್ರಥಾ) ಸ್ತ್ರೀ. ಸಂ. ರೂಢಿ, ವಾಡಿಕೆ, ಸಂಪ್ರ ದಾಯ, ಕೀರ್ತಿ, ಲೋಕಮತ.

**प्रथित** (ಪ್ರಥಿತ) ವಿ. ಸಂ. ಪ್ರಸಿದ್ಧವಾದ, ಕೀರ್ತಿ ಹೊಂದಿದ, ಹೆಸರಾದ.

**–प्रद** (–ಪ್ರದ) (ಉಪಸರ್ಗ) ಸಂ. ಕೊಡುವ, ನೀಡುವ, ದಾನಮಾಡುವ.

**प्रदर** (ಪ್ರದರ) ಪು. ಸಂ. ಸ್ತ್ರೀಯರ ಒಂದು ರೋಗ, ಪ್ರದರರೋಗ, ಹೆಚ್ಚು ಮೈಮೇಲೆ ಹೋಗುವ ರೋಗ.

**प्रदर्शक** (ಪ್ರದರ್ಶಕ) ವಿ. ಸಂ. ತೋರಿಸುವ, ಪ್ರತ್ಯಕ್ಷ ದರ್ಶಿ, ಸಿದ್ಧಪಡಿಸುವ, ವ್ಯಕ್ತಗೊಳಿಸುವ.

**प्रदर्शन** (ಪ್ರದರ್ಶನ) ನ. ಸಂ. ತೋರಿಸುವಿಕೆ, **प्रतिकृति** ನೋ. ವಸ್ತುಪ್ರದರ್ಶನ, ವ್ಯಕ್ತಪಡಿಸುವಿಕೆ.

**प्रदर्शविणे** (ಪ್ರದರ್ಶವಿಣೇ) ಕ್ರಿ. ಸಂ. ತೋರಿಸು, ವ್ಯಕ್ತಪಡಿಸು, ಪ್ರದರ್ಶಿಸು.

**प्रदक्षिणा** (ಪ್ರದಕ್ಷಿಣಾ) ಸ್ತ್ರೀ. ಸಂ. ಸುತ್ತುತಿರುಗು ವಿಕೆ, ಪ್ರದಕ್ಷಿಣೆ.

**प्रदाता** (ಪ್ರದಾತಾ) ಪು. ಸಂ. ಕೊಡುವವ, ದೊಡ್ಡ ಮನಸ್ಸಿನ, ಕೊಡುಗೈಯ.

**प्रदान** (ಪ್ರದಾನ) ನ. ಸಂ. ದಾನ, ಕೊಡುವಿಕೆ, ಸಲ್ಲಿ ಸುವಿಕೆ.

**प्रदीपन** (ಪ್ರದೀಪನ) ನ. ಸಂ. ಹೊತ್ತಿಸುವಿಕೆ, ಬೆಂಕಿ ಹಚ್ಚುವಿಕೆ, ಹುರಿದುಂಬಿಸುವಿಕೆ, ತಲೆಎಬ್ಬಿಸುವಿಕೆ.

**प्रदीप्त** (ಪ್ರದೀಪ್ತ) ವಿ. ಸಂ. ಪ್ರಜ್ವಲಿತ.

**प्रदेश** (ಪ್ರದೇಶ) ಭೂಮಿ, ಸ್ಥಾನ, ನೆಲ, ಜಾಗೆ, ಸ್ಥಳ, ಪ್ರದೇಶ, ವಾಸಸ್ಥಳ, ಊರು, ಗ್ರಾಮ, ಹಳ್ಳಿ.

**प्रदोष** (ಪ್ರದೋಷ) ಪು. ಸಂಜೆ, ರಾತ್ರಿಯ ಮೊದಲಿನ ಭಾಗ, ಧಾರ್ಮಿಕವ್ರತ, ಶಿವಪೂಜೆಯುವ್ರತ, ಶುದ್ಧ ತ್ರಯೋದಶಿ ದಿನ.

**प्रदोषकाल** (ಪ್ರದೋಷಕಾಲ್) ಪು. ಸಂ. ಸಂಧ್ಯಾ ಕಾಲ, ಸಂಜೆಯಕಾಲ, ಮೂರುಸಂಜೆ(ಪಂಚಾಂಗ) ಶುದ್ಧತ್ರಯೋದಶಿಯ ಸಂಜೆ.

**प्रधान** (ಪ್ರಧಾನ್) ಪು. ಸಂ. ಮುಖ್ಯಸ್ಥ, ಮಹಾ ಮಂತ್ರಿ, ಪ್ರಧಾನಿ, ವಾಡಿಕೆ, ಮುಖ್ಯ ರೂಢಿಯ. (ಸಾಂಖ್ಯ ಶಾಸ್ತ್ರದಲ್ಲಿ) ಸೃಷ್ಟಿ ೨. ವಿ. ಮುಖ್ಯವಾದ ಶ್ರೇಷ್ಠ.

**प्रध्वंस** (ಪ್ರಧ್ವಂಸ) ಪು. ಸಂ. ನಾಶ, ಸಂಪೂರ್ಣ ನಾಶ, ಹಾಳಾಗುವಿಕೆ.

**प्रपंच** (ಪ್ರಪಂಚ) ಪು. ಸಂ. ಜಗತ್ತು, ವಿಶ್ವ. ೨. ಬಾಳು, ಜೀವನ, ಕುಟುಂಬ. ೩. ಹೆಂಡತಿಮಕ್ಕಳು.

**प्रपंची** (ಪ್ರಪಂಚೀ) ವಿ. ಸಂ. ಸಂಸಾರದಲ್ಲಿ ಮುಳು ಗಿದ, ಗೃಹಸ್ಥ, ಲೌಕಿಕ, ಇಹಲೋಕ ವ್ಯವಹಾರಿ, ಪ್ರಪಂಚದಲ್ಲಿ ಮುಳುಗಿದ.

**प्रपिता** (ಪ್ರಪಿತಾ) ಪು. ಸಂ. ಅಜ್ಜ, ಆರ್ಯ, ತಂದೆಯ ತಂದೆ.

**प्रपितामह** (ಪ್ರಪಿತಾಮಹ) ಪು. ಸಂ. ಮುತ್ತಜ್ಜ.

**प्रपितामही** (ಪ್ರಪಿತಾಮಹೀ) ಸ್ತ್ರೀ. ಸಂ. ಮುತ್ತಜ್ಜಿ, ತಂದೆಯತಾಯಿ.

**प्रपौत्र** (ಪ್ರಪೌತ್ರ) ಪು. ಸಂ. ಮೊಮ್ಮಗನ ಮಗ, ಮೊಮ್ಮಗಳ ಮಗನು.

**प्रपौत्री** (ಪ್ರಪೌತ್ರೀ) ಸ್ತ್ರೀ. ಸಂ. ಮೊಮ್ಮಗನ ಮಗಳು, ಮೊಮ್ಮಗಳ ಮಗಳು.

**प्रफुल्ल** (ಪ್ರಫುಲ್ಲ) **प्रफुल्लित** (ಪ್ರಫುಲ್ಲಿತ) ವಿ. ಸಂ. ಸುಂದರ, ಅರಳಿದ, ವಿಕಸಿತ, ಆನಂದಿತ, ಉತ್ಸಾ ಹಿತ, ಸ್ಫೂರ್ತಿಕರ, ಉಲ್ಲಸಿತ, ಶೋಭಾಯಮಾನ.

**प्रबंध** (ಪ್ರಬಂಧ) ಪು. ಸಂ. ಪ್ರಬಂಧ, ರಚನೆ, ಕೃತಿ, ಕರಾರು.

**प्रबल–ळ** (ಪ್ರಬಲ್–ಳ್) ವಿ. ಸಂ. ಶೂರ, ಬಲಿಷ್ಠ, ಸಶಕ್ತ, ಬಲವಂತ, ಭಯಂಕರ, ಪ್ರಚಂಡ, ಪ್ರಮುಖ.

**प्रबोध** (ಪ್ರಬೋಧ) ಪು. ಸಂ. ಸುಭೋಧ, ಉಪ ದೇಶ, ಮಹೋಪದೇಶ, ಜಾಗರೂಕತೆ. ೨. ಎಚ್ಚ ರಿಕೆ, ಶಿಕ್ಷಣ.

**प्रभंजन** (ಪ್ರಭಂಜನ) ಪು. ಸಂ ಭಯಂಕರ. ೨. ವಿ. ಹನುಮಂತ, ಹವೆ, ಗಾಳಿ, ಮಾರುತ.

**प्रभव** (ಪ್ರಭವ) ಪು. ಸಂ. ಮೊದಲನೆಯ ಸಂವತ್ಸರ, ಸಾಮರ್ಥ್ಯ, ಬಲ, ಶಕ್ತಿ, ಜೀವನದ ಆದ್ಯಕಾರಕ, ಜನ್ಮ, ಹುಟ್ಟು.

**प्रभा** (ಪ್ರಭಾ) ಸ್ತ್ರೀ. ಸಂ. ಕಾಂತಿ, ಶ್ರೇಯಸ್ಸು, ಪ್ರಕಾಶಜ್ಯೋತಿ, ವೈಭವ, ಜ್ಞಾನ.

**प्रभाकर** (ಪ್ರಭಾಕರ) ಪು. ಸಂ. ಸೂರ್ಯ, ಭಾಸ್ಕರ, ರವಿ, ಮಾರ್ತಂಡ.

**प्रभात** (ಪ್ರಭಾತ್) ಪು. ಸಂ. ಮುಂಜಾವು, ಉಷಃ ಕಾಲ, ಬೆಳಗು, ಅರುಣೋದಯ.

**प्रभागजाति** (ಪ್ರಭಾಗಜಾತಿ) ಸ್ತ್ರೀ. ಸಂ. **प्रभागजाति अपूर्णांक** (ಪ್ರಭಾಗಜಾತಿ ಅಪೂರ್ಣಾಂಕ) ಪು. ಸಂ. ಅಪೂರ್ಣಾಂಕದ ಒಂದು ಪ್ರಕಾರ, ಪ್ರಭಾಗಜಾತಿ ಅಪೂರ್ಣಾಂಕ.

**प्रभाव** (ಪ್ರಭಾವ) ಪು. ಸಂ. ಪರಿಣಾಮು, ಯೋಗ್ಯತೆ, ಘನತೆ, ದೊಡ್ಡಸ್ತಿಕೆ, ಗಾಂಭೀರ್ಯ, ಪ್ರತಾಪ, ಮಹಿಮೆ, ವೈಭವ, ಭವ್ಯತೆ, ಐಶ್ವರ್ಯ.

**प्रभावळ** (ಪ್ರಭಾವಳ್) ಸ್ತ್ರೀ. ಕಾಂತಿಸಮೂಹ, ಮೂರ್ತಿಯ ಹಿನ್ನೆಲೆಯ ದೇವತೆಗಳು, ಪ್ರಭಾವಳಿ.

**प्रभास** (ಪ್ರಭಾಸ) ಪು. ಸಂ. ಒಂದು ಪಟ್ಟಣ, ಯಾತ್ರಾಸ್ಥಾನ, ದ್ವಾರಕೆಯ ಹತ್ತಿರದ ಯಾತ್ರಾ ಸ್ಥಳ, ಪ್ರಭಾಸಕ್ಷೇತ್ರ. (ಕಾಠೇವಾಡದಲ್ಲಿ)

**प्रभु** (ಪ್ರಭು) ಪು. ಸಂ. ದೇವರು, ಒಡೆಯ, ಯಜಮಾನ, ಗಂಡ, ಪತಿ, ಈಶ್ವರ, ರಾಜಾಧಿರಾಜ.

**प्रभृति** (ಪ್ರಭೃತಿ) ಅವ್ಯಯ ೧. ಮುಂತಾದವರು ೨. ಮೊದಲುಗೊಂಡು.

**प्रमत्त** (ಪ್ರಮತ್ತ) ವಿ. ಸಂ. ಸೊಕ್ಕಿನ, ಮದಾಂಧ, ಸೊಕ್ಕೇರಿದ, ಗರ್ವದ, ಪ್ರಮತ್ತ, ಉದ್ಧತ, ಕುಡಿದ.

**प्रमदा** (ಪ್ರಮದಾ) ಸ್ತ್ರೀ. ಸಂ. ಸುಂದರಸ್ತ್ರೀ, ಸ್ತ್ರೀ.

**प्रमाण** (ಪ್ರಮಾಣ) ನ. ಸಂ. ಆಧಾರ, ಸಾಕ್ಷಿ, ಪುರಾವೆ, ಅಳತೆ, ಪರೀಕ್ಷೆ, ದೃಷ್ಟಾಂತ, ಉದಾಹರಣೆ.

**प्रमाणभूत** (ಪ್ರಮಾಣಭೂತ) ವಿ. ಸಂ. ಸಾಧಾರವಾದ, ಸಾಕ್ಷಿಸಹಿತ ಇದ್ದ, ಸತ್ಯ, ಪ್ರಾಮಾಣಿಕ ನ್ಯಾಯ, ಯೋಗ್ಯ, ಅಂಗೀಕೃತ, ನಿಜ, ಸಮ.

**प्रमाणांक** (ಪ್ರಮಾಣಾಂಕ) ಪು. ಸಂ. ಪ್ರಮಾಣ ಸಂಖ್ಯೆ, ಪ್ರಮಾಣದ ಅಂಕೆ, ತ್ರೈರಾಶಿಕದ ಮೊದಲನೆಯ ಸಂಖ್ಯಾರಾಶಿ, ಯುಗ್ಮ.

**प्रमाणे** (ಪ್ರಮಾಣೇ) ಕ್ರಿ. ವಿ. ಆದರಂತೆ, ಆ ಪ್ರಕಾರ, ಅನುಸಾರ, ಹಾಗೆ, ಅನುರೂಪವಾಗಿ.

**प्रमाद** (ಪ್ರಮಾದ) ಪು. ಸ. ದೋಷ, ತಪ್ಪು, ಪ್ರಮಾದ, ಕಲಂಕ, ಘೋರತಪ್ಪು, ಅಪರಾಧ.

**प्रमित** (ಪ್ರಮಿತ) ವಿ. ಸಂ. ಮಿತವಾದ, ಹಾಳತಾದ, ಸಮ್ಮಿತ,ಅಳತೆಯ, ಪ್ರತಿಷ್ಠಾಪಿತ, ಸಪ್ರಮಾಣಿತ.

**प्रमिति** (ಪ್ರಮಿತಿ) ಸ್ತ್ರೀ ಸಂ. ಅಳತೆ, ಪ್ರತಿಷ್ಠಾಪನೆ, ಸತ್ಯಜ್ಞಾನ, ಯೋಗ್ಯ ಕಲ್ಪನೆ, ಪ್ರಮಾಣ, ಅರಿವು.

**प्रमेय** (ಪ್ರಮೇಯ) ನ. ಸಿದ್ಧಾಂತ, ನಿಸರ್ಗಸಿದ್ಧ ಸಂಗತಿ, ಸ್ವಭಾವಸಿದ್ಧ ಗಣಿತ, ಪ್ರಮೇಯ.

**प्रमुख** (ಪ್ರಮುಖ) ವಿ. ಸಂ. ಮುಖ್ಯ, ಮುಂದಾಳಾದ, ಸರ್ವೋತ್ಕೃಷ್ಟ.

**प्रमेह** (ಪ್ರಮೇಹ) ಪು. ಸಂ. ಪರಂಗಿ ರೋಗ, ಸಿಫಿಲಿಸ್, ಗುಪ್ತರೋಗ.

**प्रमोद** (ಪ್ರಮೋದ) ಪು. ಸ. ಸಮಾಧಾನ, ತೃಪ್ತಿ, ಸಂತೋಷ, ಆನಂದ, ಸುಖ, ಭೋಗ, ಇಚ್ಛೆ, ಮೆಚ್ಚಿಗೆ.

**प्रमोदित** (ಪ್ರಮೋದಿತ) ವಿ. ಸಂ. ಸಮಾಧಾನ ಹೊಂದಿದ, ಸಂತುಷ್ಟ, ಆನಂದಿತ, ಸುಖದಾಯಕ.

**प्रयत्न** (ಪ್ರಯತ್ನ) ಪು. ಸಂ. ಯತ್ನ, ಸಾಹಸ, ಪ್ರಯತ್ನ, ಖಟಪಟಿ, ಧಾವತಿ, ಪ್ರಯಾಸ, ಎತ್ತುಗಡೆ.

**प्रयत्नांती परमेश्वर** (ಪ್ರಯತ್ನಾಂತೀ ಪರಮೇಶ್ವರ) ಪ್ರಯತ್ನಮಾಡಿದ ಮೇಲೆ ಪರಮೇಶ್ವರನ ಸಹಾಯ ದೊರಕುವುದು.

**प्रयाग** (ಪ್ರಯಾಗ್) ಪು.ಸಂ. ಪ್ರಯಾಗ ಕ್ಷೇತ್ರ. ಅಲಾಹಾಬಾದ್.

**प्रयागवळ** (ಪ್ರಯಾಗವಳ್) ಪು. ಪ್ರಯಾಗದ ಉಪಾಧ್ಯಾಯ, ಪಂಡಾ, ಪಾಳಿಯ ಪೂಜಾರಿ, ಅರ್ಚಕ.

**प्रयाण** (ಪ್ರಯಾಣ) ನ. ಸಂ. ಯಾತ್ರೆಗೆ ಹೋಗುವಿಕೆ, ಹೊರಡುವಿಕೆ, ಅಗಲುವಿಕೆ, ಮೃತ್ಯು.

**प्रयास** (ಪ್ರಯಾಸ) ಪು. ಸಂ. ಆಯಾಸ, ವಿಶ್ವ ಪ್ರಯತ್ನ, ಅತಿಕಷ್ಟ, ವೇದನೆ.

**प्रयुक्त** (ಪ್ರಯುಕ್ತ) ವಿ. ಸಂ. ಕೂಡಿದ, ಸರಿಯಾದ, ಕೂಡಿಕೊಂಡ, ಹೊಂದಿದ, ಹೊಂದಿಕೊಂಡ, ೨. (ಪ್ರತ್ಯಯ) ಮೂಲಕದಿಂದ.

**प्रयुक्ति** (ಪ್ರಯುಕ್ತಿ) ಸ್ತ್ರೀ.ಸಂ. ಪರಿಣಾಮ, ಮುಖ್ಯೋದ್ದೇಶ, ಪ್ರಧಾನಹೇತು, ಮರ್ಯಾದೆ, ಗುರಿ.

**प्रयुत** (ಪ್ರಯುತ) ನ. ಸಂ. ದಶಲಕ್ಷ, ಲಕ್ಷಾನುಲಕ್ಷ, ಸಂಖ್ಯಾವಿಶೇಷ.

**प्रयोग** (ಪ್ರಯೋಗ) ಪು. ಸಂ. ಮಾಡಿ ನೋಡುವಿಕೆ, ಮಾಡಿ ತಿಳಿಯುವಿಕೆ, ಪರೀಕ್ಷೆ. ೨. ನಾಟಕದ ಆಟ. ೩. ಉಪಯೋಗ.

**प्रयोजक** (ಪ್ರಯೋಜಕ) ವಿ. ಸಂ. ಉಪಯೋಗಿಸಲ್ಪಡುವ, ಉತ್ಪಾದಕ, ಯೋಚಕ, ಗ್ರಂಥ ಲೇಖಕ.

**प्रयोजन** (ಪ್ರಯೋಜನ) ನ. ಸಂ. ಉಪಯೋಗ, ಪ್ರಯೋಗ, ಅಗತ್ಯ, ಅಡಚಣಿ-ಬಡತನ,ಅವಶ್ಯಕತೆ.

**प्रयोज्य** (ಪ್ರಯೋಜ್ಯ) ವಿ. ಸಂ. ಪ್ರಯೋಗಕ್ಕೆ ತಕ್ಕ, ಪ್ರಯೋಜ್ಯ, ಪ್ರಕ್ರಿಯೆಗೆ ಅರ್ಹವಾದ.

**प्रलय** (ಪ್ರಲಯ) ಪು. ಸಂ. ಪ್ರಲಯ, ಸರ್ವನಾಶ, ಸಕಲಲೋಪ, ಹಾಳಾಗುವಿಕೆ.

**प्रलाप** (ಪ್ರಲಾಪ್) ಪು. ಸಂ. ಅಳುವು, ದುಃಖ, ಶೋಕ, ಸಂಕಟ ಅಸಂಬದ್ಧ ಭಾಷಣ, ಗುರಿಯಿಲ್ಲದ ಮಾತು.

**प्रलापणे** (ಪ್ರಲಾಪಣೇ) ಕ್ರಿ. ಅ. ಅಳು, ದುಃಖಬಡು ಶೋಕಿಸು, ಬಡಬಡಿಸು, ಯದ್ವಾ ತದ್ವಾ ಮಾತಾಡು, ಶೋಕಿಸು, ಅಸಂಬದ್ಧ ಭಾಷಣ ಮಾಡು, ಬುದ್ಧಿ ಭ್ರಮೆಯಾಗು.

**प्रवण** (ಪ್ರವಣ) ವಿ. ಸಂ. ಒಲಿದ ೨. ಪೂರ್ಣ ೩. ಇಳಿಯುತ್ತ ಹೋಗುವ, – ಕಡೆಗೆ ಒಲವಿರುವ.

**प्रवर** (ಪ್ರವರ) ವಿ. ಸಂ. ಮುಖ್ಯ, ೨. ಪು. ಜಾತಿಯ ಮೂಲಪುರುಷ, ಗೋತ್ರಪತಿ.

**प्रवरा** (ಪ್ರವರಾ) ಸ್ತ್ರೀ. ಸಂ. ಒಂದು ನದಿ, ಪ್ರವರಾ ನದಿ.

**प्रवर्तक** (ಪ್ರವರ್ತಕ) ವಿ. ಸಂ. ನಡೆಯಿಸುವ, ಉತ್ತೇಜಕ, ಸಹಾಯಕ.

**प्रवर्तणे** (ಪ್ರವರ್ತಣೇ) ಕ್ರಿ. ಸಂ. ಏಳ್ಗೆಗೆ ತರು.

**प्रवर्तन** (ಪ್ರವರ್ತನ) ನ. ಸಂ. ಪ್ರವೃತ್ತಿ, ಒಲವು.

**प्रवाद** (ಪ್ರವಾದ) ಪು. ಸಂ. ವದಂತಿ, ಜನವಾರ್ತೆ, ಲೋಕವಾರ್ತೆ, ಕೇಳಿದಮಾತು.

**प्रवाल** (ಪ್ರವಾಲ್) ಪು. ಸಂ. ಹವಳ, ಪವಳ.

**प्रवालभस्म** (ಪ್ರವಾಲಭಸ್ಮ) ನ. ಸಂ. ಪ್ರವಾಳಭಸ್ಮ ಒಂದು ಪೌಷ್ಟಿಕ ಔಷಧ.

**प्रवास** (ಪ್ರವಾಸ್) ಪು. ಸಂ. ಪಯಣ, ಪ್ರಯಾಣ.

**प्रवासी** (ಪ್ರವಾಸೀ) ವಿ. ಸಂ. ಯಾತ್ರಿಕ, ಪ್ರಯಾಣಿಕ, ಯಾತ್ರೆಮಾಡುವ, ಸಂಚಾರಿ.

**प्रवाह** (ಪ್ರವಾಹ) ಪು. ಸಂ. ಹರಿಯುವಿಕೆ, ನೀರಿನ ಸೆಳವು –ಸೆಳೆತ, ಬಲವು, ಓಘ.

**प्रवाहात पडणे** (ಪ್ರವಾಹಾತ್ ಪಡಣೇ) ಕ್ರಿ. ಅ. ಸೆಳವಿಗೆ ಸಿಗು, ಸೆಳವಿನೊಂದಿಗೆ ಕೊಚ್ಚಿಹೋಗು, ಪ್ರವಾಹದಲ್ಲಿ ಸಿಗು.

**प्रविष्ट** (ಪ್ರವಿಷ್ಟ) ವಿ. ಸಂ. ಒಳಹೊಕ್ಕ, ಬಂದು ಸೇರಿಸಿದ, ತಲ್ಪಿದ, ನಿಲುಕಿದ, ಬರೆದಿಟ್ಟ, ರಜಿಸ್ಟರ್ ಆದ.

**प्रवीण** (ಪ್ರವೀಣ) ವಿ.ಸಂ. ಜಾಣ, ಪಂಡಿತ, ಪ್ರವೀಣ, ನಿಪುಣ, ಗಟ್ಟಿಗ, ಸಮರ್ಥ, ಪಾರಂಗತ, ಅಭ್ಯಸಿತ.

**प्रवृत्त** (ಪ್ರವೃತ್ತ) ವಿ. ಸಂ. ಉದ್ಯುಕ್ತ, ತೊಡಗಿದ, ತಲ್ಲೀನ, ತನ್ಮಯ, ಲೌಕಿಕದಲ್ಲಿ ಮುಳುಗಿದ, ಮಾರ್ಗಕ್ಕೆ ಹತ್ತಿದ.

**प्रवृत्ति** ( ಪ್ರವೃತ್ತಿ ) ಸ್ತ್ರೀ. ಸಂ. ಸ್ವಭಾವ, ಇರುವಿಕೆ, ದೇಶ ವ್ಯವಹಾರ, ವಾಡಿಕೆ, ಪ್ರವೃತ್ತಿ, ರೂಢಿ.

**प्रवेश** (ಪ್ರವೇಶ) ಪು. ಸಂ. ಪ್ರವೇಶದ್ವಾರ, ಮುಂಬಾಗಿಲು, ೨. ನಾಟಕದ ಅಂಕಿನ ಭಾಗ, ದೃಶ್ಯ.

**प्रवेशक** (ಪ್ರವೇಶಕ) ಪು. ಸಂ. ನಾಂದಿ, ಪ್ರವೇಶಕ, ಪ್ರಸ್ತಾವನೆ, ಪ್ರಾರಂಭ, ಉಪೋದ್ಘಾತ, ಪೀಠಿಕೆ.

**प्रवेशणे** (ಪ್ರವೇಶಣೇ) ಕ್ರಿ. ಅ. ಸೇರು, ಪ್ರಸ್ತಾಪಿಸು, ಪರಿಚಯ ಮಾಡು, ಪ್ರಾರಂಭಿಸು, ಪ್ರವೇಶ ನೀಡು.

**प्रशमन** (ಪ್ರಶಮನ) ನ. ಸಂ. ಶಾಂತಿ, ಸಮಾಧಾನ‘ ೨. (ನೋವು) ಕಡಿಮೆಯಾಗುವಿಕೆ, ೩. ಶಾಂತಿಗೊಳಿಸುವಿಕೆ.

**प्रशंसणे** (ಪ್ರಶಂಸಣೇ) ಕ್ರಿ. ಸ. ಹೊಗಳು, ಸ್ತುತಿಸು ಉದ್ಗರಿಸು, ವರ್ಣಿಸು, ಪ್ರಶಂಸಿಸು, ಸ್ತೋತ್ರ ಮಾಡು.

**प्रशंसनीय** (ಪ್ರಶಂಸನೀಯ) ವಿ. ಸಂ. ಹೊಗಳತಕ್ಕ, ಪ್ರಶಂಸನಾರ್ಹ, ವರ್ಣನೀಯ, ಸ್ತುತ್ಯ, ಪ್ರಶಂಸನೀಯ.

**प्रशंसा** (ಪ್ರಶಂಸಾ) ಸ್ತ್ರೀ. ಹೊಗಳಿಕೆ,ಪ್ರಶಂಸೆ,ವರ್ಣನೆ, ಸ್ತುತಿ, ಸ್ತೋತ್ರ.

**प्रशंसित** (ಪ್ರಶಂಸಿತ) ವಿ. ಸಂ. ಹೊಗಳಲ್ಪಟ್ಟ, ಪ್ರಶಂಸಿತ, ವರ್ಣಿಸಿದ, ಸ್ತುತಿಪಾತ್ರವಾದ.

**प्रशस्त** (ಪ್ರಶಸ್ತ) ವಿ. ಸಂ. ವಿಶಾಲ, ಬದಲಾದ, ಅಗಲಾದ, ಇಂಬಾದ ವಿಸ್ತೃತ, ವಿಸ್ತರಿತ.

**प्रशांत** (ಪ್ರಶಾಂತ) ವಿ. ಸಂ. ಶಾಂತವಾದ, ಸಂಯಮಿತ, ಶಾಂತ, ಬಿಗಿಹಿಡಿದ.

**प्रश्न** (ಪ್ರಶ್ನೆ) ಪು. ಸಂ. ಪ್ರಶ್ನೆ, ಕೇಳಿಕೆ, ಶೋಧನೆ, ಕೇಳುವಿಕೆ, ಶುಭಸೂಚನೆ, ಶುಭ ಶಕುನ.

**प्रश्नचिन्ह** (ಪ್ರಶ್ನಚಿನ್ಹ) ನ. ಸಂ. ಪ್ರಶ್ನಚಿಹ್ನ, ಪ್ರಶ್ನಾರ್ಥಕ, ವಾಕ್ಯದ ಕೊನೆಯ ವಿರಾಮ ಚಿಹ್ನ.

**प्रश्नार्थक सर्वनाम** (ಪ್ರಶ್ನಾರ್ಥಕ ಸರ್ವನಾಮ) ನ. ಸಂ. ಪ್ರಶ್ನಾರ್ಥಕ ಸರ್ವನಾಮ.

**प्रश्न पाहणे** (ಪ್ರಶ್ನ ಪಾಹಣೇ) ಕ್ರಿ. ಸ. ಜ್ಯೋತಿಷಿಗೆ ಪ್ರಶ್ನೆ ಕೇಳು, ಫಲಹೇಳು.

**प्रश्न सांगणे** (ಪ್ರಶ್ನ ಸಾಂಗಣೇ) ಕ್ರಿ. ಸ. ಜ್ಯೋತಿಷ್ಯ ಶಾಸ್ತ್ರಾನುಸಾರ ಪ್ರಶ್ನೆಗೆ ಉತ್ತರ ಹೇಳು.

**प्रश्नकुंडली** (ಪ್ರಶ್ನಕುಂಡಲೀ) ಸ್ತ್ರೀ. ಸಂ. ಪ್ರಶ್ನ ಸಮಯದ ಗ್ರಹಸ್ಥಿತಿ.

**प्रसक्त** (ಪ್ರಸಕ್ತ) ವಿ. ಸಂ. ಆಸಕ್ತ, ನಿರ್ಣಯಕ್ಕೆ ಬಂದ, ಸಂಪಾದಿಸಿದ, ಪ್ರಾಪ್ತವಾದ, ಗಳಿಸಿದ.

**प्रसक्ति** (ಪ್ರಸಕ್ತಿ) ಸ್ತ್ರೀ. ಆಸೆ, ಆಶೆ, ಪ್ರಸಕ್ತಿ, ಪರಿಣಾಮ, ಮನಸ್ಸು ಹಚ್ಚುವಿಕೆ, ಚಿತ್ತ ತೊಡಗಿಸುವಿಕೆ, ಹೊಂದುವಿಕೆ, ಅನುಕೂಲವಾಗುವಿಕೆ.

**प्रसंग** (ಪ್ರಸಂಗ) ಪು. ಸಂ. ವೇಳೆ, ಸಂಧಿ, ಕಾಲ, ಹಂಗಾಮು, ವಾದ-ವಿವಾದ, ಅವಸರ, ಕಾರಣ, ಚರ್ಚೆ.

**प्रसंग मारून नेणे** (ಪ್ರಸಂಗ ಮಾರೂನ್ ನೇಣೇ) ಕ್ರಿ. ಸ. ಸಂಕಟದಿಂದ ಪಾರಾಗು, ಪ್ರಸಂಗದಿಂದ ಪಾರಾಗು, ಯಶಸ್ಸು ಸಂಪಾದಿಸು.

**प्रसंग काढणे निभावणे** (ಪ್ರಸಂಗ ಕಾಢಣೇ ನಿಭಾವಣೇ) ಕ್ರಿ. ಅ. ಸಹನಮಾಡು, ಸಹಿಸು, ತಾಳ್ಮೆಹೊಂದು, ಅನಿವಾರ್ಯವಾಗಿ ಜೀವನ ಸಾಗಿಸು.

**प्रसंग विशेषी** (ಪ್ರಸಂಗ ವಿಶೇಷೀ) ಕ್ರಿ. ವಿ. ವಿಶಿಷ್ಟ ಕಾಲದಲ್ಲಿ, ವೇಳೆಗೆ ಸರಿಯಾಗಿ, ಕಾಲಕ್ಕೆ ತಕ್ಕಂತೆ.

**प्रसंगास येणे** (ಪ್ರಸಂಗಾಸ ಯೇಣೇ) ಕ್ರಿ. ಸ. ಜಗಳಕ್ಕೆ ಬರು, ವಿವಾದಕ್ಕೆ ನಿಲ್ಲು,

**प्रसंगी असणे -राहणे** (ಪ್ರಸಂಗೀ ಅಸಣೇ -ರಾಹಣೇ) ಕ್ರಿ. ಅ. ಕಾಲಕ್ಕೆ ಸರಿಯಾಗಿ ಸಹಾಯಮಾಡು, ಪ್ರಸಂಗದಲ್ಲಿ ರಕ್ಷಿಸು.

**प्रसंग ओळखणे** (ಪ್ರಸಂಗ ಓಳಖಣೇ) ಕ್ರಿ. ಅ. ಕಾಲದ ಕಲ್ಪನೆ ಮಾಡು, ಸಂಕಟದ ಸಮಯ ತಿಳಿ, ಕಾಲ ರಹಸ್ಯ ತಿಳಿದುಕೊಳ್ಳು.

**प्रसंग वशात** (ಪ್ರಸಂಗ ವಶಾತ್) ಕ್ರಿ. ವಿ. ಪ್ರಸಂಗಾನುಸಾರವಾಗಿ, ವೇಳೆಯ ಔಚಿತ್ಯದಿಂದ, ಕಾಲದ ಒತ್ತಡದಿಂದ.

**प्रसंगानुरूप** (ಪ್ರಸಂಗಾನುರೂಪ) ಕ್ರಿ. ವಿ. ವೇಳೆಗೆ ಅನುಸರಿಸಿ, ಕಾಲಕ್ಕೆ ಸರಿಯಾಗಿ.

**प्रसंगोपात्त** (ಪ್ರಸಂಗೋಪಾತ್ತ) ಕ್ರಿ. ವಿ. ಸಂ. ಪ್ರಸಂಗಾನುಸಾರ, ಪ್ರಾಪ್ತವಾದ, ಒದಗಿದ.

**प्रसन्न** (ಪ್ರಸನ್ನ) ವಿ. ಸಂ. ಮೆಚ್ಚಿದ, ಸಂತುಷ್ಟ, ಒಲಿದ, ಅತ್ಯಾನಂದಿತ, ಶಾಂತ, ಪಾರದರ್ಶಕ.

**प्रसर** (ಪ್ರಸರ) ಪು. ಸಂ. ಸಮೂಹ, ಪ್ರಸಾರ, ಪಸರಿಸುವಿಕೆ, ಮಿಶ್ರಣವಾಗುವಿಕೆ, ಹಬ್ಬುವಿಕೆ, ಹರಡುವಿಕೆ, ವ್ಯಾಪ್ತಿ, ವ್ಯಾಪನೆ. ೨. ಸುತ್ತು ಮುತ್ತಲಿನ ಭೂಭಾಗ.

**प्रसरण** (ಪ್ರಸರಣ) ನ. ಸಂ. ಸಡಿಲುಗೊಳಿಸುವಿಕೆ, ಹಬ್ಬುವಿಕೆ, ಹೆಚ್ಚಳ.

**प्रसरणे** (ಪ್ರಸರಣೆ) ಕ್ರಿ. ಅ. ಹಬ್ಬು, ಪಸರಿಸು, ಸಮ್ಮಿಶ್ರವಾಗು, ವ್ಯಾಪಿಸು, ಹರಡು.

**प्रसव** (ಪ್ರಸವ) ಪು. ಸಂ. ಹೆರಿಗೆ, ಹುಟ್ಟುವಿಕೆ, ಹಡೆಯುವಿಕೆ.

**प्रसवणे** (ಪ್ರಸವಣೇ) ಕ್ರಿ. ವಿ. ಜನ್ಮಕೊಡು, ಹಡೆ, ರಚಿಸು.

**प्रसव वेदना** (ಪ್ರಸವ ವೇದನಾ) ಸ್ತ್ರೀ. ಸಂ. ಬಾಳಂತಿತನದ ಪೀಡೆ, ಪ್ರಸವ ವೇದನೆ.

**प्रसाद** (ಪ್ರಸಾದ) ಪು. ಸಂ. ಪ್ರಸಾದ, ಬೆಂಬಲ. ೨. ಅನುಗ್ರಹ, ದಯೆ, ಉಪಚಾರ, ಒಲುಮೆ, ಸಮ್ಮತಿ.

**प्रसादी** (ಪ್ರಸಾದೀ) ವಿ. ಸಂ. ಅನುಗ್ರಹೀತ, ಪ್ರಸಾದಿತ, ಕೃಪೆಯಿಂದ ನೀಡಿದ, ಉಪಕಾರದಿಂದ ನೀಡಿದ.

**प्रसार** (ಪ್ರಸಾರ) ಪು.<br>**प्रसारण** (ಪ್ರಸಾರಣ) ವಿ. } **प्रसर** ನೋ.

**प्रसारित** (ಪ್ರಸರಿತ) ವಿ. ಸಂ. ವಿಸ್ತೃತವಾದ, ಹಬ್ಬಿಸಿದ, ಹರಡಿಸಿದ.

**प्रसिद्ध** (ಪ್ರಸಿದ್ಧ) ವಿ. ಸಂ. ಸುಪ್ರಸಿದ್ಧ, ಹೆಸರಾಂತ, ನಾಮಾಂಕಿತ, ಸರ್ವವಿದಿತ.

**प्रसिद्धी** (ಪ್ರಸಿದ್ಧಿ) ಸ್ತ್ರೀ. ಸಂ. ಖ್ಯಾತಿ, ಪ್ರಕಟನೆ.

**प्रसिद्धिपत्र** (ಪ್ರಸಿದ್ಧಿಪತ್ರ) ನ. ಸಂ. ಪ್ರಕಟನಾಪತ್ರ, ಜಾಹೀರನಾಮೆ, ಸುತ್ತೋಲೆ.

**प्रसूत** (ಪ್ರಸೂತ) ವಿ. ಸಂ. ಹಡೆದ, ಪ್ರಸೂತ, ಜನ್ಮನೀಡಿದ.

**प्रसूति** (ಪ್ರಸೂತಿ) ಸ್ತ್ರೀ. ಸಂ. ಹೆರಿಗೆ.

**प्रसूति वैराग्य** (ಪ್ರಸೂತಿ ವೈರಾಗ್ಯ) ಪ್ರಸೂತಿಕಾಲದ ವಿರಕ್ತಿ, ತಾತ್ಪೂರ್ತಿಕ ವಿರಕ್ತಿ.

**प्रसृत** (ಪ್ರಸೃತ) ವಿ. ಸಂ. ಹಬ್ಬಿದ, ವಿಸ್ತೃತ, ಮುಂದುವರಿದ.

**प्रस्ताव** (ಪ್ರಸ್ತಾವ) ಪು. ಹಿಂ. ಗೊತ್ತುವಳಿ, ನಿರ್ಣಯ, ಪ್ರಸಂಗ, ಕಾಲ, ಸಂಧಿ, ಅವಕಾಶ.

**प्रस्तावना** (ಪ್ರಸ್ತಾವನಾ) ಸ್ತ್ರೀ. ಸಂ. ಮುನ್ನುಡಿ, ಉಪೋದ್ಘಾತ, ಪ್ರಾಸ್ತಾವಿಕ ವಚನ, ಭೆಟ್ಟಿಮಾಡಿಸುವಿಕೆ, ಪೀಠಿಕೆ.

**प्रस्तुत** (ಪ್ರಸ್ತುತ) ವಿ. ಸಂ. ಸದ್ಯದ, ಈ ಕಾಲದ, ಈ ವೇಳೆಯ, ಆಧುನಿಕ ಸಮಯದ, ಸದ್ಯಕಾಲದ.

**प्रस्थ** (ಪ್ರಸ್ಥ) ನ. ಸಂ. ದೊಡ್ಡ ವ್ಯಕ್ತಿ, ದೊಡ್ಡ ಮನುಷ್ಯ.

**प्रस्त माजविणे–वाढविणे** (ಪ್ರಸ್ಥ ಮಾಜವಿಣೇ–ವಾಢವಿಣೇ) ದೊಡ್ಡತನ ಬೆಳೆಯಿಸು, ದೊಡ್ಡಸ್ತಿಕೆ, ಹಬ್ಬಿಸು.

**प्रस्थान** (ಪ್ರಸ್ಥಾನ) ನ. ಸಂ. ಸಾಯುವಿಕೆ, ಅಗಲುವಿಕೆ.

**प्रस्थान ठेवणे** (ಪ್ರಸ್ಥಾನ ಠೇವಣೇ) ಕ್ರಿ. ಅ. ಪ್ರಯಾಣ ಗೊತ್ತುಮಾಡು, ಇಳಿ, ಎರಗು, ಇಳಿದುಕೊಳ್ಳು, ಪ್ರಸ್ಥಾನ ತೆಗೆದಿಡು.

**प्रस्फुट** (ಪ್ರಸ್ಫುಟ) ವಿ. ಸಂ. ಸ್ವಚ್ಛವಾದ, ವಿಸ್ಫುಟಿತ, ಸ್ಪಷ್ಟಗೊಳಿಸಿದ.

**प्रस्फुटित** (ಪ್ರಸ್ಫುಟಿತ) ವಿ. ಸಂ. ಪ್ರಕಟವಾದ, ಪ್ರಕಟಿಸಿದ, ಹೊರಗೆಡವಿದ, ಬೈಲಿಗೆಳೆದ–ತಂದ.

**प्रहर** (ಪ್ರಹರ) ಪು. ಸಂ. ಪ್ರಹರ, ಮೂರು ತಾಸಿನ ಕಾಲ, ದಿನದ ಎಂಟನೆಯ ಅಂಶ.

**प्रहार** (ಪ್ರಹಾರ) ಪು. ಸಂ. ಹೊಡೆತ, ಬಡೆತ, ಕುಟ್ಟುವಿಕೆ, ಗುದ್ದು, ಅಪ್ಪಳಿಸುವಿಕೆ, ತಿವಿಯುವಿಕೆ.

**प्रहारणे** (ಪ್ರಹಾರಣೇ) ಕ್ರಿ. ಸ. ಹೊಡೆ, ಬಡೆ, ಕುಟ್ಟು, ಗುದ್ದು, ಅಪ್ಪಳಿಸು, ತಿವಿ, ಇರಿ.

**प्रहास** (ಪ್ರಹಾಸ) ಪು. ಹಾಸ್ಯ, ನಗೆ, ನಗು, ಅಣಕು, ಅಣುಕುವಿಕೆ, ಗೇಲಿ.

**प्रहसन** (ಪ್ರಹಸನ) ನ. ಸಂ. ನಗೆಯ ನಾಟಕ ಪ್ರಹಸನ, ಕೃತಿ, ರಚಿಸಿದ ಸಂಗತಿ, ಫಾರ್ಸ.

**प्रळय** (ಪ್ರಳಯ) 'प्रलय' ನೋ.

**प्रक्षालन** (ಪ್ರಕ್ಷಾಲನ) ನ. ಸಂ. ತೊಳೆಯುವಿಕೆ.

**प्रक्षालित** (ಪ್ರಕ್ಷಾಲಿತ) ವಿ. ಸಂ. ತೊಳೆದ, ಸ್ವಚ್ಛ ಮಾಡಿದ, ಪವಿತ್ರಗೊಳಿಸಿದ.

**प्रक्षिप्त** (ಪ್ರಕ್ಷಿಪ್ತ) ವಿ. ಸಂ. (ಸಾಹಿತ್ಯ ಕೃತಿಯಲ್ಲಿ) ಗ್ರಂಥಕರ್ತನ ಹೊರತಾಗಿ ಬೇರೆಯವರು ಸೇರ್ಪಡಿಸಿದ (ಅಂಶ).

**प्रक्षेप** (ಪ್ರಕ್ಷೇಪ) ಪು. ಸಂ. ಚೆಲ್ಲುವಿಕೆ, ಒಗೆಯುವಿಕೆ, ಬೀಸಾಡುವಿಕೆ, ದೂಡುವಿಕೆ.

**प्रक्षेपणे** (ಪ್ರಕ್ಷೇಪಣೇ) ಕ್ರಿ. ಸಂ. ಬೀಸಾಡು, ಒಗೆ, ಚೆಲ್ಲು, ದೂರಹಾಕು, ತಿರಸ್ಕರಿಸು, ಬೇಡವೆನ್ನು, ಮುಂದಕ್ಕೆ ಉಬ್ಬಿಬರು.

**प्रक्षेपण** (ಪ್ರಕ್ಷೇಪಣ್) ನ. ಸಂ. ಬೀಸಾಡುವಿಕೆ, ಒಗೆಯುವಿಕೆ, ಉಬ್ಬಿಬರುವಿಕೆ, ಮುಂದಕ್ಕೆ ಚಾಚುವಿಕೆ, ದೂರಹಾರುವಿಕೆ, 'प्रक्षेप' ನೋ.

**प्रज्ञा** (ಪ್ರಜ್ಞಾ) ನ. ಸಂ. ಬುದ್ಧಿಶಕ್ತಿ, ಜಾಣ್ಮೆ, ತಿಳುವಳಿಕೆ, ಪ್ರತಿಭೆ, ಪವಾಡ.

**प्राक्** (ಪ್ರಾಕ್) ಕ್ರಿ. ವಿ. ಪೂರ್ವ, ಮುಂಚೆ, ಮೊದಲಿಗೆ, ಪೂರ್ವದಲ್ಲಿ, ಪುರಾಣಕಾಲದಲ್ಲಿ.

**प्राकार** (ಪ್ರಾಕಾರ) ಪು. ಸಂ. ಸುತ್ತುಗೋಡೆ, ಪ್ರಾಕಾರ, ಸುತ್ತು ಬೇಲಿ, ಕಂಪಾವುಂಡ್.

**प्राकृत** (ಪ್ರಾಕೃತ್) ವಿ. ಸಂ. ಸಾಮಾನ್ಯ, ಸಾಧಾರಣ, ವಾಡಿಕೆಯ, ರೂಢಿಯ, ಹಳ್ಳಿಗ.

**प्राकृत बोलणे** (ಪ್ರಾಕೃತ್ ಬೋಲಣೇ) ಕ್ರಿ. ಸ.
**प्राकृतावर येणे** (ಪ್ರಾಕೃತಾವರ್ ಯೇಣೇ) ಕ್ರಿ. ಅ. }
ಬೈಯ್ಯು, ಕೆಟ್ಟ ಭಾಷೆ ಉಪಯೋಗಿಸು.

**प्राक्तन** (ಪ್ರಾಕ್ತನ) ನ. ಸಂ. ಹಣೆಬರೆಹ, ಪೂರ್ವಜನ್ಮದ ಕರ್ಮ.

**प्राक्तनाची गति** (ಪ್ರಾಕ್ತನಾಚೀ ಗತಿ) ಸ್ತ್ರೀ. ದೈವದ ಗತಿ, ಹಣೆಬರೆಹದ ರೀತಿ, ದೈವದಾಟ.

**प्राक्तनाची दोरी** (ಪ್ರಾಕ್ತನಾಚೀ ದೋರೀ) ಸ್ತ್ರೀ. ಆಯುರ್ಮರ್ಯಾದೆ, ದೈವದಾಟ.

**प्रागतिक** (ಪ್ರಾಗತಿಕ) ವಿ. ಸಂ. ಪ್ರಗತಿಪರವಾದ, ಮುಂದೆಸಾಗುವ, ಬೆಳೆಯುವ, ವರ್ಧಿಸುವ.

**प्रागल्भ्य** (ಪ್ರಾಗಲ್ಭ್ಯ) ನ. ಸಂ. ಪ್ರೌಢತ್ವ, ಹಿರಿಮೆ, ಮೇಲ್ಮೆ, ಪರಿಪಕ್ವಾವಸ್ಥೆ, ಪ್ರೌಢದೆಸೆ, ಪೂರ್ಣತೆ.

**प्राची** (ಪ್ರಾಚೀ) ಸ್ತ್ರೀ. ಸಂ. ಪೂರ್ವದಿಕ್ಕು, ಪೂರ್ವದಿಶಾ, ದಿಕ್ಕು.

**प्राचीन** (ಪ್ರಾಚೀನ್) ವಿ. ಸಂ. ಹಿಂದಿನ, ಹಿಂದಿನ ಕಾಲದ, ಪೂರ್ವಕಾಲದ, ಪ್ರಾರಂಭದ.

**प्राच्य** (ಪ್ರಾಚ್ಯ) ವಿ. ಸಂ. ಪೂರ್ವದಿಕ್ಕಿನ, ಪೌರ್ವಾತ್ಯ, (ಓರಿಯಂಟಲ್).

**प्राचुर्य** (ಪ್ರಾಚುರ್ಯ) ನ. ಸಂ. ವಿಪುಲತೆ, ವೈಪುಲ್ಯ, ಬಾಹುಲ್ಯ, ಸಮೃದ್ಧಿ.

**प्रांजळ** (ಪ್ರಾಂಜಳ್) ವಿ. ಶುದ್ಧವಾದ, ಸ್ಪಷ್ಟ, ಪವಿತ್ರ, ಮನಸ್ಸು ಬಿಚ್ಚಿದ.

**प्राण** (ಪ್ರಾಣ) ಪು. ಸಂ. ಜೀವ. ೨. ಪ್ರೀತಿಯ ವಸ್ತು, ಶ್ವಾಸೋಚ್ಛ್ವಾಸ.

**जीवकी प्राण** (ಜೀವಕೀ ಪ್ರಾಣ್) ಅತಿ ಪ್ರೀತಿಯ ಸಂಗತಿ.

**प्राणजाणे** (ಪ್ರಾಣಜಾಣೇ) ಕ್ರಿ. ಅ. ಜೀವ ಹೋಗು, ಸಾಯು, ಮೃತನಾಗು.

**प्राणठेवणे** (ಪ್ರಾಣಠೇವಣೇ) ಕ್ರಿ. ಅ. ಪ್ರೀತಿಸು.

**प्राणदेणे** (ಪ್ರಾಣದೇಣೇ) ಕ್ರಿ. ಸಂ. ಜೀವಕೊಡು, ಉದಾರನಾಗು, ಸಾಯು. ೨. ಪ್ರೀತಿಮಾಡು, ಔದಾರ್ಯ ತೋರಿಸು.

**प्राणसोडणे** (ಪ್ರಾಣಸೋಡಣೇ) ಕ್ರಿ. ಅ. ಜೀವಬಿಡು, ಕಡೆಯ ಉಸಿರೆಳೆ, ಸಾಯು.

**प्राणाचावाली** (ಪ್ರಾಣಾಚಾವಾಲಿ) ಪು. ಸಂ. ಬದುಕಿನ ಹೊಣೆಗಾರ, ಜೀವದ ಗೆಳೆಯ, ಪತಿ, ಗಂಡ.

**प्राणघातक** (ಪ್ರಾಣಘಾತಕ) ವಿ. ಸಂ. ಜೀವದ ನಾಶ ಮಾಡುವ.

**प्राणत्याग** (ಪ್ರಾಣತ್ಯಾಗ) ಪು. ಸಂ. ಜೀವ ಬಿಡುವಿಕೆ, ಪ್ರಾಣತ್ಯಜಿಸುವಿಕೆ, ಸ್ವನಾಶ, ಆತ್ಮತ್ಯಾಗ.

**प्राणदान** (ಪ್ರಾಣದಾನ್) ನ. ಸಂ. ಪ್ರಾಣಾರ್ಪಣ. ೨. ಜೀವ ಉಳಿಸುವಿಕೆ.

**प्राणधारणा** (ಪ್ರಾಣಧಾರಣಾ) ಸ್ತ್ರೀ. ಸಂ. ಜೀವದಿಂದಿರುವಿಕೆ.

**प्राणनाथ** (ಪ್ರಾಣನಾಥ } ಪು. ಸಂ.
**प्राणप्रिय वल्लभ** (ಪಾಣಪ್ರಿಯ ವಲ್ಲಭ } ಪು.
ಗಂಡ, ಪತಿ, ಪ್ರಾಣಪ್ರಿಯ.

**प्राणप्रतिष्ठा** (ಪ್ರಾಣಪ್ರತಿಷ್ಠಾ) ಸ್ತ್ರೀ. ಸಂ. ಜೀವ ಕಳೆ ತುಂಬುವಿಕೆ, ದೇವತ್ವ ತುಂಬುವಿಕೆ, ಮೂರ್ತಿಗೆ ದೈವತ್ವ ಕೊಡುವಿಕೆ.

**प्राणविसावा** (ಪ್ರಾಣವಿಸಾವಾ) ಪು. ಪ್ರಾಣಕ್ಕೆ ವಿಶ್ರಾಂತಿ, ಪ್ರೀತಿಯ ವಸ್ತು (ಪತಿ, ಪ್ರಿಯಕರ, ಮಿತ್ರ).

**प्राणसंकट** (ಪ್ರಾಣಸಂಕಟ) ನ. ಸಂ. ಜೀವದ ಗಂಡಾಂತರ, ದೊಡ್ಡ ಆಪತ್ತು, ಮಹಾ ವಿಪತ್ತು.

**प्राणसखा** (ಪ್ರಾಣಸಖಾ) ಪು. ಸಂ. ಜೀವದ ಗೆಳೆಯ, ಪ್ರೀತಿಯ ಮನುಷ್ಯ.

**प्राणसंदेह** (ಪ್ರಾಣಸಂದೇಹ) ಪು. ನಾ. ಭಯಂಕರ ಸ್ಥಿತಿ, ಪರಿಸ್ಥಿತಿ, ದುರ್ಘಟನೆ '**प्राणसंकट**' ನೋ.

**प्राणान्त** (ಪ್ರಾಣಾಂತ್) ಪು. ಸಂ. ಅಂತ್ಯ ಆಪತ್ತಿ, ಗಂಡಾಂತರ, ಮಹಾ ವಿಪತ್ತಿ, ಜೀವನದ ಕೊನೆ.

**प्राणान्त दंड** (ಪ್ರಾಣಾಂತ ದಂಡ) ಪು. ಸಂ. ಪ್ರಾಣಾಂತ ಶಿಕ್ಷೆ, ಸಾವಿನ ಶಿಕ್ಷೆ, ಮರಣ ದಂಡನೆ.

**प्राणांतिक** (ಪ್ರಾಣಾಂತಿಕ) ವಿ. ಸಂ. ಮರಣವನ್ನು ತರುವ, ಸಾಯುವವರೆಗಿನ.

**प्राणायाम** (ಪ್ರಾಣಾಯಾಮ್) ಪು. ಸಂ. ಪ್ರಾಣಾಯಾಮ, ಯೋಗ.

**प्राणाशी गाठ** (ಪ್ರಾಣಾಶೀ ಗಾಠ್) ಸ್ತ್ರೀ. ಜೀವದ ಸಂಕಟ, ಜೀವ ಹೋಗುವ ಸಂಭವ.

**प्राणिशास्त्र** (ಪ್ರಾಣಿಶಾಸ್ತ್ರ) ನ. ಸಂ. ಪ್ರಾಣಿಶಾಸ್ತ್ರ, ಜೀವಶಾಸ್ತ್ರ, ಪಶ್ವಾದಿ ಶಾಸ್ತ್ರ.

**प्राणी** (ಪ್ರಾಣೀ) ಪು. ಸಂ. ಪ್ರಾಣಿ, ಜೀವವುಳ್ಳವ–ದ್ದು.

**प्राणेश–श्वर** (ಪ್ರಾಣೇಶ–ಶ್ವರ) ಪು. ಸಂ. ಪತಿ, ಗಂಡ, ಪ್ರಿಯಕರ.

**प्राणोत्क्रमण** (ಪ್ರಾಣೋತ್ಕ್ರಮಣ) ನ. ಸಂ. ಮರಣ, ಸಾವು.

**प्रान्त** (ಪ್ರಾಂತ) ಪು. ಸ. ದೇಶದ ವಿಭಾಗ, ರಾಜ್ಯ, ರಾಜ್ಯ ವಿಭಾಗ, ಜಿಲ್ಹೆ ಅಥವಾ ಜಿಲ್ಹೆಗಳ ಗುಂಪು. ೨. ಕೊನೆ, ಅಂಚು, ಮೇರೆ.

**प्रातः** (ಪಾತಃ) ಕ್ರಿ. ಸ. ಬೆಳಿಗ್ಗೆ, ಮುಂಜಾನೆ.

**प्रातःकाल** (ಪ್ರಾತಃಕಾಲ) ಪು. ಸಂ. ಮುಂಜಾನೆ, ಪ್ರಾತಃಕಾಲ, ಸೂರ್ಯೋದಯಕಾಲ.

**प्रातभोजन** (ಪ್ರಾತಭೋಜನ) ನ. ಸಂ. ಮುಂಜಾವಿನ ಊಟ, ಫಲಾಹಾರ, ಫರಾಳ.

**प्रातर्विधी** (ಪ್ರಾತರ್ವಿಧಿ) ಪು. ಸಂ. ಕೈ ಕಾಲಿಗೆ ಹೋಗುವಿಕೆ, ಮಲಮೂತ್ರ ವಿಸರ್ಜನೆ.

**प्रातःसंध्या** (ಪ್ರಾತಃಸಂಧ್ಯಾ) ಸ್ತ್ರೀ. ಸಂ. ಬೆಳಗಿನ ಸಂಧ್ಯಾವಂದನೆ.

**प्रातःस्नान** (ಪ್ರಾತಃಸ್ನಾನ) ನ. ಸಂ. ಬೆಳಗಿನ ಜಳಕ.

**प्रातःस्मरण** (ಪ್ರಾತಃಸ್ಮರಣ) ನ. ಸಂ. ಬೆಳಗಿನ ಪ್ರಾರ್ಥನೆ, ಪ್ರಾತಃಸ್ತೋತ್ರ, ಪ್ರಾತಃಪ್ರಾರ್ಥನೆ, ಪ್ರಾತಃನಾಮಸ್ಮರಣೆ, ಪ್ರಾತರ್ದೇವಗೀತೆ, ಬೆಳಗಿನ ದೇವರ ನೆನಹು.

**प्रातीच्य** (ಪ್ರಾತೀಚ್ಯ) ವಿ. ಸಂ. ಪಶ್ಚಿಮ ದಿಕ್ಕಿನ.

**प्राथमिक** (ಪ್ರಾಥಮಿಕ) ವಿ. ಸ. ಮೊದಲಿನ, ಆರಂಭದ, ಮೂಲದ, ಪ್ರಾಥಮಿಕ, ತಳದ.

**प्रादुर्भाव** (ಪ್ರಾದುರ್ಭಾವ) ಪು. ಸಂ. ಉತ್ಪತ್ತಿ, ಜನನ, ಜನ್ಮ, ವ್ಯಕ್ತವಾಗುವಿಕೆ.

**प्रादेशिक** (ಪ್ರಾದೇಶಿಕ) ವಿ. ಸಂ. ಪ್ರದೇಶಕ್ಕೆ ಸಂಬಂಧಿಸಿದ, ವಿಭಾಗದ, ಪ್ರಾಂತದ.

**प्राधान्य** (ಪ್ರಾಧಾನ್ಯ) ನ. ಸ. ಮಹತ್ವ, ವರ್ಚಸ್ಸು, ಪ್ರಾಬಲ್ಯ, ಪ್ರಾಧಾನ್ಯ, ಅಧಿಕಭಾರ.

**प्रापंचिक** (ಪ್ರಾಪಂಚಿಕ) ವಿ. ಸಂ. ಪ್ರಪಂಚದಲ್ಲಿ ಮುಳುಗಿದ, ಸಂಸಾರಿಕ, ಕೌಟುಂಬಿಕ.

**प्राप्त** (ಪ್ರಾಪ್ತ) ವಿ. ಸಂ. ಉಂಟಾದ, ಸಂಭವಿಸಿದ, ಗಳಿಸಿದ, ಸಂಪಾದಿಸಿದ, ದೊರೆತ, ನಿರ್ಣಿತ, ಸಿಕ್ಕ, ಲಬ್ಧ.

**प्राप्तव्य** (ಪ್ರಾಪ್ತವ್ಯ) ವಿ. ಸಂ. ದೊರೆಯತಕ್ಕ, ಸಂಭವಿಸತಕ್ಕ, ಸಿಗತಕ್ಕ, ಲಭ್ಯ, ದೊರೆಯುವ, ಸಾಧಿಸುವ.

**प्राप्ति** (ಪ್ರಾಪ್ತಿ) ಸ್ತ್ರೀ. ನ. ಉಂಟಾಗುವಿಕೆ, ಉತ್ಪನ್ನ, ಲಾಭ, ಗಳಿಕೆ, ಕೂಲಿ, ಆದಾಯ, ಪ್ರಯೋಜನ.

**प्राप्य** (ಪ್ರಾಪ್ಯ) ವಿ. ಸಂ. ದೊರಕಿಸಬಹುದಾದ.

**प्राबल्य** (ಪ್ರಾಬಲ್ಯ) ನ. ಸಂ. ಪ್ರಬಲತನ, ಹಾವಳಿ, ಸಾಮರ್ಥ್ಯ, ಬಲ, ಶಕ್ತಿ, ಕಸುವು.

**प्रामाणिक** (ಪ್ರಾಮಾಣಿಕ) ವಿ. ಸಂ. ಪ್ರಮಾಣಕ್ಕೆ ಸರಿಯಾಗಿ ನಡೆಯುವ, ಸಜ್ಜನ, ಸಂಭಾವಿತ, ವ್ಯಾವಹಾರಿಕ, ಪ್ರಾಮಾಣಿಕ, ನೀತಿವಂತ, ಸಾತ್ವಿಕ.

**प्रामाण्य** (ಪ್ರಾಮಾಣ್ಯ) ನ. ಸಂ. ಸತ್ಯ, ಸತ್ಯಶೀಲತೆ, ಪುರಾವೆ, ಆಧಾರ, ನಿಜತ್ವ.

**–प्राय** (–ಪ್ರಾಯ) ಅವ್ಯಯ (ಸಂ) ಅಂಥ, ಅಂತೆಕಾಣುವ. ೨. ಹರೆ, ತಾರುಣ್ಯ.

**प्राय** (ಪ್ರಾಯ) ಅವ್ಯಯ (ಸಂ) } ಸಾಧಾರಣವಾಗಿ,
**प्रायशः** (ಪ್ರಾಯಶಃ) ಸಂ. } ಬಹುಶಃ, ಬಹುತೇಕ.

**प्रायश्चित्त** (ಪ್ರಾಯಶ್ಚಿತ್ತ) ನ. ಸಂ. ಶಿಕ್ಷೆ, ಪ್ರಾಯಶ್ಚಿತ್ತ, ಶಾಸನ, ಪಾಪ ಪರಿಹಾರ ಮಾಡಿಕೊಳ್ಳುವಿಕೆ.

**प्रारब्ध** (ಪ್ರಾರಬ್ಧ) ನ. ದೈವ, ಲಲಾಟ, ಹಣೆಬರೆಹ, ವಿಧಿಲೇಖ, ಅದೃಷ್ಟ, ವಿಧಿ, ಪ್ರಾರಬ್ಧ, ದೈವಗತಿ. ೨. ವಿ. ಆರಂಭಿಸಿದ, ಪ್ರಾರಂಭಿಸಿದ.

**प्रारब्धयोग** (ಪ್ರಾರಬ್ಧಯೋಗ) ಪು. ಸಂ. ದೈವಯೋಗ, ಸಂಭವ, ವಿಧಿಪ್ರಾಪ್ತಿಯೋಗ, ಅವಕಾಶ.

**प्रारंभ** (ಪ್ರಾರಂಭ) ಪು. ಸಂ. ಸುರುವಾಗುವಿಕೆ, ಆರಂಭ, ಆದಿ.

**प्रारंभणे** (ಪ್ರಾರಂಭಣೇ) ಕ್ರಿ. ಸಂ. ಪ್ರಾರಂಭಿಸು, ಆರಂಭಿಸು, ಸುರುವು ಮಾಡು, ಸುರುವು ಆಗು.

**प्रार्थना** (ಪ್ರಾರ್ಥನಾ) ಸ್ತ್ರೀ. ಸಂ. ಪ್ರಾರ್ಥನೆ, ಆರಾಧನೆ. ೨. ಬಿನ್ನಹ, ವಿನಂತಿ.

**प्रार्थणे** (ಪ್ರಾರ್ಥಣೇ) ಕ್ರಿ. ಸಂ. ಪ್ರಾರ್ಥಿಸು, ಸ್ತುತಿಸು, ಬೇಡು, ವಿನಂತಿಸು, ಕೇಳಿಕೊಳ್ಳು.

**प्रार्थित** (ಪ್ರಾರ್ಥಿತ) ವಿ. ಸಂ. ಬೇಕಾದ ಪ್ರಾರ್ಥನೆ ಮಾಡಿದ, ಕೇಳಿಕೊಂಡ, ವಿನಂತಿಸಿದ.

**प्रावरण** (ಪ್ರಾವರಣ) ನ. ಸಂ. ಹೊದಿಕೆ, ಉತ್ತರೀಯ.

**प्रावरणे** (ಪ್ರಾವರಣೇ) ಕ್ರಿ. ಸಂ. ಹೊತ್ತುಕೊ, ಹೊದ್ದುಕೊ, ಮುಚ್ಚಿಕೊಳ್ಳು.

**प्रावीण्य** (ಪ್ರಾವೀಣ್ಯ) ನ. ಸಂ. ಪ್ರಾವೀಣ್ಯ, ನೈಪುಣ್ಯ, ಪಾಂಡಿತ್ಯ, ಪಾರಂಗತಿ, ಜ್ಞಾನ, ಪ್ರವೀಣತೆ.

**प्राशक** (ಪ್ರಾಶಕ) ಪು. ಸಂ. ಕುಡಿಯುವ, ಮದ್ಯ ಸೇವಿಸುವವ, ಹೀರಿಕೊಳ್ಳುವ, ಜಗ್ಗುವ.

**प्राशणे** (ಪ್ರಾಶಣೇ) ಕ್ರಿ. ಸಂ. ಕುಡಿ, ಸೇವಿಸು, ಹೀರಿಕೊಳ್ಳು, ಕುಡಿ.

**प्राशस्त्य** (ಪ್ರಾಶಸ್ತ್ಯ) ನ. ಸಂ. ವಿಸ್ತಾರ. ೨. ಅನುರೂಪತೆ.

**प्राशित** (ಪ್ರಾಶಿತ್) ವಿ. ಸಂ. ಕುಡಿದ, ಸೇವಿಸಿದ, ಹೀರಿದ.

**प्रास** (ಪ್ರಾಸ) ಪು. ಸಂ. ಛಂದಸ್ಸಿನಲ್ಲಿಯ ಪ್ರಾಸ (ಯಮಕ, ಅನು)

**प्रासंगिक** (ಪ್ರಾಸಂಗಿಕ) ವಿ. ಸಂ. ಪ್ರಸಂಗಕ್ಕೆ ಸಂಬಂಧಿಸಿದ, ಸಮಯಾನುಕೂಲವಾದ, ಆಕಸ್ಮಿಕ, ಅನಾವಶ್ಯ, ನೈಮಿತ್ತಿಕ, ಆಗಾಗ್ಗೆ ಆಗುವ.

**प्रासाद** (ಪ್ರಾಸಾದ್) ಪು. ಸಂ. ಅರಮನೆ, ರಾಜಭವನ, ಮಂದಿರ, ಗುಡಿ, ದೊಡ್ಡಕಟ್ಟು.

**प्रासादिक** (ಪ್ರಸಾದಿಕ) ವಿ. ಸಂ. ಆಲ್ಹಾದಕಾರಕ ೨. ಪ್ರಸನ್ನತೆ ಪಡೆದ, ದೈವೀ ಪ್ರಸಾದ ಪಡೆದ, ಸಮಯೋಚಿತ, ಯೋಗ್ಯ, ಸುಕಾಲದ, ಆಶೀರ್ವದಿಸಿದ, ಈಶ್ವರೀ ಕೃಪೆಯ.

**प्रास्ताविक** (ಪ್ರಾಸ್ತಾವಿಕ) ವಿ. ಸಂ. ಮುನ್ನುಡಿಯ, ಮೊದಲಿನ, ವಿಸ್ತರಿಸಿದ, ಸಮಂಜಸ, ಪ್ರಾರಂಭದ.

**प्राज्ञ** (ಪ್ರಾಜ್ಞ) ಪು. ಸಂ. ಜಾಣ, ಪಂಡಿತ, ನಿಪುಣ, ಧೀಮಂತ, ಚತುರ, ಬುದ್ಧಿವಂತ.

**प्राज्ञा** (ಪ್ರಾಜ್ಞಾ) ಸ್ತ್ರೀ. (ಮರ್ಥಾಠಿಯಲ್ಲಿ ಮಾತ್ರ) ಶಕ್ತಿ, ಸಾಮರ್ಥ್ಯ, ಯೋಗ್ಯತೆ.

**प्रिय** (ಪ್ರಿಯ) ವಿ. ಸಂ. ನಲುಮೆಯ.

**प्रियकर** (ಪ್ರಿಯಕರ) ವಿ. ಸಂ. ಪ್ರೀತಿ ಮಾಡುವವ, ಪ್ರೇಮಿಕ, ಜಾರ.

**प्रियंगु** (ಪ್ರಿಯಂಗು) ಪು. ಸಂ. ಸಾಸಿವೆ.

**प्रियतम** ( ಪ್ರಿಯತಮ) ವಿ. ಸಂ. ಅತ್ಯಂತ ಪ್ರೀತಿಯ, ಧೈರ್ಯವುಳ್ಳ, ಸೊಗಸುಗಾರ.

**प्रियतमा** ( ಪ್ರಿಯತಮಾ) ಸ್ತ್ರೀ. ಪ್ರೀತಿಯ ಪತ್ನಿ, ಭಾರ್ಯೆ.

**प्रियवादी** ( ಪ್ರಿಯವಾದೀ) ವಿ. } ಸವಿಮಾತಾಡುವವ
**प्रियंवद** (ಪ್ರಿಯಂವದ) } ಮಧುರ ಭಾಷಿ.

**प्रिया** ( ಪ್ರಿಯಾ) ಸ್ತ್ರೀ. **'प्रियतमा'** ನೋ.

**प्रीत–ति** ( ಪ್ರೀತ–ತಿ) ಸ್ತ್ರೀ. ಸಂ. ಪ್ರೀತಿ, ಆಸಕ್ತಿ, ಸಲುಗೆ.

**प्रीति लावणे** ( ಪ್ರೀತಿಲಾವಣೇ) ಕ್ರಿ. ಸಂ. ಪ್ರೀತಿಸು, ಪ್ರೀತಿಮಾಡು, ಪ್ರೀತಿಸಿಕೊಳ್ಳು.

**प्रीतिविवाह** (ಪ್ರೀತಿ ವಿವಾಹ) ಪು. ಸಂ. ಪ್ರೀತಿ ವಿವಾಹ, ಪ್ರೇಮವಿವಾಹ, ಸ್ವಯಂವಿವಾಹ.

**प्रीतिसंगम** (ಪ್ರೀತಿ ಸಂಗಮ) ಪು. ಸಂ. ನದಿಗಳ ಸಂಗಮ, ಪರಸ್ಪರ ಸಂಗಮ, ಪರಸ್ಪರ ಪ್ರೇಮ.

**–प्रीत्यर्थ** –ಪ್ರೀತ್ಯರ್ಥ (ಅವ್ಯಯ) ಸಲುವಾಗಿ.

**प्रेत** (ಪ್ರೇತ) ನ. ಸಂ. ಶವ, ಭೂತ, ವೇತಾಳ.

**प्रेतकर्म** (ಪ್ರೇತಕರ್ಮ) ನ. ಸಂ. ಅಗ್ನಿಸಂಸ್ಕಾರ, ಚಿತಾಸಂಸ್ಕಾರ, ಔರ್ಧ್ವ ದೇಹಿಕಸಂಸ್ಕಾರ, ಅಂತ್ಯ ಸಂಸ್ಕಾರ.

**प्रेतकळा** (ಪ್ರೇತಕಳಾ) ಸ್ತ್ರೀ. ಸಂ. ಕಳೆಗುಂದುವಿಕೆ, ಶವಚರ್ಯೆ, ಹೆಣದ ಕಳೆ.

**प्रेतभूमि** (ಪ್ರೇತಭೂಮಿ) ಸ್ತ್ರೀ. ಸಂ. ಸ್ಮಶಾನ, ಮಸಣ, ಸುಡಗಾಡು.

**प्रेम** (ಪ್ರೇಮ್) ನ. ಸಂ. ಒಲುಮೆ, ನಲುಮೆ, **प्रीति** ನೋ.

**प्रेमघाई** (ಪ್ರೇಮ್‌ಘಾಈ) ಸ್ತ್ರೀ. ಪ್ರೇಮವಿಲಾಸ, ರತಿ ಚೇಷ್ಟೆ, ಪ್ರೇಮಾತುರತೆ.

**प्रेमपान्हा** (ಪ್ರೇಮಪಾನ್ಹಾ) ಪು. } ಪ್ರೇಮದ ತಳ
**प्रेमपूर** (ಪ್ರೇಮಪೂರ) } ಮಳಿಕೆ, ಪ್ರೇಮದ ಭರ.

**प्रेमफासा** (ಪ್ರೇಮಫಾಸಾ) ಪು. ಪ್ರೇಮಪಾಶ, ಪ್ರೇಮ ಬಂಧನ, ಪ್ರೇಮದ ಬಲೆ, ಪ್ರೇಮದ ಪೇಚಾಟ.

**प्रेमळ** (ಪ್ರೇಮಳ) ವಿ. ಪ್ರೀತಿಮಾಡುವ, ಪ್ರೀತಿಸುವವ.

**प्रेमाश्रु** (ಪ್ರೇಮಾಶ್ರು) ಪು. ಕಣ್ಣೀರು, ಪ್ರೇಮಾಶ್ರು. ಪ್ರೇಮದ ಕಂಬನಿ, ನಲುಮೆಯ ಕಂಬನಿ.

**प्रेरक** (ಪ್ರೇರಕ) ವಿ. ಸಂ. } ಕಳಿಸುವ, ಪ್ರೇರೇಪಿ
**प्रेरयिता** (ಪ್ರೇರಯಿತಾ) } ಸುವ, ಆಜ್ಞಾಪಿ
ಪು. ಸಂ. } ಸುವ.

**प्रेरणा** (ಪ್ರೇರಣಾ) ಸ್ತ್ರೀ. ಸಂ. ಪ್ರೇರಣೆ, ಆಜ್ಞೆ, ಸೂಚನೆ, ಸ್ಫೂರ್ತಿ, ಎಚ್ಚರಿಕೆ, ಪ್ರೇರಿಸುವಿಕೆ.

**प्रेरणे** (ಪ್ರೇರಣೇ) ಹುರಿದುಂಬಿಸು, ಪ್ರೇರೇಪಿಸು.

**प्रेरित** (ಪ್ರೇರಿತ) ವಿ. ಸಂ. ಸ್ಫೂರ್ತಿಗೊಂಡ, ಎಚ್ಚರಿಸಲ್ಪಟ್ಟ, ಎಬ್ಬಿಸಿದ, ಹುರಿದುಂಬಿಸಿದ.

**प्रेषक** (ಪ್ರೇಷಕ) ವಿ. ಕಳಿಸುವ, ಹಚ್ಚುವ, ಆಜ್ಞಾಪಿಸುವ, ಧರ್ಮಪ್ರಚಾರಕ, ದೇವದೂತ.

**प्रेषण** (ಪ್ರೇಷಣ) ನ. ಸ. ಕಳಿಸುವಿಕೆ, ಆಜ್ಞೆ, ಅಪ್ಪಣೆ.

**प्रेषित** (ಪ್ರೇಷಿತ) ಪು. ಕಳಿಸಿದ, ಹಚ್ಚಿದ, ಆಜ್ಞಾಪಿಸುವ. ೨. ದೇವದೂತ, ಯೇಸು.

**प्रेक्षक** (ಪ್ರೇಕ್ಷಕ) ಪು. ಸಂ. ನೋಡುವವ, ಪರೀಕ್ಷಿಸುವ, ಲಕ್ಷ್ಯವಿಡುವ, ವಿಚಾರಮಾಡುವ, ಆಲೋಚಿಸುವ.

**प्रेक्षण** (ಪ್ರೇಕ್ಷಣ) ನ. ಸಂ. ನೋಡುವಿಕೆ, ಪರೀಕ್ಷಿಸುವಿಕೆ, ಆಲೋಚಿಸುವಿಕೆ.

**प्रेक्षणे** (ಪ್ರೇಕ್ಷಣೇ) ಕ್ರಿ. ಸ. ನೋಡು, ಪ್ರೇಕ್ಷಿಸು, ಆಲೋಚಿಸು, ವಿಚಾರಮಾಡು.

**प्रेक्षा** (ಪ್ರೇಕ್ಷಾ) ಸ್ತ್ರೀ. ಸಂ. '**प्रेक्षण**' ನೋ.

**प्रेक्षागृह** (ಪ್ರೇಕ್ಷಾಗೃಹ) ನಾಟಕಶಾಲೆ, ಥೇಟರ್.

**प्रेक्षित** (ಪ್ರೇಕ್ಷಿತ) ವಿ. ಸಂ. ನೋಡಿದ, ನಿರೀಕ್ಷಿಸಿದ, ಆಲೋಚಿಸಿದ, ವಿಚಾರಮಾಡಿದ, ಮನ್ನಿಸಿದ.

**प्रोक्त** (ಪ್ರೋಕ್ತ) ವಿ. ಸಂ. ಹೇಳಿದ, ಅಂದ, ನುಡಿದ, ಮಾತಾಡಿದ.

**प्रोत्साहन** (ಪ್ರೋತ್ಸಾಹನ) ಶಿಫಾರಸು, ಹೊಗಳಿಕೆ, ಸ್ಫೂರ್ತಿ, ಉತ್ಸಾಹ, ಉತ್ತೇಜನ.

**प्रोत्साह** (ಪ್ರೋತ್ಸಾಹ) ಪು. ಸಂ. ಬೆಂಬಲ, ಹುರಿದುಂಬಿಸುವಿಕೆ, ಉಬ್ಬಿಸುವಿಕೆ.

**प्रोत्साहक** (ಪ್ರೋತ್ಸಾಹಕ) ಪು. ಹುರಿದುಂಬಿಸುವ, ಉಬ್ಬಿಸುವ, ಪ್ರೋತ್ಸಾಹಿಸುವ, ಉತ್ತೇಜಕ, ಚೈತನ್ಯಕೊಡುವ,

**प्रोत्साहित** (ಪ್ರೋತ್ಸಾಹಿತ) ವಿ. ಸಂ. ಉಬ್ಬಿಸಿದ, ಚೇತನನೀಡಿದ, ಉತ್ತೇಜಿತ, ಪ್ರೋತ್ಸಾಹಿತ,

**प्रोषित** (ಪ್ರೋಷಿತ) ವಿ. ಸಂ. ಪ್ರವಾಸದಲ್ಲಿದ್ದ, ಪರದೇಶಕ್ಕೆ ಹೋದ, **–भर्तृका** (ಭರ್ತೃಕಾ) ಸ್ತ್ರೀ. ಗಂಡ ಪರದೇಶಕ್ಕೆ ಹೋದ ಹೆಂಗಸು.

**प्रोक्षण** (ಪ್ರೋಕ್ಷಣ) ನ. ಸಂ. ಸಿಂಪಡಿಸುವಿಕೆ, ನೀರು ಗೊಜ್ಜುವಿಕೆ, ನೀರುಹನಿಸುವಿಕೆ, ಜಲಸಿಂಚನ.

**प्रोक्षणे** (ಪ್ರೋಕ್ಷಣೇ) ಕ್ರಿ. ಸಂ. ಸಿಂಪಡಿಸು, ಸಿಂಚನ ಮಾಡು, ಚಿಮುಕಿಸು, ನೀರುಗೊಜ್ಜು, ಚಿಮುಕು.

**प्रौढ** (ಪ್ರೌಢ) ವಿ. ಸಂ. ದೊಡ್ಡವನಾದ, ಹರೆಯದ, ಬಲಿತ, ಘನಪಡಿಸಿದ.

**प्रौढा** (ಪೌಢಾ) ಸ್ತ್ರೀ. ಸಂ. ಬೆಳೆದಾಕೆ, ನಡುಹರೆಯದಾಕೆ, ತರುಣಿ, ವಯಸ್ಸಾದ ಸ್ತ್ರೀ.

**प्रौढी** (ಪೌಢೀ) ಸ್ತ್ರೀ. ಸಂ. ಗರ್ವಸೊಕ್ಕು, ಸೊಗಸು, ಉತ್ತಮ ಶೈಲಿ, ಪರಿಪಕ್ವಾವಸ್ಥೆ, ಪ್ರೌಢದೆಸೆ.

**प्लव** (ಪ್ಲವ) ಪು. ಸಂ. ಡೋಣಿ, ಸಣ್ಣನಾವೆ, ಹರಗೋಲು.

**प्लवंग** (ಪ್ಲವಂಗ್) ಪು. ಸಂ.} ಮರಿಗ, ಮರ್ಕಟ,
**प्लवंगम** (ಪ್ಲವಂಗಮ್) ಪು. } ಕಪಿ, ವಾನರ.

**प्लीहा** (ಪ್ಲೀಹಾ) ಪು. ಪ್ಲೀಹ, ಗುಲ್ಮ, ನೀರ್ಗಂಟು, ಗುಲ್ಮರೋಗ, ೨. ವಿಷಾದ, ಚಿಂತೆ, ಹೊಟ್ಟೆಕಿಚ್ಚು, ಸಿಟ್ಟು.

**प्लुति** (ಪ್ಲುತಿ) ಸ್ತ್ರೀ. ಸಂ. ಜಿಗಿಯುವಿಕೆ, ಕುಣಿಯುವಿಕೆ, ಲಗಾಟೆ ಹೊಡೆಯುವಿಕೆ.

## फ ಫ

**फ** (ಫ) 'ಪ' ವರ್ಗದ ಎರಡನೆಯ ಅಕ್ಷರ.

**फककन–दिशी** (ಫಕಕನ–ದಿಶೀ) ಕ್ರಿ. ವಿ. ಫಕ್ಕನೆ, ಒಮ್ಮೆಲೆ, ಒಮ್ಮಿಂದೊಮ್ಮೆ.

**फक्कड** (ಫಕ್ಕಡ್) ಪು. ಫಾ. (ಫಾಖಿರಾ) ಸುಂದರವಾದ, ಚೆಂದ, ಉತ್ತಮವಾದ, ಸೊಗಸಿನ.

**फकडी** (ಫಕಡೀ) ಸ್ತ್ರೀ. ಫಾ. ಸೊಗಸಿನಾಕೆ, ಬೆಡಗಿನಾಕೆ, ಹೂವಿನ ಹೆಸರು.

**फक्त–स्त** (ಫಕ್ತ–ಸ್ತ) ಕ್ರಿ. ವಿ. ಅರ. ಕೇವಲ ಒಂದೇ ಒಂದು, ಒಂದೇಮಾತ್ರ, ಅದೊಂದು, ಒಬ್ಬನೆ.

**फकफक** (ಫಕ್‌ಫಕ್) ಕ್ರಿ. ವಿ. ಫಕ್‌ಫಕ್, ಫಕಾಕಾ, **पक्कन** ನೋ.

**फकाफका–फकाका** (ಫಕಾಫಕಾ–ಫಕಾಕಾ) ಫಕಾಫಕಾ.

**फकांडी** (ಫಕಾಂಡೀ) ಸ್ತ್ರೀ. ಸಂ. ನಗೆಚಾಟಿಕೆ, ಹಾಸ್ಯ, ನಿರರ್ಥಕಮಾತು, ಬಾಯ್ತುಂಬಿ ತಕ್ಕೊಳ್ಳುವಿಕೆ, ಮುಟ್ಟೆಗೆ ತುಂಬ ತಿನ್ನುವಿಕೆ.

**फकिरी** (ಫಕಿರೀ) ಸ್ತ್ರೀ. ಅರ. ಸನ್ಯಾಸ, ಬಡತನ, ಫಕೀರನ ಬಾಳ್ವೆ, ಭಿಕ್ಷುಕನ ಜೀವನ, ಭಿಕ್ಷೆ, ಮೋಹರಮಭಿಕ್ಷೆ.

**फकिरी दौलत** (ಫಕಿರೀ ದೌಲತ್) ಸ್ತ್ರೀ. ಅರ. ಬಡತನದ ಬಾಳ್ವೆ, ಚಂಚಲಸ್ವಭಾವ, ಕ್ಷಣಿಕ ಐಶ್ವರ್ಯ.

**फकिरीबाणा** (ಫಕಿರೀಬಾಣಾ) ಪು. ಭಿಕ್ಷುಕಿ, ಭಿಕ್ಷುಕನ ಉದ್ಯೋಗ.

**फकीर** (ಫಕೀರ್) ಪು. ಅರ. ಮುಸಲ್ಮಾನ ಭಿಕ್ಷುಕ. **चुकला फकीर मशीदीत** (ಚುಕಲಾ ಫಕೀರ ಮಶೀದೀತ್) ಮುಲ್ಲಾ ತಪ್ಪಿದರೆ ಮಸೀದೆಯಲ್ಲಿರುವನು.

**फक्कड** (ಫಕ್ಕಡ) ವಿ. ಅರ. ಉತ್ತಮ.

**फक्किका** (ಫಕ್ಕಿಕಾ) ಸ್ತ್ರೀ. ಸಂ. ಗಟ್ಟಿಮಾತು, ಸ್ಥಿರವಚನ, ಅಚಲವಚನ, ಸಿದ್ಧಾಂತ, ದೃಢ ನುಡಿ.

**फक्की** (ಫಕ್ಕೀ) ಸ್ತ್ರೀ. ಕಾಲಾವಧಿ.

**फजर** (ಫಜರ್) ಸ್ತ್ರೀ. ಅರ. ಬೆಳಗು.

**फजिती** (ಫಜಿತೀ) ಸ್ತ್ರೀ. ಅರ. ಸಂಕಟ, ಗೊಂದಲ, ಅಪಮಾನ, ಮಾನಭಂಗ, ಲಾಘವ, ಅಪಕೀರ್ತಿ.

**फजिंदार** (ಫಜಿಂದಾರ್) ಪು. ಅರ. ರೈತ, ಹೊಲ ಹಿಡಿಯುವವ, ಒಕ್ಕಲಿಗ.

**फजीत** (ಫಜೀತ್) ವಿ. ಅರ. ಲಜ್ಜಿತ, ನಾಚಿಕೆಗೆಟ್ಟ, ನಾಚಿದ, ಗೊಂದಲದಲ್ಲಿ ಬಿದ್ದ, ಭಂಗಿತ.

**फजीतखोर** (ಫಜೀತ್‌ಖೋರ್) ವಿ. ಅರ+ಫಾ. ಸದೈವ ಅವಮಾನಿತ, ಯಾವಾಗಲೂ ನಾಚಿಕೆಗೆಡುವ, ಗೇಲಿಹೊಂದುವ, ಹಾಸ್ಯಾಸ್ಪದನಾದ.

**फज्जा** (ಫಜ್ಜಾ) ಪು. **फजिती** ನೋ.

**फट** (ಫಟ್) ಸ್ತ್ರೀ. ಅಂತರ, ಎಡೆ, ಸಂದು, ಒಡಕು, ಬಿರುಕು, ಝುಣತ್ಕಾರ, ಗುಪ್ತಸ್ಥಳ.

**फटफजिती** (ಫಟ್‌ಫಜಿತೀ) ಸ್ತ್ರೀ. ದುರ್ದೆಸೆ, ಹೀನಸ್ಥಿತಿ, ಅಪಮಾನ, ಮಾನಗೇಡಿತನ.

**फटम्हणता ब्रम्हराक्षस** (ಫಟ್‌ಮ್ಹಣತಾ ಬ್ರಹ್ಮರಾಕ್ಷಸ) (ಗಾದೆಯ ಮಾತು) ಸಣ್ಣ ತಪ್ಪಿನಿಂದ, ದೊಡ್ಡ ಹಾನಿ.

**फटपडणे** (ಫಟ್‌ಪಡಣೇ) ಕ್ರಿ. ಅ. ಒಡಕುಮಾಡು, ಒಡಕನ್ನುಂಟುಮಾಡು, ೨. ಕ್ರಿ. ಸಂ. ಒಡೆ, ಭೇದಿಸು, ಬಿರುಕು, ಕೆಡಹು.

**फटक** (ಫಟಕ್) ಅಗದಿ... ಹಾಲು (ಬೆಳ್ಳಗೆ)

**फटकडा** (ಫಟಕಡಾ) ಪು. ಫಟಾಕ್ಷೆ, ಫಟಾಕಿ.

**फटकडी** (ಫಟಕಡೀ) ಸ್ತ್ರೀ. ಸ್ಫಟಿಕ, ಫಟಕ, ಫಟಿಗಾರ, ಫಟಾಕ್ಷೆ, ಫಟಾಕಿ, ೨. ವಿ. ಚುರುಕಾದ, ಉಲ್ಲಾಸವುಳ್ಳ, ಚಪಲವಾದ, ಚಟುವಟಿಕೆಯ.

**फटकन** (ಫಟಕನ್) ಕ್ರಿ. ವಿ. ಒಮ್ಮೆಲೆ, ವಿಚಾರ ಮಾಡದೆ.

**फटकणे** (ಫಟಕಣೇ) ಕ್ರಿ. ಸಂ. ಸಾಣಿಸು, ಸೋಸು, ಶೋಧಿಸು, ತಪಾಸಿಸು, ಕೇರು, ಗಾಳಿಹಾಕು, ರೆಕ್ಕೆಬಡೆ, ಕೊಡಹು, ಒದರು, ಅಗಲಾಗು, ದೂರಾಗು.

**फटकून असणे** (ಫಟಕೂನ್ ಅಸಣೇ) ದೂರ ಇರು, ದಾಕ್ಷಿಣ್ಯ ತೋರದಿರು, ಹಿಂದೆ ಸರಿ, ಸಂಬಂಧಕಡಿ,

**फटकफटक** (ಫಟಕಫಟಕ) ಕ್ರಿ. ವಿ. ಮೊಟ್ಟೆಯ ಸಪ್ಪಳಮಾಡುತ್ತ.

**फटकफळी** (ಫಟಕ್‌ಫಳೀ) ಸ್ತ್ರೀ. ಆಟಿಗೆಯ, ಬಂದೂಕು, ಆಟಿಗೆಯ ಪಿಸ್ತೂಲು.

**फटकर** (ಫಟಕರ್) ನ. ಹರಿದ ಬಟ್ಟೆಯ ತುಂಡು, ಚಿಂದಿ.

**फटकळ** (ಫಟಕಳ್) ವಿ. ಮನಬಂದಂತೆ ಮಾತಾಡುವ, ಭಿಡೆಯಿಲ್ಲದೆ ಮಾತಾಡುವ, ನಿರ್ಭೀತ, ಖಂಡಿತವಾದಿ.

**फटका** (ಫಟಕಾ) ಪು. ಊರಬಾಗಿಲು, ಅಗಸೆ. ೨. ಪೆಟ್ಟು, ಹೊಡೆತ, ದೆಬ್ಬೆ, ಗೀಟು.

**फटकाफटकी** (ಫಟಕಾಫಟಕೀ) ಸ್ತ್ರೀ. ಜಗಳ, ಸಣ್ಣ ಹೋರಾಟ. ೨. ಕ್ರಿ. ವಿ. ಒಮ್ಮೆಲೆ, ಕೂಡಲೇ, ನೋಡನೋಡುತ್ತ, ತತ್‌ಕ್ಷಣ.

**फटकारणी** (ಫಟಕಾರಣೀ) ಸ್ತ್ರೀ. ಧಿಕ್ಕರಿಸುವಿಕೆ, ದೂಡುವಿಕೆ, ನಿಂದಿಸುವಿಕೆ, ಹೊಡೆಯುವಿಕೆ, ಧಕ್ಕೆ ಕೊಡುವಿಕೆ.

**फटकारणे** (ಫಟಕಾರಣೇ) ಕ್ರಿ. ಸಂ. ಧಿಕ್ಕರಿಸು, ದೂಡು, ನಿಂದಿಸು, ಹೊಡೆ, ನೂಕು, ಕೌಶಲ್ಯದಿಂದ ನೀಗಿಸು.

**फटकारा** (ಫಟಕಾರಾ) ಪು. ದೂಡುವಿಕೆ, ಧಿಕ್ಕರಿಸುವಿಕೆ, ಹೊಡೆತ, ಧಕ್ಕೆಕೊಡುವಿಕೆ, ಬೆತ್ತದ ಹೊಡೆತ, ಬಾರಕೋಲಿನ ಹೊಡೆತ, ಚೇಳಿನ ಕೊಂಡೆಯ ಹೊಡೆತ, ಲಾವಣಿಪದ.

**फटकाऱ्याचा पाऊस** (ಫಟಕಾರ್ಯಾಚಾಪಾಊಸ್) ಪು. ರಭಸದ ಮಳೆ, ಮುಸಲ, ಧಾರೆ ಮಳೆ.

**फटकी** (ಫಟಕೀ) ಸ್ತ್ರೀ. ಫಟಕ, ಫಟಿಗಾರ, ಸ್ಫಟಿಕ. ೨. ಬಾರಕೋಲಿನ ಏಟು.

**फटकुरी** (ಫಟಕುರೀ) ಸ್ತ್ರೀ.
**फटकूर** (ಫಟಕೂರ್) ನ. } ಪಟಕಾರ 'फटकर' ನೋ.

**फटफट** (ಫಟಫಟ್) ಕ್ರಿ. ವಿ. ಫಡಫಡ ಎಂದು, ಫಟಫಟ ಎಂದು.

**फटाफट** (ಫಟಾಫಟ್) ಕ್ರಿ. ವಿ. ಫಟ್‌ಫಟ್ ಎಂದು ೨. ಬೇಗ.

**फटफटणे** (ಫಟಫಟಣೇ) ಕ್ರಿ. ಅ. ಬೆಳಗಾಗು, ಹೊತ್ತುಹೊರಡು, ತೀಡಲುಹರಿ, ಕೆಂಪುಮೂಡು.

**फटफटीत उजाडणे** (ಫಟಫಟೀತ್ ಉಜಾಡಣೇ) ಕ್ರಿ. ಅ. ಬೆಳಕುಹರಿ, ತೀರಬೆಳಗಾಗು, ಸಂಪೂರ್ಣ ಬೆಳಗಾಗು.

**फटफटणे** (ಫಟಫಟಣೇ) ಗಳದ ಬೀಸಣಿಕೆ.

**फटफटीत** (ಫಟಫಟೀತ್) ಕ್ರಿ. ವಿ. ಪೂರಾ ಬೆಳಗಾದ, ತೀರಬೆಳಗಾದ, ಕಳೆಗುಂದಿದ, ಬಾಡಿದ, ಕಂದಿದ, ಪಾಂಡುರ, ನಿಸ್ತೇಜ, ಕಳಾಹೀನ.

**फटफटे** (ಫಟಫಟೇ) ನ. **फटकटणे** ನೋ.

**फटविणे** (ಫಟವಿಣೇ) ಕ್ರಿ. ಸಂ. ಮೋಸಮಾಡು, ಠಕ್ಕಿಸು, ವಂಚಿಸು, ಕೈಕೊಡು.

**फटसट** (ಫಟಸಟ್) ಕ್ರಿ. ವಿ. ಬೈಯುತ್ತ, ನಿಂದಿಸುತ್ತ, ಹಳಿಯುತ್ತ, ಹೀಯಾಳಿಸುತ್ತ.

**फटसाळ** (ಫಟಸಾಳ್)
**फटसूळ** (ಫಟಸೂಳ್)
**तोंडाचा फटसूळ** (ತೋಂಡಾಚಾ ಫಟಸೂಳ್) } **फटकळ** ನೋ.

**फटाकडा** (ಫಟಾಕಡಾ)
**फटाकडी** (ಫಟಾಕಡೀ) ಸ್ತ್ರೀ. } ಫಟಾಕ್ಷಿ, ಫಟಾಕಿ, ಚುರುಕ ಹುಡುಗ,

**फटाका** (ಫಟಾಕಾ) ಪು. ಪಟಾಕ್ಷೆ, ಪಟಾಕಿ.

**फटाकफळी** (ಫಟಾಕ್‌ಫಳೀ) ಸ್ತ್ರೀ. **फटक फळी** ನೋ. ಸುಂದರಬಾಲೆ, ಚುರುಕು ಹುಡುಗಿ.

**फटाटणे** (ಫಟಾಟಣೇ) ಕ್ರಿ. ಅ. ಓಂಪಸ್ ಆಗು, ಏನೂ ಇಲ್ಲದಾಗು, ಪುಸ್‌ಆಗು, ನಿಷ್ಫಲವಾಗು, ವ್ಯರ್ಥವಾಗು.

**फटाटा** (ಫಟಾಟಾ)
**फटाफटा** (ಫಟಾಫಟಾ) ಕ್ರಿ. ವಿ. } 'फटफट' ನೋ. ಬಾಯಿಗೆ ಬಂದಂತೆ

**फटावळ** (ಫಟಾವಳ್) ಹಣ್ಣು ಬೀಳುವಿಕೆ, ಹಣ್ಣು ಇಳಿಸುವಿಕೆ.

**फटिंग** (ಫಟಿಂಗ) ಪು. ಒಬ್ಬಂಟಿಗ, ನೆಂಟರಿಲ್ಲದವ, ಬಳಗವಿಲ್ಲದವ.

**फट्टचा** (ಫಟ್ಟ್ಯಾ)
**फटचा** (ಫಟ್ಯಾ) } ವಿ. ಸ್ವತಂತ್ರ, ನಿರ್ಬಂಧಿತ, ದಿಟ್ಟ, ಯಾರಿಗೂ ಮನ್ನಿಸದ, ಲಕ್ಷಿಸದ, ಬೆಲೆಗೊಡದ.

**बरकडी** (ಬರಕಡೀ) ಸ್ತ್ರೀ. ಪಕ್ಕೆ, ಪಕ್ಕೆಲುಬು.

**बरकत** (ಬರಕತ್) ಸ್ತ್ರೀ. ಅರ. ಯಶಸ್ಸು, ಹೆಚ್ಚಳ, ಅಭ್ಯುದಯ, ಪ್ರಸಾದ.

**बरकंदाज** (ಬರಕಂದಾಜ್) ಪು. ಫಾ. ಬಂದೂಕಧಾರಿ ಮನುಷ್ಯ.

**बरकंदाजी** (ಬರಕಂದಾಜೀ) ಸ್ತ್ರೀ. ಫಾ. ಬಂದೂಕ ಹೊಡೆಯುವಿಕೆ, ತುಂಬಾಕಿಯಿಂದ ಗುರಿಹೊಡೆಯುವಿಕೆ.

**बरकन-दिशी** (ಬರಕನ್-ದಿಶೀ) ಕ್ರಿ. ವಿ. ಬೇಗನೆ, ಭರದಿಂದ.

**बरकशी** (ಬರಕಶೀ) ಸ್ತ್ರೀ. ಫಾ. ಸ್ಪರ್ಧೆ, ಹೋರಾಟ, ಮೇಲಾಟ. ೨. ಅಸೂಯೆ, ಹೊಟ್ಟೆಕಿಚ್ಚು.

**बरका** (ಬರಕಾ) ವಿ. ಮೆತ್ತಗಿನ, ಮೆತ್ತಗಾದ, ಸಡಿಲು, ಸೈಲಾದ.

**बरखान** (ಬರಖಾನ್) ಸ್ತ್ರೀ. 'बरकत' ನೋ.

**बरखास-स्त** (ಬರಖಾಸ್-ಸ್ತ) ವಿ. ಫಾ. ಮುಕ್ತವಾದ, ಮುಗಿದ, ಸಮಾಪ್ತಿಯಾದ.

**बरग** (ಬರಗ್) ಪು. ನವಣೆ ಜಾತಿಯ ಒಂದು ಧಾನ್ಯ, 'ಬರಗ'

**बरगडी** (ಬರಗಡೀ) ಸ್ತ್ರೀ. ಪಕ್ಕೆಲುಬು, ಎದೆಯೆಲುಬು.

**बरगडी मोडणें** (ಬರಗಡೀ ಮೋಡಣೇ) ಕ್ರಿ. ಸ. ಪಕ್ಕೆಲುಬು ಮುರಿ, ಬಹಳ ದುಡಿ.

**बरगा** (ಬರಗಾ) ಪು. ಜಂತೆ, ಹಲಗೆ, ಅಡ್ಡಜಂತೆ.

**बरगेण** (ಬರಗೇಣ) ನ. ಬರಗಿನ ಹುಲ್ಲು.

**बरची-छी** (ಬರಚಿ-ಛೀ) ಸ್ತ್ರೀ. ಹಿಂ. ಬರ್ಚಿ, ಭಾಲೆ.

**बरड** (ಬರಡ್) ಪು. ಕಾಳಿನೊಳಗಿನ ಹುಳು, ಕೃಮಿ, ನುಸಿ.

**तुरी-बरोबर बरड चिरडणार** (ತುರೀ ಬರೋಬರ್ ಬರಡ್ ಚಿರಡಣಾರ್) ವಿ. ಗಾದೆಯ ಮಾತು. ತೊಗರಿ ಧಾನ್ಯದೊಡನೆ ಹುಳವೂ ಬೀಸಲ್ಪಡುತ್ತದೆ ತೊಗರಿಯೊಡನೆ ನುಸಿಯೂ ಬೀಸಲ್ಪಡುತ್ತದೆ. (ನಿತ್ಯದ ಕೆಲಸದಲ್ಲಿ ನಿಷ್ಪಾಪ ಪ್ರಾಣಿಯ ಜೀವ ಹೋಗುತ್ತದೆ.)

**बरडा** (ಬರಡಾ) ಪು. ಬರಡಾ ಅಡಿಕೆ, ಕಲ್ಲಡಿಕೆ, ರಾಶಿ ಅಡಿಕೆ.

**बरडीसुपारी** (ಬರಡೀಸುಪಾರೀ) 'बरडा' ನೋ.

**बरणी** (ಬರಣೀ) ಸ್ತ್ರೀ. ಹಿಂ. ಭರಣಿ, ಚೀನೀ ಮಣ್ಣಿನ ಪಾತ್ರೆ, ಪುಷ್ಪಕರಂಡಕ.

**बरतरफ** (ಬರತರಫ್) ವಿ. ಫಾ. ಡಿಸಮಿಸ್ ಮಾಡಿದ, ಕೆಲಸದಿಂದ ತೆಗೆದೊಗೆದ.

**बरतरफी** (ಬರತರಫೀ) ಸ್ತ್ರೀ. ಫಾ. ಕೆಲಸದಿಂದ ತೆಗೆದುಹಾಕುವಿಕೆ.

**-बरदार** (-ಬರದಾರ್) ವಿ. (ಪ್ರತ್ಯಯ) ಫಾ. ಒಯ್ಯುವವ, ಧಾರಣ ಮಾಡುವವ.

**बरदास्त** (ಬರದಾಸ್ತ್) ಸ್ತ್ರೀ. ಫಾ. ವ್ಯವಸ್ಥೆ, ಸೇವೆ, ಚಾಕರಿ, ನೌಕರಿ, ಆದರಾತಿಥ್ಯ.

**बरफ** (ಬರಫ) ಪು. ಫಾ. ಐಸ್, ಬರ್ಫು, ಮಂಜುಗಡ್ಡೆ.

**बरफी** (ಬರಫೀ) ಸ್ತ್ರೀ. ಫಾ. ಬರ್ಫಿ, ಒಂದು ತರದ ಮಿಠಾಯಿ.

**बरबट** (ಬರಬಟ್) ಪು. ಪಾನಕ, ಮಿಶ್ರಣ.

**बरबटणें** (ಬರಬಟಣೇ) ಕ್ರಿ. ಅ. ಲೇಪಿಸು, ಮೈಗೆ ಹಚ್ಚು, ಒರೆಸು, ಸವರು, ಬಳಿ.

**बरबरीत** (ಬರಬರೀತ್) ವಿ. ನೀರು ನೀರಾದ, ಮೆತ್ತಗಾದ, ನಜ್ಜುಗುಜ್ಜು, ಜಿಬಿಜಿಬಿ.

**बरमा-बर्मा** (ಬರಮಾ-ಬರ್ಮಾ) ಪು. ಹಿಂ. ಬಡಿಗನ ಉಪಕರಣ.

**बरवटा, बरवंटा** (ಬರವಟಾ -ಬರವಂಟಾ) ವಿ. ಸುಂದರ, ಚಂದಕಾಣುವ.

**बरवा** (ಬರವಾ) ವಿ. ಒಳ್ಳೆಯ, ಸುಂದರ, ಮೋಹಕ, ಚೆಂದವಾದ.

**बरसात** (ಬರಸಾತ್) ಸ್ತ್ರೀ. ಹಿಂ. ಮಳೆಗಾಲ, ವರ್ಷಾಕಾಲ.

**बरहुकूम** (ಬರ್‌ಹುಕೂಮ್) ಕ್ರಿ. ವಿ. ಅರ. ಅಂತೆ, ಅನುಸರಿಸಿ.

**बरळ** (ಬರಳ್) ಸ್ತ್ರೀ. ಹೊಂದಿಕೆಯಿಲ್ಲದ ಭಾಷಣ, ಅವ್ಯವಸ್ಥಿತ ಭಾಷಣ. ವಿ. ಹೊಂದಿಕೆಯಿಲ್ಲದ, ವಿಸಂಗತ, ಅಸಂಬದ್ಧ.

**बरळणें** (ಬರಳಣೇ) ಕ್ರಿ. ವಿ. ಹೊಂದಿಕೆಯಿಲ್ಲದೆ ಮಾತಾಡು, ವಿಸಂಗತ ಮಾತನಾಡು, ಬಡಬಡಿಸು.

**बरा** (ಬರಾ) ಕ್ರಿ. ವಿ. ಒಳ್ಳೆಯ, ಚೆಲೋ, ಸುರಕ್ಷಿತ, ಕುಶಲ, ಬೇನೆಯಿಂದ ನೆಟ್ಟಗಾದ, ಬಹಳ ನೆಟ್ಟಗೆ, ವೇಳೆಗನುಸರಿಸಿ.

**बराडी** (ಬರಾಡೀ) ವಿ. ಬಹಳ ಹಸಿದ, ಹಸಿದು ಕಂಗಾಲಾದ, ಹೊಟ್ಟೆಗಿಲ್ಲದೆ ಬಳಲಿದ, ಕ್ಷುಧಾರ್ತ. ಹೊಟ್ಟೆಬಾಕ, ತಿಂಡಿಬಾಕ.

**बरात** (ಬರಾತ್) ಸ್ತ್ರೀ. ಹಿಂ. ಇಸ್ಪೇಟ ಆಟದಲ್ಲಿಯ ರಾಜಾ–ರಾಣಿ. ೨. ತೆರಿಗೆಯ ವರದಿ. ೩. ಮೆರವಣಿಗೆ, ವಧೂವರರ ಮೆರವಣಿಗೆ.

**बराबर** (ಬರಾಬರ್) ಕ್ರಿ. ವಿ. ಫಾ. ಸರಿ, ಯೋಗ್ಯ, ತಕ್ಕ, ಸರಿಜೋಡಿಯಾಗಿ, ಕೂಡಿಕೊಂಡು.

**बरावाईट** (ಬರಾವಾಈಟ್) ವಿ. ಯಾವುದೇ ಬಗೆಯ ಕೆಟ್ಟ ಮಾತು.

**बरीक** (ಬರೀಕ್) ಕ್ರಿ. ವಿ. ವಾಸ್ತವಿಕ, ನಿಜವೆಂದರೆ, ಮಾತ್ರ.

**बरीगत** (ಬರೀಗತ್) ಸ್ತ್ರೀ. **बरकत** ನೋ.

**बरू** (ಬರೂ) ಪು. ಗಲಗು, ಬರೆಯುವ ಕಡ್ಡಿ.

**बरें** (ಬರೇ) ನ. ಕಲ್ಯಾಣ, ಹಿತ, ಸುಸ್ಥಿತಿ. ಕ್ರಿ. ವಿ. ನೆಟ್ಟಗೆ, ಒಳ್ಳೆಯದು, ಆಗಲಿ.

**ज्याचे करावे बरें तो म्हणतो माझेच खरे** (ಜ್ಯಾಚೇ ಕರಾವೇ ಬರೇ ತೋ ಮ್ಹಣತೋ ಮಾಝೇಚ್ ಖರೇ) ಗಾದೆಯ ಮಾತು. (ತಾನು) ಒಳ್ಳೆಯ ಬುದ್ಧಿಯಿಂದ ಮಾಡಿದರೂ (ಅನ್ಯರು) ತಮ್ಮದನ್ನು ಬಿಡರು.

**बरे मागणें इच्छिणे** (ಬರೇ ಮಾಗಣೇ ಇಚ್ಛಿಣೇ) ಕ್ರಿ. ಸ. ಒಳ್ಳೆಯದನ್ನು ಬೇಡಿಕೊ.

**बरोद** (ಬರೋದ್) ಪು. ಜಂತಿ, ಹಲಗೆ.

**बल** (ಬಲ್) ನ. ಸಂ. ಶಕ್ತಿ, ಸಾಮರ್ಥ್ಯ, ಕಸುವು, ವರ್ಚಸ್ಸು, ಸೈನ್ಯ, ಸೇನಾ.

**बलक** (ಬಲಕ್) ಪು.ಫಾ. ತತ್ತಿಯೊಳಗಿನ ಬಿಳಿಯರಸ, ಹಣ್ಣಿನ ತಿಳಿಲು.

**बल्की, बलकी** (ಬಲ್ಕೀ ಬಲಕೀ) ಕ್ರಿ. ವಿ. ಅರ. ಆದರೆ, ಇಷ್ಟೇ ಅಲ್ಲ,– ಆದರೆ, ಆದರೆ, ಹೀಗಿದ್ದರೆ, ಪರಂತು.

**बलकी** (ಬಲಕೀ) ಸ್ತ್ರೀ. ವೇಣು, ಕೊಳಲು.

**बलकुबल** (ಬಲಕುಬಲ್) ಸ್ತ್ರೀ. ಗಂಡಾಂತರ ಸಮಯ, ಪರೀಕ್ಷಾಕಾಲ, ದೈವಪರೀಕ್ಷಾಕಾಲ.

**बलबल** (ಬಲಬಲ್) ಸ್ತ್ರೀ. ಒದರುವಿಕೆ, ಗೊಂದಲ, ಅವ್ಯವಸ್ಥೆ, ಗಲಿಬಿಲಿ, ಗೊಂದಲ, ಕಂಗೆಡಿಕೆ.

**बलबलीत** (ಬಲಬಲೀತ್) ವಿ. ಮೆತ್ತಗಾದ, ಮೃದುವಾದ.

**बलवत्तर** (ಬಲವತ್ತರ) ವಿ. ಸಂ. ಗಟ್ಟಿ, ಸಾಮರ್ಥ್ಯವುಳ್ಳ, ಶಕ್ತಿವಂತ.

**बलवान्, बलवन्त** (ಬಲವಾನ್, ಬಲವಂತ) ವಿ. ಗಟ್ಟಿಮುಟ್ಟಿಯಾದ.

**बलागत** (ಬಲಾಗತ್) ಸ್ತ್ರೀ. ಅರ. ಅಡಚಣಿ, ಆತಂಕ, ಗಂಡಾಂತರ, ದುರ್ದೈವ.

**बलांट–बलाट बालंट–बालांट** (ಬಲಾಂಟ್–ಬಲಾಟ್ ಬಾಲಂಟ್ ಬಾಲಾಂಟ್) ನ. ಇಂ. ಆರೋಪ, ಕಲಂಕ, ವಾರಂಟ್, ಅಸತ್ಯಾರೋಪ, ಸುಳ್ಳು ದೂಷಣೆ, ಮಿಥ್ಯಾರೋಪ.

**बला(लां)टाखोर** (ಬಲಾ(ಲಾಂ)ಟಾಖೋರ) ವಿ. ಆರೋಪಕ, ನಿಂದಕ, ಅವಮಾನಗೊಳಿಸುವ, ಮಿಥ್ಯಾರೋಪ ಹೊರಿಸುವ, ಅಪವಾದ ಹೊರಿಸುವ.

**बलाढ्य** (ಬಲಾಢ್ಯ) ವಿ. ಸಂ. ಶೂರ, ಬಲವಂತ ಶಕ್ತಿಯುಳ್ಳ, ಕಸುವಿನ, ವರ್ಚಸ್ಸಿನ.

**बलात्कार** (ಬಲಾತ್ಕಾರ್) ಪು. ಸಂ. ಬಲಾತ್ಕಾರ, ಕೆಡಿಸುವಿಕೆ, ಬಲಪ್ರಯೋಗ ಮಾಡಿ ಮಾಡಿದ ಸಂಭೋಗ.

**बलाबल** (ಬಲಾಬಲ) ನ. ಸಂ. ಯೋಗ್ಯಾಯೋಗ್ಯತೆ, ಸಾಮರ್ಥ್ಯ, ಶಕ್ತಿ, ಬಲಾಬಲ ತುಲನೆ.

**बलामत** (ಬಲಾಮತ್) ನ. ಮಿಥ್ಯಾರೋಪ, ಅಸತ್ಯ ದೋಷಾರೋಪ.

**बलाय** (ಬಲಾಯ) ಪು. ಅರ. ಆಪತ್ತು, ಗಂಡಾಂತರ.

**शाहाण्याची बलायदूर** (ಶಾಹಾಣ್ಯಾಚೀ ಬಲಾಯ ದೂರ್) ಗಾದೆಯ ಮಾತು. ಜಾಣನಿಂದ ಕುತ್ತು ದೂರದಲ್ಲಿರುತ್ತದೆ.

**बलिदान** (ಬಲಿದಾನ್) ನ. ನೈವೇದ್ಯ, ಅರ್ಪಣೆ, ಬಲಿ. ೨. ಆತ್ಮತ್ಯಾಗ, ಸ್ವಾರ್ಥತ್ಯಾಗ.

**बलिप्रतिपदा** (ಬಲಿಪ್ರತಿಪದಾ) ಸ್ತ್ರೀ. ಸಂ. ಕಾರ್ತಿಕ ಶುದ್ಧ ಪ್ರತಿಪದಾ, ಬಲಿಪ್ರತಿಪದಾ, ಕಾರ್ತಿಕಶುದ್ಧ ಪಾಡ್ಯ.

**बलिष्ठ** (ಬಲಿಷ್ಠ) ಸಂ. ವಿ. ಶಕ್ತಿಯುಳ್ಳ, ಸಾಮರ್ಥ್ಯಶಾಲಿ, ಬಲವಂತ, ಶಕ್ತಿವಂತ.

**बलिहरण** (ಬಲಿಹರಣ) ನ. ಸಂ. ದೇವರಿಗೆ ತೋರಿಸುವ ನೇವೇದ್ಯ.

**बली** (ಬಲೀ) ವಿ. ಸಂ. ಬಲವಂತ, ಗಟ್ಟಿಗ, ಕಸುವುಳ್ಳವ.

**बलीवर्द** (ಬಲೀವರ್ದ) ಪು. ಸಂ. ಹೋರಿ, ವೃಷಭ, ಎತ್ತು, ಬೆಲೆಏರಿಸುವುದರಲ್ಲಿ ಮಗ್ನನಾಗಿರುವವ.

**बलुते** (ಬಲುತೆ) ನ. ಕ. (ಬಲ್ಲವರ್) ಗ್ರಾಮದಲ್ಲಿಯ ಉದ್ದಿಮೆಗಾರರು (ಬಡಿಗ, ಅಗಸ ಮುಂ.)

**बलुतेदार** (ಬಲುತೇದಾರ್) ಪು. ಹಳ್ಳಿಯಲ್ಲಿಯ (ಬಡಿಗ, ಹಜಾಮ ಮುಂ.) ಉದ್ದಿಮೆಗಾರರು.

**बशर्त** (ಬಶರ್ತ) ಕ್ರಿ. ವಿ. ಅರ. ಷರತ್ತಿನಿಂದ, ವಿಕಲ್ಪ ದಿಂದ.

**बशी** (ಬಶೀ) ಸ್ತ್ರೀ. ಪೋ. ತಟ್ಟೆ, ಟೀ ಕುಡಿಯುವ ಹರವಾದ ಚೀನಾ ಮಣ್ಣಿನ ಪಾತ್ರೆ, 'ಸಾಸರ'

**बस** (ಬಸ್) ಕ್ರಿ. ವಿ. ಫಾ. ಸಾಕು, ಸಾಕಷ್ಟಾಗಿ.

**बस करणें** (ಬಸ್‌ಕರಣೇ) ಕ್ರಿ. ಸ. ಸಾಕುಮಾಡು, ನಿಲ್ಲಿಸು, ಕೈಹಿಂದೆಳೆ, ಬಿಟ್ಟುಬಿಡು, ದೂರವಾಗು.

**बस** (ಬಸ್) ಪು. ಸ್ಥಿರತೆ, ಸಲುಗೆ, ಸಲುಗೆಯ ಭಾವನೆ, ಆತ್ಮೀಯಭಾವನೆ.

**बसक–कण** (ಬಸಕ–ಕಣ) ಸ್ತ್ರೀ. ಪಾದಟ್ಟಿಗೆ, ಗದ್ದಿಗೆ ಕಲ್ಲು, ಪೀಠ, ಕಟ್ಟೆ.

**बसकट** (ಬಸಕಟ್) ಸ್ತ್ರೀ. ಹಟಮಾರಿತನ.

**बसकट मारणे** (ಬಸಕಟ್ ಮಾರಣೇ) ಕ್ರಿ. ಅ. ಗಟ್ಟಿಯಾಗಿ ಕೂಡು, ಬಾಗಿಲುಹಿಡಿದು ಕೂಡು, ನೀಚ, ಇಳಿಜಾರಾದ, ಸಮಪಾತಳಿಯ.

**बसकर** (ಬಸಕರ್) ನ. ಕೂಡುವತಟ್ಟು, ಜಮುಖಾನೆ. ರತ್ನಗಂಬಳಿ, ಚಾಪೆ, ತಟ್ಟೆಕಂಬಳಿ, ಉಣ್ಣೆಯತಡಿ.

**बसणी** (ಬಸಣೀ) ಸ್ತ್ರೀ. ಕೂಡುವಿಕೆ, ಜರಗುವಿಕೆ, ಪರಿಷತ್ತು, ಸಭೆ, ಅಧಿವೇಶನ, ಕಾರ್ಯನಿರ್ವಹಣ ಕಾಲ, ತಳವೂರುವಿಕೆ.

**बसणे** (ಬಸಣೇ) ಕ್ರಿ. ಅ. ಕೂಡು, ರೋಮಾರಿಯಾಗು, ಅಡ್ಡವಾಗು, ಸ್ಥಾಪಿತವಾಗು, ಇಳಿ, ಕಡಿಮೆಯಾಗು, ಪರೀಕ್ಷೆಗೆ ಕೂಡು.

**बसता** (ಬಸತಾ) ವಿ. ಸ್ಥಿರನಾಗುವ, ಕೂಡುವವ.

**बसफुगडी** (ಬಸ್‌ಫುಗಡೀ) ಸ್ತ್ರೀ. ಹುಡುಗಿಯರ ಫುಗಡಿ ಆಟದ ಒಂದು ಬಗೆ. ೨. ನಂದಿ, ಶಿಲಾನಂದಿ, ಬಸವಣ್ಣನಮೂರ್ತಿ.

**बसव–ण्ण** (ಬಸವ–ಣ್ಣ) ಪು. ಕ. (ಸಂ.–ವೃಷಭ) ಬಸವಣ್ಣನವರು. ೨. ಎತ್ತು.

**बसविणे** (ಬಸವಿಣೇ) ಕ್ರಿ. ಸ. ಕುಳ್ಳಿರಿಸು, ಪ್ರಸ್ತಾಪಿಸು, ಗಟ್ಟಿಮಾಡು. ೨. ಕರಹೇರು.

**बसवी** (ಬಸವೀ) ಸ್ತ್ರೀ. ಕ. ಸೂಳೆ, ಹಾದರಗಿತ್ತಿ.

**बसंत** (ಬಸಂತ್) ಪು. ಸಂಗೀತದ ಒಂದು ರಾಗ, ಬಸಂತರಾಗ.

**बसंती** (ಬಸಂತೀ) ವಿ. ಕೆಂಪು ಮೂಡಿಯ (ಬಣ್ಣ)

**बस्त** (ಬಸ್ತ್) ಪು. ಟಗರು.

**बस्ता** (ಬಸ್ತಾ) ಪು. ಫಾ. ಹತ್ತಿಯಗಂಟು, ಅರಿವೆಯ ಗಂಟು.

**बस्तान** (ಬಸ್ತಾನ್) ನ. ಫಾ. ವ್ಯವಸ್ಥೆ, ಪ್ರಸ್ಥಾಪನೆ.

**बस्तियंत्र** (ಬಸ್ತಿಯಂತ್ರ) ನ. ಬಸ್ತಿ, ಎನಿಮ, ಮಲ ವಿಸರ್ಜನವಾಗಬೇಕೆಂದು ಉಪಯೋಗಿಸುವ ಪಿಚಕಾರಿ.

**बस्तिनलिका** (ಬಸ್ತಿನಲಿಕಾ) ಸ್ತ್ರೀ. (ಎನಿಮಾ) ರಬ್ಬರನ, ಕೊಳವೆ.

**बस्ती** (ಬಸ್ತೀ) ಸ್ತ್ರೀ. ಬಸದಿ, ಜೈನಮಂದಿರ, ಜೈನ ಧರ್ಮ ಸಂಪ್ರದಾಯ. ೨. ಕೆಳಹೊಟ್ಟೆ, ತಿಗ.

**बहकणें** (ಬಹಕಣೇ) ಕ್ರಿ. ಅ. ತಪ್ಪುಮಾಡು, ತಪ್ಪುಹಾದಿ ಹಿಡಿ.

**बहक(का)विणें** (ಬಹಕ(ಕಾ)ವಿಣೇ) ತಿರುಗಿಸು, ತಿರುಗಾಡಿಸು, ತಪ್ಪುಮಾಡಿಸು, ತಪ್ಪುಹಾದಿ ಹಿಡಿಸು, ಅಂಡಲೆಯಿಸು, ಚಿತಾವಣೆಮಾಡು.

**बहंगी** (ಬಹಂಗೀ) ಸ್ತ್ರೀ. ಕವಡಿಕೆ, ಕಾವಡಿ.

**बह(हा)र** (ಬಹ(ಹಾ)ರ್) ಸ್ತ್ರೀ. ಫಾ. ಹಂಗಾಮು. ೨. ಮೋಜು. ೩. ತಾರುಣ್ಯಕಾಲ.

**बह(हा)र मारणें** (ಬಹ–ಹಾರ್ ಮಾರಣೇ) ಕ್ರಿ. ಅ. ಮೋಜುಮಾಡು, ಆನಂದಪಡು, ಆನಂದದಿಂದ ಉತ್ಸಾಹಿತನಾಗು.

**बहाणा** (ಬಹಾಣಾ) ಪು. ಫಾ. ನೆವ, ನಿಮಿತ್ತ, ಕಾರಣ, ಕಪಟ.

**बहाणें** (ಬಹಾಣೇ) ಕ್ರಿ. ಸ. ಕರೆ, ಒದರು, ಕೂಗು, ಕೂಗುಹಾಕು.

**बहात्तर** (ಬಹಾತ್ತರ್) ವಿ. ಎಪ್ಪತ್ತೆರಡು. ೨. ಬಹಳ.

**बहात्तर खोडी** (ಬಹಾತ್ತರ ಖೋಡೀ) ಸ್ತ್ರೀ. ಬಹುವ. ತುಂಬಾ ದೋಷಗಳು, ಸಾಕಷ್ಟು ಚಟಗಳು, ದುರ್ಗುಣ ಪರಿಪೂರ್ಣತೆ.

**बहात्तर जुलूम** (ಬಹಾತ್ತರ್ ಜುಲೂಮ್) ಪು. ಅರ. ಬಹಳ ಬಲುಮೆ, ದಬ್ಬಾಳಿಕೆ, ಕ್ರೂರ ದಬ್ಬಾಳಿಕೆ.

**बहात्तर रोग** (ಬಹಾತ್ತರ್ ರೋಗ್) ನಾನಾಬಗೆಯ ರೋಗಗಳು.

**बहादर(दू–द्दू–र)** (ಬಹಾದರ(ದೂ–ದ್ದೂ–ರ್) ವಿ. ಫಾ. ಸಾಹಸಿ, ಧೈರ್ಯವುಳ್ಳ, ಧೀರ, ಬಂಟ.

**बहाद(द–द्दु)री** (ಬಹಾದ(ದ್ದ–ದ್ದು)ರೀ ಸ್ತ್ರೀ. ಫಾ. ಶೌರ್ಯ.

**बहार** (ಬಹಾರ್) ಸ್ತ್ರೀ. ಫಾ. "बहर" ನೋ.

**बहारी** (ಬಹಾರೀ) ವಿ. ಫಾ. ತುಂಟ, ಜಗಳಗಂಟ.

**बहाल** (ಬಹಾಲ್) ವಿ. ಅರ. ಪೂರ್ವಸ್ಥಿತಿಯ, ಅನುಗ್ರಹವುಳ್ಳ.

**बहाल करणें** (ಬಹಾಲ್ ಕರಣೇ) ಕ್ರಿ. ಸ. ಬಕ್ಷೀಸು ಕೊಡು, ದಾನಕೊಡು, ಕೊಟ್ಟುಬಿಡು, ಪ್ರಸ್ಥಾಪಿಸು.

**बहाली** (ಬಹಾಲೀ) ಸ್ತ್ರೀ. ಅರ. ಕ್ಷಮೆ, ಪ್ರಸ್ಥಾಪನೆ, ಔದಾರ್ಯ, ಪಾವಿತ್ರ್ಯ, (ಕೆಲಸದ ಮೇಲೆ ತೆಗೆದವನನ್ನು) ಕೆಲಸಕ್ಕೆ ಹಚ್ಚುವವ.

**बहाली बडतर्फी** (ಬಹಾಲೀ ಬಡತರ್ಫಿ) ಪು. ಫಾನಿಯುಮಿಸುವ ಅಥವಾ ತೆಗೆದುಹಾಕುವ ಅಧಿಕಾರ.

**बहिः** (ಬಹಿಃ) ಕ್ರಿ. ವಿ. ಹೊರಗೆ, ಹೊರಗಿನ ಭಾಗಕ್ಕೆ.

**बहिरक** (ಬಹಿರಕ್) ಸ್ತ್ರೀ. ಧ್ವಜ, ಪತಾಕೆ, ನಿಶಾನೆ, ಒಂದೇ ಪತಾಕೆಯ ಕೆಳಗಿನ ಜನ, ಒಂದೇ ಶಾಸನಕ್ಕೊಳಗಾದ ಜನ.

**बहिरंग** (ಬಹಿರಂಗ) ವಿ. ಸಂ. ಪ್ರಕಟ, ಹೊರಗಣ.

**बहिरट** (ಬಹಿರಟ್) ವಿ. ಕಿವುಡ, ಕೇಳಲುಬಾರದವ.

**बहिरट** (ಬಹಿರವ) ಪು. 'ಭೈರವ', ಒಂದು ರಾಗ.

**बहिरवी** (ಬಹಿರವೀ) ಸ್ತ್ರೀ. 'ಭೈರವಿ', ಒಂದು ರಾಗ, ಹೆಂಗಸು.

**बहिरवसा** (ಬಹಿರವಸಾ) ಪು. ದೆವ್ವ ಹಿಡಿಯುವಿಕೆ, ಪಿಶಾಚಿ ಹಿಡಿಯುವಿಕೆ, ಭೂತಬಡೆಯುವಿಕೆ, ಗಾಳಿಯಾಗುವಿಕೆ.

**बहिरंससाणा** (ಬಹಿರಸಸಾಣಾ) ಪು. ಗಿಡಗ (ಹದ್ದು).

**बहिरा** (ಬಹಿರಾ) ವಿ. ಕಿವುಡ.

**बहिरापीसा** (ಬಹಿರಾಪಿಸಾ) ವಿ. ತಿಳುವಳಿಕೆಯಿಲ್ಲದವ.

**बहिरावणे** (ಬಹಿರಾವಣೇ) ಕ್ರಿ. ಅ. ಕಿವುಡನಾಗು. ೨. ಜುಮ್ಮುಹಿಡಿ.

**बहिरी** (ಬಹಿರೀ) ಸ್ತ್ರೀ. ಗಿಡಗ, ಭೈರವರಲ್ಲಿ ಒಬ್ಬ.

**बहिरीबोका** (ಬಹಿರೀಬೋಕಾ) ಪು. ದಿಟ್ಟ ಮನುಷ್ಯ, ಸಾಹಸಿ ಮನುಷ್ಯ, ಬೆದರಿಸುವ ಮನುಷ್ಯ.

**बहिरी ससाणा** (ಬಹಿರೀ ಸಸಾಣಾ) ಪು. '**बहिरससाणा**' ನೋ.

**बहिरुपद्रव** (ಬಹಿರುಪದ್ರವ) ಪು. ಭೂತಬಡಿಯುವಿಕೆ.

**बहिरोबा** (ಬಹಿರೋಬಾ) ಪು. ಭೈರವ ದೇವರು. ಬೀರಪ್ಪ, ಬೈರಪ್ಪ. ೨. ಕಿವುಡ ಮನುಷ್ಯ.

**बहिर्दिशेस जाणे** (ಬಹಿರ್ದಿಶೇಸ್ ಜಾಣೇ) ಶೌಚಕ್ಕೆ ಹೋಗು, ಕಕ್ಕುಸಕ್ಕೆಹೋಗು.

**बहिर्मुख** (ಬಹಿರ್ಮುಖ) ವಿ. ಸಂ. ಸಂಸಾರಿ, ಪ್ರಾಪಂಚಿಕ, ಕಾಮುಕ, ವಿಷಯಾಸಕ್ತ.

**बहिष्कार** (ಬಹಿಷ್ಕಾರ) ಪು. ಸಂ. ಬಹಿಷ್ಕಾರ, ಜಾತಿಯಿಂದ ಹೊರಗೆಹಾಕುವಿಕೆ, ನಿಷೇಧಿಸುವಿಕೆ, ಕಡೆಗಟ್ಟುವಿಕೆ.

**बहिष्कृत** (ಬಹಿಷ್ಕೃತ) ವಿ. ಸಂ. ಹೊರಗೆ ಹಾಕಿದ ಜಾತಿಯ ಹೊರಗಿಟ್ಟ.

**बहीण** (ಬಹೀಣ್) ಸ್ತ್ರೀ. ಅಕ್ಕ, ತಂಗಿ, ಸಹೋದರಿ, ಸೋದರಿ.

**बहीणभाऊ** (ಬಹೀಣ್‌ಭಾಊ) ಅಣ್ಣತಮ್ಮ ಮತ್ತು ಅಕ್ಕತಂಗಿಯರು.

**बहीण भावंडे** (ಬಹೀಣ್ ಭಾವಂಡೇ) ಅಕ್ಕತಂಗಿಯರು ಮತ್ತು ಅಣ್ಣತಮ್ಮಂದಿರು.

**बहीण भावा** (ಬಹೀಣ ಭಾವಾ) ಪು. ಅಪತ್ಯ.

**बहीर** (ಬಹೀರ) ವಿ. ಸತ್ತ, ಮೃತ, ನಿರ್ಜೀವ, ಜಡ, ಸ್ಪರ್ಶಜ್ಞಾನವಿಲ್ಲದ, ಮರಗಟ್ಟಿದ, ಜುಮ್ಮುಗಟ್ಟಿದ, ಕಲ್ಲಾದ, ದಡ್ಡುಬಿದ್ದ, ಕಠಿಣ, ಕಠೋರ, ನಿರ್ದಯ, ಕ್ರೂರ.

**बहु** (ಬಹು) ವಿ. ಸಂ. ಹೆಚ್ಚು, ಬಹಳ.

**बहुऋणी** (ಬಹುಋಣೀ) ವಿ. ಸಂ. ಬಹಳ ಜನರಿಗೆ ಋಣಿಯಾದವ, ಬಹಳ ಜನರಿಂದ ಸಾಲ ತಂದವ.

**बहुकाल** (ಬಹುಕಾಲ) ಕ್ರಿ. ವಿ. ಬಹುಕಾಲದ ವರೆಗೆ, ಬಹಳ ವೇಳೆಯ ತನಕ.

**बहुकोण** (ಬಹುಕೋಣ) ವಿ. ಸಂ. ಬಹುಭುಜಾಕೃತಿ.

**बहुचक** (ಬಹುಚಕ್) ವಿ. ವಾಚಾಳಿ, ಬಡಬಡಿಕೆಯ, ನುಡಿಜಾಣ, ಮಾತಾಳಿ, ಮಾತಿನ.

**बहुत** (ಬಹುತ್) ವಿ. ಹಿಂ. ವಿಪುಲ, ಬಹಳ.

**बहुतकरून** (ಬಹುತ್‌ಕರೂನ್) ಬಹುತರವಾಗಿ, ಬಹಳವಾಡಿ, ಬಹುತೇಕ, ಬಹುಶಃ.

**बहुतादिवशी** (ಬಹುತಾದಿವಶೀ) ಕ್ರಿ. ವಿ. ಬಹಳ ದಿನಗಳ ಹಿಂದೆ, ಬಹಳ ಹಳೆಯ ಕಾಲದಲ್ಲಿ.

**बहुतेक** (ಬಹುತೇಕ್) ಕ್ರಿ. ವಿ. ಬಹುಶಃ.

**बहुदुधी** (ಬಹುದುಧೀ) ವಿ. ಬಹಳ ಹಾಲುಹಿಂಡುವ, ಬಹಳ ಹಾಲು ಕರೆಯುವ (ಆಕಳು, ಎಮ್ಮೆ).

आखुडशिंगी— (ಆಖುಡ್‌ಶಿಂಗೀ—) ಸಣ್ಣ ಕೋಡಿನ ಮತ್ತು ಬಹಳ ಹಾಲು ಕೊಡುವ (ಆಕಳು) [ಸರ್ವೋತ್ತಮ]

**बहुधा** (ಬಹುಧಾ) ಕ್ರಿ. ವಿ. ಬಹುಶಃ

**बहुनायकी** (ಬಹುನಾಯಕೀ) ವಿ. ಅನಾಯಕರಾಜ್ಯ, ಅರಾಜಕತೆ, ಕೆಟ್ಟಶಾಸನ, ಅವಿವೇಕತನದ ಆಡಳಿತ.

**बहुप्रद** (ಬಹುಪ್ರದ) ವಿ. ಸ. ಉದಾರಚರಿತನಾದ, ಕೊಡುಗೈಯ, ದಾನಶೀಲ, ಧಾರಾಳವಾಗಿಕೊಡುವ, ಸರಳ.

**बहुभाष** (ಬಹುಭಾಷ) ವಿ. ಸಂ. ಬಹಳ ಭಾಷೆ ಬಲ್ಲವ, ೨. (ವ್ಯಂಗ್ಯ) ವಾಚಾಳಿ, ಬಹಳ ಮಾತಾಡುವ.

**बहुमत** (ಬಹುಮತ) ನ. ಸಂ. ದೊಡ್ಡಸಂಖ್ಯೆ, ಬಹಳ ಜನರ ಅಭಿಪ್ರಾಯ, ಹೆಚ್ಚಿನ ಸಂಖ್ಯೆಯ ಮತ, ' ಮೆಜಾರಿಟಿ. '

**बहुमान** (ಬಹುಮಾನ) ಪು. ಸಂ. ಆದರ, ಪೂಜ್ಯ ಭಾವ, ಗೌರವ, ಬಹುಮಾನ.

**बहुमूल्य** (ಬಹುಮೂಲ್ಯ) ವಿ. ಸಂ. } ಬಹಳಬೆಲೆಯ,
**बहुमोल** (ಬಹುಮೋಲ್) ವಿ. } ತುಟ್ಟಿಯಾದ.

**बहुरंगी** (ಬಹುರಂಗೀ) ವಿ. ಭಿನ್ನಭಿನ್ನ ಬಣ್ಣದ, ಅನೇಕ ವಿದ್ಯಾವಿಶಾರದ, ಮಹಾಪಂಡಿತ.

**बहुरूपी** (ಬಹುರೂಪೀ) ವಿ. ಬಹುರೂಪಿ, ಸೋಗು ಗಾರರ ಜಾತಿ–ಜಾತಿಯ ಪುರುಷ.

**बहुल** (ಬಹುಲ) ವಿ. ಸಂ. ಹೆಚ್ಚಿನ, ಅಧಿಕ.

**बहुल** (ಬಹುಲ) ಪು. ನ. ವದ್ಯ, ತಿಂಗಳ ವದ್ಯ ಪಕ್ಷ.

**बहुले** (ಬಹುಲೇ) ನ. ಹೋಮಸ್ಥಲ, ಯಜ್ಞಸ್ಥಲ. ೨. ವಿವಾಹ ಮಂಡಪ.

**बहुल्यावर चढणे** (ಬಹುಲ್ಯಾವರ್ ಚಢಣೇ) ಮದು ವೆಗೆ ಸಿದ್ಧನಾಗು.

**बहुवचन** (ಬಹುವಚನ) ನ. ಸಂ. ಅನೇಕ ವಚನ, (ವ್ಯಾಕರಣದಲ್ಲಿ) ಬಹುವಚನ.

**बहुवस** (ಬಹುವಸ) ವಿ. ಅಸಂಖ್ಯ, ಅಸಂಖ್ಯಾತ, ಹೆಚ್ಚು ಸಂಖ್ಯೆಯ.

**बहुवार** (ಬಹುವಾರ) ವಿ. ಅನೇಕ ಸಾರೆ, ಬಹಳಸಲ, ಅನೇಕ ಸಮಯದಲ್ಲಿ.

**बहुवाडे** (ಬಹುವಾಡೇ) { ತರತರದ, ವಿವಿಧವಾದ,
**बहुविध** (ಬಹುವಿಧ) { ಗೊತ್ತಿಲ್ಲದ, ಅನೇಕ ಆಕಾರದ, ಅನಂತರೂಪಿ.

**बहुव्रीही** (ಬಹುವ್ರೀಹೀ) ಸ್ತ್ರೀ. (ವ್ಯಾಕರಣದಲ್ಲಿ) ಬಹು ವ್ರೀಹಿಸಮಾಸ.

**बहुशः** (ಬಹುಶಃ) ಕ್ರಿ. ವಿ. } ಬಹುತೇಕ, ಬಹು
**बहुशा** (ಬಹುಶಾ) } ತರವಾಗಿ.

**बहुश्रुत** (ಬಹುಶ್ರುತ) ವಿ. ಬಹಳ ಓದಿದ, ವಿದ್ವಾಂಸ.

**बहुसाळ** (ಬಹುಸಾಳ) ಕ್ರಿ. ವಿ. ಬಹಳ, ಅಸಂಖ್ಯ.

**बहूत** (ಬಹೂತ್) ವಿ. ಬಹಳ.

**बह्वंशी** (ಬಹ್ವಂಶೀ) ಕ್ರಿ. ವಿ. ಬಹುತೇಕ.

**बळ** (ಬಳ್) ನ. ಶಕ್ತಿ, ಸಾಮರ್ಥ್ಯ, ಸೈನ್ಯ, ದಂಡು.

**बळ करणे** (ಬಳ್ ಕರಣೇ) ಸಾಮರ್ಥ್ಯ ಹೆಚ್ಚು, ಶಕ್ತಿ ಹೆಚ್ಚು, ಒತ್ತಾಯಮಾಡು, ಅತಿ ಪ್ರಯತ್ನಮಾಡು.

**बळ धरणे** (ಬಳ್ ಧರಣೇ) ಕ್ರಿ. ಸ. } ಶಕ್ತಿ ಸಂಚ
**बळ बांधणे** (ಬಳ್ ಬಾಂಧಣೇ) ಕ್ರಿ. ಸಂ. } ಯಿಸು, ಟೊಂಕಕಟ್ಟು.

**बळाचा** (ಬಳಾಚಾ) ವಿ. ಸಾಮರ್ಥ್ಯವುಳ್ಳ, ಗಟ್ಟಿ, ಸಾಮರ್ಥ್ಯದ.

**बळास येणे** (ಬಳಾಸಯೇಣೆ) ಕ್ರಿ. ಅ. **बळकरणे** ನೋ.

**बळकट** (ಬಳಕಟ್) ವಿ. ಬಲವುಳ್ಳ, ಗಟ್ಟಿ, ಕಸುವುಳ್ಳ, ಭಾರವುಳ್ಳ, ಕಠಿಣ, ಬಿರುಸಾದ.

**बळकटी** (ಬಳಕಟೀ) ಸ್ತ್ರೀ. ಶಕ್ತಿ, ಕಸುವು. ೨. ಬೆಂಬಲ. ೩. ತಾಳ್ಮೆ, ತಾಳಿಕೆ.

**बळकटून** (ಬಳಕಟೂನ್) ಕ್ರಿ. ವಿ. ಗಟ್ಟಿಯಾಗಿ, ಬಿಗು ವಾಗಿ.

**बळक (का) वणे** (ಬಳಕ(ಕಾ)ವಣೇ) ಕ್ರಿ. ಸ. ಕಸಿದು ಕೊಳ್ಳು, ಹೀರು, ಅಪಹರಿಸು, ಅನ್ಯಾಯದಿಂದ ವಶ ಪಡಿಸಿಕೊಳ್ಳು, ಬಲುಮೆ, ಒತ್ತಾಯ, ದುರಾಗ್ರಹ.

**बळजबरी – जोरी** (ಬಳಜಬರೀ–ಜೋರೀ) ಸ್ತ್ರೀ. ಬಲ ವಂತಿಕೆ, ಬಲವಂತ, ಜುಲುಮೆ, ಆಗ್ರಹ, ಉಗ್ರಾಣ.

**बळद** (ಬಳದ) ನ. ಗೋಡೆಯಲ್ಲಿ ಧಾನ್ಯವಿಡುವ ಸ್ಥಳ.

**बळिभद्र–भद्राचा** (ಬಳಿಭದ್ರ–ಭದ್ರ್ಯಾ) ವಿ. ಕೈಲಾಗ ದವ, ಅಸಮರ್ಥ.

**बळमोड** (ಬಳಮೋಡ್) ಸ್ತ್ರೀ. ಶಕ್ತಿಗುಂದುವಿಕೆ, ಸಾಮರ್ಥ್ಯನಾಶ, ಬೇನೆ.

**बळवन्त, वान** (ಬಳವಂತ–ವಾನ್) ವಿ. ಬಲವುಳ್ಳ, ಶಕ್ತಿವಂತ, ಬಲಿಷ್ಠ, ಭಾರಿ, ಅದ್ಭುತ, ಪ್ರಚಂಡ.

**बळवत्तर** (ಬಳವತ್ತರ) ವಿ. **बलक्तर** ನೋ.

**बळस** (ಬಳಸ್) ಪು. ಕಫ, ಲೋಳೆ, ಜೊಲ್ಲು, ಬುರುಗು.

**बळसट** (ಬಳಸಟ್) ವಿ. ಕಫ, ಶ್ಲೇಷ್ಮಯುಕ್ತ.

**बळावणे** (ಬಳಾವಣೇ) ಕ್ರಿ. ಸ. ಸಾಮರ್ಥ್ಯ ಹೆಚ್ಚಾಗು, ಶಕ್ತಿ ಬೆಳೆ.

**बळिराम** (ಬಳಿರಾಮ) ಪು. ಕೃಷ್ಣನಅಣ್ಣ, ಬಲರಾಮ.

**बळी** (ಬಳೀ) ವಿ. ಶಕ್ತಿಯುಳ್ಳ, ಸಾಮರ್ಥ್ಯವುಳ್ಳ.

**बळी तो कान पिळी** (ಬಳೀ ತೋ ಕಾನ್ ಪಿಳೀ) ಗಾದೆಯ ಮಾತು. ಶಕ್ತಿವಂತನು ಶಾಸನಕರನಾಗು ವನು, ಕಸುವುಳ್ಳವನೇ ಕಿವಿಹಿಂಡುವನು.

**बळी** (ಬಳೀ) ಪು. ಕಾಕಬಳಿ, ಆಹುತಿ, ಯಜ್ಞ.

**बळीहरण** (ಬಳೀಹರಣ) ನ. ಆಹುತಿ, ದೇವತೆಗಳಿಗೆ ಕೊಟ್ಟ ಆಹುತಿ, ದೇವತೆಗಳಿಗೆ ಕೊಡುವ ದೈನಂದಿನ ಆಹುತಿ.

**बळे–बळेच** (ಬಳೇ–ಬಳೇಚ್) ಕ್ರಿ.ವಿ. ಒತ್ತಾಯದಿಂದ, ಕಸುವಿನಿಂದ, ಪ್ರಯತ್ನಪೂರ್ವಕವಾಗಿ, ಆಯಾಸದಿಂದ.

**बळेबळे** (ಬಳೇಬಳೇ) ಕ್ರಿ. ವಿ. ಬಲವಂತದ ಮೂಲಕ, ಜುಕ್ಮಾಜುಲುಮೆಯಿಂದ.

**बळेचा** (ಬಳೇಚಾ) } ವಿ.
**बळेबळेचा** (ಬಳೇಬಳೇಚಾ) } ಒತ್ತಾಯದ,
**बळचा बळेचा** (ಬಳ್ಯಾಬಳೇಚಾ) } ಜಗ್ಗಿದ.

**बक्षिशी** (ಬಕ್ಷೀಶೀ) ಸ್ತ್ರೀ. ಫಾ. ಕಾಣಿಕೆ, ಬಕ್ಷೀಸು, ಇನಾಮು, ಖುಶಾಲಿ.

**बक्षी** (ಬಕ್ಷೀ) ಪು. ಫಾ. ಸೈನ್ಯಕ್ಕೆ ಸಂಬಳ ಕೊಡುವವ. ೨. ಸೇನಾಪತಿ.

**बक्षीस** (ಬಕ್ಷೀಸ್) ನ. ಫಾ. ಇನಾಮು.

**बा** (ಬಾ) ಪು. ತಂದೆ, ಪಿತ, ಜನಕ.

**बाइल** (ಬಾಈಲ್) ಸ್ತ್ರೀ. ಹೆಂಗಸು, ಸ್ತ್ರೀ, ಪತ್ನಿ.

**बाइल्या** (ಬಾಈಲ್ಯಾ) ಪು. ಹೆಂಡತಿ ಹೇಳಿದಂತೆ ಕೇಳುವವ, ಹೆಂಗಸರ ಸಹವಾಸದಲ್ಲಿರುವವ, ದುರ್ಬಲ.

**बाई** (ಬಾಈ) ಸ್ತ್ರೀ. ಹೆಂಗಸು, ಜನನಿ, ಅವ್ವ, ಮನೆ ಹಿರಿಯಳು. ೨. ಅಮ್ಮನವರು (ಆದರ ವಾಚಕ. ೩. ವಾರಾಂಗನೆ, ಸೂಳೆ, ಹಾಡುವಿಕೆ. ೪. ಕೆಲಸದ ಹೆಂಗಸು.

**बाइ(ई)ल काम** (ಬಾ(ಈ)ಲ್‌ಕಾಮ್) ನ. ಹೆಂಗಸರ ಕೆಲಸ, ಮನೆಗೆಲಸ, ಹೆಣ್ಣುಬುದ್ಧಿ.

**बाईल गाठ** (ಬಾಈಲ್‌ಗಾಠ್) ಸ್ತ್ರೀ. ಸರಗುಣಕಿಗಂಟು.

**बाईल पिसा** (ಬಾಈಲ್ ಪಿಸಾ) ಪು. ಸ್ತ್ರೀ ಲಂಪಟ, ಹೆಂಡತಿಯ ಹುಚ್ಚು ಉಳ್ಳವ, **बाईलवेडा** ನೋ.

**बाईल बडगा** (ಬಾಈಲ್ ಬಡಗಾ) ಪು. ಕುಟುಂಬ, ಇಡೀ ಕುಟುಂಬ, ಬಳಗ, ಮನೆಯ ಬಳಗ.

**बाईल बंदा** (ಬಾಈಲ್‌ಬಂದಾ) ಪು. (ಪತ್ನೀವತ್ಸಲ).

**बाईल बुद्धी** (ಬಾಈಲ್‌ಬುದ್ಧೀ) ಸ್ತ್ರೀ. ಹೆಂಗಸಿನ ಬುದ್ಧಿ, ಹೆಣ್ಣುಮಕ್ಕಳ ಬುದ್ಧಿ.

**बाईल बुध्या** (ಬಾಈಲ್‌ಬುದ್ಧ್ಯಾ) ಪು. ವಿ. ಹೆಂಗಸರ ಬುದ್ಧಿಯಂತೆ ನಡೆಯುವ.

**बाईल भिडंग** (ಬಾಈಲ್‌ಭಿಡಂಗ) **बाईलबडगा** ನೋ.

**बाईल भुला** (ಬಾಈಲ್ ಭುಲಾ) **बाईलवेडा** ನೋ.

**बाईल वेडा** (ಬಾಈಲ್ ವೇಡಾ) ಪು. ಹೆಂಡತಿಯ ಹುಚ್ಚ, ಹೆಂಡತಿಯ ಬೆನ್ನು ಬಿಡದವ.

**बाऊ** (ಬಾಊ) ಪು. ಸಣ್ಣಮಕ್ಕಳಿಗೆ ತೋರಿಸಿದ ಅಂಜಿಕೆ, ಹುಣ್ಣು, ಗುಳ್ಳೆ.

**बाऊ करून** (ಬಾಊ ಕರೂನ್) ಕ್ರಿ. ವಿ. ಬೆಳೆಯಿಸಿ (ಹೇಳು,) ಉಪ್ಪುಕಾರ ಹಚ್ಚಿ (ಹೇಳು,) ಅಂಜಿಸು.

**बाऊ दाखविणे** (ಬಾಊ ದಾಖವಿಣೇ) ಕ್ರಿ. ಸ. ಅಂಜಿಸು, ಒತ್ತಾಯ ಮಾಡು, ಒಲುಮೆ ಮಾಡು.

**बाक** (ಬಾಕ್) ಪು. ಪೋ. ಬಾಗು, ಬಾಗುವಿಕೆ, ಮುರಿಗೆ, ತಿರುವು. ೨. ತಂಟೆ, ಜಗಳ, ಮತಭಿನ್ನತೆ. ೩. ಕಠಾರಿ, ಕೈಗತ್ತಿ, ಕಿರಿಗತ್ತಿ, ೪. ಬಾಕು.

**बाकडा** (ಬಾಕಡಾ) ದಿಟ್ಟ.

**बाकणे** (ಬಾಕಣೇ) ಕ್ರಿ. ಅ. ಬಗ್ಗು, ಮಣಿ.

**बाकदार** (ಬಾಕ್‌ದಾರ್) ವಿ. ಬಾಗುಳ್ಳ, ಡೊಂಕುಳ್ಳ.

**बाकबूक** (ಬಾಕ್‌ಬೂಕ್) ನ. ಅಂಜಿಕೆ, ದುಗುಡು, ಎದೆಹಾರುವಿಕೆ.

**बाका** (ಬಾಕಾ) ವಿ. ಧೈರ್ಯವುಳ್ಳ, ತಜ್ಞ, ನಿಪುಣ, **बाकडा** ನೋ. ೨. ಬಿಕ್ಕಟ್ಟಿನ (ಪ್ರಸಂಗ).

**बांका** (ಬಾಂಕಾ) ಪು. ತುತೂರಿ, ಕಹಳೆ, ಕಾಳೆ.

**बाका किल्ला** (ಬಾಕಾ ಕಿಲ್ಲಾ) ದುರ್ಧರ ಕೋಟೆ.

**बाकी** (ಬಾಕೀ) ಸ್ತ್ರೀ. ಅರ. ಶಿಲುಕು, ಉಳಿದುದು, ಶಿಲ್ಕು, ಶೇಷ (ಗಣಿತದಲ್ಲಿ).

**बाकी ठेवणे** (ಬಾಕೀ ಠೇವಣೇ) ಕ್ರಿ. ಮರ್ಯಾದೆ ಇಡು, ಮರ್ಯಾದೆ ಕಾಯು, ಉಳಿಸು. ೨. ಕೊಡುವ ಹಣ ಉಳಿಸು.

**बाकीदार** (ಬಾಕೀದಾರ್) ವಿ. ಫಾ. ಉದ್ದರಿಕೊಟ್ಟವ, ಉಳಿಸಿದವ.

**बाकुटणे** (ಬಾಕುಟಣೇ) ಕ್ರಿ. ಬಾಡಿಹೋಗು, ಬಣ್ಣ ಹಾರಿಹೋಗು, ಮಸಕಾಗು, ಮಂಕಾಗು, ಕಂದು, ಕುಂದು, ಕ್ಷಮಿಸು, ಬಣ್ಣಹಾರಿಸು.

**बाकेकरी** (ಬಾಕೇಕರೀ) ಸ್ತ್ರೀ. ಕಹಳೆಗಾರ, ಕಾಳೆಯುವ, ತುತೂರಿ ಊದುವವ.

**बाकेराव** (ಬಾಕೇರಾವ್) ಪು. ಜಲ್ಲಿ ಕೊಚ್ಚುವ, ಬಡಾಯಿ ಹೇಳುವವ, ಹರಟೆ ಹೊಡೆಯುವವ.

**बाग** (ಬಾಗ್) ಪು. ಫಾ. ಹೂದೋಟ, ತೋಟ, ಉದ್ಯಾನ. ೨. ಬಾಗುವಿಕೆ. ೩. ಕುದುರೆಯ ಕೊರಳಿಗೆ ಕಟ್ಟಿದ ಉದ್ದ ಹಗ್ಗ, ಲವಿಗೆ, ಲಗಾಮು.

**बांग** (ಬಾಂಗ್) ಸ್ತ್ರೀ. ಕೋಳಿಯ ಕೂಗು, ಕರೆ. ೨. ಆವಾಹನ.

**बागर** (ಬಾಂಗರ್) ವಿ. ಸ್ವಲ್ಪ ಬಗ್ಗಿದ.

**बागडणे** (ಬಾಗಡಣೇ) ಕ್ರಿ. ಅ. ಕುಣಿದಾಡು, ಹಾರಾಡು, ನೆಗೆ, ಜಿಗಿ, ಹಾರು, ಜಿಗಿದಾಡು.

**बांगडी** (ಬಾಂಗಡೀ) ಸ್ತ್ರೀ. ಬಳೆ, ಕಂಕಣ, ಕಾಜಿನ ಬಳೆ.

**बांगडचा भरणे** (ಬಾಂಗಡ್ಯಾ ಭರಣೇ) ಕ್ರಿ. ಸ. ಬಳೆ ಹಾಕು, ಹೆಂಗಸಾಗು, ದುರ್ಬಲವಾಗು, ಸ್ತ್ರೈಣ ನಾಗು.

**बागडोर–दोर** (ಬಾಗಡೋರ–ದೋರ) ಪು. ಕುದುರೆ ಎಳೆಯಲು ಕಟ್ಟಿದ ಉದ್ದ ಹಗ್ಗ, ಲಗಾಮು.

**बागणे** (ಬಾಗಣೇ) ಕ್ರಿ. ಅ. ಬಾಗು, ವಕ್ರವಾಗು, ನಿಡಿದುಹಾಕು, ಬಗ್ಗಿಸು.

**बागबगीचा** (ಬಾಗಬಗೀಚಾ) ಪು. ಫಾ. ತೋಟಪಟ್ಟಿ ಹೊಲಮನೆ.

**बागवान** (ಬಾಗವಾನ್) ಪು. ತೋಟಗಾರ, ಎಲೆಗಾರ, ತೋಟಕಾಯುವವ, ಬಾಳೇಹಣ್ಣುಮಾರುವವ.

**बागाइती** (ಬಾಗಾಇತೀ) ವಿ. ಫಾ. ತೋಟಕ್ಕೆ ಯೋಗ್ಯ ವಾದ, ತೋಟದ. ೨. ನೀರಾವರಿಯ (ಭೂಮಿ).

**बागाईत** (ಬಾಗಈತ್) ಸ್ತ್ರೀ. ಫಾ. ತೋಟಗಾರಿಕೆ.

**बांगर** (ಬಾಂಗರ್) ಪು. ಹೋರಿ, ಕೋಣ, ಗೂಳಿ.

**बांगरसट** (ಬಾಂಗರಸಟ್) ಸ್ತ್ರೀ. ಪೌಷ್ಯಶು. ಷಷ್ಠಿ, ಖಂಡೋಬನ ಹಬ್ಬ.

**बांगवाळें** (ಬಾಂಗವಾಳೇ) ಪು. ಬಳೆಯ ಅಚ್ಚು.

**बांगीव** (ಬಾಂಗೀವ) ಸ್ತ್ರೀ. ಬಾಗುಳ್ಳ, ಬಾಗಿದ, ಮಣಿದ.

**बागुरडा** (ಬಾಗುರಡಾ) ಪು. ಜಿರಳೆ, ಜುರಳೆ, ಜೊಂಡಿಗ, ಅಕ್ಕಳೆ.

**बागूल** (ಬಾಗೂಲ್) ಪು. ಸಣ್ಣಮಕ್ಕಳಿಗೆ ತೋರಿಸಿದ ಅಂಜಿಕೆ.

**बुवा–** (ಬುವಾ) ಪು. ಬೊಮ್ಮ, ಅಂಜಿಕೆಬರುವ ಮನುಷ್ಯ, ಆಟಗೆ.

**बागेसर–री** (ಬಾಗೇಸರ್–ರೀ) ಸ್ತ್ರೀ. ಸಂಗೀತರಾಗ, ಬಾಗೇಶ್ರಿ.

**बाच** (ಬಾಚ್) ಪು. ಅನಿರೀಕ್ಷಿತ ಭಯ.

**बाच खाणें** (ಬಾಚ್ ಖಾಣೇ) ಕ್ರಿ. ಅ. ಹಿಂಜರಿ, ಹಿಂದೆ ಸರಿ, ಅಂಜು, ಕಾಲು ಹಿಂಜರಿ, ಕಾಲು ಹಿಂದಿಡು.

**बाचकणे** (ಬಾಚಕಣೇ) ಕ್ರಿ. ಅ. ಹೆದರು, ಅಂಜು.

**बाचकावणे** (ಬಾಚಕಾವಣೇ) ಕ್ರಿ. ಸ. ಅಂಜಿಸು.

**बाचकुटणे** (ಬಾಚಕುಟಣೇ) ಕ್ರಿ. ಅ. ಭ್ರಷ್ಟನಾಗು, ಹುಳಿಸು, ಹುಳಿಯಾಗು, ನೊರೆ ಬರು, ಉಕ್ಕು, ಉಬ್ಬಿಸು, ಹಣ್ಣು ಕೊಳೆ, ಕೆಡಿಸು, ಹಾಲುಕೆಡು.

**बाचणूक** (ಬಾಚ್ಣೂಕ್) ಸ್ತ್ರೀ. ಬುದ್ಧಿಭ್ರಮೆ, ಬಡ ಬಡಿಕೆ, ಬೈಯುವಿಕೆ.

**बाचणी** (ಬಾಚಣೀ) ಸ್ತ್ರೀ. 'बाच' ನೋ.

**बाचणें** (ಬಾಚಣೇ) ಕ್ರಿ. ವಿ. ಬುದ್ಧಿಭ್ರಮೆಯಾಗು, ಭ್ರಮಿಸು, ಬಡಬಡಿಸು, ಬೈಯ್ಯು.

**बाचरट** (ಬಾಚರಟ್) ವಿ. ವಾಚಾಳಿ, ಬಡಬಡಿಕೆಯ, ನುಡಿಜಾಣ, ಮಾತಿನ, ಮಾತಾಳಿ.

**बाचळणें** (ಬಾಚಳಣೇ) ಕ್ರಿ. ಅ. ಹುಚ್ಚಾಗು, ಭ್ರಮಿಷ್ಠನಾಗು, ಬಡಬಡಿಸು, ಬೆರಗಾಗು.

**बाचरा** (ಬಾಚರಾ) ವಿ. 'बाचरट' ನೋ.

**बाचाबाची** (ಬಾಚಾಬಾಚೀ) ಸ್ತ್ರೀ. ವಾಗ್ವಾದ, ಮಾತಿನ ಬಡೆದಾಟ, ಜಗಳ.

**बाज** (ಬಾಜ್) ಸ್ತ್ರೀ. ಹೊರಸು, ಅಂಜುವಿಕೆ, ಬೆಳೆ.

**बाज** (ಬಾಜ) ಚಟ, ವ್ಯಸನ, ದರ್ಶಕಪ್ರತ್ಯಯ.

**–बाज** (–ಬಾಜ್) ವಿ. ಫಾ. (ಪ್ರತ್ಯಯ), ರಸಿಕ, ಆಸಕ್ತ. ಉದಾ–**चहाबाज** (ಚಹಾಬಾಜ್) ಬಹಳ ಟೀ ಕುಡಿಯುವವ.

**बाजणे** (ಬಾಜಣೇ) ಕ್ರಿ. ಅ. ಚಿಗಿ, ಹೂಬಿಡು, ಎಲೆ ಚಿಗುರು, ಅಂಕುರಿಸು, ಕಾಯಿಯಾಗು.

**बाजत** (ಬಾಜತ್) ಕ್ರಿ. ವಿ. ಹೊರತು, ವಿನಾ, ಅಲ್ಲದೆ, ಇಲ್ಲವೆ, ಇಲ್ಲವೆ, ಮತ್ತೆ.

**बाजरा** (ಬಾಜರಾ)<br>**बाजरी** (ಬಾಜರೀ) } ಸ್ತ್ರೀ. ಸಜ್ಜೆ.

**बाजलें** (ಬಾಜಲೇ) ನ. ಹೊರಸು, ಪಲಂಗ, ಮಂಚ, ಮುಂಚಿಕೆ.

**बाजवट** (ಬಾಜವಟ) ವಿ. ಚಚ್ಚಾಕುಮೇಜು, ಸಣ್ಣ ಹಾಸಿಗೆ, ಹಡಗಿನ ಹಗ್ಗ, ಹುರಿಗಳು.

**बाजा** (ಬಾಜಾ) ವಿ. ಹಿಂ. ವಾದ್ಯ, ವಾದ್ಯಬಾರಿಸು ವಿಕೆ.

**बाजार** (ಬಾಜಾರ್) ಪು. ಫಾ. ಸಂತೆ, ಬಾಜಾರ, ೨.ಪ್ರಸಿದ್ಧಿ, ಅವ್ಯವಸ್ಥೆ. ೩. (ಮುಂಬೈಯಲ್ಲಿ) ಮೀನ, ಮಾಂಸ.

**बाजार करणे** (ಬಾಜಾರ್ ಕರಣೇ) ಕ್ರಿ. ಸ. ಖರೀದಿ ಮಾಡು, ಕೊಳ್ಳು.

**गेला बाजार तरी** (ಗೇಲಾ ಬಾಜಾರತರೀ) ಕ್ರಿ. ವಿ. ಕನಿಷ್ಠ ಬೆಲೆಯಿಂದ, ಕಿಮ್ಮತ್ತಿನಲ್ಲಿ.

**उभ्या बाजारांत** (ಉಭ್ಯಾ ಬಾಜಾರಾತ್) ಕ್ರಿ. ವಿ. ಸಾರ್ವಜನಿಕ ರೀತಿಯಿಂದ, ಇಡೀ ಸಂತೆಯೆದುರಿಗೆ, ಇಡೀ ಸಂತೆಯಲ್ಲಿ.

**बाजारच्या भाकरी भाजणे** (ಬಾಜಾರಚ್ಯಾ ಭಾಕರೀ ಭಾಜಣೇ) ಕ್ರಿ. ಸ. ಒಣ ಉಸಾಬರಿ ಮಾಡು, ಅಲ್ಲದ ಕೆಲಸ ಮಾಡು.

**वेडयाचा बाजार पिकणे** (ವೇಡ್ಯಾಚಾ ಬಾಜಾರ್ ಪಿಕಣೇ) ಕ್ರಿ. ಅ. ಗಾದೆಯ ಮಾತು. ಹುಚ್ಚು ಚ್ಚಾರ ಪ್ರಾರಂಭವಾಗು.

**बाजार अफवा–अवाई** (ಬಾಜಾರ ಅಫವಾ ಅವಾಈ) ಪು. ಸ್ತ್ರೀ. ಸುಳ್ಳು ಸುದ್ದಿ, ಗಾಳಿಸುದ್ದಿ.

**बाजार गप्प–बातमी** (ಬಾಜಾರಗಪ್ಪ–ಬಾತಮಿ) ಸ್ತ್ರೀ. ಹಾರುಸುದ್ದಿ.

**बाजार भाव** (ಬಾಜಾರ್‌ಭಾವ್) ಪು. ಸಂತೆಯ ದರ, ಪೇಟೆಯ ಧಾರಣೆ.

**बजार बसवी** (ಬಾಜಾರ್‌ಬಸವೀ) ಸ್ತ್ರೀ. ವೇಶ್ಯೆ, ಸೂಳೆ, ಹಾದರಗಿತ್ತಿ.

**बाजार बुणगें** (ಬಾಜಾರ್ ಬುಣಗೆ) ಪು. ಬಹುವ. ಕಳ್ಳರ ಸಮೂಹ, ತುಂಟರ ತಂಡ.

**बाजार कुणगी** (ಬಾಜಾರ್ ಕುಣಗೀ) ಸ್ತ್ರೀ. ನ. ವೇಶ್ಯೆ, ಸೂಳೆ, ಗಣಿಕೆ.

**बाजार वाडा** (ಬಾಜಾರವಾಡಾ) ಪು. ಸಂತೆ, ಪೇಟೆ.

**बाजार महशूर** (ಬಾಜಾರ್ ಮಶಹೂರ್) ವಿ. ಫಾ. ಕುಪ್ರಸಿದ್ಧ, ಕೆಟ್ಟಹೆಸರಿನ.

**बाजारी** (ಬಾಜಾರೀ) ವಿ. ಫಾ. ಬಾಜಾರ ಸಂಬಂಧದ, ಕೆಟ್ಟ, ಕೃತ್ರಿಮ, ಕಡಿಮೆ ತರಗತಿಯ, ತೋರಿಕೆಯ.

**बाजिंदा** (ಬಾಜಿಂದಾ) ವಿ. ಚುರುಕು, ಹುಶಾರಿ, ಸ್ವೀಕರಿಸಲು ತಕ್ಕವನಾದ. ೨. ದುರ್ವರ್ತನೆಯ.

**बाजी** (ಬಾಜೀ) ಸ್ತ್ರೀ. ಚದುರಂಗದಾಟ, ಇಸ್ಪೇಟಿನ ಆಟ.

**बाजीचाळ** (ಬಾಜೀಚಾಳ್) ಸ್ತ್ರೀ. ಮನೆಯ ಖೋಲಿ ಗಳು, ಮನೆಯ ಕೋಣೆಗಳು.

**बाजीग (गा) र** (ಬಾಜೀಗ(ಗಾ)ರ್ ವಿ. ಫಾ. ಮಾಟ ಗಾರ, ಜಾದೂಗಾರ.

**बाजीगरी** (ಬಾಜೀಗರೀ) ಸ್ತ್ರೀ. ಫಾ. ಮಾಟ, ಯಾತು, ಜಾದೂ.

**बाजीराव** (ಬಾಜೀರಾವ್) ಪು. ಪೇಶ್ವೆ ಬಾಜೀರಾಯ. ೨. ಜಂಬ ಬಡಿಯುವವ.

**बाजू** (ಬಾಜೂ) ಸ್ತ್ರೀ. ಫಾ. ಅಂಚು, ಕಡೆ, ದಿಕ್ಕು, ಮಗ್ಗಲು, ಬದಿ, ಪಕ್ಷ, ಪಾರ್ಶ್ವ.

**बाजूबंद** (ಬಾಜೂಬಂದ್) ತೋಳಿನ ಆಭರಣ, ಬಾಹು ಭೂಷಣ 'ಬಾಜುಬಂದ'.

**बाजू मारणे** (ಬಾಜೂ ಮಾರಣೇ) ಕ್ರಿ. ಸ. ಕೆಲಸ ಸಾಗಿಸಿಕೊಂಡುಹೋಗು.

**बाजे खर्च** (ಬಾಜೇ ಖರ್ಚ್) ಪು. ಫಾ. ಹೆಚ್ಚಿನ ಖರ್ಚು, ಕಿರುಕೋಳ ಖರ್ಚು.

**बाट** (ಬಾಟ್) ಪು. ಭ್ರಷ್ಟವಮಾಡುವಿಕೆ, ಭ್ರಷ್ಟನಾಗು ವಿಕೆ.

**बाटगा** (ಬಾಟಗಾ) ವಿ. ಧರ್ಮಾಂತರಿಸಿದ, ಧರ್ಮ ಪರಿವರ್ತಿಸಿದ, ಪತಿತ, ಕುಲಗೆಟ್ಟವ.

**बाटणे** (ಬಾಟಣೇ) ಕ್ರಿ. ಅ. ಧರ್ಮಾಂತರಿಸು, ಅಪ ವಿತ್ರನಾಗು.

**बाटविणें** (ಬಾಟವಿಣೇ) ಕ್ರಿ. ಸ. ಕುಲಗೆಡಿಸು.

**बाटाबाट** (ಬಾಟಾಬಾಟ್) ಸ್ತ್ರೀ. ಮೈಲಿಗೆ, ಅಶುದ್ಧತೆ, ಭ್ರಷ್ಟತೆ.

**बाटूक** (ಬಾಟೂಕ್) ನ. ದಂಟು, ಜೋಳದ ದಂಟು, ಹಸಿಯ ಜೋಳದ ದಂಟು.

**बाटचा** (ಬಾಟ್ಯಾ) ಪು. '**बाटगा**' ನೋ.

**बाठ–ठी** (ಬಾಠ್–ಠೀ) ಸ್ತ್ರೀ ಮಾವಿನ ಗೊರಟು.

**बाठा** (ಬಾಠಾ) ಪು. ಬಾಸಳು, ಎಸಳು.

**बांठा** (ಬಾಂಠಾ) ಪು. ಹೊಡೆತ.

**बाठ (ठा) ळणें** (ಬಾಠ್(ಠಾ)ಳಣೇ ಕ್ರಿ.ಸ. ಗೊರಟು ಹಿಡಿ, ಗೊರಟುಗಟ್ಟು, ಗೊಟ್ಟಗಟ್ಟು.

**बाड** (ಬಾಡ್) ನ. ಸಾರಾಂಶ, ಸಂಕ್ಷೇಪ, ಸಾಮಾನ್ಯ ಮಾಡುವಿಕೆ, ಹಸ್ತಲಿಖಿತ ಕಾಗದಪತ್ರ, ೨. ಸಾರ ಸಂಗ್ರಹ, ಅಡಕ.

**बांड** (ಬಾಂಡ್) ಪು. ದಪ್ಪ ಸೀರೆ. ವಿ. ಗಟ್ಟಿಗ, ದಪ್ಪ, ಉರುಟ.

**बाडगा** (ಬಾಡಗಾ) ವಿ. ಉರುಟು, ಹಂಡಬಂಡ.

**बांडगूळ** (ಬಾಂಡ್‌ಗೂಳ್) ನ. ಪರೋಪಜೀವಿ, ಪರಪಿಂಡಿ.

**बाडबिछाद (शा)** ಬಾಡ್‌ಬಿಛಾದ್ (ಶಾ) ಪು. ಎಲ್ಲ ಸಾಮಾನು, ಹಾಸಿಗೆ-ಹೊದಿಕೆ, ಇದ್ದುದು-ಬಿದ್ದುದು.

**बाड बिशाद** (ಬಾಡ್‌ಬಿಶಾದ್) ಸ್ತ್ರೀ. }
**बाड बिस्तरा** (ಬಾಡ್‌ಬಿಸ್ತಾರಾ) ಪು. } ಸಾಮಾನು, ಗಂಟು, ಸೊತ್ತು, ಆಸ್ತಿ.

**बांडा** (ಬಾಂಡಾ) ವಿ. ಛಿನ್ನಭಿನ್ನ, ಹಂಡಬಂಡ.

**बाडी** (ಬಾಡೀ) ಸ್ತ್ರೀ. ಬೇಲಿ, ಆವರಣ, ಪ್ರಾಕಾರ.

**बाण** (ಬಾಣ) ಪು. ಸಂ. ಬಾಣ, ಶರ, ಅಗ್ನಿಬಾಣ, ಆಕಾಶಬಾಣ.

**बाणगुप्ती** (ಬಾಣಗುಪ್ತೀ) ಸ್ತ್ರೀ. ಶಿಪಾಯಿಗಳ ಸಮವಸ್ತ್ರ, ಮೆರವಣಿಗೆಯ ಪೋಷಾಕು, ಯುದ್ಧದ ಸರಂಜಾಮು.

**बाणणें** (ಬಾಣಣೇ) ಕ್ರಿ. ಅ. ದೃಢವಾಗು, ಗಟ್ಟಿಯಾಗಿ ಮೂಡು, ಬಿಂಬಿಸು, ಮೂಡು, ಅಚ್ಚೊತ್ತಿದಂತಾಗು, ಶೃಂಗರಿಸು, ಸಜ್ಜುಗೊಳಿಸು.

**बाणदार** (ಬಾಣದಾರ್) ವಿ. } ಬಾಣ ಎಸೆಯುವ, ಧನುರ್ಧರ.
**बाणाईत** (ಬಾಣಾಇತ್) ವಿ. }

**बाणा** (ಬಾಣಾ) ಪು. ಆತ್ಮಸಾಮರ್ಥ್ಯ, ಬಿರುದು, ಅಭಿಪ್ರಾಯ, ವೃತ್ತಿ, ಅರಿಕೆ, ಹೇತು, ಪೋಷಾಕು.

**बाणी** (ಬಾಣೀ) ಸ್ತ್ರೀ. ಶೈಲಿ, ಅಂಚು, ವಾಣಿ, ಶಬ್ದ, ಸಂದುಕಟ್ಟು, ಅವಸ್ಥಾಂತರ, ಗಂಡುಸಮಯ, ಕುತ್ತು.

**आणी–चा प्रसंग** (ಆಣೀ–ಚಾ ಪ್ರಸಂಗ) ಪು. ಗಂಡಾಂತರ, ಬಿಕ್ಕಟ್ಟು.

**बाणीदार** (ಬಾಣೀದಾರ್) ವಿ. ಉತ್ತಮ ಪದ್ಧತಿಯ.

**बाणेदार** (ಬಾಣೇದಾರ್) ವಿ. ಸ್ವಾಭಿಮಾನಿ, ಶೂರ.

**बात** (ಬಾತ್) ಸ್ತ್ರೀ. ಮಾತು, ಒಣಮಾತು, ಪೊಳ್ಳುಮಾತು, ಹರಟೆ.

**बात उडविणे** (ಬಾತ್ ಉಡವಿಣೇ) ಕ್ರಿ. ಅ. ಮಾತು ಹೊರಳಿಸು, ಸುಳ್ಳು ಸುದ್ದಿ ಎಬ್ಬಿಸು–ಹುಟ್ಟಿಸು.

**बाता छाटणें–मारणे** (ಬಾತಾ ಛಾಟಣೇ–ಮಾರಣೇ) ಕ್ರಿ. ಅ. ಹರಟೆಹೊಡೆ. ೨. ದೊಡ್ಡಸ್ತಿಕೆಯನ್ನು ತೋರು.

**बात झोकणे** (ಬಾತ್ ಝೋಕಣೇ) ಕ್ರಿ. ಸ. ಅತಿಶಯೋಕ್ತಿಮಾಡು, ಬೆಳೆಯಿಸಿಕೊಳ್ಳು, ಉಬ್ಬಿಸಿ ಹೇಳು.

**बात खबात्या** (ಬಾತ್ ಖಬಾತ್ಯಾ) ವಿ. ಸುದ್ದಿ ಎಬ್ಬಿಸುವ, ಸುದ್ದಿಹುಟ್ಟಿಸುವ, ಹರಟೆಯೆಬ್ಬಿಸುವವ.

**बातमी** (ಬಾತಮೀ) ಸ್ತ್ರೀ. ಅರ. (ಬಾತಿನೀ) ಸಮಾಚಾರ, ವರ್ತಮಾನ, ಬಾತ್ಮಿ, ಹೊಸಸುದ್ದಿ, ಸಂದೇಶ.

**बातमी देणे, सांगणे** (ಬಾತಮೀ ದೇಣೇ, ಸಾಂಗಣೇ) ಕ್ರಿ. ಸ. ಸುದ್ದಿಹೇಳು, ಸಂದೇಶವೀಯು–ನೀಡು, ವರ್ತಮಾನ ಹೇಳು.

**बातमी फोडणे** (ಬಾತಮೀ ಫೋಡಣೇ) ಕ್ರಿ. ಸ. ಗುಟ್ಟು ರಟ್ಟುಮಾಡು, ಸುದ್ದಿ ಹೇಳು.

**बातमी राखणे** (ಬಾತಮೀ ರಾಖಣೇ) ಕ್ರಿ. ಸ. ಸುದ್ದಿಯನ್ನು ಗುಪ್ತವಾಗಿಡು, ಸುದ್ದಿ ಮುಚ್ಚಿಡು, ಗುಪ್ತ ಮಾತು, ಕಾಯು.

**बातमीदार** (ಬಾತಮೀದಾರ್) ವಿ. ಸುದ್ದಿಗಾರ, ಬಾತ್ಮಿದಾರ, ಸುದ್ದಿಕೊಡುವ, ಗೂಢಚಾರ, ಬೇಹಿಗ, ಬೇಹುಗಾರ.

**बाताड्या** (ಬಾತಾಡ್ಯಾ) ವಿ. ಬಡಾಯಿಗಾರ, ಕಂಡಂತಾಡುವ, ಸುಳ್ಳು ಸುದ್ದಿಯೆಬ್ಬಿಸುವ.

**बातल–बातील** (ಬಾತಲ್–ಬಾತೀಲ್) ವಿ. ಅರ. ಬರೀ ಮಾತಿನ, ಒಣಮಾತಿನ, ಸುಳ್ಳು ಸುದ್ದಿಯ, ಟೊಳ್ಳು ಸುದ್ದಿಯ.

**बात्या** (ಬಾತ್ಯಾ) ಪು. ಹರಟೆಗಾರ, ಸುಳ್ಳು ಸುದ್ದಿ ಹುಟ್ಟಿಸುವವ.

**बाद** (ಬಾದ್) ವಿ. ಅರ. ನಿರುಪಯೋಗಿ, ವರ್ಜಿತ, ಬಿಟ್ಟ.

**बादबाकी** (ಬಾದಬಾಕೀ) ಸ್ತ್ರೀ. ಅರ. ಲೆಕ್ಕ ಬಗೆಹರಿಸುವಿಕೆ, ಲೆಕ್ಕತೀರಿಸುವಿಕೆ, ಉಳಿದಬಾಕಿ, ವಸೂಲಾಗದ ಬಾಕೀ.

**बादला** (ಬಾದಲಾ) ಪು. ಹಿಂ. ಜರತಾರಿ, ಕಸೂತಿ ೨. ಪಕಾಲಿ, ನೀರು ತುಂಬುವ ಚರ್ಮದ ಚೀಲ.

**बादली** (ಬಾದಲೀ) ಸ್ತ್ರೀ. ಬಾಲಟಿ, ಬಕೇಟು, ಗಂಗಾಳ.

**बांद** (ಬಾಂದ್) ಪು. ಆಣೆಕಟ್ಟು, ಜಲಬಂಧನ.

**बांदबंदस्ती** (ಬಾಂದ್‌ಬಂದಸ್ತಿ) (ಸ್ತ್ರೀ) ಆಣೆಕಟ್ಟು, ಒಡ್ಡು.

**बांदवडी** (ಬಾಂದವಡೀ) ವಿ. ನಿಯಮಿಸಿದ, ಹಾಕಿಕೊಟ್ಟ, ಗೊತ್ತುಮಾಡಿದ.

**बादशहा** (ಬಾದಶಹಾ) ಪು. ಫಾ. ಮುಸಲ್ಮಾನ ಅರಸು, ಮಹಾರಾಜ, ರಾಜಾಧಿರಾಜ.

**बादशाही** (ಬಾದಶಾಹೀ) ಸ್ತ್ರೀ. ಫಾ. ಅರಸನ, ಅರಸನಿಗೆ ಶೋಭಿಸುವ, ಚೆಂದವಾದ.

**बांदाड** (ಬಾಂದಾಡ್) ನ. ಒಡ್ಡು, ಹಾವಳಿ.

**बांदी** (ಬಾಂದೀ) ಸ್ತ್ರೀ. ಸಣ್ಣ ಒಡ್ಡು. ೨. ದಾಸಿ, ತೊತ್ತು, ಹೆಣ್ಣಾಳು, ಸೇವಕಿ.

**बाध** (ಬಾಧ್) ಪು. ಸಂಕಟ, ವಿರೋಧ, ಅಡ್ಡಿ, ಅಪವಾದ.

**बाधक** (ಬಾಧಕ್) ವಿ. ಕಾಡುವ, ವಿರೋಧಿಸುವ, ಆತಂಕಿಸುವ, ಭಿನ್ನಾಭಿಪ್ರಾಯವುಳ್ಳ.

**बांध** (ಬಾಂಧ) ಪು. ಒಡ್ಡು, ಆಣೆಕಟ್ಟು.

**बांधणावळ** (ಬಾಂಧಣಾವಳ್) ಸ್ತ್ರೀ. ಕಟ್ಟಿಸುವ ಕೂಲಿ, ಕಟ್ಟಿಸುವಿಕೆ, ರಚನೆಯ ಕೂಲಿ.

**बांधणी** (ಬಾಂಧಣೀ) ಸ್ತ್ರೀ. ಕಟ್ಟಿಸುವ ಪದ್ಧತಿ, ಕಟ್ಟಿಸುವಿಕೆ, ಬೈಂಡಿಂಗ್ (ಪುಸ್ತಕಗಳ)

**बाधणे** (ಬಾಧಣೇ) ಕ್ರಿ. ಸ. ಕಾಡು, ಪೀಡಿಸು, ತೊಂದರೆಗೊಡು, ಅನಾರೋಗ್ಯಮಾಡು, ವಿರೋಧಿಸು, ಬಾಧಿಸು, ದಕ್ಕದಿರು.

**बांधणे** (ಬಾಂಧಣೇ) ಕ್ರಿ. ಸ. ಕಟ್ಟು, ಕಟ್ಟಿಹಾಕು.

**बांधली गाठ** (ಬಾಂಧಲೀಗಾಠ್) ಸ್ತ್ರೀ. ಕಟ್ಟಿದಗಂಟು, ಕೂಡುಹಾಕಿದ ಧನ, ಸಂಚಯಿಸಿದ ದುಡ್ಡು, ಬಂಡವಾಳ, ಮೂಲದ್ರವ್ಯ, ಶಿಲುಕು, ಕೈಯಲ್ಲಿರುವ ಮಾತು.

**बांधव** (ಬಾಂಧವ) ಪು. ಸಂ. ಗೆಳೆಯರು, ಸಹೋದರರು.

**बांधवाट** (ಬಾಂಧವಾಟ್) ಸ್ತ್ರೀ. ಒಡ್ಡಿನ ಮೇಲಿನ ಹಾದಿ.

**बाधा** (ಬಾಧಾ) ಸ್ತ್ರೀ. ಪೀಡೆ, ಕಾಟ, ವೇದನೆ, ಭೂತಬಾಧೆ.

**बांधा** (ಬಾಂಧಾ) ಪು. ಮೈಕಟ್ಟು.

**बांधाबांध–धी** (ಬಾಂಧಾಬಾಂಧ್–ಧೀ) ಸ್ತ್ರೀ. ಕಟ್ಟುವಿಕೆ, ತುಂಬುವಿಕೆ, ಹೊರಡುವ ಸಿದ್ಧತೆ ಮಾಡುವಿಕೆ.

**बांधारा** (ಬಾಂಧಾರಾ) ಪು. ಹೊಲದ ಒಡ್ಡು 'बांट' ನೋ.

**बांधीव** (ಬಾಂಧೀವ್) ವಿ. ಕಟ್ಟಿದ, ಒಡ್ಡುಹಾಕಿದ, ತಯಾರು ಮಾಡಿದ.

**बांधेसूद** (ಬಾಂಧೇಸೂದ್) ವಿ. ಸುಂದರವಾದ, ಬಂಧುರವಾದ, ಉತ್ತಮ ಮೈಕಟ್ಟಿನ.

**बाधित** (ಬಾಧಿತ) ವಿ. ಸಂ. ಬಹಿಷ್ಕೃತ, ಅಪವಾದಿತ, ಆಪಾದಿತ.

**बाध्य** (ಬಾಧ್ಯ) ವಿ. ಸಂ. ತಡೆಯುತಕ್ಕ, ನಿಲ್ಲಿಸತಕ್ಕ, ೨. ಅರ್ಹ. ಬಾಧ್ಯತೆಯುಳ್ಳ.

**बाप** (ಬಾಪ್) ಪು. ತಂದೆ, ಅಪ್ಪ, ಹಿರಿಯ.

**माग्न पुढ्न बाप नवरा** (ಮಾಗೂನ್ ಪುಢೂನ್ ಬಾಪ್ ನವಾರಾ) ಪು. (ಗಾದೆಯ ಮಾತು) ಮಗ ಮದುವೆಗಾದಾಗ ಮತ್ತೆ ತಂದೆಯೇ ಮದುಮಗನಾದನಂತೆ!

**बापरे** (ಬಾಪರೇ) (ಉದ್ಗಾರವಾಚಕ) ಒಹೋ ಹೊ! ಅಯ್ಯಯ್ಯೋ.

**बाप जन्मात–जन्मी** (ಬಾಪ್‌ಜನ್ಮಾತ್–ಜನ್ಮಿ) ಕ್ರಿ.ವಿ. ಹುಟ್ಟಿದಾಗಿನಿಂದ, ಜನ್ಮದಾರಭ್ಯ. ೨. ಎಂದೆಂದಿಗೂ.

**बापजादे** (ಬಾಪ್‌ಜಾದೇ) ಪು. ಬಹುವ. ಹಿರಿಯರು, ಪೂರ್ವಜರು.

**बापडा–बापुडा** (ಬಾಪಡಾ–ಪುಡಾ) ವಿ. ಬಡವ, ಸಭ್ಯ, ಅನಾಥ, ಪಾಪ!

**बापरोटी** (ಬಾಪರೋಟೀ) ಸ್ತ್ರೀ. ಪಿತೃಧನ, ಪಿತ್ರಾರ್ಜಿತ.

**बापा** (ಬಾಪಾ) ಪು. ತಂದೆ, ಅಪ್ಪ, ಹಿರಿಯ.

**बापूस** (ಬಾಪೂಸ್) ಪು. 'बाप' ನೋ.

**बापोती** (ಬಾಪೋತೀ) ಸ್ತ್ರೀ. 'बापरोटि' ನೋ.

**बाप्या** (ಬಾಪ್ಯಾ) ಪು. ಗಂಡಸು. ೨. ವಿ. ನೆಲ್ಮೆಯ (ಮಗ)

**बाप्तिस्मा** (ಬಾಪ್ತಿಸ್ಮಾ) ಪು. ಇಂ. ಕ್ರಿಶ್ಚಿಯನ್ ದೀಕ್ಷಾ ಸಂಸ್ಕಾರ.

**बाब** (ಬಾಬ್) ಸ್ತ್ರೀ. ಅರ. ಮಾತು, ವಿಷಯ, ಸಂಗತಿ, ಮಾಮುಲು, ಉದ್ಯೋಗ, ಖಟ್ಲೆ, ಕರ.

**बाबत** (ಬಾಬತ್) ಸ್ತ್ರೀ. ಅರ. ವಿಷಯ. ೨. ಬಾಬತ್ತು. ೩. ಕ್ರಿ. ವಿ. ಬದಲು, ಕುರಿತು, ಬಗ್ಗೆ.

**बाबती** (ಬಾಬತೀ) ಸ್ತ್ರೀ. ಜಮಾಬಂದಿಯ ರಕಮು, ನಾಲ್ಕನೆಯ ಭಾಗದಕರ.

**बाबरझोटी** (ಬಾಬರ್‌ಝೋಟೀ) ಸ್ತ್ರೀ. ಅವ್ಯವಸ್ಥೆ, ಜೆಲ್ಲಾಪಿಲ್ಲಿ.

**बाबर ओठ** (ಬಾಬರ್ ಓಠ್) ಪು. ದಪ್ಪತುಟಿ, ಲಂಬೋಷ್ಠ.

**बाबरी** (ಬಾಬರೀ) ಸ್ತ್ರೀ. ಜಡೆ, ಕೂದಲು, ಕೇಶಪಾಶ.

**बाबा** (ಬಾಬಾ) ಪು. ಫಾ. ತಂದೆ 'बाप' ನೋ.

**बाबा पुता करणे** (ಬಾಬಾಪುತಾ ಕರಣೇ) ಕ್ರಿ. ಸ. ಮನವೊಲಿಸು, ಉಬ್ಬಿಸು, ಪುಸಲಾಯಿಸು, ನಂಬಿಸು.

**बांबटणे** (ಬಾಂಬುಟಣೇ) ಕ್ರಿ. ಅ. ಹಣ್ಣಾಗುವ ಮೊದಲು ಹಳದಿ ಕಾಣು, ಕೊಳೆ, ಹುಳಿ.

**बांबू** (ಬಾಂಬೂ) ಪು. ಗಳ, ಬಿದಿರು, ಗಟ್ಟಿ, ಉದ್ದ, ದಪ್ಪ ಬಿದಿರು.

**बांबे** (ಬಾಂಬೇ) ಕ್ರಿ. ವಿ. ಕುರಿತು, ಲೆಕ್ಕಕ್ಕೆ, ಸಲುವಾಗಿ, ಓಸುಗ, ಓಸ್ಕರ.

**बांबोट** (ಬಾಂಬೋಟ್) ಸ್ತ್ರೀ. ಸಣ್ಣನಾವೆ, ಡೋಣಿ.

**बाब्या** (ಬಾಬ್ಯಾ) ಸಣ್ಣ ಮಕ್ಕಳಿಗೆ ಮುದ್ದಿನಿಂದ ಕರೆಯುವಿಕೆ, ಬಾಬು, ಬಾಬ್ಯಾ.

**आपला तो बाब्या, लोकाचा कारटा (म्हण)** (ಆಪಲಾ ಬಾಬ್ಯಾ ವ ಲೋಕಾಚಾ ಕಾರಟಾ) (ಗಾದೆಯ ಮಾತು) ತಮ್ಮ ಮಗು ಮುದ್ದಣ ಎರಡನೆಯವರ ಮಗು ಹೆಗ್ಗಣ.

**बांभ (भू) ळ–ळी** (ಬಾಂಭ (ಭೂ) ಳ–ಳೀ) ಸ್ತ್ರೀ. ಜಾಲಿಯಗಿಡ.

**बांभळीचा काटा** (ಬಾಂಭಳೀಚಾ ಕಾಟಾ) ಪು. ಜಾಲಿಯ ಮುಳ್ಳು, ಸಡ್ಡು ಹೊಡೆದು ಬಗ್ಗುವ ಮನುಷ್ಯ.

**बाभ्रव्य** (ಬಾಭ್ರವ್ಯ) ಪು. ಬ್ರಾಹ್ಮಣರ ಒಂದು ಗೋತ್ರ.

**बामणी** (ಬಾಮಣೀ) ವಿ. ಬ್ರಾಹ್ಮಣರ, ಹಾರುವರ.

**बायको** (ಬಾಯಕೋ) ಸ್ತ್ರೀ. ಹೆಂಡತಿ, ಹೆಂಗಸು, ಪತ್ನಿ.

**बायको करणें** (ಬಾಯಕೋ ಕರಣೇ) ಕ್ರಿ. ಸ. ಮದುವೆ ಮಾಡಿಕೊ.

**बायको वेल्हाळ** (ಬಾಯಕೋ ವೇಲ್ಹಾಳ್) ವಿ. ಸ್ತ್ರೀಲೋಲ.

**बायक्या** (ಬಾಯಕ್ಯಾ) ವಿ. ಹೆಂಗಸರ ಸ್ವಭಾವದವ.

**बायल्या** (ಬಾಯಲ್ಯಾ) ವಿ. ಸ್ತ್ರೀ ಲಂಪಟ, ಹೆಂಗಸರ ಸ್ವಭಾವದವ.

**बाया** (ಬಾಯಾ) ಪು. ಹಿಂ. ಉಡಕ. ೨. ಡಗ್ಗಾ, (ತಬಲ).

**बार** (ಬಾರ) ಪು. ಫಾ. ಸರತಿ, ಗೋಳೀಬಾರ, ಬಂದೂಕಿನ ಬಾರ, ಸ್ಫೋಟ. ೨. ಬೆಳೆ.

**बार** (ಬಾರ್) ಪು. ಇಂ. ತೊಲೆ, ಕಂಬಿ.

**बारकश** (ಬಾರಕಶ್) ಪು. ವ್ಯಾಪಾರಿ ಹಡಗು, ಸರಕಿನ ಹಡಗು, ಚೆಂದ, ಸೊಗಸಿನ.

**बारकाई** (ಬಾರಕಾಈ) ಸ್ತ್ರೀ. ಸೌಂದರ್ಯ; ಚೆಲವು, ತಿಳುವುತನ, ಸೂಕ್ಷ್ಮತೆ, ಮಿತವ್ಯಯ.

**बारकावा** (ಬಾರಕಾವಾ) ಪು. ನಯ, ಸೂಕ್ಷ್ಮ ಮಾತು.

**बारकावणे** (ಬಾರಕಾವಣೇ) ಕ್ರಿ. ಅ. ತೆಳ್ಳಗಾಗು, ಬಡಕಾಗು, ನಿರ್ಬಲವಾಗು.

**बारके** (ಬಾರಕೇ) ನ. ಹನ್ನೆರಡರ ಗುಂಪು, ಹನ್ನೆರಡರ ಕೈ. ೨. ವಿ. ಬಡಕ, ಸಣ್ಣ.

**बारगळ** (ಬಾರಗಳ್) ವಿ. ಕಾಡು, ಗುಡ್ಡಗಾಡು, ಸ್ವೈರವೃತ್ತಿಯ, ಅಂಜಿಕೆಯಿಲ್ಲದ, ಸೊಕ್ಕಿ ಬೆಳೆದ.

**बारगळणें** (ಬಾರಗಳಣೇ) ಕ್ರಿ. ಅ. ವ್ಯರ್ಥವಾಗು.

**बारगीर** (ಬಾರಗೀರ್) ಪು. ಫಾ. ಸೈನಿಕ. ೨. 'ಲಾಸ್ಕರ್' ಅಡಗಲಜ್ಜ, ಅಡಸೂಳಿ.

**बारगिरी** (ಬಾರಗಿರೀ) ಸೇನಾಕಾರ್ಯ, ಅಡಸೂಳಿಯ ಕೆಲಸ, ಅಡಸೂಳಿ (ಪುಲ್ಲಿಂಗ) ಸೈನ್ಯದ ಸೇವಕನ ಕೆಲಸ.

**बारजिभ्या** (ಬಾರಜಿಭ್ಯಾ) ವಿ. ನಂಬಿಗೆಗೆ ಅಪಾತ್ರ.

**बारडी** (ಬಾರಡೀ) ಸ್ತ್ರೀ. ಕಡಗೋಲಿನ ಹಗ್ಗ. ೨. ಬಾದಲಿ, ಬಕೀಟು.

**बारदान** (ಬಾರದಾನ್) ನ. ಫಾ. ಗಂಟು ಕಟ್ಟುವ ತಟ್ಟು, ಹಡಗಿನ ಸರಕುಗಳು, ಪೆಟ್ಟಿಗೆ.

**बारदार** (ಬಾರದಾರ್) ಪು. ಫಾ. ಬಂದೂಕಧಾರಿ, ಕಾಯಿಯಾಗಲಿರುವ (ಗಿಡ) ಕಾಯಿಗೆ ಬಂದ (ಗಿಡ.)

**बारदेश** (ಬಾರದೇಶ್) ಪು. ಗೋವಾ ಪ್ರದೇಶದಹೆಸರು.

**बारनायकी** (ಬಾರನಾಯಕೀ) ಸ್ತ್ರೀ. ಹನ್ನೆರಡು ನಾಯಕರ ಆಡಳಿತ–ಅರಾಜಕತೆ.

**बारनिशी** (ಬಾರನಿಶೀ) ಸ್ತ್ರೀ. ಫಾ. ದಾಖಲುಮಾಡುವ ಪುಸ್ತಕ, ನೊಂದಣಿ, (ಪೋಲೀಸರ ವರದಿ ಪುಸ್ತ.)

**बारनीस** (ಬಾರನೀಸ್) ನೊಂದಣಿಮಾಡುವವ, ದಫ್ತರದಾರ, ಪೋಲೀಸ್ ಕಾರಕೂನ.

**बार बंडा** (ಬಾರಬಂಡಾ) ವಿ. ಕಾಯದೆ ಬಾಹಿರ, ನಿಯಮ ಬಾಹ್ಯ, ಸಡಿಲಾದ, ಶಿಥಿಲ, ಕಾಮುಕ.

**बारभाई** (ಬಾರಭಾಈ) ಅವ್ಯವಸ್ಥೆ, ವಿರುದ್ಧ ಮತದ ಹನ್ನೆರಡು ಜನರು, ಆಡಳಿತ.

**–कारभार** (–ಕಾರಭಾರ್) ಪು. ಪೇಶವೇ ರಾಜ್ಯದಲ್ಲಿಯ ಸಚಿವರ ಅರಸೊತ್ತಿಗೆ.)

**बारमाहा** (ಬಾರಮಹಾ) ಕ್ರಿ. ವಿ. ಇಡಿಯ ವರ್ಷ ಹನ್ನೆರಡೂ ತಿಂಗಳು.

**बारमास** (ಬಾರಮಾಸ್) ಕ್ರಿ. ವಿ. ಯಾವಾಗಲೂ.

**बारमाही** (ಬಾರಮಾಹೀ) ವಿ. ನಿತ್ಯದ, ಪ್ರತಿತಿಂಗಳದ, ನಿತ್ಯ, ಸದಾಕಾಲ, ಯಾವಾಗಲೂ ಇರುವ.

**बारव** (ಬಾರವ) ಪು. ಪಾವಟಿಗೆಯ ಚಚ್ಚೌಕುಬಾವಿ, ಇಳಿಯುವ ಚೌಕುಬಾವಿ.

**बारसक (ख) डी** (ಬಾರಸಕ (ಖ) ಡೀ) ಸ್ತ್ರೀ. ಮೂಲಾಕ್ಷರಗಳು.

**बारसा से** (ಬಾರಸಾ ಸೇ) ಪು. ನ. ತೊಟ್ಟಿಲದಲ್ಲಿ ಹಾಕುವ ಸಮಾರಂಭ, ಹೆಸರಿಡುವ ಸಮಾರಂಭ, ನಾಮಕರಣ ಸಂಸ್ಕಾರ.

**बारसें जेवणें** (ಬಾರಸೆ ಜೇವಣೇ) ಕ್ರಿ. ಅ. ಬಹಳ ಅನುಭವವಿರು.

**बारा** (ಬಾರಾ) ಹನ್ನೆರಡು, ೧೨.

**बारा गोष्टी सांगणे** (ಬಾರಾ ಗೋಷ್ಟೀ ಸಾಂಗಣೇ) ಕ್ರಿ. ಸ. ಸುಳ್ಳುನೆವ ಹೇಳು, ಅಸಂಬದ್ಧ ಮಾತಾಡು.

**बारा पिंपळावरचा मुंज्या** (ಬಾರಾ ಪಿಂಪಳಾವರಚಾ ಮುಂಜಾ) ಪು. ನಾನಾಬಗೆಯ ಉದ್ಯೋಗದಲ್ಲಿರುವವ.

**बाराबंदराचे पाणी प्यालेला** (ಬಾರಾ ಬಂದರಾಂಚೇ ಪಾಣೀ ಪ್ಯಾಲೇಲಾ) ವಿ. ಎಲ್ಲ ಕಡೆಯಲ್ಲಿ ಇದ್ದು ಬಂವದ. ಅನುಭವಿಕ.

**बारा मांडवाचा वऱ्हाडी** (ಬಾರಾ ಮಾಂಡವಾಂಚಾ ವರ್ಹಾಡೀ) ಪು. ಬೇರೆ ಬೇರೆ ಕಡೆಗಳಲ್ಲಿ ಬೇರೆ ಬೇರೆ ಕೆಲಸ ಮಾಡುತ್ತಿರುವವ.

**बारा वाटा मोकळ्या होणे** (ಬಾರಾ ವಾಟಾ ಮೋಕಳ್ಯಾ ಹೋಣೇ) ಕ್ರಿ. ಅ. ಸಂಪೂರ್ಣವಾಗಿ ಸ್ವತಂತ್ರನಾಗು.

**बारा कारू** (ಬಾರಾ ಕಾರೂ) ಪು. ವಿ. ಹನ್ನೆರಡು ಗ್ರಾಮಾಧಿಕಾರಿಗಳು, **बलुतेदार** ನೋಡಿರಿ.

**बाराखडी** (ಬಾರಾಖಡೀ) ಸ್ತ್ರೀ. ಕಾ ಗುಣಿತಾಕ್ಷರಗಳು.

**बाराबलुत्या** (ಬಾರಾಬಲುತ್ಯಾ) ಪು. ಗ್ರಾಮಾಧಿಕಾರಿಗಳ ಹಕ್ಕುಗಳು.

**बारा महाल** (ಬಾರಾ ಮಹಾಲ) ಪು. ಆಡಳಿತ ಕೇಂದ್ರ ಸೆಕ್ರೆಟೆರಿಯೆಟ್, ಸರಕಾರದ ಹನ್ನೆರಡು ಖಾತೆಗಳು.

**बारावा** (ಬಾರಾವಾ) ಪು. ಹನ್ನೆರಡನೆಯವ.

**बारावा बृहस्पति असणे** (ಬಾರಾವಾ ಬೃಹಸ್ಪತಿ ಅಸಣೇ) ಪು. ಬದ್ಧದ್ವೇಷವಿರು.

**बारी** (ಬಾರೀ) ಸ್ತ್ರೀ. ಸರತಿ, ಸಾಲುಗಟ್ಟಿ ನಡೆಯುವಿಕೆ, ಓಣಿ, ಕಿಟಕಿ, ಸರಕಾರಿ ಕೆಲಸಕ್ಕಾಗಿ ಪ್ರಯಾಣ.

**बारीक** (ಬಾರೀಕ್) ವಿ. ಅತಿಸಣ್ಣ, ಉಚ್ಚ, ಉಚ್ಚ ತರದ, ಸೂಕ್ಷ್ಮ, ಅಂದವಾದ, ಸೊಗಸಿನ, ಕೃಶ, ಸೀರ, ದುರ್ಬಲ.

**बारीक कातणे** (ಬಾರೀಕ್ ಕಾತಣೇ) ಕ್ರಿ. ಸ. ಸಣ್ಣಾಗಿ ನೂಲು.

**बारीक पाहणे** (ಬಾರೀಕ್ ಪಾಹಣೇ) ಕ್ರಿ. ಅ. ಸೂಕ್ಷ್ಮ ವಿಚಾರಮಾಡು.

**बारीक राव** (ಬಾರೀಕ್‌ರಾವ್) ಪು. ಬಡಕ ಮನುಷ್ಯ, ಕಟ್ಟಿಗೆಯಂತಹ ಮನುಷ್ಯ, ಬಡಿಗೆಯಂತಹ ಮನುಷ್ಯ.

**बारीक दृष्टी** (ಬಾರೀಕ್ ದೃಷ್ಟಿ) ಸ್ತ್ರೀ. ಸೂಕ್ಷ್ಮದೃಷ್ಟಿ, ಸೂಕ್ಷ್ಮ ನೋಟ, ಸೂಕ್ಷ್ಮ ವಿಚಾರಣೆ.

**बारे** (ಬಾರೇ) ನ. ಬೇಲಿಯೊಳಗಿನ ನೀರ ಕಾಲುವೆ.

**बारोळा** (ಬಾರೋಳಾ) ಪು. ಹನ್ನೆರಡು ಸೊಲಿಗೆಯ (ಅಳತೆ).

**बाल** (ಬಾಲ್) ಪು. ಸಂ. ಕೂಸು, ಸಣ್ಣಹುಡುಗ. ವಿ. ಸಣ್ಣವ, ಚಿಕ್ಕವ. ೨. ಹಿಂ. ತಲೆಯ ಕೂದಲು, ಕೂದಲು.

**बालंबाल खात्री होणे** (ಬಾಲಂಬಾಲ್ ಖಾತ್ರೀ ಹೋಣೇ) ಪೂರ್ಣ ಮನವರಿಕೆಯಾಗು.

**बालक** (ಬಾಲಕ್) ಪು. ಸಂ. ಸಣ್ಣಹುಡುಗ, ಹುಡುಗ.

**बालक्रीडा** (ಬಾಲಕ್ರೀಡಾ) ಸ್ತ್ರೀ. ಬಾಲಕ್ರೀಡೆ, ಬಾಲವಿನೋದ, ತಮಾಷೆ.

**बालट, बालंट** (ಬಾಲಟ್, ಬಾಲಂಟ್) ನ. ಇಂ. (ವಾರಂಟ್), ಮಿಥ್ಯಾರೋಪ, ಸುಳ್ಳು ಆಪಾದನೆ, ಅಪವಾದ, ದೂಷಣೆ.

**बाल(लं)ट खोर** (ಬಾಲ(ಲಂ) ಟ ಖೋರ್) ವಿ. ನಿಂದಕ.

**बालदी** (ಬಾಲದೀ) ಸ್ತ್ರೀ. ಬಕೀಟು, ಬಾರಡಿ, ಬಾದಲಿ, **बारडी** ನೋಡಿರಿ.

**बाल पेच** (ಬಾಲಪೇಚ್) ಪು. ರುಮಾಲಕಟ್ಟುವ ಪದ್ಧತಿ.

**बालंबाल** (ಬಾಲಂಬಾಲ್) ಕ್ರಿ. ವಿ. ಸಂಪೂರ್ಣವಾಗಿ.

**बालबुद्धी** (ಬಾಲಬುದ್ಧಿ) ಸ್ತ್ರೀ. ಸಂ. ಅಜ್ಞಾನ, ಹುಡುಗಬುದ್ಧಿ.

**बालबोध** (ಬಾಲಬೋಧ) ವಿ. ಸಂ. ಸರಲ, ಸಸಾರ, ಸಹಜ, ತಿಳಿಯುವ. ೨. ಸ್ತ್ರೀ. ಮರಾಠೀ (ದೇವನಾಗರೀ) ಲಿಪಿ.

**बालब्रह्मचारी** (ಬಾಲಬ್ರಹ್ಮಚಾರಿ) ವಿ. ಸಂ. ಬಾಲಬ್ರಹ್ಮಚಾರಿ.

**बालभाषा** (ಬಾಲಭಾಷಾ) ಸ್ತ್ರೀ. ಸಣ್ಣಮಕ್ಕಳಾಡುವ ಭಾಷೆ, ಅಪಭ್ರಂಶ.

**बालमित्र** (ಬಾಲಮಿತ್ರ) ಪು. ಚಿಕ್ಕಂದಿನ ಗೆಳೆಯ, ಸಂಗಡಿಗ.

**बालरंडा** (ಬಾಲರಂಡಾ)
**बालविधवा** (ಬಾಲವಿಧವಾ) } ಪು. ಬಾಲವಿಧವೆ, ಚಿಕ್ಕತನದಲ್ಲಿಯೇ ಗಂಡಸತ್ತವಳು.

**बालविवाह** (ಬಾಲವಿವಾಹ) ಪು. ಸಂ. ಚಿಕ್ಕಂದಿನಲ್ಲಿಯ ಮದುವೆ.

**बालहत्या** (ಬಾಲಹತ್ಯಾ) ಸ್ತ್ರೀ. ಸಂ. ಹುಟ್ಟುಗೂಸನ್ನು ಕೊಲ್ಲುವಿಕೆ, ಶಿಶುಹತ್ಯೆ.

**बालहत्यारा** (ಬಾಲಹತ್ಯಾರಾ) ಪು. ಶಿಶುಹತ್ಯೆ ಮಾಡುವವ.

**बालहरितकी** (ಬಾಲಹರೀತಕೀ) ಸ್ತ್ರೀ. ಅಳಲೇಕಾಯಿ, ಎಳೆಯ ಅಳಲೇಕಾಯಿ.

**बा–ला–मारणे** (ಬಾ–ಲಾ–ಮಾರಣೇ) ಕ್ರಿ. ಸಂ. ವಂಚಿಸು, ಓಡಿಹೋಗು.

**बाला** (ಬಾಲಾ) ಸ್ತ್ರೀ. ಸಂ. ಹುಡುಗಿ, ಪು. ನಾಣ್ಯದ ಅಚ್ಚು.

**बालाभ्यास** (ಬಾಲಾಭ್ಯಾಸ) ಪು. ಸಂ. ಸಣ್ಣವಯಸ್ಸಿನಲ್ಲಿಯ ಶಿಕ್ಷಣ, ಅಭ್ಯಾಸ. ೨. ಚಿಕ್ಕಂದಿನಿಂದ ಬಂದ ದುರಭ್ಯಾಸ.

**बालार्क** (ಬಾಲಾರ್ಕ) ಪು. ಸಂ. ಬೆಳಗಿನ ಸೂರ್ಯ, ಮುಂಜಾವಿನ ಸೂರ್ಯ, ಬೆಳಗಿನ ಸೂರ್ಯನ ಉಷ್ಣತೆ.

**बालिश** (ಬಾಲಿಶ) ವಿ. ಸಂ. ಮೂರ್ಖ, ಹುಡುಗಾಟಿಗೆಯ.

**बालेकिल्ला** (ಬಾಲೆಕಿಲ್ಲಾ) ಪು. ಕೇಂದ್ರ ಸ್ಥಾನ, ಬೀಡು, ಕೋಟೆ.

**बाल्य** (ಬಾಲ್ಯ } ನ. ಸಂ.
**बाल्यावस्था** (ಬಾಲ್ಯಾವಸ್ಥಾ} ಸ್ತ್ರೀ. ಸಂ. } ಹುಡುಗತನ, ಸಣ್ಣ ವಯಸ್ಸು.

**बालोद्यान पद्धती** (ಬಾಲೋಧ್ಯಾನ ಪದ್ಧತಿ) ಪು. ಶಿಶುವಿಹಾರ, ಕಿಂಡರ್ ಗಾರ್ಡನ್.

**बालोपचार** (ಬಾಲೋಪಚಾರ್) ಪು. ಸಾಮಾನ್ಯ ಔಷಧಿ, ಶಿಶು ಸಂಗೋಪನ.

**बाव** (ಬಾವ) ಪು. ಭಾವಿ, ಕೂಪ, ವಾಪಿ.

**बावखोल** (ಬಾವಖೋಲ) ನಾ. ಅರ್ಧತುಂಬಿದಬಾವಿ.

**बावखंड** (ಬಾವಖುಂಡ್ }
**बावखड–ट** (ಬಾವಖುಂಡ್–ಟ್} ನ. ಹೆಗಲ ಭಾಗ, ಹೆಗಲ ಮೇಲ್ಭಾಗ.

**बावचळणे** (ಬಾವಚಳಣೀ) ಕ್ರಿ. ಅ. ಹುಚ್ಚನಾಗು, ಬಡಬಡಿಸು, ಲೋಭಿಯಾಗು, ಮನಸ್ಸಿನ ಸಂಯಮ ತಪ್ಪಿಹೋಗು.

**बावची** (ಬಾವಚೀ) ಸ್ತ್ರೀ. ಬಾವಚಿಕಾಯಿ, ಬಾವಚಿ ಗಿಡ.

**बावटा** (ಬಾವಟಾ) ಪು. ಧ್ವಜ, ನಿಶಾನಿ, ಬಾವುಟ.

**बावडी** (ಬಾವಡೀ) ಸ್ತ್ರೀ. ಗುಜ. ದೊಡ್ಡ ಬಾವಿ.

**बावणें** (ಬಾವಣೀ) ಕ್ರಿ. ಅ. ಬಾಡಿಹೋಗು, ಮಸಕಾಗು, ಸೊರಗು, ಕಳೆಗುಂದು, ಸೊರಗಿಸು.

**बावन,** (ಬಾವನ್) ವಿ. ಐವತ್ತೆರಡು. (೫೨)

**बावनकशी** (ಬಾವನ್‌ಕಶೀ) ವಿ. ಅತ್ಯಂತ ಶುದ್ಧ, ಉತ್ತಮ. (ಬಂಗಾರ)

**बावनगीर** (ಬಾವನ್‌ಗೀರ್) ಜಾಣ, ಬಂಟ.

**बावबंदी** (ಬಾವಬಂದೀ) ಕ್ರಿ. ವಿ. ಸ್ವತಂತ್ರತೆಯಿಂದ, ನಿರಾತಂಕವಾಗಿ, ಮುಕ್ತವಾಗಿ.

**बावरणे** (ಬಾವರಣೀ) ಕ್ರಿ. ವಿ. ಸಂಭ್ರಮ ಪಡು, ತೋಚದಾಗು.

**बावळा** (ಬಾವಳಾ) ವಿ. ಸರಳ ಸ್ವಭಾವದ, ಮುಬ್ಬು, ತಿಳುವಳಿಕೆಯಿಲ್ಲದ. ೨.ಕಪಟವಿಲ್ಲದ.

**बावळीमुद्रा निदेवळी निद्रा** (ಬಾವಳಿಮುದ್ರಾ ನಿದೇವಳಿ ನಿದ್ರಾ) (ಗಾದೆಯಮಾತು) ಹುಚ್ಚನಹಾಗೆ ಕಂಡರೂ ಐಶ್ವರ್ಯವನ್ನು ಅನುಭವಿಸುವವ.

**बावा** (ಬಾವಾ) ಪು. ಗುರು, ಗೋಸಾವಿ, ಹಿರಿಯ ಮನುಷ್ಯ, ಅಪ್ಪ, ತಂದೆ.

**बावे** (ಬಾವೇ) ಸ್ತ್ರೀ. ಕ. ಹೊಲದೊಳಗಿನ ಬಾವಿ.

**बावीस** (ಬಾವೀಸ್) ಇಪ್ಪತ್ತೆರಡು. (೨೨)

**बावे** (ಬಾವೇ) ನ. ದೋಣಿಯ ಯಂತ್ರದ ದಿಂಡಿಕೆ.

**बाव्हळा** (ಬಾವ್ಹಳಾ) ಪು. ಗೊಂಬೆ.

**बाशिंग** (ಬಾಶಿಂಗ್) ನ. ಬಾಶಿಂಗ, ಮದುಮಗ ಮದುಮಗಳ ಶಿರೋಭೂಷಣ.

**कामाचे बाशिंग कपाळी असणे** (ಕಾಮಾಚೇ ಬಾಶಿಂಗ ಕಪಾಳೀ ಅಸಣೇ) ಕ್ರಿ. ಅ. ಕೆಲಸದ ಹೊಣೆಗಾರಿಕೆ ಇರು, ದುಡಿತದ ದಂಡೆ ತಲೆಗೆ ಇರು.

**बाशिंगबळ** (ಬಾಶಿಂಗಬಳ್) ನ. ಮದುವೆಯ ಭಾಗ್ಯ, ಯೋಗ.

**बाष्कळ** (ಬಾಷ್ಕಳ) ವಿ. ಹುರುಳಿಲ್ಲದ, ಸಡಿಲ, ಶಿಥಿಲ.

**बाष्कळणे** (ಬಾಷ್ಕಳಣೀ) ಕ್ರಿ. ಅ. ಹುರುಳಿಲ್ಲದ್ದನ್ನು ಮಾತಾಡು, ಹುಚ್ಚುತನ ತೋರು.

**बाष्प** (ಬಾಷ್ಪ) ನ. ಸಂ. ಆವಿ, ಉಗೆ.

**बाष्पीभवन** (ಬಾಷ್ಪೀಭವನ) ನ. ಸಂ. ಉಗಿಯಾಗುವಿಕೆ.

**बासट** (ಬಾಸಟ) ಅರವತ್ತೆರಡು (೬೨)

**बासन** (ಬಾಸನ್) ನ. ಹೊಸ, ಉತ್ತಮ ವಸ್ತುಗಳ ಸಂಗ್ರಹ. ೨. ತಂಬೂರಿಯ ಚೀಲ, ವಾದ್ಯಗಳ ಚೀಲ, ವಾದ್ಯಗಳನ್ನು ಇಡುವ ಚೀಲ. ೩. ಹೊದಿಕೆಯ ಚೀಲ, ಹೊದಿಕೆ.

**बासा** (ಬಾಸಾ) ವಿ. ಹಿಂ. ತಂಗಳ, ಹಳೆಯ.

**बांसडा** (ಬಾಸಂಡಾ) ಪು. ಉದ್ದ ದೊಡ್ಡ ಗಳ.

**बांसरी** (ಬಾಂಸರೀ) ಸ್ತ್ರೀ. ಮುರಲಿ, ಕೊಳಲು, ವೇಣು.

**बासुंदी** (ಬಾಸುಂದೀ) ಸ್ತ್ರೀ. ಬಾಸುಂದಿ, ಬಹಳ ಅಟ್ಟಿಸಿದ ಹಾಲು.

**बासुरी** (ಬಾಸುರೀ) ಸ್ತ್ರೀ. 'बासरी' ನೋ.

**बाहणें** (ಬಾಹಣೇ) ಕ್ರಿ. ಸ. ಕರೆ, ಒದರು, ಕೂಗು ಹಾಕು, ಕೇಕೆಹಾಕು.

**बाह (हा) त्तर** (ಬಾಹ(ಹಾ)ತ್ತರ್) ವಿ. ಎಪ್ಪತ್ತೆರಡು (೭೨)

**बाहला** (ಬಾಹಲಾ) ಪು. ಹಿಂಡುವ ವೇಳೆಯಲ್ಲಿ ಆಕಳ ಕಾಲಿಗೆ ಕಟ್ಟಿದ ಹಗ್ಗ.

**बाही** (ಬಾಹೀ) ಸ್ತ್ರೀ. (ಅಂಗಿಯ) ತೋಳು.

**बाहू** (ಬಾಹು) ಪು. ತೋಳು.

**बाहुबळ** (ಬಾಹುಬಳ್) ನ. ಸಂ. ರಟ್ಟೆಯ ಕಸುವು, ಬಾಹುಬಲ.

**बाहुटा** (ಬಾಹುಟಾ) ಪು. ಬಾವುಟ, ನಿಶಾನಿ.

**बाहुयुद्ध** (ಬಾಹುಯುದ್ಧ) ನ. ಸಂ. ಕೈಕೈ ಗುದ್ದಾಟ.

**बाहुला** (ಬಾಹುಲಾ) ಪು. ಗೊಂಬೆ, ಮಕ್ಕಳ ಆಟಿಗೆ, ಗೊಂಬೆ, ಪುತ್ಥಳಿ, ಬೇರೆಯವರ ಕೈ.

**बाहुली** (ಬಾಹುಲೀ) ಸ್ತ್ರೀ. ಗೊಂಬೆ.

**बाहुले** (ಬಾಹುಲೇ) ನ. ಗೊಂಬೆ, ಬೇರೆಯವರ ಮಾತುಕೇಳುವವ. ೨. ಪರಾಧೀನ.

**बाहुले भोरीप** (ಬಾಹುಲೇ ಭೋರಿಪ್) ನ. ಕೆಳ್ಳಿಕೇತರ ಆಟ, ಬೊಂಬೆಗಳ ಆಟ.

**बाहुल्य** (ಬಾಹುಲ್ಯ) ನ. ಸಂ. ಬಹುಲತ್ವ, ಹೆಚ್ಚಳ, ಯಥೇಷ್ಟತೆ, ಸುಗ್ಗಿ, ಸುಭಿಕ್ಷ, ಸಮೃದ್ಧಿ.

**बाहुस्फुरण** (ಬಾಹುಸ್ಫುರಣ) ಭುಜಹಾರುವಿಕೆ, ಭುಜಸ್ಫುರಣ.

**बाहे जमा** (ಬಾಹೇ ಜಮಾ) ಸ್ತ್ರೀ. ಫಾ. ಹಳ್ಳಿಯಕರ.

**बाहेर** (ಬಾಹೇರ್) ಕ್ರಿ. ವಿ. ಹೊರಗೆ, ಹೊರತು, ಅತೀತ.

**बाहेर करणें** (ಬಾಹೇರ್‌ಕರಣೇ) ಕ್ರಿ. ಬಗೆಹರಿಸು, ಹೊಡೆದುಹಾಕು.

**बाहेरचा** (ಬಾಹೇರಚಾ) ವಿ. ಪರಕೀಯ, ಪರಸ್ಥಳದವ.

**बाहेरची** (ಬಾಹೇರಚೀ) ಸ್ತ್ರೀ. ಮುಟ್ಟಾದವಳು, ಋತುಮತಿ.

**बाहेरची बाधा** (ಬಾಹೇರಚೀ ಬಾಧಾ) ಸ್ತ್ರೀ. ಭೂತ ಬಾಧೆ, ಗಾಳಿಯ ಕಾಟ.

**बाहेर पडणे–निघणे** (ಬಾಹೇರಪಡಣೇ–ನಿಘಣೇ) ಕ್ರಿ. ಅ. ಹೊರಬೀಳು, ಗಂಡನನ್ನು ಬಿಟ್ಟು ಹೊರಬೀಳು.

**बाहेर कोट** (ಬಾಹೇರಕೋಟ್) ಪು. ಹೊರಗಿನಕೋಟೆ.

**बाहेरख्याली** (ಬಾಹೇರ್‌ಖ್ಯಾಲೀ) } ವ್ಯಭಿಚಾರ,
**बाहेरचाटी** (ಬಾಹೇರ್‌ಚಾಟೀ) ಸ್ತ್ರೀ. } ಪರಸ್ತ್ರೀ ಇಲ್ಲವೆ ಪರಪುರುಷನ ಸಹವಾಸದಲ್ಲಿ ಇರುವಿಕೆ.

**बाहेरबट्टा** (ಬಾಹೇರಬಟ್ಟಾ) ಪು. ನಾಣ್ಯ ವಿನಿಮಯದ ದಲಾಲ.

**बाहेर भीतर** (ಬಾಹೇರ್‌ಭೀತರ್) ಕ್ರಿ. ವಿ. ಹಿಂ. ಹೊರಗೆ–ಒಳಗೆ, ಬೇಕಾದಲ್ಲಿ.

**बाहेरला–रील** (ಬಾಹೇರಲಾ–ರೀಲ್) ವಿ. ಹೊರಗಿನವ, ಹೊರಗಿನ.

**बाहेरून** (ಬಾಹೇರೂನ್) ಕ್ರಿ. ವಿ. ಹೊರಗಿನಿಂದ, ಹೊರಬದಿಯಿಂದ.

**बाह्य** (ಬಾಹ್ಯ) ವಿ. ಸಂ. ಹೊರಗಿನ.

**बाह्यकोन** (ಬಾಹ್ಯಕೋನ್) ಪು. ಬಾಹ್ಯಕೋನ, ಹೊರಕೋಣ.

**बाह्यगोल** (ಬಾಹ್ಯಗೋಲ್) ಪು. ಕೂರ್ಮ, ಸೃಷ್ಟ್ಯಾಕಾರದ, ಬಾಹ್ಯ ಗೋಲದ.

**बाह्यात्कारी** (ಬಾಹ್ಯಾತ್ಕಾರೀ) ಕ್ರಿ. ವಿ. ಬಹಿರಂಗಕ್ಕೆ, ಬಹಿರಂಗವಾಗಿ, ಬಾಹ್ಯ ದೃಷ್ಟಿಯಿಂದ, ಹೊರಗಿನಿಂದ. ೨. ವಿ. ತೋರಿಕೆಯ.

**बाह्योपचार** (ಬಾಹ್ಯೋಪಚಾರ) ಪು. ಸಂ. ಹೊರಗಿನ ಉಪಚಾರ, ಹೊರಗಿನ ಉಪಾಯ.

**बाळ, बाळक** (ಬಾಳ್, ಬಾಳಕ್) ನ. ಹುಡುಗ.

**बाळकडू** (ಬಾಳಕಡೂ) ನ. ಕೂಸಿನ ಔಷಧಿ, ಕೂಸನ್ನು ಜನ್ಮದಾರಭ್ಯ ಆರೋಗ್ಯವಂತನನ್ನಾಗಿ ಮಾಡುವ, ಸಾಧನೆ, ಉಪಚಾರ.

**बाळगण** (ಬಾಳಗಣ) ನ. ಪಾಲನ ಮಾಡುವಿಕೆ, ಬೆಳೆಯಿಸುವಿಕೆ, ಪಾಲನ ಪೋಷಣ, ಚಿಂತೆವಹಿಸುವಿಕೆ, ಶಿಫಾರಸು ಮಾಡುವಿಕೆ.

**बाळगणे** (ಬಾಳಗಣೇ) ಕ್ರಿ. ಸ. ಲಾಲಿಸು, ಪಾಲಿಸು. ೨. ಹತ್ತಿರ ಇಡು.

**बाळगुंडा** (ಬಾಳಗುಂಡಾ) ಪು. ತೆಕ್ಕುಕಲ್ಲು, ಗರಡಿ ಮನೆಯಲ್ಲಿಯ ಎತ್ತುವಕಲ್ಲು.

**बाळढोक** (ಬಾಳಢೋಕ್) ನ. ಕೊಕ್ಕರೆ, ಬಕ.

**बाळगोपाळ** (ಬಾಳಗೋಪಾಳ್) ಪು. ಬಹು. ಆನಂದದಿಂದ ಕುಣಿದಾಡುವ ಮಕ್ಕಳು.

**बाळंत** (ಬಾಳಂತ್) ವಿ. ಬಾಳಂತಿ, ಬಾಣಂತಿ, ಹಡೆದಾಕೆ.

–विडा (–ವಿಡಾ) ಪು. ಬಾಣತಿಗೆ ಕೊಡುವ ಉಡುಗೊರೆ.

**बाळंतीण** (ಬಾಳಂತೀಣ್) ಸ್ತ್ರೀ. ಬಾಣತಿ, ಹೆತ್ತಾಕೆ.

**बाळंतखोली** (ಬಾಳಂತಖೋಲಿ) ಸ್ತ್ರೀ. ಬಾಣಂತಿಯ ಕೋಣೆ.

**बाळंतचुडा** (ಬಾಳಂತ ಚುಡಾ) ಪು. ಬಾಣತಿಯ ಬಳೆ, ಬಾಣಂತಿಯ ಕಂಕಣ.

**बाळंतपण** (ಬಾಳಂತಪಣ) ನ. ಸಂ. ಹೆರಿಗೆ. ೨. ಕಠಿಣ ಕೆಲಸ.

**बाळंतरोग** (ಬಾಳಂತರೋಗ) ಪು. ಪ್ರಸೂತಿ ಜ್ವರ.

**बाळंतशे(शो)प** (ಬಾಳಂತಶೇ(ಶೋ)ಪ) ಪು. ಅಜವಾನ, ಬಡಿಶೇಪ, ಸಬ್ಬಸಿಗೆ ಬೀಜ.

**बाळंते** (ಬಾಳಂತೇ) ನ. } ಕೂಸಿಗೆ ಬಟ್ಟೆ ಬರೆ
**बाळवते** (ಬಾಳವತೇ) } ಕೊಡುವಿಕೆ.

**बाळंदा** (ಬಾಳಂದಾ) ಪು. ಕೂಸಿನ ಪಾಲನೆಯ ಕಾಲಕ್ಕಾಗುವ ತೊಂದರೆ.

**बाळपरवेशी** (ಬಾಳಪರವೇಶೀ) ಸ್ತ್ರೀ. } ಸರಕಾರೀ
**बाळपरवरशी** (ಬಾಳಪರವರಶೀ) ಸ್ತ್ರೀ. } ಸೇವೆಯಲ್ಲಿ ಸತ್ತವರ ಹೆಂಡಿರು ಮಕ್ಕಳಿಗೆ ಕೊಡುವ ಸಹಾಯಧನ.

**बाळबोध** (ಬಾಳಬೋಧ) ವಿ. ಸರಳ, ಸಾಮಾನ್ಯ, ನಿಷ್ಕಪಟ.

**बाळभूक** (ಬಾಳಭೂಕ್) ಸ್ತ್ರೀ. ಮಕ್ಕಳ ಹಸಿವು, ಕೂಸಿನ ಹಸಿವು, ತಣಿಸಲಾಗದ ಹಸಿವೆ, ಶಾಂತವಾಗದ ಹಸಿವೆ, ಬೇಡಿಕೊಳ್ಳುವಿಕೆ, ಹಂಬಲಿಸುವಿಕೆ.

**बाळभोग** (ಬಾಳಭೋಗ್) ಪು. ದೇವರಿಗೆ ಅರ್ಪಿಸಿದ ಮುಂಜಾವಿನ ನೈವೇದ್ಯ.

**बाळलेणें** (ಬಾಳಲೇಣೇ) ನ. ಆಭರಣ, ಸಣ್ಣಕೂಸಿನ ವಸ್ತ್ರ ಒಡವೆ.

**बाळवाटी** (ಬಾಳವಾಟೀ) ಸ್ತ್ರೀ. ಮುಂಜಾವಿನ ತಿಂಡಿ.

**बाळशिरें** (ಬಾಳಶಿರೇ) ನ. ಸಣ್ಣಕೂಸಿಗೆ ಕೊಟ್ಟ ಉಡುಗೊರೆ.

**बाळसणे, बाळसावणे** (ಬಾಳಸಣೇ, ಬಾಳಸಾವಣೇ) ಕ್ರಿ. ಅ. ಮೈಹಿಡಿ.

**बाळसे** (ಬಾಳಸೇ) ಗಾತ್ರ, (ಕೂಸಿನ) ದುಂಡನ್ನ ಮೈ, ಮೈಹಿಡಿಯುವಿಕೆ.

**बाळखार** (ಬಾಳಸ್ವಾರ್) ಪು. ಚಿಕ್ಕತನದಲ್ಲಿಯೇ ಕುಬುರೆ ಏರುವಿಕೆ.

**बाळह (ही) रडा–डी** (ಬಾಳಹ (ಹೀ) ರಡಾ–ಡೀ) ವಿ. ಎಳೆಯ ಅಳಲೇ ಕಾಯಿ.

**बाळा** (ಬಾಳಾ) ಸ್ತ್ರೀ. ತರುಣಿ, ಪ್ರೌಢೆ.

**बाळांबा** (ಬಾಳಾಂಬಾ) ಪು. ಹಸಿಕಾಯಿ, ಮಾವಿನಕಾಯಿ, ಹೀಚುಕಾಯಿ, ಎಳೆಮಾವಿನಕಾಯಿ.

**बाळिंगा** (ಬಾಳಿಂಗಾ) ಪು. ಗಂಡುಕುರಿ, ಟಗರು, ೨. ನವಯೌವನ.

**बाळी** (ಬಾಳೀ) ಕಿವಿಯಾಭರಣ, ನವಯುವತಿ.

**बाळी बुगडी** (ಬಾಳೀ ಬುಗಡೀ) ಸ್ತ್ರೀ. ಕಿವಿಯಾಭರಣ, ಬುಗುಡೆ, ಬುಗುಡಿ.

**बिकट** (ಬಿಕಟ್) ವಿ. ಕಠಿಣ, ಗಟ್ಟಿ, ಬರಟ.

**बिकलम** (ಬಿಕಲಮ್) ನ. ಫಾ. ವಿಶೇಷ ಸೂಚನೆ.

**बिंग** (ಬಿಂಗ್) ನ. ಕುಂದು, ದೋಷ, ಕಲಂಕ, ನ್ಯೂನತೆ, ಊನತೆ, ದೋಷ. ೨. ಗುಟ್ಟು.

–**बाहेर पडणे** (–ಬಾಹೇರ್ ಪಡಣೇ) ಗುಟ್ಟು ಹೊರಬೀಳು, ಬಯಲಾಗು.

**बिगर** (ಬಿಗರ್) ವಿ. ಫಾ. (ಬಗೈರ್) ಅರ (ಗೈರ್) ಹೊರ್ತು, ಅಲ್ಲದೆ, ವಿನಾ.

**बिगार** (ಬಿಗಾರ್) ಸ್ತ್ರೀ. ಹಿಂ. ಬಿಟ್ಟಿ, ಜುಲುಮೆಯ ದುಡಿಮೆ, ಕೂಲಿ ಕೊಡದೇ ದುಡಿಸುವಿಕೆ, ಪುಕ್ಕಟೆ ದುಡಿಸುವಿಕೆ.

**बिगारी** (ಬಿಗಾರೀ) ಸ್ತ್ರೀ. ಬಿಟ್ಟಿಯ ಆಳು, ಪುಕ್ಕಟೆಯ ಆಳು. ೨. ಶಿಶುಗಳ ವರ್ಗ.

**बिघड बिघाड** (ಬಿಘಡ್ ಬಿಘಾಡ್) ಪು. ಆಪತ್ತು, ನಾಶ, ತೊಂದರೆ.

**बिघडणे** (ಬಿಘಡಣೇ) ಕ್ರಿ. ಅ. ಕೆಡು, ಆಪತ್ತು ಒದಗು, ನಾಶವಾಗು, ತೊಂದರೆ ಬರು–ಉಂಟಾಗು ಸಂಭವಿಸು,

**बिघडा बिघड** (ಬಿಘಡಾ–ಬಿಘಡ್) ಸ್ತ್ರೀ. ಕೆಡುವಿಕೆ, ಹಾಳಾಗುವಿಕೆ, ಮಲಿನವಾಗುವಿಕೆ, ತೊಂದರೆ ಬರುವಿಕೆ,

**बिघाड** (ಬಿಘಾಡ್) ಪು. 'बिघड' ನೋ.

**बिघा** (ಬಿಘಾ) ಪು. ಹಿಂ. ಭೂಮಿಯ ಅಳತೆ, ಬಂದು ಬಿಘೆ.

**बिघावणी** (ಬಿಘಾವಣೀ) ಸ್ತ್ರೀ. ಬಿಘೆಯಿಂದ ಅಳತೆ ಹೇಳುವಿಕೆ, ಪ್ರತಿಬಿಘೆಯ ಮೇಲಿನ ಕರ.

**बिचकणी** (ಬಿಚಕಣೀ) ಸ್ತ್ರೀ. ಅಂಜಿಸುವಿಕೆ, ಧಕ್ಕೆ ಕೊಡುವಿಕೆ, ಮನೋಭಯ, ಚಕಿತಗೊಳಿಸುವಿಕೆ.

**बिचकणे** (ಬಿಚಕಣೇ) ಕ್ರಿ. ಅ. } ಬೆದರು,ಬೆದರಿಸು,
**बिचकटणें** (ಬಿಚಕಟಣೇ) } ಚಕಿತಗೊಳಿಸು,
ಬೆಚ್ಚಿಬೀಳು, ದಾರಿಬಿಟ್ಟುಹೋಗು.

**बिचकावणीं** (ಬಿಚಕಾವಣೀ) ಸ್ತ್ರೀ. ಬೆದರಿಕೆ, ಚಕಿತ ಗೊಳಿಸುವಿಕೆ, ಬೆಚ್ಚಿಬೀಳುವಿಕೆ, ದಾರೀಬಿಟ್ಟು ಹೋಗುವಿಕೆ.

**बिचकावणें** (ಬಿಚಕಾವಣೇ) ಸ್ತ್ರೀ. 'बिचकणें' ನೋ.

**बिचल** (ಬಿಚಲ್) ಪು. ಹೆಚ್ಚು-ಕೆಡುವಿಕೆ, ಕೆಡುವಿಕೆ, ಮಾನಸಿಕ ಚಂಚಲತೆ.

**बिचलणें** (ಬಿಚಲಣೇ) ಕ್ರಿ. ಅ. ಹೆಚ್ಚು-ಕಡಿಮೆ ಯಾಗು, ಕೆಡು, ಚಂಚಲನಾಗು.

**बिचवा** (ಬಿಚವಾ) ಪು. ಒಂದು ಪ್ರಕಾರದ ಬರ್ಚಿ. ವಿ. ಚುರುಕು, ತೀವ್ರ, ಸುಟಿಯಾದ, ಚಟುವಟಿ ಕೆಯ.

**बिचारा** (ಬಿಚಾರಾ) ವಿ. ಫಾ. ಬಡವ, ದೀನ, ಅಸಹಾ ಯಕ, ಕನಿಕರಬರುವ, ದುರ್ಬಲ, ದಿಕ್ಕಿಲ್ಲದ.

**बिचो(च)वा** (ಬಿಚೋ(ಚ)ವಾ) ಪು. ಸಣ್ಣರಾಹುಟಿ, ಗುಡಿಸಲು.

**बिछाय(इ)ती** (ಬಿಛಾಯ(ಇ)ತೀ) ಪು. ಜಾಜಾಮು, ಹಾಸುವ ಜಮುಖಾನೆ, ದೊಡ್ಡ ಜಮುಖಾನೆ.

**बिछाई(य)त** (ಬಿಛಾಈ(ಯ)ತ್) ಪು. ಚಿಲ್ಲರೆ ವ್ಯಾಪಾರಿ, ಹಾಸಿಗೆ.

**बिछाना** (ಬಿಛಾನಾ) ಪು. ಹಿಂ. ಹಾಸಿಗೆ.

**बिछावणें** (ಬಿಛಾವಣೇ) ಕ್ರಿ. ಹಾಸು, ಹಾಸಿಗೆಹಾಕು. ಸಂ. ನೆಲ, ತಳ, ಅಂತಸ್ತು.

**बिजली** (ಬಿಜಲೀ) ಸ್ತ್ರೀ. ವಿದ್ಯುತ್, ಮಿಂಚು.

**बिजवट** (ಬಿಜವಟ್) ನ. ಬೀಜ, ಸಂತತಿ, ಸಂತಾನ, ಹುಟ್ಟಿಸುವಿಕೆ, ವಂಶ.

**बिजवर** (ಬಿಜವರ್) ಪು. ಎರಡನೆಯ ಲಗ್ನದವ, ದ್ವಿತೀಯ ಸಂಬಂಧದ ಮದುಮಗ.

**बिजवरा** (ಬಿಜವರಾ) ಪು. ಹೆಂಗಸರ ಇಲ್ಲವೆ ಮಕ್ಕಳ ತಲೆ ಆಭರಣ.

**बिजाईत** (ಬಿಜಾಈತ್) ವಿ. ಎರಡನೆಯ ಸಲದ.

**बिजागरी-रें** (ಬಿಜಾಗರೀ-ರೇ) ಸ್ತ್ರೀ. ಸಂ. ಮುರಡು, ಕಿರಗಣಿ.

**बिजाळू** (ಬಿಜಾಳೂ) ವಿ. ಬೀಜದಿಂದ ಹುಟ್ಟುವ (ಬೀಜೋದ್ಭವ) ಉದ್ಭಿಜ್ಜ.

**बिजेंबारे** (ಬಿಜೇಬಾರೇ) ನ. ಎರಡು ಬದಿಯ ಬೀಗರು, ಎರಡೂ ಬೀಗರ ಸಮಾಲೋಚನೆ, ಅಪ್ತಾಲೋಚನೆ, ಎರಡೂ ಪಕ್ಷಗಳ ಪರಸ್ಪರ ದ್ವೇಷ.

**बिटका** (ಬಿಟಕಾ) ವಿ. ಸಣ್ಣ ಆಕಾರದ, ಗಿಡ್ಡ, ಕುಳ್ಳ, ಕಿರಿ.

**बिटकी, बिटी** (ಬಿಟಕೀ, ಬಿಟೀ) ಸ್ತ್ರೀ. ಹೀಚುಕಾಯಿ, ಎಳೆಮಾವಿನಕಾಯಿ, ಮಿಡಿ, ಮಾವಿನಕಾಯಿ.

**बिडती** (ಬಿಡತೀ) ಸ್ತ್ರೀ. ಉಭಯ ಸಂಕಟ, ಇಕ್ಕಟ್ಟು, ಜಲಸಂಧಿ, ಅಗಲಿಕೆ, ಅಡಚಣಿ, ಕಷ್ಟ.

**बिडलवण** (ಬಿಡಲವಣ) ನ. ಕರೇ ಉಪ್ಪು, ಮಣ್ಣುಪ್ಪು.

**बिंडा** (ಬಿಂಡಾ) ಪು. ಹೊರೆ, ಸಣ್ಣಕಟ್ಟು, ಅರಳೆಯ ಗಂಟು, ಹತ್ತಿಯ ಸುರುಳಿ.

**बिडी** (ಬಿಡೀ) ಸ್ತ್ರೀ. ಸಂಕೋಲೆ, ಬೇಡಿ, ಬಂಧನ, ಸೆರೆ, ನಿರ್ಬಂಧ. ೨. ಬೀಡಿ.

**बितणें** (ಬಿತಣೇ) ಸ್ತ್ರೀ. ಭಾರಬೀಳು, ಹೊಣೆಬರು, ಹೊಣೆಬೀಳು, ಆಪತ್ತಿಯುಂಟಾಗು, ಸಂಭವಿಸು.

**बितपशील** (ಬಿತ್‌ಪಶೀಲ್) ಕ್ರಿ. ವಿ. ಅರ. ಸವಿಸ್ತಾರ ವಾಗಿ, ಸಕಾರಣವಾಗಿ.

**बित्तम, बित्तीम** (ಬಿತ್ತಮ್, ಬಿತ್ತೀಮ್) ವಿ. ಸರಿಯಾದ, ಎಳ್ಳಷ್ಟೂಬಿಡದ, ನಿಶ್ಚಿತ, ಯಥಾಶ್ರಮದ, ಸತ್ಯ, ಖಾತ್ರಿಯ, ಮನಗಂಡ.

**बिथरणें** (ಬಿಥರಣೇ) ತಪ್ಪಿಹೋಗು, ತಪ್ಪು,ಉದ್ಯೋಗ ದಲ್ಲಿ ಅಪಯಶಬರು. ೨. ಉನ್ಮತ್ತನಾಗು. ಅಜ್ಞೆ ಮೀರು.

**बिंदडी** (ಬಿಂದಡೀ) ಸ್ತ್ರೀ. } ಬಿಂದಲಿ, ಹತ್ತಿಯ ಸಣ್ಣ
**बिंदली** (ಬಿಂದಲೀ) ಸ್ತ್ರೀ. } ಗಂಟು.

**बिंदलें** (ಬಿಂದಲೇ) ನ. ಬಿಂದಲಿ, ಕೂಸಿನ ಕೈಬಿಂದಲಿ, ಕೈಕಟ್ಟು.

**बिदाई** (ಬಿದಾಈ) ಸ್ತ್ರೀ. ಫಾ. (ವಿದಾಈ) ಕಾಣಿಕೆ, ಪ್ರಯಾಣದ ವೇಳೆಯ ಕಾಣಿಕೆ, ಹೊರಟ ವೇಳೆಯ ಕೊಡುಗೆ, ಬಕ್ಷಿಸು, ಖುಶಿ.

**बिदागी** (ಬಿದಾಗೀ) } ಸ್ತ್ರೀ. 'बिदाई' ನೋ.
**बिदायकी** (ಬಿದಾಯಕೀ) }

**बिदी** (ಬಿದೀ) ಸ್ತ್ರೀ. ಕ. ಓಣಿ, ಕೇರಿ, ಬೀದಿ.

**बिंदी** (ಬಿಂದೀ) ಸ್ತ್ರೀ. ಹೆಂಗಸರ ಬೈತಲೆಯ ಆಭರಣ, ಚೂಡಾಭರಣ, ಚೂಡಾಮಣಿ.

**बिंदु** (ಬಿಂದು) ಪು. ಸಂ. ಬಿಂದು, ಹನಿ, ಬಿಂದು (ಭೂಮಿತಿ ಶಾಸ್ತ್ರದಲ್ಲಿ) ಚಿಕ್ಕೆ, ಕೇಂದ್ರ, ಮಧ್ಯ ಬಿಂದು-(ವರ್ತುಲದಲ್ಲಿ) ಶೂನ್ಯ, ಚಿಕ್ಕೆ, ಚುಕ್ಕಿ.

**बिंदुपथ** (ಬಿಂದುಪಥ) ಪು. ರೇಖಾಪಥ (ಭೂಮಿತಿಯಲ್ಲಿ ಬಿಂದುಸಂಕ್ರಮಣ).

**बिंदुस्त्रावी** (ಬಿಂದುಸ್ರಾವೀ) ವಿ. ಸಂ. ಹನಿಹನಿ ಬೀಳುವ.

**बिन** (ಬಿನ್) ಅವ್ಯಯ. ಹೊರತು, ಬಿಟ್ಟು.

**–बिन** (–ಬಿನ್) ಅವ್ಯಯ. ಅರ. ಮಗು, ಸಂತಾನ.

**बिनगा** (ಬಿನಗಾ) ಪು. ಕ. ಸಣ್ಣ ಕೊಡ, ಬಿಂದಗಿ.

**बिनधोक** (ಬಿನ್‌ಧೋಕ್) ವಿ. ಕ್ರಿ. ವಿ. ಗಂಡಾಂತರವಿಲ್ಲದೆ, ಅಂಜಿಕೆಯಿಲ್ಲದೆ, ದುಡುಗು ಇಲ್ಲದೆ.

**बिनभाडयाचे घर** (ಬಿನ್‌ಭಾಡ್ಯಾಚೇ ಘರ್) ಪು. ಬಾಡಿಗೆಯಿಲ್ಲದ ಮನೆ, ಸೆರೆಮನೆ, ಕಾರಾಗೃಹ.

**बिन मुजरी** (ಬಿನ್‌ಮುಜೂರೀ) ವಿ. ಬಿಟ್ಟಿಯ.

**बिन मोजका** (ಬಿನ್‌ಮೋಜಕಾ) ವಿ. ಎಣಿಸಲಿಕ್ಕೆ ಕಾರಣವಿಲ್ಲದ, ಎಣಿಸಲು ಬಾರದ.

**बिन वारस** (ಬಿನ್‌ವಾರಸ್) '**बिकवारिसा**' ನೋ.

**बिन वारसा** (ಬಿನ್‌ವಾರಸಾ) ಪು. ಅರ. ವಾರಸದಾರರಿಲ್ಲದಿರುವಿಕೆ.

**बिन वारीस** (ಬಿನ್‌ವಾರಿಸ್) ವಿ. ಅರ. '**बिनवारस**' ವಿ. ನಿಸ್ಸಂತಾನ, ಸಂತಾನವಿಲ್ಲದ, ವಾರಸುದಾರರಿಲ್ಲದ.

**बिनसणे** (ಬಿನಸಣೇ) ಕ್ರಿ. ಅ. ಜಗಳಹತ್ತು, ಕೆಡು, ಕೆಡಿಸು, ದುಷ್ಟ ಒಲವು ಉಂಟಾಗು, ತಿಕ್ಕಾಟವುಂಟಾಗು.

**बिनासणे** (ಬಿನಾಸಣೇ) ಕ್ರಿ. ವಿ. '**बिघडणे**' ನೋ.

**बिनाखी** (ಬಿನಾಖೀ) ಸ್ತ್ರೀ. ಸೂಕ್ಷ್ಮ ನಿರೀಕ್ಷಣೆ, ಸೂಕ್ಷ್ಮ ಪರೀಕ್ಷೆ, ಅಂದಾಜ, ಸರಾಸರಿ ಬೆಲೆ.

**बिनी** (ಬಿನೀ) ಸ್ತ್ರೀ. ಫಾ. ದಂಡಿನ ಮುಂಭಾಗ, ಮುಂದಳ, ದಳಮುಖ, ಚೂಣಿ, ರುಮಾಲದ ಮುಂದಿನ ಭಾಗ, ಪಟಕೆ ಸೆರಗು.

**बिनीदार** (ಬಿನೀದಾರ್) ವಿ. ಫಾ. ತುದಿಯುಳ್ಳ, (ಪಟಕೆ) ತುದಿಪಟಕೆ ಸುತ್ತುವವ.

**बिनीवाला** (ಬಿನೀವಾಲಾ) ಪು. ಸೈನ್ಯದ ಮುಂಭಾಗದ ಸೇನಾನಾಯಕ, ದಂಡಿನ ಮುಂದಾಳು, ಸೇನಾಗ್ರೇಸರ.

**बिंब** (ಬಿಂಬ) ನ. ಸಂ. ಬಿಂಬ, ಬಿಲ್ಲೆ, ಪ್ರಭಾಮಂಡಲ, ಪರಾವರ್ತನೆ, ಪ್ರತಿಬಿಂಬ.

**बिंबणे** (ಬಿಂಬಣೇ) ಕ್ರಿ. ಅ. ಮೂಡು, ನಾಟು, ಮುದ್ರಿತವಾಗು. ೨. ಮನವರಿಕೆಯಾಗು.

**बिबवा** (ಬಿಬವಾ)<br>
**बिबा,–ब्बा** (ಬಿ–ಬ್ಬಾ) } ಪು. ಕೇರು, ಕೇರುಬೀಜ.

**बिब्बा घालणे** (ಬಿಬ್ಬಾ ಘಾಲಣೇ) ಕೇರು ಹಾಕು, ನೀತಿಭ್ರಷ್ಟ ಮಾಡು, ಜಗಳಹಚ್ಚು ಮತಭೇದ ಮಾಡು, ಆಳುಕಿಸು, ಮಾಟಮಾಡು.

**बिबवी** (ಬಿಬವೀ) ಸ್ತ್ರೀ. ಕೇರಗಿಡ, ಕೇರಬೀಜ.

**बिबवेल** (ಬಿಬವೇಲ್)<br>
**बिबेल** (ಬಿಬೇಲ್) } ನ. ಕೇರಿನ ಎಣ್ಣೆ.

**बिबळा** (ಬಿಬಳಾ)<br>
**बिबळा वाघ** (ಬಿಬಳಾ ವಾಘ)<br>
**बिब्या वाघ** (ಬಿಬ್ಯಾ ವಾಘ) } ಚಿರತೆ, ಚಿರಚು.

**बिंबित** (ಬಿಂಬಿತ) ವಿ. ಸಂ. ಪ್ರತಿಬಿಂಬಿತ, ಮುದ್ರಿತವಾದ, ಮನಸ್ಸಿನಲ್ಲಿ ಮೂಡಿದ.

**बिबी** (ಬಿಬೀ) ಸ್ತ್ರೀ. ಮುಸಲ್ಮಾನ ಸ್ತ್ರೀ. ೨. ಕೇರಗಿಡ.

**बिभूत** (ಬಿಭೂತ್) ಸ್ತ್ರೀ. ಬೂದಿ, ಭಸ್ಮ, ರಕ್ಷೆ.

**बियंबी** (ಬಿಯಂಬೀ) ಸ್ತ್ರೀ. ಮಾವಿನಕಾಯಿ, ಗಿಡದ ಮೇಲೆ ಕಾಯ್ದಿಟ್ಟ ಮಾವಿನ ಕಾಯಿ, ಉಪ್ಪಿನ ಕಾಯಿ.

**बियाणे** (ಬಿಯಾಣೇ)<br>
**बियावळ** (ಬಿಯಾವಳ) } ಸ್ತ್ರೀ.ಬಿತ್ತುವ ಬೀಜ,ಬೀಜದ ಕಾಳು.

**बियाण्यास बसणे** (ಬಿಯಾಣ್ಯಾಸ ಬಸಣೇ) ವಿ. ನಷ್ಟವಾಗು, ಇಲ್ಲದ ಹಾಗಾಗು.

**बिरखडणे** (ಬಿರಖಡಣೇ) ಕ್ರಿ. ಸ. ತುರಿಸು, ಕೆರಕೊಳ್ಳು, ಗೀಚಿ ಬರೆ, ಸೊಟ್ಟಾಪಟ್ಟಾ ಬರೆ.

**बिरजुमाळ** (ಬಿರಜುಮಾಲ್) ಕ್ರಿ. ವಿ. ಅರ. ಕೂಡಿಕೊಂಡು, ಒಟ್ಟಾಗಿ.

**बिरजुमाळी** (ಬಿರಜುಮಾಲೀ) ವಿ. ಕೂಡಿಕೊಂಡ, ಕೂಡಿಹಿಡಿದ.

**बिरडी** (ಬಿರಡೀ) ಸ್ತ್ರೀ. ಗುಂಡಿ, ಅಂಗಿ ಗುಂಡಿ, ೨. ಅವರೆಯ ಕಾಳು.

**बिरडे–ढे** (ಬಿರಡೇ) ನ. ಗುಂಡಿ, ಅಂಗಿಗುಂಡಿ, ಸರಿಗುಣಿಕೆ, ಕುಣಿಕೆ, ಛಿದ್ರ, ವಕ್ರರೇಖೆ, ದಿಟ್ಟಮಾತು. ೨. ಅವ್ಯ. ೩. ಮಣಸಿದ ಸಾರು ಚಟ್ನಿ, ಪಳದೆ, ಸಾರುಹುಳಿ.

**बिरदाईत** (ಬಿರದಾಇತ್) ವಿ. ಬಿಲ್ಲೆ ಧಾರಣ ಮಾಡುವ, ಮಾನದ ಗುರುತು ಧರಿಸುವ.

**बिरबल** (ಬಿರಬಲ್) ಪು. ಅಕಬರನ ಮಂತ್ರಿಗಳಲ್ಲಿ ಒಬ್ಬ, ಅಕಬರನ ಜಾಣ ಮಂತ್ರಿ ಬೀರಬಲ. ೨. ಜಾಣ.

**बिरबिटी** (ಬಿರಬಿಟೀ) ಸ್ತ್ರೀ. ನೀರುನೀರಾಗಿರುವ ಜೀನಸು, ನೀರುಗಿಚುಕಾದ ಪದಾರ್ಥ.

**बिरबिरीत** (ಬಿರಬಿರೀತ್) ವಿ. ನೀರುನೀರಾದ, ಅತಿ ತೆಳ್ಳಗಾದ, ನೀರುಗಿಚುಕಾದ.

**बिराणा** (ಬಿರಾಣಾ) ಪು. ಸಂ. ಕಾಳು, ತಂಬಾಕಿಯ ಮದ್ದು. ವಿ. ಸೋಜಿಗದ, ಆಶ್ಚರ್ಯಕಾರಕ, ಪರದೇಶದ, ವಿದೇಶದ.

**बिरीद** (ಬಿರೀದ) **बिरूद** (ಬಿರೂದ) ನ. ಪ್ರಾಮಾಣಿಕತೆ, ಬಿರುದು, ಹಕ್ಕು, ಪದವಿ, ಗೌರವ, ಪ್ರಧಾನ ಗುಣ, ವೈಶಿಷ್ಟ್ಯ.

**बिऱ्हाड** (ಬಿರ್ಹಾಡ್) ನ. ವಸ್ತಿ, ಬಿಡಾರ, ಬೀಡು, ವಾಸ.

**बिऱ्हाडू** (ಬಿರ್ಹಾಡೂ) **बिऱ्हाडकरू** (ಬಿರ್ಹಾಡಕರೂ) ಪು. ತಂಗುವವನು, ಬಾಡಿಗೆಯಿಂದ ವಾಸಿಸುವವನು.

**बिलकूल** (ಬಿಲ್‌ಕೂಲ್) ಕ್ರಿ. ವಿ. ಸ್ವಲ್ಪವೂ, ಒಟ್ಟು, ಅಗದಿ, ಎಳ್ಳಷ್ಟೂ.

**बिलग** (ಬಿಲಗ್) ವಿ. ಪ್ರತ್ಯೇಕವಾದ, ಬೇರೆ.

**बिलगणे** (ಬಿಲಗಣೇ) ಕ್ರಿ. ಸ. ಅಂಟಿಕೊಂಡಿರು, ಹತ್ತಿಕೊಂಡಿರು, ಜೋತಾಡು, ಸಮೀಪವಾಗಿರು.

**बिलंद** (ಬಿಲಂದ್) **बिलंदर** (ಬಿಲಂದರ್) ವಿ. ಫಾ. (ಬಲಂದ್) ಮುಖ್ಯ, ಮುಖ್ಯಸ್ಥ, ನಾಮವಂಥ. ೨. ಬೆರಿಕಿ, ಚುರುಕ, ಜಾಣ.

**बिलबिलणे** (ಬಿಲಬಿಲಣೇ) ಕ್ರಿ. ಮೆತ್ತಗಾಗು, ಮೃದುವಾಗು.

**बिलबिलीत** (ಬಿಲಬಿಲೀತ್) ಕ್ರಿ. ಮೆತ್ತಗಾದ, ಮೃದುವಾದ, ಪುಳಿಪುಳಿಸಿದ.

**बिलामत** (ಬಿಲಾಮತ್) ಸ್ತ್ರೀ. ಅರ (ಬಲಾ) ಫಾ. (ಬರಾಮದ್) ಮಿಥ್ಯಾರೋಪ, ನಿಂದೆ, ದೂಷಣೆ.

**बिलोर** (ಬಿಲೋರ್) ಪು. ಫಾ. }
**बिलवर** (ಬಿಲವರ್) ನ. ಫಾ. } ಬಳೆ, ಬಳೆಯ ಪ್ರಕಾರ, ಕಾಜಿನಿಂದ ದಪ್ಪ ಬಳೆ.

**बिलोरी** (ಬಿಲೋರೀ) ವಿ. ಫಾ. ಕಾಜಿನ, ಕಾಜಿನಿಂದ ಮಾಡಿದ.

**बिल्याण** (ಬಿಲ್ಯಾಣ್) ವಿ. ಕೆತ್ತಿದ ವಿಶಿಷ್ಟಾಕಾರದ

**बिल्ला** (ಬಿಲ್ಲಾ) ಪು. ಹಿಂ. ಬಿಲ್ಲೆ, ನಡುಪಟ್ಟಿಯ ಬಿಲ್ಲೆ, (ನೌಕರರಿಗಿರುವುದು).

**बिल्लोरी** (ಬಿಲ್ಲೋರೀ) **बिलोरी** ನೋ.

**बिवड** (ಬಿವಡ್) ಪು. ಮುಖ್ಯ ಪೈರಿನ ಹೊರತಾಗಿ ಬೆಳೆದ ಪೈರು ಹೆಜ್ಜಿ ೨. ಮೊಳಕೆ, ಅಂಕುರ, ಸಸಿ, ಭೂಮಿಯನ್ನು ಬಿತ್ತುವಿಕೆ.

**बिशात** (ಬಿಶಾತ್) ಸ್ತ್ರೀ. (ಕೊಯ್ದು ಮೇಲೆ ಬರುವ ಬೆಳೆ, ಕೊಯ್ದುಭಾಗ, ಕಬ್ಬು ಮುಂ.).

**बिसात** (ಬಿಸಾತ್) ಸ್ತ್ರೀ. ಅರ. ಆಸ್ತಿ, ಯೋಗ್ಯತೆ, ಹಂಗು, ಮಹತ್ವ.

**त्याची काय बिशाद बिसात** (ತ್ಯಾಚೀ ಕಾಯ್ ಬಿಶಾದ ಬಿಸಾತ್) ಅವನೇನು ಮಹಾ?

**बिशी** (ಬಿಶೀ) ಸ್ತ್ರೀ. ಅಡಿಗೆ ಮನೆ, ಅಡಿಗೆ, ಎಡೆ, ಪೂಜೆ.

**बिसनी** (ಬಿಸನೀ) ಪು. ಪೋಕರಿ, ಘಟಿಂಗ, ಹೊರಚಾಳಿಯವ, ಕಾಮಾತುರ, ವಿಷಯಲಂಪಟ.

**बिहाग** (ಬಿಹಾಗ್) ಪು. ರಾಗ, ಬಿಹಾಗರಾಗ, ರಾಗಗಳಲ್ಲಿ ಒಂದು, ಗಾಯನದ ವಿಶಿಷ್ಟ ರಾಗ.

**बी** (ಬೀ) ಸ್ತ್ರೀ. ಬೀಜ.

**बी मोड करणे** (ಬೀ ಮೋಡ ಕರಣೇ) ಕ್ರಿ. ಸ. ನಷ್ಟ ಮಾಡು, ನಿರ್ವಂಶ ಮಾಡು, ಪೂರಾ ನಾಶಮಾಡು.

**बीज** (ಬೀಜ) ನ. ಸಂ. ಬೀಜ, ಬೇರು, ಗುಪ್ತಮಾತು, ರಹಸ್ಯ, ಉದ್ದೇಶ, ಗರ್ಭಿತಾರ್ಥ, ಮಥಿತಾರ್ಥ. ೨. ಸ್ತ್ರೀ. ವದ್ಯದ್ವಿತೀಯೆ, ಬಿದಿಗೆ, (ವದ್ಯ).

**भाऊ–** (ಭಾಊ–) ದೀಪಾವಳಿಯ (ಭಾವನ) ಬಿದಿಗೆ.

**बीजक** (ಬೀಜಕ್) ನ. ಸಂ. ಯಾದಿ, ಗುರುತಿನ ಚೀಟಿ. ಹೆಸರಿನ ಚೀಟಿ, ಖರೀದಿ ಪಟ್ಟಿ, ಬೆಲೆಪಟ್ಟಿ.

**बीजगणित** (ಬೀಜಗಣಿತ) ನ. ಸಂ. ಬೀಜಾಕ್ಷರ ಗಣಿತ, (ಆಲ್‌ಜಿಬ್ರಾ).

**बीज बेंदूर** (ಬೀಜ ಬೇಂದೂರ್) ನ. ಶೂದ್ರವರ್ಣದ ಒಂದು ಹಬ್ಬ.

**बीजमंत्र** (ಬೀಜಮಂತ್ರ) ಪು. ಸಂ. ಮೂಲಮಂತ್ರ, ಮೂಲಹೇತು, ಮುಖ್ಯೋದ್ದೇಶ, ಪ್ರಧಾನೋಪದೇಶ.

**बीज मार** (ಬೀಜಮಾರ್) ಸ್ತ್ರೀ. ಬಿತ್ತಿದ ಬೀಜ ಸಹ ಬಾರದ ಭೂಮಿ, ಬಡಕ ಭೂಮಿ, ಬಂಜೆ ಭೂಮಿ.

**बीजारोप** (ಬೀಜಾರೋಪ) ಪು. }
**बीजारोपण** (ಬೀಜಾರೋಪಣ) ನ. } ಬೀಜ ಬಿತ್ತುವಿಕೆ.

**बीजाक्षर** (ಬೀಜಾಕ್ಷರ) ಪು. ಮಂತ್ರಾಕ್ಷರ, ಮೂಲ ಮಂತ್ರಾಕ್ಷರ, ಗೂಢಾಕ್ಷರ, ಮೂಲಾಕ್ಷರ.

**बीड** (ಬೀಡ್) ಸ. ಬಂಡಿಯ ಹಗ್ಗ. ೨. ಕಚ್ಚಾ ಕಬ್ಬಿಣ. (ಪಿಗ್ ಐರನ್) ೩. ಕಬ್ಬಿಣದ ಅದಿರು, ನಮೂನೆ, ಪ್ರಕಾರ, ಮಾದರಿ, ಪ್ರತಿಮೆ.

**बीत** (ಬೀತ್) ಸ್ತ್ರೀ. ಕನ್ಯಾ, ಹುಡುಗೆ, ಹಾಳಿಯ ತುದಿಗೆ ಎಳೆದ ಅಡ್ಡ ಜೋಡುಗೆರೆ.

**बीद** (ಬೀದ್) ಸ್ತ್ರೀ. ಬೀದಿ, ಕೇರಿ, ಹಾದಿ, ಮಾರ್ಗ.

**बीन** (ಬೀನ್) ಪು. ಹಿಂ. ಸಂಗೀತದ ತಂತುವಾದ್ಯ.

**बीभत्स** (ಬೀಭತ್ಸ) ವಿ. ಸಂ. ಹೇಸಿಕೆ ಬರುವ, ತಿರಸ್ಕಾರದ, ಅಶ್ಲೀಲ, ಬಂಡು, ಅವಾಚ್ಯ, ಅಭದ್ರ ಭೀತಿದಾಯಕ, ನವರಸಗಳಲ್ಲಿ ಒಂದು.

**बीर** (ಬೀರ್) ಪು. ರಾಕ್ಷಸ, ವೀರ, ದೈತ್ಯ, ದೆವ್ವ, ಭೂತ, ಪಿಶಾಚಿ.

**बील** (ಬೀಲ್) ಪು. ತತ್ತಿ (ಕೋಳಿಯ ಮೊಟ್ಟೆ) ಯೊಳಗಿನ ಬಿಳಿಯ ರಸ, ಲೋಳಿ.

**बीळ** (ಬೀಳ್) ನ. (ಇಲಿಯ) ಹೋರು, ತಗ್ಗು.

**बुकटी** (ಬುಕಟೀ ಸ್ತ್ರೀ.} ಪುಡಿ, ಚೂರ್ಣ, ಬೂದಿ,
**बुकणा** (ಬುಕಣಾ ಪು. } ಹುಡಿ, ಧೂಳಿ, ಮಣ್ಣು.

**बुकलणे** (ಬುಕಲಣೇ) ಕ್ರಿ. ಥಳಿಸು, ಕುಟ್ಟು, ನುಣ್ಣಗೆ ಮಾಡು, ಸಣ್ಣಗೆ ಅರೆ, ಚೂರ್ಣಿಸು, ಪುಡಿಮಾಡು.

**बुकालणे** (ಬುಕಾಲಣೇ) ಕ್ರಿ. ಅಂಗೈಯಿಂದ ಹೊಡೆ.

**बुकला** (ಬುಕಲಾ ಪು.} ಥಳಿಸುವಿಕೆ, ಕುಟ್ಟುವಿಕೆ,
**बुकांदा** (ಬುಕಾಂದಾ ಪು.} ಅರಿಯುವಿಕೆ, ಏಟುಕೊಡುವಿಕೆ, ಪುಡಿಮಾಡುವಿಕೆ.

**बुका** (ಬುಕಾ) ಪು. ಬುಕ್ಕಿಟ್ಟು, ಪವಿತ್ರ ಅಂಗಾರ, ಪಂಢರಪುರದ ಬುಕ್ಕಿಟ್ಟು.

**बुकी** (ಬುಕೀ) ಸ್ತ್ರೀ. ಗುದ್ದು, ಗುದ್ದುವಿಕೆ, ೨. ಚೂರ್ಣ, ಪುಡಿ.

**बुक्का** (ಬುಕ್ಕಾ) ಸ್ತ್ರೀ. ಬುಕ್ಕಿಟ್ಟು, ಕರಿಯಅಂಗಾರ. ೨. ಪು. ಗುದ್ದು.

**बुक्की** (ಬಕ್ಕೀ) ಸ್ತ್ರೀ. ಗುದ್ದುವಿಕೆ.

**बुगडी** (ಬುಗಡೀ) ಸ್ತ್ರೀ. ಆಭರಣ, ಬುಗಡಿ, ಬೆಂಡುವಾಲೆ.

**बुचकणे** (ಬುಚಕಣೇ) ಕ್ರಿ. ಅ. ಅಂಜು, ಮುಳುಗು, ಗಾಬರಿಯಾಗು, ಸುಲಿ, ಸೆಳಕೊಳ್ಳು, ಕದಿ, ಕದ್ದುಕೊಳ್ಳು.

**बुचकरणे** (ಬುಚಕರಣೇ ಕ್ರಿ.} ನ. ಕಿವುಚು, ಚಿವುರು,
**बुचकुरणे** (ಬುಚಕುರಣೇಕ್ರಿ.} ಸ. ಕೆರೆ, ಉಗುರಿನಿಂದ ಗಾಯಮಾಡು.

**बुचक (कु) रा** (ಬುಚಕ (ಕು) ರಾ) ಪು. ಕೆರೆತ, ಕೆರೆಯುವಿಕೆ, ಚಿವುರುವಿಕೆ.

**बुचकळणे** (ಬುಚಕಳಣೇ ಕ್ರಿ.} ಸ. ನೀರಿನಲ್ಲಿ ಮುಳು
**बुचकुळणे** (ಬುಚಕುಳಣೇ ಕ್ರಿ.} ಸ. ಗಿಸು, ಎದ್ದು ಅದ್ದು, ತೊಡಕಿಕೊಳ್ಳು ಹಿಂದೆ ಮೊಂದೆ ನೋಡು, ಅನುಮಾನಿಸು, ಹಿಂದೆಗೆ, ಹಿಂದೆ ಕಾಲಿಡು, ಅಂಜಿಕೊಳ್ಳು.

**बुचक (कु) ळी** (ಬುಚಕ (ಕು) ಳೀ) ಸ್ತ್ರೀ. ಮುಳುಗುವಿಕೆ, ಎದ್ದುವಿಕೆ, ಹಿಂದೆಗೆಯುವಿಕೆ, ಅನುಮಾನಿಸುವಿಕೆ.

**बुचका** (ಬುಚಕಾ} ಪು. ಚಂಡಿಕೆ, ಜುಟ್ಟು, ಶಿಖಾ,
**बुचकी** (ಬುಚಕೀ} ಸ್ತ್ರೀ. ತುರಾಯಿ, ಗೊಂಡೆ, ಗಡ್ಡೆ.

**बुचकुली** (ಬುಚಕುಲೀ) ಸ್ತ್ರೀ. ಮುಷ್ಟಿ, ಹಿಡಿ.

**बुचडा** (ಬುಚಡಾ) ಪು. ತುರುಬು.

**बुचबुचणे** (ಬುಚಬುಚಣೇ) ಕ್ರಿ. ಅ. ಬಹಳವಾಗಿರು.

**बुचबुचाट** (ಬುಚಬುಚಾಟ್) ಪು. ಅತೀರೇಕ.

**बुचा–च्चा** (ಬುಚಾ–ಚ್ಚಾ) ವಿ. ಬರಿಯ ಬತ್ತಲೆಯಾದ, ದಿಗಂಬರ, ವಸ್ತ್ರಹೀನ, ಕೇವಲ, ನಗ್ನ.

**बुचाकारभारी** (ಬುಚಾಕಾರಭಾರೀ) ಪು. ಗರ್ವಿಷ್ಠ ಅಧಿಕಾರಿ, ಸೋಗಿನ ಅಧಿಕಾರಿ, ಒಳನುಗ್ಗುವವ, ಹರಟೆ ಹೊಡೆಯುವ.

**बुचाटणे** (ಬುಚಾಟಣೇ) **बुचाडणे** (ಬುಚಾಡಣೇ) ಕ್ರಿ. ಸ. ಸುಲಿ, ಸೆಳೆದುಕೊಳ್ಳು, ಸುಲಿಗೆ ಮಾಡು.

**बुचकणे** (ಬುಚಕಣೇ) ಕ್ರಿ. ಅ. ಅಂಜು, ಹೆದರು.

**बुजगावणे** (ಬುಜಗಾವಣೇ) ಸ. ಬೆದರಿಕೆ. ೨. ಕ್ರಿ. ಸ. ಬೆದರಿಸು.

**बुजट** (ಬುಜಟ್) **बुजरा** (ಬುಜರಾ) ವಿ. ಬೆದರುವವ, ಲಜ್ಜಿಸುವವ, ಅಂಜುಬುರುಕ.

**बुजणे** (ಬುಜಣೇ) ಕ್ರಿ. ಅ. ಬೆದರು, ಅಂಜು, ಲಜ್ಜೆಪಡು, ವೈತೆಗೆ. ೨. ಮುಚ್ಚಿಹೋಗು. (ಹುಣ್ಣು) ಮಾಯವಾಗು.

**बुजविणे** (ಬುಜವಿಣೇ) ಬೆದರಿಸು, ಅಂಜಿಸು, ವೈತೆಗೆಯಿಸು. ೨. ಕ್ರಿ. ಸ. ಮುಚ್ಚಿಸು.

**बुझणे** (ಬುಝಣೇ) ತಿಳಿದುಕೊಳ್ಳು, ಕಲಿಸು.

**बुझवणी** (ಬುಝವಣೀ) ಸ್ತ್ರೀ. ಕಲಿಸುವಿಕೆ, ತಪಶೀಲು ಕೊಡುವಿಕೆ, ಸವಿಸ್ತಾರ ಹೇಳುವಿಕೆ.

**बुटका** (ಬುಟಕಾ) ವಿ. ಗಿಡ್ಡ, ಕಿರಿಯ, ಕುಳ್ಳ, ಕುಬ್ಜ.

**बुटकुळी** (ಬುಟಕುಳೀ) ಸ್ತ್ರೀ.'**बुचकुळी**' ನೋ. ಮುಳುಗುಹಾಕುವಿಕೆ. (ನೀರಲ್ಲಿ ಲಾಗ ಹೊಡೆಯುವಿಕೆ)

**बुटकुळ्या खाणे** (ಬುಟಕುಳ್ಯಾ ಖಾಣೇ) ಮುಳುಗು ಏಳು. (ಈಸುವಾಗ)

**बुट्ट (ट्ट) गा** (ಬುಟು (ಟು) ಗಾ) ವಿ. ಕುಳ್ಳ, ಕುಬ್ಜ, ಗಿಡ್ಡ, ಕಿರಿಯ.

**बुटंगणा** (ಬುಟಂಗಣಾ) ವಿ. '**बुटंगा**' ನೋ.

**बुटबैंगण** (ಬುಟಬೈಂಗಣ್) ನ. ಗಿಡ್ಡ ರೂಪ, ಕಿರಿಯ ಆಕಾರ.

**बुटबुटणे** (ಬುಟಬುಟಣೇ) ಕ್ರಿ. ಸ. ಗುಡಗುಡಿಸು, ಜಪ್ಪಿಸು, ಗುಂಯಿಗುಂಯಿಮಾಡು.

**बुटबुटीत** (ಬುಟಬುಟೀತ್) ಗಟ್ಟಿ, ತೆಳ್ಳಗಿನ, ಹಾಳ ತಾದ.

**बुटली** (ಬುಟಳೀ) ಸ್ತ್ರೀ. ಸಣ್ಣ ಪಾತ್ರೆ.

**बुटा–ट्टा** (ಬುಟಾ–ಟ್ಟಾ) ಪು. ಚಿತ್ರ, ಕಸೂತಿ.

**बुटारणा** (ಬುಟಾರಣಾ) ವಿ. '**बुटका**' ನೋ.

**बुटी–ट्टी** (ಬುಟೀ–ಟ್ಟೀ) ಸ್ತ್ರೀ. ಬಟ್ಟೆಯ ಮೇಲೆ ತೆಗೆದ ಕಸೂತಿ, ಸುಳವು. ೨. ಬಂಡವಾಳ. ೩. ಬುಟ್ಟಿ. ೪. ಮೋಸ.

**बुटी देणे** (ಬುಟೀ ದೇಣೇ) ಕ್ರಿ. ಸ. ರೂಪುಗೊಳಿಸು, ಪುರಸ್ಕರಿಸು, ಪುರಸ್ಕಾರ ನೀಡು, ಬೆಂಬಲಿಸು.

**बुटी(ट्टी)दार** (ಬುಟೀ(ಟ್ಟೀ)ದಾರ್) ವಿ. } ಕಸೂತಿ
**बुटे (ट्टे) दार** (ಬುಟೇ(ಟ್ಟೇ)ದಾರ್) ವಿ. } ತೆಗೆದ.

**बुटें** (ಬುಟೇ) ನ. ಬೆಣೆ, ಕಡಾಣಿಗೆ, (ಬಂಡಿಯ ಚಕ್ರಕ್ಕೆ ಹಾಕಿದ) ಕೀಲ.

**बुडकी** (ಬುಡಕೀ) ಸ್ತ್ರೀ. ಮುಳುಗುವಿಕೆ, ಅದ್ದುವಿಕೆ, ನೀರಿನಲ್ಲಿ ಧುಮುಕುವಿಕೆ, ಹಾರಿಬೀಳುವಿಕೆ. **डुबकी** ನೋ.

**बुडकुला** (ಬುಡಕುಲಾ) ಮಣ್ಣಿನ ಪಾತ್ರೆ. ೨. ಸಣ್ಣ ಮನೆ.

**बुडखा** (ಬುಡಖಾ) ಪು. ಗಿಡದ ಬೊಡ್ಡೆ, ತಳ, ಮೂಲ, ಉಗಮ, ಉತ್ಪತ್ತಿ ಸ್ಥಾನ.

**बुडणे** (ಬುಡಣೇ) ಕ್ರಿ. ಅ. ಮುಳುಗು, ೨. (ವ್ಯಾಪಾರದಲ್ಲಿ) ಕಳಕೊಳ್ಳು, ಇಲ್ಲದಂತಾಗು, ನಾಶಹೊಂದು.

**बुडतठाव** (ಬುಡತಠಾವ್) ಪು. ನೀರಿನ ಆಳ, ಕುತ್ತಿಗೆಗಿಂತ ಹೆಚ್ಚಾದ ಆಳ, ಸಾಯುವಷ್ಟು ಆಳ.

**बुडता** (ಬುಡತಾ) ವಿ. ಮುಳುಗುವ, ನಾಶಹೊಂದುವ, ಕೆಳಗೆ ಬರುವ, ಹಾನಿಹೊಂದುವ.

**बुडताकाळ** (ಬುಡತಾಕಾಳ್) ಪು. ಮುಳುಗುವ ವೇಳೆ, ನಾಶವಾಗುವ ಸಮಯ, ಅವನತಿಯ ದಿನ.

**बुडता पाय** (ಬುಡುತಾ ಪಾಯಾ) ಪು. ಅವನತಿ, ನಾಶಹೊಂದುವಿಕೆ.

**बुडबुडणे** (ಬುಡಬುಡಣೇ) ಕ್ರಿ. ಗುಳ್ಳೆಯೇಳು, ಬುಡಬುಡಿಸು.

**बुडबुडा** (ಬುಡಬುಡಾ) ಪು. ನೀರಿನ ಗುಳ್ಳೆ, ಹುಣ್ಣಿನ ಗುಳ್ಳೆ.

**बुडवणी** (ಬುಡವಣೀ) ಸ್ತ್ರೀ. ನೀರಿನಲ್ಲಿ ಪಾತ್ರೆಯನ್ನು ಮುಳುಗಿಸುವಿಕೆ.

**बुडविणे** (ಬುಡವಿಣೇ) ಕ್ರಿ. ಸ. ಮುಳುಗಿಸು, ಮುಣುಗಿಸು, ನಾಶಮಾಡು.

**बुडत्या** (ಬುಡತ್ಯಾ) ವಿ. ಮುಳುಗಿಸುವ, ಮುಣುಗಿಸುವ, ಹಾಳುಮಾಡುವ, ಹಾನಿಮಾಡುವ.

**बुडस्थळ** (ಬುಡಸ್ಥಳ್) ನ. ನಾಶವಾಗುವ ಸ್ಥಳ, ಹಾನಿಯಾಗುವ ಸ್ಥಳ, ಹಾನಿಯ ಸಂಭವ.

**बुडी** (ಬುಡೀ) ಸ್ತ್ರೀ. ಮುಳುಗುವಿಕೆ, ನೀರಿನಲ್ಲಿ ಜಿಗಿಯುವಿಕೆ.

**बुडीत** (ಬುಡೀತ್) ವಿ. ಹಾನಿ, ಲುಕ್ಸಾನ, ಲುಕ್ಸಾನವಾದ, ಹಾನಿಹೊಂದಿದ, ಮುಳುಗಿದ.

**बुडीतकूळ** (ಬುಡೀತ್‌ಕೂಳ್) ನ. ದಿವಾಳಿ ತೆಗೆದ ಗಿರಾಕಿ, ವ್ಯಾಪಾರಸ್ಥ, ವಸೂಲಾಗದ ಗಿರಾಕಿ.

**बुडीत खर्च** (ಬುಡೀತ್ ಖರ್ಚ್) ಪು. ತಿರುಗಿ ಬಾರದ ಖರ್ಚು, ತಿರುಗಿ ಬರದ ಹಣದ ಖರ್ಚು, ಅನಾವರ್ತ ಖರ್ಚು.

**बुडीत खत** (ಬುಡೀತ್ ಖತ್) ನ. ಹಣ ವಸೂಲಾಗದ ಕಾಗದ.

**बूडख–खा** (ಬುಡೂಖ್–ಖಾ) ಪು. ಗಿಡದ ಬೊಡ್ಡೆ, ಕೆಳಭಾಗ. ೨. ಸೈನ್ಯ.

**बुणगे** (ಬುಣಗೇ) ನ. ಸೈನ್ಯದ ಸೇವಕರು, ಸೈನ್ಯದಲ್ಲಿ ಕೆಲಸಕ್ಕಿರುವ ಆಳುಗಳು, ಪರಿವಾರದವರು.

**बाजार–** (ಬಾಜಾರ–) ಯುದ್ಧ ಮಾಡದ ಸೇವಕರು.

**बुतारा–री** (ಬುತಾರಾ) ಪು. (ಬುತಾರೀ) ಸ್ತ್ರೀ. ಕಸಬರಗಿ, ಹಿಡಿಕುಂಡೆ, ಪೊರಕೆ.

**बुंथ–थी** (ಬುಂಥ್–ಥೀ) ಸ್ತ್ರೀ. ಹೊದಿಕೆ, ಹೊತ್ತಿಕೊಳ್ಳುವ ಬಟ್ಟೆ, ತೊಡಿಗೆ, ಹೊತ್ತಬಟ್ಟೆ.

**बुंद** (ಬುಂದ್) ಪು. ಹನಿ, ಟಿಬಿಕೆ, ಕಾಫಿ ಬೀಜ. ೨. ತಳ, ಸೌಂದರ್ಯ.

**बुंद घेणे** (ಬುಂದ್ ಘೇಣೇ) ಪಾತ್ರೆ ಹೊರಬದಿಗೆ ಬೂದಿಹಚ್ಚು, ಬೂದಿಸವರು.

**बुदकणे** (ಬುದಕಣೇ) ಕ್ರಿ. ಅ. '**बुकलणे**' ನೋ.

**बुदका** (ಬುದಕಾ) ಪು. '**बुकला**' ನೋ.

**बुद (द्धि) बळ** (ಬುದ್ (ಧ್ಧಿ) ಬಳ್) ನ. ಚದುರಂಗ.

**बुदबुदणे** (ಬುದಬುದಣೇ) ಕ್ರಿ. ಅ. ಗೊಂದಲಮಾಡು, '**बुचबुचणे**' ನೋ.

**बुदला–ले** (ಬುದಲಾ–ಲೇ) ಪು. ಎಣ್ಣೆಯ ಬುದ್ದಲಿ.

**बुंदी** (ಬುಂದೀ) ಸ್ತ್ರೀ. ಕಡಲೆಯ ಹಿಟ್ಟಿನ ಕರಿದ ಕಾಳುಗಳು. ೨. ಬುಂದೀ (ಲಾಡೂ). ೩. ಕಾರ (ಬುಂದೀ).

**बुद्ध** (ಬುದ್ಧ) ಪು. ಬುದ್ಧ, ಗೌತಮಬುದ್ಧ, ಬೌದ್ಧ ಧರ್ಮ ಸಂಸ್ಥಾಪಕ.

**बुद्धि** (ಬುದ್ಧಿ) ಸ್ತ್ರೀ. ಸಂ. ಜಾಣತನ, ಜ್ಞಾನ, ಹೇತು, ಮನೋನಿಶ್ಚಯ, ಯುಕ್ತಿ, ತಿಳುವಳಿಕೆ, ಬುದ್ಧಿಶಕ್ತಿ, ಬುದ್ಧಿಸಾಮರ್ಥ್ಯ.

**बुद्धिकौशल्य** (ಬುದ್ಧಿಕೌಶಲ್ಯ) ಬುದ್ಧಿಯ ಚುರುಕುತನ, ಜಾಣ್ಮೆ, ಜಾಣತನ.

**बुद्धिपुरस्सर** (ಬುದ್ಧಿಪುರಸ್ಸರ) ಕ್ರಿ.ವಿ. } ಹೇತುಪುರಸ್ಸರ, ವಿಚಾರಮಾಡಿ, ಉದ್ದೇಶಪೂರ್ವಕ, ಯೋಚಿಸಿ.
**बुद्धिपूर्वक** (ಬುದ್ಧಿಪೂರ್ವಕ) ವಿ.

**बुद्धिभ्रंश** (ಬುದ್ಧಿಭ್ರಂಶ) ಪು. ಬುದ್ಧಿಭ್ರಂಶ, ಹುಚ್ಚು, ಮರುಳು, ಉನ್ಮತ್ತತೆ.

**बुद्धिमंत(वंत)–मान(वान)** (ಬುದ್ಧಿಮಂತ–ಬುದ್ಧಿಮಾನ್, ಬುದ್ಧಿವಂತ, ಬುದ್ಧಿವಾನ್) ವಿ. ಬುದ್ಧಿಮಂತ, ಬುದ್ಧಿವಂತ, ಜಾಣ, ತಜ್ಞ, ಬುದ್ಧಿಶಾಲಿ, ಜ್ಞಾನಿ, ಚುರುಕು.

**बुद्धिमांद्य** (ಬುದ್ಧಿಮಾಂದ್ಯ) ನ. ಸಂ. ಬುದ್ಧಿಮಂದತ್ವ, ಬುದ್ಧಿಯ ಅಭಾವ, ಬುದ್ಧಿಯಜಡತ್ವ, ಅರಿವಿನ ಕೊರತೆ.

**बुद्धिवाद** (ಬುದ್ಧಿವಾದ) ಪು. ಸಂ. ಬುದ್ಧಿವಾದ, ಬುದ್ಧಿ ಪ್ರಾಮಾಣ್ಯ.

**बुद्धिचा खंदक** (ಬುದ್ಧೀಚಾ ಖಂದಕ್) ಪು. ತೀರ ಹುಚ್ಚ ಮನುಷ್ಯ, ಸಂಪೂರ್ಣ ತಿಳಿಗೇಡಿ ಮನುಷ್ಯ.

**बुद्धिचा खोटा** (ಬುದ್ಧೀಚಾ ಖೋಟಾ) ಪು. ದುಷ್ಟ ಸ್ವಭಾವದ, ನೀಚವರ್ತನೆಯ, ದುಷ್ಟಬುದ್ಧಿಯ, ಖೊಟ್ಟಿಬುದ್ಧಿಯ.

**बुद्धिचा जड** (ಬುದ್ಧೀಚಾ ಜಡ್) ವಿ. ಜಡಬುದ್ಧಿಯ, ಗ್ರಹಣಶಕ್ತಿಯಿಲ್ಲದ, ಗ್ರಹಣಶಕ್ತಿರಹಿತ.

**बुद्धिवंत–वान्** (ಬುದ್ಧಿವಂತ–ವಾನ್) ವಿ. '**बुध्दिमंत**' ನೋ.

**बुध्या** (ಬುಧ್ಯಾ) ಕ್ರಿ. ವಿ. ಬೇಕೆಂದು, ಬುದ್ಧಿಪುರಃಸರವಾಗಿ.

**बुद्रुक** (ಬುದ್ರುಕ್) ವಿ. ಫಾ. (ಬುಝುರ್ಗ) ಜ್ಞಾನವೃದ್ಧ. ೨. ವಿ. ದೊಡ್ಡ (ಗ್ರಾಮ)

**बुध** (ಬುಧ) ಪು. ಬುಧಗ್ರಹ. ೨. ಜಾಣಮನುಷ್ಯ, ಪಂಡಿತನು.

**बुधला** (ಬುಧಲಾ) ಪು. ಕ. ಬುದ್ದಲಿ, ಎಣ್ಣೆಯಪಾತ್ರೆ, ಎಣ್ಣೆ ಅಥವಾ ತುಪ್ಪದ ಬುದ್ದಲಿ.

**बुधली** (ಬುಧಲೀ) ಸ್ತ್ರೀ. ಸಣ್ಣ ಬುದ್ದಲಿ.

**बुधली उताणी पाडणे** (ಬುಧಲೀ ಉತಾಣೀ ಪಡಣೇ) ಕ್ರಿ. ಅ. ಖೊಟ್ಟತನ ಹೊರಬೀಳು, ಬಣ್ಣಗೊತ್ತಾಗು.

**बुधवार** (ಬುಧವಾರ್) ಪು. ಬುಧವಾರ.

**बुधाष्टमी** (ಬುಧಾಷ್ಟಮೀ) ಸ್ತ್ರೀ. ಬುಧವಾರ ಬಂದ ಅಷ್ಟಮೀ ತಿಥಿ.

**बुब्बुळ** (ಬುಬ್ಬುಳ್) ನ. ಕಣ್ಣುಗೊಂಬೆ, ಕಣ್ಣಿನ ಕಪ್ಪುಭಾಗ, ಕನೀನಿಕೆ.

**बुभुक्षा** (ಬುಭುಕ್ಷಾ) ಸ್ತ್ರೀ. ಹಸಿವು, ಕ್ಷುಧೆ, ಹಸಿವೆ, ಆಕಾಂಕ್ಷೆ, ಆಶೆ.

**बुभुक्षित** (ಬುಭುಕ್ಷಿತ) ವಿ. ಸಂ. ಹಸಿದ, ಕ್ಷುಧಾರ್ತ, ಉತ್ಕಂಠಿತ, ಉತ್ಸುಕ, ಕಂಗಾಲ, ದರಿದ್ರ, ಬಡ.

**बुरकणे** (ಬುರಕಣೇ) ಕ್ರಿ. ಸ. ಸುರಿದುಕೊಳ್ಳು. ೨. ಅಸಮಾಧಾನವ್ಯಕ್ತ ಮಾಡು, ಧ್ವನಿಯಿಂದ ಅಸಮಾಧಾನ ಪ್ರಕಟಿಸು.

**बुरखा** (ಬುರಖಾ) ಪು. ಅರ. ಮುಸಲ್ಮಾನ ಹೆಂಗಸರ ಪರದೆ, 'ಗೋಷಾ'

**बुरखी** (ಬುರಖೀ) ಸ್ತ್ರೀ. ಝೂಲು.

**बुरग** (ಬುರಗ್) ನ. ಸಂಗೀತದ ಉಪಕರಣ, ಸಾಧನ.

**बुरंगाळणे** (ಬುರಂಗಳಣೇ) } ಕ್ರಿ. ಸ. **बुरळणे** ನೋ.
**बुरांगाळणे** (ಬುರಂಗಾಳಣೇ)

**बुरटणें** (ಬುರಟಣೇ) ಕ್ರಿ. ರೂಪಿಸು, ಎರಕಹೊಯ್ಯು, ಆಕಾರಕೊಡು.

**बुरटा** (ಬುರಟಾ) ಪು. ಇಳಿದ ಪಲ್ಲೆ, ಇಳಿದ ತೊಪ್ಪಲ ಪಲ್ಲೆ, ಹಳಿಸಿದ ಪಲ್ಲೆ.

**बुरटाचोर** (ಬುರಟಾಚೋರ್) ಪು. ಸಣ್ಣಪುಟ್ಟ ವಸ್ತುಗಳನ್ನು ಕಳುವು ಮಾಡುವ ತುಡುಗ.

**बुरणूस** (ಬುರಣೂಸ್) ಪು. ಫಾ. ದಟ್ಟಉಣ್ಣೆಯ ಥಡಿ, ಗಾದಿ.

**बुरंबटे** (ಬುರಂಬಟೀ) ವಿ. ಮುರಮು ಭೂಮಿಯ, ಕಲ್ಲು ಭೂಮಿಯ.

**बुरबुरणे** (ಬುರಬುರಣೇ) ಕ್ರಿ. ಹನಿಹನಿ ಮಳೆಸುರಿ, ಹನುಕು, ಗುಣಗುಣಿಸು.

**बुरशी–सी** (ಬುರಶೀ–ಸಾ–ಸೀ) ಸ್ತ್ರೀ. ಪುಕ. ಬುರುಸು, ಹಲ್ಲಿನ ಮೇಲಿನ ಬುರುಸು.

**बुरसणे** (ಬುರಸಣೇ) ಕ್ರಿ. ಅ. } ಹಲ್ಲಿನ ಮೇಲೆ ಬುರುಸು ಬರು.
**बुरसावणे** (ಬುರಸಾವಣೇ) ಕ್ರಿ. ಅ.

**बुरसा** (ಬುರಸಾ) ವಿ. ಹೊಲಸಾದ, ಮಲಿನ, ಕೊಳಕಾದ, ಕೆಟ್ಟ ಹೊಲಸಿನ.

**बुरा** (ಬುರಾ) ಪು. ಮಿರುಗು, ಬುರುಗು. ೨. ಮೆತ್ತನ್ನ ಸಕ್ಕರೆ.

**बुराख** (ಬುರಾಖ್) ಪು. ಫಾ. ತೂತು, ಎಜ್ಜ, ರಂಧ್ರ, ಛಿದ್ರ. ೨. ಬೇಸರಪಡಿಸುವವ. ೩. ಸ್ತ್ರೀ. ಅಪಮಾನ, ಮಾನಭಂಗ.

**बुरुज** (ಬುರುಜ್) ಪು. ಅರ. ಕೋಟೆ, ಬುರುಜು, ಕೊತ್ತಲ, ಹುಡೆ.

**बुरूड** (ಬುರೂಡ್) ಪು. ಮೇದಾರ, ಗಳದ ಬುಟ್ಟಿಗಳನ್ನು ಹೆಣೆಯುವವ.

**बुरूम** (ಬುರುಮ್) ಪು. ಮುರೂಮು, ಕಲೆಸಿದ ಕಲ್ಲು.

**बुरेहाल** (ಬುರೇಹಾಲ್) ಪು. ಹಿಂ. ಕೆಟ್ಟಸ್ಥಿತಿ, ದುಃಖದಾಯಕಸ್ಥಿತಿ.

**बुलबुल** (ಬುಲ್‌ಬುಲ್) ಪು. ಫಾ. ಕೋಗಿಲೆಯಂಥ ಪಕ್ಷಿ.

**बुलाख** (ಬುಲಾಖ್) ಪು. ಅರ. ಮೂಗಿನ ಆಭರಣ, (ಮುಸಲ್ಮಾನರಲ್ಲಿ)

**बुल्ली** (ಬುಲ್ಲೀ) ಸ್ತ್ರೀ. ಕ. ಗಂಡು (ಚಿಕ್ಕ) ಮಕ್ಕಳ ಲಿಂಗ, ಬುಲ್ಲಿ.

**बुवा** (ಬುವಾ) ಪು. ಸ್ವಾಮಿ, ಸನ್ಯಾಸಿ ಗಾಯಕ. ೨. ಮನುಷ್ಯ. ೩. (ಉದ್ಗಾರ) ಅಪ್ಪಾ. (**होय बुवा**) ಹೌದಪ್ಪ.

**बुळक–की** (ಬುಳಕ್–ಕೀ) ಸ್ತ್ರೀ. } ಮಲಾತಿಸಾರ
**बुळकंडी** (ಬುಳಕಂಡೀ) ಸ್ತ್ರೀ. }

**बुळकणे** (ಬುಳಕಣೇ) ಕ್ರಿ. ಅ. ಮಲಾತಿಸಾರವಾಗು, ಮೇಲಿಂದ ಮೇಲೆ ಹೊರಗಡೆ ಆಗು.

**बुळकट** (ಬುಳಕಟ) ವಿ. ಜಾರುವ, ನುಣುಪಾದ, ಚಂಚಲ, ಸ್ಥಿರವಿಲ್ಲದ.

**बुळका** (ಬುಳಕಾ) ವಿ. ಸಡಿಲಾದ, ಅಶಕ್ತ.

**बुळबुळ** (ಬುಳ್‌ಬುಳ್) ಸ್ತ್ರೀ. ಹನಿಹನಿ ಮಳೆ, ಜಿರಿಜಿರಿ ಮಳೆ, ಹನುಕುವ ಮಳೆ.

**बुळबुळाविणे** (ಬುಳಬುಳಾವಿಣೇ) ಕ್ರಿ. ಸ. ನುಣುಪು ಮಾಡು, ಜಾರುವಂತೆ ಮಾಡು.

**बुळबुळीत** (ಬುಳಬಳೀತ್) ವಿ. ಜಾರುವ, ನುಣುಪಾಗಿರುವ, ಜಾರಿಕೆಯ, ರುಚಿಹೀನ, ಸಪ್ಪಗಾದ.

**बुळा** (ಬುಳಾ) ವಿ. ಕ್ಲೀಬ. ೨. ಸಡಿಲು, ಕೈಲಾಗದ, ಸಪ್ಪಗಾದ.

**बुळीद** (ಬುಳೀದ್) ನ. ಸೀಸು.

**बूच** (ಬೂಚ್) ಪು. ಬೆಣ್ಣೆ, ಬಿರಡೆ, ಬೂಚು, ಮರದ ತೊಗಟೆ.

**बूज** (ಬುಜ್) ಸ್ತ್ರೀ. ಗುಣಜ್ಞತೆ, ಗುಣದ ಅರಿವು.

**बूट** (ಬುಟ್) ಪು. ಹೊಸಯೋಜನೆ, ಹೊಸಕಲ್ಪನೆ, ೨. ಕಸೂತಿ, ಗೋಟು ಕೆಲಸ, ಬುಗುಟಿ. ೩. ಪು. ಇಂ. ಬೂಟು.

**बूटबैंगण** (ಬೂಟ್‌ಬೈಂಗಣ) ಗಿಡ್ಡ ಮನುಷ್ಯ ಗಿಡ್ಡ ಪುಟಾಣಿ.

**बूड** (ಬೂಡ್) ಸ್ತ್ರೀ. ಹಾನಿ, ಉದ್ಯೋಗದಲ್ಲಿ ಹಾನಿ. ೨. ನ. ಕ. ತಳ, ಬುಡ.

**बूंद** (ಬೂಂದ್) ಪು. ಹಿಂ. ಹನಿ, ಟಬಕಿ, ಬಿಂದು.

**बूर** (ಬೂರ್) ಪು. ದಣಿವು, ಆಯಾಸ, ಬೇಸರ.

**बृहत्** (ಬೃಹತ್) ವಿ. ಸಂ. ದೊಡ್ಡ.

**बृहस्पत(ती)वार** (ಬೃಹಸ್ಪತ(ತಿ)ವಾರ್) ಪು. ಗುರುವಾರ.

**बृहस्पति** (ಬೃಹಸ್ಪತಿ) ಪು. ಗುರುಗ್ರಹ. ೨. ಪಂಡಿತ.

**बे** (ಬೇ) ನಿಷೇಧಾರ್ಥಕ ಅವ್ಯಯ. ಫಾ. ಇಲ್ಲದ.

**बे** (ಬೇ) ವಿ. ಎರಡು.

**बे अदबी** (ಬೇಅದಬೀ) ಸ್ತ್ರೀ. ಫಾ. ಅನಾದರ, ಅಗೌರವ, ಅಪಮಾನ.

**बे अब्रू** (ಬೇ ಅಬ್ರೂ) ಸ್ತ್ರೀ. ಫಾ. ಅಪಕೀರ್ತಿ, ನಾಚಿಕೆಗೇಡಿತನ, ದುರ್ಲೌಕಿಕ.

**बे आब** (ಬೇ ಆಬ್) ಸ್ತ್ರೀ. ಫಾ. ಅಪಮಾನಿತಸ್ಥಿತಿ, ಅನಾದರಸ್ಥಿತಿ.

**बे इमान** (ಬೇ ಇಮಾನ್) ವಿ. ಅರ. ಅಪ್ರಾಮಾಣಿಕ, ವಿಶ್ವಾಸಘಾತುಕ, ಧರ್ಮಲಂಡ.

**बे इमानी** (ಬೇ ಇಮಾನೀ) ಸ್ತ್ರೀ. ಫಾ+ಅ. ವಿಶ್ವಾಸಘಾತ.

**बे इलाज** (ಬೇ ಇಲಾಜ್) ವಿ. ಅ. ನಿರುಪಾಯ, ಹಂಚಿಕೆಹೊಳೆಯದ, ಹಂಚಿಕೆತಿಳಿಯದ.

**बेकस** (ಬೇಕಸ್) ವಿ. ಫಾ. ಅನಾಥ, ದಿಕ್ಕಿಲ್ಲದ.

**बकार** (ಬೇಕಾರ್) ವಿ. ಫಾ. ನಿರುದ್ಯೋಗಿ, ಕೆಲಸವಿಲ್ಲದ. ೨. ನೌಕರಿಇಲ್ಲದ. ೩. ನಿರುಪಯುಕ್ತ.

**बेकारी** (ಬೇಕಾರೀ) ಸ್ತ್ರೀ. ಫಾ. ನಿರುದ್ಯೋಗಿತನ, ಕೆಲಸವಿಲ್ಲದಿರುವಿಕೆ.

**बेकायदा** (ಬೇಕಾಯದಾ) ವಿ. ಕಾಯದೆಯ ವಿರುದ್ಧದ. ಅಕ್ರಮವಾದ, ಶಾಸನಕ್ಕೆ ಸಂಬಂಧವಿಲ್ಲದ. ಶಾಸನ.

**बेकी** (ಬೇಕೀ) ಸ್ತ್ರೀ. ಒಡಕು.

**बेकूब** (ಬೇಕೂಬ್) ವಿ. ಅರ. (ಬೇವಕೂಫ್) ಮೂರ್ಖತನ, ಹುಚ್ಚ, ತಿಳಿಗೇಡಿ.

**बेकूबी** (ಬೇಕೂಬೀ) ಸ್ತ್ರೀ. ಅರ. ಮೂರ್ಖತನ, ಹುಚ್ಚುತನ, ಮರುಳು, ಮೂರ್ಖತ್ವ.

**बेखर्ची** (ಬೇಖರ್ಚೀ) ವಿ. ಫಾ. ಖರ್ಚುಇಲ್ಲದ, ಬೆಳೆಸಲಾರದ, ಖರ್ಚಾಗದ.

**बेगड** (ಬೇಗಡ್) ಸ್ತ್ರೀ. ಕ. ಬೇಗಡೆ, ತೆಳ್ಳನ್ನ ತಗಡಿನ ಕಾಗದ.

**बेगडी** (ಬೇಗಡೀ) ವಿ. ಕೃತ್ರಿಮ, ಅಸ್ವಾಭಾವಿಕ, ಅಸತ್ಯ.

**बेगम** (ಬೇಗಮ್) ಸ್ತ್ರೀ. ತು. ಮುಸಲ್ಮಾನಗೃಹಸ್ಥನ ಪತ್ನಿ.

**बेगमी** (ಬೇಗಮೀ) ಸ್ತ್ರೀ. ಫಾ. / **बेजमी** (ಬೇಜಮೀ) ಸ್ತ್ರೀ. } ಮಾರ್ಪಾಡು, ವ್ಯವಸ್ಥೆ, ನಿಶ್ಚಿಂತತೆಯುಂಟಾಗುವಂತೆ ಮಾಡಿದ ಸಂಗ್ರಹ.

**बेगान** (ಬೇಗಾನ್) ವಿ. 'बीगार' ನೋ.

**बेगी** (ಬೇಗೀ) ಕ್ರಿ. ವಿ. / **बेगे** (ಬೇಗೇ) ಕ್ರಿ. ವಿ. } ಬೇಗನೆ, ಬೇಗ.

**बेचके** (ಬೇಚಕೇ) ಸ್ತ್ರೀ. / **बेचकुळी** (ಬೇಚಕುಳೀ) } ಎರಡು ಬೆರಳುಗಳ ನಡುವಿನ ಸಂದಿ.

**बेचण–न** (ಬೇಚಣ್–ನ್) ನ. ಮಾರುವಿಕೆ, ಮಾರಾಟ, ವಿಕ್ರಿ.

**बेचन घेणे** (ಬೇಚನ್ ಘೇಣೇ) ಕೊಂಡುಕೊಳ್ಳು.

**बेचन देणे** (ಬೇಚನ್ ದೇಣೇ) ಮಾರು.

**बेचरक** (ಬೇಚರಕ್) ಕ್ರಿ. ವಿ. ನಿರ್ಭಯವಾಗಿ, ಹಿಂದುಮುಂದು ನೋಡದೆ, ಕಾ ಕೂ ಅನ್ನದೆ.

**बेचरणे** (ಬೇಚರಣೇ) ಕ್ರಿ. ಅ. ಪಸರಿಸು, ಚಿಗಿ, ಹಬ್ಬು.

**बेचव** (ಬೇಚವ್) ವಿ. ರುಚಿಯಿಲ್ಲದ, ಸಪ್ಪಗಾದ, ಅರುಚಿಯ, ನಿಸ್ಸಾರವಾದ.

**बेचांगळ** (ಬೇಚಾಂಗಳ್) 'बेचक' ನೋ.

**बेचाड** (ಬೇಚಾಡ್) ವಿ. ನಾಚಿಕೆಯಿಲ್ಲದ, ನಾಚಿಕೆಗೆಟ್ಟ, ನಾಚಿಕೆಗೇಡಿ.

**बेचावणे** (ಬೇಚಾವಣೇ) / **बेचन** (ಬೇಚನ } ನ. ಮಾರಾಟ ಪಟ್ಟ, ವಿಕ್ರಿಪಟ್ಟ.

**बेचाळीस, बेचाळ** (ಬೇಚಾಳೀಸ್, ಬೇಚಾಳ್) ವಿ. (೪೨) ನಾಲ್ವತ್ತೆರಡು.

**बेचिराख–ग** (ಬೇಚಿರಾಖ್–ಗ್) ವಿ. ಫಾ. ೧. ದೀಪವಿಲ್ಲದ, ಹಾಳುಬಿದ್ದ (ಗ್ರಾಮ) ನಿರ್ಜನ, ಹಾಳಾದ, ಖಿನ್ನ, ಉದಾಸ, ಜನವಸತಿಯಿಲ್ಲದ.

**बेचोबा** (ಬೇಚೋಬಾ) ಪು. ಫಾ. ಸಣ್ಣರಾಹುಟಿ.

**बेजबाबदार** (ಬೇಜವಾಬದಾರ್) ವಿ. ಫಾ. ಹೊಣೆಗೆಟ್ಟ, ಹೊಣೆಗಾರಿಕೆಯಿಲ್ಲದ.

**बेजबाबी** (ಬೇಜವಾಬೀ) ವಿ. ಸೊಕ್ಕಿನ, ಸಿಡುಕಿನ, ಪ್ರತ್ಯುತ್ತರವಿಲ್ಲದ, ಉದ್ಧತ, ಪ್ರತಿವಾದಿಸುವ.

**बेजरब** (ಬೇಜರಬ್) ವಿ. ಅರ. ಅಂಜಿಕೆಯಿಲ್ಲದೆ, ಹೆದರದೆ, ನಿರ್ಭಯವಾಗಿ, ನಿರ್ಭೀತತನದಿಂದ.

**बेजात** (ಬೇಜಾತ್) ವಿ. ಹಿಂ. ಕೀಳುಜಾತಿಯ ನೀಚಜಾತಿಯ.

**बेजार** (ಬೇಜಾರ್) ವಿ. ಫಾ. ಬೇಸರಗೊಂಡ, ರೋಗಗ್ರಸ್ತ, ಬೇನೆಯಿಂದ ಬಳಲಿದ, ತ್ರಸ್ತ. ೨. ಪು. ಬೇಸರಿಕೆ.

**बेट** (ಬೇಟ್) ನ. ದ್ವೀಪ, ನಡುಗಡ್ಡೆ.

**बेटका** (ಬೇಟಕಾ) ಪು. ಕುಟ್ಟಿದ ಕಾಳು, ಹೊಟ್ಟು ತೆಗೆದ ಕಾಳು, ಸಿಪ್ಪೆ ತೆಗೆದ ಕಾಳು, ತೌಡು ತೆಗೆದ ಕಾಳು.

**बेटकुळी–बेडकुळी** (ಬೇಟ–ಡ–ಕುಳೀ) ಸ್ತ್ರೀ. ಸಣ್ಣ ಕಪ್ಪೆ. ೨. ರಟ್ಟೆಯ ಸ್ನಾಯುವಿನ ಸಿವುಡು.

**बेटणे** (ಬೇಟಣೇ) ಕ್ರಿ. ಸ. ತಗಡು ಸಮಮಾಡು, ಕೊಡತೆಯಿಂದ ಬಡೆ, ಸುತ್ತಿಗೆಯಿಂದ ಜಡೆ.

**बेटणे** (ಬೇಟಣೇ) ನ. / **बेटमोरा** (ಬೇಟ್‌ಮೋರಾ) ಪು. } ಪತ್ತಾರನ ಕೈಸುತ್ತಿಗೆ, ಸುತ್ತಿಗೆ. ೨. ಪತ್ತಾರನ ಮುದ್ರೆ, ಪತ್ತಾರನ ಅಚ್ಚು, ಪಡಿಯಚ್ಚು.

**बेटा** (ಬೇಟಾ) ಪು. ಹಿಂ. ಮಗ, ಹುಡುಗ, ಮಗು.

**बेटी** (ಬೇಟೀ) ಮಗಳು ಪುತ್ರಿ, ಕನ್ಯೆ.

**बेटीव्यवहार** (ಬೇಟೀ ವ್ಯವಹಾರ) ಪು. ಶರೀರಸಂಬಂಧ, ಲಗ್ನ ಸಂಬಂಧ.

**बेंड** (ಬೇಂಡ್) ನ. ಕ. ಬೆಂಡು, ೨. ಹೊಕ್ಕಳು, ನಾಭಿ, ಉಬ್ಬಿದಹೊಕ್ಕಳು, ಕೇರಬೀಜ.

**बेंडफुटणे** (ಬೇಂಡ್ ಫುಟಣೇ) ಕ್ರಿ. ಅ. ಗುರುಳಿ ಒಡೆ, ಗುಟ್ಟು ಹೊರಬೀಳು, ರಹಸ್ಯ ಬಯಲಾಗು.

**बेडकी** (ಬೇಡಕೀ) ಸ್ತ್ರೀ. ಸಣ್ಣ ಕಪ್ಪೆ, ಹೆಣ್ಣು ಕಪ್ಪೆ, ರಟ್ಟೆಯ ಸ್ನಾಯು.

**बेडा** (ಬೇಡಾ) ಪು. ಹಿಂ. ಅಡಿಕೆ. ೨. ಹಡಗ.

**बेडा पार होणे–जाणे, करणे** (ಬೇಡಾಪಾರ್ ಹೋಣೇ–ಜಾಣೇ, ಕರಣೇ) ಕ್ರಿ. ಅ. ಪಾರಾಗು, ಸುರಕ್ಷಿತನಾಗಿರು, ಉದ್ದೇಶ ಸಾಧಿಸು, ಗುರಿಮುಟ್ಟು, ಆಶಾಪೂರ್ತಿ ಮಾಡಿಕೊಳ್ಳು.

**बेडी** (ಬೇಡೀ) ಸ್ತ್ರೀ. ಹಿಂ. ಸಂಕೋಲೆ, ಕೈಸಂಕೋಲೆ, ಕಾಲುಸಂಕೋಲೆ, ಅಡ್ಡಿ, ಭಾರ, ಕೊರಡು.

**बेडूक** (ಬೇಡೂಕ್) ಪು. ಕಪ್ಪೆ, ದೊಡ್ಡ ಕಪ್ಪೆ.

**बेडे** (ಬೇಡೇ) ನ. ದನಗಳ ಕೊಟ್ಟಿಗೆ, ಗೋಶಾಲೆ, ತಿರುಗುಣಿ ಕಂಬ.

**बेडौल** (ಬೇಡೌಲ್) ವಿ. ಅಸಡ್ಡಾಳ, ಬೆಡಗು ಇಲ್ಲದ.

**बेढंग** (ಬೇಢಂಗ್) ಪು. ಕುಚೇಷ್ಟೆ, ದುಷ್ಟಚಾಳಿ. ೨. ವಿ. ಅವ್ಯವಸ್ಥಿತ.

**बेढब** (ಬೇಢಬ್) ವಿ. '**बेडौल**' ನೋ.

**बेणणे** (ಬೇಣಣೇ) ಕ್ರಿ. ಸ. ಕಳೆತೆಗೆ, ಕಸತೆಗೆ, ಬೀಜ ಹಾಕು, ಬೀಜ ಬಿತ್ತು.

**बेणणी** (ಬೇಣಣೀ) ಸ್ತ್ರೀ. ಕಳೆ ಕೀಳುವಿಕೆ, ಕಸ ತೆಗೆಯುವಿಕೆ, ಬಿತ್ತುವಿಕೆ.

**बेणावणे** (ಬೇಣಾವಣೇ) ಕ್ರಿ. ಅ. ಕಾಣು, ದೃಶ್ಯವಾಗು, ವ್ಯಕ್ತವಾಗು.

**बेणे** (ಬೇಣೇ) ನ. ಬೀಜ ಬಿತ್ತುವಿಕೆ.

**बेत** (ಬೇತ್) ಪು. ಉಪಾಯ ಯೋಜನೆ, ಅಳತೆ. ೨. ಊಟದ ಭಕ್ಷ್ಯ, ಪಕ್ವಾನ್ನ. ೩. ಬೆತ್ತ, ಉದ್ದೇಶ. ಆಕಾರ, ಪದ್ಧತಿ, ಚಿತ್ರ.

**बेतऊंस** (ಬೇತ್‌ಊಸ್) ಪು. ಬೆತ್ತಗಬ್ಬು.

**बेतकशीर** (ಬೇತಕಶೀರ್) ವಿ. ಫಾ+ಅರ. ನಿರ್ದೋಷ, ದೋಷರಹಿತ, ಕೊರತೆಯಿಲ್ಲದ, ಕುಂದುಇಲ್ಲದ.

**बेतणे** (ಬೇತಣೇ) ಕ್ರಿ. ಸ. ಅಳತೆತಕ್ಕೊಳ್ಳು, ಅಳತೆಗೆ ತಕ್ಕಂತೆ ಬಟ್ಟೆ ಕತ್ತರಿಸು. ೨. ಒದಗು.

**प्राणावर–** (ಪ್ರಾಣಾವರ್–) ಕ್ರಿ. ಅ. ಮರಣ ಪ್ರಸಂಗ ಬರು.

**बेतबात** (ಬೇತ್‌ಬಾತ್) ಅಲ್ಪವ್ಯಯ, ಜೀನತನ.

**बेताबाताचा** (ಬೇತಾಬಾತಾಚಾ) ವಿ. ಜೋಕೆಯಿಂದ ವರ್ತಿಸುವ, ಸಾಮಾನ್ಯ ಪರಿಸ್ಥಿತಿಯ.

**बेतऱ्हा** (ಬೇತರ್ಹಾ) ವಿ. ಅರ. ಅಸಾಧಾರಣ, ವಿಲಕ್ಷಣ, ಅವ್ಯವಸ್ಥಿತ.

**बेतवार** (ಬೇತವಾರ್) ಕ್ರಿ. ವಿ. ಪದ್ಧತಿಗೆ ತಕ್ಕಂತೆ, ರೀತಿಗನುಸಾರವಾಗಿ, ಶಿಸ್ತಿನಿಂದ, ಮಿತವಾಗಿ.

**बेतविणे** (ಬೇತವಿಣೇ) ಕ್ರಿ. ಸ. ಮಾಡಿಸು, ಅಳತೆ ತಕ್ಕೊಳ್ಳು, ಬಡೆ, ಹೊಡೆ, ಅಂಗೈಯಿಂದ ಮೋರೆಗೆ ಹೊಡೆ, ಕೆನ್ನೆಗೆ ಹೊಡೆ.

**बेताल–ळ** (ಬೇತಾಲ್–ಳ್) ವಿ. ತಾಳವಿಲ್ಲದ, ರೀತಿಯಿಲ್ಲದ, ದುರ್ವ್ಯಸನಿ, ನೀತಿಗೆಟ್ಟ, ಅಸಹ್ಯ (ಸಂಗೀತದಲ್ಲಿ) ತಾಳವಿಲ್ಲದ.

**बेताल–ळीस** (ಬೇತಾಳೀಸ್) ನಾಲ್ವತ್ತೆರಡು (೪೨)

**बेती** (ಬೇತೀ) ಸ್ತ್ರೀ. (ಪಗಡಿಯಾಟ) ಕೈಬೀಳುವಿಕೆ.

**बेतीव** (ಬೇತೀವ್) ವಿ. ಅಳತೆ ಪ್ರಕಾರ ಮಾಡಿದ, ಯೋಜನೆ ಪ್ರಕಾರ ಮಾಡಿದ, ಅಳತೆಯಂತೆ ಕತ್ತರಿಸಿದ (ಅರಿವೆ)

**बेत्या** (ಬೇತ್ಯಾ) ವಿ. ಯೋಜಕ, ಯೋಜಿಸುವವ, ಹಂಚಿಕೆಗಾರ, ಉಪಾಯ ಮಾಡುವವ, ಯುಕ್ತಿ ಮಾಡುವ, ಕಲ್ಪಿಸುವ.

**बेदम** (ಬೇದಮ್) ವಿ. ಫಾ. ದಣಿದ, ತ್ರಸ್ತ, ಬಳಲಿದ, ಆಯಾಸಪಟ್ಟ, ಬೇಸತ್ತ. ೨. ಬಹಳ.

**बेदरद–दी** (ಬೇದರದ್–ದೀ) ವಿ. ಫಾ. ನಿಷ್ಕಾಳಜಿ, ದಯಾಹೀನ, ನಿರ್ದಯ. ೨. ಅರುಚಿಕರ, ಸಪ್ಪಗಿನ, ರುಚಿಯಿಲ್ಲದ.

**बेदाणा** (ಬೇದಾಣಾ) ಪು. ಫಾ. ಒಣದ್ರಾಕ್ಷೆ.

**बेदाद** (ಬೇದಾದ್) ವಿ. ಫಾ. ನ್ಯಾಯವಿಲ್ಲದ, ಲಕ್ಷ್ಯವಿಲ್ಲದ, ಅನ್ಯಾಯದ.

**बेदावा** (ಬೇದಾವಾ) ಪು. ವಿ. ಅರ. ಋಣವಿಮೋಚನೆ, ಸಲುಚೀಟಿ, ರಸೀದಿ, ಪಾವತಿ, ಹಕ್ಕುಬಾಧ್ಯತೆ ಬಿಡುವಿಕೆ.

**बेदिक्कत** (ಬೇದಿಕ್ಕತ್) ವಿ. ಅರ. ಅನುಮಾನವಿಲ್ಲದೆ, ಅನುಮಾನಿಸದೆ, ಸಹಜವಾಗಿ, ತೊಂದರೆ ಇಲ್ಲದೆ.

**बेदिल** (ಬೇದಿಲ್) ವಿ. ಫಾ. ದುಃಖದ, ದುಃಖಕರ. ೨. ಮಬ್ಬು, ದುಃಖಪ್ರದರ್ಶಕ, ವಿಷಣ್ಣ, ಆರ್ತ.

**बेदिली** (ಬೇದಿಲೀ) ಸ್ತ್ರೀ. ಫಾ. ದುಃಖ, ದುಃಖಪ್ರದರ್ಶನ, ವಿಷಣ್ಣತೆ, ಖಿನ್ನತೆ.

**बेंदूर** (ಬೇಂದೂರ್) ಪು. ಎತ್ತುಗಳ ಪೂಜೆಯ ಹಬ್ಬ, ಕಾರಹುಣ್ಣಿವೆ, ಕರಿಯದಿನ.

**बेधडक** (ಬೇಧಡಕ್) ಕ್ರಿ. ವಿ. ನಿರ್ಭಯವಾಗಿ, ದಿಟ್ಟತನದಿಂದ, ಭೀತಿಯಿಲ್ಲದೆ, ಅಂಜಿಕೆಯಿಲ್ಲದೆ.

**बेपरवा** (ಬೇಪರವಾ) ಕ್ರಿ.ವಿ. **बेफिकीर** ವಿ. '**बेदरद**' ನೋ.

**बेपार** (ಬೇಪಾರ್) ಪು. ಉದ್ದಿಮೆ, ಧಂದೆ, ವ್ಯಾಪಾರ.

**बेपारी** (ಬೇಪಾರೀ) ಪು. ವ್ಯಾಪಾರಸ್ಥ, ವ್ಯಾಪಾರ ಮಾಡುವವ, ಉದ್ದಿಮೆದಾರ.

**बेफाम** (ಬೇಫಾಮ್) ವಿ. ಫಾ. (ಬೇಫಹಮ್) ರಭಸದ, ಭಯಂಕರ.

**बेफामी** (ಬೇಫಾಮೀ) ಸ್ತ್ರೀ. ಫಾ. ರಭಸ.

**बेफिकीर** (ಬೇಫಿಕೀರ್) ವಿ. ಫಾ. ಅರ. '**बेपरवा**' ನೋ.

**बेंबटणे** (ಬೇಂಬಟಣೇ) **बेंबाटणे** (ಬೇಂಬಾಟಣೇ) ಕ್ರಿ. ಅ. ಚೀರು, ಒದರು, ಬೊಬ್ಬೆಹೊಡೆ, ಕಿರುಚು, ಹಂಬಲಿಸು.

**बेबंद** (ಬೇಬಂದ್) ವಿ. ಅನಾಯಕ, ಅರಾಜಕ, ಅವ್ಯವಸ್ಥಿತ, ಪ್ರಭುವಿಲ್ಲದ.

**–शाही** (–ಶಾಹೀ) ಸ್ತ್ರೀ. ಗೊಂದಲ ಅರಾಜಕತೆ.

**बेबनाव** (ಬೇಬನಾವ್) ಪು. ಜಗಳ, ಹಗೆತನ.

**बेबहा** (ಬೇಬಹಾ) ಪು. ಫಾ. ಅಮೂಲ್ಯವಾದ, ಬೆಲೆಯಿಲ್ಲದ.

**बेबहार** (ಬೇಬಹಾರ್) ವಿ. ಫಾ. ಹೆಚ್ಚು, ವಿಪುಲ, ಹೆಚ್ಚಾದ, ಅತಿಶಯ, ಬಹಳ.

**बेबाक** (ಬೇಬಾಕ್) ವಿ. ಅರ. ಋಣ, ವಿಮುಕ್ತ 'ಬಾಕಿ'ಯಿಲ್ಲದ.

**बेंबावणे** (ಬೇಂಬಾವಣೇ) ಕ್ರಿ. ಅ. **बेंबटणे** ನೋ.

**बेंबी** (ಬೇಂಬೀ) ಸ್ತ್ರೀ. } ಹೊಕ್ಕಳು, ಸಾಭಿ.
**बेंबट** (ಬೇಂಬಟ್) ನ. }

**बेंबीचे उखळ होणे** (ಬೇಬಿಂಚೇ ಉಖಳ್ ಹೋಣೇ) ಕ್ರಿ. ಅ. ಸ್ಖಾಲನಾಗು, ಉಬ್ಬು.

**बेंबीच्चा देठापासून ओरडणे** (ಬೇಂಬೀಚ್ಯಾ ದೇಠಾಪಾಸೂನ್ ಓರಡಣೇ) ಕ್ರಿ. ಅ. ಚೀರದನಿಯಿಂದ ಒದರು.

**बेभरोशी** (ಬೇಭರೋಶೀ) } ವಿ. ನಂಬಿಗೆಯಿಲ್ಲದ, ಅವಿಶ್ವಾಸಿ, ನಂಬಬಾರದ.
**बेभरवशी** (ಬೇಭರವಶೀ) }

**बेमार** (ಬೇಮಾರ್) ವಿ. ಫಾ. ಬೇನೆಬಿದ್ದ, ಕ್ಷೇಮವಿಲ್ಲದ, ದಣಿದ.

**बेमारी** (ಬೇಮಾರೀ) ಸ್ತ್ರೀ. ಫಾ. ಬೇನೆ, ರೋಗ.

**बेमालूम** (ಬೇಮಾಲೂಮ್) ಕ್ರಿ. ವಿ. ಫಾ. ಸಹಜವಾಗಿ, ಗೊತ್ತಾಗದಂತೆ.

**बेमुरवत** (ಬೇಮುರವತ್) ವಿ. ಅಸಭ್ಯ, ಉದ್ಧತ.

**बेमोहीम** (ಬೇಮೋಹೀಮ್) ವಿ. ಫಾ. ಮನೆಯಲ್ಲಿಯೇ ಕೂತಿರುವ, ಅಲುಗಾಡದ, ತಿರುಗಾಡದ.

**बेरकट** (ಬೇರಕಟ್) ನ. ಕಸರು, ಜಿಡ್ಡು, ಎಣ್ಣೆ–ತುಪ್ಪಗಳ ಕಸರು.

**बेरकटणे** (ಬೇರಕಟಣೇ) ಕ್ರಿ. ಅ. ಕಸುರಾಗು, ಜಿಡ್ಡು ಹಿಡಿ.

**बेरंग** (ಬೇರಂಗ್) ಪು. ಬಣ್ಣವಿಲ್ಲದ, ಅನಾದರದ ಸ್ಥಿತಿ, ಅವಮಾನ.

**बेरड** (ಬೇರಡ್) ಪು. ಕ. ಬೇಡ, ಬೇಡರ ಜಾತಿಯ ಮನುಷ್ಯ. ೨. ತುಡುಗ. ೩. ದಿಟ್ಟಮನುಷ್ಯ.

**बेरणे** (ಬೇರಣೇ) ಕ್ರಿ. ಸ. ಅಡ್ಡ ಉದ್ದನೇಗಿಲಹೊಡೆ, ಉಳು.

**बेरणी** (ಬೇರಣೀ) ಸ್ತ್ರೀ. ಅಡ್ಡ ಉದ್ದ ನೇಗಿಲ ಹೊಡೆಯುವಿಕೆ, ಉಳುವಿಕೆ.

**बेरी** (ಬೇರೀ) ಸ್ತ್ರೀ. ಎಣ್ಣೆ–ತುಪ್ಪದ ಜಿಡ್ಡು, ತಳದ ಕಸರು.

**बेरीज** (ಬೇರೀಜ್) ಸ್ತ್ರೀ. ಫಾ. (ಬರೀಜ್) ಸಂಕಲನ ಕೂಡಿಸುವಿಕೆ, ಬೇರೀಜು.

**बेरीज भरती** (ಬೇರೀಜ್ ಭರತೀ) ಸ್ತ್ರೀ. ಸಂಖ್ಯೆ, ಎಣಿಕೆ ಪೂರ್ಣವಾಗುವಿಕೆ.

**बेरोजगार** (ಬೇರೋಜಗಾರ್) ವಿ. '**बेकार**' ನೋ.

**बेल** (ಬೇಲ್) ಬಿಲ್ವಪತ್ರಿ, ಬಿಲ್ವದಗಿಡ, ಬೆಲಪತ್ರಿ.

**बेलपत्र ठेवणे** (ಬೇಲಪತ್ರ ಠೇವಣೇ) ಕ್ರಿ. ಸ. ದಿವಾಳಿತೆಗೆ, ಎಲ್ಲ ಕಳಕೊಳ್ಳು, ಸರ್ವಸ್ವವನ್ನು ಸಮರ್ಪಿಸು.

**बेलपान** (ಬೇಲ್‌ಪಾನ್) ನ. ಬಿಲ್ವಪತ್ರಿ, ಬಿಲ್ವದಎಲೆ.

**बेलभंडार** (ಬೇಲ್‌ಭಂಡಾರ್) ಪು. ಹಣೆಯ ಭಂಡಾರ ದೇವಿಯ ಭಂಡಾರ, ಆಣೆ, ಶಪಥ.

**बेलभंडार उचलणे** (ಬೇಲಭಂಡಾರ ಉಚಲಣೇ) ಕ್ರಿ. ಸ. ಆಣೆಮಾಡು. (ಕೊಲೆ ಸುಲಿಗೆಯ ಸಂಬಂಧದಿಂದ)

**बेलका–के** (ಬೇಲಕಾ–ಕೇ) ನ. ತೆಂಗಿನ ಪರಟೆ, ತೆಂಗಿನ ಚಿಪ್ಪು.

**बेलखरूज** (ಬೇಲ್‌ಖರೂಜ್) ಸ್ತ್ರೀ. ಒಣಕಜ್ಜಿ, ಪಸರಿಸುವ ಕಜ್ಜಿ, ಹಟಮಾರಿಕಜ್ಜಿ.

**बेलगाम** (ಬೇಲಗಾಮ್) ವಿ. ನಿರಂಕುಶ, ನಿರಾತಂಕ ತಡೆಯಿಲ್ಲದ.

**बेलगामी** (ಬೇಲಗಾಮೀ) ಸ್ತ್ರೀ. ವಿ. ಕ್ರಿ. ವಿ. ನಿರಾತಂಕವಾಗಿ, ತಡೆಯಿಲ್ಲದೆ.

**बेलगामी पडणे** (ಬೇಲಗಾಮೀ ಪಡಣೇ) ಕ್ರಿ. ಸ. ಅ. ಸಂಬಂಧ ಹರಿ, ಅಲ್ಲದ ಸ್ಥಳದಲ್ಲಿ ಬೀಳು, ಅಸಡ್ಡೆ ಮಾಡು, ತಾತ್ಸಾರಮಾಡು, ಉಪೇಕ್ಷಿಸು.

**बेलटी** (ಬೇಲಟೀ} ಸ್ತ್ರೀ. – ಟೀ (ನ) '**बेलका**' ನೋ.
**बेला** (ಬೇಲಾ } ಪು.

**बेलदार** (ಬೇಲದಾರ್) ಪು. ಕಲ್ಲು ಕಟುಕ, ಕಲ್ಲು ಒಡೆಯುವವ, ಉಪ್ಪಾರ.

**बेलाशक** (ಬೇಲಾಶಕ್) ಕ್ರಿ. ವಿ. ಅರ. ನಿರ್ಭೀತತನದಿಂದ, ಶಂಕೆಯಿಲ್ಲದೆ.

**बेलाग** (ಬೇಲಾಗ್) ಕ್ರಿ. ವಿ. ಹಿಂ. ಮುಚ್ಚುಮರೆ ಮಾಡದೆ, ಖಂಡತುಂಡಾಗಿ.

**बेलिफ** (ಬೇಲೀಫ್) ಪು. ಇಂ. ಕೋರ್ಟಿನ ಬೇಲಿಫ, ಜಪ್ತಿ ಕಾರಕೂನ.

**बेली** (ಬೇಲೀ) ಸ್ತ್ರೀ. ತೆಂಗಿನಕಾಯಿಯ ಅರ್ಧಪರಟಿ. ೨. ವಿ. ಬೇಲಿ ನೆಯ್ಗೆಯ ಸೀರೆ, ಕೆಂಪು–ಕರೆ ಎಳೆಯ ಸೀರೆ.

**बेले** (ಬೇಲೆ) ನ. ಫಾ. ರೊಕ್ಕದ ಚೀಲ, ರಾಜರ ಬೊಕ್ಕಸ.

**बेलेबरदार** (ಬೇಲೆಬರದಾರ್) ಪು. ಫಾ. ಬೊಕ್ಕಸದ ಅಧಿಕಾರಿ.

**बेवकूफ** (ಬೇವಕೂಫ್) ವಿ. ಅರ. ಮೂರ್ಖ, ಹುಚ್ಚ, ತಿಳಿಗೇಡಿ.

**बेवड** (ಬೇವಡ್) ಸ್ತ್ರೀ. ಬಿತ್ತುವ ಕೂಡಕಲ ಕಾಳು, ಬಿತ್ತುವ ಮಿಶ್ರ ಬೀಜ.

**बेवडा** (ಬೇವಡಾ) ಪು. ಮಾದಕ ಪೇಯ, ಅಮಲಿನ ಪೇಯ.

**बेवसवसा** (ಜೀವಸವಸಾ) ಕ್ರಿ ವಿ. ನಿರ್ಭೀತ ತನ ದಿಂದ ಅಂಜಿಕೆಯಿಲ್ಲದೆ, ವಿಧಿ ನಿಷೇಧವಿಲ್ಲದೆ.

**बेवाडे** (ಬೇವಾಡೇ) ನ. ಮನೆಯ ಅಟ್ಟ, ಮನೆಯ ಮೊದಲನೆಯ ಮಜಲು.

**बेवारशी** (ಬೇವಾರಶೀ) ವಿ. ಅರ. **बेवारीस** (ಬೇವಾ ರೀಸ್) ಸಂತಾನವಿಲ್ಲದ. ೨. ವಾರಸದಾರರಿಲ್ಲದ. ೩. ಯಾರೂ ದಿಕ್ಕಿಲ್ಲದ.

**बेवारसा** (ಬೇವಾರಸಾ) ಪು. ಅರ. ವಾರಸದಾರರಿಲ್ಲ ದಿರುವಿಕೆ, ಹಕ್ಕುದಾರರಿಲ್ಲದಿರುವಿಕೆ.

**बेवारा** (ಬೇವಾರಾ) ಪು. ಹಿಂ. ಸಾಲತೀರಿಸುವಿಕೆ, ಸಂಗ್ರಹ ತೀರುವಿಕೆ.

**बेश** (ಬೇಶ್) ವಿ. ಫಾ. ಒಳ್ಳೆಯ, ಉತ್ತಮ, ಸರಳ, ಅನುಕೂಲ.

**बेशखासा** (ಬೇಶಖಾಸಾ) ವಿ. ಫಾ. ಯೋಗ್ಯ, ಅತಿ ಯೋಗ್ಯ.

**बेशक** (ಬೇಶಕ್) ಕ್ರಿ. ವಿ. ಫಾ. ನಿಶ್ಶಂಕವಾಗಿ, ವಿಧಿ ನಿಷೇಧವಿಲ್ಲದೆ, ನಿರ್ಲಜ್ಜ ತನದಿಂದ.

**बेशमी** (ಬೇಶಮೀ) (ಕ್ರಿ. ವಿ. ಹೆಸರಿನಿಂದ, ಪರವಾಗಿ,
**बेशम** (ಬೇಶಮ್) (ಮುಖಾಂತರವಾಗಿ.

**बेशरम** (ಬೇಶರಮ್) ವಿ. ಅರ+ಫಾ. ನಾಚಿಕೆಗೇಡು, ನಾಚಿಕೆಯಿಲ್ಲದ.

**बेशिस्त** (ಬೇಶಿಸ್ತ) ವಿ. ಫಾ. (ಬೇಶುಸ್ತಾ) ಅವ್ಯವಸ್ಥಿತ, ಓರಣವಿಲ್ಲದ ತುಂಟ, ಪೋಕರಿ, ಪುಂಡ, ಶಿಸ್ತು ಇಲ್ಲದ.

**बेशुद्ध** (ಬೇಶುದ್ಧ) ವಿ. ಎಚ್ಚರವಿಲ್ಲದ, ಎಚ್ಚರತಪ್ಪಿದ

**बेसन** (ಬೇಸನ್) ನ. ಹಿಂ. ಕಡಲೆಹಿಟ್ಟು.

–**लाडू** (ಲಾಡೂ) ಪು. ಬೇಸನ್‌ಉಂಡೆ.

**बेसावध** (ಬೇಸಾವಧ) ವಿ. ಜಾಗರೂಕತೆಯಿಲ್ಲದ, ಎಚ್ಚರವಿಲ್ಲದ, ಅಸಡ್ಡೆ, ಅಲಕ್ಷ್ಯ.

**बेसुमार** (ಬೇಸುಮಾರ್) ವಿ. ಫಾ. ಹೆಚ್ಚಿನ, ಅಳತೆ ಯಿಲ್ಲದ, ಲೆಕ್ಕಕ್ಕೆ ಹತ್ತದ, ಲೆಕ್ಕಕ್ಕೆ ನಿಲುಕದ.

**बेसूर** (ಬೇಸೂರ್) ವಿ. '**बदसूर**' ನೋ.

**बेहडणे** (ಬೇಹಡಣೇ) ಕ್ರಿ. ಅ. ಪಾಡಾಗು, ಹಣ್ಣಿಗೆ ಬರು, ಹಣ್ಣಾಗು.

**बेहडा** (ಬೇಹಡಾ) ಪು. ತಾರೆಯಕಾಯಿ, ಒಂದು ಔಷಧಿ ದ್ರವ್ಯ.

**बेहतनमाल** (ಬೇಹತನಮಾಲ್) ಪು. ಫಾ. ಒಡೆಯ ನಿಲ್ಲದ ಸಾಮಾನು, ವಾರಸದಾರನಿಲ್ಲದ ಸರಕು, ಮುಟ್ಟುಗೋಲಾದ ಆಸ್ತಿ, ಹಕ್ಕುದಾರನಿಲ್ಲದ ಸೊತ್ತು.

**बेहद–द्द** (ಬೇಹದ್–ದ್ದ) ವಿ. ಫಾ+ ಅರ. ಅತಿಶಯ, ಬಹಳ.

**बेहया** (ಬೇಹಯಾ) ವಿ. ಅರ. ನಾಚಿಗಗೇಡಿ, ೨. (ಹೆಂಗಸು) ಹಾದರಗಿತ್ತಿ, ಜಾರಿಣಿ.

**बेहुजूर** (ಬೇಹುಜೂರ್) ಕ್ರಿ. ವಿ. ಅರ. ಅನುಪಸ್ಥಿತಿ ಯಲ್ಲಿ, ಅಪ್ರತ್ಯಕ್ಷವಾಗಿ.

**बेहुरमत** (ಬೇಹುರಮತ್) ವಿ. ಅರ. ಹೆಸರು ಕಳ ಕೊಂಡ, ನಷ್ಟಕೀರ್ತಿಯ, ಕೀರ್ತಿ ಕಳಕೊಂಡ.

**बेहेडा** (ಬೆಹೇಡಾ) ಪು. **बेहडा** ನೋ.

**बेहोश–ष** (ಬೇಹೋಶ್–ಷ್) ವಿ. ಫಾ. ಎಚ್ಚರಿಕೆಯಿ ಲ್ಲದ, ಜಾಗರೂಕತೆಯಿಲ್ಲದ.

**बेळ** (ಬೇಳ್) ನ. ಸಣ್ಣ ಬಿದುರು, ವೇಣು, ಗಳ.

**बेळके** (ಬೇಳಕೇ) ನ. ಬಿದುರಿನ ಕವಲು, ಕವಲು, ಗಿಡದ ಕವಲು.

**बेळे** (ಬೇಳೇ) ನ. ಚೌಕುಕಟ್ಟಿಗೆಯ ದಾರಿಗಂಬ, ದಾರಿಯ ತಿರುಗುಗಂಬ.

**बेळेबोळे** (ಬೇಳೆಬೋಳೇ) ನ. ಬೆಲ್ಲದ ಅನ್ನ, ಸಕ್ಕರೆ ಅನ್ನ.

**बैगणी** (ಬೈಗಣೀ) ವಿ. ಹಿಂ. ಬದನೆಯ ಬಣ್ಣದ, ಬದನೆಯ ಕಾಯಿ ಬಣ್ಣದ, ನೀಲಿಬಣ್ಣದ.

**बैठक** (ಬೈಠಕ್) ಸ್ತ್ರೀ. ಅಧಿವೇಶನ, ಪರಿಷತ್ತು, ಸಭೆ, ಓಲಗ, ಆಸನ, ರಂಗಸ್ಥಲ. ೨. ವ್ಯಾಯಾಮ, ವಸ್ತುವಿನ ತಳ.

**दंड**– (ದಂಡ–) ಕೂಡುವ ಏಳುವ ವ್ಯಾಯಾಮ.

**बैठा** (ಬೈಠಾ) ವಿ. ಬಡಿಗನ ಉಪಕರಣ, ಬೈಠಾ, ಗಟ್ಟಿಕೂಡ್ರುವಿಕೆ.

**बैठागुणाकार** (ಬೈಠಾಗುಣಾಕಾರ್) ಪು. ಗುಣಾಕಾರದ ಪದ್ಧತಿ (ಗಣಿತದಲ್ಲಿ)

**बैठा पगार** (ಬೈಠಾ ಪಗಾರ್) ಪು. ನಿವೃತ್ತಿ ವೇತನ, ಕೆಲಸವಿಲ್ಲದೆ ದೊರೆತ ವೇತನ.

**बैठी ठेप–कैद** (ಬೈಠೀ ಠೇಪ್–ಕೈದ್) } ಸ್ತ್ರೀ. ಸಾದಾ
**बैठी सजा** (ಬೈಠೀ ಸಜಾ) } ಸೆರೆ, ಸಾದಾ ಶಿಕ್ಷೆ.

**बैत** (ಬೈತ್) ಸ್ತ್ರೀ. ಅರ. ದ್ವಿಪದಿ, ಎರಡು ಚರಣಗಳ ಪದ್ಯ, ಜೋಡಿ, ಯುಗ್ಮ ಯುಗಲ.

**बैते** (ಬೈತೇ) '**बलुते**' ನೋ.

**बैत्या** (ಬೈತ್ಯಾ) ಪು. '**बलुत्या**' ನೋ.

**बैदा** (ಬೈದಾ) ಪು. ಶಬ್ದ ಕಲಂಕ, ದೋಷ, ದೂಷಣೆ, ೨. ಬಂಡಾಯ, ದಾಳಿ, ಗದ್ದಲ, ತುಮುಲಯುದ್ಧ.

**बैरागी** (ಬೈರಾಗೀ) ಪು. ಸನ್ಯಾಸಿ, ವಿರಕ್ತ, ಸಾಧು, ಭಿಕ್ಷುಕ, ದರಿದ್ರ.

**बैल** (ಬೈಲ್) ಪು. ಎತ್ತು, ಹೋರಿ, ೨. ದಡ್ಡಮನುಷ್ಯ, ಅಜ್ಞಾನಿ.

**बैलघाट** (ಬೈಲಘಾಟ್) ಪು. ಘಟ್ಟದ ಮಾರ್ಗ, ಸರಕು ಹೊತ್ತ ಎತ್ತು ಹೋಗುವ ಘಟ್ಟದ ಮಾರ್ಗ, ಎತ್ತಿನ ಘಟ್ಟ.

**बैलपाडा** (ಬೈಲ್‌ಪಾಡಾ) ಪು. ಹೋರಿ, ಕರು.

**बैलबांडा** (ಬೈಲ್‌ಬಾಂಡಾ) ಪು. ಎತ್ತು, ದನಕರು.

**बैलगेला झोपाकेला** (ಬೈಲ್‌ಗೇಲಾ ಝೋಪಾ ಕೇಲಾ) ನಾಣ್ಣುಡಿ. ಎತ್ತು ಓಡಿ ಹೋದ ಮೇಲೆ ಗೋದಲೆ ಮುಚ್ಚಿದರಂತೆ.

**बैसक** (ಬೈಸಕ್) } ಸ್ತ್ರೀ. ಜಮಖಾನೆ, ಹಾಸುಗೆ.
**बैसकार** (ಬೈಸಕಾರ್) }

**बोकड** (ಬೋಕ–ಕುಡ್) ಹೋತು, ಆಡು.

**बोकणा–णी** (ಬೋಕಣಾ–ಣೀ) ಪು. ಸ್ತ್ರೀ. ಕ. (ಬೊಕ್ಕರಿಸು) ಬಾಯಿ ತುಂಬಿತಕ್ಕೊಳ್ಳುವಿಕೆ, ಬೊಕ್ಕರಿಸುವಿಕೆ, ಬಕ್ಕರಿಸುವಿಕೆ.

**बोकंदळ** (ಬೋಕಂದಳ್) ಹಾರಾಡುವಿಕೆ, ಕುಣಿದಾಟ, ಹಾರಾಟ, ನೆಗೆದಾಟ, ಜಿಗಿದಾಟ, ಕುಣಿದಾಟ.

**बोकलणे** (ಬೋಕಲಣೇ) } ಕ್ರಿ. ಅ. ಓಡಿಹೋಗು,
**बोकालणे** (ಬೋಕಾಲಣೇ) } ಓಡು, ಕುಣಿದಾಡು, ಹಾರಾಡು, ಜಿಗಿದಾಡು, ನೆಗೆದಾಡು.

**बोका** (ಬೋಕಾ) ಪು. ಗಂಡು ಬೆಕ್ಕು, ಬಾವುಗ, ಸ್ಥೂಲಮನುಷ್ಯ), ಉಬ್ಬಿದಮನುಷ್ಯ.

**बोके सन्यासी** (ಬೋಕೇ ಸನ್ಯಾಸೀ) ಪು. ಡಾಂಭಿಕ ಸನ್ಯಾಸಿ, ಸೋಗಿನ ಸಾಧು.

**बोकांडी** (ಬೋಕಾಂಡೀ) ಸ್ತ್ರೀ. ಕುತ್ತಿಗೆ.

**–स बसणे** (– ಬಸಣೇ) ಕ್ರಿ. ಅ. ತಲೆಯ ಮೇಲೆ ಬಂದು ಕೂಡು. ೨. ಕಾಡು.

**बोकांदळणे** (ಬೋಕಾಂದಳಣೇ) ಕ್ರಿ. ಬೆಳೆ, ಹಬ್ಬು, ಪಸರಿಸು, ವಿಸ್ತಾರಹೊಂದು, ಚೆಲ್ಲುವರಿ.

**बोकाळणे** (ಬೋಕಾಳಣೇ) ಕ್ರಿ. ಸ. ಹಾವಳಿ ಮಾಡು, ಕಾಡಿಸು.

**बोखरी** (ಬೋಖರೀ) ಸ್ತ್ರೀ., **बोखा** (ಬೋಖಾ) ಪು. ಪಲ್ಲವಿ, ಎಳೆ ಚಿಗುರು, ಅಂಕುರ, ಮೊಗ್ಗು, ಮೊಳಕೆ.

**बोगदा** (ಬೋಗದಾ) ಪು. ಪೋ. ಕಿಂಡಿ ಮಾರ್ಗ, ಸುರಂಗ ಮಾರ್ಗ.

**बोंगा** (ಬೋಂಗಾ) ಪು. ಬಾವು, ಗಂಟು. ೨. ಡುಬ್ಬ, ಬುಗಡೆ, ವಾಳ. ೩. ಬಸುರಿಯ ಹೊಟ್ಟೆ, ನೀರಿಗೆಯ ಗಂಟು, ನೀರಿಗೆಯ ಉಬ್ಬು.

**अंगापेक्षा बोंगा मोठा** (ಅಂಗಾಪೇಕ್ಷಾ ಬೋಂಗಾ ಮೋಠಾ) ಗಾದೆಯ ಮಾತು. ಮೈಗಿಂತ ಮೂಗು ದೊಡ್ಡದು.

**बोच** (ಬೋಚ್) ಸ್ತ್ರೀ. ನೋವು, ಕಸವಿಸಿ.

**बोचकणे** (ಬೋಚಕಣೇ) ಕ್ರಿ. ಸ. ಕೆರೆ, ಚಿವುರು.

**बोचकरणे** (ಬೋಚಕರಣೇ) ಕ್ರಿ. ಸ. ಚಿವುರಿಕೊಳ್ಳು, ಹರಕೊಳ್ಳು, ಉಗುರಿನಿಂದ ಚಿವುರು, ಗೀರು.

**बोचकडा–रा** (ಬೋಚಕಡಾ–ರಾ) ಪು. ಉಗುರಿನ ಬಾಸಳು, ಹಕ್ಕಿಯ ಉಗುರಿನ ಕೊರೆತ.

**बोचका–के** (ಬೋಚಕಾ–ಕೇ) ಪು. ನ. ಗಂಟು, ಗಂಟುಗದಡಿ, ಹೊರೆ, ಭಾರ, ಅವ್ಯವಸ್ಥಿತ ಗಂಟು. ೨. ವಿ. ಚುಚ್ಚುವ, ಮನಸ್ಸಿಗೆ ಹತ್ತುವ.

**बोचखिंड** (ಬೋಚಖಿಂಡ) ಸ್ತ್ರೀ. ಮುಂದಿನ ಎರಡು ಹಲ್ಲಿನ ನಡುವಿನ ಅಂತರ.

**बोचणी** (ಬೋಚಣೀ) ಸ್ತ್ರೀ. ಚುಚ್ಚು ಮಾತು, ಮನಸ್ಸಿಗೆ ಹತ್ತುವ ಮಾತು. ೨. ಪಶ್ಚಾತ್ತಾಪ. ೩. ಅಣಕಿಸುವಿಕೆ, ಮೂದಲಿಸುವಿಕೆ.

**बोचणे** (ಬೋಚಣೇ) ಕ್ರಿ. ಚುಚ್ಚು, ತೂತು ಕೆಡಹು, ಛಿದ್ರಮಾಡು. ೨. ಅಣಕಿಸು, ಮೂದಲಿಸು, ಬೈಯ್ಯು.

**बोचरणे** (ಬೋಚರಣೇ) ಕ್ರಿ. ಉಗುರಿನಿಂದ ಹರಿ, ಉಗುರಿನಿಂದ ಮೈಹರಿ, **बोचकडणे** ನೋ.

**बोचा** (ಬೋಚಾ) ಪು. ಕುಂಡಿ, ತಿಗ, ಮುಕಳಿ ತಿಗ.

**बोचू** (ಬೋಚೂ) ವಿ. ರೋಗ ಸಂಬಂಧವಾದ.

**बोचेरा** (ಬೋಚೇರಾ) ವಿ. ಹಲ್ಲು ಇಲ್ಲದ.

**बोज** (ಬೋಜ) ಪು. ಭಾರ, ವರ್ಚಸ್ಸು, ಮಾನ, ಸನ್ಮಾನ, ನಂಬಿಗೆ, ಶ್ರದ್ಧೆ, ಪ್ರತಿಷ್ಠೆ, ಕೀರ್ತಿ.

**बोजड** (ಬೋಜಡ್) ವಿ. ಅವ್ಯವಸ್ಥಿತ, ಬಹಳ ದೊಡ್ಡ, ದಪ್ಪ, ಭಾರದ, ಒಜ್ಜೆಯಾದ.

**बोजवारा** (ಬೋಜವಾರಾ) ಪು. ದುರ್ಗತಿ. ೨. ಕೆಟ್ಟ ಪರಿಸ್ಥಿತಿ.

**–उडणे** (–ಉಡಣೇ) ಗುಟ್ಟು ಬಯಲಾಗು.

**बोजा –झा** (ಬೋಜಾ –ಝಾ) ಪು. ಒಜ್ಜೆ, ಭಾರ, ಹೊರೆ, ತೂಕ, ಭರತಿ, ಕಷ್ಟ, ಹೊಣೆ.

**बोट** (ಬೋಟ್) ನ. ಬೆರಳು, ಬೊಟ್ಟು. ೨. ಸ್ತ್ರೀ. ಇಂ. ದೋಣಿ, ಹಡಗ, ನೌಕೆ.

**बोट दाखविणे** (ಬೋಟ್ ದಾಖವಿಣೇ) ಕ್ರಿ. ಸ. ಬೆರಳಿನಿಂದ ತೋರಿಸು, ಕಲಂಕಿತನಾಗಿರು, ಬೇರೆಯವರ ಮೇಲೆ ಹಾಕು.

**बोट शिरकणे** (ಬೋಟ್ ಶಿರಕಣೇ) ಕ್ರಿ. ಅ. ಬೆರಳು ಸೇರಿಸು, ಪ್ರವೇಶಿಸು, ಬೆರಳು ಸೇರು, ಸ್ವಲ್ಪ ಆಶ್ರಯ ಪಡೆ.

**बोटावर नाचविणे** (ಬೋಟಾವರ್ ನಾಚವಿಣೇ) ಕ್ರಿ.ಸ. ಬೆರಳಿನ ಮೇಲೆ ಕುಣಿಸು, ಬೇಕಾದಂತೆ ಉಪಯೋಗಿಸು.

**बोट मोडणे** (ಬೋಟ್ ಮೋಡಣೇ) ಕ್ರಿ.ಸ. ಬೆರಳು–ಬೊಟ್ಟು ಮುರಿ, ಶಾಪಿಸು, ನಿಂದಿಸು, ಮನಸ್ಸಿನಲ್ಲಿ ಮರಗು.

**बोट(टा)ळणे** (ಬೋಟ(ಟಾ)ಳಣೇ) ಕ್ರಿ.ಸ. ಚಿವುಟು, ಬೆರಳಿನಿಂದ ಚರ್ಮ ಜಗ್ಗು.

**बोटखत** (ಬೋಟ್‌ಖತ್) ನ. ಲೆಕ್ಕದ ಖಾತೆ, ಕಚ್ಚಾ ಖಾತೆ.

**बोटवा** (ಬೋಟವಾ) ಪು. ಸಣ್ಣಸುರುಳಿ, ಹಾಜರ ಪಟ್ಟಿ.

**बोटवात** (ಬೋಟ್‌ವಾತ್) ಸ್ತ್ರೀ. ಕೈಬತ್ತಿ, ಬೆರಳಿನಿಂದ ಹೊಸೆದ ಬತ್ತಿ.

**बोटाचा सांधा** (ಬೋಟಾಚಾ ಸಾಂಧಾ) ಪು.
**बोटाचे पेर** (ಬೋಟಾಚಾ ಪೇರ್) ನ. } ಬೆರಳಿನ ಕೀಲು, ಬೆರಳಿನ ಗಣಿಕೆ.

**बोटी** (ಬೋಟೀ) ಸ್ತ್ರೀ. ಹಿಂ. ಕುದಿಸಿದಮಾಂಸ, ಕಣಕದ ಮುದ್ದೆ.

**बोटुक** (ಬೋಟುಕ್) ನ. ಹುಣಸೆಯ ಬೊಟ್ಟು.

**बोड** (ಬೋಡ್) ನ. ಬೋಳಿಸಿದ ತಲೆ, ದೈವ, ಹಣೆಬರೆಹ, ಜಾಣತನ, (ನಿನ್ನ) ತಲೆ (ಅಣಕಿನಲ್ಲಿ).

**बोडके** (ಬೋಡಕೇ) ನ. ತಲೆ (ಬೈಗಳಲ್ಲಿ).

**बोंड** (ಬೋಂಡ್) ನ. ಹೀಚು, ಎಳೆ ಮೊಗ್ಗು, ಎಳೆಗಾಯಿ. ೨. ಬೋಂಡ, ಭಜ್ಜಿ.

**बोडका** (ಬೋಡಕಾ ವಿ. ಬೊಕ್ಕತಲೆಯ, ಬೋಳುತಲೆಯ.

**बोडकाविणे** (ಬೋಡಕಾವಿಣೇ) ಕ್ರಿ. ಅ. ಲೂಟಿ ಮಾಡು, ದೋಚಿಕೊಳ್ಳು.

**बोडण** (ಬೋಡಣ) ನ. ದನ-ಕರುಗಳು ಕೂಡುವ ಕೆರೆ, ನೀರಿನ ತಗ್ಗು, ಹಾಲು-ಮೊಸರಿನ ಮಿಶ್ರಣ. ೨. ಒಂದು ಕುಲಾಚಾರ.

**बोडणे** (ಬೋಡಣೇ) ಕ್ರಿ.ಸ. ತಲೆಬೋಳಿಸು, ಬೈಯ್ಯು, ಛೀ ಹಾಕು, ಗತಿಗೆ ಹಚ್ಚು, ಗತಿಗೆಡಿಸು, ಗದ್ದರಿಸು, ಕಿವಿ ಹಿಂಡು.

**बोडंती** (ಬೋಡಂತೀ) ಸ್ತ್ರೀ. ತಲೆ ಬೋಳಿಸುವಿಕೆ, ಗದರಿಸುವುದು, ನಿಂದಿಸುವಿಕೆ, ಕಿವಿ ಹಿಂಡುವಿಕೆ.

**बोडद** (ಬೋಡದ್) ನ. ಹಡಗಿನ ಒಂದು ಬದಿ.

**उजवे बोडद** (ಉಜವೇ ಬೋಡದ್) ನ. ಹಡಗಿನ ಬಲ ಭಾಗ.

**डावे बोडद** (ಡಾವೇ ಬೋಡದ್) ನ. ಹಡಗಿನ ಎಡ ಭಾಗ.

**बोंडफळ** (ಬೋಂಡ್‌ಫಳ್) ನ. ಸತ್ತಪಗಡೆಕಾಯಿ.

**बोंडले** (ಬೋಂಡಲೇ) ನ. ಕೂಸಿಗೆ ಹಾಲು ಕುಡಿಸುವ ಚಮಚೆ.

**बोंडवेचणे** (ಬೋಂಡ್‌ವೇಚಣೇ) ಕ್ರಿ. ಅ. ತೊದಲು ಮಾತಾಡು, ಗದ್ಗದಿಸು, ಉಗ್ಗಿ ಮಾತಾಡು.

**बोडसा–से** (ಬೋಡಸಾ–ಸೇ) ಪು.ನ. ಕಟ್ಟಿಗೆ ಒಡೆಯುವ ಕೂಲಿ.

**बोंडशी** (ಬೋಂಡಶೀ) ಸ್ತ್ರೀ.
**बोंडी** (ಬೋಂಡೀ) ಸ್ತ್ರೀ.
**बोंडूक** (ಬೋಂಡೂಕ್) ಪ. } ಗಂಟು, ಬುಗಟೆ, ಗುಂಡು, ದುಂಡನ್ನ ತುದಿ.

**बोथड** (ಬೋಥಟ್) ವಿ. ಮೊಂಡ, ಮಬ್ಬು, ಮಂದ.

**बोथटणे** (ಬೋಥಟಣೇ) ಕ್ರಿ. ಅ.
**बोथणे** (ಬೋಥಣೇ) } ಮೊಂಡಾಗು, ಮಬ್ಬಾಗು, ಮಂದವಾಗು.

**बोथरखंड** (ಬೋಥರಖಂಡ) ಪು. ಬೊಚ್ಚುಬಾಯಿ, ಹಲ್ಲುಗಳಿಲ್ಲದ ಬಾಯಿ.

**बोथरखिंड** (ಬೋಥರಖಿಂಡ್) ಪು. **बोथरखिंड** ಪು. **बोथरखिंडे** ನ. ಬೊಚ್ಚು ಬಾಯಿ, ಹಲ್ಲಿನ ಖಿಂಡಿ.

**बोथा** (ಬೋಥಾ) ವಿ. ಮೊಂಡವಾದ, ಮೊಂಡ, ಮಂದ.

**बोथविणे** (ಬೋಥವಿಣೇ) ಕ್ರಿ.ಸ. ಮೊಂಡಾಗಿಸು, ಮೊಂಡ ಮಾಡು.

**बोथी** (ಬೋಥೀ) ಸ್ತ್ರೀ. ತೇಪೆ, ಅರಿವೆಯ ತುಂಡು, ಚಿಂದಿ, ಗುರಿಯಿಟ್ಟು ಹೊಡೆಯುವುದು.

**बोद** (ಬೋದ್) ವಿ. ಮಂದ, ಮೋಡ. ೨. ನಾಲ್ಕು ಕಂಬಳಿಯ ಗಂಟು.

**बोध** (ಬೋಧ್) ಪು. ಸಂ. ಉಪದೇಶ, ದೃಷ್ಟಿ, ಜ್ಞಾನ, ಖುಲಾಸೆ, ಶಿಕ್ಷಣ.

**बोधवाद** (ಬೋಧವಾದ್) ಪು. ಸಂ. ಉಪದೇಶ, ಸ್ಪಷ್ಟೀಕರಣ, ನೀತಿವಾದ.

**बोधक** (ಬೋಧಕ್) ವಿ. ಸಂ. ಉಪದೇಶಿಸುವ, ಬೋಧಕ, ನೀತಿ ಹೇಳುವ, ಶಿಕ್ಷಣಕೊಡುವ.

**बोधप्रद** (ಬೋಧಪ್ರದ) ಸಂ. ಉಪದೇಶಿಸುವಂತಹ, ಜ್ಞಾನದಾಯಕ.

**बोधणे** (ಬೋಧಣೇ) ಕ್ರಿ. ಸ. ಉಪದೇಶಿಸು, ತಿಳಿಸಿ ಹೇಳು, ಖುಲಾಸೆಮಾಡು, ಶಿಕ್ಷಣಕೊಡು.

**बोधन** (ಬೋಧನ್) ನ.ಸಂ. ಉಪದೇಶ, ತಿಳಿಸಿಹೇಳು ವಿಕೆ, ಶಿಕ್ಷಣ ಕೊಡುವಿಕೆ.

**बोधलाबावा** (ಬೋಧಲಾಬಾವಾ) ಪು. ಸ್ಥೂಲದೇಹಿ ಮನುಷ್ಯ, ನಗಾರಿ ಹೊಟ್ಟೆಯವನು.

**बोने** (ಬೋನೇ) ನ. ನೈವೇದ್ಯ, ದೇವತಾಹುತಿ ದೇವ ರಿಗೆ ಕೊಟ್ಟ ಆಹುತಿ.

**बोंब** (ಬೋಂಬ್) ಸ್ತ್ರೀ. ಬೊಬ್ಬೆ, ಶಂಖಧ್ವನಿ, ಹೊಯ್–ಯ್ದು–ಕೊಳ್ಳುವಿಕೆ.

**बोबडा** (ಬೋಬಡಾ) ವಿ. ತೊದಲು ಮಾತಾಡುವ, ಉಗ್ಗುವ, ಗೊಗ್ಗರಿಸುವ.

**बोबडकांदा** (ಬೋಬಡ್‌ಕಾಂದಾ) ಪು. ತೊದಲು ಮಾತಾಡುವವನು, ಉಗ್ಗುವವನು.

**बोबडा–बोबडी** (ಬೋಬಡಾ – ಬೋಬಾಡಾ) ಪು. ನೀರಿನಗುಳ್ಳೆ, ನೀರಮೇಲಿನಗುಳ್ಳೆ, ಬುದ್ಬುಲ, ಬುದ್ಬುದ, ಶೂನ್ಯ, ಮೋಸ.

**बोबडी** (ಬೋಬಡೀ) ಸ್ತ್ರೀ. ಅಂಜಿಕೆಯಿಂದ ಬಾಯಿ ಕಟ್ಟುವಿಕೆ.

**–वळणे** (–ವಳಣೇ) ಕ್ರಿ. ಅ. ಬಹಳ ಅಂಜಿಕೆ ಯಾಗು, ಬಾಯಿಯಿಂದ ಶಬ್ದ ಹೊರಡದಾಗು.

**बोंबलणे** (ಬೋಂಬಲಣೇ) ಕ್ರಿ. ಅ. ಬೊಬ್ಬೆಹೊಡೆ· ಶಂಖ ಊದು, ತಕರಾರು ಮಾಡು.

**बोंबल्या गणेश** (ಬೋಂಬಲ್ಯಾ ಗಣೇಶ್) ಪು. ದೂರು ಹೇಳುವವ.

**बोंबाबोंब** (ಬೋಂಬಾಬೋಂಬ್) ಸ್ತ್ರೀ. ಒದರಾಟ, ಚೀರಾಟ, ಕೂಗಾಟ, ತಕರಾರು.

**बोंबील** (ಬೋಂಬೀಲ್) ಪು. ಒಣಗಿಸಿದ ಮೀನ.

**बोंबाळ** (ಬೋಂಬಾಳ್) ಪು. ಅವಸರ, ಲಗುಬಗೆ, ಗೊಂದಲ, ಗಡಿಬಿಡಿ.

**गावांत लगीन कुत्र्याला बोंबाळ** (ಗಾವಾತ್ ಲಗೀನ್ ಕುತ್ರ್ಯಾಲಾ ಬೋಂಬಾಳ್) (ಗಾದೆಯಮಾತು) ಮನೆಯಲ್ಲಿ ಮದುವೆ ಮಂಗನಿಗೆ ಕುಣಿದಾಟ.

**बोभाटणे** (ಬೋಭ್ರಾಟಣೇ) ಕ್ರಿ. ಅ. ಕುಪ್ರಸಿದ್ಧನಾಗು, ದುರ್ಲೌಕಿಕವಾಗು.

**बोभाटा** (ಬೋಭಾಟಾ) ಕುಪ್ರಸಿದ್ಧಿ, ದುಷ್ಕೀರ್ತಿ.

**बोभावणे** (ಬೋಭಾವಣೇ) ಕ್ರಿ. ಅ. ಗೂಗೆಯಂತೆ ಒದರು, ತಿರಸ್ಕರಿಸು, ಹೀಗಳೆ, ಅಬ್ಬರಿಸಿ ಬೆನ್ನು ಹತ್ತು, ಹೀಯಾಳಿಸು.

**बोर** (ಬೋರ್) ಸ್ತ್ರೀ. ಬೋರೇಹಣ್ಣು, ಬೋರೆಯ ಗಿಡ.

**बोरातली कीड** (ಬೋರಾತಲೀ ಕೀಡ್) ಸ್ತ್ರೀ. ಬೋರೆ ಹಣ್ಣಿನೊಳಗಿನ ಹುಳ, ಅತ್ಯಂತ ಕೋಮಲ ಸುಂದರ ಸ್ತ್ರೀ.

**बोरीस बोरे आणणे** (ಬೋರೀಸ್ ಬೋರೇ ಆಣಣೇ) ವಶದಲ್ಲಿಟ್ಟುಕೊಳ್ಳು, ಸ್ವಾಧೀನದಲ್ಲಿರಿಸು.

**ज्या गावाच्या बोरी त्याच गावायचा बाभळी** (ಜ್ಯಾಗಾವಚಾ ಬೋರೀ ತ್ಯಾಚಗಾವಾಚ್ಯಾ ಬಾಭಳೀ) (ಗಾದೆಯಮಾತು) ಎಲ್ಲರೂ ಒಂದೇ ಮಾದರಿಯವರು.

**बोरखडा** (ಬೋರಖಡಾ) ಪು. ಹರಳು, ಜಲ್ಲಿ, ಬೆನಕ, ಬೆಳಚಿಗಲ್ಲು, ಸ್ಫಟಿಕ ಶಿಲೆ.

**बोरा** (ಬೋರಾ) ಪು. ಹಿಂ. ಚಾಪೆ, ಚೀಲ, ಹುಲ್ಲಿನ ತಟ್ಟೆ, ಹುಲ್ಲಿನ ಚಾಪೆ.

**बोरू** (ಬೋರೂ) ಪು. ಲೆಕ್ಕಣಿಕೆಯ ಕಡ್ಡಿ, ಗಲಗು.

**बोऱ्या** (ಬೋರ್ಯಾ) ಪು. ತಟ್ಟಿನ ಚೀಲ.

**बोऱ्यावाजणे, उडणे होणे** (ಬೋರ್ಯಾವಾಜಣೇ, ಉಡಣೇ– ಹೋಣೇ) ಕ್ರಿ. ಅ. ಅವಮಾನಿತನಾಗು, ನಾಶ ಹೊಂದು, ಅಪಕೀರ್ತಿತನಾಗು, ಕಲಂಕಹೊಂದು, ಕಲಂಕಿತನಾಗು.

**बोल** (ಬೋಲ್) ಪು. ಭಾಷಣ, ಸುಭಾಷಿತ,ವಚನ, ದೋಷ.

**बोल लावणे–ठेवणे** (ಬೋಲ್ ಲಾವಣೇ–ಠೇವಣೇ) ಕ್ರಿ. ಸ. ದೋಷಹಚ್ಚು, ಆರೋಪಹೊರಿಸು.

**बोलण्यात बोलणे नसणे** (ಬೋಲಣ್ಯಾತ್ ಬೋಲಣೇ ನಸಣೇ) ಕ್ರಿ.ಅ. ವಿಶ್ವಾಸ ಹುಟ್ಟದಂತೆ ಮಾತಾಡು, ಮಾತು ತಿರುವು.

**बोलका** (ಬೋಲಕಾ) ವಿ. ಮಾತಿನಮಲ್ಲ. ೨. ಸ್ಪಷ್ಟ ಗೊಳಿಸುವ.

**बोल घेवडा** (ಬೋಲ್ ಘೇವಡಾ) ವಾಚಾವೀರ, ಬರಿಯ ಮಾತಿನಲ್ಲಿ ಜಾಣ.

**बोलणे** (ಬೋಲಣೇ) ಕ್ರಿ. ಅ. ಮಾತಾಡು, ನುಡಿ, ಅಣಕಿಸು. ೨. ನಿಂದಿಸು, ಬೈಯ್ಯು, ಆರೋಪಹಚ್ಚು.

**बोलून घेणे** (ಬೋಲೂನ್ ಘೇಣೇ) ಮಾತಾಡಿಸಿ ಕೊಳ್ಳು, ದೂಷಣೆಹೊಂದು, ನಿಂದೆಗೆಗುರಿಯಾಗು.

**बोलून गोड** (ಬೋಲೂನ್ ಗೋಡ್) (ಬರಿಯ) ಮಾತಿನಲ್ಲಿ ಸೌಮ್ಯ.

**बोलणे चालणे** (ಬೋಲಣೇ ಚಾಲಣೇ) ನ. ನಡಾವಳಿ.

**बोलबाला** (ಬೋಲ್‌ಬಾಲಾ) ಪು. ಹಿಂ. ಉತ್ಕರ್ಷ, ಏಳಿಗೆ, ಊರ್ಜಿತಸ್ಥಿತಿ, ಸಂಪತ್ತು, ಸೌಭಾಗ್ಯ, ಸಮೃದ್ಧಿ.

**बोलभांड** (ಬೋಲ್‌ಭಾಂಡ್) ವಿ. ಮಾತುಮಾತಿ ನಲ್ಲಿಯೇ ಜಗಳಾಡುವ, ಮಾತಿನಲ್ಲಿಯೇ ಜಗ ಳಾಡುವ.

**बोलवा** (ಬೋಲವಾ) ಪು. } ಜನರ ಹೇಳುವಿಕೆ,
**बोलवाय** (ಬೋಲವಾಯ) ಸ್ತ್ರೀ. } ಜನರ ಹೇಳಿಕೆ, ೨. ಲೋಕ ನಿಂದೆ.

**बोलविणे, बोलावणे** (ಬೋಲವಿಣೇ, ಬೋಲಾವಣೇ) ಕ್ರಿ. ಸ. ಕರೆ, ಆಮಂತ್ರಿಸು, ಕರೆಯಿಸು, ೨. ನ. ಆಮಂತ್ರಣ, ನಿಮಂತ್ರಣ, ಕರೆಯುವಿಕೆ.

**बोलाचाली** (ಬೋಲಾಚಾಲೀ) ಸ್ತ್ರೀ. ಚರ್ಚೆ, ವಾದ, ಜಗಳ.

**बोलाफुलास गाठ** (ಬೋಲಾಫುಲಾಸ್ ಗಾಠ್) (ಗಾದೆಯ ಮಾತು) ಕಾಗೆ ಕೂಡುವುದಕ್ಕೂ ಟೊಂಗೆ ಮುರಿಯುವುದಕ್ಕೂ ಗಂಟು.

**बोलावणेकरी** (ಬೋಲಾವಣೇಕರೀ) ಪು. ನಿಮಂತ್ರಕ, ಆಮಂತ್ರಕ, ಕರೆಯಲಿಕ್ಕೆಹೋದ ಆಳು, ಗೃಹಸ್ಥ.

**बोली** (ಬೋಲೀ) ಸ್ತ್ರೀ. ಮಾತು, ಭಾಷೆ, ಉಪ ಭಾಷೆ. ೨. ಒಪ್ಪುವಿಕೆ, ವಚನಕೊಡುವಿಕೆ.

**बोलीचाली** (ಬೋಲೀಚಾಲೀ) ಮಾತು–ಕತೆ, ಮಾತು ಕತೆಗಾಗಿ ಕೂಡಿದ ಸಭೆ, ಸಂಪ್ರದಾಯ.

**बोलून चालून** (ಬೋಲೂನ್ ಚಾಲೂನ್) ಕ್ರಿ.ವಿ. ಹೇಳಿ–ಕೇಳಿ, ಗೊತ್ತಿದ್ದಂತೆ.

**बोहणी–नी** (ಬೋಹಣೀ–ನೀ) ಸ್ತ್ರೀ. ಮೊದಲನೆಯ ಗಿರಾಕಿ, ಭವಾನಿ, ಮೊಟ್ಟಮೊದಲನೆಯ ಮಾರಾಟ.

**बोहणीचे प्रहरी** (ಬೊಹಣೀಚೇ ಪ್ರಹರೀ) ಕ್ರಿ. ವಿ. ಅಂಗಡಿಯನ್ನು ತೆರೆಯುತ್ತಲೆ.

**बोहरा–बोहरी** (ಬೋಹರಾ–ಬೋಹರೀ) ಪು. ಮುಸ ಲ್ಮಾನರಲ್ಲಿಯ ಒಂದು ಜಾತಿ.

**बोळ** (ಬೋಳ್) ಪು. ಸಂದಿ, ಸಣ್ಣ ಬೀದಿ.

**बोळ पाडणे** (ಬೋಳ್ ಪಾಡಣೇ) ಸಂದಿಮಾಡು, ಹಾದಿಕೆಡಹು, ನಡೆದಾಡು.

**बोळ घालणे** (ಬೋಳ್ ಘಾಲಣೇ) ಕ್ರಿ. ವ್ಯರ್ಥ ಮಾತಾಡುತ್ತಿರು, ಕೆಲಸ ಕೆಡಿಸು, ಮಾತುಕೆಡಿಸು.

**बोळके** (ಬೋಳಕೇ) ನ. ಕುಡಿಕೆ, ಮಣ್ಣಿನ ಕುಡಿಕೆ. ೨. ಹಲ್ಲಿಲ್ಲದ ಬಾಯಿ.

**बोळणे** (ಬೋಳಣೇ) ಕ್ರಿ. ಗಟ್ಟಿಯಾಗು, ಮನಸ್ಸಿನಿಂದ ತೆಗೆದುಹಾಕು, ಮೊಂಡಾಗು. ೨. ನುಣುಪುಮಾಡು, ಮೆತ್ತಗೆಮಾಡು.

**बोळवण** (ಬೋಳವಣ) ಸ್ತ್ರೀ. ಮದುಮಗಳನ್ನು ಅತ್ತೆಯ ಮನೆಗೆ ಕಳುಹಿಸುವಿಕೆ.

**बोळविणे** (ಬೋಳವಿಣೇ) ಕ್ರಿ. ಸ. ಕಳುಹಿಸು, ದೂರ ಓಡಿಸು, ಮರೆಯಿಸು.

**बोळा** (ಬೋಳಾ) ಪು. ಅರಿವೆಯ ಸುರುಳಿ.

**बोळा फिरविणे** (ಬೋಳಾ ಫಿರವಿಣೇ) ಕ್ರಿ. ಸ. ಕೆಲಸ ಕೆಡಿಸು.

**बोळावा** (ಬೋಳಾವಾ) ಪು. ಬೆಂಗಾವಲು, ಮೈಗಾ ವಲು, ಮೈಗಾವಲಿನವ, ಪಹರೆಯವ.

**बौद्ध** (ಬೌದ್ಧ) ಪು. ಬುದ್ಧನ ಪಂಥದ, ಬೌದ್ಧನ ಅನುಯಾಯಿ.

**बौद्धिक** (ಬೌದ್ಧಿಕ) ವಿ. ಬುದ್ಧಿಗೆ ಸಂಬಂಧಿಸಿದ, ಶೈಕ್ಷಣಿಕ.

**ब्याण्णव** (ಬ್ಯಾಣ್ಣವ್) ವಿ. ತೊಂಬತ್ತೆರಡು (೯೨).

**ब्याद–ध** (ಬ್ಯಾದ್–ಧ್) ಸ್ತ್ರೀ.ಅರ. ಬೇನೆ, ಮನ ಸ್ಸಂತಾಪ.

**ब्यायशी** (ಬ್ಯಾಯಶೀ) ಎಂಬತ್ತೆರಡು (೮೨).

**–नकाढणे** (–ನಕಾಢಣೇ) ಕ್ರಿ. ಅ. ಪಿಟ್ಟೆಂದು ಮಾತಾಡದಿರು.

**ब्र** (ಬ್ರ) ಒಂದು ಅಕ್ಷರ ಕೂಡ (ಇಲ್ಲ).

**ब्रह्म** (ಬ್ರಹ್ಮ) ನ. ಜಗತ್ಕರ್ತೃ, ಜಗದುತ್ಪಾದಕ, ಬ್ರಹ್ಮ.

**ब्रह्म मिळणे, सांपडणे** (ಬ್ರಹ್ಮ ಮಿಳಣೇ, ಸಾಂಪಡಣೇ) ಕ್ರಿ. ಅ. ದೇವನೊಲಿ, ಸಾಕ್ಷಾತ್ಕಾರವಾಗು, ಅಲಭ್ಯ-ಆಶ್ಚರ್ಯಕರ ವಸ್ತು ದೊರೆ.

**ब्रह्मकटाह** (ಬ್ರಹ್ಮಕಟಾಹ) ಪು. } ಜಗತ್ತು, ಸಂಸಾರ,
**ब्रह्मगोल** (ಬ್ರಹ್ಮಗೋಲ್) ಪು. } ವಿಶ್ವ.

**ब्रह्मकपाट** (ಬ್ರಹ್ಮಕಪಾಟ್) ನ. } ಪಂಚಾಯತಿ-
**ब्रह्मकपट** (ಬ್ರಹ್ಮಕಪಟ) ನ. } ಜಿಗುಪ್ಸೆ.

**ब्रह्मकर्म** (ಬ್ರಹ್ಮಕರ್ಮ) ನ. ಸಂ. ಬ್ರಾಹ್ಮಣರ ದೈನಂದಿನ ದೈವಿಕ ಕರ್ಮ, ಬ್ರಹ್ಮಕರ್ಮ.

**ब्रह्मगाठ** (ಬ್ರಹ್ಮಗಾಠ್) ಸ್ತ್ರೀ. ಬ್ರಹ್ಮಗಂಟು, ಶಾಶ್ವತಗಂಟು, ಯಜ್ಞೋಪವೀತದ ಗಂಟು.

**ब्रह्मघोळ** (ಬ್ರಹ್ಮಘೋಳ್) ಪು. ಮಹಾಗೊಂದಲ, ವರ್ಣಸಂಕರ, ಜಾತಿಸಂಕರ, ಪವಿತ್ರಾ ಪವಿತ್ರಸಂಕರ.

**ब्रह्मचारी** (ಬ್ರಹ್ಮಚಾರೀ) ಪು. ಬ್ರಹ್ಮಚರ್ಯ ಪಾಲಿಸುವವ, ಮುಂಜಿವೆಯಿಂದ ಮದುವೆಯ ಕಾಲದಬಟು.

**ब्रह्मतेज** (ಬ್ರಹ್ಮತೇಜ) ನ. ಸಂ. ಬ್ರಾಹ್ಮಣನ ವರ್ಚಸ್ಸು. ೨. ವಿದ್ಯೆಯ ಪ್ರಭಾವ.

**ब्रह्मद्वेष** (ಬ್ರಹ್ಮದ್ವೇಷ) ಪು. ಸಂ. ಬ್ರಾಹ್ಮಣರ ದ್ವೇಷ.

**ब्रह्मनिष्ठ** (ಬ್ರಹ್ಮನಿಷ್ಠ) ವಿ. ಸಂ. ಬ್ರಹ್ಮಧ್ಯಾನಮಗ್ನ.

**ब्रह्मयज्ञ** (ಬ್ರಹ್ಮಯಜ್ಞ) ನ. ಸಂ. ವೇದಾಭ್ಯಾಸ.

**ब्रह्मरस** (ಬ್ರಹ್ಮರಸ) ಪು. ಸಂ. ಬ್ರಹ್ಮಜ್ಞಾನಾನಂದ, ಬ್ರಹ್ಮಾನಂದ.

**ब्रह्मराक्षस** (ಬ್ರಹ್ಮರಾಕ್ಷಸ) ಪು. ಸಂ. ದೊಡ್ಡಭೂತ, ಬ್ರಾಹ್ಮಣ ಪಿಶಾಚಿ.

**ब्रह्मरेखा-षा** (ಬ್ರಹ್ಮರೇಖಾ-ಷಾ) ಸ್ತ್ರೀ. ಸಂ. ( ದೈವ,
**ब्रह्मलिखित** (ಬ್ರಹ್ಮಲಿಖಿತ) ನ. ( ಭಾಗ್ಯ,
**ब्रह्मलेख** (ಬ್ರಹ್ಮಲೇಖ್) ಪು. ಸಂ. ( ದೈವ ಲೇಖ, ಭಾಗ್ಯರೇಷೆ, ಶಾಶ್ವತನುಡಿ. ಬದಲಿಸಿದ ಭಾಷಣ, ಪರಿವರ್ತನ.

**ब्रह्मवृंद** (ಬ್ರಹ್ಮವೃಂದ) ಪು. ಸಂ. ಬ್ರಹ್ಮಸಮಾಜ' ಬ್ರಾಹ್ಮಣರ ಗುಂಪು.

**ब्रह्मवेत्ता** (ಬ್ರಹ್ಮವೇತ್ತಾ) ಪು. ಸಂ. ವೇದಾಂತಿ, ಪಂಡಿತ.

**ब्रह्मसूत्र** (ಬ್ರಹ್ಮಸೂತ್ರ) ನ. ಸಂ. ಬಾದರಾಯಣನ ವೇದಾಂತ ಸೂತ್ರಗಳು, ಬ್ರಹ್ಮಾಜ್ಞೆ, ಬ್ರಹ್ಮನ ಆದೇಶ.

**ब्रह्महत्या** (ಬ್ರಹ್ಮಹತ್ಯಾ) ಸ್ತ್ರೀ. ಸಂ. ಬ್ರಾಹ್ಮಣನ ಕೊಲೆ.

**ब्रह्मज्ञान** (ಬ್ರಹ್ಮಜ್ಞಾನ) ನ. ಸಂ. ತತ್ವಜ್ಞಾನ, ಬ್ರಹ್ಮಜ್ಞಾನ, ದಿವ್ಯಜ್ಞಾನ.

**ब्रह्मा** (ಬ್ರಹ್ಮಾ) ಪು. ಬ್ರಹ್ಮದೇವರು, (ತ್ರಿಮೂರ್ತಿಗಳಲ್ಲಿ ಮೊದಲಿನವ)

**ब्रह्मांड** (ಬ್ರಹ್ಮಾಂಡ) ನ. ಸ. ಜಗತ್ತು, ವಿಶ್ವ.

**ब्रह्मानंद** (ಬ್ರಹ್ಮಾನಂದ) ಪು. ಸಂ. ಬ್ರಹ್ಮಜ್ಞಾನದ ಆನಂದ, ಮಹಾ ಆನಂದ.

**ब्रह्मीभूत** (ಬ್ರಹ್ಮೀಭೂತ) ವಿ. ಮಡಿದ (ಸನ್ಯಾಸಿ) ಬ್ರಹ್ಮಸ್ವರೂಪಿಯಾದ.

**ब्राह्मी** (ಬ್ರಹ್ಮೀ) ಸ್ತ್ರೀ. ನ. ಬಳ್ಳಿ, ಬ್ರಹ್ಮಬಳ್ಳಿ, ಒಂದು ಔಷಧಿ.

**ब्राह्मण** (ಬ್ರಾಹ್ಮಣ) ಪು. ಬ್ರಾಹ್ಮಣ, ಪ್ರಥಮ ವರ್ಣ.

**ब्राह्मण भोजन** (ಬ್ರಾಹ್ಮಣಭೋಜನ) ನ. ಬ್ರಾಹ್ಮಣರಿಗೆ ಸಮಾರಾಧನೆ, ಊಟಹಾಕುವಿಕೆ.

**ब्राह्मणी** (ಬ್ರಾಹ್ಮಣೀ) ವಿ. ಸಂ. ಬ್ರಾಹ್ಮಣ ಸಂಬಂಧದ, ಬ್ರಾಹ್ಮಣನ ಪತ್ನಿ, ಬ್ರಾಹ್ಮಣ ಜಾತಿಯ ಹೆಂಗಸು.

**ब्रीद** (ಬ್ರೀದ್) ನ. ಬಿರುದು, ಹೆಮ್ಮೆ, ಅಭಿಮಾನ, '**बिरीद**' ನೋ.

## भ ಭ

**भ** (ಭ) ಪವರ್ಗದ ೪ ನೆಯ ಅಕ್ಷರ. ಇಪ್ಪತ್ತು ನಾಲ್ಕನೆಯ ವರ್ಗೀಯ ವ್ಯಂಜನ.

**भक** (ಭಕ್) ಪು. ಅನ್ನಪಾನ, ಕೂಳು, ಅನ್ನ, ಆಹಾರ, ತಿಂಡಿ, ಮೇವು.

**भकभक** (ಭಕ್‌ಭಕ್) ಸ್ತ್ರೀ. ಕಾರದ ಉರಿ.

**भकाट** (ಭಕಾಟ್) ನ. ಹೊಟ್ಟೆಯಗೂಡು, ಪಕ್ಕೆಲುಬು.

**भकाटी-ळी** (ಭಕಾಟೀ ಭಕಾಳೀ) ಸ್ತ್ರೀ. ಹೊಟ್ಟೆಗೂಡು, ಪಕ್ಕೆಲುಬಿನ ಗೂಡು.

**भकांडा-डी** (ಭಕಾಂಡಾ-ಡೀ) ಪು. ತಡಪಡಿಸುವಿಕೆ.

**भकाभक** (ಭಕಾಭಕ್) ಸ್ತ್ರೀ. ಕಾರಿಕೆ ವಾಂತಿಯ ಶಬ್ದ.

**भकावणे** (ಭಕಾವಣೇ) ಕ್ರಿ. ಅ. ಹಾದೀತಪ್ಪು, ತಪ್ಪು ತಿಳುವಳಿಕೆಯನ್ನುಂಟುಮಾಡು, ಕಂಗೆಡಿಸು, ಗಾಬರಿಗೊಳಿಸು, ಭಂಗಪಡಿಸು.

**भकास** (ಭಕಾಸ್) ವಿ. ಹಾಳು ಸುರಿಯುವ.

**भक्कम** (ಭಕ್ಕಮ್) ವಿ. ಹಿಂ. ಪುಷ್ಟ, ಗಾತ್ರವಾದ, ಸಾಕಷ್ಟಾದ.

**भक्त** (ಭಕ್ತ) ಪು. ಸಂ. ಭಕ್ತ.

**भक्तवत्सल** (ಭಕ್ತವತ್ಸಲ) ವಿ. ಸಂ. ಭಕ್ತರಮೇಲೆ ಅನುಗ್ರಹ ಮಾಡುವ.

**भक्ति** (ಭಕ್ತಿ) ಸ್ತ್ರೀ. ಸಂ. ಭಕ್ತಿ, ನಲ್ಮೆ ೨. ವಿಶ್ವಾಸ, ಪ್ರೀತಿ.

**भक्तिभाव** (ಭಕ್ತೀಭಾವ) ಪು. ಸಂ. ಆಸಕ್ತಿ, ಭಕ್ತಿ.

**भक्तिवंत** (ಭಕ್ತಿವಂತ) ವಿ. ಸಂ. ಧಾರ್ಮಿಕ, ಭಕ್ತಿವಂತ.

**भक्तिमार्ग** (ಭಕ್ತಿಮಾರ್ಗ) ಪು. ಸಂ. ಭಕ್ತಿಮಾರ್ಗ.

**भक्तिहीन** (ಭಕ್ತಿಹೀನ) ವಿ. ಸಂ. ಭಕ್ತಿಯಿಲ್ಲದವ, ದುರ್ಬಲ ಭಕ್ತಿಯ.

**भतकीण** (ಭಕ್ತೀಣ) ಸ್ತ್ರೀ. ಭಕ್ತೆ, ಭಕ್ತಿವಂತಿ.

**भक्तचा** (ಭಕ್ತ್ಯಾ) ಕ್ರಿ. ವಿ. ಸಂ. ಭಕ್ತಿಯಿಂದ, ಭಕ್ತಿದ್ವಾರಾ, ಭಕ್ತಿಮಾರ್ಗದಿಂದ.

**भग** (ಭಗ) ಪು. ಸಂ. ಯೋನಿ, ಸ್ತ್ರೀ ಜನನೇಂದ್ರಿಯ.

**भंग** (ಭಂಗ್) ಪು. ಸಂ. ಒಡಕು, ಮುರಿಯುವಿಕೆ. ೨. ಸ್ತ್ರೀ ಹಿಂ. (ಭಂಗ್) ಮಾದಕ ಪೇಯ.

**भंगड–ट** (ಭಂಗಡ–ಟ್) ವಿ. ಭಂಗ್ ಸೇವಿಸುವ, ಭಂಗ್ ತಿನ್ನುವ, ಕುಡಿಯುವ.

**भंग्या भंगी** (ಭಂಗ್ಯಾ–ಭಂಗೀ) ವಿ. ಭಂಗ್ ಸೇವಿಸುವವ.

**भंगणे** (ಭಂಗಣೇ) ಕ್ರಿ. ಅ. ಮುರಿ, ನಾಶವಾಗು.

**भगत** (ಭಗತ್) ಪು. ಪೂಜೆಮಾಡುವವ, ಅನುಯಾಯಿ, ಭೂತ – ಪಿಶಾಚಿಗಳನ್ನು ವಶಮಾಡಿಕೊಂಡವ, ಭಗತ.

**भगतकी** (ಭಗತಕೀ) ಸ್ತ್ರೀ. ಭಗತನ ವ್ಯವಸಾಯ.

**भगद(दा)ड** (ಭಗದ(ದಾ)ಡ್) ನ. ದೊಡ್ಡ ಕಿಂಡಿ.

**भगदंर** (ಭಗಂದರ) ನ. ಸಂ. ಮಲದ್ವಾರದ ಹುಣ್ಣು.

**भगभग** (ಭಗಭಗ್) ಸ್ತ್ರೀ. ಉರಿತ.

**भगभगणे** (ಭಗಭಗಣೇ) ಕ್ರಿ. ಅ. ಉರಿ, ಬೆಂಕಿಬೀಳು.

**भगभगाट** (ಭಗಭಗಾಟ್) ಪು. ಉರಿಯುವಿಕೆ.

**भगभगीत** (ಭಗಭಗೀತ್) ವಿ. ಬಿಸಿಯಾದ, ಅತ್ಯಂತ ತೀಕ್ಷ್ಣವಾದ, ಭಗಭಗಿಸುವ, ಅತ್ಯಂತ ಕಾರದ.

**भगर** (ಭಗರ್) ವರಿ, ವರಿಅಕ್ಕಿ ಉಪವಾಸದ ಅಕ್ಕಿ.

**भगरा** (ಭಗರಾ) ಪು. ಕುಟ್ಟಿದ ವರಿಅಕ್ಕಿ.

**भगल** (ಭಗಲ್) ಸ್ತ್ರೀ. ಮೋಸ, ಯುಕ್ತಿ, ಹಂಚಿಕೆ, ಅಪಮಾನ, ಮಾನಭಂಗ.

**भगल उडणे** (ಭಗಲ್ ಉಡಣೇ) ಕ್ರಿ. ಅ. ಫಜೀತಿಯಾಗು, ಗುಟ್ಟು ರಟ್ಟಾಗು.

**भगल भावार्थी** (ಭಗಲ್ ಭಾವಾರ್ಥಿ) ವಿ. ಸರಳವಾದ, ಸಾತ್ವಿಕ ಒಂಟಿ, ಸಾಮಾನ್ಯ, ಶುದ್ಧ, ನಿಷ್ಕಪಟ.

**भगळी–ळ्या** (ಭಗಳೀ–ಳ್ಯಾ) ಪು. ಕಪಟಿ, ವಂಚಕ, ವೇಷಧಾರಿ, ಡಾಂಭಿಕ, ಕಪಟ ಭಕ್ತಿಯ.

**भगवन्त–वान** (ಭಗವಂತ–ವಾನ) ಪು. ಸಂ. ಈಶ್ವರ, ದೇವರು.

**भगवती** (ಭಗವತೀ) ಸ್ತ್ರೀ. ಸಂ. ಪಾರ್ವತಿ, ದೇವಿ. ೨. ಕಾರದ ಪುಡಿ.

**भगवतकृपा** (ಭಗವತ್‌ಕೃಪಾ) ಸ್ತ್ರೀ. ಸಂ. ಈಶ್ವರಾನುಗ್ರಹ.

**भगवत्सत्ता** (ಭಗವತ್ಸತ್ತಾ) ಸ್ತ್ರೀ. ಸಂ. ಈಶ್ವರನ ಅಧಿಕಾರ, ಈಶ್ವರನ ಪ್ರಭುತ್ವ.

**भगवदिच्छा** (ಭಗವದಿಚ್ಛಾ) ಸ್ತ್ರೀ. ಸಂ. ಈಶ್ವರೇಚ್ಛೆ.

**भगवा** (ಭಗವಾ) ವಿ. ಗೇರು–ಕೇವೆ ಬಣ್ಣದ ಸನ್ಯಾಸಿಗಳ ವಸ್ತ್ರದಂಥ ಬಣ್ಣದ.

**भगवाझेंडा** (ಭಗವಾಝೇಂಡಾ) ಪು. ಶಿವಾಜಿಯ, ಮರಾಠರ ಹಿಂದುಗಳ ಧ್ವಜ.

**भंगसाळ** (ಭಂಗಸಾಳ್) ದೊಡ್ಡಮನೆ.

**भगळ** (ಭಗಳ್) }
**भगास** (ಭಗಾಸ್) } ವಿ. ಹಾಳಾದ, ನಾಶವಾದ, ಉಧ್ವಸ್ತವಾದ.
**भगाड** (ಭಗಾಡ್) }

**भगिनी** (ಭಗಿನೀ) ಸ್ತ್ರೀ. ಸಂ. ಸಹೋದರಿ, ಸೋದರಿ.

**भंगी** (ಭಂಗೀ) ಪು. ಹಲಾಲ ಖೋರ, ಭಂಗಿ.

**भंगीचंगी** (ಭಂಗೀಭಂಗೀ) ವಿ. ಕೆಟ್ಟ ಚಟದ, ಸ್ತ್ರೀ ಲೋಲುಪ, ಕಾಮುಕ.

**भगीरथ प्रयत्न** (ಭಗೀರಥ ಪ್ರಯತ್ನ) ಮಹಾ ಪ್ರಯತ್ನ, ವಿಶ್ವ ಪ್ರಯತ್ನ.

**भंगुर** (ಭಂಗುರ) ವಿ. ಸಂ. ಒಡೆಯುವ, ಒಡಕ.

**भगेंद्र** (ಭಗೇಂದ್ರ) ಪು. ಸಂ. ವ್ರಣ, ಹುಣ್ಣು, ಮಲದ್ವಾರದ ಹತ್ತಿರದ ಸೋರುವ ಹುಣ್ಣು. '**भगदंर**' ನೋ.

**भगेय** (ಭಗೇಯ) ನ. ಸಂ. ವಿಡಂಬನೆ, ಹಾಸ್ಯ, ಲೇವಡಿ, ಅಣುಕು, ಕುಚೋದ್ಯ.

**भग्न** (ಭಗ್ನ) ವಿ. ಸಂ. ಒಡೆದ, ತುಂಡಾದ, ಫಜೀತಿಯಾದ, ಚೂರಾದ, ಸೋಲಿಸಿದ, ಮುರಿಬಡಿದ ಓಡಿಸಿದ.

**भचक्र** (ಭಚಕ್ರ) ನ. ಸಂ. (ಜೋತಿಷ್ಯದಲ್ಲಿ) ರಾಶಿ ಚಕ್ರ, ರಾಶಿಮಂಡಲ.

**भजक** (ಭಜಕ) ವಿ. ಸಂ. ಪೂಜಿಸುವವ, ಸುತ್ತಿಸುವ, ಕೀರ್ತನೆ ಮಾಡುವ.

**भंजक** (ಭಂಜಕ) ವಿ. ಸಂ. ನಾಶಮಾಡುವ, ತುಂಡು ಮಾಡುವ.

**भजणे** (ಭಜಣೇ) ಕ್ರಿ. ಸಂ. ಭಜಿಸು, ಸ್ತುತಿಸು, ಭಕ್ತಿಮಾಡು, ಸತ್ಕರಿಸು, ಪ್ರವೇಶಿಸು.

**भजन** (ಭಜನ್) ನ. ಸಂ. ಭಜನೆ, ಸ್ತುತಿ, ಪೂಜೆ, ಭಜನಗೀತೆ, ದೇವರ ಹಾಡು.

**भजन पूजन** (ಭಜನ್ ಪೂಜನ್) ಪು. ಸಂ. ಪೂಜೆ–ಅರ್ಚೆ.

**भजनशील** (ಭಜನಶೀಲ) } ವಿ. ಧಾರ್ಮಿಕ ಭಕ್ತಿಯುಳ್ಳ
**भजनी** (ಭಜನೀ) }
ಪೂಜೆ ಅರ್ಚೆ . ಾಡುವ.

**भजनीय** (ಭಜನೀಯ) ವಿ. ಸಂ. ಪೂಜೆಗೆ ಯೋಗ್ಯ, ಭಜಿಸಲಿಕ್ಕೆ ಯೋಗ್ಯ.

**भंजक** (ಭಂಜಕ) ಪು. ಸಂ. ಒಡೆಯುವ, ತುಂಡು ಮಾಡುವ.

**भंजन** (ಭಂಜನ) ನ. ಸಂ. ಒಡೆಯುವಿಕೆ, ತುಂಡು ಮಾಡುವಿಕೆ.

**भंजाळ** (ಭಂಜಾಳ್) ವಿ. ತೊಂದರೆ, ಅಡಚಣೆ, ತ್ರಾಸ, ಮನಸ್ಸಂತಾಪ.

**भजे** (ಭಜೆ) ನ. ಪಕೋಡ, ಬೋಂಡ.

**भट** (ಭಟ್) ಪು. ಭಟ್ಟ, ವೈದಿಕ, ಪುರೋಹಿತನ ವ್ಯವಸಾಯ ಮಾಡುವವ.೨. ಪು. ಸಂ. ಯೋದ್ಧಾ, ವೀರಪುರುಷ.

**भटाचा उभा दांडा आडवा दांडा** (ಭಟಾಚಾ ಉಭಾ ದಾಂಡಾ ಆಡವಾ ದಾಂಡಾ) ಗಾದೆಯ ಮಾತು. ಹೊತ್ತು ಬಂದಂತೆ ಕೊಡೆ ಹಿಡಿ.

**भटजी** (ಭಟಜೀ) ಪು. ಪೂಜೆ ಮಾಡುವ ಬ್ರಾಹ್ಮಣ.

**भटकणे** (ಭಟಕಣೇ) ಕ್ರಿ. ಅ. ತಿರುಗು, ಅಡ್ಡಾಡು, ಸಂಚರಿಸು, ತಿರಿಯು, ದಾರಿತಪ್ಪಿಹೋಗು, ಬಡಬಡಿಸು, ತೊಳಲು, ಅಲೆದಾಡು.

**भटकर--न** (ಭಟಕರ್–ನ್) ಕ್ರಿ. ವಿ. ಶೀಘ್ರವಾಗಿ, ತೀವ್ರವಾಗಿ.

**भटकणी** (ಭಟಕಣೀ) ಸ್ತ್ರೀ. ತಿರುಗುವಿಕೆ, ಅಡ್ಡಾಡುವಿಕೆ, ಸಂಚರಿಸುವಿಕೆ, ಬಡಬಡಿಸುವಿಕೆ, ತೊಳಲುವಿಕೆ.

**भटक्या** (ಭಟಕ್ಯಾ) ವಿ. ತಿರುಗಾಡುವ ಚಟವುಳ್ಳ, ಅಲೆದಾಡುವ.

**भटपडो** (ಭಟಪಡೋ) (ಸಂತಾಪದರ್ಶಕ) ಹೋಗಲಿ, ಹಾಳಾಗಲಿ!

**भटारखाना** (ಭಟಾರಖಾನಾ) ಪು. ಹಿಂ. ಖಾನಾವಳಿ. ೨. ಭೋಜನಶಾಲೆ, ಅಡಿಗೆಮನೆ, ಊಟದಮನೆ.

**भटारी** (ಭಟಾರೀ) ಪು. }
**भटचारी** (ಭಟ್ಯಾರೀ) ಪು.ಹಿಂ. } ಅನ್ನಛತ್ರಚಾಲಕ, ಅನ್ನಛತ್ರದ ಊಟದ ಮನೆಯ ವ್ಯವಸ್ಥಾಪಕ.
**भटियारी** (ಭಟಿಯಾರೀ) ಪು.ಹಿಂ. }

**भटी** (ಭಟೀ) ವಿ. ಬ್ರಾಹ್ಮಣರಂತಹ, (ಊಟ).

**भटोरखाना** (ಭಟೋರಖಾನಾ) ಪು.ಹಿಂ. ಬ್ರಾಹ್ಮಣರ ಸಮಾಜ.

**भट्ट** (ಭಟ್ಟ) ಪು. ಪಂಡಿತ, ವಿದ್ವಾಂಸ. ೨. ವೈದಿಕ ಬ್ರಾಹ್ಮಣ.

**भट्टी** (ಭಟ್ಟೀ) ಸ್ತ್ರೀ. ಹಿಂ. ಕುಲುಮೆ, ಒಲೆ, ಭಟ್ಟಿ.

**भंड** (ಭಂಡ್) ಪು. ನಟ, ಅಭಿನಯಮಾಡು, ಅಭಿನೇತೃ. ನ. ತೆರೆಯುವಿಕೆ, ಒಡ್ಡುವಿಕೆ, ಪ್ರಕಟಿಸುವಿಕೆ, ಹೊರಗೆಡಹುವಿಕೆ. ವಿ. ಜಗಳಗಂಟ, ಕೆದರಿ ಜಗಳ ತೆಗೆಯುವವ.

**भडक** (ಭಡಕ್) ವಿ. ಕಾಂತಿಯುಳ್ಳ, ಮಿಂಚುವ, ರಮ್ಯ, ಜಾಣ. ೨. ಸ್ತ್ರೀ. ಹೊಳಪು, ಮಿಂಚು, ಚಕಚಕಿಸುವಿಕೆ, ಜಾಣತನ.

**तिखट भडक** (ತಿಖಟ್ ಭಡಕ್) ವಿ. ಬಹಳ ಖಾರದ,

**भडक आग** (ಭಡಕ್ ಆಗ್) ಸ್ತ್ರೀ. ಹೊತ್ತಿದ ಶವಾಗ್ನಿ.

**भडकजर** (ಭಡಕ್‌ಜರ್) ಪು. ಬೆಳ್ಳಿ–ಬಂಗಾರದ ಜರ, ಜರದ ಹೆಣಿಕೆ.

**भडकणे** (ಭಡಕಣೇ) ಕ್ರಿ. ಅ. ಬೆಂಕಿಹೆಚ್ಚಾಗು, ರೇಗಿಗೆ ಬರು, ಅಂಜಿ ಓಡಿಹೋಗು, ಹುಚ್ಚಾಗು, ಆಜ್ಞಾ ಭಂಗಮಾಡು.

**भडका** (ಭಡಕಾ) ಪು. ಜ್ವಾಲೆ, ಉರಿ, ರೇಗುವಿಕೆ, ಕಾರದಿಂದ ಉರಿಯುವಿಕೆ.

**भडकावणे, भडकविणे** (ಭಡಕಾವಣೇ,ಭಡಕವಿಣೇ) ಕ್ರಿ. ಉರಿಸು, ರೇಗಿಗೆಬ್ಬಿಸು, ಅಂಜಿಸಿ ಓಡಿಸು, ಚಿತಾವಣಿ ಮಾಡು, ಹುಚ್ಚು ಮಾಡು.

**भडंग** (ಭಡಂಗ್) ವಿ. ಧಾರಾಳ, ಮುಕ್ತಹಸ್ತದ, ದುಂದುಗಾರಿಕೆಯ, ಉದಾರ, ಒಳ್ಳೆಯ ಮನಸ್ಸಿನ, ವಿಪುಲ.

**भडंगभिकार** (ಭಡಂಗ್‌ಭಿಕಾರ್) ವಿ. ತಿರುಕ, ಭಿಕ್ಷುಕ, ದರಿದ್ರ.

**भडभडणे** (ಭಡಭಡಣೇ) ಕ್ರಿ. ಅ. ರಭಸದಿಂದ ಹೊರ ಬೀಳು, ಚಿಮ್ಮು, ಪುಟಿ, ಮಾತಿನ ಹೊಳೆ ಹರಿಯಿಸು.

**भडभडाट** (ಭಡಭಡಾಟ್) ಪು. ದೊಡ್ಡ ಸಪ್ಪಳ, ಭಯಂಕರ ಅಗ್ನಿ, ಗರ್ಜನೆ.

**भडभडीत** (ಭಡಭಡೀತ್) ಕ್ರಿ.ವಿ. ಬೆಳ್ಳಗೆ (ಬೆಳಗು).

**भडभड्या, भडभडा** (ಭಡಭಡ್ಯಾ, ಭಡಭಡಾ) (ವಿ) ಸಂ. ಭಾವನೋದ್ರೇಕದಿಂದ ಮಾತಾಡುವ.

**भड भुंज्या** (ಭಡಭುಂಜ್ಯಾ) ಪು. ಕಾಳು ಹುರಿಯುವವ, ಕಾಳು ಕಮರಿಸುವವ.

**भड(डी)मार** (ಭಡ(ಡೀ)ಮಾರ್) ಪು. ದಾಳಿ, ಹಲ್ಲೆ, ದಂಗೆ, ಏರಿ ಹೋಗುವಿಕೆ.

**भंडमा** (ಭಂಡಮಾ) ಪು. / **भंडवा** (ಭಂಡವಾ) ಕ್ರಿ. / **भंडव(वा)डा** (ಭಂಡವ(ವಾ)ಡಾ) ಪು. } ಅಪಕೀರ್ತಿ, ಸಮಾಜದಲ್ಲಿ ಮಾನಹಾನಿ, ಗುಟ್ಟು ಹೊರ ಬೀಳುವಿಕೆ.

**भडवा** (ಭಡವಾ) ಪು. ಸೂಳೆಯ ದಳ್ಳಾಳ. ೨. ಅನೀತಿಯಿಂದ ಉಪಜೀವಿಸುವವ.

**भडसाळ** (ಭಡಸಾಳ್) ಸ್ತ್ರೀ. ಒಂದು ಜಾತಿಯ ಅಕ್ಕಿ.

**भंडाई** (ಭಂಡಾಈ) ಸ್ತ್ರೀ. ಜಗಳ, ತಂಟೆ, ವಾಗ್ವಾದ.

**भडाका** (ಭಡಾಕಾ) ಪು. ಉರಿ, ಜ್ವಾಲೆ, ತೀವ್ರ ಮನೋವಿಕಾರ.

**भडाग्नी** (ಭಡಾಗ್ನೀ) ಪು.ಸಂ. ಉತ್ತರ ಕ್ರಿಯೆಯ ಅಗ್ನಿ, ಹೆಣವನ್ನು ಸುಡುವ ಉರಿ.

**भडाडणे** (ಭಡಾಡಣೇ) ಕ್ರಿ. ಅ. ಉರಿ ಹೆಚ್ಚಾಗು, ಹೊತ್ತು, ಜ್ವಾಲೆ ಹಬ್ಬು, ಈರ್ಷ್ಯೆ ಮಾಡು.

**भडाडा** (ಭಡಾಡಾ) / **भडाभड** (ಭಡಾಭಡ್) ( ಕ್ರಿ. ವಿ. ಭಡಭಡನೆ, ಬೇಗನೆ.

**भंडार** (ಭಂಡಾರ್) ನ.ಸಂ. ಖಜಾನೆ, ಕೋಶ, ನಿಧಿ, ಬೊಕ್ಕಸ.

**भंडारथळ** (ಭಂಡಾರ್‌ಥಳ್) ನ. 'ಭಂಡಾರಿ' ಹೆಂಡ ತೆಗೆಯುವವರು ಇರುವ ಓಣಿ.

**भंडार भरपूर** (ಭಂಡಾರ ಭರಪೂರ) ನ. ಸಮೃದ್ಧಿ.

**भंडार माड** (ಭಂಡಾರ್ ಮಾಡ್) ಪು. ಸೆರೆ ತಯಾರಿಸಲಿಕ್ಕೆ ಇಟ್ಟ ತೆಂಗಿನ ಕಾಯಿ ಗಿಡ.

**भंडारा** (ಭಂಡಾರಾ) ಪು. ದೇವತಾ ಸಮಾರಾಧನೆ, ಊಟ, ಪ್ರಸ್ಥ.

**भंडारी** (ಭಂಡಾರೀ) ಪು. ಕೋಶಾಧಿಕಾರಿ, ಖಜೀನದಾರ, ಬೊಕ್ಕಸದವ. ೨. ಭಂಡಾರವನ್ನು ಇಡುವ ಪಾತ್ರೆ. ೩. ಸೆರೆ ತೆಗೆಯುವವ, ಭಂಡಾರೀ ಜಾತಿಯವ.

**भंडावा** (ಭಂಡಾವಾ) ಪು. / **भंडाळी** (ಭಂಡಾಳೀ) ಸ್ತ್ರೀ. } ಅಪಕೀರ್ತಿ, ಅಪಮಾನ, ಅವಮಾನ.

**भडि(डे)मार** (ಭಡಿ(ಡೇ)ಮಾರ್) 'भडमार' ನೋ. ಉತ್ಕಟತೆ, ವಿಪುಲತೆ.

**–भेंडी** (–ಭೇಂಡೀ) ಸ್ತ್ರೀ. ಅಂತ್ಯಾಕ್ಷರ ಪಂದ್ಯಾಟ, ಶ್ಲೋಕದ ಅಂತ್ಯಾಕ್ಷರ ಪಂದ್ಯಾಟ.

**भडेराक्षस** (ಭಡೇರಾಕ್ಷಸ) ದೊಡ್ಡ ರಾಕ್ಷಸ, ಮಹಾಭೂತ, ಸ್ಥೂಲದೇಹಿ.

**भणग** (ಭಣಂಗ್) ಪು. ಅನಾಥ ಮನುಷ್ಯ, ಹಾಳೂರು.

**भणंग भिकार-री** (ಭಣಂಗ್ ಭಿಕಾರೀ) ಪು. ದರಿದ್ರ.

**भणभण** (ಭಣಭಣ) ಸ್ತ್ರೀ. ನೊಣಗಳ ಧ್ವನಿ, ನೊಣಗಳ ಸದ್ದು.

**भणभणा** (ಭಣಭಣಾ) ಕ್ರಿ. ವಿ. ಭಣಭಣ ಎಂದು.

**भणभणा फिरणे** (ಭಣಭಣ ಫಿರಣೇ) ಕ್ರಿ. ಅ. ತಿರುಗಾಡು, ಅಲೆದಾಡು.

**भणभणणे** (ಭಣಭಣಣೇ) ಕ್ರಿ. ಅ. ಧ್ವನಿಯಾಗು, ಭಣಭಣ ಅನ್ನಿಸು (ಯಾರೂ ಇಲ್ಲದಾಗ) (ತಲೆ) ದಿಮ್ಮಾಗು.

**भणभणाट** (ಭಣಭಣಾಟ್) ಪು. ಬೇಸರ, ಬೇಸರಿಕೆ.

**भणभणीत** (ಭಣಭಣೀತ್) ವಿ. ಖಿನ್ನವಾದ, ಮೊಬ್ಬಾದ, ಬೇಸರವುಳ್ಳ.

**भणाण** (ಭಣಾಣ್) ಕ್ರಿ.ಅ. ಬುಂಯೆಂದು ಧ್ವನಿಯಾಗು.

**भतका** (ಭತಕಾ) ಪು. ಚಪ್ಪರಿಸುವಿಕೆ.

**भत्ता** (ಭತ್ತಾ) ಪು. ಪೋಟಗಿ, ಹೊಟ್ಟೆಯ ಖರ್ಚು. ೨. ಅಲೋವೆನ್ಸ್, ಭತ್ತೆ.

**भदाड** (ಭದಾಡ್) ನ. ದೊಡ್ಡ ಕಿಂಡಿ, ಬಿರುಕು, ಡೊಗರು.

**भदे** (ಭದೇ) ನ. ಹಂಚು, ಸಿಪ್ಪೆ, ಚಿಪ್ಪು.

**तोंडाचे भदे करणे** (ತೋಂಡಾಚೇ ಭದೇ ಕರಣೇ) ಕ್ರಿ. ಸ. ಬೈಯು, ಅವಾಚ್ಯ ಮಾತಾಡು.

**भद्र** (ಭದ್ರ) ನ. ಉನ್ನತಿ, ಉತ್ಕರ್ಷ, ಏಳ್ಗೆ, ಊರ್ಜಿತ ಸ್ಥಿತಿ, ಸಭಾಸ್ಥಾನ, ಉನ್ನತಿ ಹೊಂದಿದ, ಉತ್ಕರ್ಷವುಳ್ಳ, ಊರ್ಜಿತಸ್ಥಿತಿಯ.

**भद्रमोथा** (ಭದ್ರಮೋಥಾ) ಪು. ಸುವಾಸನೆಯ ಹುಲ್ಲು.

**भद्रासन** (ಭದ್ರಾಸನ) ನ. ಸಿಂಹಾಸನ, ರಾಜಾಧಿಕಾರ, ಆಸನಗಳಲ್ಲಿಯ ಒಂದು ಪ್ರಕಾರ.

**भद्रचा** (ಭದ್ರ್ಯಾ) ವಿ. / **भद्रचाकपाळाचा** (ಭದ್ರ್ಯಾಕಪಾಳಾಚಾ) } ದುರ್ದೈವಿ, ದುರ್ಭಾಗಿ ಅಭಾಗಿ.

**भप–प्प** (ಭಪ್–ಪ್ಪ) ಭಪ್ಪೆಂದು, ಭಪ್ಪನೆ.

**भपका–भबका** (ಭಪಕಾ–ಭಬಕಾ) ಪು. ೧. ಬಿರು ಗಾಳಿ, ಗಾಳಿಯ ಹೊಡೆತ. ೨. ಹೊರಗಿನ ಡೌಲು, ಬೆಡಗು.

**भबकावणी–भबकी** (ಭಬಕಾವಣೀ–ಭಬಕೀ) ಸ್ತ್ರೀ. ಕೆಟ್ಟ ಕೆಲಸಕ್ಕೆ ಉತ್ತೇಜನ ಕೊಡುವಿಕೆ, ಒತ್ತಾಯಿಸುವಿಕೆ, ಪ್ರೇರಣೆ, ದುರ್ಬೋಧನೆ.

**भंगेरी** (ಭಂಗೇರೀ) ಸ್ತ್ರೀ. ಅವಮಾನ, ನಾಚಿಕೆಗೇಡಿತನ.

**भंबोरनाथ** (ಭಂಬೋರ್‌ನಾಥ್) ಪು. ದೊಡ್ಡಹುಚ್ಚ, ತಿಳಿಗೇಡಿ ಮನುಷ್ಯ, ಅಜ್ಞಾನಿ, ೨. ಸಾಂಬಸದಾಶಿವ.

**भय** (ಭಯ) ನ. ಅಂಜಿಕೆ, ಭಯ, ಗಂಡಾಂತರ.

**भयकंर** (ಭಯಂಕರ) ವಿ. ಸಂ. ಅಂಜಿಕೆಯ, ಧಕ್ಕೆಯ, ಭೀತಿಪ್ರದ.

**भयचकित** (ಭಯಚಕಿತ) ವಿ. ಸಂ. ಗಾಬರಿಯಾದ, ಗಾಬರಿಗೊಂಡ, ಭಯಪಟ್ಟ.

**भयप्रदर्शन** (ಭಯಪ್ರದರ್ಶನ) ನ. ಸಂ. ಅಂಜಿಕೆ ತೋರಿಸುವಿಕೆ, ಭೀತಿತೋರುವಿಕೆ.

**भयभीत** (ಭಯಭೀತ) ವಿ. ಸಂ. ಭಯಭೀತ, ಅಂಜಿದ, ಭಯ ಪೀಡಿತ.

**भयविव्हल** (ಭಯವಿಹ್ವಲ) ವಿ. ಭಯಾಕ್ರಾಂತ.

**भयशील** (ಭಯಶೀಲ್) ವಿ. ಅಂಜುವ ಗುಣವುಳ್ಳ.

**भयाकुल–क्रांत** (ಭಯಾಕುಲ–ಕ್ರಾಂತ) ವಿ. ಸಂ. ಭೀತಿಗ್ರಸ್ಥ, ಅಂಜಿದ, ಭಯಪಟ್ಟ.

**भयाण** (ಭಯಾಣ್) ವಿ. ಅಂಜಿಕೆಬರುವ.

**भयातुर** (ಭಯಾತುರ್) ವಿ. ಗಾಬರಿಗೊಂಡ.

**भयान्वित** (ಭಯಾನ್ವಿತ) ಭಯಪ್ರದ.

**भयानक** (ಭಯಾನಕ) ವಿ. ಭಯಂಕರ, ಭೀತಿಪ್ರದ, ಘೋರ.

**भयाभंगास जाणे** (ಭಯಾಭಂಗಾಸ್ ಜಾಣೇ) ಚೂರು ಚೂರಾಗು, ನಾಶವಾಗು, ನಾಶಹೊಂದು, ವಿಸರ್ಜಿತವಾಗು, ಮುಕ್ತಾಯವಾಗು.

**भयाभया** (ಭಯಭಯಾ) ಕ್ರಿ. ವಿ. ಭಯಭಯವೆಂದು, ಗುರಿಯಿಲ್ಲದೆ.

**भयाभया करणे** (ಭಯಭಯಾ ಕರಣೇ) ಕ್ರಿ. ಅ. **करीतजाणे** ಭಿಕ್ಷೆ ಬೇಡುತ್ತಹೋಗು.

**भयावह** (ಭಯಾವಹ) ವಿ. ಸಂ. ಅಜಸ್ರ, ಭಯಂಕರ, ದೊಡ್ಡ.

**भयाळु** (ಭಯಾಳು) ವಿ. ಅಂಜುಬುರುಕ, ಅಂಜುವ ಸ್ವಭಾವದ.

**भय्या** (ಭಯ್ಯಾ) ಪು. ಅಣ್ಣ–ತಮ್ಮ, ಸಹೋದರ, (ಮುಂಬೈಯಲ್ಲಿ) ಉತ್ತರ ಪ್ರದೇಶ ನಿವಾಸಿ, ಒಂದು ಜಾತಿ.

**भर** (ಭರ) ವಿ. ಪೂರ್ಣ. ೨. ಪು. ವೇಗ. ೩. ಸ್ತ್ರೀ. ಹೆಚ್ಚಳ, ಒತ್ತಿಹೇಳುವಿಕೆ.

**भर करणे** (ಭರ್ ಕರಣೇ) ಕ್ರಿ. ಅ. ತುಂಬಿಕೊಡು.

**भर घालणे** (ಭರ್ ಘಾಲಣೇ) ಕ್ರಿ. ಸ. ಹೆಚ್ಚಿಸು.

**–देणे** (–ದೇಣೇ) ಕ್ರಿ. ಸ. ಒತ್ತಿಹೇಳು, ಅನುಮೋದಿಸು.

**भरीचा** (ಭರೀಚಾ) ವಿ. ಹೆಚ್ಚಿನ, ಪೂರಕವಾದ.

**भरी पडणे, भरीस पडणे** (ಭರೀ ಪಡಣೇ, ಭರೀಸ್ ಪಡಣೇ) ಕ್ರಿ. ಅ. ಬಲಿಬೀಳು, ಒತ್ತಾಯಕ್ಕೆ ಬಲಿಬೀಳು, ಗೋಜಿಗೆಹೋಗು.

**भरउभर** (ಭರ್‌ಉಭರ್) ಸ್ತ್ರೀ. ತುಂಬುವಿಕೆ–ತೆಗೆಯುವಿಕೆ.

**भरकटणे** (ಭರಕಟಣೇ) ಕ್ರಿ. ಸ. ಅವಸರದಿಂದ ಮಾತಾಡು, ವಿಷಯ ಬಿಟ್ಟುಮಾತಾಡು.

**भरकंडणे** (ಭರಕಂಡಣೇ) ಕ್ರಿ. ಅ. ಗೀಚು, ಗೀಚಿಬರೆ, ಸೊಟ್ಟುಪಟ್ಟು ಬರೆ.

**भरकंडा** (ಭರಕಂಡಾ) ಪು. ಶೋಭಿಸುವವ, ಹಸನಾಗಿರುವವ, ಬರೆಹದಲ್ಲ ಬೆಳೆಯುವಿಕೆ, ಹಸನಾಗಿರುವಿಕೆ, ಏಳಿಗೆಯಲ್ಲಿರುವಿಕೆ, ಶೋಭಿಸುವಿಕೆ.

**भरकन–दिशी** (ಭರಕನ್–ದಿಶೀ) ಕ್ರಿ. ವಿ. ಭರಕ್ಕನೆ, ಭರಭರನೆ.

**भरकाठ जमीन** (ಭರಕಾಠ್ ಜಮೀನ್) ಸ್ತ್ರೀ. ಬೆಳೆಯದ ಭೂಮಿ, ಬರಡು ಭೂಮಿ.

**भरकांडा** (ಭರಕಾಂಡಾ) ಪು. ತಿರುಗಿಸುವಿಕೆ, ಸುತ್ತುತಿರುಗುವುದು, ಸುತ್ತುವಿಕೆ, ಫೇರಿ, ನಾಡಸಂಚಾರ, ವಿದ್ಯುತ್ಪ್ರವಾಹ ಪ್ರದೇಶ, ಚಕ್ರವ್ಯೂಹ, ತೊಡಕು, ಸುತ್ತುಹಾದಿ, ಗಲಿಬಿಲಿ, ಭ್ರಮೆ.

**भरगच्च** (ಭರಗಚ್ಚ) ವಿ. ಪೂರ್ಣ, ತುಂಬಿದ, ತುಳುಕುವ.

**भरगत** (ಭರಗತ್) ಸ್ತ್ರೀ. ಹೆಚ್ಚಳ.

**भरगांव** (ಭರಗಾವ್) ಪು. ದಟ್ಟಣೆ ಊರು.

**भरचक्का** (ಭರಚಕ್ಕಾ) ವಿ. ಪಕ್ವಾನ್ನಭರಿತ, ಸವಿತಿಂಡಿ ತುಂಬಿದ (ಮೇಜವಾನಿ).

**भरचंदी** (ಭರಚಂದೀ) ಸ್ತ್ರೀ. ಹೊಟ್ಟೆತುಂಬ ಕಾಳು ತಿನ್ನಿಸುವಿಕೆ, ಸಾಕಷ್ಟು ಪೋಟಗಿ, ಯೋಗ್ಯನಿವೃತ್ತಿ ವೇತನ.

**भरजमा** (ಭರಜಮಾ) ಸ್ತ್ರೀ. ಸಂಪೂರ್ಣ ಜಮಾಬಂದಿ.

**भरजमीन** (ಭರ್‌ಜಮೀನ್) ಸ್ತ್ರೀ. ಸಂಪೂರ್ಣ ಕರ ಹೇರಿದ ಜಮೀನು.

**भरजरी** (ಭರಜರೀ) ವಿ. ಜರತಾರಿಯ.

**भरजवानी–ज्वानी** (ಭರ್‌ಜವಾನೀ–ಜ್ವಾನೀ) ಸ್ತ್ರೀ. ಪ್ರಾಯ, ಹರೆ.

**भरड** (ಭರಡ್) ವಿ. ಒರಟು ಬೀಸಿದ, ನುಚ್ಚು ಬೀಸಿದ.

**भरडण** (ಭರಡಣ) ನ. ನುಚ್ಚು ಬೀಸುವಿಕೆ.

**भरडणे** (ಭರಡಣೇ) ಕ್ರಿ. ಸ. ನುಚ್ಚು ಬೀಸು, ಒರಟು ಬೀಸು. ೨. ಥಳಿಸು.

**भरडा** (ಭರಡಾ) ಪು. ಚೆನ್ನಾಗಿ ಒಡೆದ ನುಚ್ಚು.

**भरडाव** (ಭರ್‌ಡಾವ್) ಪು. ಭರಕ್ಕೆ ಬಂದ ಆಟ.

**भरण** (ಭರಣ) ನ. ಹೂರಣ ತುಂಬುವಿಕೆ, ಅಳತೆ ಮಾಡುವಿಕೆ.

**भरणा** (ಭರಣಾ) ಪು. ಹೆಚ್ಚಳ, ತುಂಬುವಿಕೆ, ಸಂಪೂರ್ಣತೆ, ೨. ತುಂಬಿದ ಹಣ. ೩. ವಿಪುಲತೆ, ಹೆಚ್ಚಳ.

**भरणावळ** (ಭರಣಾವಳ್) ಸ್ತ್ರೀ. ತುಂಬುವ ಕೂಲಿ.

**भरणी** (ಭರಣೀ) ಭರಣಿ, ಒಡವೆ ತುಂಬುವ, ಜೀನಸು ತುಂಬುವ. ೨. ಭರಣಿಶ್ರಾದ್ಧ (ಭಾದ್ರಪದವದ್ಯ).

**भरणे** (ಭರಣೇ) ಕ್ರಿ. ಸ. ತುಂಬು, ಭರತಿಹಾಕು, ಜಮಾಮಾಡು, ಕೊರತೆ ಪೂರೈಸು.

**करावे तसे भरावे** (ಕರಾವೇ ತಸೇ ಭರಾವೇ) ನಾ. ಮಾಡಿದ್ದುಣ್ಣೋ ಮಾರಾಯಾ !

**भरले धरणे** (ಭರಲೇ ಧರಣೇ) ಕ್ರಿ. ಅ. ದಾರಿ ಕಾಯುತ್ತ ಕೂಡ್ರು, ನಿರೀಕ್ಷಿಸುತ್ತಿರು.

**भरून पावणे** (ಭರೂನ್ ಪಾವಣೇ) ಕ್ರಿ. ಸ. ಸಂಪೂರ್ಣವಾಗಿ ದೊರಕಿಸು.

**भरून येणे** (ಭರೂನ್ ಯೇಣೇ) ಕ್ರಿ. ಅ. ಹುಣ್ಣು ನೆಟ್ಟಗಾಗು, ಮಾಯು. ೨. ಭಾವನೆ ತೀವ್ರವಾಗು.

**भरत–भरतकाम** (ಭರತ್–ಭರತ್‌ಕಾಮ್) ನ. ಕಸೂತಿ. ೨. ಮಿಶ್ರಿತ ಧಾತು.

**भरतक** (ಭರತಕ್) ನ. ಸಂಖ್ಯೆಯ ಭರತಿ, ಅಂಕೆಯ ಭರತಿ.

**भरतखंड, भरतवर्ष** (ಭರತಖಂಡ, ಭರತವರ್ಷ) ನ. ಸಂ. ಇಂಡಿಯಾ, ಭಾರತ.

**भरतशास्त्र** (ಭರತಶಾಸ್ತ್ರ) ನ. ಸಂ. ನಾಟ್ಯಶಾಸ್ತ್ರ.

**भरताड** (ಭರತಾಡ್) ನ. ತುಂಬಿದ ಅವಸ್ಥೆ.

**भरती** (ಭರತಿ) ಸ್ತ್ರೀ. ಹಿಂ. ಭರತಿ, ಏರಿಕೆ. (ಸಮುದ್ರದ)

**भरतूक** (ಭಜತೂಕ್) ಸ್ತ್ರೀ. ಹಡಗಿನೊಳಗಿನ ಸರಕು.

**भरते** (ಭರತೇ) ನ. ಸಂಪೂರ್ಣತೆ, ತುದಿ, ಅಳುವಿಕೆ.

**भरदवड–दौड** (ಭರದವಡ್–ದೌಡ್) ಸ್ತ್ರೀ. ರಭಸದ ವೇಗ, ಸಂಪೂರ್ಣವೇಗ, ೨. ಕ್ರಿ. ವಿ. ಭರದಿಂದ, ಪೂರ್ಣವೇಗವಾಗಿ.

**भरदार** (ಭರದಾರ್) ವಿ. ಚನ್ನಾಗಿ ತುಂಬಿದ, ಪುಷ್ಟ.

**भरदुपार** (ಭರದುಪಾರ್) ಸ್ತ್ರೀ. ಮಟಮಟ ಮಧ್ಯಾಹ್ನ.

**भरदोन प्रहरी** (ಭರ್‌ದೋನ್ ಪ್ರಹರೀ) ಕ್ರಿ. ವಿ. ಮಧ್ಯಾಹ್ನದಲ್ಲಿ.

**भरधाव, भरधूम** (ಭರಧಾವ್, ಭರಧೂಮ್) ಕ್ರಿ. ವಿ. "भरदौड" ನೋ.

**भरनवती** (ಭರನವತೀ) ಸ್ತ್ರೀ. ಪೂರ್ಣಯೌವನ, ತಾರುಣ್ಯ, ಪ್ರಾಯ.

**भरपाई–यी** (ಭರಪಾಈ–ಯೀ) ಸ್ತ್ರೀ. ನಷ್ಟ ಪರಿಹಾರ.

**भरपावली** (ಭರಪಾವಲೀ) ಕ್ರಿ. ವಿ. ಸಂಪೂರ್ಣ ವೇಗದಿಂದ-

**भरपूर** (ಭರಪೂರ್) ವಿ. ತುಂಬಾ, ತುಂಬಿದ, ಅಂಚುಮಟ ತುಂಬಿದ.

**भरपोट** (ಭರ್‌ಪೋಟ್) ಕ್ರಿ. ವಿ. ಹೊಟ್ಟೆ ತುಂಬಿ.

**भरभर** (ಭರ್‌ಭರ್) ಕ್ರಿ. ವಿ. ಊರ್ಜಿತಾವಸ್ಥೆ, ಉನ್ನತಿ, ಯೌವನಾವಸ್ಥೆ.

**भरभर** (ಭರ್‌ಭರ್) ಕ್ರಿ. ವಿ. ಬೇಗನೆ, ಸರಕ್ಕನೆ, ಚುರುಕುತನದಿಂದ.

**भरभरणे** (ಭರಭರಣೇ) ಕ್ರಿ. ಅ. ಅನುಕೂಲವಾಗು, ಶುಭವಾಗು.

**भरभराट** (ಭರಭರಾಟ್) ಸ್ತ್ರೀ. ಏಳ್ಗೆ, ಉನ್ನತಿ, ಹೆಚ್ಚಳ, ಪ್ರಗತಿ, ಊರ್ಜಿತಾವಸ್ಥೆ.

**भरभरीत** (ಭರಭರೀತ್) ವಿ. ದಪ್ಪ, ಹಂಡಬಂಡ, ಒಣ, ಕಚ್ಚಾ.

**भरम–भ्रम** (ಭರಮ್–ಭ್ರಮ್) ಪು. ಮೋಹ, ಭ್ರಾಂತಿ, ತಪ್ಪು ತಿಳುವಳಿಕೆ, ಭ್ರಮೆ, ಶಂಕೆ.

**भरमजल** (ಭರಮಜಲ್) ಸ್ತ್ರೀ. ಪ್ರವಾಸದ ರಭಸ, ಪ್ರವಾಸದ ವೇಗ.

**भरमजलस** (ಭರಮಜಲಸ್) ಸ್ತ್ರೀ. ಸರ್ವ ಸಾಧಾರಣ ಸಭೆ, ಸಾಧಾರಣ ಸಭೆ. ಬಾಹ್ಯ ಅಧಿವೇಶನ.

**भरमजला** (ಭರಮಜಲಾ) **भरमजालस** (ಭರಮಜಾಲಸ ವಿ. ಅಟ್ಟದ ಪಡಸಾಲೆ.

**भरमाचा–भ्रमाचा भोपळा फुटणे** (ಭರಮಾಚಾ–ಭ್ರಮಾಚಾ ಭೋಪಳಾ ಫುಟಣೇ) **भरमा भरमी** (ಭರಮಾ ಭರಮೀ) ಕ್ರಿ. ಅ. ಸಂಶಯ ದಿಂದ, ಭೀತಿಯಿಂದ, ಭರವಸೆಯಿಲ್ಲದಾಗಿ.

**भररस्ता** (ಭರರಸ್ತಾ) ಪು. ದಟ್ಟಣಿಯ ಮಾರ್ಗ, ರಾಜಮಾರ್ಗ, ರಾಜಬೀದಿ, ಪ್ರವಾಸಿಕರ ಮಾರ್ಗ.

**भररास** (ಭರರಾಸ್) ಸ್ತ್ರೀ. ಇಡೀರಾಶಿ, ತುಂಬು ರಾಶಿ.

**भरवशाचे कूळ** (ಭರವಶಾಚೇ ಕೂಳ್) ನ. ಶ್ರದ್ಧೆಯ ಸ್ಥಾನ, ೨. ನಂಬಿಗೆಯ ವ್ಯಕ್ತಿ.

**भरवशाचाचा म्हशीस टोणगा** (ಭರವಶ್ಯಾಚಾ ಮ್ಹಶೀಲಾ ಟೋಣಗಾ) (ಗಾದೆಯಮಾತು) ನಂಬಿದ ಎಮ್ಮೆ ಕೋಣ ಕೊಟ್ಟಿತು, ವಿಶ್ವಾಸ ವಿಟ್ಟವನು ಮೋಸಹೋದನು.

**भरवसा** (ಭರವಸಾ) ಪು. ಹಿಂ. ನಂಬಿಗೆ, ಭರವಸೆ, ಧೈರ್ಯ, ಖಾತ್ರಿ, ವಿಶ್ವಾಸ, ಶ್ರದ್ಧೆ.

**भरवसूल** (ಭರವಸೂಲ್) ಪು. ಅರ. ಪೂರ್ಣವಸೂಲ ವಸೂಲಾದ ತೆರಿಗೆ, ವಸೂಲಾದ ಜಮಾಬಂದಿ.

**भरली–वांगी** (ಭರಲೀ–ವಾಂಗೀ) ನ. ಬಹುವ. ತುಂಬುಗಾಯಿ, ಎಣ್ಣೆಗಾಯಿ, ಮಸಾಲೆ ತುಂಬಿದ ಬದನೆಯಕಾಯಿ.

**भरविणे** (ಭರವಿಣೇ) ಕ್ರಿ. ಸ. ತುಂಬಿಸು, ಉಣಿಸು. ೨. ಚಿತಾವಣಿ ಮಾಡು.

**भराका** (ಭರಾಕಾ) ಪು. ಗರ್‍ರನೆ ತಿರುಗುವ ಶಬ್ದ, ಪಕ್ಷಿಗಳರೆಪ್ಪೆಯ ಶಬ್ದ, ಓಡುವಿಕೆ, ನುಸುಳುವಿಕೆ, ಕ್ರೋಧಾವೇಶ.

**भरलेघर** (ಭರಲೇಘರ್) ನ. ತುಂಬಿದ ಮನೆ.

**भरवण** (ಭರವಣ್) '**भरण**' ನೋ.

**भराटा** (ಭರಾಟಾ) ಪು. ಪ್ರಗತಿ, ಹೆಚ್ಚಳ, ಉನ್ನತಿ, ವೈಪುಲ್ಯ. (ವಿ) ವಿಪುಲವಾದ, ಹೆಚ್ಚಾದ.

**भराड** (ಭರಾಡ್) ನ. ಗೋಸಾವಿಯಿಂದ ಮಾಡಿಸಿದ ಧಾರ್ಮಿಕ ವಿಧಿ.

**भराडी** (ಭರಾಡೀ) ಸ್ತ್ರೀ. ಗೋಸಾವಿಗಳ ಪಂಥ.

**भरभर** (ಭರಾಭರ್) ಕ್ರಿ. ವಿ. ಭರಭರನೆ, ಲಗುಲಗು, ಬೇಗಬೇಗ. ೨. ಸ್ತ್ರೀ. ಲಗುಲಗು ತುಂಬುವಿಕೆ, ಬೇಗಬೇಗ ನಡೆಯುವಿಕೆ.

**भरारणे** (ಭರವಣೇ) ಕ್ರಿ. ಸಂ. ಸಫಲವಾಗು, ಏಳ್ಗೆಯಲ್ಲಿರು, ವೃದ್ಧಿಯಾಗು.

**भरारा** (ಭರಾರಾ) ಪು. ಕಸುವಿನಿಂದ ಸೇರುವಿಕೆ, ನುಗ್ಗಿ ಹೋಗುವಿಕೆ.

**भरारी** (ಭರಾರೀ) ಸ್ತ್ರೀ. ಭರಾಟೆ, ಹವೆಯಲ್ಲಿ ಹಾರುವಿಕೆ, ವಿ. ರಭಸದ ಶೂರ.

**–राघोभरारी** (–ರಾಘೋಭರಾರೀ) ಪು. ಶೂರ ಪೇಶ್ವೆ ರಾಘೋಬ.

**भराव** (ಭರಾವ) ಪು. ಭರತಿ, ತಗ್ಗಿನಲ್ಲಿ ತುಂಬುವ ಕಸ ಕಡ್ಡಿ ಮಣ್ಣು.

**भरीत** (ಭರೀತ್) ನ. ಬಜ್ಜಿ (ಸುಟ್ಟ ಬದನೆಯ ಮು.)

**भरीव** (ಭರೀವ) ನ. ವಿ. ತುಂಬಿದ, ಹೇರಿದ, ಸೊಕ್ಕಿದ, ದುಂಡಾದ ೨. ಗಟ್ಟಿ, ಘನ.

**भरेकरी** (ಭರೇಕರೀ) ಪು. ಯಾತ್ರಿಕ, ಬಟ್ಟೆಯ ವ್ಯಾಪಾರಸ್ಥ, ಮನೆಮನೆತಿರುಗಿ ವ್ಯಾಪಾರ ಮಾಡುವ.

**भरोभरी** (ಭರೋಭರೀ) ವಿ. ಅಂಚುಮಟ್ಟಿಗೆ, ಕಂಠದ ವರೆಗೆ, ಅಂಚುಮುಟ.

**भरोसा** (ಭರೋಸಾ) ಪು. ಹಿಂ. ನಂಬಿಗೆ, ವಿಶ್ವಾಸ **भरवसा** ನೋ.

**भर्जन** (ಭರ್ಜನ) ನ. ಸಂ. ಬೇಯಿಸುವಿಕೆ, ಬಜ್ಜಿ ಮಾಡುವಿಕೆ.

**भर्ता** (ಭರ್ತಾ) ಪು. ಸಂ. }
**भ्रतार** (ಭ್ರತಾರ್) ಪು. } ಗಂಡ, ಪತಿ.

**भर्तृत्व** (ಭರ್ತೃತ್ವ) ನ. ಸಂ. ಪತಿ ಸಂಬಂಧ, ಪತಿಯ ಆಪ್ತತ್ವ, ಗಂಡನ ಸಂಬಂಧ.

**भर्तृघात** (ಭರ್ತೃಘಾತ) ಪು. ಸಂ. ಭರ್ತೃಹತ್ಯೆ, ಗಂಡನಕೊಲೆ.

**भर्त्सन** (ಭರ್ತ್ಸನ) ನ. ಸಂ. ಬೈಯುವಿಕೆ, ನಿಂದಿಸುವಿಕೆ, ತಿರಸ್ಕರಿಸುವಿಕೆ.

**भऱ्याचा** (ಭರ್ಯಾಚಾ) ವಿ. ಒಳ್ಳೆಯ, ಭರತಿಗೆ ಹತ್ತುವ.

**भल** (ಭಲ್) ನ. ಭಾಲೆಯ ತುದಿ.

**भलता** (ಭಲತಾ) ವಿ. ಬೇಡಾದ, ವಿಚಿತ್ರ. ೨. ಬಹಳ.

**भलता सलता** (ಭಲತಾ ಸಲತಾ) ವಿ. ಅಪರಿಚಿತ, ಸಂಬಂಧವಿಲ್ಲದ.

**भलरी** (ಭಲರೀ) ಸ್ತ್ರೀ. ಸುಳ್ಳುಮುಖಸ್ತುತಿ, ಬಾಯಿ ಮುಂದೆ ಹೊಗಳಿಕೆ, ಪ್ರಯತ್ನ.

**भला** (ಭಲಾ) ವಿ. ಒಳ್ಳೆಯದಾದ, ಚೆಲೋ, ಉತ್ತಮ, ಯೋಗ್ಯ ತರಗತಿಯ.

**भला घेणे** (ಭಲಾ ಘೇಣೇ) ಕ್ರಿ. ಶಬ್ದದ ಹೊಡೆತ ಕೊಡು.

**भलाई** (ಭಲಾಈ) ಸ್ತ್ರೀ. ಹಿಂ. ಕಲ್ಯಾಣ, ಸತ್ಕೀರ್ತಿ.

**भलावण** (ಭಲಾವಣ) ಸ್ತ್ರೀ. ದೊಡ್ಡಸ್ತಿಕೆ, ಗೌರವ. ೨. ಗುಜ. ಪ್ರಶಸ್ತಿ, ಸಿಫಾರಸು.

**भलीभलाई** (ಭಲೀಭಲಾಈ) ಸ್ತ್ರೀ. ಒಳ್ಳೆಯ ನಡತೆ.

**भले भले** (ಭಲೇ ಭಲೇ) ಅ. ಉದ್ಗಾರ, ವಾಹವಾ, ವಾಹವಾ! ಭಲೆ ಭಲೆ! ಭಾಪು.

**भलेरी** (ಭಲೇರೀ) ಸ್ತ್ರೀ. ಒಬ್ಬರಿಗೊಬ್ಬರು ಸ್ತುತಿಸುವಿಕೆ, ವಿಫಲಪ್ರಯತ್ನ.

**भलोबा** (ಭಲೋಬಾ) ಪು. ಒಳ್ಳೆಯ ಮನುಷ್ಯ.

**भव** (ಭವ) ಪು. ಸಂ. ಜಗತ್ತು ಇಹಲೋಕ, ಜನ್ಮ, ಜೀವನ, ಸಂಸಾರ.

**भवपाश** (ಭವಪಾಶ) ಪು. ಸಂ. ಸಂಸಾರಪಾಶ, ಸಂಸಾರಸಂಕೋಲೆ, ಇಹಲೋಕದ ಬಂಧನ.

**भवभय** (ಭವಭಯ) ನ. ಸಂಸಾರಭಯ, ಸಂಸಾರ ಪಾಶದ ಅಂಜಿಕೆ.

**भवसूत्र** (ಭವಸೂತ್ರ) ನ. ಸಂ. ಇಹಲೋಕದಸೂತ್ರ, ಭವಸೂತ್ರ, ಸಂಸಾರ ಸಂಬಂಧ.

**भवई** (ಭವಈ) ಸ್ತ್ರೀ. (ಕಣ್ಣಿನ) ಹುಬ್ಬು.

**भवंड** (ಭವಂಡ್) ಸ್ತ್ರೀ. ತಲೆ ತಿರುಗುವಿಕೆ, ಬವಳಿ, ಮೂರ್ಛೆ.

**भवती** (ಭವತೀ) ಕ್ರಿ. ವಿ. } ಸುತ್ತುಮುತ್ತು, ಆಚೆಈಚೆ, ಹಿಂದು-ಮುಂದು.
**भवताली** (ಭವತಾಲೀ) ಕ್ರಿ. ವಿ. }

**भवतालचा** (ಭವತಾಲಚಾ) ವಿ. ಆಚೆಈಚೆಯ, ಸುತ್ತುಮುತ್ತಲಿನ, ಸುತ್ತುವರೆಯ.

**भवती न भवति** (ಭವತಿ ನ ಭವತಿ) ಸ್ತ್ರೀ. ಸಂ. ಚರ್ಚೆ, ವಾದವಿವಾದ, ಅನುಕೂಲ ಪ್ರತಿಕೂಲತೆಗಳ ವಿಚಾರ.

**भवन** (ಭವನ) ನ. ಸಂ. ಮನೆ, ವಾಸ, ಇರುವ ಸ್ಥಾನ.

**भवभय** (ಭವಭಯ) ನ. ಸಂ. ಸಂಸಾರಭಯ.

**भवरोगी** (ಭವರೋಗೀ) ಪು. ಸಂ. ಪ್ರಪಂಚರತನಾದವ.

**भवानी** (ಭವಾನೀ) ಸ್ತ್ರೀ. ಸ. ಪಾರ್ವತಿ, ದೇವಿ, ಅಂಬಿಕೆ. ೨. ಬೋಣಿಗೆ ಮೊದಲನೆಯ ಮಾರಾಟ.

**भवानी कवडी** (ಭವಾನೀ ಕವಡೀ) ಸ್ತ್ರೀ. ಕವಡಿ, ಅಂಬಿಕೆಯ ಕವಡಿ, ಸರದೊಳಗಿನ ಕವಡಿ.

**भवार्त** (ಭವಾರ್ತ) ವಿ. ಸಂ. ಪ್ರಪಂಚದಲ್ಲಿ ತೊಳಲಾಡುವವ.

**भवितव्य, भवितव्यता** (ಭವಿತವ್ಯ, ಭವಿತವ್ಯತಾ) ನ., ಸ್ತ್ರೀ. ಸಂ. ಮುಂದಾಗುವ ಘಟನೆ, ಭಾಗ್ಯ, ದೈವ, ಅದೃಷ್ಟ, ವಿಧಿ, ಹಣೆಬರಹ, ನಸೀಬು, ಪ್ರಾರಬ್ಧ, ಕರ್ಮಗತಿ.

**भविष्य** (ಭವಿಷ್ಯ) ನ. ಭವಿಷ್ಯಕಾಲ, ಮುಂದಾಗುವ ಘಟನೆ, ೨. ಮುಂದಾಗುವ ಭವಿಷ್ಯ ಹೇಳುವಿಕೆ, ಕಾಲಜ್ಞಾನ.

**भविष्यकाल** (ಭವಿಷ್ಯಕಾಲ) ಪು. ಸಂ. (ವ್ಯಾಕರಣದಲ್ಲಿ) ಭವಿಷ್ಯಕಾಲ.

**भविष्यवादी** (ಭವಿಷ್ಯವಾದೀ) ವಿ. ಸಂ. ಕಾಲಜ್ಞಾನಿ, ಭವಿಷ್ಯವಾದಿ, ದೀರ್ಘದರ್ಶಿ, ಪೈಗಂಬರ.

**भविष्यसूचक** (ಭವಿಷ್ಯಸೂಚಕ) ವಿ. ಸಂ. ಭವಿಷ್ಯವನ್ನು ಸೂಚಿಸುವವ, ಮುಂದಿನ ಘಟನೆಯನ್ನು ತೋರಿಸುವ, ಭವಿಷ್ಯ ಹೇಳುವ.

**भविष्यज्ञान** (ಭವಿಷ್ಯಜ್ಞಾನ) ನ. ಸಂ. ಕಾಲಜ್ಞಾನ, ಭವಿಷ್ಯ ವಿಚಾರಜ್ಞಾನ, ಭವಿಷ್ಯದ ದರ್ಶನ.

**भविष्या** (ಭವಿಷ್ಯಾ) ಪು. ಭವಿಷ್ಯ ಹೇಳುವ, ಮುಂದ ಮುಂದಕ್ಕೆ ಸರಿಸುವ, ಆಲಸ್ಯಮಾಡುವ, ವಿಲಂಬಿಸುವ.

**भव्य** (ಭವ್ಯ) ವಿ. ಸಂ. ಉತ್ತಮ, ಚೆಂದ, ದಿವ್ಯ.

**भसक्या** (ಭಸಕ್ಯಾ) ವಿ. ದುಡುಕಿನ, ಅವಿಚಾರದ, ಅಜಾಗರೂಕ, ದಾಂಡಿಗ, ಎಡವಟ್ಟ, ಪಾಮರ, ಅಡನಾಡಿ, ಅಸಭ್ಯ, ಕ್ರೂರ.

**भसकटणे** (ಭಸಕಟಣೇ) ಕ್ರಿ. ಅ. ದಾರಿಯಿಂದ ದೂರಾಗು, ಅಡ್ಡಹಾದಿಗೆ ಹೋಗು, ಸಿಗದೆಹೋಗು, ಕಾಣದಂತಾಗು.

**भसकन** (ಭಸಕನ್) ಕ್ರಿ. ವಿ. ಭಸಕ್ಕನೆ.

**भसका** (ಭಸಕಾ) ಪು. ತೂತು, ಕಿಂಡಿ, ತಗ್ಗು.

**भसभशीत** (ಭಸಭಶೀತ್) ವಿ. ಸುಲಭವಾಗಿ ಪುಡಿಯಾಗುವ, ಪುಸುಕಾದ.

**भसभोंगळ** (ಭಸಭೋಂಗಳ್) ವಿ. ಸಡಿಲ, ಶಿಥಿಲ, ಅಸ್ಪಷ್ಟ, ಸಡಿಲಾದ, ಸೈಲಾದ, ಉದಾಸೀನ, ಮಂದ, ಮೆತ್ತಗಾದ.

**भसरा** (ಭಸರಾ) ಪು. ಯೋಗಶಾಸ್ತ್ರದ ಕ್ರಿಯೆ, ಪ್ರಾಣಾಯಾಮದ ಪ್ರಕಾರ.

–घडचाळ (ಘಡ್ಯಾಳ್) ನ. ಮುಂಗೈಗಡಿಯಾರ, ರಿಸ್ಟ್‌ವಾಚ್.

**मणी–णी** (ಮಣೀ–ಣೀ) ಪು. ರತ್ನ, ಹರಳು.

**मणिबंध** (ಮಣಿಬಂಧ) ಪು. ಮಣಿಗಟ್ಟು, **मधगट** ನೋ.

**मणेर–री** (ಮಣೇರ್–ರೀ) ಪು. ಹಿಂ. ರತ್ನಪರೀಕ್ಷಕ. ಮಣಿಯಾರ, ಸರಾಫ, ಮಣಿಗಳ ವ್ಯಾಪಾರಿ.

**मणेर–मण्यार** (ಮಣೇರ್–ಮಣ್ಯಾರ್) ಪು. ವಿಷದ ಹಾವು.

**मत्** (ಮತ್) ಸರ್ವ. ಸಂ. ನನ್ನದು.

**मत** (ಮತ) ನ. ಸಂ. ಅಭಿಪ್ರಾಯ, ಸಂಪ್ರದಾಯ, ಪಂಥ. ೨. ಮತ, ವ್ಹೋಟ್.

**मतमतांतर** (ಮತಮತಾಂತರ) ನ. ಸಂ. ಭಿನ್ನಭಿನ್ನ ಮತ, ಮತಭಿನ್ನತೆ.

**–मंत** (–ಮಂತ) (ಪ್ರತ್ಯಯ) ಒಡೆತನ, ಪ್ರಭುತ್ವದರ್ಶಕ, ಪ್ರತ್ಯಯ, (ಧೀಮಂತ, ಶ್ರೀಮಂತ, ಕೀರ್ತಿಮಂತ).

**मतदार** (ಮತದಾರ) ಪು. ಮತಕೊಡುವವ, ಮತ ನೀಡುವವ.

**मतभेद** (ಮತಭೇದ್) ಪು. ಸಂ. ಮತಭಿನ್ನತೆ, ವಿಚಾರ ಭೇದ, ಅಭಿಪ್ರಾಯ ಭಿನ್ನತೆ.

**मंतरणे** (ಮಂತರಣೇ) ಕ್ರಿ. ಸ. ಮಂತ್ರಿಸು, ಮಂತ್ರ ಹಾಕು, ಮುಗ್ಧಮಾಡು, ಮರಳುಮಾಡು, ತಡೆಗಟ್ಟು, ವಶೀಕರಿಸು, ಆಧೀನದಲ್ಲಿಟ್ಟುಕೊಳ್ಳು, ಶೂನ್ಯ ಮಾಡು.

**मतलई** (ಮತಲಈ) ಸ್ತ್ರೀ. ತಂಗಾಳಿ, ಮಂದ ಮಾರುತ, ಶೀತಗಾಳಿ, ಬೈಲುಹವೆ, ಬೈಲುಗಾಳಿ.

**मतलब** (ಮತಲಬ್) ಪು. ಅರ. ಕಾರಣ, ನಿಮಿತ್ತ, ೨. ಉದ್ದೇಶ, ಸಂಕಲ್ಪ, ಆದೇಶ, ಅಭಿಪ್ರಾಯ. ೩. ಗುರಿ, ಹೇತು. ೪. ಅರ್ಥ, ಸಾರಾಂಶ, ತಾತ್ಪರ್ಯ, ತಂತ್ರ, ಯುಕ್ತಿ, ಕಸಬು. ೫. ಸ್ವಾರ್ಥ.

**मतलबी** (ಮತಲಬೀ) ವಿ. ಅರ. ಧೂರ್ತ, ಚತುರ, ಸ್ವಾರ್ಥಿ, ಯುಕ್ತಿವಂತ, ಮೋಸದ, ಯೋಜಕ.

**मतवादी** (ಮತವಾದೀ) ವಿ. ಸಂ. ಒಂದು ಪಕ್ಷದ, ಒಂದೇ ತತ್ವ ಪ್ರಣಾಲಿಯ, ವಿಶಿಷ್ಟ ತತ್ವಾನುಯಾಯಿ.

**मंतव्य** (ಮಂತವ್ಯ) ವಿ. ಸಂ. ವಿಚಾರಾರ್ಹ, ಕೈಕೊಳ್ಳತಕ್ಕ.

**मताभिमान** (ಮತಾಭಿಮಾನ) ಪು. ಸಂ. ಧರ್ಮಾಭಿಮಾನ.

**मति** (ಮತಿ) ವಿ. ಸಂ. ಬುದ್ಧಿ, ಜ್ಞಾನ, ವಿಚಾರ ಶಕ್ತಿ, ಸ್ವಭಾವ, ಮನಸ್ಸು, ತಿಳುವಳಿಕೆ.

**मतिभ्रम, मतिविभ्रम** (ಮತಿಭ್ರಮ, ಮತಿವಿಭ್ರಮ) ಪು. ಸಂ. ಬುದ್ಧಿ ಭ್ರಷ್ಟತೆ, ಬುದ್ಧಿಗೆಡುವಿಕೆ, ಹುಚ್ಚು, ಅತಿಕ್ರಮ, ದೂಷಿತಕಾರ್ಯ, ಪ್ರಮಾದ.

**मतिमंद** (ಮತಿಮಂದ) ವಿ. ಸಂ. ಬುದ್ಧಿಗೇಡಿ, ಅಜ್ಞಾನಿ, ಮೂರ್ಖ, ಜಡ, ಅವಿಚಾರಿ, ಹೆಡ್ಡ, ಮಂದಬುದ್ಧಿಯ.

**मताधिकार** (ಮತಾಧಿಕಾರ) ಪು. ಸಂ. ಮತದಹಕ್ಕು, ಮತ ನೀಡುವ ಅಧಿಕಾರ, ನಾಗರಿಕತನದ ಹಕ್ಕು.

**मतिमान्** (ಮತಿಮಾನ್) ವಿ. ಸಂ. ಬುದ್ಧಿವಂತ, ವಿಚಾರಶೀಲ, ವಿಚಾರಶಕ್ತಿಯುಳ್ಳವ, ಒಳ್ಳೆಯ ಸ್ವಭಾವದ, ವಿವೇಕವುಳ್ಳ.

**मतेली** (ಮತೇಲೀ) ಸ್ತ್ರೀ. ಹಡಗದ ಪಟ್ಟಿ.

**मत्कुण** (ಮತ್ಕುಣ) ಪು. ಸಂ. ತಗಣಿ, ಮತ್ಕುಣ.

**मत्त** (ಮತ್ತ) ವಿ. ಸಂ. ಸೊಕ್ಕಿದ, ಗರ್ವಿಷ್ಠ, ಮದವೇರಿದ, ಹೆಮ್ಮೆಯ, ಗುಂಗೇರಿದ, ತನ್ಮಯನಾದ.

**मत्ता** (ಮತ್ತಾ) ಸ್ತ್ರೀ. ಅರ. (ಮತಾ) ಆಸ್ತಿ, ಉತ್ಪನ್ನ ಬದುಕು, ಚಿರಸೊತ್ತು.

**माल–** (ಮಾಲ್–) ಆಸ್ತಿ ಪಾಸ್ತಿ.

**मंत्र** (ಮಂತ್ರ) ಪು. ಆಲೋಚನೆ, ವಿಚಾರ, ಧಾರ್ಮಿಕ ಮಂತ್ರ, ವೈಯಕ್ತಿಕ ಮತ, ಸಲಹೆ, ಮಂಟ, ಉಪಾಯ, ಮೋಹಿನಿ.

**मंत्रचळ** (ಮಂತ್ರಚಳ್) ನ. ಮಂತ್ರ ದೋಷಕರ ಪರಿಣಾಮ, ಮಂತ್ರೋಚ್ಚಾರಣದಿಂದಾದ ದುಷ್ಪರಿಣಾಮ.

**मंत्रचळचा** (ಮಂತ್ರಚಳ್ಯಾ) ವಿ. ಮಂತ್ರದೋಷದಿಂದ ದುಃಖಪಟ್ಟವ, ಲಹರಿ ಮನುಷ್ಯ, ಅನಾಗರಿಕ.

**मंत्रतंत्र** (ಮಂತ್ರತಂತ್ರ) ಪು. ಸಂ. ಮಂತ್ರಮಾಟ, ಮಾಟಗಾರಿಕೆ.

**मंत्रप्रयोग** (ಮಂತ್ರಪ್ರಯೋಗ) ಪು. ಸಂ. ಮಂತ್ರದ ಉಪಯೋಗ, ಮಂತ್ರ ಮಾಡುವಿಕೆ.

**मंत्राग्नि** (ಮಂತ್ರಾಗ್ನಿ) ಪು. ಸಂ. ಶವಕ್ಕೆ ವಿಧಿಪೂರ್ವಕ ಕೊಡುವ ಅಗ್ನಿ, ಮಂತ್ರಾಗ್ನಿ, ಔರ್ಧ್ವದೇಹಿಕ ಅಗ್ನಿ.

**मंत्राक्षत–ता** (ಮಂತ್ರಾಕ್ಷತ–ತಾ) ಸ್ತ್ರೀ. ಸಂ. ಮಂತ್ರಿಸಿದ ಅಕ್ಷತೆ, ಅಕ್ಕೀಕಾಳು, ವಿವಾಹದಲ್ಲಿಯ ಶುಭಾಕ್ಷತೆ, ಮಂಗಲಾಕ್ಷತೆ.

**मंत्रित** (ಮಂತ್ರಿತ) ವಿ. ಸಂ. ಮಾಟದಿಂದ ಮರುಳು ಗೊಳಿಸಿದ, ..

**मंत्री** (ಮಂತ್ರೀ) ಪು. ಸಂ. ಮಂತ್ರಿ, ವಿಚಾರಕ, ಅಮಾತ್ಯ, ಕಾರಭಾರಿ, ದಿವಾಣ, ರಾಯಭಾರಿ, ಉಪಾಧ್ಯಾಯ, ಪಾದ್ರಿ, ಮಂತ್ರವಾದಿ, ಮಾಟಗಾರ.

**मत्सर** (ಮತ್ಸರ) ಪು. ಸಂ. ಹೊಟ್ಟೆಯ ಕಿಚ್ಚು, ಉರಿ ಹೊಟ್ಟೆ, ಅಸೂಯೆ, ಈರ್ಷೆ.

**मत्सरी** (ಮತ್ಸರೀ) ವಿ. ಸಂ. ಮಾತ್ಸರ್ಯವುಳ್ಳ, ಹೊಟ್ಟೆ ಕಿಚ್ಚಿನ, ಮತ್ಸರವುಳ್ಳ, ಈರ್ಷೆಯ.

**मत्स्य** (ಮತ್ಸ್ಯ) ಪು. ಮೀನ, ಅನಿಮಿಷ.

**मत्स्यावतार** (ಮತ್ಸ್ಯಾವತಾರ) ಪು. ಮತ್ಸ್ಯಾವತಾರ, ವಿಷ್ಣುವಿನ ಮೊದಲನೆಯ ಅವತಾರ, ಮೀನಿನರೂಪ.

**मत्स्याहारी** (ಮತ್ಸ್ಯಾಹಾರೀ) ವಿ. ಸಂ. ಮೀನು ತಿನ್ನುವ, ಮೀನಭಕ್ಷಕ.

**मंथनी–णी** (ಮಂಥನೀ–ಣೀ) ಸ್ತ್ರೀ. ಪತ್ತಾರರ ಉಪ ಕರಣ.

**मंथणे, मथणे** (ಮಂಥಣೇ, ಮಥಣೇ) ಕ್ರಿ. ಸ. ಕಡಗೋಲಿ ನಿಂದ ಮೊಸರು ಕಡೆ.

**मथन, मंथन** (ಮಥನ್, ಮಂಥನ್) ನ. ಸಂ. ಕಡೆಯುು ವಿಕೆ, ಕೂಡುವಿಕೆ, ಕಡೆಯುುವಿಕೆ, ಚರ್ಚಿಸುವಿಕೆ, ಮೊಸರ ಕಡೆಯುುವಿಕೆ.

**मंथरी** (ಮಂಥರೀ) ಸ್ತ್ರೀ. ಕಡುಗೋಲಿನ ಹಗ್ಗ, ಕಡಿ ಯುವ ಹಗ್ಗ.

**मंथा–मंथान** (ಮಂಥಾ–ಮಂಥಾನ) ಪು. ಕಡಗೋಲು.

**मथळा, मथाळा** (ಮಥಳಾ, ಮಥಾಳಾ) ಪು. ಶೀರ್ಷಕ, ತಲೆಬರೆಹ, ಹೆಡಿಂಗ್.

**मद** (ಮದ) ಪು. ಸಂ. ಸೊಕ್ಕು, ಗರ್ವ, ಹೆಮ್ಮೆ, ಗುಂಗು, ವಿಕಾರ, ಅಹಂಕಾರ, ಹುಚ್ಚುತನ, ಮದದ ಪೇಯ.

**मंद** (ಮಂದ) ವಿ. ಸಂ. ಧಡ್ಡ, ಹೆಡ್ಡ, ಜಡ, ಮಂದ ಬುದ್ಧಿಯ. ೨. ಪು. ಶನಿಗ್ರಹ.

**मंदगति, मंदगामी** (ಮಂದಗತಿ, ಮಂದಗಾಮೀ) ವಿ. ಸಾವಕಾಶ ನಡಿಗೆಯ, ಮಂದ ಹೆಜ್ಜೆಯ, ಗಜಗಾಮಿ, ಮೆಲ್ಲಡಿಯ.

**मदत-द** (ಮದತ್–ದ್) ಸ್ತ್ರೀ. ಅರ. ನೆರವು, ಉಪಾಯ, ಬೆಂಬಲ.

**मदत(द)गार** (ಮದತ್(ದ್) ಗಾರ್) ಪು. ಫಾ. ಸಹಾ ಯಕ, ಅನುಕೂಲವಾಗುವ, ನೆರವಿನ, ಬೆಂಬಲ ನೀಡುವ.

**मदत(द)गारी, मदतनिशी** (ಮದತ್(ದ್) ಗಾರೀ, ಮದತ್‌ನಿಶೀ) ಸ್ತ್ರೀ. ಸಹಾಯ, ಅನುಕೂಲತೆ, ನೆರವಾಗುವಿಕೆ, ನೆರವಿನಗುಣ, ಸಹಾಯದ ಸ್ವಭಾವ, ಕೈನೀಡುವಿಕೆ, ಬೆಂಬಲಿಸುವಿಕೆ.

**मदतनीस** (ಮದತ್‌ನೀಸ್) ಪು. ಫಾ. ಸಹಾಯಕ, (ಅಧಿಕಾರಿ) ಸಹಕಾರಿ, ನೆರವಾಗುವವ, ಬೆಂಬಲಿಗ.

**मदन** (ಮದನ) ಪು. ಸಂ. ಕಾಮ, ಮನ್ಮಥ, ಮಾರ, ಲಾಲಸೆ, ಸೊಕ್ಕು, ವಿಕಾರ.

**मदनमस्त** (ಮದನ್‌ಮಸ್ತ) ವಿ. ಕಾಮಾತುರ, ಮನ್ಮಥಾಸಕ್ತ, ವಿಕಾರವಶ.

**मदनमूर्ति** (ಮದನ್‌ಮೂರ್ತಿ) ಪು. ಸಂ. ಕಾಮ ದೇವತೆ, **मदनाचा पुतळा** ನೋ.

**मदनसारिका** (ಮದನಸಾರಿಕಾ) ಸ್ತ್ರೀ. ಮದನನ ಕೈಗಿಳಿ, ಮದನನಸತಿ, ಒಂದು ಗಾಯಕ ಪಕ್ಷಿ.

**मदनाचा पुतळा** (ಮದನಾಚಾ ಪುತಳಾ) ಪು. ಮದನ ಮೂರ್ತಿ, ಸುಂದರ ಪುರುಷ.

**मंदभाग्य** (ಮಂದಭಾಗ್ಯ) ವಿ. ಸಂ. ದುರ್ದೈವಿ, ದೆಸೆಗೆಟ್ಟ.

**मंदमति** (ಮಂದಮತಿ) ವಿ. ಸಂ. ಮಂದವಿಚಾರಿ, ಅಲ್ಪಜ್ಞಾನಿ, ಅಲ್ಪಬುದ್ಧಿ, ಅಲ್ಪ ವಿಚಾರಿ, ತಿಳಿಗೇಡಿ.

**मंदबुद्धि** (ಮಂದಬುದ್ಧಿ) ವಿ. ಅಜ್ಞಾನಿ, ತಿಳಿಗೇಡಿ.

**मंदवार-वासर** (ಮಂದವಾರ-ವಾಸರ) ಪು. ಶನಿವಾಸರ, ಶನಿವಾರ.

**मंदस्मित** (ಮಂದಸ್ಮಿತ) ನ. ಸಂ. ಮುಗುಳುನಗೆ, ಮಂದಹಾಸ.

**मदलसा** (ಮದಲಸಾ) ಪು. (ಮಂಟಪದ ಮಧ್ಯ)

**मदालसा** (ಮದಾಲಸಾ) ಸ್ತ್ರೀ. (ಭಾಗ, ೨. ನವಯುವತಿ.

**मंदाई** (ಮಂದಾಈ) ಸ್ತ್ರೀ. ಮಂದತನ, ಮಂದತ್ವ, ಸಡಿಲುತನ, ಅಗ್ಗಳತೆ.

**मंदाकिनी** (ಮಂದಾಕಿನಿ) ಸ್ತ್ರೀ. ಸಂ. ಮಂದಾಕಿನಿ ನದಿ, ಗಂಗಾನದಿಯ ಒಂದು ಹೆಸರು.

**मंदाग्नि** (ಮಂದಾಗ್ನಿ) ಪು. ಸಂ. ಅಗ್ನಿಮಾಂದ್ಯ, ಅಪ ಚನ, ಅಗ್ನಿಮಾಂದ್ಯ.

**मदांध** (ಮದಾಂಧ) ವಿ. ಸಂ. ಸೊಕ್ಕಿನ, ಮದಾಂಧ, ತಾಮಸ, ಗರ್ವಿಷ್ಟ, ಗರ್ವದಿಂದ ಭ್ರಮಿಷ್ಟನಾದ.

**मदार** (ಮದಾರ್) ಸ್ತ್ರೀ. ಅರ. ಗೂನು, ಡುಬ್ಬ, ಇಣಿ, ಇಣಿಲು, ಡುಬರಿ.

**मदारी** (ಮದಾರೀ) ಪು. ಮಂತ್ರಕಾರ, ಮಾಂತ್ರಿಕ, ಮೋಸಗಾರ, ಡೊಂಬರವ.

**मंदार** (ಮಂದಾರ) ಪು. ಪಾರಿಜಾತ, ಹವಳದ ಪುಷ್ಪ, ಪಾರಿಜಾತಗಿಡ.

**मंदावणे** (ಮಂದಾವಣೇ) ಕ್ರಿ. ಅ. ಕಡಿಮೆಯಾಗು, ಇಳಿ, ಶಾಂತವಾಗು, ತಣ್ಣಗಾಗು, ಉಡುಗು, ಸಂಕುಚಿತವಾಗು.

**मंदावा** (ಮಂದಾವಾ) ಪು. ಇಳಿಯುವಿಕೆ, ಆಲಸ್ಯ, ಮಂದತನ, ಸಡಿಲುತನ.

**मंदिर** (ಮಂದಿರ) ನ. ಸಂ. ದೇವಸ್ಥಾನ, ದೇಗುಲ, ಗುಡಿ, ಪ್ರಾಸಾದ, ಮಹಾಲ್.

**मदिरा** (ಮದಿರಾ) ಸ್ತ್ರೀ. ಸಂ. ಮದ್ಯ, ಮಾದಕಪೇಯ.

**मंदी** (ಮಂದೀ) ಸ್ತ್ರೀ. ಹಿಂ. ಖಿನ್ನತೆ, ಉದ್ಯೋಗದಲ್ಲಿ ಇಳಿತ, ಮಂದಸ್ಥಿತಿ, ಕುಸಿಯುವಿಕೆ.

**मदीय** (ಮದೀಯ) ವಿ. ಸಂ. ನನ್ನ.

**मंदील** (ಮಂದೀಲ್) ಪು. ಫಾ. ಜರದ ರುಮಾಲ, ಜರದ ಪಟಕಾ.

**मदोत्कट** (ಮದೋತ್ಕಟ) ( ವಿ. ಮದಭರಿತ, ಮದ
**मदोन्मत्त** (ಮದೋನ್ಮತ್ತ) ( ವೇರಿದ (ಆನೆ)

**मंदोदरी** (ಮಂದೋದರೀ) ಸ್ತ್ರೀ. ರಾವಣನ ಪತ್ನಿಯ ಹೆಸರು, ಮಂಡೋದರಿ, ೨. ಕಪ್ಪೆ, ಹೆಣ್ಣುಕಪ್ಪೆ.

**मंदोष्ण** (ಮಂದೋಷ್ಣ) ಕ್ರಿ. ಬೆಚ್ಚಗಿನ, ಸಮಶೀತ,

**मद्य** (ಮದ್ಯ) ನ. ಸರಾಯಿ, ಮದ್ಯ.

**मद्यपान** (ಮದ್ಯಪಾನ) ಹೆಂಡ ಕುಡಿಯುವಿಕೆ, ಮದ್ಯ ಪಾನ.

**मद्यपाननिषेध** (ಮದ್ಯಪಾನ ನಿಷೇಧ) ಪು. ಪಾನ ನಿಷೇಧ, ಮದ್ಯಪಾನಪ್ರತಿಬಂಧ.

**मद्यपी** (ಮದ್ಯಪೀ) ಸೆರೆಗುಡುಕ, ಮದ್ಯಪಾನಿ.

**मध** (ಮಧ್) ಪು. ಜೇನು, ಜೇನುತುಪ್ಪ.

**मधपोळे** (ಮಧಪೋಳೇ) ನ. ಜೇನಿನಹುಟ್ಟು.

**मधाचे बोट लावणे** (ಮಧಾಚೇ ಬೋಟ್ ಲಾವಣೇ) ಕ್ರಿ. ಸ. ಆಶೆ ತೋರಿಸು, ಆಶೆಹಚ್ಚು, ಜೇನು ನೆಕ್ಕಿಸು, ಕೈವಶಮಾಡಿಕೊಳ್ಳು.

**मधिचा-ला** (ಮಧಿಚಾ-ಲಾ) ವಿ. ( ನಡುವಿನ, ಮಧ್ಯದ.
**मधील** (ಮಧೀಲ್) ವಿ. ( ಮಧ್ಯಸ್ಥ.

**मधभाग** (ಮಧಭಾಗ್) ಪು. ನಡುವಿನ ಭಾಗ, ಮಧ್ಯದ ಭಾಗ.

**मधलंड** (ಮಧಲಂಡ) ವಿ. ಅತಂತ್ರ, ತ್ರಿಶಂಕು.

**मधी** (ಮಧೀ) ಕ್ರಿ. ವಿ. ನಡುವೆ, ಮಧ್ಯದಲ್ಲಿ.

**मधु** (ಮಧು) ನ. ಸಂ. ಜೇನು ಮಕರಂದ, ವಿ. ಸಿಹಿ ಮಧುರ.

**मधुकर** (ಮಧುಕರ್) ಪು. ಸಂ. ಜೇನುನೊಣ.

**मधुकरी** (ಮಧುಕರೀ) ( ಸ್ತ್ರೀ. (ಮನೆಮನೆಗೆ ಹೋಗಿ
**माधुकरी** (ಮಾಧುಕರೀ) ( (ಬೇಡಿ ತಂದ ಆಹಾರ.

**मधुकुल्या** (ಮಧುಕುಲ್ಯಾ) ಸ್ತ್ರೀ. ಉತ್ತಮ ಊಟ.

**मधुपुळी** (ಮಧುಪುಳೀ) ಅರಸುಹುಣ್ಣು, ರಾಜವ್ರಣ, ಭಯಂಕರ ವ್ರಣ.

**मधुमक्षिका** (ಮಧುಮಕ್ಷಿಕಾ) ಪು. ಸಂ. ಜೇನು ನೊಣ, ಜೇನುಹುಳ.

**मधुमेह** (ಮಧುಮೇಹ) ಪು. ಸಂ. ಮಧುಮೇಹ, ಸಕ್ಕರೆಬೇನೆ, ಬಹುಮೂತ್ರರೋಗ.

**मधुर** (ಮಧುರ್) ವಿ. ಸಂ. ರುಚಿಯಾದ, ಸವಿಯಾದ, ಸೀ–ರುಚಿಕರ.

**मधुरा** (ಮಧುರಾ) ಸ್ತ್ರೀ. ಸಂ. ಗಂಡಮಾಲೆಯ ಜ್ವರ.

**मधुराम्ल** (ಮಧುರಾಮ್ಲ) ಸವಿಹುಳಿ.

**मधून** (ಮಧೂನ್) ಕ್ರಿ. ವಿ. ನಡುವಿನಿಂದ, ಮಧ್ಯ ದಲ್ಲಿಂದ, ನಡುವಿನೊಳಗಿಂದ.

**मधून मधून, अधून मधून** (ಮಧೂನ್ ಮಧೂನ್, ಅಧೂನ್ ಮಧೂನ್) ಕ್ರಿ. ಅ. ನಡು–ನಡುವೆ, ಆಗಾಗ್ಗೆ.

**मधोमध** (ಮಧೋಮಧ್) ಕ್ರಿ. ವಿ. ನಟ್ಟನಡುವೆ.

**मध्य** (ಮಧ್ಯ) ಪು. ಮಧ್ಯಬಿಂದು.

**मध्यंतर** (ಮಧ್ಯಂತರ) ನ. ಸಂ. ವಿಶ್ರಾಂತಿ, ನಡು ವಿನ ಬಿಡುವು.

**मध्यंतरी** (ಮಧ್ಯಂತರೀ) ಕ್ರಿ. ವಿ. ನಡುವೇಳೆಯಲ್ಲಿ, ವಿಶ್ರಾಂತಿವೇಳೆಯಲ್ಲಿ.

**मध्यबिंदु** (ಮಧ್ಯಬಿಂದು) ಪು. ಸಂ. ಕೇಂದ್ರಸ್ಥಾನ.

**मध्यम** (ಮಧ್ಯಮ) ವಿ. ಸಂ. ಸಾಮಾನ್ಯ. ೨. ಪು. ನಡ

**मध्यरात्र** (ಮಧ್ಯರಾತ್ರ) ಸ್ತ್ರೀ. ಅರ್ಧರಾತ್ರಿ, ನಡು ಇರುಳು, ನಡುರಾತ್ರಿ.

**मध्यरेषा** (ಮಧ್ಯರೇಷಾ) ಸ್ತ್ರೀ. ನಡುವಿನ ಗೆರೆ.

**मध्यलोक** (ಮಧ್ಯಲೋಕ) ಜಗತ್ತು.

**मध्यवर्ती** (ಮಧ್ಯವರ್ತೀ) ವಿ. ಸಂ. ಮುಖ್ಯ, ಕೇಂದ್ರ ಸ್ಥಾನದಲ್ಲಿಯ.

**मध्यस्थ** (ಮಧ್ಯಸ್ಥ) ವಿ. ನಡುವಿನ. ಪು. ಸಂ. ಮಧ್ಯಸ್ಥಗಾರ.

**मध्यस्थकी, मय्यस्तगिरी, मध्यस्थी** (ಮಧ್ಯಸ್ಥಕೀ, ಮಧ್ಯಸ್ಥಗಿರೀ, ಮಧ್ಯಸ್ಥೀ) ಸ್ತ್ರೀ. ಮಧ್ಯಸ್ಥನ ಕಾರ್ಯ, ಪಂಚನ ಕೆಲಸ, ಪಂಚಾಯತಿ, ತೀರ್ಪು ಗಾರನ ಕೆಲಸ.

**मध्यांक** (ಮಧ್ಯಾಂಕ) ಪು. ಸಂ. ತ್ರೈರಾಶಿಕದ ನಡುವಿನ ಪದ.

**मध्यान्हकाल** (ಮಧ್ಯಾನ್ಹಕಾಲ) ಪು. ಸಂ. ನಡು ಹಗಲು.

**मध्यान्ह** (ಮಧ್ಯಾನ್ಹ) ಪು. ಸಂ. ಮಧ್ಯಾಹ್ನ, ನಡು ಹಗಲು.

**मध्यान्हरात्र** (ಮಧ್ಯಾನ್ಹರಾತ್ರ) ಸ್ತ್ರೀ. ನಡು ಇರುಳು, ಅಪರಾತ್ರಿ.

**मध्यान्हरेषा** (ಮಧ್ಯಾಹ್ನರೇಷಾ) ಸ್ತ್ರೀ. ಸಂ. ಮಧ್ಯಾಹ್ನ ರೇಖೆ, ನಕ್ಷತ್ರದ ಅತ್ಯುಚ್ಚಸ್ಥಿತಿ, ವೈಭವದ ಉಚ್ಚ ದೆಸೆ.

**मध्ये** (ಮಧ್ಯೆ) ಕ್ರಿ. ವಿ. ಸಂ. ನಡುವೆ, ಒಳಗೆ.

**मध्येच** (ಮಧ್ಯೇಚ್) ಕ್ರಿ. ವಿ. ಮುಗಿಯುವ ಮುಂಚಿತವಾಗಿಯೇ.

**मधेमधे, मध्ये मध्ये** (ಮಧೇಮಧೇ, ಮಧ್ಯೆ ಮಧ್ಯೆ) ಕ್ರಿ. ವಿ. ನಡುನಡುವೆ, ಆಗ ಈಗ.

**मध्रा** (ಮಧ್ರಾ) ಸ್ತ್ರೀ. ಗುರುಳೆ, ಗುಳ್ಳೆ.

**मन** (ಮನ) ನ. ಸಂ. ಮನಸ್ಸು, ಅಂತಃಕರಣ, ಇಚ್ಛೆ, ಆಕಾಂಕ್ಷೆ, ಸೇರುವಿಕೆ.

**मनउठणे-उडणे** (ಮನಉಠಣೇ–ಉಡಣೇ) ಕ್ರಿ. ಅ. ಮನಸ್ಸು ಇಲ್ಲದಾಗು, ದಣಿ, ಬೇಸರು, ಬೇಸರು ಬರು.

**मनघालणे-लावणे** (ಮನಘಾಲಣೇ-ಲಾವಣೇ) ಕ್ರಿ.ಸ. ಮನಸ್ಸುಕೊಡು, ಲಕ್ಷ್ಯಕೊಡು, ಮನಸ್ಸುಹಾಕು.

**मनजडणे-बसणे** (ಮನಜಡಣೇ–ಬಸಣೇ) ಕ್ರಿ. ಅ. ಮನಗೆಡು, ಮನಸ್ಸುಕೂಡು, ಸೇರು, ಮನಸ್ಸಿಗೆ ಬರು.

**मनच्यामनी** (ಮನಚ್ಯಾಮನೀ) ಕ್ರಿ. ವಿ. ಮನಸ್ಸಿನಲ್ಲಿಯೇ, ಒಳಗೊಳಗೆ.

**मनतुटणे-मोडणे** (ಮನ್‌ತುಟಣೇ–ಮೋಡಣೇ) ಕ್ರಿ.ಅ. ಮನಸ್ಸುಹರಿ, ಇಲ್ಲದಾಗು, ಮನಸ್ಸು ತಿರುಗು.

**मनपाहणे** (ಮನಪಾಹಣೇ) ಕ್ರಿ. ಸ. ಮನಸ್ಸುನೋಡು, ಪರೀಕ್ಷಿಸು.

**मनमानेल तसे करणे** (ಮನಮಾನೇಲ್ ತಸೇ ಕರಣೇ) ಕ್ರಿ. ಸಂ. ಮನಬಂದಂತೆಮಾಡು, ಮನಸ್ಸಿನ ಹಿಂದೆ ನೋಡು.

**मन मोकळे करणे** (ಮನ್ ಮೋಕಳೇ ಕರಣೇ) ಕ್ರಿ. ಸಂ. ಮನಸ್ಸು ಬಿಚ್ಚು, ಮನಸ್ಸು ತೆರೆ, ಮನಸ್ಸಿನ ಗುಟ್ಟು ಹೇಳು.

**मन मोठे करणे** (ಮನ್ ಮೋಠೇ ಕರಣೇ) ಕ್ರಿ. ಸ. ಔದಾರ್ಯದಿಂದ ನಡೆ, ವಿಶಾಲ ಹೃದಯದಿಂದ ನಡೆ.

**मनाचा कपटी** (ಮನಾಚಾ ಕಪಟೀ) ವಿ. ಮನಸ್ಸಿನಿಂದ ಕಪಟಿ, ದುಷ್ಟ, ವಂಚಕ, ಠಕ್ಕ.

**मनाचा कुजका** (ಮನಾಚಾ ಕುಜಕಾ) ವಿ. ಮನಸ್ಸಿನಿಂದ ಕೊಳಕಾದವ, ವಿಶ್ವಾಸಘಾತಕ, ಕಪಟಿ.

**मनाचा कोवळा** (ಮನಾಚಾ ಕೋವಳಾ) ವಿ. ಕೋಮಲ ಮನಸ್ಸಿನ, ಉದಾರಾಂತಃಕರಣದ.

**मनाचा मोकळा** (ಮನಾಚಾ ಮೋಕಳಾ) ವಿ. ಬಿಚ್ಚು ಮನಸ್ಸಿನ, ನಿಷ್ಕಪಟ, ಸರಳ ಬುದ್ಧಿಯವ.

**मनाचा मोठा** (ಮನಾಚಾ ಮೋಠಾ) ವಿ. ದೊಡ್ಡ ಮನಸ್ಸಿನ.

**मनाचा हलका** (ಮನಾಚಾ ಹಲಕಾ) ವಿ. ಹಗುರು ಮನಸ್ಸಿನ, ಕ್ಷುಲ್ಲಕ ಮನಸ್ಸಿನ, ಮನಸ್ಸಿನಿಂದ ಹಗುರಾದ.

**मनात एक जनात एक** (ಮನಾತ್‌ಏಕ್ ಜನಾತ್‌ಏಕ್) ಗಾದೆಯಮಾತು. ಮನಸ್ಸಿನಲ್ಲಿ ಒಂದು ಹೊರಗೆ ಒಂದು, ಜನರಲ್ಲಿ ಒಂದು, ಮನದಲ್ಲಿ ಒಂದು, ಅಂತರಂಗದಲ್ಲಿ ಒಂದು, ಬಹಿರಂಗದಲ್ಲಿ ಒಂದು.

**मनात गाठ बांधणे–घालणे** (ಮನಾತ್ ಗಾಠ್‌ಬಾಂಧಣೇ-ಘಾಲಣೇ) ಕ್ರಿ. ಸ. ಮನಸ್ಸಿನಲ್ಲಿ ನಿಶ್ಚಯಿಸು.

**मनात मांडे खाणे** (ಮನಾತ್ ಮಾಂಡೇ ಖಾಣೇ) ಕ್ರಿ.ಸ. ಮನಸ್ಸಿನಲ್ಲಿ ಮಂಡಿಗೆ ತಿನ್ನು, ಗಾಳಿಗೋಪುರ ಕಟ್ಟು.

**मनातून उतरणे** (ಮನಾತೂನ್ ಉತರಣೇ) ಮನಸ್ಸಿಗೆ ಬೇಡವಾಗು.

**मनापासून** (ಮನಾಪಾಸೂನ್) ಕ್ರಿ. ಅ. ಮನಸ್ಸಿನಿಂದ, ಪ್ರಾಮಾಣಿಕತನದಿಂದ, ಆತ್ಮೀಯತೆಯಿಂದ.

**मनावर घेणे** (ಮನಾವರ್ ಘೇಣೇ) ಕ್ರಿ. ಸ. ಲಕ್ಷ್ಯ ಕೊಡು, ಹಚ್ಚಿಕೊಳ್ಳು.

**मनास येणे-वाटणे** (ಮನಾಸ್ ಯೇಣೇ – ವಾಟಣೇ) ಕ್ರಿ.ಅ. ಮನಸ್ಸಿಗೆ ಬರು, ಮನಸ್ಸು ಒಪ್ಪು, ಸೇರು.

**मनासारखा** (ಮನಾಸಾರಖಾ) ಕ್ರಿ.ವಿ. ಬಯಸಿದಂತೆ.

**मनात धरणे** (ಮನತ್ ಧರಣೇ) ಕ್ರಿ. ಸ. ಮನಸ್ಸಿನಲ್ಲಿಡು, ನೆನಪಿನಲ್ಲಿಡು, ಕುನಸು ಇಡು.

**मनोमन साक्ष** (ಮನೋಮನ ಸಾಕ್ಷ) ಸ್ತ್ರೀ. ಮನಸ್ಸಿಗೆ ಮನವೇ ಸಾಕ್ಷಿ, ಸ್ವಂತದ ವಿಚಾರದಿಂದಲೆ ಮನವರಿಕೆ.

**मनोमनी** (ಮನೋಮನೀ) ಕ್ರಿ.ವಿ. ಮನಸ್ಸಿನಲ್ಲಿಯೆ–ಹೊರಗೆ ಆಡಿ ತೋರಿಸದೆ)

**मोकळचा मनाने** (ಮೋಕಳ್ಯಾ ಮನಾನೇ) ಕ್ರಿ. ವಿ. ಬಿಚ್ಚು ಮನಸ್ಸಿನಿಂದ, ತೆರೆದ ಹೃದಯದಿಂದ.

**मन ओळख** (ಮನ ಓಳಖ್) ಸ್ತ್ರೀ. ಮನಸ್ಸಿನ ಗುರುತು, ಮನಸ್ಸಿನ ಪರಿಚಯ, ದೃಢನಂಬಿಗೆ ನಿಶ್ಚಿತ ಮತ.

**मन:कल्पित** (ಮನಕಲ್ಪಿತ) ವಿ. ಸಂ. ಕೇವಲ ಕಲ್ಪನೆಯ, ಕಲ್ಪನೆ ಮಾತ್ರದ, ಕಲ್ಪಿತವಾದ.

**मनकवडा** (ಮನಕವಡಾ) ಪು. ಪರರ ಮನಸ್ಸನ್ನು ಅರಿಯುವ, ಎರಡನೆಯವರ ಮನಸ್ಸು ತಿಳಕೊಳ್ಳುವ, ಎರಡನೆಯವರ ರಹಸ್ಯ ಗೊತ್ತುಮಾಡಿಕೊಳ್ಳುವ.

**मनकामना** (ಮನಕಾಮನಾ) ಸ್ತ್ರೀ. ಸಂ. ಮನಸ್ಸಿನ ಆಶೆ, ಮನಸ್ಸಿನ ಇಚ್ಛೆ.

**मन (नो) देवता** (ಮನ (ನೋ) ದೇವತಾ) ಸ್ತ್ರೀ. ಮನೋದೇವತೆ, ಮನಸ್ಸೆಂಬ ದೇವತೆ.

**मनधरणी** (ಮನಧರಣೀ) ಸ್ತ್ರೀ. ಮನಸ್ಸನ್ನು ವಲಿಸುವಿಕೆ, ಮನಸ್ಸು ಹಿಡಿಯುವಿಕೆ, ಅನುಗ್ರಹ.

**मनन** (ಮನನ್) ನ. ಸಂ. ಚಿಂತನೆ, ವಿಚಾರ, ವಿಚಾರಮಾಡುವಿಕೆ.

**मननशील** (ಮನನಶೀಲ್) ವಿ. ಸಂ. ಚಿಂತನೆ ಮಾಡುವವ, ವಿಚಾರ ಮಾಡುವವ.

**मन:पीडा** (ಮನಪೀಡಾ) ಸ್ತ್ರೀ. ಮನದಪೀಡೆ, ಮನಸಿನ ಸಂಕಟ, ಮನಸ್ಸಿನ ದುಃಖ, ಮನೋವ್ಯಥೆ.

**मन:पूत** (ಮನಃಪೂತ) ವಿ. ಸಂ. ಮನಸ್ಸಿಗೆ ಪವಿತ್ರವೆಂದು ತೋರಿದಂತೆ, ನಿರ್ಮಲವೆಂದು ತೋರಿದಂತೆ

**मनःपूर्वक** (ಮನಃಪೂರ್ವಕ) ವಿ. ಸಂ. ಮನಸ್ಸುಗೊಟ್ಟು, ಲಕ್ಷ್ಯವಿಟ್ಟು.

**मनमिळाऊ** (ಮನಮಿಳಾಊ) ವಿ. ಮನಸ್ಸು ನೋಯದಂತೆ ನಡೆಯುವವ.

**मनमुराद** (ಮನಮುರಾದ್) ವಿ. ಸಂ. + ಅರ. ಸಾಕಷ್ಟು, ಬೇಕಷ್ಟು, ಅತಿಶಯ, ಉಲ್ಲಾಸಕರ, ಸುಖಕರ.

**मनमोहन** (ಮನಮೋಹನ) ವಿ. ಸಂ. ಮನಸ್ಸು ಸೆಳೆಯುವ, ಮನಸ್ಸನ್ನು ಜಗ್ಗುವ, ಆಕರ್ಷಕ.

**मनलज्जा** (ಮನಲಜ್ಜಾ) ಸ್ತ್ರೀ. ಸಂ. ಮನಸ್ಸಿನ ನಾಚಿಕೆ, ವಿನಯ ನಮ್ರತೆ.

**मन:समजावणी** (ಮನಸಮಜಾವಣೀ) ಸ್ತ್ರೀ. ಮನಸ್ಸು ಒಲಿಸುವಿಕೆ, ಮನಸ್ಸನ್ನು ಮೆಚ್ಚಿಸುವಿಕೆ, ಕೆಂಪು ಗಂಧಕ, ದ್ಯುಖಶಾಂತಿ.

**मनसमजूत** (ಮನಸಮಜೂತ್) ಸ್ತ್ರೀ. ಮನಸ್ಸಿನ ತಿಳುವಳಿಕೆ, ಜ್ಞಾನ, ಅರಿವು.

**मनसुटका** (ಮನಸುಟಕಾ) ಸ್ತ್ರೀ. ಮನಸ್ಸಿನ ಶಾಂತಿ, ಮನಸ್ಸಿನ ಬಿಡುಗಡೆ.

**मनसुबा** (ಮನಸುಬಾ) ಪು. ಅರ. ಉದ್ದೇಶ, ಮನೋದ್ದೇಶ, ಕಲ್ಪನೆ. ೨. ಮಾದರಿ, ನಮೂನೆ, ವಿಚಾರ.

**मनसुबी** (ಮನಸೂಬೀ) ವಿ. ಅ. ಮಧ್ಯಸ್ಥಿಕೆ, ಹೇಳು, ಮನಸ್ಸು, ಹಂಚಿಕೆ.

**मनसोक्त** (ಮನಸೋಕ್ತ) ವಿ. ಸಂ. ಮನಸ್ಸಿಗೆ ಬಂದಂತೆ, ಮನಸ್ಸು ಹೇಳಿದಂತೆ. ೨. ಬಹಳ, ಬೇಕಾದಷ್ಟು.

**मनस्ताप** (ಮನಸ್ತಾಪ) ಪು. ಸಂ. ಮನಸ್ಸಿನ ಸಂಕಟ, ಮನಸ್ಸಿಗೆ ಹತ್ತುವಿಕೆ, ಪಶ್ಚಾತ್ತಾಪ, ಸಂತಾಪ, ಸಂಕಟ, ದುಃಖ, ವೇದನೆ.

**मनस्वी** (ಮನಸ್ವಿ) ವಿ. ಸಾಕಷ್ಟು, ವಿಪುಲ ಸಾಕಾದಷ್ಟು, ಮನಸ್ಸಿಗೆ ಬಂದಷ್ಟು.

**मना** (ಮನಾ) ಸ್ತ್ರೀ. ಅರ. ನಿಷೇಧ.

**मनाई** (ಮನಾಈ) ಸ್ತ್ರೀ. ಅರ. ಅಡ್ಡಿ, ನಿಷೇಧ, ಹರಕತ್ತು, ಆಕ್ಷೇಪ.

**मनाचा उधळा** (ಮನಜಾ ಉಧಳಾ) ವಿ. ಬಿಚ್ಚು ಮನಸ್ಸಿನ, ಉದಾರ, ದುಂದುಗಾರ ಸ್ವಭಾವದ, ಸರಳ, ನಿಷ್ಕಪಟ, ಅಕೃತ್ರಿಮ.

**मनाची गाठ** (ಮನಾಚೀ ಗಾಠ) ಸ್ತ್ರೀ. ಮನಸ್ಸಿನ ಗಂಟು, ದೃಢಸಂಕಲ್ಪ, ಜಿಗಟುತನ.

**मनाविणे** (ಮನಾವೀಣೇ) ಕ್ರಿ. ನ. ಜಯಪಡಿಸು, ಗೆಲ್ಲು, ಒಡಂಬಡಿಸು, ಸಮ್ಮತಿ ಪಡಿಸು.

**मनी** (ಮನೀ) ಸ್ತ್ರೀ. ಬೆಕ್ಕು. (ಹೆಸರು)

**मनीषा** (ಮನೀಷಾ) ಸ್ತ್ರೀ. ಸಂ. ಇಚ್ಛೆ, ಆಶೆ, ಆಸೆ, ಆಕಾಂಕ್ಷೆ.

**मनु** (ಮನು) ಪು. ಸಂ. ಕಾಲ, ಯುಗ, ಹಂಗಾಮು ಶಕ, ೨. ಮನುಋಷಿ, ಕಾಲಖಂಡ ಶಕದ ಆರಂಭ.

**मनुका** (ಮನುಕಾ) ಸ್ತ್ರೀ. ಅರ. ದ್ರಾಕ್ಷೆ, ಒಣಗಿದ ದ್ರಾಕ್ಷೆ.

**मनुज** (ಮನುಜ) ಪು.} ಮನುಷ್ಯ, ಮನುಷ್ಯಜಾತಿ,
**मनुष्य** (ಮನುಷ್ಯ) } ಮಾನವಜಾತಿ, ಮನುಷ್ಯ.

**मनुष्यबळ** (ಮನುಷ್ಯಬಳ) ನ. ಬಹಳಷ್ಟು ಜನರಿರುವಿಕೆ. ೨. ಸಹಾಯಕರು.

**मनुष्य लोक** (ಮನುಷ್ಯ ಲೋಕ) ಪು. ಸಂ. ಜಗತ್ತು, ಇಹಲೋಕ.

**मनेच्छा** (ಮನೇಚ್ಛಾ) ಸ್ತ್ರೀ. ಆಶೆ, ಇಚ್ಛೆ, ಆಕಾಂಕ್ಷೆ, ಒಲವು.

**मनेप्सित** (ಮನೇಪ್ಸಿತ) ವಿ. ಆಶಿಸಿದ, ಇಚ್ಛಿತ, ಆಶೆ, ಇಚ್ಛೆ, ಆಕಾಂಕ್ಷೆ.

**मनोगति** (ಮನೋಗತಿ) ಸ್ತ್ರೀ. ಮನಸ್ಸಿನ ಆವೇಗ, ವಿಚಾರತ್ವರೆ, ವಿಚಾರದ ಗತಿ, ವೈಚಾರಿಕ ತೀವ್ರತೆ.

**मनोगत** (ಮನೋಗತ) ನ. ಸಂ. ಮನಸ್ಸಿನಲ್ಲಿರುವ ವಿಚಾರ.

**मनोती** (ಮನೋತೀ) ಸ್ತ್ರೀ. ಇಚ್ಛೆ, ಆಶೆ, ಬಯಕೆ, ಆಕಾಂಕ್ಷೆ, ಕಂತ.

**मनोत्साह** (ಮನೋತ್ಸಾಹ) ಪು. ಮನಸ್ಸಿನ ಉತ್ಸಾಹ ಹುರುಪು, ಉಲ್ಲಾಸ.

**मनोदय** (ಮನೋದಯ) ಪು. ಮನಸ್ಸು, ಹೇತು, ಉದ್ದೇಶ, ಯೋಜನೆ.

**मनोद्देश** (ಮನೋದ್ದೇಶ) ಪ್ರತಿಜ್ಞೆ, ಸಂಕಲ್ಪ, ನಿರ್ಧಾರ, ಅಂತ್ಯ, ಮುಗಿಸುವುದು, ತೀರ್ಪು, ನಿರ್ಣಯ.

**मनोधर्म** (ಮನೋಧರ್ಮ) ಪು. ಮನಸ್ಸಿನ, ಒಲವು, ಉದ್ದೇಶ, ಹೇತು.

**मनोधारणा** (ಮನೋಧಾರಣಾ) ಸ್ತ್ರೀ. ಸಂ. ವಿಚಾರ, ಮನಸ್ಸಿನ ಒಲವು, ಮನಸ್ಸಿನ ಸಂಕಲ್ಪ.

**मनोनिग्रह** (ಮನೋನಿಗ್ರಹ) ಪು. ಸಂ. ಮನಃ ಸಂಯಮ, ನಿಶ್ಚಯ, ನಿರ್ಧಾರ, ನಿರ್ಣಯ, ಠರಾವು

**मनोभंग** (ಮನೋಭಂಗ) ಪು. ಸಂ. ನಿರಾಶೆ, ಮನಸ್ಸಿನ ನಿರುತ್ಸಾಹ, ಆಶಾಭಂಗ, ವೈರಾಗ್ಯ, ಪರಾಜಯ.

**मनोभव** (ಮನೋಭವ) ಪು. ಸ. ಮನ್ಮಥ, ಕಾಮ.

**मनोभाव** (ಮನೋಭಾವ) ಪು. ಸಂ. ಮನಸ್ಥಿತಿ, ಉದ್ದೇಶ, ಹೇತು.

**मनोभावे – मनोभावने** (ಮನೋಭಾವೇ–ಮನೋಭಾವನೇ) ಕ್ರಿ. ವಿ. ಅಂತಃಕರಣ ಪೂರ್ವಕ, ಮನಸ್ಸಿನಿಂದ.

**मनोभिराम** (ಮನೋಭಿರಾಮ) ವಿ. ಸಂ. ಆನಂದಕರ, ಸುಖದಾಯಕ, ಸುಖಕಾರಕ.

**मनोमय** (ಮನೋಮಯ) ವಿ. ಸಂ. ಮನಸ್ಸಿನ, ನಿಷ್ಕಟ, ವಾತ್ಸಲ್ಯಪೂರ್ಣ, ಮನೋರಂಜಕ, ಮನರಂಜಿಸುವ.

**मनोरंजक** (ಮನೋರಂಜಕ) ವಿ. ಸಂ. ಸರಳ, ಚಿತ್ತವೇಧಕ, ಮನೋಹರ.

**मनोरंजन** (ಮನೋರಂಜನ) ನ. ಸಂ. ಚಿತ್ತವೇಧಕತ್ವ, ಮನೋಹರತೆ. ೨. ಚೆಲ್ಲಾಟ, ಆಟ, ಕ್ರೀಡೆ, ಮೋಜು.

**मनोरथ** (ಮನೋರಥ) ಪು. ಸಂ. ಹೇತು, ಉದ್ದೇಶ, ಯೋಜನೆ, ಆಶೆ, ಇಚ್ಛೆ.

**मनोरम** (ಮನೋರಮ) ವಿ. ಸಂ. 'मनोरंजक' ನೋ.

**मनोरमा** (ಮನೋರಮಾ) ಸ್ತ್ರೀ. ಸಂ. ಸುಂದರಸ್ತ್ರೀ, ಪ್ರೀತಿಯ ಹೆಂಗಸು, ಭಾರ್ಯೆ.

**मनोरा** (ಮನೋರಾ) ಪು. ಅರ. ಮಸೀದೆಯ ಶಿಖರ, ಗುಮ್ಮಟ.

**मनोविकार** (ಮನೋವಿಕಾರ) ಪು. ಸ. } (ಮನಸ್ಸಿನ ವಿಕಾರ,
**मनोविकृति** (ಮನೋವಿಕೃತಿ) ಸ್ತ್ರೀ. ಸಂ. } ವಿಕೃತಿ.

**मनोवृत्ति** (ಮನೋವೃತ್ತಿ) ಸ್ತ್ರೀ. ಸಂ. ಸ್ವಭಾವ, ಒಲವು.

**मनोवेग** (ಮನೋವೇಗ್) ಪು. ಸಂ. ಮನಸ್ಸಿಗೆ ವೇಗ.

**मनोव्यापार** (ಮನೋವ್ಯಾಪಾರ) ಪು. ಸಂ. ಮನಸ್ಸಿನಲ್ಲಿ ನಡೆದ ವಿಚಾರ.

**मनोहत** (ಮನೋಹತ) ವಿ. ಸಂ. ನಿರಾಶೆಯಾದ, ನಿರುತ್ಸಾಹಿಯಾದ, ಭಂಗಗೊಂಡ, ಕಂಗೆಡಿಸಿದ.

**मनोहर** (ಮನೋಹರ) ವಿ. ಸುಂದರವಾದ **मनोभिराम** ಆಕರ್ಷಕವಾದ, ಚೆಲುವಾದ, ಸೊಗಸಿನ, ರಮಣೀಯ, ಪ್ರಿಯಕರ.

**मन्मथ** (ಮನ್ಮಥ) ಪು. ಸಂ. ಮದನ, ಕಾಮ.

**मन्वंतर** (ಮನ್ವಂತರ) ನ. ಸಂ. ಯುಗ, ಯುಗಾಂತರ, ಕಾಲಖಂಡ, ಯೋಗ್ಯಕಾಲ, ಮನುವಿನ ಕಾಲ.

**मम** (ಮಮ) ಸರ್ವ. ನನ್ನ.

**–म्हणणे** (–ಮ್ಹಣಣೇ) ಕ್ರಿ. ಸ. ಬರಿಯ ಉಪಚಾರಕ್ಕೆ ಕೆಲಸ ಮಾಡು, ತಾನಾಗಿ ಮಾಡದಿರು.

**ममता** (ಮಮತಾ) ಸ್ತ್ರೀ. ಸ. ಪ್ರೀತಿ, ಪ್ರೇಮ.

**–ममता लावणे** (ಮಮತಾ ಲಾವಣೇ) ಪ್ರೀತಿ ಹಚ್ಚು, ಪ್ರೀತಿ ಸಂಪಾದಿಸು, ಸಲುಗೆಹಚ್ಚು.

**ममताळु** (ಮಮತಾಳು) ವಿ. ಸಂ. ದಯಾಳು, ಮೃದು, ಕೋಮಲ, ಪ್ರೀತಿಮಾಡುವ.

**ममत्व** (ಮಮತ್ವ) ನ. ಸಂ. ನನ್ನದೆಂಬ ಭಾವನೆ, ಆದರ, ಪ್ರೇಮ, ಪ್ರೀತಿ, ನನ್ನದೆಂಬ ತಿಳುವಳಿಕೆ, ಭಾವನೆ.

**–मय** (–ಮಯ) ಪ್ರತ್ಯಯ. ವಿ. ಪೂರ್ಣತಾ ದರ್ಶಕ ಪ್ರತ್ಯಯ.

**मयत**(ಮಯತ) ವಿ. ಅರ. ಸತ್ತ. ಸ್ತ್ರೀ. ಶವಸಂಸ್ಕಾರ.

**मयदा** (ಮಯದಾ) ಪು. 'मैदा' ನೋ.

**मयूख** (ಮಯೂಖ) ಪು. ಸಂ. ಕಿರಣ, ಪ್ರಕಾಶ, ರವಿ ರಶ್ಮಿ, ಕಿಂಡಿ, ಬೆಳಕು.

**मयूर** (ಮಯೂರ್) ಪು.ಸಂ. ನವಿಲು, ಮಯೂರಕ.

**मयूरी** (ಮಯೂರೀ) ಸ್ತ್ರೀ. ಹೆಣ್ಣು ನವಿಲು.

**मर** (ಮರ) ನ. ಗಿಡದ ಕೊಳೆತಭಾಗ, ನಾಶವಾದ ಬೆಳೆ, ೨. ಮೃತಾವಸ್ಥೆ, ಮರಣೋನ್ಮುಖತೆ

**मरी मरणे** (ಮರೀ ಮರಣೇ) ಕ್ರಿ. ಅ. ಜೀವಗಂಡಾಂತರದಲ್ಲಿ ಸಿಗು, ಸಾವು ಮೈಮೇಲೆ ಬರು.

**मरकत** (ಮರಕತ್) ಪು. ಪಚ್ಚೆ, ಪನ್ನ.

**मरगत** (ಮರಗತ್) ಸ್ತ್ರೀ. }ದಣಿವು, ಶ್ರಮ, ಹುಸ್ಸೆ
**मरगळ** (ಮರಗಳ್) ಸ್ತ್ರೀ. }ನ್ನುವಿಕೆ, ಮೈಚೆಲ್ಲುವಿಕೆ.

**मरगळीस येणे** (ಮರಗಳೀಸ್ ಯೇಣೇ) ಕ್ರಿ. ಅ. ದಣಿವಾಗು, ಶ್ರಮಪಡು, ಬಳಲು, ಆಯಾಸಪಡು.

**मरगी** (ಮರಗೀ) ಸ್ತ್ರೀ. ಹಿಂ. ಬೇನೆ, ಪ್ರಾಣಘಾತುಕ ಕೇಡು, ಮಲರೋಗ.

**मरण** (ಮರಣ) ನ. ಸಂ. ಸಾವು, ಹಾನಿ, ಲುಕ್ಸಾನ, ಗಂಡಾಂತರ, ಧಕ್ಕೆ.

**आजचे मरण उद्यावरलोटणे** (ಆಜಚೇ ಮರಣ ಉದ್ಯಾವರ್ ಲೋಟಣೇ) ಕ್ರಿ. (ಗಾದೆಯಮಾತು) ಇಂದಿನ ಸಾವು ನಾಳೆಗೆ ಸಾಕು, ಕಾಲಹರಣ ಮಾಡು.

**उद्याचे मरण आज आणणे** (ಉದ್ಯಾಚೇ ಮರಣ ಆಜ್ ಆಣಣೇ) ಕ್ರಿ. ಅ. (ಗಾದೆಯಮಾತು) ನಾಳಿನ ಸಾವು ಈಗಲೇ ತಂದುಕೊಳ್ಳು.

**आपल्या मरणाने मरणे** (ಆಪಲ್ಯಾ ಮರಣಾನೇ ಮರಣೇ) ಕ್ರಿ. ಅ. ತನ್ನ ಕರ್ಮದಿಂದ ತಾನು ಸಾಯು.

**मरणाच्या दारी बसणे** (ಮರಣಾಚ್ಯಾ ದಾರೀ ಬಸಣೇ)
**मरणाच्या पंथास लागणे** (ಮರಣಾಚ್ಯಾ ಪಂಥಾಸ್ ಲಾಗಣೇ) ಮರಣ ಸಮೀಪಿಸು.

**मरणनाही** (ಮರಣನಾಹೀ) (ನುಡಿ) ತಪ್ಪುವುದಿಲ್ಲ, ಖಂಡಿತ.

**मरणतरण** (ಮರಣತರಣ) ನ. ಜೀವನ ಮರಣ.

**मरणे** (ಮರಣೇ) ಕ್ರಿ. ಅ. ಸಾಯು.

**मरणोन्मुख** (ಮರಣೋನ್ಮುಖ) ವಿ. ಸಂ. ಮೃತ್ಯು ಪಂಥದಲ್ಲಿದ್ದ.

**मरतबा** (ಮರತಬಾ) ಪು. ಅರ. ಯೋಗ್ಯತೆ, ದರ್ಜೆ, ಮಾನದ ಸ್ಥಾನ, ಮಾನ–ಮರ್ಯಾದೆ.

**मरतमढे** (ಮರತ್‌ಮಢೇ) ನ. ಜೀವಂತ ಹೆಣ, ನಡೆದಾಡುವ ಹೆಣ. (ಅಶಕ್ತ ಮನುಷ್ಯ)

**मरतवांझ** (ಮರತ್‌ವಾಂಝ) ಸ್ತ್ರೀ. ಜನ್ಮದಾಕ್ಷಣವೇ ಸಾಯುವ ಕೂಸಿನ ತಾಯಿ.

**मरतीक** (ಮರತೀಕ್) ನ. ಶವ, ಹೆಣ, ಮೃತದೇಹ. ೨. ಶವ ಸಂಸ್ಕಾರ.

**मरतुकडा** (ಮರತುಕಡಾ) ವಿ. ಬಡಕ, ಸೊರಗಿದ, ಕೃಶನಾದ, ತಿಳುವಾದ, ಒಣಗಿದ.

**मरद–मर्द** (ಮರದ್–ಮರ್ದ್) ಪು. ಫಾ. ಗಂಡಸು, ಮನುಷ್ಯ.

**मरदणे**(ಮರದಣೇ) ಕ್ರಿ.ಸ.ದಬ್ಬಿಸು, ಒತ್ತು, ಇರುಕು, ಹಿಸುಕು, ಕಿವುಚು, ಹಿಂಡು.

**मरफा** (ಮರಫಾ) ಪು. ಅರ.ಚರ್ಮವಾದ್ಯ, ಡೋಲು.

**मरफेकरी** (ಮರಫೇಕರೀ) ಪು. ಚರ್ಮವಾದ್ಯಕಾರ, ಚರ್ಮವಾದ್ಯ ಬಾರಿಸುವವ.

**मरमर कामकरणे** (ಮರ್‌ಮರ್ ಕಾಮಕರಣೇ) ಕ್ರಿ. ಅ. ಆಮರಣದುಡಿ

**मरवा** (ಮರವಾ) ಪು. ಹಿಂ. ಮರವಾ, ಸುವಾಸಿತ ವನಸ್ಪತಿ.

**मरशा** (ಮರಶಾ) ಪು. ಅರ. (ಮರ್ಸಿಯಾ) ಶೋಕ ಗೀತೆ, ಮರಣಗೀತೆ, ಮೃತನಿಗಾಗಿ ಗೀತೆ.

**मराठमोळा** (ಮರಾಠಮೋಳಾ) ಪು. ಮರಾಠಾಜಾತಿ, ಮರಾಠಾ ಜನರು.

**मराठा** (ಮರಾಠಾ) ಪು. ಸ. ಮಹಾರಾಷ್ಟ್ರದವ, ಮರಾಠಾ, ಒಂದುಜಾತಿ.

**मराठी** (ಮರಾಠೀ) ಸ್ತ್ರೀ. ಮರಾಠೀ ಭಾಷೆ. ೨. ವಿ. ಮರಾಠರ.

**मरातब** (ಮರಾತಬ್) ಪು. ಅರ. ಮಾನ–ಮರ್ಯಾದೆ, ಗೌರವಾದರ, ಯೋಗ್ಯತೆ, ದರ್ಜೆ, ಹುದ್ದೆ.

**–मान** (–ಮಾನ್) ಪು. ಮರ್ಯಾದೆ.

**मरामत** (ಮರಾಮತ್) ಸ್ತ್ರೀ. ಅರ. ಸುಧಾರಿಸುವಿಕೆ, ದುರಸ್ತಿ, ನೆಟ್ಟಗೆ ಮಾಡುವಿಕೆ.

**मरामर** (ಮರಾಮರ್) ಸ್ತ್ರೀ. ಸಾವು.

**मराळ**(ಮರಾಳ್) ಪು.ಸಂ. ಹಂಸ, ರಾಜಹಂಸ, ಬಾತು ಗೋಳಿ, ೨.ಮೂರ್ಖ, ಹೆಡ್ಡ.

**मरी** (ಮರೀ) ಸ್ತ್ರೀ. ಬೇನೆ, ಸಂಸರ್ಗ, ಸಾಯುವಸ್ಥಿತಿ.

**मर्कट** (ಮರ್ಕಟ) ಪು. ಸಂ. ಮಂಗ, ಕಪಿ, ವಾನರ, ಕೋಡಗ.

**मर्जी** (ಮರ್ಜೀ) ಸ್ತ್ರೀ. ಅರ. ಇಷ್ಟ, ದಯೆ, ಅನುಗ್ರಹ, ಒಲುಮೆ, ಉಪಕಾರ.

**मर्जीतून उतारणे** (ಮರ್ಜೀತೂನ್ ಉತರಣೇ) ಕ್ರಿ.ಅ. ಪ್ರೀತಿ ಕಡಿಮೆಯಾಗು, ಆದರ, ಸನ್ಮತಿ.

**मर्जीस उतरणे** (ಮರ್ಜೀಸ್ ಉತರಣೆ) ಕ್ರಿ. ಅ. ಪ್ರಿಯನಾಗು, ಮೆಚ್ಚುಗೆಯಾಗು.

**मर्जी संभाळणे – राखणे** (ಮರ್ಜೀ ಸಾಂಭಾಳಣೇ – ರಾಖಣೇ) ಕ್ರಿ. ಸ. ಮನಸ್ಸುಕಾಯು, ಸಂತೋಷಿಸು, ಅನುಗ್ರಹ ರಕ್ಷಿಸು.

**मर्जीसंपादन** (ಮರ್ಜೀ ಸಂಪಾದನ) ನ. ಅನುಗ್ರಹ ಗಳಿಕೆ, ಅನುಗ್ರಹ ಸಂಪಾದನೆ.

**मर्त्य** (ಮರ್ತ್ಯ) ಪು. ಸಂ. ಮನುಷ್ಯ, ಮರಣ ಪಡತಕ್ಕ, ಸಾಯುವ, ಮರಣಾಧೀನ.

**मर्द** (ಮರ್ದ) ಪು. ಫಾ. ಗಂಡಸು, ಮನುಷ್ಯ, ಬಂಟ, ಶೂರ, ವೀರ.

**मर्दगाजी** (ಮರ್ಧನಾಜೀ) ವಿ. ಫಾ. ಪರಾಕ್ರಮಿ, ಮನುಷ್ಯ.

**मर्दणे** (ಮರ್ದಣೇ) ಕ್ರಿ. ಸ. ಒತ್ತು. ೨. ಹೊಡೆ.

**मर्दन** (ಮರ್ದನ) ನ. ಸಂ. ತಿಕ್ಕುವಿಕೆ, ಒತ್ತುವಿಕೆ, ವಧೆ.

**मर्दाना** (ಮರ್ದನಾ) ವಿ. ಫಾ. ಗಂಡಸರ, ಶೌರ್ಯದ.

**मर्दाई** (ಮರ್ದಾಈ) ಸ್ತ್ರೀ.ಫಾ.
**मर्दुमकी** (ಮರ್ದುಮಕೀ) ಸ್ತ್ರೀ.ಫಾ.
**मर्दुमी** (ಮರ್ದುಮೀ) ಸ್ತ್ರೀ. ಫಾ. } ದಿಟ್ಟತನ, ಹೆದರದಿರುವಿಕೆ, ಎದೆಗಾರಿಕೆ, ಧೀರತನ ಶೌರ್ಯ, ಪರಾಕ್ರಮ, ವೀರತ್ವ.

**मर्दानी** (ಮರ್ದಾನೀ) ವಿ. ಫಾ. ಗಂಡಸರ.

**मर्म** (ಮರ್ಮ) ನ. ಸಂ. ರಹಸ್ಯ, ಗುಟ್ಟು, ತಾತ್ಪರ್ಯ, ಗರ್ಭಿತಾರ್ಥ, ಗುಟ್ಟುಮಾತು, ತೋಡು.

**मर्मभेद** (ಮರ್ಮಭೇದ) ಪು. ಸಂ. ರಹಸ್ಯ ಹೊರಬೀಳುವಿಕೆ, ಗುಟ್ಟು ರಟ್ಟಾಗುವಿಕೆ, ಗರ್ಭಿತಾರ್ಥ ಸ್ಪಷ್ಟೀಕರಣೆ, ರಹಸ್ಯ ಸ್ಫೋಟ.

**मर्मभेदक–मर्मभेदी** . (ಮರ್ಮಭೇದಕ್–ಮಮಭೇದೀ) ವಿ. ಗುಟ್ಟು ರಟ್ಟುಮಾಡುವ, ಗರ್ಭಿತಾರ್ಥ ಸ್ಪಷ್ಟೀಕರಿಸುವ, ರಹಸ್ಯ ಸ್ಫೋಟ ಮಾಡುವ.

**मर्मस्तल–स्थान** (ಮರ್ಮಸ್ಥಲ–ಸ್ಥಾನ) ನ. ಸಂ. ರಹಸ್ಯಸ್ಥಾನ, ಗುಪ್ತಸ್ಥಾನ.

**मर्मज्ञ** (ಮರ್ಮಜ್ಞ) ಪು. ಸಂ. ರಸಿಕ, ರಹಸ್ಯಬಲ್ಲವ' ಗುಪ್ತಸ್ಥಾನ ತಿಳಿಯುವ, ಗುಟ್ಟುಬಲ್ಲ, ಗುಪ್ತ ವಿಷಯಜ್ಞಾನಿ.

**मर्मी** (ಮರ್ಮೀ) ವಿ. ಮರ್ಮಭೇದಕ.

**मऱ्या** (ಮರ್ರ್ಯಾ) ವಿ. ಸಾಯಲಾದ, ಸಾಯುವನೋ ಏನೋ ಎನ್ನುವಂತಿರುವ, ಕಡ್ಡಿಯಂತಿರುವ.

**मर्यादशीर** (ಮರ್ಯಾದಶೀರ್) ವಿ. ವಿನಯಶೀಲ, ವಿನಶೀಲವರ್ತನೆಯ, ವಿನಯಶೀಲ ನಡಾವಳಿಯ.

**मर्यादा** (ಮರ್ಯಾದಾ) ಸ್ತ್ರೀ. ಸಂ. ಗಡಿ.ಮಿತಿ, ಕೊನೆ. ೨. ಮಾನಮರ್ಯಾದೆ.

**मर्यादासोडणे** (ಮರ್ಯಾದಾ ಸೋಡಣೇ) ಕ್ರಿ. ಅ. ಲಜ್ಜೆಗೆಡು, ಸೀಮೋಲ್ಲಂಘಿಸು.

**मर्यादा राखणे** (ಮರ್ಯಾದಾ ರಾಖಣೇ) ಕ್ರಿ. ಅ. ಮರ್ಯಾದೆ ರಕ್ಷಿಸು, ಮಾನಕಾಯು.

**मऱ्हाटा** (ಮರ್ಹಾಟಾ) ಪು. ಮರಾಠಾ.

**मल** (ಮಲ) ಪು. ಸಂ. ಹೊಲಸು, ಅಸ್ವಚ್ಛ, ಶೌಚ, ಮಲ, ಕೊಳೆ, ಕಸಕಡ್ಡಿ, ಧೂಳು.

**मलई** (ಮಲಈ) ಸ್ತ್ರೀ. ಹಿಂ. ಕೆನೆ, ಹಾಲಿನ ಕೆನೆ.

**मलकंबरी** (ಮಲಕಂಬರೀ) ಸ್ತ್ರೀ. ಫಾ. ಮಲಿಕಂಬರನು ಕೂಡಿಸಿದ (ತೆರಿಗೆ).

**मलंग** (ಮಲಂಗ್) ಪು. ಮಲಂಗ್ ಪಂಥದ (ಮುಸಲ್ಮಾನ) ಸಾಧು.

**मलपृष्ठ** (ಮಲಪೃಷ್ಠ) ನ. ಸಂ. ಪುಸ್ತಕದ ಮೊದಲನೆಯ ಅಥವಾ ಕಡೆಯ ಪುಟ, ಹೊದಿಕೆ.

**मलबारी** (ಮಲಬಾರೀ) ವಿ. ಕೇರಳದವ. (ಮುಸಲ್ಮಾನ).

**मलम** (ಮಲಮ್) ನ. ಫಾ. (ಮರ್ಹಮ್) ಲೇಪ, ಔಷಧ.

**मलमपट्टी** (ಮಲಮ್‌ಪಟ್ಟೀ) ಸ್ತ್ರೀ. ಲೇಪದಪಟ್ಟಿ. ೨. ಆರೈಕೆ.

**मलमल** (ಮಲ್‌ಮಲ್) ಸ್ತ್ರೀ. ಮಸಲಿನ, ನಯವಾದ ಬಟ್ಟೆ.

**मलविसर्ग, मलविसर्जन** (ಮಲವಿಸರ್ಗ, ಮಲವಿಸರ್ಜನ) ನ. ಸಂ. ಮಲ ಹೊರಬೀಳುವಿಕೆ, ಹೊರಕಡೆಗೆ ಹೋಗುವಿಕೆ.

**मलावरोध, मलावष्ठंभ** (ಮಲಾವರೋಧ, ಮಲಾವಷ್ಟಂಭ) ಪು. ಮಲಬದ್ಧತೆ, ಮಲಕಟ್ಟುವಿಕೆ.

**मलाशय, मलाचा कोठा** (ಮಲಾಶಯ, ಮಲಾಚಾ ಕೋಠಾ) ಪು. ಮಲದ ಕೋಶ, ಗುದದ್ವಾರ, ಗುದನಾಳ.

**मलिदा** (ಮಲಿದಾ) ಪು. ಫಾ. ಮಾಲೇದಿ, ಮಾದೇಲಿ.

**मलिन** (ಮಲಿನ) ವಿ. ಸಂ. ಹೊಲಸಾದ.

**मलूल** (ಮಲೂಲ್) ವಿ. ಅರ. ಖಿನ್ನ, ಉದಾಸೀನ, ನಿಸ್ತೇಜ, ಬಾಡಿದ,ಕುಂದಿದ, ಪಾಂಡುರ, ದುರ್ಬಲ, ನಿರುತ್ಸಾಹಿತ.

**मल्ल** (ಮಲ್ಲ) ಪು. ಸಂ. ಕುಸ್ತಿಹಿಡಿಯುವವ, ಜಟ್ಟಿ, ಮಲ್ಲ.

**मल्लखांब** (ಮಲ್ಲಖಾಂಬ್) ಪು. ಮಲಕಂಬ.

**मल्लयुद्ध** (ಮಲ್ಲಯುದ್ಧ) ನ. ಸಂ. ಕುಸ್ತಿ, ಮಲ್ಲ ಯುದ್ಧ, ಜಟ್ಟಿಕಾಳಗ.

**मल्लारी, मल्हारी** (ಮಲ್ಲಾರೀ, ಮಲ್ಹಾರೀ) ಪು. ಮೈಲಾರಲಿಂಗ, ಶಿವ.

**मल्लिकार्जुन** (ಮಲ್ಲಿಕಾರ್ಜುನ) ಪು. (ಶಿವನ) ಹನ್ನೆರಡು ಜ್ಯೋತಿರ್ಲಿಂಗಗಳಲ್ಲಿ ಒಂದು, ಶ್ರೀಶೈಲದ ಅಧಿದೇವತೆ.

**मल्हार** (ಮಲ್ಹಾರ್) ಪು. ಹಿಂ. ಒಂದು ರಾಗ, ಮಲ್ಹಾರರಾಗ.

**मवाळ** (ಮವಾಳ್) ವಿ. ಮೆತ್ತಗಿನ, ಕೋಮಲ, ಎಣ್ಣೆಯಿಂದ ಮೆತ್ತಗೆ ಮಾಡಿದ. ೨. ಸೌಮ್ಯ. ೩. (ರಾಜನೀತಿಯಲ್ಲಿ) ಅತಿರೇಕಿಯಲ್ಲದವ.

**मशक** (ಮಶಕ್) ಪು. ಗುಂಗಾಡು, ನೊರಜು, ಚಿಗಟೆ, ಸೊಳ್ಳೆ.

**मशख** (ಮಶಖ್) ಫಾ. ಅಡ್ಡೆಳೆ (ನೇಯ್ಗೆಯ) ಅಡ್ಡೆಳೆ. ೨. ಪಖಾಲಿ (ಚರ್ಮದ ಚೀಲ).

**मशागत** (ಮಶಾಗತ್) ಸ್ತ್ರೀ. ಅರ. ಸಾಗುವಳಿ, ಪರಿಶ್ರಮ.

**मशागती** (ಮಶಾಗತೀ) ವಿ. ಅರ. ದಿನಗೂಲಿಯಿಂದ ಬದುಕುವ, ಶ್ರಮಜೀವಿ.

**मशारनिल्हे** (ಮಶಾರ್‌ನಿಲ್ಹೆ) ವಿ.ಅರ. ಮೇಲೆ ಹೇಳಿದ, ಉಪರಿನಿರ್ದಿಷ್ಟ, ಮೇಲೆ ವಿವರಿಸಿದ, ಸದರೀ.

**मशाल** (ಮಶಾಲ್) ಸ್ತ್ರೀ. ಅರ. ಪಂಜು, ದೀವಟಿಗೆ, ಕಕ್ಕಡ.

**मशालची–जी** (ಮಶಾಲಚೀ–ಜೀ) ಪು. ತು. ದೀವಟಿಗೆಯವ, ಪಂಜಿನವ.

**मशी(सी)द** (ಮಶೀ(ಸೀ)ದ್) ಸ್ತ್ರೀ. ಅರ. ಮಸೀದೆ, ಮಸೋತಿ.

**मशेरी** (ಮಶೇರೀ) ಸ್ತ್ರೀ. (ಹಲ್ಲುತಿಕ್ಕುವ) ಹುರಿದ ತಂಬಾಕ.

**मशीपात्र** (ಮಶೀಪಾತ್ರ) ಮಸಿಯ ದೌತಿ.

**मस** (ಮಸ್) ಪು. ನರೋಲಿ, ನರಹುಲಿ, ಮಚ್ಚೆ, ಚಿಟ್ಟಲೆ, ೨. ಒಡ್ಡು, ಕಟ್ಟೆ.

**मसक** (ಮಸಕ್) ಸ್ತ್ರೀ. ಫಾ. ಪಕಾಲಿ, ಚರ್ಮದ ನೀರಿನ ಚೀಲ, ಭಿಸ್ತಿಯ ಚೀಲ.

**मसकणे** (ಮಸಕಣೇ) ಕ್ರಿ. ಅ. ಪುಡಿಪುಡಿಯಾಗು, ಚೂರುಚೂರಾಗು, ನಾಶವಾಗು, ಕಡಿದುಬೀಳು.

**मसकती** (ಮಸಕತೀ) ವಿ. ಮಸ್ಕತ್‌ದೇಶದ, ಮಸ್ಕತ್ ದೇಶಸಂಬಂಧದ.

**मसका** (ಮಸಕಾ) ಪು. ಮಿಶ್ರಣ. ೨. **मस्का** ನೋ. ಮಿಶ್ರಣವಾಗುವಿಕೆ, ಸಮ್ಮಿಶ್ರಣ, ಧಾತುಮಿಶ್ರಣ, ಕೂಡುವಿಕೆ. ೨. ಹಿಂ. ಬೆಣ್ಣೆ.

**मसण** (ಮಸಣ್) ನ.<br>**मसणवट-टी** (ಮಸಣವ–ಟಟೀ) ಸ್ತ್ರೀ. } ಸ್ಮಶಾನ.

**मसणखाई** (ಮಸಣ್‌ಖಾಈ) ಸ್ತ್ರೀ. ಗೋರಿ, ಕಬರಸ್ತಾನ.

**मसणा** (ಮಸಣಾ) ವಿ. ತುಚ್ಛ, ನೀಚ, ಅವಮಾನಿತ.

**मंसबदार** (ಮಂಸಬ್‌ದಾರ್) ಪು. ಅರ. ಅಧಿಕಾರಿ.

**मसलत** (ಮಸಲತ್) ಸ್ತ್ರೀ. ಅರ. ಯೋಜನೆ, ಹಂಚಿಕೆ, ಉಪಾಯ, ಹೊಟ, ವಿಚಾರ, ಆಲೋಚನೆ, ಸಲಹೆ.

**मसलतदार** (ಮಸಲತ್‌ದಾರ್) ಪು. ಹಂಚಿಕೆ ಹೇಳುವವ.

**मसाला** (ಮಸಾಲಾ) ಪು. ಅರ. ಮಸಾಲೆ, ಚಟ್ನಿ, ಮೇಲೋಗರ, ಮಸಾಲೆಯ ಸಾಮಾನಿನ ಸಮ್ಮಿಶ್ರಿತ ಚೂರ್ಣ.

**मसुदा** (ಮಸೂದಾ) ಪು- ಅರ. ಮಸೂದೆ, ಕಚ್ಚಾ ಬರೆಹ, ಕರಡು, ಹುಂಡಿ, ಚೀಟಿ.

**मसूर** (ಮಸೂರ್) ಸ್ತ್ರೀ. ಚೆನ್ನಂಗಿ, ಚೆನ್ನಂಗಿ ಬೇಳೆ.

**मसूरिका** (ಮಸೂರಿಕಾ)<br>**मसूरी** (ಮಸೂರೀ) } ಸ್ತ್ರೀ. ( ಮೈಲಿಯ ಬೇನೆ.

**मस्करी** (ಮಸ್ಕರೀ) ಸ್ತ್ರೀ. ಫಾ. ನಗೆಚಾಟಿಕೆ,ವಿನೋದ, ತಮಾಷೆ, ಮೋಜು.

**मस्करीची कुस्करी** (ಮಸ್ಕರೀಚೀ ಕುಸ್ಕರೀ) ನಾಣ್ಣುಡಿ. ನಗೆಯಿಂದ ಹೊಗೆ.

**मस्त** (ಮಸ್ತ) ವಿ. ಫಾ. ಸೊಕ್ಕಿದ, ಮದವೇರಿದ, ಲಠ್ಠ, ಉಬ್ಬಿದ, ವಿಪುಲ, ಸಾಕಷ್ಟಾದ.

**मस्तक** (ಮಸ್ತಕ) ಪು. ಸಂ. ತಲೆ, ರುಂಡ, ಶಿಖರ, ಮೇಲಿನಭಾಗ, ತುದಿ.

**मस्तवाल** (ಮಸ್ತವಾಲ) ವಿ. ಸೊಕ್ಕಿನವ, ಹಟಮಾರಿ, ಗರ್ವಿಷ್ಠ, ಮತ್ತ, ಉದ್ಧತ, ತುಚ್ಛ, ತಿರಸ್ಕೃತ, ತಿರಸ್ಕರಣೀಯು, ಅಸಡ್ಡೆಯು.

**मस्ता–स्त्या** (ಮಸ್ತಾ–ಸ್ತ್ಯಾ) ವಿ. ಫಾ. ಸೊಕ್ಕಿನ, ಗರ್ವಿಷ್ಟ, ಮದೋನ್ಮತ್ತ, ಸೊಕ್ಕಿಗೆ ಬಂದ.

**मस्तावणे** (ಮಸ್ತಾವಣೇ) ಕ್ರಿ. ಅ. ಸೊಕ್ಕಿಗೆಬರು, ಮದವೇರು, ಅಹಂಕಾರಮಾಡು, ಗರ್ವಿಷ್ಠನಾಗು,

**मस्ती** (ಮಸ್ತೀ) ಸ್ತ್ರೀ. ಫಾ. ಸೊಕ್ಕು, ಗರ್ವ, ಅಮಲೇರುವುದು, ಉನ್ಮಾದ.

**महकूब** (ಮಹಕೂಬ್) ವಿ. ಅರ. ನಿಲ್ಲಿಸಿದ, ತಡೆಹಿಡಿದ, ಸಂಶಯಿತ, **मौकूफ** ನೋ.

**महकुबी** (ಮಹಕುಬೀ) ಸ್ತ್ರೀ. ನ. ಅನಿಶ್ಚಿತ ಸ್ಥಿತಿ, ಸಂಶಯು, ಅನುಮಾನ.

**महत्** (ಮಹತ್) ವಿ. ಸಂ. ದೊಡ್ಡ, ವಿಶಾಲ, ಹಿರಿದಾದ.

**महंत** (ಮಹಂತ) ಪು. ಸ್ವಾಮಿ, ಗೋಸಾವಿ, ಪಂಡಿತ.

**महत्व** (ಮಹತ್ವ) ನ. ಸಂ. ದೊಡ್ಡಸ್ಥಾನ, ಮಹತ್ವ, ಬೆಲೆ.

**महदंतर** (ಮಹದಂತರ) ನ. ಸಂ. ಬಹಳ ಅಂತರ.

**महर्घता** (ಮಹರ್ಘತಾ) ಸ್ತ್ರೀ. ಏರಿದ ಬೆಲೆ, ತುಟ್ಟಿಬೆಲೆ, ತುಟ್ಟಿಯಾಗುವಿಕೆ, ತುಟ್ಟಿ.

**महला** (ಮಹಲಾ) ಪು. ಅರ. ಶಹರದ ಒಂದು ಭಾಗ, ಓಣಿ.

**महशूर** (ಮಹಶೂರ್) ವಿ. ಅರ. (ಮಶಹೂರ್) ಪ್ರಸಿದ್ಧ, ಹೆಸರಾದ, ಸುಪ್ರಸಿದ್ಧ, ಪ್ರಖ್ಯಾತ.

**महसुली** (ಮಹಸುಲೀ) ವಿ. ಅರ. ವಾರ್ಷಿಕ ಆದಾಯದ, ಜಮಾಬಂದಿಯ ವಾರ್ಷಿಕ ಉತ್ಪನ್ನದ.

**महसूल** (ಮಹಸೂಲ) ಪು. ಜಮಾಬಂದಿ, ಉತ್ಪನ್ನ ವಾರ್ಷಿಕ ಆದಾಯ.

**महा** (ಮಹಾ) ವಿ. ಸಂ. ದೊಡ್ಡ, ವಿಶಾಲ, ಲಕ್ಷ್ಮ, ಶ್ರೇಷ್ಠ.

**महाग** (ಮಹಾಗ್) ವಿ. ತುಟ್ಟಿ, ದುಬಾರಿ.

**महागणे** (ಮಹಾಗಣೇ) ಕ್ರಿ. ಅ. ತುಟ್ಟಿಯಾಗು.

**महागरा** (ಮಹಾಗರಾ) / **महाग्या** (ಮಹಾಗ್ಯಾ) ವಿ. ತುಟ್ಟಿಯ, ಹೆಚ್ಚು ಬೆಲೆಯ.

**महागाई** (ಮಹಾಗಾಈ) ಸ್ತ್ರೀ. ಏರಿದ ಬೆಲೆ.

**महागडी** (ಮಹಾಗಡೀ) ವಿ. ತುಟ್ಟಿಯಾದ.

**महाजन** (ಮಹಾಜನ) ಪು. ಸಂ. ದೊಡ್ಡ ಪುರುಷ, ಪವಿತ್ರ ಮನುಷ್ಯ. ೨. ಹಿಂ. ಸಾಲಕೊಡುವವ, ಶಹರದ ವಂಶಪರಂಪರಾಗತ ಅಧಿಕಾರಿ.

**महाजनकी** (ಮಹಾಜನಕೀ) ಸ್ತ್ರೀ. ಸಾಹುಕಾರನ ವ್ಯವಸಾಯ.

**महात–द** (ಮಹಾತ್–ದ್) ಪು. ಮಾವುತ, ಆನೆ ನಡೆಸುವವ.

**महात्मा** (ಮಹಾತ್ಮಾ) ಪು. ಸಂ. ದೊಡ್ಡಮನುಷ್ಯ, ಮಹಾತ್ಮಾ. ವಿ. ದೊಡ್ಡ ಮನಸ್ಸಿನ, ಉದಾರ, ಗಂಭೀರ, ಕೊಡುಗೈಯ.

**महादेवी** (ಮಹಾದೇವಿ) ಸ್ತ್ರೀ. ಪಾರ್ವತಿ, (ಶಿವನ ಪತ್ನಿ).

**महादेव** (ಮಹಾದೇವ) ಪು. ಸ. ಶಿವ, ದೇವರು.

**महाद्वार** (ಮಹಾದ್ವಾರ) ನ. ಸ. ದೊಡ್ಡಬಾಗಿಲು, ಹೆಬ್ಬಾಗಿಲು, ತಲೆಬಾಗಿಲು, ಊರಬಾಗಿಲು, ಅಗಸೆ.

**महाद्वीप** (ಮಹಾದ್ವೀಪ್) ನ. ಸಂ. ದೊಡ್ಡನಡುಗಡ್ಡೆ, ದೊಡ್ಡ ಭೂಖಂಡ, ಮಹಾಖಂಡ.

**महान्** (ಮಹಾನ್) ವಿ. ಸಂ. ದೊಡ್ಡ, ವಿಸ್ತೃತ, ಸ್ಥೂಲ.

**महानदी** (ಮಹಾನದೀ) ಸ್ತ್ರೀ. ಸಂ. ದೊಡ್ಡ ನದಿ.

**महानुभाव** (ಮಹಾನುಬಾವ) ಪು. ದೊಡ್ಡವ. ೨. ಮಹಾನುಭಾವ ಪಂಥದವ.

**महापद्म** (ಮಹಾಪದ್ಮ) ವಿ. ಒಂದು ಸಂಖ್ಯೆ.

**महापातक** (ಮಹಾಪಾತಕ್) ನ. ಸಂ. ದೊಡ್ಡ ಪಾತಕ.

**महापुरुष** (ಮಹಾಪುರುಷ) ನ. ಸಂ. ದೊಡ್ಡ ಮನುಷ್ಯ.

**महापूजा** (ಮಹಾಪೂಜಾ) ವಿ. ಸಂ. ದೊಡ್ಡಆರಾಧನೆ, ಆಡಂಬರದಿಂದ ಪೂಜೆ ಕಟ್ಟುವಿಕೆ.

**महाप्रयास** (ಮಹಾಪ್ರಯಾಸ್) ಪು. ಸಂ. ಅತಿ ಆಯಾಸ, ಅತಿ ಪ್ರಯತ್ನ.

**महाप्रलय** (ಮಹಾಪ್ರಲಯ) ಪು. ಸಂ. ವಿಶ್ವಪ್ರಲಯ, ಜಗತ್ತಿನ ಲಯ.

**महाप्रस्थान** (ಮಹಾಪ್ರಸ್ಥಾನ್) ನ. ಸಂ. ದೊಡ್ಡ ಯಾತ್ರೆ, ಮಹಾಪ್ರಯಾಣ, ಸಾವು, ಮರಣ.

**महाबळी** (ಮಹಾಬಳೀ) ವಿ. ಶೂರ, ಮಹಾ ಶಕ್ತಿಯ, ೨. ಮಹಾ ಆಹುತಿ, ದೊಡ್ಡ ಬಲಿ.

**महाभारत** (ಮಹಾಭಾರತ) ನ. ಸಂ. ಮಹಾಭಾರತ. ೨. ಬಲು ತೊಡಕಿನ ಕತೆ, ವ್ಯಾಜ್ಯ.

**महाभूत** (ಮಹಾಭೂತ್) ನ. ಸಂ. ಪಂಚ ಮಹಾಭೂತಗಳು.

**महामति** (ಮಹಾಮತಿ) ವಿ. ಸಂ., **महामना** (ಮಹಾಮನಾ) ವಿ. ದೊಡ್ಡ ಮನಸ್ಸಿನ.

**महामाया** (ಮಹಾಮಾಯಾ) ಸ್ತ್ರೀ. ಸಂ. ಭಯಂಕರ ಹೆಂಗಸು.

**महामारी** (ಮಹಾಮಾರೀ) ಸ್ತ್ರೀ. ದುರ್ಗವ್ವನ ಬೇನೆ, ಮಹಾಮಾರಿ, ಕಾಲರಾ.

**महामुरी** (ಮಹಾಮುರೀ) ಸ್ತ್ರೀ. ಸಂ. ವಿಪುಲತೆ, ಧಾರಾಳತನ, ಹೇರಳತನ. ಹೆಚ್ಚಳ, ಸಮೃದ್ಧಿ.

**महामूर** (ಮಹಾಮೂರ) ವಿ. ಹೇರಳವಾದ, ಬಹಳ, ವಿಪುಲ, ಸಮೃದ್ಧ.

**महायात्रा** (ಮಹಾಯಾತ್ರಾ) ವಿ. ಸಂ. ದೊಡ್ಡಯಾತ್ರೆ, ಕಾಶಿಯಾತ್ರೆ.

**महार** (ಮಹಾರ್) ಪು. ಮಹಾರ ಜಾತಿಯವ.

**महारडा** (ಮಹಾರಡಾ) ಪು. (ಗ್ರಾಮ್ಯ) ಮಹಾರ ಜಾತಿಯ ಮನುಷ್ಯ.

**महारकी** (ಮಹಾರಕೀ) ಸ್ತ್ರೀ. ಮಹಾರನ ಪದ, ಹಕ್ಕು.

**महारथी** (ಮಹಾರಥೀ) ಸ್ತ್ರೀ. ಸಂ. ಅಜಿಂಕ್ಯವೀರ, ಮಹಾರಥ, ಮಹಾರಥಿ, ಮಹಾಯೋದ್ಧ.

**महारपोर** (ಮಹಾರಪೋರ್) ನ. ಕೆಳಗಿನ ಜಾತಿಯ ಜನರು.

**महारवाडा** (ಮಹಾರವಾಡಾ) ಪು. ಅಸ್ಪೃಶ್ಯರ ಓಣಿ, ಹೊಲೆಗೇರಿ.

**महाराज** (ಮಹಾರಾಜ) ಪು. ಸಂ. ರಾಜಾಧಿರಾಜ, ಸಾಮ್ರಾಟ, ಒಡೆಯ.

**महाराष्ट्र** (ಮಹಾರಾಷ್ಟ್ರ) ಪು. ಮಹಾರಾಷ್ಟ್ರ, ಮರಾಠಾ ಜನರು ಇರುವ ಪ್ರದೇಶ.

**महारोग** (ಮಹಾರೋಗ) ಕುಷ್ಠರೋಗ, ಮಹಾರೋಗ, ಹಿರೇಬೇನೆ, ರಕ್ತಪಿತ್ತಬೇನೆ.

**महार्णव** (ಮಹಾರ್ಣವ) ಪು. ದೊಡ್ಡ ಸಮುದ್ರ, ಮಹಾಸಾಗರ, ದೊಡ್ಡಸ್ಪರ್ಧೆ, ಹಿರಿಯ ಸ್ಪರ್ಧೆ, ಕುಪ್ರಸಿದ್ಧಿ, ಅಪ್ರಸಿದ್ಧಿ.

**महाल** (ಮಹಾಲ್) ಪು. ತಾಲೂಕಿನ ವಿಭಾಗ, ಅಂತಃಪುರ, ನಡುಮನೆ.

**महालकरी** (ಮಹಾಲಕರೀ) ಪು. ಜಮಾಬಂದಿಯ ಉಪಾಧಿಕಾರಿ, ಸಣ್ಣ ಅಧಿಕಾರಿ.

**महालपेटा** (ಮಹಾಲಪೇಟಾ) ಪು. ಮಹಾಲ, ಮಹಾಲಕರಿಯ ಭಾಗ, ತಾಲೂಕಿನ ವಿಭಾಗ.

**महालय** (ಮಹಾಲಯ) ಪು. ಸಂ. ಆಶ್ರಯಸ್ಥಾನ, ಮಂದಿರ, ೨. ಶ್ರಾದ್ಧ ವಿಶೇಷ, ಪಕ್ಷಮಾಸ.

**महालक्ष्मी** (ಮಹಾಲಕ್ಷ್ಮೀ) ಸ್ತ್ರೀ. ಸಂ. ಮಹಾಲಕ್ಷ್ಮಿ, (ವಿಷ್ಣುವಿನ ಪತ್ನಿ).

**महासरस्वती** (ಮಹಾಸರಸ್ವತಿ) ಸ್ತ್ರೀ. ಸಂ. ಮಹಾಸರಸ್ವತಿ, (ಬ್ರಹ್ಮನ ಪತ್ನಿ).

**महावत** (ಮಹಾವತ್) ಪು. ಮಾವುತ, ಆನೆ ನಡೆಯಿಸುವವ.

**महावाक्य** (ಮಹಾವಾಕ್ಯ) ನ. ಸಂ. ವೇದ ಋಚೆ, ವೇದವಾಕ್ಯ, ಮಹೋಪದೇಶ, ಕಲ್ಯಾಣಕರ ವಚನ.

**महावार** (ಮಹಾವಾರ್) ಪು. ಫಾ., **महावारी** (ಮಹಾವಾರೀ) ಸ್ತ್ರೀ. ಫಾ. **माहेवार, माहेवारी** ನೋ.

**महाविषुव** (ಮಹಾವಿಷುವ) ವಿ. ವಿಷುವ ಕಾಲ, ರಾತ್ರಿ ಹಗಲು ಸರಿಸಮಾನ ಕಾಲ.

**महाव्याधी** (ಮಹಾವ್ಯಾಧೀ) **महारोग** ನೋ.

**महाशंकु** (ಮಹಾಶಂಕು) ವಿ. (ಸಂಖ್ಯೆ) ಮಹಾಶಂಕು, ಸಂಖ್ಯಾಸ್ಥಾನ.

**महाशिवरात्र** (ಮಹಾಶಿವರಾತ್ರ) ಸ್ತ್ರೀ. ಮಹಾ ಶಿವರಾತ್ರಿ, ಮಾಘವದ್ಯ ಚತುರ್ದಶಿ, ದೊಡ್ಡಯುದ್ಧ.

**महाळ** (ಮಹಾಳ್) ಪು. ಭಾದ್ರಪದ ವದ್ಯಪಕ್ಷದಲ್ಲಿ ಮಾಡಿದ ಶ್ರಾದ್ಧ, **महालय** ನೋ.

**महाळुंग** (ಮಹಾಳುಂಗ್) ಸ್ತ್ರೀ. ಮಾತುಲುಂಗ, ಮಾತುಲುಂಗದ ಗಿಡ.

**महिना** (ಮಹಿನಾ) ಪು. ಫಾ. ತಿಂಗಳು, ಮಾಸ, ತಿಂಗಳ ಸಂಬಳ.

**महिन्याकाठी** (ಮಹಿನ್ಯಾಕಾಠೀ) ಕ್ರಿ. ವಿ. ಪ್ರತಿ ತಿಂಗಳಿಗೆ ತಿಂಗಳಲ್ಲಿ, ತಿಂಗಳವರೆಗೆ, ತಿಂಗಳಿಂದ ತಿಂಗಳಿಗೆ.

**महिनेमाल** (ಮಹಿನೇಮಾಲ್) ವಿ. ತಿಂಗಳಿಗೊಂದು ಸಲ ಕೂಲಿ ಸಂಪಾದಿಸುವ.

**महिनेमाह** (ಮಹಿನೆಮಾಹ್) ಕ್ರಿ. ವಿ. ಪ್ರತಿ ತಿಂಗಳಿಗೆ.

**महिनोमहिने** (ಮಹಿನೋಮಹಿನೇ) ಕ್ರಿ. ವಿ. ಎಷ್ಟೋ ತಿಂಗಳಗಟ್ಟಲೆ, ಎಷ್ಟೋ ತಿಂಗಳಿನಿಂದ.

**महिमा** (ಮಹಿಮಾ) ಪು. ಸಂ. ದೊಡ್ಡತನ, ವೈಭವ.

**महिमान–मेहमान** (ಮಹಿಮಾನ್–ಮೇಹಮಾನ್) ಪು. ಫಾ. ಅತಿಥಿ, ಅಭ್ಯಾಗತ.

**महिरप–महिराप** (ಮಹಿರಪ್ – ಮಹಿರಾಪ್) ಸ್ತ್ರೀ ಅರ. (ಮಹರಾಬ್) ಗೋಡೆಯ ಕಮಾನು.

**महिला** (ಮಹಿಲಾ) ಸ್ತ್ರೀ. ಸಂ. ಹೆಂಗುಸು, ಪತ್ನಿ, ಭಾರ್ಯೆ.

**महिष** (ಮಹಿಷ) ಪು. ಸಂ. ಕೋಣ.

**महिषी** (ಮಹಿಷೀ) ಸ್ತ್ರೀ. ಸಂ. ಪಟ್ಟದರಾಣಿ, ಅರಸಿ.

**मही** (ಮಹೀ) ಸ್ತ್ರೀ. ಸಂ. ಭೂಮಿ, ಧರಿತ್ರಿ, ಧರಣಿ.

**महीधर** (ಮಹೀಧರ್) ಪು. ಸಂ. ಪರ್ವತ, ಗುಡ್ಡ.

**महीपाल** (ಮಹಿಪಾಲ್) ಪು. ಸಂ. ಅರಸು, ರಾಜ, ಒಡೆಯ.

**महेश** (ಮಹೇಶ್) ಪು. ಸಂ. ಶಿವ, ಈಶ್ವರ, ಮಹಾದೇವ (ಬ್ರಹ್ಮ, ವಿಷ್ಣು, ಮಹೇಶ)

**महेश्वरी** (ಮಹೇಶ್ವರೀ) ಸ್ತ್ರೀ. ಸಂ. ಮಹೇಶನ ಪತ್ನಿ, ದೊಡ್ಡ ದೇವತೆ.

**महोत्सव** (ಮಹೋತ್ಸವ) ಪು. ಸಂ.
**महोत्साह** (ಮಹೋತ್ಸಾಹ್) ಪು. } ಮಹೋತ್ಸಾಹ, ದೊಡ್ಡ ಹಬ್ಬ, ಮಹಾರಾಧನೆ.

**मळ** (ಮಳ್) ಪು. ಸಂ. ಕೊಳೆ, ಮಲ, ಹೊಲಸು, ಕಸಕಡ್ಡಿ, ಕೆಸರು, ಹೊಲಸುಮಾತು.

**मळई** (ಮಳಈ) ಸ್ತ್ರೀ. ಪ್ರವಾಹದೊಂದಿಗೆ ಹರಿದು ಬಂದ ಮಣ್ಣು, ಮಿಾನಿನ ಜಾಳಿಗೆ.

**मळकट** (ಮಳಕಟ್) ವಿ. ಕಸಕಡ್ಡಿಯಿದ್ದ, ಹೊಲಸಾದ, ಮಾಸಿದ.

**मळकटणे** (ಮಳಕಟಣೇ) ಕ್ರಿ. ಅ. ಹೊಲಸಾಗು, ಧೂಳಿತುಂಬು.

**मळका** (ಮಳಕಾ) ವಿ. ಹೊಲಸಾದ.

**मळखाऊ** (ಮಳಖಾಊ) ವಿ. ಹೊಲಸು ಅಡಗುವ, ಹೊಲಸು ಕಾಣದ, (ಅರಿವೆ, ಬಣ್ಣ)

**मळणकर** (ಮಳಣಕರ್) ಪು. ಒಕ್ಕುವವ, ಒಕ್ಕಲು ಮಾಡುವವ, ಒಕ್ಕಲಿಗ ಹಂತಿ.

**मळणी** (ಮಳಣೀ) ಸ್ತ್ರೀ. ಕಣದೊಳಗಿನ ಕೆಲಸ, ಒಕ್ಕುವ ಕೆಲಸ.

**मळणे** (ಮಳಣೇ) ಕ್ರಿ. ಅ. ಒಕ್ಕು, ಧಾನ್ಯಒಕ್ಕು, ಹಿಚುಕು, ನಾದು, ಮರ್ದಿಸು, ಒತ್ತು.

**मळभ** (ಮಳಭ) ನ. ಮೋಡ, ಮೋಡದ ಹವೆ.

**मळभी** (ಮಳಭೀ) ಸ್ತ್ರೀ. ಮೋಡದ ಭಾಗ, ತುಂಡು ಮೋಡ.

**मळमळ** (ಮಳಮಳ್) ಸ್ತ್ರೀ. ವಾಂತಿಯಾಗುವಿಕೆ. ೨. ವಾಂತಿಯಾಗುವ ಲಕ್ಷಣ. ೩. ಮನಸ್ಸಿನಲ್ಲಿಯ ದ್ವೇಷ.

**मळमळणे** (ಮಳಮಳಣೇ) ಕ್ರಿ. ಅ. ವಾಂತಿಯ ಭಾವನೆ ಯಾಗು, ಓಕರಿಕೆ ಬರು.

**मळमळी** (ಮಳಮಳೀ) ಸ್ತ್ರೀ. ಓಕರಿಕೆ, ಹೇಸಿಕೆ, ಹೊಟ್ಟೆ ಬೇನೆ.

**मळमळीत** (ಮಳಮಳೀತ್) ವಿ. ಮಂದ, ಮೃದು, ಮಳೆಯಿಂದ ಕೆಸರಾದ, ರೊಜ್ಜಾದ, ನೀರಸ, ರುಚಿ ಯಿಲ್ಲದ.

**मळवट** (ಮಳವಟ್) ಪು. ಹಣೆ ತುಂಬ ಹಚ್ಚಿದ ಕುಂಕುಮ, ತುಂಬಾ ಕುಂಕುಮದ ಹಣೆ.

**मळवट भरणे** (ಮಳವಟ ಭರಣೇ) ಕ್ರಿ. ಅ. ಹಣೆತುಂಬ ಕುಂಕುಮ ಹಚ್ಚು.

**मळविणे** (ಮಳವಿಣೇ) ಕ್ರಿ. ಸ. ಹೊಲಸು ಮಾಡು, ಕೆಡಿಸು, ಮಾಸಿಸು, ಕೊಳೆಮಾಡು.

**मळसूत्र** (ಮಳಸೂತ್ರ) ನ. ಮಲಸೂತ್ರ, ತಿರುಗಣಿ, ಸ್ಕ್ರೂ ತಿರುಗಣಿ.

**मळसूत्र फिरवणे** (ಮಳಸೂತ್ರ ಫಿರವಣೇ) ತಿರುಗಣಿ, ತಿರುವು.

**मळसूत्री** (ಮಳಸೂತ್ರೀ) ವಿ. ಸ್ಕ್ರೂ ಇದ್ದ, ತಿರುಗಣಿ ಯಿದ್ದ.

**मळा** (ಮಳಾ) ಪು. ತೋಟ, ಉಪವನ, ಹಣ್ಣಿನ ತೋಟ.

**मळी** (ಮಳೀ) ಸ್ತ್ರೀ. ನೊರೆ, ಕಾಕವಿ, ಕಾಕಂಬಿ.

**मळीण** (ಮಳೀಣ) ವಿ. ಹೊಲಸಾದ, ಕೆಸರಿನ, ತುಕ್ಕು ಹಿಡಿದ, ಮಣ್ಣುತಿಂದ.

**मळीव** (ಮಳೀವ) ವಿ. ತುಳಿದ, ಹೊಡೆದ, ನಾದಿದ, ಮರ್ದಿಸಿದ, ಹಿಚುಕಿದ, ಒತ್ತಿದ.

**मळेकरी** (ಮಳೇಕರೀ) ಪು. ತೋಟಗಾರ, ತೋಟಿಗ, ಕಬ್ಬಿನ ಹೊಲದ ಒಡೆಯ.

**मक्षिका** (ಮಕ್ಷಿಕಾ) ಸ್ತ್ರೀ. ನೊಣ.

**मा** (ಮಾ)
**माई** (ಮಾಈ) } ಸ್ತ್ರೀ. ಮಾತೆ, ಅಮ್ಮ, ತಾಯಿ, ಜನನಿ.

**माईणमूळ** (ಮಾಈಣಮೂಳ) ಮಾಯಿನ ಬೇರು, ಉಪ್ಪಿನಕಾಯಿ ಹಾಕುವ ಬೇರು.

**माईफळ** (ಮಾಈಫಳ್) ನ. ಮುಳ್ಳಿನ ಜಾಜೀಕಾಯಿ.

**माउलपण(न)णा** (ಮಾಊಲಪಣ(ನ)ಣಾ) ಪು. ಮಾತೃಪ್ರೇಮ.

**माउली** (ಮಾಉಲೀ) ಸ್ತ್ರೀ. ತಾಯಿ, ಅಮ್ಮ, ಅವ್ವ.

**माऊ** (ಮಾಊ) ಪು. ಬೆಕ್ಕು.

**माऊसबहीण** (ಮಾಊಸ್‌ಬಹೀಣ) ಸ್ತ್ರೀ. ಅಬಚಿಯ ಮಗಳು.

**माऊसभाऊ** (ಮಾಊಸ್‌ಭಾಊ) ಅಬಚಿಯ ಮಗ.

**माकड** (ಮಾಕಡ್) ನ. ಮಂಗ, ಕಪಿ, ವಾನರ, ಹುಚ್ಚ ಮನುಷ್ಯ, ಕೋಡಗ, ಆಫ್ರಿಕಾದ ದೊಡ್ಡ ಮಂಗ.

**माकडचेष्टा** (ಮಾಕಡ್‌ಚೇಷ್ಟಾ) ಸ್ತ್ರೀ ಕುಚೇಷ್ಟೆ, ಮಂಗಚೇಷ್ಟೆ, ಮಂಗನಾಟ.

**माकडहाड** (ಮಾಕಡ್‌ಹಾಡ್) ನ. ನಡದ ಎಲುಬು.

**माकण** (ಮಾಕಣ) ನ. ಮಂಕಣಿ, ನೀರಿನ ಮಂಕಣಿ.

**माकण्या** (ಮಾಕಣ್ಯಾ) ಪು. ಮಂಕಣಿಯಿಂದ ನೀರು ತರುವ (ಕುದುರೆ, ಮನುಷ್ಯ)

**माकुलवाणा** (ಮಾಕುಲವಾಣಾ) ಪು. ಅರ. ಸುಂದರ, ಚೆಂದ, ಚೆಲುವ, ಆಕರ್ಷಕ.

**माकूल** (ಮಾಕೂಲ್) ವಿ. ಅರ. ಆದರಣೀಯ, ಪೂಜನೀಯ. ೨. ಉತ್ತಮ.

**माक्त्यान्–नी** (ಮಾಕ್‌ತ್ಯಾನ್–ನೀ) ಕ್ರಿ. ವಿ. ಪುನಃ ಎರಡನೆಯ ಸಾರೆ, ಮತ್ತೊಂದು ಸಾರೆ.

**माखण** (ಮಾಖಣ) ನ. } ಲೇಪಿಸುವ ವಸ್ತು (ಎಣ್ಣೆ
**माखणी** (ಮಾಖಣೀ) ಸ್ತ್ರೀ. } ಮುಂತಾದುದು) ಬಳಿಯುವಿಕೆ, ಸಾರಿಸುವಿಕೆ, ತೊಡೆಯುವಿಕೆ.

**माखणे** (ಮಾಖಣೇ) ಕ್ರಿ. ಸ. ಲೇಪಿಸು, ಬಳಿ, ಸಾರಿಸು. ಹಚ್ಚು ಸವರು.

**माग** (ಮಾಗ) ಪು. ಕ. ಮಗ್ಗ, ೨. ಗುರುತು, ಪತ್ತೆ, ಅನುಸರಿಸುವಿಕೆ.

**–मूस** (–ಮೂಸ್) ಪು. ಚಿನ್ಹ, ಗುರುತು ಪತ್ತೆ.

**मागकाढणे–लावणे** (ಮಾಗ್ ಕಾಢಣೇ–ಲಾವಣೇ) ಕ್ರಿ. ಸ. ಪತ್ತೆಹಚ್ಚು, ಸುಳಿವು ನೋಡು, ಹುಡುಕಿತೆಗೆ, ಶೋಧಿಸು.

**मांग** (ಮಾಂಗ್) ಪು. ಕೊಲೆಗಡಕ.

**मांगगारूडी** (ಮಾಂಗ್‌ಗಾರುಡೀ) ಒಂದು ಜಾತಿ.

**मागचा** (ಮಾಗಚಾ) ವಿ. ಹಿಂದಿನ, ಪೂರ್ವಕಾಲದ. ಹಿಂದಿನವ.

**मागणी** (ಮಾಗಣೀ) ಸ್ತ್ರೀ. ಬೇಡಿಕೆ, ಹಕ್ಕು, ಹಕ್ಕಿನ ಬೇಡಿಕೆ, ಗರಜು, ಗಿರಾಕಿ.

**मागणे** (ಮಾಗಣೇ) ಕ್ರಿ. ಸ. ಭಿಕ್ಷೆ ಬೇಡು, ಹಕ್ಕು ಇಡು, ಬೇಡು, ಕೇಳು.

**मागणेकरी** (ಮಾಗಣೇಕರೀ) (ಬೇಡುವವ, ಕೇಳು
**मागता** (ಮಾಗತಾ) ಪು, (ವವ, ಭಿಕ್ಷೆಬೇಡು
**मागतेकरी** (ಮಾಗತೇಕರೀ) (ವವ. ೨. ಸಾಲ (ಕೊಟ್ಟವ.

**माग(गु)ती** (ಮಾಗ(ಗು)ತೀ) ಕ್ರಿ. ವಿ. ಪುನಃ ಮತ್ತೊಂದು ಸಾರೆ, ಅನಂತರ, ಮತ್ತೊಮ್ಮೆ.

**मागध** (ಮಾಗಧ) ಪು. ಸಂ. ಸ್ತುತಿಪಾಠಕ, ಭಾಟ, ಭಟ್ಟಂಗಿ, ಗಾಯಕ.

**मागमूस** (ಮಾಗಮೂಸ್) ಪು. (ಗುರುತು, ಸುಳಿವು,
**मागमुद्दा** (ಮಾಗಮುದ್ದಾ) (ಪತ್ತೆ, ಹೆಜ್ಜೆ, ಹಾದಿ, ಜಾಡೆ, ಗೆರೆ, ದಾರಿ, ಹಾದಿ, ಸುಳಿವು, ಹೊಳೆವು.

**मागर** (ಮಾಗರ್) ಪು. ಗುಡಿಸಲು, ಹಂದರ, ಚಪ್ಪರ.

**मागरा** (ಮಾಗರಾ) ಪು. ಬೇಡುವ, ಕಡ ತೆಗೆದುಕೊಳ್ಳುವ ಸ್ವಭಾವವಿದ್ದವ.

**मागलट** (ಮಾಗಲಟ್) ಕ್ರಿ. ಅ. ಹಿಂದುಳಿಯುವಿಕೆ, ಕಾಲು ಹಿಂಜರಿಯುವಿಕೆ.

**मागलटणे** (ಮಾಗಲಟಣೇ) ಕ್ರಿ. ಅ. ಹಿಂದುಳಿ, ಹಿಂದೆ ಬೀಳು, ಹಿಂದಕ್ಕೆ ಕಾಲಿಡು.

**मागला मागील** (ಮಾಗಲಾ ಮಾಗೀಲ್) ವಿ. ಹಿಂದಿನ ಮೊದಲಿನ, ಹಿಂದಿನ ಕಾಲದ, ಹಿಂದಿನ.

**मागलाव्या** (ಮಾಗಲಾವ್ಯಾ) ಪು. ಪತ್ತೆಹಚ್ಚುವ, ಶೋಧಿಸುವ, ಹೆಜ್ಜೆ ಗುರುತಿಸುವ.

**मांगलिक–मांगल्य** (ಮಾಂಗಲಿಕ್–ಮಾಂಗಲ್ಯ) ನ. ಮಂಗಲಕಾರ್ಯ, ಕಲ್ಯಾಣ, ಕ್ಷೇಮ, ಪವಿತ್ರಕಾರ್ಯ.

**मागासणे** (ಮಾಗಾಸಣೇ) ಕ್ರಿ. ಅ. ಹಿಂದುಳಿ, ಹಿಂದೆ ಬೀಳು, ತಡವಾಗು.

**मागास** (ಮಾಗಾಸ್) ವಿ. ತಡವಾದ, ಇತ್ತೀಚೆಯ, ದಿವಂಗತ.

**मागासलेला** (ಮಾಗಾಸಲೇಲಾ) ವಿ. ಹಿಂದುಳಿದ, ಹಿಂದೆ ಬಿದ್ದ, ಅಶಿಕ್ಷಿತ.

**मागासलेल्या जाती** (ಮಾಗಾಸಲೇಲ್ಯಾ ಜಾತೀ) ಸ್ತ್ರೀ. ಬಹುವ. ಹಿಂದುಳಿದ ಜಾತಿಗಳು, ಅಶಿಕ್ಷಿತ ಜನಾಂಗ, ಕಾಡ ಜನಾಂಗ.

**मागाहून, मागून** (ಮಾಗಾಹೂನ್, ಮಾಗೂನ್) ಕ್ರಿ. ವಿ. ಹಿಂದಿನಿಂದ, ನಂತರ, ಅನಂತರ.

**मागी** (ಮಾಗೀ) ಸ್ತ್ರೀ. ಬೇಡಿಕೆ, ಕನ್ಯೆಯ ಬೇಡಿಕೆ, ಕನ್ಯೆಗಾಗಿ ಬೇಡಿಕೆ (ಮದುವೆಗಾಗಿ).

**मागीलदार** (ಮಾಗೀಲ್‌ದಾರ್) ನ. ಹಿಂಬಾಗಿಲು, ಗುಪ್ತಮಾರ್ಗ, ಅಡ್ಡದಾರಿ, ಕಳ್ಳಹಾದಿ.

**मागुता–ती** (ಮಾಗುತಾ–ತೀ) ಕ್ರಿ. ವಿ. ಪುನಃ, ಇನ್ನೊಮ್ಮೆ, ಮತ್ತೊಮ್ಮೆ.

**मागे** (ಮಾಗೇ) ಕ್ರಿ. ವಿ. ಹಿಂದೆ, ಹಿಂದಿನ ಕಾಲಕ್ಕೆ, ಹಿಂದಿನ ಸಮಯದಲ್ಲಿ.

**मागेपडणे** (ಮಾಗೇಪಡಣೇ) ಕ್ರಿ. ಅ. ಹಿಂದೆಬೀಳು.

**मागेफिरणे–सरणे** (ಮಾಗೇಫಿರಣೇ–ಸರಣೇ) ಕ್ರಿ. ಸ. ಹಿಂದಿರುಗು, ಮರಳು.

**मागेपुढे** (ಮಾಗೇಪುಢೇ) ಕ್ರಿ. ವಿ. ಹಿಂದೆ ಮುಂದೆ, ಅನುಮಾನಬಿಟ್ಟು, ಕೆಲವೇ ದಿನಗಳಲ್ಲಿ. ವಿ. ಹಿಂದು ಮುಂದಿಲ್ಲದ, ವಾರಸದಾರರಿಲ್ಲದ.

**मागेपुढे नसणे** (ಮಾಗೇಪುಢೇ ನಸಣೇ) ಕ್ರಿ. ಸ. ಹಿಂದೆ ಮುಂದೆ ಇಲ್ಲದಿರು, ಸಂಸಾರಜಾಲ ಇಲ್ಲದಿರು, ಅವಲಂಬಿಸಿ ಯಾರೂ ಇಲ್ಲದಿರು.

**मागोमाग** (ಮಾಗೋಮಾಗ್) ಕ್ರಿ. ವಿ. ಹಿಂದಿನಿಂದಲೇ, ಬೆನ್ನ ಹಿಂದೆಯೇ.

**मागत्यान्, मागत्यानी, मागत्याने** (ಮಾಗತ್ಯಾನ್, ಮಾಗತ್ಯಾನೀ, ಮಾಗತ್ಯಾನೇ) ಕ್ರಿ.ವಿ. ಇನ್ನೊಮ್ಮೆ, ಇನ್ನೊಂದು ಸಾರಿ.

**माघ** (ಮಾಘ) ಪು.ಸಂ. ಮಾಘಮಾಸ, ಹನ್ನೊಂದನೆಯ ತಿಂಗಳು.

**माघार** (ಮಾಘಾರ್) ಸ್ತ್ರೀ. ಹಿಂದೆಸರಿಯುವಿಕೆ, ಹಿಂದಿರುಗುವಿಕೆ, ಪರಾಜಯಹೊಂದುವಿಕೆ.

**माघारणे** (ಮಾಘಾರಣೇ) ಕ್ರಿ. ಅ. ಹಿಂದಿರುಗು, ಹಿಂದೆಸರಿ, ಒಪ್ಪದಿರು.

**माघारपण** (ಮಾಘಾರಪಣ) ನ. ತವರು ಮನೆಗೆ ಬರುವಿಕೆ.

**माघारा–माघारी** (ಮಾಘಾರಾ–ಮಾಘಾರೀ) ಕ್ರಿ.ವಿ. ಹೊರಳಿ, ಹಿಂದೆ.

**माघारीण** (ಮಾಘಾರೀಣ್) ಸ್ತ್ರೀ. (ಗ್ರಾಮ್ಯ) ಹೆಂಡತಿ.

**माघोटी** (ಮಾಘೋಟೀ) ಸ್ತ್ರೀ. ಮಾಘಮಾಸದ ಮಳೆ, ಮಾಘದ ಮಳೆ, ಅಡ್ಡಮಳೆ.

**माच** (ಮಾಚ್) ಪು. ಮಂಚಿಕೆ, ಹೊಲದಲ್ಲಿ ಕಾವಲು, ಹಾಕಿದ ಮಂಚಣಿಕೆ.

**माच** (ಮಾಚ್) ಪು. ಜಗುಲಿಯ ಒಳಭಾಗ, ಕಟ್ಟೆ, ಮಾಳಿಗೆಯ ಒಳಭಾಗ.

**माचण** (ಮಾಚಣ್) ನ. ಕಲ್ಲಿನಿಂದ ತುಂಬುವಿಕೆ, ಹೊಡೆದು ಕಲ್ಲುತುಂಬುವಿಕೆ.

**माचणे** (ಮಾಚಣೇ) ಕ್ರಿ. ಸ. ಕಲ್ಲಿನಿಂದ ಜಡಿದು ತುಂಬು, ಕುಟ್ಟಿತುಂಬು.

**माचा, माचवा** (ಮಾಚಾ, ಮಾಚಾವಾ) ಪು. ಪಲಂಗ, ಹಾಸುಗೆಯ ಪಲಂಗ, ಸಣ್ಣ ಹಾಸುಗೆ, ಹಾಸಿಗೆ, ಮಂಚ.

**माची** (ಮಾಚೀ) ಬೆಟ್ಟದ ಕೆಳಭಾಗ, ಓರೆ, ಪರ್ವತದ ತಪ್ಪಲುಭೂಮಿ.

**माचोडा** (ಮಾಚೋಡಾ) ಪು. ಹುಲ್ಲಿನ ಹೊರೆ.

**भाज** (ಮಾಜ್) ಪು. ಕೊಬ್ಬು, ಸ್ಥೂಲತನ. ೨. ನೆಣ. ೩. ಅಮಲು.

**माजमोडणे** (ಮಾಜ್‌ಮೋಡಣೇ) ಕ್ರಿ. ಸ. ಗುಂಗು ಇಳಿಸು. ನಿಶೆಬಿಡಿಸು, ಶಾಂತಮಾಡು.

**माजघर** (ಮಾಜಘರ್) ನ. ಪಡಸಾಲೆ, ನಡುಮನೆ.

**माजणे** (ಮಾಜಣೇ) ಕ್ರಿ. ಅ. ಕೊಬ್ಬು, ಸೊಕ್ಕು, ಸೊಕ್ಕಿಗೆಬರು. ೨. ಪ್ರಸಾರವಾಗು.

**मांजर** (ಮಾಂಜರ್) ನ. ಬೆಕ್ಕು, ಮಾರ್ಜಾಲ.

**मांजरपाट** (ಮಾಂಜರಪಾಟ್) ಪು. ಇಂ. (ಮ್ಯಾಂಚೆಸ್ಟರ್‌ಪಾಟ್) ಮಾಂಜರಪಾಟ ದಪ್ಪ ಬಿಳಿ ಅರಿವೆ.

**मांजराचे पाय** (ಮಾಂಜರಾಚೇ ಪಾಯ) ಪು. ಬಹುವ. ತಿಳಿಯದೆಬರುವಿಕೆ, ಸಾವಕಾಶಬರುವಿಕೆ, ಓದಲು ಬಾರದ ಬರೆಹ.

**मांजरी** (ಮಾಂಜರೀ) ಸ್ತ್ರೀ. ಹೆಣ್ಣುಬೆಕ್ಕು, ಕಣ್ಣು ಚಿಟ್ಟಲಿ, ಗಾಯದ ಬಾವು, ಹದಗಡಲೆ.

**मांजर अडवे येणे** (ಮಾಂಜರ್ ಅಡವೇ ಯೇಣೇ) ಕ್ರಿ. ಅ. ಬೆಕ್ಕು ಅಡ್ಡಹಾಯಿ. ೨. ಅಪಶಕುನವಾಗು.

**माजरा** (ಮಾಜರಾ) ವಿ. ಸೊಕ್ಕಿನ, ಗರ್ವದ, ಗರ್ವಿಷ್ಠ, ಗುಂಗಾದ, ಮದವೇರಿದ, ಕೊಬ್ಬಿದ.

**माजा** (ಮಾಜಾ) ಪು. ಪಿತ್ತ, ಮನಸ್ಸಿನೊಳಗಿನ ಸಿಟ್ಟು. ೨. 'माझा' ನೋ.

**मांजा** (ಮಾಂಜಾ) ಪು. ಪಟದನುಲಿ, ಕಾಚಿನಪುಡಿ, ಅರಗು, ಎಣ್ಣೆ ಹಾಗೂ ತತ್ತಿಯ ಬಿಳಿ ರಸ ಕೂಡಿಸಿದ ಜಿಗುಟು ಪದಾರ್ಥ, ಗಂಜಿ.

**माजी** (ಮಾಜೀ) ವಿ. ಅರ. ಹಿಂದಿನ, ಹೋದ, ಕಳೆದ, ಗತಕಾಲದ, ಪೂರ್ವದ.

**माजीं** (ಮಾಜೀಂ) ಕ್ರಿ. ವಿ. ಒಳಗೆ...ದಲ್ಲಿ, ನಡುವೆ, ಮಧ್ಯೆ, ಅಲ್ಲಿ.

**माजुमी** (ಮಾಜುಮೀ) ವಿ. ಅರ. ಗಾಂಜಿಬಡಕ.

**माजुरी** (ಮಾಜುರೀ) ವಿ. ಹಿಂ. ಗರ್ವದ, ಸೊಕ್ಕಿನ, ಗರ್ವಿಷ್ಠ, ಉಬ್ಬಿದ, ಮದವೇರಿದ, ಗುಂಗೇರಿದ,

**माजुरकी** (ಮಜುರಕೀ) ಸ್ತ್ರೀ. ಅಹಂಕಾರ, ದೂರಾಗ್ರಹ, ಒಣಬಡಾಯಿ, ಬಿಂಕ, ಒಣಹೆಮ್ಮೆ.

**माजोरी** (ಮಜೋರೀ) ಸ್ತ್ರೀ. ಹಿಂ. } ಗರ್ವ, ಬಿಂಕದಿಂದಾದ,
**माजोरा** (ಮಜೋರಾ) ಪು. ಹಿಂ. } ಭ್ರಾಂತಿನಾದ.

**माझा** (ಮಾಝಾ) ವಿ. ಸರ್ವ. ನನ್ನ.

**माझारी** (ಮಾಝಾರೀ) ವಿ. **माजी** ನೋ.

**माटमुट** (ಮಾಟಮುಟ್) ವಿ. ಕ. ಮಾಟ, ಚಂದ ಕಾಣುವ.

**माठ** (ಮಾಠ್) ಪು. ಹರವಿ, ದೊಡ್ಡ ಕೊಡ, ಒಂದು ಪ್ರಕಾರದ ತೊಪ್ಪಲ ಪಲ್ಲೆ, ವನಸ್ಪತಿ, ಸಸಿ.

**माठणे** (ಮಾಠಣೇ) ಕ್ರಿ.ಸ. ನುಣುಪುಮಾಡು, ಸಣ್ಣ ಟಾಕಿ ಹಾಕು, ಶಾಕ, ನೋವು ನೆಟ್ಟಗಾಗು, ಗಾಯ ನೆಟ್ಟಗಾಗು, ಗಾಯಕ್ಕೆ ಹಕ್ಕಳಿಹಿಡಿ, ಗಾಯಕ್ಕೆ ಟವಕಿ ಬರು.

**माठरणे, माठळणे** (ಮಾಠರಣೇ, ಮಾಠಳಣೇ) ಕ್ರಿ. ಸ. ರೂಪಗೊಳಿಸು, ರೂಪಿಸು, ಆಕಾರಗೊಳಿಸು.

**माड** (ಮಾಡ್) ಪು. ತೆಂಗಿನಗಿಡ.

**मांड** (ಮಾಂಡ್) ಸ್ತ್ರೀ. ರಚನೆ, ಪದ್ಧತಿ, ಸ್ಥಿರಾಸನ, ಅವಸ್ಥೆ, ಸ್ಥಿತಿ, ಭಾವ. ಪು. ವ್ಯವಸ್ಥೆ, ಕ್ರಮಬದ್ಧತೆ.

**मांडणावळ** (ಮಾಂಡ್‌ಣಾವಳ್) ಸ್ತ್ರೀ. ವ್ಯವಸ್ಥೆ, ಕ್ರಮಬದ್ಧತೆ, ಕ್ರಮಗೊಳಿಸುವ ವೆಚ್ಚ.

**मांडणी** (ಮಾಂಡಣೀ) ಸ್ತ್ರೀ. ಕ್ರಮ, ರಚನೆ, ಕ್ರಮಬದ್ಧತೆ, ವ್ಯವಸ್ಥೆ, ರೀತಿ, ಪದ್ಧತಿ, ಮಂಡನೆ.

**मांडणे** (ಮಾಂಡಣೇ) ಕ್ರಿ.ಸ. ರಚಿಸು. ೨. ಲೆಕ್ಕಹಚ್ಚು. ೩. ಪ್ರಾರಂಭಿಸು.

**मांडपत्र** (ಮಾಂಡಪತ್ರ) ನ. ದತ್ತಕಪತ್ರ.

**मांडलिक** (ಮಾಂಡಲಿಕ್) ಪು. ಉಪಸಂಸ್ಥಾನಿಕ, ಮಂಡಲದ ರಾಜ.

**मांडव** (ಮಾಂಡವ್) ಪು. ಹಂದರ, ಮಂಟಪ.

**मांडव खंडणी** (ಮಾಂಡವ ಖಂಡಣೀ) ಸ್ತ್ರೀ. ಮಂಟಪದಲ್ಲಿಯ ದಕ್ಷಿಣೆ.

**मांडव परतणी** (ಮಾಂಡವ್ ಪರತಣೀ) ಸ್ತ್ರೀ. ಬೀಗರಿಗೆ ಕೊಟ್ಟ ಕಡೆಯ ಊಟ, ಮದುವೆಯ ಸಮಾಪ್ತಿ.

**मांडवी** (ಮಾಂಡವೀ) ಸ್ತ್ರೀ. ಸುಂಕದ ಕಟ್ಟೆ, ಜಕಾತಿ ಕಟ್ಟೆ, ಜಮಾಬಂದಿ ಚಾವಡಿ, ಜಕಾತಿ ಚಾವಡಿ.

**मांडा** (ಮಾಂಡಾ) ಪು. ಮಂಡಿಗೆ.

**तोंडाचे मांडे** (ತೋಂಡಾಚೇ ಮಾಂಡೇ) ಪು.ಬಹು. ರುಚಿಮಾತು, ಬಾಯಿಮಂಡಿಗೆ, ಸುಳ್ಳುವಚನ, ಪೊಳ್ಳು ವಚನ.

**मनचे मांडे खाणे** (ಮನಚೇ ಮಾಂಡೇ ಖಾಣೇ) ಕ್ರಿ. ಸ. (ಗಾದೆಯ ಮಾತು). ಮನಸ್ಸಿನಲ್ಲಿ ಮಂಡಿಗೆ ಮಂಡಿಗೆ ತಿನ್ನು, ಅಪೇಕ್ಷಿಸು, ಕಾಲ್ಪನಿಕ ಸುಖದಲ್ಲಿರು, ಗಾಳಿಯ ಗೋಪುರ ಕಟ್ಟು.

**माडा** (ಮಾಡಾ) ಪು. ಸಣ್ಣ ಸಸಿ, ಸಸಿ, ಅಂಕುರ, ಸಸ್ಯಾಂಕುರ.

**माडी** (ಮಾಡೀ) ಸ್ತ್ರೀ. ಬಗಿನಿ ಗಿಡ, ಬಗಿನಿ ಗಿಡದ ರಸ, ಮಾಡದ ರಸ, ಸಿಂದಿ. ೨. ಮಾಳಿಗೆ. ೩. ವೇಶ್ಯಾಗೃಹ.

**माडीवर** (ಮಾಡೀವರ್) ಕ್ರಿ.ವಿ. ಮಾಳಿಗೆಯ ಮೇಲೆ.

**मांडी** (ಮಾಂಡೀ) ಸ್ತ್ರೀ. ತೊಡೆ.

**मांडीवर घेणे** (ಮಾಂಡೀವರ್‌ಘೇಣೇ) ಕ್ರಿ.ಸ. ತೊಡೆಯ ಮೇಲೆ ಕೂಡ್ರಿಸಿಕೊಳ್ಳು, ದತ್ತಕ ತಕ್ಕೊಳ್ಳು.

**मांडी देणे** (ಮಾಂಡೀ ದೇಣೇ) ಕ್ರಿ.ಸ. ತೊಡೆ ಕೊಡು, ತೊಡೆಯ ಮೇಲೆ ತಲೆ ಇರಿಸಿಕೊಳ್ಳು.

**मांडी ठोकून बसणे** (ಮಾಂಡೀ ಠೋಕೂನ್ ಬಸಣೇ) ಕ್ರಿ.ಅ. ಕೆಲಸಕ್ಕೆ ಸಿದ್ಧನಾಗಿ ಕೂಡು.

**मांडीला मांडी टेकून बसणे** (ಮಾಂಡೀಲಾ ಮಾಂಡೀ ಟೇಕೂನ್ ಬಸಣೇ) ಕ್ರಿ.ಅ. ತೊಡೆಗೆ ತೊಡೆ ಹಚ್ಚು ಹಚ್ಚಿ ಕೂಡು, ಸಮಾನತೆಯಿಂದ ವರ್ತಿಸು.

**मांडीवर मांडी घालून बसणे** (ಮಾಂಡೀವರ್ ಮಾಂಡೀ ಘಾಲೂನ್ ಬಸಣೇ) ಕ್ರಿ. ಅ. ಉದಾಸೀನನಾಗು, ಆಲಸ್ಯನಾಗು.

**मांडीमोड** (ಮಾಂಡೀಮೋಡ್) ಸ್ತ್ರೀ. ಬಹಳಹೊತ್ತು ಕೂಡುವಿಕೆ, ದೀರ್ಘಕಾಲದ ವರೆಗೆ ಬರೆಯುತ್ತಿರುವಿಕೆ.

**मांडुकली** (ಮಾಂಡುಕಲೀ) ಸ್ತ್ರೀ. ಸಣ್ಣಗುಡಿಸಲು.

**माण** (ಮಾಣ) ಸ್ತ್ರೀ. ಬಾವು, ಕುತ್ತಿಗೆಯ ಬಾವು, ಕುತ್ತಿಗೆ ಸೆಳೆತ, ಮಣ್ಣು, ದೊಡ್ಡ ಬಾಯಿಯ ಮಣ್ಣಿನ ಪಾತ್ರೆ.

**माणकी** (ಮಾಣಕೀ) ಸ್ತ್ರೀ. ಸಣ್ಣರತ್ನ, ಮಾಣಿಕ, ಪದ್ಮರಾಗ, ಸಣ್ಣಮುದ್ರಾಕ್ಷರ.

**माणगा, माणा** (ಮಾಣಗಾ, ಮಾಣಾ) ಪು. ಉದ್ದಗಳ, ಉದ್ದ ಬಿದಿರು, ಉದ್ದ ಬಾಹು.

**माणस(सा)ळणे** (ಮಾಣಸ್(ಸಾ)ಳಣೇ) ಕ್ರಿ. ಅ. ಈಲಾಗು, ಪರಿಚಿತನಾಗು, ಸೌಮ್ಯನಾಗು, ಮನುಷ್ಯನಿಗೆ ಈಲಾಗು.

**माणिक्य–माणीक** (ಮಾಣಿಕ್ಯ–ಮಾಣೀಕ್) ಸ್ತ್ರೀ. ರತ್ನ.

**माणीकचौक** (ಮಾಣೀಕ್‌ಚೌಕ್) ಪು. ಅರಮನೆಯ ಮುಂದಿನ ಅಂಗಳ.

**माणीकवात** (ಮಾಣೀಕ್‌ವಾತ್) ಸ್ತ್ರೀ. ದೀಪದಬತ್ತಿ, ಐದು ಎಳೆಯ ಬತ್ತಿ.

**माणुसकी** (ಮಾಣುಸಕೀ) ಸ್ತ್ರೀ. ಮನುಷ್ಯತ್ವ, ಮನುಷ್ಯತನ, ಸಭ್ಯತೆ, ಸೌಜನ್ಯ, ವಿನಯಶೀಲತೆ.

**माणूस** (ಮಾಣೂಸ್) ಪು. ಮನುಷ್ಯ.

**माणूसपण–णा** (ಮಾಣೂಸ್‌ಪಣ್–ಣಾ) ನ. ಪು. **मनुष्यपण** ನೋ.

**माणूसघाण्या** (ಮಾಣೂಸ್‌ಘಾಣ್ಯಾ) ವಿ. ಮನುಷ್ಯರಿಗೆ ಬೇಸತ್ತವ, ಮನುಷ್ಯರು ಬೇಡಾದವ, ಅಸಾಮಾಜಿಕ, ಪರಸ್ಪರ ಪ್ರೇಮಭಾವವಿಲ್ಲದ, ನರದ್ವೇಷಿ, ಮಂದಿ ಬೇಡಾದವ.

**माणूसबळ** (ಮಾಣೂಸ್‌ಬಳ್) ನ. ಸಾಕಷ್ಟು ಜನರು ಇರುವಿಕೆ.

**माणे** (ಮಾಣೇ) ಕ್ರಿ. ಅ. ತುಂಬಿಕೊಂಡಿರು.

**मात** (ಮಾತ್) ಸ್ತ್ರೀ. ಕ. ಮಾತು, ಸಂಗತಿ. ೨. ಸ್ತ್ರೀ.ಅರ. ಪರಾಜಯ, ಸೋಲು.

**–करणे** (ಕರಣೇ) ಕ್ರಿ.ಸ. ಕುತ್ತು ಸಂಕಟಗಳನ್ನು ಪರಿಹರಿಸು. ೨. ಜಯಿಸು.

**मातकण** (ಮಾತಕಣ್) ಪು. ಮಣ್ಣುಕಾಳು, ಹರಳು ಕಾಳು.

**मातकाम** (ಮಾತ್‌ಕಾಮ್) ನ. ಮಣ್ಣಿನ ಕೆಲಸ.

**मातख (खा) ण** (ಮಾತ್‌ಖ (ಖಾ) ಣ್) ಸ್ತ್ರೀ. ಮಣ್ಣಿನ ಖನಿ, ಭೂಮಿಯಲ್ಲಿಯ ತಗ್ಗು, ತಗ್ಗು.

**मातट–ड** (ಮಾತಟ್–ಡ್) ವಿ. ಮಣ್ಣಿನ, ಮಣ್ಣು ಹರಳು ಕೂಡಿದ.

**मातणे** (ಮಾತಣೇ) ಕ್ರಿ. ಅ. ಸೊಕ್ಕಿಗೆಬರು, ಗರ್ವಪಡು, ಮದವೇರು, ವಿಲಾಸಮಾಡು.

**मातंग** (ಮಾತಂಗ) ಪು. ಆನೆ, ಐರಾವತ, ಗಜ. ೨. ಒಂದು ಜಾತಿ.

**मातबर – ब्बर** (ಮಾತಬರ – ಬ್ಬರ್) ವಿ. ಅರ. ಶ್ರೀಮಂತ, ಸಭ್ಯ, ಧನಿಕ, ಆದರವುಳ್ಳ, ಸನ್ಮಾನ, ಮಾನ್ಯ, ಶ್ಲಾಘ್ಯ, ದೊಡ್ಡ.

**मातब्बरी** (ಮಾತಬ್ಬರೀ) ಸ್ತ್ರೀ. ಅರ. ಶ್ರೀಮಂತಿಕೆ, ಧನವಂತಿಕೆ, ಆದರ, ಮಾನ, ದೊಡ್ಡತನ.

**माता** (ಮಾತಾ) ಸ್ತ್ರೀ. ಸಂ. ತಾಯಿ, ಮಾತೆ, ಜನನಿ, ಅಮ್ಮ, ಅವ್ವ.

**मातापितर** (ಮಾತಾಪಿತರ್) ಪು. ಬಹು. ತಾಯಿ–ತಂದೆ, ಜನನಿ–ಜನಕ.

**मातामह** (ಮಾತಾಮಹ) ಪು. ಅಜ್ಜ, ತಾಯಿಯ–ತಂದೆಯು.

**मातामही** (ಮಾತಾಮಹೀ) ಸ್ತ್ರೀ. ಅಜ್ಜಿ, ತಾಯಿಯ ತಾಯಿ.

**माती** (ಮಾತೀ) ಸ್ತ್ರೀ. ಮಣ್ಣು, ಧೂಳಿ, ಸರ್ವನಾಶ.

**मातीमोल** (ಮಾತೀಮೋಲ್) ಕ್ರಿ. ವಿ. ಮಣ್ಣಿನ ಬೆಲೆಗೆ, ಹಾಳಾಗುವಂತೆ.

**मातीच्या मोलाने विकणे–देणे**) ಮಾತೀಚ್ಯಾ ಮೋಲಾನೆ ವಿಕಣೇ–ದೇಣೇ) ಕ್ರಿ.ಸ. ಹುಲ್ಲಿಗೆ ಮಾರು, ಮಣ್ಣಿನ ಬೆಲೆಗೆ ಮಾರು, ಕಡಿಮೆ ಬೆಲೆಗೆ ಮಾರು.

**मातीदेणे** (ಮಾತೀದೇಣೇ) ಕ್ರಿ. ಸ. ಹುಗಿ (ಹೆಣ).

**माततेल** (ಮಾತತೇಲ್) ನ. ಮಣ್ಣೆಣ್ಣೆ, ಚಿಮಣಿಎಣ್ಣೆ.

**मातुश्री** (ಮಾತುಶ್ರೀ) ಸ್ತ್ರೀ. ತಾಯಿ, ಜನನಿ. 'मातृश्री' ನೋ.

**मातुल** (ಮಾತುಲ) ಪು. ಸಂ. } ಸೋದರ ಮಾವ,
**मातूळ** (ಮಾತುಳ್) ಪು. } ತಾಯಿಯ ಅಣ್ಣ–ತಮ್ಮ.

**मातृका** (ಮಾತೃಕಾ) ಸ್ತ್ರೀ. ಮೂಲಾಕ್ಷರ, ಸ್ವರ, ತಾಯಿ, ಜನನಿ.

**मातृगमन** (ಮಾತೃಗಮನ್) ನ. ಸಂ. ಪಾಪ ಮೈಥುನ.

**मातृगामी–गमनी** (ಮಾತೃಗಾಮೀ–ಗಮನೀ) ವಿ. ದುರಾಚಾರಿ, ಪಾಪಿ.

**मातृघात–मातृवध** (ಮಾತೃಘಾತ–ಮಾತೃವಧ) ಪು. ತಾಯಿಯ ಕೊಲೆ, ತಾಯಿಯ ವಧೆ.

**मातृत्व** (ಮಾತೃತ್ವ) ಮಾತೃಪದವಿ, ಕೂಸು ಹಡೆಯುವಿಕೆ.

**मातृद्रोह** (ಮಾತೃದ್ರೋಹ) ಪು. ಸಂ. ತಾಯಿಯ ದ್ರೋಹ, ತಾಯಿಯ ಕೇಡು, ತಾಯಿಗೆ ಮಾತ್ಸರ್ಯ.

**मातृधर्म** (ಮಾತೃಧರ್ಮ) ಪು. ಸಂ. ತಾಯಿಯ ಧರ್ಮ, ತಾಯಿಯ ಕರ್ತವ್ಯ.

**मातृहत्या** (ಮಾತೃಹತ್ಯಾ) ಸ್ತ್ರೀ. 'मातृघात' ನೋ.

**माते** (ಮಾತೇ) (ಸರ್ವ) ನನಗೆ, ನನಗಾಗಿ.

**मातेरा** (ಮಾತೇರಾ) ಪು. ಹಾಳು, ನಾಶ.

**मातेरे** (ಮಾತೇರೇ) ನ. ವಿಧ್ವಂಸ, ಸಂಪೂರ್ಣನಾಶ.

**मातोश्री** (ಮಾತೋಶ್ರೀ) ಸ್ತ್ರೀ. ತಾಯಿ.

**मातक्यान्** (ಮಾತಕ್ಯಾನ್) ಕ್ರಿ. ವಿ. ಪುನಃ ಪುನಃ.

**मात्रा** (ಮಾತ್ರಾ) ಸ್ತ್ರೀ. ಔಷಧಿಗುಳಿಗೆ, ಗುಟಕಾ, ಧನ ಅಕ್ಷರ ಮೇಲಿನ ಅಡ್ಡಗೆರೆ.

**–लागू पडणे–होणे** (–ಲಾಗೂ ಪಡಣೇ–ಹೋಣೇ) ಕ್ರಿ.ಅ. ಹಂಚಿಕೆ ಯಶಸ್ವಿಯಾಗು, ಪರಿಣಾಮಕಾರಿಯಾಗು.

**मात्रागमन** (ಮಾತ್ರಾಗಮನ) 'मातृगमन' ನೋ.

**मात्रागमनी** (ಮಾತ್ರಾಗಮನೀ) ವಿ. 'मातृगमनी' ನೋ.

**मांत्रिक** (ಮಾಂತ್ರಿಕ) ಪು. ಮಂತ್ರ ಹಾಕುವವ, ಮಂತ್ರಿಸುವವ.

**मात्सर्य** (ಮಾತ್ಸರ್ಯ) ವಿ. ಹೊಟ್ಟೆಯುರಿ, ಹೊಟ್ಟೆ ಕಿಚ್ಚು, ಮತ್ಸರ, ಅಸೂಯೆ, ಮಾತ್ಸರ್ಯ.

**माथा** (ಮಾಥಾ) ಪು. ಹಣೆ, ತಲೆ.

**माथाकूट** (ಮಾಥಾಕೂಟ್) ಸ್ತ್ರೀ. ತಲೆ ಬೇಸರ, ತಲೆ ಒಡೆಯುವಿಕೆ, ಪರಿಶ್ರಮದ ಕೆಲಸ.

**माथाफोड** (ಮಾತಾಫೋಡ್) ಸ್ತ್ರೀ. ತಲೆಬೇಸರ, ಕೊಡುವಿಕೆ, ತಲೆ ತಿನ್ನುವಿಕೆ.

**माथेकूट** (ಮಾಥೇಕೂಟ್) ಸ್ತ್ರೀ. '**माथाकूट**' ನೋ.

**माथेफोड** (ಮಾಥೇಫೋಡ್) ಸ್ತ್ರೀ. '**माथाफोड**' ನೋ.

**मादक** (ಮಾದಕ್) ವಿ. ಗುಂಗಿನ, ನಿಶೆಯ, ಮಾದಕ.

**मांदगी** (ಮಾಂದಗೀ) ವಿ. ಬೇಸರ, ದಣುವು, ಪರಿಶ್ರಮ, ಆಯಾಸ.

**मांदरी** (ಮಾಂದರೀ) ಸ್ತ್ರೀ. ಚಾಪೆ, ಹುಲ್ಲಿನ ಚಾಪೆ, ಹಾಸುವ ಚಾಪೆ.

**मांदळ–मांदळा** (ಮಾಂದಳ್ – ಮಾಂದಳಾ) ಪು. ಹಲಗೆ, ಮೃದಂಗ, ಡೊಳ್ಳು.

**मांदा** (ಮಾಂದಾ) ವಿ. ಬೇನೆಬಿದ್ದ, ಬಳಲಿದ, ಬೆಂಡಾದ, ಬತ್ತಿದ, ಬೇಸರಿಸಿದ, ಮಂದ.

**मांदार–मंदार** (ಮಾಂದಾರ್–ಮಂದಾರ) ಪು. ಪಾರಿಜಾತ ಗಿಡ, ಪ್ರವಾಳ ಗಿಡ, ಪ್ರವಾಳ ಪುಷ್ಪ, ಪಾರಿಜಾತ ಹೂವು.

**मादी** (ಮಾದೀ) ಸ್ತ್ರೀ. ಘಾ. ಹೆಣ್ಣು ಪಶು, ಮರಡವಲ್ಲಿಯ ಹೆಣ್ಣು ಕೂಲು, ಮಲಸೂತ್ರದ ಹೆಣ್ಣು ಕೂಲು.

**मांदी** (ಮಾಂದೀ) ಸ್ತ್ರೀ. ಉಂಗುರ, ವರ್ತುಲ, ಕಂಪನಿ, ಸಂಘ, ಲಾಡಿ, ಪಟ್ಟಿ, ಗುಂಪು. ಮೇಳ ಬಜಂತ್ರಿಯ ಮೇಳ, ಓಲಗದವರು.

**मांदूस** (ಮಾಂದೂಸ್) ಸ್ತ್ರೀ. ಹಣದ ಪೆಟ್ಟಿಗೆ, ಸಂದುಕ, ದ್ರವ್ಯ, ಖಜಾನೆ.

**मांदे** (ಮಾಂದೇ) ನ. ನೆಣ, ಮಜ್ಜೆ, ಪಶುವಿನ ನೆಣ.

**मांद्य** (ಮಾಂದ್ಯ) ನ. ಸಂ. ಮಂದಗತಿ– ಸಾವಕಾಶವಾದ ಕೆಲಸ, ಸೋಮಾರಿತನ, ದಡ್ಡತನ.

**माधवी** (ಮಾಧವೀ) ಸ್ತ್ರೀ. ಒಂದು ಸುಗಂಧ ಹೂವಿನ ಬಳ್ಳಿ, ಮದ್ಯ.

**माधुकरी** (ಮಾಧುಕರೀ) ಪು. ಮಧುಕರಿ ಬೇಡುವ ಬ್ರಾಹ್ಮಣ (ವಿದ್ಯಾರ್ಥಿ) ೨. ಸ್ತ್ರೀ. ಮಧುಕರಿವೃತ್ತಿ.

**माधुर्य** (ಮಾಧುರ್ಯ) ನ. ಸಂ. ರುಚಿ, ಸಿಹಿತನ, ಸಭ್ಯತನ, ಮಾಧುರ್ಯ.

**मध्यस्थ** (ಮಧ್ಯಸ್ಥ) ಪು. ಮಧ್ಯಸ್ಥ, ನಡುವಿನ ಮನುಷ್ಯ, ಪಂಚ.

**माध्यान्हिक** (ಮಾಧ್ಯಾನ್ಹಿಕ್) ನ. ಮಧ್ಯಾಹ್ನದ ಪೂಜಾವಿಧಿ, ಮಧ್ಯಾಹ್ನದ ಊಟ.

**माध्व** (ಮಾಧ್ವ) ವಿ. ಸಂ. ಮಧ್ವಾಚಾರ್ಯರ ಅನುಯಾಯಿ, ವೈಷ್ಣವ.

**मान्** (ಮಾನ್) ಸಂ. ಸಂಸ್ಕೃತ ಪ್ರತ್ಯಯ, ಉಳ್ಳಯುತ (ಬುದ್ಧಿಮಾನ್, ಶ್ರೀಮಾನ್) ಮುಂ.

**मान** (ಮಾನ್) ಸ್ತ್ರೀ. ಗೋಣು, ಕುತ್ತಿಗೆ.

**मान** (ಮಾನ್) ಪು. ಸಂ. ಗೌರವ, ಆದರ, ಹಕ್ಕು, ಪದವಿ, ಆಕಾರ, ಬಿಂಕ, ಹೆಮ್ಮೆ, ಒಣಹೆಮ್ಮೆ ದರ, ಧರ್ಮ, ಅಹಂಕಾರ, ಗುಣ.

**खालच्या मानेने चालणे** (ಖಾಲಚ್ಯಾ ಮಾನೇನೇ ಚಾಲಣೇ) ಕ್ರಿ. ಅ. ತಲೆತಗ್ಗಿಸಿ ನಡೆ, ವಿನಯದಿಂದ ನಡೆ. ೨. ಅಪಮಾನ ಹೊಂದಿ.

**मानकापणे** (ಮಾನ್‌ಕಾಪಣೇ) ಕ್ರಿ. ಸ. ಕುತ್ತಿಗೆ ಕೊಯ್ಯು, ಕೃತಘ್ನನಾಗು, ಅಪಕಾರ ಮಾಡು, ಹಾನಿಮಾಡು.

**मानखाली घालणे** (ಮಾನ್‌ಖಾಲೀ ಘಾಲಣೇ) ಕ್ರಿ. ಅ. ತಲೆಬಗ್ಗಿಸು, ಲೀನನಾಗು, ನಾಚು, ಅವಮಾನಿತನಾಗು.

**मान डोलावणे** (ಮಾನ್‌ಡೋಲಾವಣೇ) ಕ್ರಿ. ಸ. ತಲೆದೂಗು, ತಲೆಹಾಕು, ಹೌದೆನ್ನು, ಅನುಮತಿ ನೀಡು, ಸಮ್ಮತಿಯನ್ನೀಡು.

**मानधरणे** (ಮಾನ್‌ಧರಣೇ) ಕ್ರಿ. ಸ. ಅಡ್ಡಿಮಾಡು, ಕುತ್ತಿಗೆ ಹಿಡಿ. ೨. ಕ್ರಿ. ಅ. ಕುತ್ತಿಗೆ ನೋಯು. ೩. (ಕೂಸಿನ) ಗೋಣು ಸ್ಥಿರವಾಗು.

**मानमुरगळणे** (ಮಾನ್‌ಮುರಗಳಣೇ) ಕುತ್ತಿಗೆ ಹಿಚುಕು. ನಾಶಮಾಡು, ಘಾತಮಾಡು, ಸರ್ವಸ್ವ ಕಸಿದುಕೊಳ್ಳು.

**मानवर करणे** (ಮಾನ್‌ವರ ಕರಣೇ) ಕ್ರಿ. ಅ. ಉನ್ನತಿಯಾಗು, ದಾರಿದ್ರ್ಯ ಹರಿದುಕೊಳ್ಳು, ಶ್ರೀಮಂತನಾಗು, ಮಾನವಂತನಾಗು, ಉದ್ಭವಿಸು.

**मानसोडविणे** (ಮಾನ್‌ಸೋಡವಿಣೇ) ಕ್ರಿ. ಅ. ಬಿಡುಗಡೆ ಹೊಂದು.

**मानेवर सुरी ठेवणे** (ಮಾನೇವರ ಸುರೀ ಠೇವಣೇ) ಕ್ರಿ. ಸ. ಕುತ್ತಿಗೆಯ ಮೇಲೆ ಚೂರಿ ಇಡು.

**मानेवर बसणे** (ಮಾನೇವರ್ ಬಸಣೇ) ಕ್ರಿ. ಸ. ಜುಲುಮೆಮಾಡು, ಒತ್ತಾಯಪಡಿಸು.

**मानकरी** (ಮಾನಕರೀ) ಪು. ಆದರಾರ್ಹ, ಪದವಿ ಯೋಗ್ಯ, ಮಾನನೀಯ, ಪದವಿ, ಜಯ, ಪಡೆದವ.

**मानखंडना** (ಮಾನಖಂಡನಾ) ಸ್ತ್ರೀ. ಮಾನಖಂಡನೆ, ಅವಮಾನ, ಅಗೌರವ, ಅವಮರ್ಯಾದೆ, ಅವಮಾನ.

**मानगुटी–गूट** (ಮಾನ್‌ಗುಟೀ–ಗೂಟ್) ಸ್ತ್ರೀ. ಗೋಣು, ಕುತ್ತಿಗೆ.

**मानणूक** (ಮಾನ್‌ಣೂಕ್) } ಸ್ತ್ರೀ. ಪ್ರತಿಜ್ಞೆ, ವ್ರತ,
**मानता** (ಮಾನತಾ) } ಹರಕೆ.

**मानणे** (ಮಾನಣೇ) ಕ್ರಿ. ಸ. ವ್ರತಮಾಡು. ೨. ಮನ್ನಿಸು, ವಿಧೇಯನಾಗು, ವಶನಾಗು, ಆದರಿಸು, ವಿಶ್ವಾಸ ವಿಡು, ಒಪ್ಪು, ಸುಖಬಡು.

**माननीय** (ಮಾನನೀಯ) ವಿ. ಸಂ. ಮಾನ್ಯ, ಸನ್ಮಾನ್ಯ, ಆದರಿಸತಕ್ಕ.

**मानपत्र** (ಮಾನಪತ್ರ) ನ. ಸಂ. ಬಿನ್ನವತ್ತಳೆ, ಸತ್ಕಾರ ಪತ್ರ.

**मानपान** (ಮಾನಪಾನ) ಪು. ಮದುವೆಯಲ್ಲಿಯ ಕೊಡಕೊಳ್ಳುವಿಕೆ.

**मानभंग** (ಮಾನಭಂಗ) ಪು. ಸಂ. ಅವಮಾನ, ಅವ ಮಾನದಿಂದ ವರ್ತಿಸುವಿಕೆ.

**मानभाव** (ಮಾನಭಾವ) ಪು. ಮಹಾನುಭಾವೀ ಪಂಥ ದವ. ೨. ದಾಂಭಿಕ.

**मानभावी कावा** (ಮಾನಭಾವೀ ಕಾವಾ) ಪು. ನ. ಕುತಂತ್ರ, ಮೋಸಗಾರಿಕೆ, ಕುಯುಕ್ತಿ.

**मानमर्यादा** (ಮಾನಮರ್ಯಾದಾ) ಸ್ತ್ರೀ. ಮರ್ಯಾದೆ, ಗೌರವ. ೨. ನಾಚಿಕೆ.

**मानमान्यता** (ಮಾನಮಾನ್ಯತಾ) ಸ್ತ್ರೀ. ಆದರ, ಗೌರವ.

**मानमोड** (ಮಾನಮೋಡ್) ಕ್ರಿ. ವಿ. ಕುತ್ತಿಗೆ ಮುರಿ ಯುವಂತೆ (ದುಡಿ).

**मानव** (ಮಾನವ್) ಪು. ಮನುಷ್ಯ, ಮನುಷ್ಯಜಾತಿ.

**मानवणे** (ಮಾನವಣೇ) ಕ್ರಿ. ಅ. ಅನುಕೂಲವಾಗು, ಲಾಭವಾಗು. ೨. ಸುಖಹತ್ತು.

**मानवती** (ಮಾನವತೀ) ಸ್ತ್ರೀ. } ಹೆಂಗಸು, ಸ್ತ್ರೀ.
**मानिनी** (ಮಾನಿನೀ) ಸ್ತ್ರೀ. } ಗಂಡನ ಮೇಲೆ ಸಿಟ್ಟಾದ ಹೆಂಗಸು.

**मानवलोक** (ಮಾನವ ಲೋಕ್) ಪು. ಇಹಲೋಕ, ಈ ಜಗತ್ತು, ಪೃಥ್ವಿ.

**मानवळी** (ಮಾನವಳೀ) ಸ್ತ್ರೀ. ಕುತ್ತಿಗೆಯ ಹಿಂಭಾಗದ ಮೇಲಿನ ಸಣ್ಣ ಕೂದಲು, ಹೆಡಕಿನ ಮೇಲಿನ ಕೂದಲು.

**मानवी** (ಮಾನವೀ) ಪು. ಕುತ್ತಿಗೆಯ ಹಿಂಭಾಗ ಮನುಷ್ಯ ಸಂಬಂಧ.

**मानस** (ಮಾನಸ) ಸ. ಮನಸ್ಸು, ಅಂತಃಕರಣ. ೨. ಪು. ಇಚ್ಛೆ, ಆಕಾಂಕ್ಷೆ, ಬಯಕೆ, ಮಾನಸಿಕ.

**मानसिक** (ಮಾನಸಿಕ) ವಿ. ಸಂ. ಮನಸ್ಸಿನ, ಕಲ್ಪಿತ, ಮನಸ್ಸಿಗೆ ಸಂಬಂಧಿಸಿದ, ಮಾನಸಿಕ, ಸಂಶಯಾಸ್ಪದ, ಸಂದೇಹಾತ್ಮಕ, ಕಾಲ್ಪನಿಕ.

**मानहानी** (ಮಾನಹಾನಿ) ಸ್ತ್ರೀ. ಮಾನಹಾನಿ, ಅವ ಮಾನ, ಅನಾದರ, ಮಾನಭಂಗ.

**मानाचा** (ಮಾನಾಚಾ) ವಿ. ಆದರಣೀಯ, ಪದವಿ ಪಡೆದ, ಹೆಸರು ಪಡೆದ.

**मानाचेपान** (ಮಾನಾಚೇಪಾನ್) ನ. ಮರ್ಯಾದೆವೀಳೆ, ಸಣ್ಣ ಕಾಣಿಕೆ.

**मानी** (ಮಾನೀ) ವಿ. ಗರ್ವದ, ಅಹಂಕಾರದ, ಸೊಕ್ಕಿನ.

**मानुष** (ಮಾನುಷ) ವಿ. ಸಂ. ಮಾನವ, ಮಾನವೀಯ.

**मानेचा काटा** (ಮಾನೇಚಾ ಕಾಟಾ) ಪು. ಕೊರಳಿನ ತುದಿ, ಬೆನ್ನಹುರಿಯ ತುದಿ, ಬೆನ್ನಹುರಿ, ಬೆನ್ನಹುರಿ ಶಿಖರ.

**मानेचा मणका** (ಮಾನೇಚಾ ಮಣಕಾ) ಪು. ಕುತ್ತಿ ಗೆಯ, ಹಿಂಭಾಗ, ಹೆಡಕು, ಹಿಕ್ಕತ್ತು, ಚೆಂಡು, ಕುಂಕೆ.

**मान्य** (ಮಾನ್ಯ) ವಿ. ಆದರಣೀಯ, ಸ್ವೀಕರಿಸತಕ್ಕ.

**मान्य करणे** (ಮಾನ್ಯ ಕರಣೇ) ಸ್ತ್ರೀ. ಒಪ್ಪು, ಒಪ್ಪಿ ಕೊಳ್ಳು, ಸ್ವೀಕರಿಸು, ಯೋಗ್ಯವೆಂದು ತಿಳಿ, ಸತ್ಯ ವೆಂದು ಭಾವಿಸು.

**मान्यता** (ಮಾನ್ಯತಾ) ಸ್ತ್ರೀ. ನ. ಆಜ್ಞಾಧಾರಣೆ, ವಿಧೇಯತ್ವ, ಆಧೀನತೆ, ಸನ್ಮಾನ, ಶ್ಲಾಘನೆ.

**माप** (ಮಾಪ್) ನ. ಅಳತೆ.

**मापटे** (ಮಾಪಟೇ) ನ. ಅರ್ಧ ಶೇರಿನ ಅಳತೆ.

**मापणे** (ಮಾಪಣೇ) ಕ್ರಿ. ಸ. ಅಳೆ, ಅಳತೆ ಮಾಡು, ಗುರುತು ಮಾಡು.

**मापन** (ಮಾಪನ) ನ. ಸಂ. ಅಳೆಯುವಿಕೆ, ಅಳತೆ, ಅಂದಾಜು, ಗುರುತು.

**मापाडचा** (ಮಾಪಾಡ್ಯಾ) ಪು. ಅಧಿಕೃತ ಕಾಳು, ಅಳೆ ಯುವ, ಸರಕಾರಿ ಧಾನ್ಯ ಅಳೆಯುವ.

**मापी** (ಮಾಪೀ) ವಿ. ಅಳತೆಯ (ತೂಕದ್ದಲ್ಲದ)

**मापीव** (ಮಾಪಿವ್) ವಿ. }
**मापित** (ಮಾಪೀತ್) ವಿ. } ಅಳತೆ ಮಾಡಿದ.

**माफ** (ಮಾಫ್) ವಿ. ಅರ. ಕ್ಷಮಿಸಿದ, ಮನ್ನಣೆಕೊಟ್ಟ.

**माफक** (ಮಾಫಕ್) ವಿ. ಅರ. (ಮುವಾಫಕ್) ಯೋಗ್ಯ, ತಕ್ಕ, ಹಾಳತಾದ.

**माफी** (ಮಾಫೀ) ಸ್ತ್ರೀ. ಅರ. ಕ್ಷಮೆ, ಬಿಡುಗಡೆ, ಮಾಫಿ, ರಿಯಾಯತಿ, ವಿಮೋಚನೆ.

**माफीसाल** (ಮಾಫೀಸಾಲ) ತೆರಿಗೆ ಮಾಫು ಮಾಡಿದ ವರ್ಷ, ಬರಗಾಲ.

**माबळभट** (ಮಾಬಳ್‌ಭಟ್) ಪು. ಔದಾರ್ಯದ ಹುಚ್ಚು, ಅವ್ಯವಸ್ಥಿತ ಮನುಷ್ಯ.

**मामंजी** (ಮಾಮಂಜೀ) ಪು. ಮಾವ, ಗಂಡನ ತಂದೆ.

**मामदी–दे** (ಮಾಮದೀ–ದೇ) ಸ್ತ್ರೀ. ನ. ಯಾತ್ರಾ ಸಮಾಪ್ತಿಯ ಬ್ರಾಹ್ಮಣ ಭೋಜನ.

**मामलत** (ಮಾಮಲತ್) ಸ್ತ್ರೀ. ಅರ. ಮಾಮಲೇದಾರ ಪದವಿ, ಸಾರ್ವಜನಿಕ ಕೆಲಸ, ಅಧಿಕಾರ.

**मामलतदार** (ಮಾಮಲತ್‌ದಾರ್) ಪು. ಅರ. ತಾಲೂಕಿನ ಅಧಿಕಾರಿ, ಸರಕಾರಿ ಹುದ್ದೆಯ ಅಧಿಕಾರಿ.

**मामा** (ಮಾಮಾ) ಪು. ಸೋದರಮಾವ. ೨. ಪತ್ನಿಯ ತಂದೆ.

**मामाजी** (ಮಾಮಾಜೀ) ಪು. ಪತ್ನಿಯ ತಂದೆ.

**मामी** (ಮಾಮೀ) ಸ್ತ್ರೀ. ಸೋದರ ಮಾವನ ಹೆಂಡತಿ, ಪತ್ನಿಯ ತಾಯಿ.

**मामे बहीण** (ಮಾಮೇಬಹೀಣ್) ಸ್ತ್ರೀ. ಸೋದರ ಮಾವನಮಗಳು.

**मामेभाऊ** (ಮಾಮೇಭಾಊ) ಪು. ಸೋದರ ಮಾವನ ಮಗ.

**मामेसासू** (ಮಾಮೇಸಾಸೂ) ಸ್ತ್ರೀ. ಪತಿ–ಪತ್ನಿಯ ಸೋದರ ಮಾವನ ಹೆಂಡತಿ.

**मामूल** (ಮಾಮೂಲ್) ಪು. ಅರ. ಪದ್ಧತಿ, ರಸಮು, ಲಂಚ.

**मामूली** (ಮಾಮೂಲೀ) ವಿ. ಅರ. ಸಾಮಾನ್ಯ, ಸಾಧಾರಣ, ವಾಡಿಕೆಯ.

**माय** (ಮಾಯ) ಸ್ತ್ರೀ. ಅವ್ವ, ತಾಯಿ, ಜನನಿ, ಅಮ್ಮ, ಮಾತೆ.

**मायपोट** (ಮಾಯಪೋಟ್) ನ. ಪ್ರೇಮಹೃದಯ, ಪ್ರೇಮಭರಿತ ಅಂತಃಕರಣ, ಕೋಮಲಸ್ವಭಾವ, ಸೂಕ್ಷ್ಮಸಂವೇದನೆ, ಕೌತುಕ.

**मायणी** (ಮಾಯಣೀ) ಸ್ತ್ರೀ. ಬಳೆ, ಅಣಜು, ಕಬ್ಬಿಣದ ಬಳೆ, ಪಟ್ಟಿ.

**मायथळ** (ಮಾಯಥಳ್) ನ. ತೌರುಮನೆ, ತಾಯಿಯ ಮನೆ.

**मायदळ–ळा** (ಮಾಯದಳ್–ಳಾ) ಕ್ರಿ. ವಿ. ಬಹಳ, ಎಷ್ಟೋ, ಸಾಕಷ್ಟು.

**मायना** (ಮಾಯನಾ) ಪು. ಅರ. ಒಕ್ಕಣಿಕೆ.

**मायेचापूत** (ಮಾಯೇಚಾಪೂತ್) ಪು. ಪ್ರೀತಿಯ ಮಗು, ತಾಯಿಯ ಮಗು, ಸುಪುತ್ರ, ವೀರಪುತ್ರ.

**मायफळ** (ಮಾಯಫಳ್) ನ. ಒಂದು ಔಷಧಿ.

**मायबहीण** (ಮಾಯಬಹೀಣ್) ಸ್ತ್ರೀ. ಹೆಂಗಸರ ವಿಷಯದ ಆದರಸೂಚಕ ಶಬ್ದ, ಭಗಿನಿ.

**मायबाप** (ಮಾಯಬಾಪ್) ಪು. ತಾಯಿ–ತಂದೆ, ಸಂರಕ್ಷಣೆಗಾಗಿ ಗೌರವದ ಶಬ್ದ.

**मायेचा गोंधळ** (ಮಾಯೇಚಾ ಗೋಂಧಳ್) ಪು. ಮಾಯೆಯ ಆಟ, ಪ್ರಪಂಚ, ಸಂಸಾರ.

**मायेचा पदर** (ಮಾಯೇಚಾ ಪದರ್) ಪು. ಪ್ರೇಮದ ಸೆರಗು, ಸಂರಕ್ಷಣೆ, ಆಶ್ರಯ.

**माया** (ಮಾಯಾ) ಸ್ತ್ರೀ. ಮೋಹ, ಭ್ರಮೆ, ಅವಿದ್ಯೆ, ಮೋಸ, ವಂಚನೆ, ಠಕ್ಕತನ.

**मायाममता** (ಮಾಯಾಮಮತಾ) ಸ್ತ್ರೀ. ಪ್ರೇಮ, ಪ್ರೀತಿ, ಸಹಾನುಭೂತಿ, ಗೆಳೆಯ, ಒಡನಾಡಿ.

**मायामय** (ಮಾಯಾಮಯ) ವಿ. ಭ್ರಾಮಕ, ಮೋಸದ, ಭ್ರಾಂತಿಯನ್ನುಂಟು ಮಾಡುವ.

**मायाळू** (ಮಾಯಾಳೂ) ವಿ. ಲೋಲ, ಪ್ರೀತಿಯುಳ್ಳ, ಸಜ್ಜನ, ದಯೆಯ, ಪ್ರೇಮದ.

**मायावी** (ಮಾಯಾವೀ) ವಿ. ವೇಷಧಾರಿ, ಕಪಟ, ಪಾಖಂಡಿ, ಮೋಸದ, ವಂಚನೆಯ, ಕೈಚಳಕದ, ಮಾಟದ.

**मायमाउली-मावली** (ಮಾಯ್‌ಮಾಉಲೀ-ಮಾವಲೀ) ಸ್ತ್ರೀ. ತಾಯಿ, ಅವ್ವ, ಜನನಿ, ಹೆಂಗಸರ ವಿಷಯಕ ಆದರದ ಶಬ್ದ.

**मायि(यी)क** (ಮಾಯಿ(ಯೀ)ಕ್) ವಿ. ಮಾಯೆಯ.

**मार** (ಮಾರ್) ಪು. ಹೊಡೆತ, ಬಡೆತ, ಗುದ್ದು, ೨. ಪ್ರಚುರತೆ, ಪ್ರಚಾರ, ಮೈಮೇಲೇರುವಿಕೆ.

**मारक** (ಮಾರಕ್) ವಿ. ಕೊಲ್ಲುವ, ಇಲ್ಲದಂತೆಮಾಡುವ.

**मारका** (ಮಾರಕಾ) ವಿ. ಹೊಡೆಯುವ, ಬಡೆಯುವ, ಇರಿಯುವ, ತಿವಿಯುವ.

**मारकूट** (ಮಾರಕೂಟ್) ವಿ. ಹೊಡೆದಾಟ, ಬಡೆದಾಟ, ಗುದ್ದು, ಏಟು, ಪೆಟ್ಟು.

**मारखाऊ** (ಮಾರಖಾಊ) ವಿ. ಹೊಡೆತ ತಿನ್ನುವ, ಬಡೆಯಿಸಿಕೊಳ್ಳುವ.

**मारझोड** (ಮಾರಝೋಡ್) ಸ್ತ್ರೀ. ಹೊಡೆದಾಟ.

**मारण** (ಮಾರಣ) ನ. ಕೊಲ್ಲುವಿಕೆ, ಮೋಹಿನಿ, ಯಂತ್ರಮಾಟ, ನಾಶಮಾಡುವ ಯಂತ್ರ, ಮಂತ್ರ ಪ್ರಯೋಗ, ಅಭಿಚಾರ, ಉಚ್ಚಾಟಣೆ, ಮಾಯಾ.

**मारणी** (ಮಾರಣೀ) ಸ್ತ್ರೀ. ಹೊಡೆದಾಟ.

**मारणे** (ಮಾರಣೇ) ಕ್ರಿ. ಅ. ಹೊಡೆ, ಬಡೆ, ಕೊಲ್ಲು, ಸಂಹರಿಸು, ಗಟ್ಟಿಮಾಡು, ವಶದಲ್ಲಿಡು, ಒತ್ತಾಯ ಮಾಡು.

**मारता** (ಮಾರತಾ) ವಿ. }ಹೊಡೆಯುವವನು,
**मारतापीर** (ಮಾರತಾಪೀರ್) ಪು.} ಬಡೆಯುವವನು, ವಿ. ಹೊಡೆಯುವ, ಬಡೆಯುವ, ಹೊಡೆ-ಬಡೆಯುವ ಚಟದ.

**मारपीट** (ಮಾರಪೀಟ್) ಸ್ತ್ರೀ. '**मारकूट**' ನೋ.

**मारफत** (ಮಾರಫತ್) ಕ್ರಿ. ವಿ. ಅರ. ಮುಖಾಂತರ ವಾಗಿ, ಪರವಾಗಿ, ಸಂಬಂಧವಾಗಿ.

**मारवाडी** (ಮಾರವಾಡೀ) ವಿ. ಮಾರವಾಡದವ. ೨. ಜಬುಟ, ಜೀನ.

**मारहाण, माराकुटी** (ಮಾರಹಾಣ್, ಮಾರಾಕುಟೀ) ಸ್ತ್ರೀ. ಹೊಡೆದಾಟ, ಬಡಿದಾಟ.

**मारा** (ಮಾರಾ) ಪು. ಹಲ್ಲೆ, ದಾಳಿ, ಗುಂಡಿನೇಟು, ಹೊಡೆತ ಬಡೆತ. ೨. ಉಪಯೋಗ.

**मारामार** (ಮಾರಾಮಾರ್) ಸ್ತ್ರೀ. ಕಠಿಣ ಕೆಲಸ, ಕಷ್ಟ.

**मारामारी** (ಮಾರಾಮಾರೀ) ಸ್ತ್ರೀ. ಹೊಡೆದಾಟ.

**मारुत** (ಮಾರುತ) ಪು. ಸಂ. ಹವೆ, ಗಾಳಿ.

**मारुती** (ಮಾರುತೀ) ಪು. ಹನುಮನ ಹೆಸರು, ಹನುಮಂತ.

**मारुतीचे शेपूट लांबणे** (ಮಾರುತೀಚೇ ಶೇಪೂಟ್ ಲಾಂಬಣೇ) ಕ್ರಿ. ಅ. ಖರ್ಚು ಬೆಳೆ, ಉಪದ್ವ್ಯಾಪ ಹೆಚ್ಚಾಗು, ಕೆಲಸದ ಜಂಜಾಟ ಬೆಳೆ.

**मारू** (ಮಾರೂ) ವಿ. ಕೊಲ್ಲುವವ, ಮೋಸಮಾಡುವವ. ೨. ವಿ. ಅತ್ಯಂತ ಸುಂದರ, ಉತ್ತಮ.

**मारून मुटकून** (ಮಾರೂನ್ ಮುಟಕೂನ್) ಕ್ರಿ. ವಿ. ಜುಲುಮೆಯಿಂದ.

**मारेकरी** (ಮಾರೇಕರೀ) ಪು. ಕೊಲೆಗಡಕ, ಕೊಲೆ ಪಾತಕಿ.

**मार्ग** (ಮಾರ್ಗ) ಪು. ಸಂ. ತಾರಿ, ಹಾದಿ, ರಸ್ತೆ, ಪದ್ಧತಿ, ವಾಡಿಕೆ, ರೂಢಿ, ಧಾರ್ಮಿಕ ವ್ಯವಸ್ಥೆ, ಧರ್ಮಕ್ರಮ.

**मार्गधरणे** (ಮಾರ್ಗಧರಣೇ) ಕ್ರಿ. ಸ. ಹಾದಿಹಿಡಿ, ಹೊರಡು, ದಾರಿಕಟ್ಟಿಹೊಡೆ, ದಾರಿಕಟ್ಟು.

**मार्गफुटणे** (ಮಾರ್ಗಫುಟಣೇ) ಕ್ರಿ. ಅ. ದಾರಿಒಡೆ, ದಾರಿಸೀಳು, ವಿಚಾರ ಬದಲಾಗು, ಮಾರ್ಗ ಬದ ಲಾಗು.

**मार्ग लागणे** (ಮಾರ್ಗಲಾಗಣೇ) ಕ್ರಿ. ಅ. ದಾರಿಗೆ ಹತ್ತು, ದಾರಿಸಿಗು, ಮಾರ್ಗದೋರು, ಕೆಲಸ ಸಾಗು,

**मार्गीलागणे** (ಮಾರ್ಗಿಲಾಗಣೇ) ಕ್ರಿ. ಅ. ಹೊರಡು, ಸುಧಾರಿಸು, ಸನ್ಮಾರ್ಗಕ್ಕೆ ಹತ್ತು, ಸಾಯುವ ಸ್ಥಿತಿಯಲ್ಲಿರು.

**मार्गावरयेणे** (ಮಾರ್ಗಾವರ್‌ಯೇಣೇ) ಕ್ರಿ. ಅ. ಸನ್ಮಾರ್ಗಕ್ಕೆ ಹತ್ತು.

**मार्गक्रमण** (ಮಾರ್ಗಕ್ರಮಣ) ನ. ಸಂ. ಪ್ರವಾಸ ಮಾಡುವಿಕೆ, ಯಾತ್ರಾಪ್ರವಾಸ, ದಾರಿ ನಡೆಯುವಿಕೆ.

**मार्गप्रतीक्षा** (ಮಾರ್ಗಪ್ರತೀಕ್ಷಾ) ಸ್ತ್ರೀ. ಸಂ. ದಾರಿ ನೋಡುವಿಕೆ, ನಿರೀಕ್ಷಣೆ, ಕೋರಿಕೆ, ಆಶೆ, ಪ್ರತೀಕ್ಷೆ, ಕಾಮಿತಾರ್ಥ.

**मार्गशीर्ष–शीर** (ಮಾರ್ಗಶೀರ್ಷ–ಶೀರ) ಪು. ಸಂ. ಭಾರತೀಯರ ಒಂಬತ್ತನೆಯ ತಿಂಗಳು.

**मार्गस्थ** (ಮಾರ್ಗಸ್ಥ) ವಿ. ಸಂ. ದಾರಿಯಲ್ಲಿದ್ದ, ಮಾರ್ಗಸ್ಥ, ಹಾದಿಗೆ ಹತ್ತಿದ.

**मार्जन** (ಮಾರ್ಜನ) ನ. ಸಂ. ಪ್ರೋಕ್ಷಣೆ, ಚಿಮುಕಿ ಸುಕೆ, ಜಲಸಂಚಿನ, ಸ್ವಚ್ಛ ಮಾಡುವಿಕೆ, ಸ್ನಾನ, ಜಳಕ.

**मार्जनी** (ಮಾರ್ಜನೀ) ಸ್ತ್ರೀ. ಅಂಚಿಕಡ್ಡಿ, ಪೊರಕೆ, ಕಸಬರಿಗೆ, ಹಿಡಿಕುಂಟೆ, ಬರಲು, ಬಲ್ಲು. ವಿ. ಕಸ ತೆಗೆಯುವ, ಕಸಹೊಡೆಯುವ, ಪವಿತ್ರ ಗೊಳಿಸುವ.

**मार्जार** (ಮಾರ್ಜಾರ) ಪು. ಸಂ. ಬೆಕ್ಕು.

**मार्तन्ड** (ಮಾರ್ತಂಡ) ಪು. ಸಂ. ಸೂರ್ಯ, ಭಾಸ್ಕರ, ಪ್ರಭಾಕರ.

**मार्दव** (ಮಾರ್ದವ) ವಿ. ಸಂ. ಮೃದುತ್ವ, ಕೋಮಲತೆ, ಕೋಮಲತ್ವ, ಮಿದುವುತನ, ಮೃದುಸ್ವಭಾವ, ಸೌಮ್ಯತೆ.

**मार्मिक** (ಮಾರ್ಮಿಕ) ವಿ. ಸಂ. ತೀಕ್ಷ್ಣ, ಮರ್ಮ ಭೇದಕ, ತೀವ್ರ, ವೇದಕ, ಪ್ರಬಲ.

**माल** (ಮಾಲ್) ಪು. ಅರ. ಒಡವೆ, ಆಸ್ತಿ, ಜೀನಸು, ಸರಕು.

**मालक** (ಮಾಲಕ್) ಪು. ಅರ. ಒಡೆಯ, ಹಕ್ಕುದಾರ, ಸ್ವಾಮಿ, ಯಜಮಾನ.

**मालकंस** (ಮಾಲಕಂಸ) ಪು. ಒಂದುರಾಗ, ಸಂಗೀತ ದಲ್ಲಿಯ ಒಂದುರಾಗ.

**मालकी** (ಮಾಲಕೀ) ಸ್ತ್ರೀ. ಅರ. ಒಡೆತನ, ಯಜ ಮಾನಿಕೆ, ಹಕ್ಕುದಾರಿಕೆ, ಧನಿ, ಹಿಡುವಳಿದಾರ.

**मालचाटी–टचा** (ಮಾಲಚಾಟೀ–ಟ್ಯಾ) ಪು. ಉಪ ದೇಶಕ.

**मालजादी** (ಮಾಲಜಾದೀ) ಸ್ತ್ರೀ. ಅರ. ವೇಶ್ಯೆ, ಸೂಳೆ.

**मालजामीन** (ಮಾಲಜಾಮೀನ್) ಸ್ತ್ರೀ. ಪು. ಹೊಣೆ, ಹೊಣೆಗಾರಿಕೆ, ಜೀನಸು ಈಡು ಇಡುವಿಕೆ.

**मालण** (ಮಾಲಣ್) ಸ್ತ್ರೀ. ಸುಂದರ ಸ್ತ್ರೀ, ಕಮ ನೀಯ ಸ್ತ್ರೀ.

**मालणे** (ಮಾಲಣೇ) ಕ್ರಿ. ಅ. ನೊಂದು, ದೀಪ ನೊಂದು, ದೀಪ ದೊಡ್ಡದಾಗು, ಸಾಯು, ದೀಪ ಆರು–ಆರಿಸು.

**मालती** (ಮಾಲತೀ) ಸ್ತ್ರೀ. ಮಾಲತಿ ಹೂವು, ಮಾಲತಿ ಹೂವಿನ ಬಳ್ಳಿ.

**मालधनी** (ಮಾಲಧನಿ) ಪು. ಜೀನಸಿನ ಒಡೆಯ, ಸರ ಕಿನ ಮಾಲಕ.

**मालपवा – पोवा** (ಮಾಲಪವಾ – ಪೋವಾ) ಪು. ಜೀನಸು, ಹೋಳಿಗೆ, ಸವಿದೋಸೆ.

**मालपिसा** (ಮಾಲಪೀಸಾ) ವಿ. ಜೀನ, ಕೃಪಣ, ಕಳ ಕೊಂಡು ಹುಚ್ಚಾದ, ತಿಳಿಗೇಡಿಯಾದ.

**मालमत्ता** (ಮಾಲಮತ್ತಾ) ಪು. ವಸ್ತು – ಒಡವೆ, ಆಸ್ತಿ–ಸಾಮಾನು, ಕಸ–ಕಡ್ಡಿ.

**मालमसाला** (ಮಾಲಮಸಾಲಾ) ಪು. ಮಸಾಲೆ ಸಾಮಾನು, ಮಸಾಲೆ ಸರಕು.

**मालमस्त** (ಮಾಲಮಸ್ತ) ವಿ. ಧನದಿಂದ ಸೊಕ್ಕಿದ, ಶ್ರೀಮಂತಿಕೆಯ ಗರ್ವವುಳ್ಳ, ರೊಕ್ಕದ ಸೊಕ್ಕುಳ್ಳ.

**मालमिळकत** (ಮಾಲಮಿಳಕತ್) ಸ್ತ್ರೀ. ಸಾಮಾನು ಸರಕು, ವಸ್ತು ಒಡವೆ, ಆಸ್ತಿ.

**मालमुद्दल** (ಮಾಲಮುದ್ದಲ) ನ. ಮೂಲ ಬೆಲೆ, ಮೂಲಕ್ರಿಯೆ.

**मालवणे** (ಮಾಲವಣೇ) ಕ್ರಿ. ಸ. ನೊಂದಿಸು, ಆರಿಸು, ನಿಲ್ಲಿಸು, ತೇಜೋ ಹೀನಮಾಡು, ಸಾಯಿಸು, ಕೊಲ್ಲು.

**माला** (ಮಾಲಾ) ಸ್ತ್ರೀ. ಮಾಲೆ, ದಂಡೆ, ಹಾರ, ಸಾಲು, ಪಂಕ್ತಿ, ಪುಸ್ತಕ ಮಾಲೆ.

**मालिन्य** (ಮಾಲಿನ್ಯ) ನ. ಸಂ. ಹೊಲಸುತನ, ಅಸ್ವ ಚ್ಛತೆ, ಅಪವಿತ್ರತೆ, ಅಶುದ್ಧತೆ, ಅಮಾಂಗಲ್ಯ, ಅನ್ಯಾಯ.

**मालीक** (ಮಾಲೀಕ್) ಪು. ಅರ. ಒಡೆಯ, ದೇವರು.

**मालीम** (ಮಾಲೀಮ್) ಪು. ಅರ. ಹಡಗಿನ ಅಧಿಕಾರಿ,

**मालूम** (ಮಾಲೂಮ್) ವಿ. ಅರ. ಗೊತ್ತಾದ, ತಿಳಿದ ಸ್ಪಷ್ಟವಾದ.

**माले** (ಮಾಲೇ) ನ. ದಂಡ ತುಂಬಲು ಕೊಟ್ಟ ಸಹಾಯ.

**मालोमाल** (ಮಾಲೋಮಾಲ್) ವಿ. ಅರ. ಇದ್ದ ಬೆಲೆ ಯಷ್ಟು.

**माल्य** (ಮಾಲ್ಯ) ನ. ಸಂ. '**माला**' ನೋ.

**माव** (ಮಾವ್) ಸ್ತ್ರೀ. ಮಾಟ, ಮಾಟಗಾರಿಕೆ, ಮಾಯ.

**मावणे** (ಮಾವಣೇ) ಕ್ರಿ. ಅ. ಹಿಡಿಸು, ತುಂಬಿಸು.

**मावदे-धे** (ಮಾವದೇ–ಧೇ) ನ. ವ್ರತ ಪರಿ ಸಮಾಪ್ತಿ.

**मावली** (ಮಾವಲೀ) ಸ್ತ್ರೀ. ತಾಯಿ, ಜನನಿ, ಮಾತೆ, ಅಮ್ಮ, ಅವ್ವ, ವೃದ್ಧ ಹೆಂಗಸರಿಗಾಗಿ ಆದರದಶಬ್ದ.

**मावशी** (ಮಾವಶೀ) ಸ್ತ್ರೀ. ಅಬಚಿ, ತಾಯಿಯ ತಂಗಿ ಇಲ್ಲವೆ ಅಕ್ಕ.

**मावसबहीण** (ಮಾವಸಬಹೀಣ್) ಸ್ತ್ರೀ. ಅಬಚಿಯ ಮಗಳು.

**मावसभाऊ** (ಮಾವಸ್‌ಭಾಊ) ಅಬಚಿಯಮಗ.

**मावसा** (ಮಾವಸಾ) ಪು. ಅಬಚಿಯ ಗಂಡ.

**मावळा** (ಮಾವಳಾ) ಪು. ತಾಯಿಯ ಅಣ್ಣ–ತಮ್ಮ, ಸೋದರಮಾವ.

**मावळण** (ಮಾವಳಣ) ಕ್ರಿ. ಅ. ತಂದೆಯ ತಂಗಿ– ಅಕ್ಕ, ಸೋದರತ್ತೆ, ಸೋದರ ಮಾವನ ಹೆಂಡತಿ.

**मावळणे** (ಮಾವಳಣೇ) ಕ್ರಿ. ಅ. (ಸೂರ್ಯ) ಮುಳುಗು, ಇಳಿ, ಅಸ್ತವಾಗು, ಕಡಿಮೆಯಾಗು.

**मावळ** (ಮಾವಳ್) ಪು. ಮುಳುಗುವಿಕೆ, ಅಸ್ತವಾಗು ವಿಕೆ. ೨. ಪಶ್ಚಿಮ, ಮಾವಳೀ ಜನರ ಪ್ರಾಂತ.

**मावळत–ती** (ಮಾವಳತ್–ತೀ) ಸ್ತ್ರೀ. ಪಶ್ಚಿಮ ದಿಕ್ಕು, ಪಶ್ಚಿಮ ದಿಕ್ಕಿಗೆ.

**मावा** (ಮಾವಾ) ಪು. ಖವೆ, ಅಟ್ಟಿಸಿದ ಹಾಲು, ಖೋವೆ.

**मावीक** (ಮಾವೀಕ್) ವಿ. '**मायीका**' ನೋ.

**मावेचा** (ಮಾವೇಚಾ) ವಿ. ಕೃತ್ರಿಮ '**मायेचा**' ನೋ. ಸುಳ್ಳು, ಅಸತ್ಯದ, ಭ್ರಾಂತಿಯ ಕಪಟದ, ವಂಚನೆಯ.

**मावेचामृग** (ಮಾವೇಚಾಮೃಗ) ಪು. ಮಾಯಾಮೃಗ, ಮಾಯೆಯ ಚಿಗರಿ, ಅಸತ್ಯ ಸಂಗತಿ, ಮೋಹದ ವಸ್ತು.

**माशी** (ಮಾಶೀ) ಸ್ತ್ರೀ. ನೊಣ, ಮಕ್ಷಿಕಾ, ಬಂದೂಕಿನ ಗುರಿ ಬಿಂದು, ಬಂದೂಕಿನ ಗುರಿಯ ತುದಿ ಬಿಂದು.

**माशामारणे–मारीत बसणे** (ಮಾಶಾಮಾರಣೇ–ಮಾರಿತ್ ಬಸಣೇ) ಕ್ರಿ. ಸ. (ಗಾದೆಯಮಾತು) ನೊಣ ಹೊಡೆಯುತ್ತ ಕೂಡ್ರು, ನಿರುದ್ಯೋಗಿಯಾಗಿರು.

**माशूक** (ಮಾಶೂಕ್) ಪು. ಅರ. ಸುಂದರ ಸ್ತ್ರೀ, ರತಿ, ಪ್ರೀತಿಪಾತ್ರ.

**माष** (ಮಾಷ) ಪು. ಸಂ. ಉದ್ದು, ರತ್ನ ಪಾರಖಿಯ ತೂಕದ ಹರಳು, ಸರಾಫರ ತೂಕದ ಹರಳು.

**मास, मांस** (ಮಾಸ್, ಮಾಂಸ) ನ. ಮಾಂಸ.

**मास** (ಮಾಸ್) ಪು. ಸಂ. ತಿಂಗಳು.

**मासकी** (ಮಾಸಕೀ) ಸ್ತ್ರೀ. ಬಂದೂಕಿನ ಗುರಿಯ ತುದಿ ಬಿಂದು.

**मासडभात** (ಮಾಸಡ್‌ಭಾತ್) ಪು. ಒಂದು ಜಾತಿಯ ಅಕ್ಕಿ.

**मासदाहक** (ಮಾಸದಾಹಕ್) ವಿ. ಸುಡುವ, ಕ್ರೂರ, ಸುಡುವ ದ್ರವ್ಯ, ಕಹಿ, ಸುಡುವ ಔಷಧ, ಸುಡುವ ದ್ರವ.

**मासबाळी** (ಮಾಸ್‌ಬಾಳೀ) ಸ್ತ್ರೀ. **मासेबाळी** ನೋ. ಮೀನದ ಆಕಾರದ ಕಿವಿ ಆಭರಣ.

**मासभरू** (ಮಾಸಭರೂ) ವಿ. ತಿರುಳುಳ್ಳ, ಕುಸುರಿಯುಳ್ಳ, ರಸವುಳ್ಳ (ಹಣ್ಣು)

**मासमच्छी** (ಮಾಸ್‌ಮಚ್ಛೀ) ಸ್ತ್ರೀ. ಮಾಂಸ, ಮೀನ, ಖಂಡ, ಮಾಂಸ.

**मासल, मांसल** (ಮಾಸಲ, ಮಂಸಲ್) ವಿ. ಸಂ. ತಿರುಳಿನ, ಪುಷ್ಟ, ಕೊಬ್ಬಿದ.

**मासला** (ಮಾಸಲಾ) ಪು. ಅರ. ನಮೂನೆ, ಮಾದರಿ, ಮಾಸಲೆ.

**मासलेदार** (ಮಾಸಲೇದಾರ್) ವಿ. ಅರ. ವಿಚಿತ್ರ.

**मसालेवाईक** (ಮಾಸಲೇ ವಾಈಕ್) ವಿ. ಉತ್ತಮ ಜಾತಿಯ, ಸುಂದರ. ೨. ವಿಚಿತ್ರ.

**मासळी** (ಮಾಸಳೀ) ಸ್ತ್ರೀ. ಮೀನ, ಸಣ್ಣ ಮೀನ.

**मासा** (ಮಾಸಾ) ಪು. ಮೀನ, ಎಂಟು ಗುಂಜಿಗಳ ತೂಕ.

**मासिक** (ಮಾಸಿಕ್) ವಿ. ಸಂ. ತಿಂಗಳಿನ, ತಿಂಗಳಿಗೊಂದು ಸಾರೆಯ, ಮಾಸಿಕಶ್ರಾದ್ಧ. ೨. ನ. ಮಾಸಪತ್ರಿಕೆ.

**मासूक** (ಮಾಸೂಕ್) ನ. ಅರ. ಬಂದೂಕಿನ ಗುರಿಬಿಂದು.

**मासेगाळणा** (ಮಾಸೇಗಾಳಣಾ) ಪು. ಜಾಳಿಗೆ, ಜಾಳಿಗೆ ನೆದ್ದು.

**मासेबाळी** (ಮಾಸೇಬಾಳೀ) ಸ್ತ್ರೀ. '**मासबाळी**' ನೋ.

**मासेवळण** (ಮಾಸೇವಳಣ) ನ. ಮೀನದ ಹೊರಳುವಿಕೆ, ಒಮ್ಮೆಲೇ ಮೀನದ ಹೊರಳುವಿಕೆ, ಸರಕ್ಕನೆ ಮೀನದ ತರದ ಹೊರಳುವಿಕೆ.

**मासोळी** (ಮಾಸೋಳೀ) ಸ್ತ್ರೀ. ಮೀನ. ೨. ಕಾಲಬೊಟ್ಟಿನ ಉಂಗುರ.

**माहाग** (ಮಾಹಾಗ್) ವಿ. ತುಟ್ಟಿ, ಅಪರೂಪ.

**महागणे** (ಮಹಾಗಣೇ) ಕ್ರಿ. ಅ. ತುಟ್ಟಿಯಾಗು, ಧಾರಣೆ ಏರು.

**माहात्म्य** (ಮಹಾತ್ಮ್ಯ) ನ. ಸಂ. ದೊಡ್ಡತನ, ದೊಡ್ಡ ವೈಭವ, ಮಹಾತ್ಮೆ.

**माहितगार** (ಮಾಹಿತಗಾರ್) ಪು. ಫಾ. ಪರಿಚಿತ, ಬಲ್ಲವ, ಮಾಹಿತಿ ಇದ್ದವ, ಗುರುತಿನ.

**माहितगारी** (ಮಾಹಿತಗಾರೀ) ಸ್ತ್ರೀ. ಪರಿಚಯ, ಗುರುತು, ಜ್ಞಾನ.

**माहित** (ಮಾಹಿತ್) ವಿ. ಗುರುತಿನ, ಪರಿಚಯದ, ಪರಿಚಿತ, ಗೊತ್ತಿದ್ದ.

**माहुरे** (ಮಾಹುರೇ) ನ. ಮಾರಾಟಕ್ಕಿಟ್ಟ ಮೀನಗಳು.

**माहुळुंग** (ಮಾಹುಳುಂಗ್) ಮಾದಳ, ಮಾತುಲುಂಗ.

**माहे** (ಮಾಹೇ) ಪು. ಫಾ. ತಿಂಗಳು, ಮಾಸ.

**माहेगुदस्त** (ಮಾಹೇಗುದಸ್ತ್) ಕ್ರಿ. ವಿ. ಫಾ. ಕಳೆದ ತಿಂಗಳು, ಹಿಂದಿನ ತಿಂಗಳು.

**माहेवार** (ಮಾಹೇವಾರ್) ವಿ. ತಿಂಗಳು ತಿಂಗಳಿಗೆ, ಪ್ರತಿತಿಂಗಳಿಗೆ, ತಿಂಗಳಾಗುತ್ತಲೆ.

**माहेर** (ಮಾಹೇರ್) } (ನ. ತಾರುಮನೆ, ತವರು
**माहेरघर** (ಮಾಹೇರಘರ್) } ಮನೆ.

**माहेरवाशीण** (ಮಾಹೇರ್‌ವಾಶೀಣ್) ಸ್ತ್ರೀ. ತವರು ಮನೆಗೆ ಬಂದವಳು.

**माहेरवास** (ಮಾಹೇರ್‌ವಾಸ್) ಪು. ತವರು ಮನೆಯಲ್ಲಿ ಇರುವಿಕೆ, ತಾರಿನವಾಸ.

**माळ** (ಮಾಳ್) ಸ್ತ್ರೀ. ಬೈಲು, ಬೈಲುಭೂಮಿ ಅಟ್ಟ ಮಾಳಿಗೆ, ಉಪ್ಪರಿಗೆ.

**माळका** (ಮಾಳಕಾ) ಸ್ತ್ರೀ. ಮಾಲಿಕಾ, ಪಂಕ್ತಿ, ಸಾಲು, ಹುರಿ, ಹಗ್ಗ, ದಾರ, ನುಲಿ, ತಂತಿ.

**माळजमीन** (ಮಾಳಜಮೀನ್) ಸ್ತ್ರೀ. ಬೈಲು ಭೂಮಿ, ಸಮಭೂಮಿ.

**माळवट** (ಮಾಳವಟ್) ವಿ. ಬೆಳೆಯದ ಭೂಮಿ, ಪಡ ಭೂಮಿ.

**माळव(वा)डा** (ಮಾಳವ(ವಾ)ಡಾ) ಪು. ತೋಟಗರ ಓಣಿ, ತೋಟಗರ ವಸ್ತಿ, ತೋಟಗರ ಬೀದಿ.

**माळवद** (ಮಾಳವದ್) ನ. ಮಣ್ಣಿನ ಅಟ್ಟ.

**माळवे** (ಮಾಳವೇ) ನ. ತೋಟದಪಲ್ಲೆ, ತೋಟದಲ್ಲಿ ಬೆಳೆದ ಪಲ್ಲೆ.

**माळशेण** (ಮಾಳಶೇಣ್) ನ. ಅಡವಿಯಲ್ಲಿ ಬಿದ್ದ ಸಗಣೆ.

**माळा** (ಮಾಳಾ) ಪು. ಅಟ್ಟ.

**माळी** (ಮಾಳೀ) ಪು. ತೋಟಗಾರ, ತೋಟ ಮಾಡುವವನು, ಹೂವಾಡಿಗ, ಹೂವಿನ ವ್ಯಾಪಾರಿ.

**माळीण** (ಮಾಳೀಣ್) ಸ್ತ್ರೀ. ತೋಟಗಾರ್ತಿ.

**माळुंग-गी** (ಮಾಳುಂಗ್-ಗೀ) ಮಾದಾಳ, ಮಾತುಲುಂಗ.

**मिचकटणे** (ಮಿಚಕಟಣೇ) ಕ್ರಿ. ಅ. ಹೊಲಸಾಗು, ಕೆಡಕಾಗು.

**मिचकणे** (ಮಿಚಕಣೇ) ಕ್ರಿ. ಸ. ಕಣ್ಣು ಬಡೆ, ಮುಚ್ಚು-ತೆರೆ, ಪಿಳುಕಿಸು.

**मिचकवणे** (ಮಿಚಕವಣೇ) } ಕ್ರಿ. ಸ. ಕಣ್ಣು ಮಿಟಕಿಸು,
**मिचकावणे** (ಮಿಚಕಾವಣೇ) } ಕಣ್ಣು ಪಿಳುಕಿಸು.

**मिचका** (ಮಿಚಕಾ) ವಿ. ಕಣ್ಣುಬಡೆಯುವ, ಕಣ್ಣು ಪಿಳುಕಿಸುವ, ಕಣ್ಣುಮಿಟುಕಿಸುವ.

**मिचमिच** (ಮಿಚಮಿಚ್) ಸ್ತ್ರೀ. ಕಣ್ಣು ಬಡೆಯುವಿಕೆ. ಪಿಳುಕಿಸುವಿಕೆ, ಮಿಟುಕಿಸುವಿಕೆ, ಬಾಯುಸಪ್ಪಳಾಗುವಿಕೆ(ಉಣ್ಣುವಾಗ)

**मिचमिचीत** (ಮಿಚಮಿಚೀತ್) ವಿ. ಮೃದು, ಮೆತ್ತಗಿನ, ಅರುಚಿಕರ, ಸಪ್ಪಗಿನ.

**मिजाज, मिजास** (ಮಿಜಾಜ್-ಮಿಜಾಸ್) ಸ್ತ್ರೀ. ಅರ. ಸೊಕ್ಕು, ಗರ್ವ. ೨. ಮಾನ. ೩. ಮರ್ಜಿ.

**मिजाज ठेवणे-राखणे** (ಮಿಜಾಜ ಠೇವಣೇ ರಾಖಣೇ) ದೊಡ್ಡತನ ತೋರಿಸು, ಜಂಬ ತೋರಿಸು.

**मिजाजखोर-मिजासखोर** (ಮಿಜಾಜ್‌ಖೋರ ಮಿಜಾಸಖೋರ್) ವಿ. ಅರ. ಸೊಕ್ಕಿನವ, ಯಾವುವುದಕ್ಕೂ ಸೇರದ, ಏನೂ ಸೇರಿಕೆಯಿಲ್ಲದ, ಆಡಂಬರವುಳ್ಳ.

**मिजाजी मिजासी** (ಮಿಜಾಜೀ ಮಿಜಾಸೀ) ವಿ. ಅ. ಸೊಕ್ಕಿನವ, ಒಣಡಾಲಿನ, **मिजासखोर** ನೋ.

**मिटका-की** (ಮಿಟಕಾ-ಕೀ) ಸ್ತ್ರೀ- ಅಂಟಿಕೊಳ್ಳುವಿಕೆ, ಅಂಟುವಿಕೆ.

**मिटका-(क्या)मारणे** (ಮಿಟಕಾ-(ಕ್ಯಾ) ಮಾರಣೇ) ಕ್ರಿ. ಸ. ರುಚಿಯಿಂದ ತಿನ್ನು.

**मिटका** (ಮಿಟಕಾ) ಪು. ಸಮೀಪ ಬರುವಿಕೆ, ದಬ್ಬಿಸುವಿಕೆ.

**मिटकावणे** (ಮಿಟಕಾವಣೇ) ಕ್ರಿ. ಸ. ಗಟ್ಟಿಯಾಗಿ ಕಣ್ಣು ಮುಚ್ಚು, ಕಿವಿ ಹಿಂಡು, ಚುಚ್ಚು, ಎಚ್ಚರಿಕೆ ಕೊಡು, ಕಿವಿಚುಚ್ಚು.

**मिटकी** (ಮಿಟಕೀ) ಸ್ತ್ರೀ **मिटका** ನೋ.

**मिटणे** (ಮಿಟಣೇ) ಕ್ರಿ. ಸ. ಮುಚ್ಚು, ತೀರು, ಮುಗಿ, ಒಪ್ಪಂದವಾಗು, ಒರಸು, ಇಳಿಸು, ಕಡಿಮೆಮಾಡು, ಅಳಿಸು.

**मिटमिटीत** (ಮಿಟಮಿಟೀತ್) ವಿ. ಅರುಚಿಕರ, ರುಚಿಹೀನ, ಸಪ್ಪಗಾದ, ಹೇಸಿಕೆಯುಂಟುಮಾಡುವ.

**मिठवणी** (ಮಿಠವಣೀ) ಸ್ತ್ರೀ. ಉಪ್ಪುನೀರು, ಕಣ್ಣೀರು.

**मिठा** (ಮಿಠಾ) ವಿ. ಸಿಹಿ.

**मिठाई** (ಮಿಠಾಈ) ಸ್ತ್ರೀ. ಮಿಠಾಯಿ, ಸಿಹಿತಿಂಡಿ.

**मिठागर** (ಮಿಠಾಗರ್) ನ. ಉಪ್ಪಿನ ಆಗರ, ಉಪ್ಪಿನ ಮಾಳ, ಉಪ್ಪಿನ ಮಡಿ.

**मिठाणे** (ಮಿಠಾಣೇ) ನ. ಉಪ್ಪಿನ ಪಾತ್ರೆ.

**मिठास** (ಮಿಠಾಸ್) ಸ್ತ್ರೀ. ಹಿಂ. ಸಿಹಿ, ಸವಿರುಚಿ, ಸಿಹಿತನ.

**मिठाबार** (ಮಿಠಾಬಾರ್) ಹಣ್ಣಿನ ಬೆಳೆ, ಸುಗ್ಗಿ.

**मिठी** (ಮಿಠೀ) ಸ್ತ್ರೀ. ಆಲಿಂಗನ.

**मिणमिण** (ಮಿಣಮಿಣ್) ಸ್ತ್ರೀ. ಮಂದ ಪ್ರಕಾಶ.

**मिणमिणणे** (ಮಿಣಮಿಣಣೇ) ಕ್ರಿ. ಅ. ಮಂದವಾಗು.

**मिणमिणा–ण्या**, **मिणमिणीत** (ಮಿಣಮಿಣಾ–ಣ್ಯಾ, ಮಿಣಮಿಣೀತ್) ವಿ. ಅಸ್ಪಷ್ಟ, ಮಂದ, ಮಂದಾಗಿ ಉರಿಯುವ, ಗುಣಗುಟ್ಟುವ.

**मित** (ಮಿತ) ವಿ. ಅಳತೆಯ, ಅಳತೆ ಮಾಡಿದ, ಗೊತ್ತು ಮಾಡಿದ, ಸಮಚಿತ್ತದ, ಸಾಧಾರಣ, ಮಟ್ಟಿನ, ಮಧ್ಯಮ, ಮಿತ.

**मितभाषी** (ಮಿತಭಾಷೀ) ವಿ. ಮಿತಭಾಷಿ, ಸಂಕ್ಷಿಪ್ತ, ಅರ್ಥಗರ್ಭಿತ ಮಾತಿನವ, ಮಿತವಾಗಿ ಮಾತಾಡುವ, ಸಮಯಾನುವರ್ತಿ ಭಾಷಣ ಮಾಡುವ.

**मिताक्षरी** (ಮಿತಾಕ್ಷರೀ) ಸ್ತ್ರೀ. ಗುಪ್ತಭಾಷಣ, ಕೃತ್ರಿಮ ಭಾಷಣ.

**मिती** (ಮಿತೀ) ಸ್ತ್ರೀ. ಸಂ. ಅಳತೆ. ೨. ಚರಣ, ಕೋಲು, ಪಾದ, ಲೆಕ್ಕ. ೩. ತಿಥಿವಾರ.

**मित्र** (ಮಿತ್ರ) ಪು. ಸಂ. ಗೆಳೆಯ, ಸ್ನೇಹಿತ. ೨. ರವಿ, ಸೂರ್ಯ.

**मित्रद्रोह** (ಮಿತ್ರದ್ರೋಹ) ಪು. ಸಂ. ಮಿತ್ರದ್ರೋಹ, ಮಿತ್ರಘಾತ, ಗೆಳೆಯನಿಗೆ ಕೇಡು ಮಾಡುವಿಕೆ, ಮಿತ್ರಮಾತ್ಸರ್ಯ, ಮಿತ್ರತಿರಸ್ಕಾರ, ಮಿತ್ರದ್ವೇಷ.

**मिथुन** (ಮಿಥುನ) ನ. ಸಂ. ಜೋಡಿ, ದಂಪತಿ, ಯುಗ್ಮ, ಜ್ಯೋತಿಷ್ಯದ ಹನ್ನೆರಡು ರಾಶಿಗಳಲ್ಲಿ ಒಂದು, ಜತೆ.

**मिथ्या** (ಮಿಥ್ಯಾ) ವಿ. ಸಂ. ಸುಳ್ಳಾದ, ತಪ್ಪಿದ, ಅಸತ್ಯ, ಡಾಂಭಿಕತನದ, ಅವಾಸ್ತವದ. ಸ್ತ್ರೀ. ಮಾಯೆ, ಅಸತ್ಯ.

**मिथ्यापवाद**, **मिथ्याभिशाप**, **मिथ्यारोप** (ಮಿಥ್ಯಾಪವಾದ, ಮಿಥ್ಯಾಭಿಶಾಪ, ಮಿಥ್ಯಾರೋಪ) ಪು. ಸಂ. ಸುಳ್ಳು ಅಪವಾದ, ಸುಳ್ಳು ಶಾಪ, ಸುಳ್ಳು ತಪ್ಪು ಹೊರಿಸುವಿಕೆ, ಅಸತ್ಯಾಪಾದನೆ.

**मिथ्यावग्रह** (ಮಿಥ್ಯಾವಗ್ರಹ) ಪು. ಸಂ. ಅಸತ್ಯ ತಿಳುವಳಿಕೆ.

**मिंधा** (ಮಿಂಧಾ) ವಿ. ಲಜ್ಜಿತ, ನಾಚಿದ, ಉಪಕೃತ.

**मिनत–ती** (ಮಿನತ್–ತೀ) ಸ್ತ್ರೀ. ಫಾ. ಕಳಕಳಿಯ ಪ್ರಾರ್ಥನೆ, ಬಿನ್ನಹ, ವಿನಂತಿ.

**मिनतमाना**, **मिनतवारी** (ಮಿನತ್‌ಮಾನಾ, ಮಿನತ್‌ವಾರೀ) ಸ್ತ್ರೀ. **मिनत** ನೋ.

**मिनहूं** (ಮಿನಹು) ಕ್ರಿ.ವಿ. ಅರ. ಅದರೊಳಗಿಂದ.

**मिना** (ಮಿನಾ) ಪು. ಫಾ. ಗಿಲಾಯಿ, ಗಿಲಾವಿಗೆ, ಮೆತ್ತಿಗೆ, ಮಿನಾಯಿ, ಹಲ್ಲಿನ ಬಿಳಿಯ ಪರೆ.

**मिरकूट** (ಮಿರಕೂಟ್) ನ. ಸೊಳ್ಳೆ, ಗುಂಗಾಡು, ಮೆಣಸಿನ ಪುಡಿ.

**मिरगी–घी** (ಮಿರಗೀ–ಘೀ) ಸ್ತ್ರೀ. ಹಿಂ. ಅಪಸ್ಮಾರ, ಮಲರೋಗ, ಪ್ರಲಾಪ ಸನ್ನಿ, ಸನ್ನಿಪಾತ, ತಲೆ ತಿರುಗುವಿಕೆ, ದಿಮ್ಮೆನ್ನುವಿಕೆ, ವಿಚಾರಗೆಡುವಿಕೆ.

**मिरगीवर येणे** (ಮಿರಗೀವರ್ ಯೇಣೇ) ಕ್ರಿ. ಅ. ವಿಕಾರವಶವಾಗು, ವಿಕಾರಗ್ರಸ್ತನಾಗು.

**मिरची** (ಮಿರಚೀ) ಸ್ತ್ರೀ. ಮೆಣಸಿನಕಾಯಿ.

**मिरपूड** (ಮಿರಪೂಡ್) ಮೆಣಸಿನ ಕಾಳಿನ ಪುಡಿ.

**मिरमिटा** (ಮಿರಮಿಟಾ) ವಿ. ಬಡೇಸೇಪಿನ ವಾಸನೆಯ.

**मिरमिर** (ಮಿರಮಿರ್) ಸ್ತ್ರೀ. ಉರಿತ, ಖಾರದಿಂದ ಬಾಯಿಯುರಿಕೆ.

**मिरमुटणे** (ಮಿರಮುಟಣೇ) ಕ್ರಿ. ಸ. ಬೆಳವಣಿಗೆ ನಿಲ್ಲಿಸು, ಮೋರೆ ತಿರುಗಿಸು, ತಿರಸ್ಕರಿಸು.

**मिरवण–णी**, **मिरवणूक** (ಮಿರವಣ–ಣೀ, ಮಿರವಣೂಕ್) ಸ್ತ್ರೀ. ಮೆರವಣಿಗೆ, ಮೆರೆಯಿಸುವಿಕೆ.

**मिरवणे** (ಮಿರವಣೇ) ಕ್ರಿ. ಅ. ಮೆರೆ, ಡಂಭ ಬಡೆ, ಡೌಲು ತೋರಿಸು, ಜಂಭ ಬಡೆ, ಬಿಗಿದುಕೊಂಡು ನಡೆ, ಸೊಗಸಾಗಿ ನಡೆ, ನಿಗರಿಕೊಂಡು ನಡೆ, ಸೆಟೆಗೊಂಡು ನಡೆ, ಸೊಗಸಾಗಿ ನಡೆ.

**मिरवेल** (ಮಿರವೇಲ್) ಸ್ತ್ರೀ. ಮೆಣಸಿನ ಬಳ್ಳಿ.

**मिरशेंग** (ಮಿರಶೇಂಗ್) ಸ್ತ್ರೀ. ಮೆಣಸಿನ ಗೊಂಚಲ.

**मिराशी–सी**, **मिरासदार** (ಮಿರಾಶೀ–ಸೀ, ಮಿರಾಸ್‌ದಾರ್) ಪು. ವತನದಾರ.

**मिरास** (ಮಿರಾಸ್) ಸ್ತ್ರೀ. ವತನ, ಹಳ್ಳಿಯ ವತನ, ವತನದಾರನ ಕಚೇರಿ.

**मिरास पट्टी** (ಮಿರಾಸ್ ಪಟ್ಟೀ) ಸ್ತ್ರೀ. ವತನದಾರನು ಕೊಡತಕ್ಕ ತ್ರೈವಾರ್ಷಿಕ ಕರ.

**मिरी–रा** (ಮಿರೀ–ರಾ) ಸ್ತ್ರೀ. ಪು. ಮೆಣಸು, ಮೆಣಸಿನ ಸೊಪ್ಪು, ಬಡಿಸೇಪು.

**मिलाफ** (ಮಿಲಾಫ್) ಪು. ಹಿಂ. ಕೂಡುವಿಕೆ, ಸಮ್ಮತಿ, ಒಪ್ಪಂದ, ಏಕಮತ್ಯ, ಐಕ್ಯ, ಏಕವಾಕ್ಯತೆ, ಮಿಲನ, ಮಧುರ ಸ್ವರ, ಒಕ್ಕಟ್ಟು, ಸಂಧಿ, ಅನ್ವಯ, ಕೂಡಲು.

**मिलाफी** (ಮಿಲಾಫೀ) ವಿ. ಹಿಂ. ಐಕ್ಯಹೊಂದುವ, ಕೂಡುವ, ಒಮ್ಮತದ, **मिलाफ** ನೋ.

**मिलिंद** (ಮಿಲಿಂದ) ಪು. ಸಂ. ದೊಡ್ಡ ಕಪ್ಪುಜೇನ್ನೊಣ.

**मिशाळ** (ಮಿಶಾಳ್) ವಿ. ಜೊಂಡು ಮೀಸೆಯ, ದಪ್ಪ ಮೀಸೆಯ, ಗೊಂಡೆ ಮೀಸೆಯ.

**मिशी** (ಮಿಶೀ) ಸ್ತ್ರೀ. ಮೀಸೆ.

**मिशावर तावदेणे** (ಮಿಶೀವರ್ ತಾವ್‌ದೇಣೆ) ಗರ್ವ ತೋರಿಸು, ಮೀಸೆಯ ಮೇಲೆ ಕೈ ಎಳೆ, ಮೀಸೆಗೆ ಹುರಿಹಾಕು, ತಿರಸ್ಕರಿಸು, ರೇಗಿಗೇಳು, ಸಿಟ್ಟಾಗು.

**मिश्र** (ಮಿಶ್ರ) ವಿ. ಸಂ. ಕೂಡಿದ, ಮಿಶ್ರಿತ, ಸಂಕಲಿತ, ಒಂದುಗೂಡಿಸಿದ, ಬೆರಿಸಿದ.

**मिश्रअपूर्णांक** (ಮಿಶ್ರಅಪೂರ್ಣಾಂಕ್) ಪು. ಸಂ. ಮಿಶ್ರ ಅಪೂರ್ಣಾಂಕ, ಅಪೂರ್ಣಾಂಕದ ಪ್ರಕಾರ, ಪೂರ್ಣಾಂಕ ಅಪೂರ್ಣಾಂಕ ಕೂಡಿದ.

**मिश्रगणित** (ಮಿಶ್ರಗಣಿತ) ಪು. ಸಂ. ಕಟ್ಟುವ ಕೆಲಸ, ಕಟ್ಟುವಿಕೆ, ಮಿಶ್ರಗಣಿತ, ಜೋಡಿಸುವಿಕೆ, (ಗಣಿತ ದಲ್ಲಿ)

**मिश्रण** (ಮಿಶ್ರಣ) ನ. ಸಂ. ಕೂಡಿಸುವಿಕೆ, ಒಂದು ಗೂಡಿಸುವಿಕೆ.

**मिश्रित** (ಮಿಶ್ರಿತ) ವಿ. ಸಂ. ಕೂಡಿದ, ಕೂಡಿಸಲ್ಪಟ್ಟ 'मिश्र' ನೋ.

**मिश्री** (ಮಿಶ್ರೀ) ಸ್ತ್ರೀ. ಅರ. ಕಲ್ಲು ಸಕ್ಕರೆ.

**मिष** (ಮಿಷ) ನ. ಸಂ. ನಟನೆ, ಕಪಟ, ಹುಸಿ, ಅಸತ್ಯ, ಜಂಭ, ಡಂಭ, ನೆವ, ಠಕ್ಕು, ಮೋಸ ಗಾರಿಕೆ.

**मिष्ट** (ಮಿಷ್ಟ) ವಿ. ಸಂ. ರುಚಿಯಾದ, ಸಿಹಿಯಾದ, ಸವಿಯಾದ.

**मिष्टान्न** (ಮಿಷ್ಟಾನ್ನ) ನ. ಸಂ. ಪಕ್ವಾನ್ನ, ಮಧು ರಾನ್ನ, ಸಿಹಿತಿಂಡಿ, ತಿನಿಸು.

**मिसकीन–ल** (ಮಿಸಕೀನ್–ಲ್) ವಿ. ಫಾ. ಮೆತ್ತಗಿನ, ಮೆತ್ತನ್ನಕಳ್ಳ, ಸೌಮ್ಯನಾಗಿ ಕಾಣಿಸುವವ. ೨. ಬೆರಕಿ, ಚತುರ.

**मिसखोर** (ಮಿಸಖೋರ್) ವಿ. **'मिसकील'** ನೋ.

**मिसमिशीत-सीत** (ಮಿಸಮಿಶೀತ್-ಸೀತ್) ವಿ. ಮೆತ್ತಗಿನ **'मिजमिजीत'** ನೋ. ಅಸ್ಪಷ್ಟ, ಮಂದ, ಭುಸಭುಸಿತ, ಪೊಳ್ಳಾದ, ನಿಶ್ಶಕ್ತ.

**मिसरी** (ಮಿಸರೀ) ಸ್ತ್ರೀ. **'मिश्री'** ನೋ.

**मिसरूड** (ಮಿಸರೂಡ್) ನ. ಎಳೆ ಮೀಸೆ.

**मिसल** (ಮಿಸಲ್) ಸ್ತ್ರೀ. ಅರ. ಪ್ರಕರಣ, ವಾದ ವಿಷಯ.

**मिसळ** (ಮಿಸಳ್) ಸ್ತ್ರೀ. ಬೆರೆಯಿಸಿದ ತಿನಿಸು.

**मिसळण** (ಮಿಸಳಣ) ನ. ಮಿಶ್ರಣ ಎಲ್ಲ ಜಾತಿಕೂಟ, ಸಂಘ **मिसळ** ನೋ.

**मिसळणे** (ಮಿಸಳಣೇ) ಕ್ರಿ.ಅ. ಕೂಡು, ಬೆರೆ, ಬೆರಿಸು, ಸೇರಿಸು, ಬೆರಿಕೆಮಾಡು, ಒಟ್ಟಾಗು.

**मिसळणी** (ಮಿಸಳಣೀ) ಸ್ತ್ರೀ. } ಬೆರೆಯಿಸಿ ಮಾಡಿದ
**मिसळवणी** (ಮಿಸಳವಣೀ) } ಸಾರು.

**मिळक(ख)त** (ಮಿಳಕ(ಖ)ತ್) ಸ್ತ್ರೀ.ಅರ. ಉತ್ಪನ್ನ, ಪ್ರಾಪ್ತಿ, ಗಳಿಕೆ, ಲಾಭ.

**मिळण–मिळणी** (ಮಿಳಣ್–ಮಿಳಣೀ) ಸ್ತ್ರೀ. ಸೇರಿಕೆ, ಏಕೀಕರಣ, ಕೂಟ, ಸಮ್ಮಿಲನ, ಸಂಧಿ, ಸಂಘ, ಒಕ್ಕಟ್ಟು.

**मिळणे** (ಮಿಳಣೇ) ಕ್ರಿ. ಸೇರು, ಕೂಡು, ಏಕೀಕೃತ ನಾಗು, ಬೆರೆ, ಸಮ್ಮಿಳಿತವಾಗು, ಒಕ್ಕಟ್ಟಾಗು, ದೊರೆ, ಪ್ರಾಪ್ತವಾಗು, ಒಪ್ಪಮಾಡು, ಒಪ್ಪು ಮಾಡು, ಒಪ್ಪು, ಸರಿಬೀಳು, ಸಿಗು.

**मिळता** (ಮಿಳತಾ) ವಿ. ದೊರೆಯತಕ್ಕ, ಸಿಗತಕ್ಕ, ಪ್ರಾಪ್ಯ.

**मिळतेघेणे** (ಮಿಳತೇಘೇಣೇ) ಕ್ರಿ. ಅ. ಹೊಂದಿಕೊಳ್ಳು, ಕೂಡಿಕೊಳ್ಳು, ಹೊಂದಿನಡೆ, ಕೂಡಿನಡೆ.

**मिळताकाळ** (ಮಿಳತಾಕಾಳ್) ಪು. ದೊರೆಯುವವೇಳೆ, ಪ್ರಾಪ್ತಿಯ ಸಮಯ, ಲಾಭದ ಕಾಲ, ವೈಭವದ, ವೇಳೆ.

**मिळमिळ** (ಮಿಳಮಿಳ್) ಸ್ತ್ರೀ. ಎಣ್ಣೆ ಬಳೆದಿರುವಿಕೆ, ಎಣ್ಣೆಯಾಗುವಿಕೆ, ತೊಳೆಯದಿರುವಿಕೆ.

**मिळमिळीत** (ಮಿಳಮಿಳೀತ್) ವಿ. ಸೌಮ್ಯ.

**मिळवणी** (ಮಿಳವಣೀ) ಸ್ತ್ರೀ. ಬೇರೀಜು, ಬೇರೀಜಿನ ಸಂಖ್ಯೆ, ಪುರವಣಿ, ಹೆಚ್ಚೋಲೆ.

**मिळवणे** (ಮಿಳವಣೇ) ಕ್ರಿ. ಅ. ಬೇರೀಜುಮಾಡು, ಕೂಡಿಸು, ಪೂರೈಸು, ಸೇರಿಸು, ಗೆಲ್ಲು, ದೊರಕಿಸು, ಹೊಂದಿಸು, ಗಳಿಸು.

**मिळवून पाहणे** (ಮಿಳವೂನ್ ಪಾಹಣೇ) ಕ್ರಿ. ಅ. ಹೊಂದಿಸಿನೋಡು, ಒರೆಹಚ್ಚಿನೋಡು, ಕೂಡಿಸಿ ನೋಡು, ಸಂಪಾದಿಸಿನೋಡು, ಈಡಾಗು, ತುಲನೆ ಮಾಡು.

**मिळून** (ಮಿಳೂನ್) ಕ್ರಿ. ವಿ. ಹೊಂದಿ, ಜೋಡಿ ಯಾಗಿ, ಸಂಘಟಿಸಿ, ಪಾಲುಗಾರನಾಗಿ, ಛಟ್ಟಾಗಿ.
**–मिसळून** (–ಮಿಸಳೂನ್) ಕ್ರಿ.ವಿ. ಒಮ್ಮತದಿಂದ.

**मी** (ಮೀ) ಸರ್ವ. ನಾನು.

**मी म्हणणे** (ಮೀ ಮ್ಹಣಣೇ) ಕ್ರಿ. ಅ. ನಾನೇಅನ್ನು, ಗರ್ವತೋರಿಸು, ತನ್ನ ಹೆಸರನ್ನು ಪ್ರಕಟಿಸು.

**मी मी म्हणणे** (ಮೀ ಮೀ ಮ್ಹಣಣೇ) ಕ್ರಿ. ಅ. ಅಹಂಕಾರ ತೋರಿಸು, ಗರ್ವತೋರಿಸು, ಅಹಂಕಾರಪಡು. **–म्हणणारे** (–ಮ್ಹಣಣಾರೇ) ಪು. ಬಹುವ. ದೊಡ್ಡವರು.

**मी–तू करणे** (ಮೀ– ತೂ ಕರಣೇ) ಕೆಲಸ ತಪ್ಪಿಸು.

**मीट** (ಮೀಟ್) ಸ್ತ್ರೀ. ಕಣ್ಣು ಮುಚ್ಚುವಿಕೆ.

**मीठ** (ಮೀಠ್) ನ. ಉಪ್ಪು, ಲವಣ ಕ್ಷಾರ, ಸೈಂದವ.

**पिठात मीठ घालणे** (ಪಿಠಾತ್ ಮೀಠ್ ಘಾಲಣೇ) ಕ್ರಿ. ಸ. ಹಿಟ್ಟಿನಲ್ಲಿ ಉಪ್ಪು ಗೂಡಿಸು, ಸ್ವಲ್ಪ ಸಹಾಯ ಮಾಡು, ಸ್ವಲ್ಪಾದರೂ ಮಹತ್ವದ ಸಹಾಯ ನೀಡು.

**मीठ तोडणे** (ಮೀಠ್ ತೋಡಣೇ) ಕ್ರಿ. ಸ. ಸಂಬಂಧ ಹರಿ, ಋಣತೀರಿಸು, ಉಪ್ಪುಬಿಡಿಸು, ಸ್ಥೂಲದೇಹ ಇಳಿಸಲು ಋತುಮತಿಯಾಗಬಾರದೆಂದು ಉಪ್ಪು ಬಿಡಿಸು.

**मीन** (ಮೀನ) ಪು. ಸಂ. ಮೀನ, ಜ್ಯೋತಿಶ್ಯಾಸ್ತ್ರದ ಹನ್ನೆರಡನೆಯ ರಾಶಿ.

**मीनकेतन** (ಮೀನಕೇತನ) ಪು. ಸಂ. ಕಾಮ, ಮೀನಧ್ವಜ, ಮೀನಪತಾಕಿ, ಮೀನದ ಗುರುತಿನ ನಿಶಾನಿಯುಳ್ಳ, ಕಂದರ್ಪ, ಕಾಮದೇವನ ಪತಾಕೆ.

**मीनाक्षी** (ಮೀನಾಕ್ಷಿ) ಸ್ತ್ರೀ. ಸುಂದರ ಸ್ತ್ರೀ, ಮೀನಿ ಕಣ್ಣುಳ್ಳವಳು.

**मीपण–पणा** (ಮೀಪಣ್–ಪಣಾ) ಪು. ನ. ನಾನೇ ಎಂಬ ಗರ್ವ, ಸೊಕ್ಕು, ನಾನೇ ಹೆಚ್ಚಿನವನೆಂಬ ಹೇಳಿಕೆ.

**मीमांसा** (ಮೀಮಾಂಸಾ) ಸ್ತ್ರೀ. ಸಂ. ಪೂರ್ವಮೀಮಾಂಸಾಶಾಸ್ತ್ರ. ೨. ಶೋಧ, ಹಿಂದೂ ತತ್ವ ಪರಿಭಾಷೆ ಭಾರತೀಯ ಧರ್ಮತತ್ವ ಅರ್ಥ ನಿರೂಪಣೆ, ಪರಿಶೋಧನೆ, ವಿಚಾರಣೆ.

**मीर** (ಮೀರ್) ಪು. ಫಾ. ಅರಸು, ದೊರೆ, ಅಮೀರ, ಸರದಾರ.

**मीलन** (ಮೀಲನ) ನ. ಸಂ. ಬೆರೆಯುವಿಕೆ, ಕೂಡುವಿಕೆ, ಬೆಟ್ಟಿಯಾಗುವಿಕೆ, ಒಂದಾಗುವಿಕೆ.

**मुकटा** (ಮುಕಟಾ) ಪು. ಮಡಿಯ ರೇಶ್ಮೆವಸ್ತ್ರ, ಮಡಿಬಟ್ಟೆ.

**मुकणे** (ಮುಕಣೇ) ಕ್ರಿ. ಅ. ಪಡೆಯದಿರು, ಕಳೆದುಕೊಳ್ಳು.

**मुकणा** (ಮುಕಣಾ) ಪು. ನೆನೆಯದ ಕಾಳು, ಗಟ್ಟಿಕಾಳು, ಮೊಂಡಕಾಳು (ವಿ) ಮೊಬ್ಬ, ಮುನಿದ.

**मुकदमां** (ಮುಕದ್ದಮಾ) ಪು. ಅರ. ಮೊಕದ್ದಮೆ, ನ್ಯಾಯ, ದಾವೆ, ಕೆಲಸ, ಕಾರ್ಯ, ಖಟ್ಲೆ.

**मुकद्दम** (ಮುಕದ್ದಮ್) ಪು. ಅರ. } ವ್ಯವಸ್ಥಾಪಕ, **मुकादम** (ಮುಕಾದಮ್ ಪು. ಅ. } ಮೇಲ್ವಿಚಾರಕ, ಊರಗೌಡ.

**मुकरर** (ಮುಕರರ) ವಿ. ಅರ. ಗೊತ್ತಾದ, ನಿಶ್ಚಿತವಾದ, ನಿರ್ಣಯಿಸಿದ, ಖಂಡಿತವಾಗಿ, ನಿಶ್ಚಿತವಾಗಿ ಕಟ್ಟಿಟ್ಟಂತೆ.

**मुका** (ಮುಕಾ) ಪು. ಚುಂಬನ,ಮುದ್ದು, ಮುತ್ತು. ೨. ವಿ. ಮೂಕ, ಮಾತಾಡಲಾರದ, ಮೌನ, ನಿಶ್ಶಬ್ದದ, ಮನ್ನು, ಊೂ, ಬಾಯಿಬಾರದ, ಸ್ತಬ್ಧ.

**मुक्याने** (ಮುಕ್ಯಾನೇ) ಕ್ರಿ. ವಿ. } ಮೂಕಭಾವದಿಂದ, **मुकाटयाने** (ಮುಕಾಟ್ಯಾನೆ) ಕ್ರಿ. ವಿ. } ಮಾತಾಡದೆ, ಹೇಳದೆ–ಕೇಳದೆ, ಶಾಂತವಾಗಿ.

**मुकाबला** (ಮುಕಾಬಲಾ) ಪು. ಅರ. ಭೆಟ್ಟಿ, ಸಂದರ್ಶನ, ದರ್ಶನ, ಎದುರು ಬದುರಾಗುವಿಕೆ, ಜಗಳ, ಹೋರಾಟ ಸಮಕ್ಷಮ ಪುರಾವೆ, ಮಾರೊಡ್ಡುವಿಕೆ, ಎದುರಿನಲ್ಲಿಯೆ ಮಾತಾಡುವಿಕೆ.

**मुकाम** (ಮುಕಾಮ್) ಪು. ಅರ. ವಸತಿ, ಬಿಡಾರ, ವಸತಿಸ್ಥಾನ, ವಿಶ್ರಾಂತಿ ಸ್ಥಳ, ಇಳಿದುಕೊಳ್ಳುವ ಸ್ಥಳ, ಮುಕ್ಕಾಮು.

**मुकामार** (ಮುಕಾಮಾರ) ಮೂಕ ಹೊಡೆತ, ಮೂಕ ಗುದ್ದು, ಮೂಕಪೆಟ್ಟು.

**मुक्कामार** (ಮುಕ್ಕಾಮಾರ್) ಪು. ಮೂಕಗಾಯ, ಬಾವು.

**मुकुट** (ಮುಕುಟ್) ಪು. ಕಿರೀಟ, ಮುಕುಟ, ತುರಾಯಿ, ಪರ್ವತ ಶಿಖರ.

**मुकुटमणी** (ಮುಕಟಮಣೀ) ಪು. ಕಿರೀಟದಲ್ಲಿಯ ರತ್ನ, ಪ್ರಮುಖ, ಸಂಘ ನಾಯಕ, ಪ್ರಧಾನ ಶ್ರೇಷ್ಠ.

**मुकुल** (ಮುಕುಲ) ಪು. ಅಂಕುರ, ಮೊಗ್ಗು, ಮೊಗ್ಗೆ, ಚಿಗುರು.

**मुकुलित** (ಮುಕುಲಿತ) ವಿ. ಅರಳಿದ, ವಿಕಸಿತ, ಸಂಕುಚಿತ, ಮುದುಡಿಕೊಂಡ, ಮುದುಡಿದ, ಕಡಿಮೆಯಾದ, ಅರ್ಧೋನ್ಮೀಲಿತ, ಅರ್ಧತೆರೆದ.

**मुक्कर** (ಮುಕ್ಕರ್) ಕ್ರಿ. ವಿ. ಅರ. ಖಂಡಿತವಾಗಿ, ನಿಶ್ಚಿತವಾಗಿ, ನಿಸ್ಸಂದೇಹವಾಗಿ.

**मुक्त** (ಮುಕ್ತ) ವಿ. ಸ್ವತಂತ್ರವಾದ, ಮುಕ್ತಿಹೊಂದಿದ, ಬಿಡುಗಡೆಯಾದ, ವಿಮೋಚಿತ.

**मुक्तद्वार** (ಮುಕ್ತದ್ವಾರ) ನ. ಸಂ. ತೆರೆದ ಬಾಗಿಲು, ನಿರಾತಂಕ ಪ್ರವೇಶ, ಮುಕ್ತ ಮಾರ್ಗ.

**मुक्ता** (ಮುಕ್ತಾ) ಸ್ತ್ರೀ. ಸಂ. ಮುತ್ತು.

**मुक्ताजाल** (ಮುಕ್ತಾಜಾಲ್) ನ. ಸಂ. ಮುತ್ತಿನ ಶಿರಾಭರಣ, ಮುತ್ತಿನ ಗೊಂಚಲು.

**मुक्ताफल** (ಮುಕ್ತಾಫಲ) ನ. ಸಂ. ಮುತ್ತು. (ವ್ಯಂಗ) ಹುಚ್ಚುಮಾತು.

**–उधळणे** (–ಉಧಳಣೇ) ಹುಚ್ಚುಹುಚ್ಚು ಮಾತನಾಡು.

**मुक्ति** (ಮುಕ್ತಿ) ಸ್ತ್ರೀ. ಸಂ. ಮುಕ್ತಿ, ಮೋಕ್ಷ, ಸಮಾಪ್ತಿ, ಬಿಡುಗಡೆ, ವಿಮೋಚನೆ.

**मुक्तिमार्ग** (ಮುಕ್ತಿಮಾರ್ಗ) ಪು. ಬಿಡುಗಡೆಯ, ಮುಕ್ತಿಸಾಧನೆ, ಮೋಕ್ಷ ಸಾಧನೆ, ಮುಕ್ತಿಯ ದಾರಿ.

**मुखत्यार** (ಮುಖತ್ಯಾರ್) ವಿ. ಅರ. ಪೂರ್ಣ ಸ್ವತಂತ್ರ, ಪೂರ್ಣಾಧಿಕಾರವುಳ್ಳ.

**मुखत्यारी** (ಮುಖತ್ಯಾರೀ) ಸ್ತ್ರೀ. ಪ್ರಾತಿನಿಧ್ಯ, ಪ್ರತಿನಿಧಿತ್ವ, ಸ್ವತಂತ್ರತೆ, ಸ್ವಾತಂತ್ರ್ಯ, ಪೂರ್ಣ ಸ್ವತಂತ್ರತೆ, ಪೂರ್ಣಾಧಿಕಾರ.

**मुखत्यारपत्र** (ಮುಖತ್ಯಾರ್‌ಪತ್ರ) ನ.)
**मुखत्यार नामा** (ಮುಖತ್ಯಾರ್‌ನಾಮಾ) ಪು. ಅರ.+ಫಾ.) ಪ್ರಾತಿನಿಧ್ಯ ಪತ್ರ, ಅಧಿಕಾರ ಪತ್ರ, ವಕೀಲ ಪತ್ರ, ಮುಖತ್ಯಾರಪತ್ರ, ಪೂರ್ಣಾಧಿಕಾರ ಪತ್ರ.

**मुख** (ಮುಖ) ನ. ಸಂ. ಮುಖ, ಮೋರೆ, ಮೊಗ, ಬಾಯಿ, ಚರ್ಯೆ, ಸಾಧನ.

**मुखकमल** (ಮುಖಕಮಲ) ನ. ಸಂ. ಮುಖಕಮಲ, ಸುಂದರ ಮುಖ, ಮೊಗದಾವರೆ.

**मुखचंद्र** (ಮುಖಚಂದ್ರ) ಪು. ಮುಖಚಂದ್ರ, ಸುಂದರ ಮುಖ, ಚಂದ್ರನಂತಿರುವ ಮುಖ.

**मुखचर्या** (ಮುಖಚರ್ಯಾ) ಸ್ತ್ರೀ. ಸಂ. ಮುಖ ಸೌಂದರ್ಯ, ಮೋರೆಯ ತೇಜಸ್ಸು, ಮುಖಕಾಂತಿ.

**मुखडा** (ಮುಖಡಾ) ಪು. ಮುಖ, ಮೋಗ, ಮೋರೆ.

**मुखदुर्बळ** (ಮುಖದುರ್ಬಳ) ವಿ. ದುರ್ಮುಖನಾದ, ಮಾತನಾಡಲಾರದ, ಮುಗ್ಧ, ಮೂಕ, ಮಾತಾಡದ ಸಭಾಭಯವುಳ್ಳ, ಸಭಾಕಂಪನವುಳ್ಳ.

**मुखपाठ** (ಮುಖಪಾಠ್) ವಿ. ಬಾಯಿಪಾಠ, ಕಂಠ ಪಾಠ.

**मुखमार्जन** (ಮುಖಮಾರ್ಜನ್) ನ. ಸಂ. ಮೋರೆ ತೊಳೆಯುವಿಕೆ.

**मुखर** (ಮುಖರ್) ವಿ. ಸಂ. ವಾಚಾಳ, ಮಾತಾಳಿ, ಮಾತಿನ, ಧ್ವನಿಯುಳ್ಳ, ನಾದವುಳ್ಳ ಮಧುರ ಧ್ವನಿಯ, ಮಂಜುಲ ಸ್ವರದ.

**मुखरण** (ಮುಖರಣ) ವಿ. ಶ್ರೇಷ್ಠ, ಪ್ರಮುಖ.

**मुखरस** (ಮುಖರಸ್) ಪು. ಲಾಲಾರಸ, ಜೊಲ್ಲು, ಕೆಟ್ಟ ಭಾಷಣ.

**मुखशुद्धि** (ಮುಖಶುದ್ಧಿ) ಸ್ತ್ರೀ. ಬಾಯಿಸ್ವಚ್ಛತೆ, ಬಾಯಿತೊಳೆಯುವಿಕೆ, ವೀಳ್ಯಹಾಕುವಿಕೆ, ಅಡಿಕೆ ಹಾಕುವಿಕೆ, ಮುಖಶುದ್ಧಿ, ಭೋಜನಾನಂತರ ಬಾಯಿ ಅಡಿಸುವಿಕೆ.

**मुखस्तंब** (ಮುಖಸ್ತಂಭ) ವಿ. ಮಾತಾಡದವ.

**मुखा** (ಮುಖಾ) ಪು. ಸುತ್ತಿಗೆಯ ತುದಿ, ಕೈಸುತ್ತಿಗೆ.

**मुखी** (ಮುಖೀ) ಸ್ತ್ರೀ. ಸಣ್ಣತೂತು, ಸಣ್ಣಛಿದ್ರ, ಪಾತ್ರೆಯ ತೂತು.

**मुखी** (ಮುಖೀ) ಸ್ತ್ರೀ. ಬಾಯಿಪಾಠವಾಗಿ '**मुखपाठ**' ನೋ. ನಾಲಿಗೆಯ ತುದಿಯ ಮೇಲೆ.

**मुखोटा** (ಮುಖೋಟಾ) ಪು. ಮುಖದ ಚಿತ್ರ, ಸೋಗು ಹಾಕುವ ಚಿತ್ರ.

**मुख्य** (ಮುಖ್ಯ) ವಿ. ಸಂ. ಪ್ರಧಾನ, ಮುಖ್ಯವಾದ, ಹಿರಿಯ, ಮುಂದಾಳು.

**मुख्यमंत्री** (ಮುಖ್ಯಮಂತ್ರೀ) ಪು. ರಾಜ್ಯದ ಮುಖ್ಯ ಮಂತ್ರಿ.

**मुगटा** (ಮುಗಟಾ) ಪು. ಮೊಗ, ಮುಖ, ಮೋರೆ.

**मुगडा** (ಮುಗಡಾ) ಪು. ಮೊಗ, ಮೋರೆ, ಚಂಡಿಕೆ, ಜುಟ್ಟು, ಶಿಖೆ, ತುರಾಯಿ, ಗೊಂಡೆ.

**मुगडी** (ಮುಗಡೀ) ಸ್ತ್ರೀ. ಕ. ಹೆಂಗಸರ ಕರ್ಣಾಭರಣ, ಬುಗುಡಿ.

**मुगदळ** (ಮುಗದಳ್) ಕ್ರಿ. ಹೆಸರು ಬಿತ್ತುವ ಭೂಮಿ. ೨. ಹುರಿದ ಹೆಸರಿನ ಹಿಟ್ಟು.

**मुंगळा** (ಮುಂಗಳಾ) ಪು. }
**मुगंळी** (ಮುಂಗಳೀ) ಸ್ತ್ರೀ } ಇರಿವೆ, ಕರೆ ಇರಿವೆ, ಕೆಂಪು ಇರಿವೆ.

**मुंगा** (ಮುಂಗಾ) ಪು. ಕುದುರೆಯ ಒಂದು ಪ್ರಕಾರದ ರೋಗ, ದೊಡ್ಡ ಕರಿ ಇರುವೆ, ಹವಳ, ಪ್ರವಾಳ, ಅಹಂಕಾರವರ್ತನೆ, ಗರ್ವ, ಇರುವೆ, ಇರಿವೆ, ಇರುಬೆ, ಕೈ ಕಾಲಿಗೆ ಬರುವ ಇರುಬೆ.

**मुगूट** (ಮುಗೂಟ್) ಪು. '**मुकुट**' ನೋ.

**मुगुटमणि** (ಮುಗುಟ್‌ಮಣೀ) ಪು. '**मुकुटमणि**' ನೋ.

**मुंगुस** (ಮುಂಗುಸ್) ಪು. ಮುಂಗುಲಿ.

**मुग्ध** (ಮುಗ್ಧ) ಮೂಕ, ಸ್ತಬ್ಧ, ಹುಚ್ಚ, ಮಾತನಾಡದ, ಮಂಕು, ಥಡ್ಡ, ಮಂದಮತಿಯಾದ, ಅಸ್ಪಷ್ಟ.

**मुग्धा** (ಮುಗ್ಧಾ) ಸ್ತ್ರೀ. ಮೂಕೆ, ಸುಂದರ ಸ್ತ್ರೀ, ಆಕಾಂಕ್ಷೆಯುಳ್ಳ, ಅಸ್ಪಷ್ಟ.

**मुचलका** (ಮುಚಲಕಾ) ಪು. ತರ್ಕಿ, ಹೊಣೆಗಾರ ಪತ್ರ, ಜಾಮೀನು, ಮುಚ್ಚಳಿಕೆ.

**मुंज** (ಮುಂಜ) ಸ್ತ್ರೀ. ವ್ರತಬಂಧ, ಮೌಂಜೀಬಂಧನ, ಉಪನಯನ.

**मुजरा** (ಮುಜರಾ) ಪು. ಅರ. ಸಲಾಮು. ೨. ನೃತ್ಯಾಂಗನೆಯ ಅಭಿವಾದನ.

**मुजरादेणे** (ಮುಜರಾದೇಣೇ) ಕ್ರಿ. ಸ. ನಮಸ್ಕಾರ ಮಾಡು, ಒಪ್ಪು.

**मुजाईम** (ಮುಜಾಇಮ್) ವಿ. ಅರ. ವಿರೋಧಿಸುವ, ಆತಂಕಿಸುವ, ಅಡ್ಡಿಮಾಡುವ.

**मुजाफत खर्च** (ಮುಜಾಫತ್ ಖರ್ಚ್) ಪು. ಅರ. ಇನಾಮು ವಿಷಯಕ್ಕಾದ ಸರಕಾರ ಖರ್ಚು, ಬಕ್ಷೀಸ ವೆಚ್ಚ.

**मुजावर** (ಮುಜಾವರ್) ಪು. ಮಸೀದೆಯನ್ನು ಗೂಡಿಸುವವ, ಮಸೀದೆಯ ಸೇವಕ, ಮುಜಾವರ, ಮಸೀದೆಯ ವತನದಾರನೌಕರ.

**मुंजी–ज** (ಮುಂಜೀ–ಜ) ಸ್ತ್ರೀ. } 'मुंज' ನೋ.
**मुंजीबंधन** (ಮುಂಜೀ ಬಂಧನ) ನ. }

**मुंज्या** (ಮುಂಜ್ಯಾ) ಪು. ವ್ರತಬಂಧನವಾಗತಕ್ಕ ಹುಡುಗ, ಮುಂಜಿವೆ ಆಗತಕ್ಕಬಾಲಕ, ಬೇತಾಳ, ಭೂತ, ದೆವ್ವ, ಪಿಶಾಚಿ.

**मुटकणे** (ಮುಟಕಣೇ) ಕ್ರಿ. ಅ. ಗುದ್ದು, ಹೊಡೆ, ಬಡೆ, ಸಣ್ಣಾಗಿ ಗುದ್ದು.

**मुटका** (ಮುಟಕಾ) ಪು. ಗುದ್ದು, ಗುದ್ದುವಿಕೆ,ಹೊಡೆತ.

**मुटकावणे** (ಮುಟಕಾವಣೇ) ಗುದ್ದಿಸು, ಹೊಡೆಯಿಸು, ಹಿಸುಕು, ಒತ್ತು, ಮರ್ದಿಸು, ಕೂದಲ ತೊಳೆ.

**मुठाळा** (ಮುಠಾಳಾ) ವಿ. ದುಂಡುತುದಿಯ. ೨. ಕ. ಮುಠ್ಠಾಳ, ಹುಂಬ.

**मुठाळे** (ಮುಠಾಳೇ) ವಿ. } ದುಂಡು ಬಾಳೆಯಹಣ್ಣು.
**मुठेळी** (ಮುಠೇಳೀ) ವಿ. }

**मुंडन** (ಮುಂಡನ) ನ. ಮುಂಡನ,ಕ್ಷೌರ,ಬೋಳಿಸು.

**मुंडकी–के** (ಮುಂಡಕೀ) ನ. ಬಹುವ. (ಮುಂಡಕೇ) ನ. ತಲೆ, ರುಂಡ.

**मुंडण** (ಮುಂಡಣ) ನ. ಸಂ. ಬೋಳಿಸುವಿಕೆ, ಹಜಾಮತಿ, ಕ್ಷೌರ, ಬೈಗಳು, ಕಷ್ಟ.

**मुंडणे** (ಮುಂಡಣೆ) ಕ್ರಿ. ವಿ. ಬೋಳಿಸು, ಹಜಾಮತಿ ಮತಿ ಮಾಡು, ಬೈಯ್ಯು, ಕ್ಷೌರ ಮಾಡು, ಕಷ್ಟ ಮಾಡು.

**मुंडती** (ಮುಂಡಂತೀ) ಸ್ತ್ರೀ. ಬೈಗಳು, ಬೋಳಿಸುವಿಕೆ, ಹೀಯಾಳಿಸುವಿಕೆ, ಕಿವಿಹಿಂಡುವಿಕೆ.

**मुडदा** (ಮುಡದಾ) ಪು. ಹೆಣ, ಮುಂಡ, ಶವ.

**मुडदार** (ಮುಡದಾರ್) ಪು. ಸತ್ತಮೃಗ, ಸತ್ತ ಮೃಗದ ಮಾಂಸ, ಹೊಲಸು, ಸತ್ತಂಥ.

**मुडदारशिंग** (ಮುಡದಾರ್‌ಶಿಂಗ್) ಸ್ತ್ರೀ. ಮುಡದಾರ ಸಿಂಗಿ, ಒಂದು ವನಸ್ಪತಿ, ಔಷಧಿ.

**मुरदेफरास** (ಮುಡದೇಫರಾಸ್) ಪು. ಫಾ. ಶವದ ಕಟ್ಟಿಗೆಯ ವ್ಯಾಪಾರಿ.

**मुंडनपर्वणी** (ಮುಂಡನಪರ್ವಣೀ) ಸ್ತ್ರೀ. ತಲೆಬೋಳಿಸುವ ಸಮಯ, ದಿನ, ಹಂಗಾಮು, ಸವಡಿದ್ದ ದಿನ.

**मुंडप** (ಮುಂಡಪ) ಪು. ಪಾಗೋಟೆ, ಮುಂಡಾಸ, ಪಾಗುಟೆ.

**मुंडबंदी** (ಮುಂಡಬಂದೀ) ಸ್ತ್ರೀ. } मुडन ನೋ.
**मुडवण** (ಮುಂಡವಣ) ಸ್ತ್ರೀ. }

**मुडा** (ಮುಡಾ) ಪು. ಬೀಜದಕಟ್ಟು.

**मुडाघालणे** (ಮುಡಾಘಾಲಣೇ) ಮೊಂಡೆಯೂರಿ ಕೂಡು.

**मुंडा** (ಮುಂಡಾ) ಪು. ನೀರಿನ ದೊಡ್ಡ ಹೂಜೆ, ಬಿಂದಿಗೆ, ಗಡಿಗೆ.

**मुडाचेशेत** (ಮುಂಡಾಚೇಶೇತ್) ನ. ಬೆಳೆಸಹಿತ ಮಾರಿದ ಭೂಮಿ.

**मुंडारणे** (ಮುಂಡಾರಣೇ) ಕ್ರಿ. ಅ. ತಿರುಗಿಬರು, ಹಿಂದೆಬರು.

**मुडावळ–ळी** (ಮುಂಡಾವಳ–ಳೀ) ಸ್ತ್ರೀ. ಬಾಶಿಂಗ.

**मुडावणे** (ಮುಡಾವಣೇ) ಕ್ರಿ. ಸ. ಬೋಳಿಸು.

**मुंडास–से** (ಮುಂಡಾಸ–ಸೇ) ನ. ಮುಂಡಾಸ.

**मुंडित** (ಮುಂಡಿತ) ಬೋಳಿಸಿದ, ಹಜಾಮತಿ ಮಾಡಿದ. ಕಿತ್ತಿತೆಗೆದ, ಅಗಲಿಸಿದ.

**मुंडी** (ಮುಂಡೀ) ಸ್ತ್ರೀ मुंड ನೋ.

**मंढा** (ಮುಂಢಾ) ವಿ. ಮುಂಡರಹಿತ, ತಲೆಯಿಲ್ಲದ ಹೆಗಲು.

**मुढा माकोजी** (ಮುಢಾ ಮಾಕೋಜೀ) ಪು. ಡೌಲು ಮಾಡುವವನು, ಅಧಿಕಾರ ತೋರಿಸುವವನು, ಮೋಸಗಾರನು.

**मुंढी** (ಮುಂಡೀ) ಸ್ತ್ರೀ. ತಲೆ, ಶಿರ.

**मुंडीमुरगळणे** (ಮುಂಡೀ ಮುರಗಳಣೇ) ಬದಕುವ ಸಾಧನ ನಷ್ಟಮಾಡು, ಕುತ್ತಿಗೆಯನ್ನು ತಿರುವು, ಬೆನ್ನುಮುರಿ.

**मुतणे** (ಮುತಣೇ) ಉಚ್ಚೆಹೊಯ್ಯು, ಮೂತ್ರವಿಸರ್ಜನ ಮಾಡು.

**मुदपाक** (ಮುದಪಾಕ್)
**मुदपाक खाना** (ಮುತಪಾಕ್‌ಖಾನಾ) ಪು.
**मुतबक** (ಮುತಬಕ್)
**मुदबकखाना** (ಮುದಬಕ್‌ಖಾನಾ)
ಅಡಿಗೆ ಮನೆ, ಅರಸರ ಭೋಜನಶಾಲೆ.

**मुत(ता)री** (ಮುತ(ತಾ)ರೀ) ಸ್ತ್ರೀ. ಮೂತ್ರಸ್ಥಾನ, ಮೂತ್ರಕೂಪ, ಕಾಲ್ಮಡಿ ಮರೆ, ಕಾಲ್ಮಡಿ ಮನೆ.

**मुत्सदी–मुतसद्दी** (ಮುತ್ಸದ್ದೀ–ಮುತ್‌ಸದ್ದೀ) ಪು. ಅರ. ರಾಜಕಾರಣಿ ಮನುಷ್ಯ, ರಾಜಕಾರಣ ಪ್ರವೀಣ–ಧುರಂಧರ, ರಾಜನೀತಿ ಕುಶಲ.

**मुताटणे** (ಮುತಾಟಣೇ) ಕ್ರಿ. ಮೂತ್ರಬಂದಾಗು, ಮೂತ್ರಕಟ್ಟು.

**मुतालीक** (ಮುತಾಲೀಕ್) ಪು. ಅರ. ಸರಕಾರಿ ಅಧಿಕಾರಿ, ಲೋಕಾಧಿಕಾರಿ.

**मुदगल** (ಮುದಗಲ್) ಪು. ಸಂ. ಗದೆ ಲೋಡು,

**मुंदणे** (ಮುಂದಣೇ) ಕ್ರಿ. ಸ. ತುಂಬು, ಅಡ್ಡಗಟ್ಟು.

**मुदत–मुद्दत** (ಮುದತ್–ಮುದ್ದತ್) ಸ್ತ್ರೀ. ಅವಧಿ, ಕಾಲ, ಸಮಯ, ವೇಳೆ, ಕಾಲಾವಧಿ ಹೆಚ್ಚುವೇಳೆ, ವಾಯದೆ.

**मुदल–मुद्दल** (ಮುದಲ್–ಮುದ್ದಲ್) ನ. ಕ. ಮುದ್ದಲು, ಅಸಲು ರಕಮು, ಸಾಲ ಕೊಟ್ಟ ರಕಮು.

**मुदली** (ಮುದಲೀ) ಕ್ರಿ. ವಿ. ಮೊದಲಿಗೆ, ಪ್ರಾರಂಭಕ್ಕೆ, ಮೊದಲಿಗೆ, ಸ್ವಲ್ಪಾದರೂ.

**मुदलावरयेणे** (ಮುದಲಾವರ್ ಯೇಣೇ) ಕ್ರಿ. ಅ. ಮೊದಲಿನ ಸ್ಥಿತಿಗೆ ಬರು, ಸ್ವಂತ ಸ್ವಭಾವ ತೋರಿಸು, ವ್ಯಕ್ತಪಡಿಸು.

**मुदलात मुरकुंडी** (ಮುದಲಾತ್ ಮುರಕುಂಡೀ) ಸ್ತ್ರೀ

**मुदालामुदल–ली** (ಮುದಲಾಮುದಲ–ಲೀ) ಸ್ತ್ರೀ. ಲಾಭ ಬಡ್ಡಿ ತಕ್ಕೊಳ್ಳದೆ, ಕೊಟ್ಟ ಗಂಟಿಗೆ ತೀರಿಸು, ವಿಕೆ.

**मुदाळे** (ಮುದಾಳೇ) ನ. ಸವಟು, ಸವುಟು, ಸೌಟು ಸಟುಕ, ಅನ್ನದ ಮುದ್ದಿಪಾತ್ರೆ.

**मुदित** (ಮುದಿತ) ವಿ. ಸಂ. ಆನಂದಿತ, ಸುಖಿ, ಆನಂದಬಟ್ಟ, ಸಂತುಷ್ಟ.

**मुदी** (ಮುದೀ) ಉಂಗುರ.

**मुद्दा** (ಮುದ್ದಾ) ಪು. ಅರ. ವಿಷಯ, ಹೇಳಬೇಕಾದ ಸಂಗತಿ, ತಾತ್ಪರ್ಯ ಮುಖ್ಯಮಾತು, ಪ್ರಮಾಣ, ಪುರಾವೆ, ಸುಳಿವು.

**मुद्दाम** (ಮುದ್ದಾಮ್) ಕ್ರಿ. ವಿ. ಅರ. (ಮದಮ್) ಬೇಕೆಂತಲೆ, ಉದ್ದೇಶ ಪೂರ್ವಕವಾಗಿ, ಹೇತುವಿನಿಂದ.

**मुद्रा** (ಮುದ್ರಾ) ಸ್ತ್ರೀ. ಸಂ. ನಾಣ್ಯ ಚರ್ಯೆ, ಮುದ್ರೆಯ ಉಂಗುರ ಮೊಹರು.

**मुद्राउतरणे** (ಮುದ್ರಾಉತರಣೇ) ಕ್ರಿ. ಮುಖಇಳಿ, ಮೊಖಚರ್ಯೆ.

**मुद्रादेणे** (ಮುದ್ರಾದೇಣೇ) ಕ್ರಿ.
**मुद्रामारणे** (ಮುದ್ರಾಮಾರಣೇ) ಕ್ರಿ.
ಮುದ್ರೆಯೊತ್ತು ಮುದ್ರೆಕೊಡು, ದೀಕ್ಷೆಕೊಡು. (ವೈಷ್ಣವಸ್ವಾಮಿಗಳು) ತಪ್ತಮುದ್ರೆ ನೀಡು–ಕೊಡು ಒತ್ತು.

**मुद्रांकित** (ಮುದ್ರಾಂಕಿತ) ವಿ. ಸಂ. ಮುದ್ರೆಧರಿಸಿದ, ದೀಕ್ಷಾಬದ್ಧ, ಮುದ್ರೆಯುಳ್ಳ.

**मुद्राधारी** (ಮುದ್ರಾಧಾರೀ) ವಿ. ಸಂ. ವೈಷ್ಣವಸ್ವಾಮಿಗಳಿಂದ ತಪ್ತ ಮುದ್ರೆ ಪಡೆದ.

**मुद्रालेख** (ಮುದ್ರಾಲೇಖ) ಪು. ಸಂ. ಉಂಗುರದ ಮೇಲಿನ ವಾಕ್ಯ, ಬರೆಹ.

**मुद्राहीन** (ಮುದ್ರಾಹೀನ್) ವಿ. ಸಂ. ಕುರೂಪಿ, ಅಸಡ್ಡಾಳ, ಮುಖಹೀನ, ಅನನುಗ್ರಹೀತ.

**मुद्रिका** (ಮುದ್ರಿಕಾ) ಸ್ತ್ರೀ. ಸಂ. ಗುರುತಿನ ಉಂಗುರ.

**मुंध** (ಮುಂಧ್) ನ.
**मुंधा मुंधारा** (ಮುಂಧಾರಾ) ಪು.
ಗಿಡದ ಬೊಡ್ಡೆ, ಕಾಂಡ, ಬುಡ, ತಳ, ಅಸ್ತಿವಾರ, ಆಧಾರ.

**मुंधणे** (ಮುಂಧಣೇ) ಕ್ರಿ. ಸ.
**मुंधवणे** ಮುಂಧವಣೇ)
**मुंधावणे** (ಮುಂಧಾವಣೇ) ಕ್ರಿ. ಸ.
ತುಂಬು, ಬಂದು ಮಾಡು, ಮುಗಿಸು.

**मुनवा** (ಮುನವಾ) ಪು. ಬಾಳೆಯ ಮರಿ.

**मुनशी** (ಮುನಶೀ) ಪು. ಚಿಟಣೀಸ, ಶಿಕ್ಷಕ, ಪಾರಸೀ ಭಾಷೆಯ ಶಿಕ್ಷಕ.

**मुनसफ–सीफ** (ಮುನಸಫ–ಸೀಫ) ಪು. ಅರ.
**मुनसुफ–सूब** (ಮುನಸೂಫ್–ಸೊಬ್) ಅರ.
ದಿವಾಣಿ ನ್ಯಾಯಾಧೀಶ, ಮುನ್ಸುಫ.

**मुनि** (ಮುನಿ) ಪು. ಮೌನಿ, ತಪಸ್ವಿ ವಿರಕ್ತ, ವಿರಾಗಿ.

**मुनीम** (ಮುನೀಮ್) ಪು. ಅರ, (ಮುನೀಬ್) ವ್ಯವಸ್ಥಾಪಕ, ಗುಮಾಸ್ತ, ಕಾರಭಾರಿ, ಮುತಾಲಿಕ.

**मुफत** (ಮುಫತ್) ಕ್ರಿ. ವಿ. ಅರ. ಪುಕ್ಕಟೆಯಾಗಿ, ಪುಕಸಾಟೆ, ಪುಕ್ಸಟ್ಟೆ.

**मुबलक–ग (ख)** (ಮುಬಲಕ–ಗ (ಖ) ವಿ. ಅರ. ಧಾರಾಳವಾದ, ಬಹಳ, ಹೇರಳ, ವಿಪುಲಿ, ಸಮೃದ್ಧ.

**मुभा** (ಮುಭಾ) ಸ್ತ್ರೀ. ಅರ. (ಮುಬಾಹ) ಸಂಪೂರ್ಣ ಪರವಾನಗಿ, ಪೂರ್ಣ ಅನುಜ್ಞೆ, ಎಲ್ಲ ಸೂಟು.

**मुमुक्षा** (ಮುಮುಕ್ಷಾ) ಸ್ತ್ರೀ. ಜನ್ಮ ಮರಣಗಳಿಂದ ಮುಕ್ತಿ.

**मुमुक्षु** (ಮುಮುಕ್ಷು) ಪು. ಸಂ. ಮೋಕ್ಷದ ಇಚ್ಛೆ ಮಾಡುವವನು, ಮೋಕ್ಷಾಕಾಂಕ್ಷಿ.

**मुमूर्षा** (ಮುಮೂರ್ಷಾ) ಸ್ತ್ರೀ. ಸಂ. ಮರಣದ ಅಪೇಕ್ಷೆ.

**मुरकणे** (ಮುರಕಣೇ) ಕ್ರಿ. ಅ. ಸುಳ್ಳು, ಲಜ್ಜೆ ನಾಚಿಕೆ ತೋರಿಸು, ನಖರೆಮಾಡು, ಬಿಂಕಮಾಡು.

**मुरका** (ಮುರಕಾ) ಪು. ಸುಳ್ಳು ವಿನಯ, ಲಜ್ಜೆ.

**मुरकुंडी** (ಮುರಕುಂಡೀ) ಸ್ತ್ರೀ. ವೈಮಣಿತ.
**–वळणे** (–ವಳಣೇ) ಕ್ರಿ. ಅ. (ಬಿದ್ದುಬಿದ್ದು) ನಗು.

**मुरकूट** (ಮುರಕೂಟ್) ನ. ಗುಂಗಾಡು, ಸೊಳ್ಳೆ.

**मुरग(गा)ळणे** (ಮುರಗ(ಗಾ)ಳಣೇ) ಕ್ರಿ.ಸ. ತಿರುವು.

**मुरगाळा** (ಮುರಗಾಳಾ) ಪು. ತಿರುವುವಿಕೆ. ೨. ಅಶಕ್ತತೆ.

**मुरटणे** (ಮುರಟಣೇ) ಕ್ರಿ. ಮುರಿತಿರುವು, ಒಡಮುರಿ, ಬಾಧಿಸು, ಕಾಡು, ನುಲುಬಿ, ಜಗ್ಗು, ಕಿತ್ತಿಕೊಳ್ಳು, ೨. ಮಾತಿನ ಅರ್ಥ ಬದಲಾಯಿಸು.

**मुरटा** (ಮುರಟಾ) ಪು. ಗೋಡಂಬೆ, ಕಾಜೂ.

**मुरडणे** (ಮುರಡಣೇ) ಕ್ರಿ. ಸ. ತಿರುವು, ಹೊರಳಿಸು, ಅಂಚುತಿರುವು, ಬಾಗಿಸು, ಬಗ್ಗಿಸು, ಬಾಗು.

**मुरड** (ಮುರಡ್) ಸ್ತ್ರೀ. ಹೊರಳಿಸುವಿಕೆ, ತಿರುವುವಿಕೆ, ಬಾಗಿಸುವಿಕೆ. ಮಾದರಿ, ಆಕೃತಿ.

**मुरडणी** (ಮುರಡಣೀ) ಸ್ತ್ರೀ. ಬಾಗುವಿಕೆ, ತಿರುವುವಿಕೆ, ಹೊರಳಿಸುವಿಕೆ.

**मुरडा** (ಮುರಡಾ) ಪು. ಹೊಟ್ಟೆಯಲ್ಲಿಯ ನೋವು, ಆಮಶೌಚದ ಪೀಡೆ.

**मुरणे** (ಮುರಣೇ) ಕ್ರಿ.ಅ. ನೆನೆ, ಇಂಗು, ಹಣ್ಣಾಗು.

**मुरदाडणे** (ಮುರದಾಡಣೇ) ಕ್ರಿ. ಪೀಡಿಸು.

**मुरब्बा, मुरं(रा)बा** (ಮುರಬ್ಬಾ ಮುರಂ(ರಾಂ)ಬಾ) ಪು. ಅರ. ಮುರಬ್ಬ, ಸಕ್ಕರೆಯಲ್ಲಿಟ್ಟ ಹಣ್ಣು.

**मुरब्बी** (ಮುರಬ್ಬೀ) ಪು.ಅರ.ಮಾರ್ಗದರ್ಶಕ, ಗುರು, ಅನುಭವಿ.

**मुरमाड** (ಮುರಮಾಡ್) ನ. ಮುರಮು, ಖಡಕು,

**मुरमुरणे** (ಮುರಮುರಣೇ) ಕ್ರಿ. ಕೇಳಿಸದಂತೆ ಮಾತಾಡು.

**मुरमुर** (ಮುರಮುರ್) ಸ್ತ್ರೀ. ಸಣ್ಣ ದನಿಯಲ್ಲಿಯ ಮಾತು.

**मुरमुरा** (ಮುರಮುರಾ) ಪು. ಚುರಮುರಿ, ಕಡಲೆ ಕಾಯಿ.

**मुरमुरीत** (ಮುರಮುರೀತ್) ವಿ. ಹುರಿದ.

**मुरमुशी** (ಮುರಮುಶೀ) ಸ್ತ್ರೀ. ಜ್ವರ ಇಳಿದ ಮೇಲೆ ಅವಯುವ ಕುಕ್ಕರಿಸುವಿಕೆ, ರೋಗಿಯ ಅಶಕ್ತತೆ.

**मुरमुसणे** (ಮುರಮುಸಣೇ) ಕ್ರಿ. ಅ. ಜ್ವರ ಇಳಿದ ಮೇಲೆ ಅವಯುವ ಕುಕ್ಕರಿಸು, ಅಶಕ್ತನಾಗು, ದುರ್ಬಲನಾಗು.

**मुरली** (ಮುರಲೀ) ಸ್ತ್ರೀ. ಸಂ. ಕೊಳಲು, ಮುರಲಿ, ವೇಣು.

**मुरवण** (ಮುರವಣ) ಸ್ತ್ರೀ. ಹೆಪ್ಪು, ಹುಳಿಹಾಕುವಿಕೆ, ೨. ಸೊಕ್ಕಿಳಿಸುವಿಕೆ, ಡಾಂಭಿತನ ಹೊರಬೀಳುವಿಕೆ.

**मुरवत** (ಮುರವತ್) ಸ್ತ್ರೀ. ಸಂ. ಆದರಯುಕ್ತಭೀತಿ, ಭಿಡೆ, ಚಿಂತೆ, ಯೋಚನೆ.

**मुरवणे** (ಮುರವಣೇ) ಕ್ರಿ. ಸ. ತಗಲುಮಾಡು, ಅಪಹರಿಸು, ನುಂಗಿಸು.

**मुरळी** (ಮುರಳೀ) ಸ್ತ್ರೀ. ದೇವದಾಸಿ, ಖಂಡೋಬನಿಗೆ ಬಿಟ್ಟ ಹೆಂಗಸು.

**मुराद** (ಮುರಾದ) ವಿ.ಅರ. ಇಚ್ಛೆ.
**मन–** (ಮನ್–) ಕ್ರಿ.ವಿ. ತೃಪ್ತಿಯಾಗುವ ವರೆಗೆ.

**मुरूम** (ಮುರೂಮ್) ಪು. ಮಡಿಬೊಕ್ಕೆ, ಬೊಕ್ಕೆ, ಮಡಿಮೆ.

**मुऱ्हे** (ಮುರ್ಹೇ) ನ. ಇಬ್ಬನ್ನಿ, ಮಂಜು.

**मुलकी** (ಮುಲಕೀ) ವಿ. ಅರ. ಸ್ಥಾನಿಕ, ದೇಶದಲ್ಲಿ ಹುಟ್ಟಿದ, ದೇಶೀಯ, ದೇಶೋತ್ಪನ್ನವಾದ, ಮಹಸೂಲ ಖಾತೆಯ. ೨. ಅಸೈನಿಕ.

**मुलगा** (ಮುಲಗಾ) ಪು. ಹುಡುಗ, ಬಾಲಕ.

**मुलगी** (ಮುಲಗೀ) ಸ್ತ್ರೀ. ಹುಡುಗಿ, ಕನ್ಯೆ.

**मुल्ला, मुल्लाणा** (ಮುಲ್ಲಾ, ಮುಲ್ಲಾಣಾ) ಪು. ಮುಲ್ಲಾ, ಮುಸಲ್ಮಾನ ಧರ್ಮ ಶಾಸ್ತ್ರ ಬಲ್ಲವ.

**मल्लाणी** (ಮುಲ್ಲಾಣೀ) ಪು. ಕೋಳಿಕುರಿ ಕೊಯ್ಯುವ, ಮುಸಲ್ಮಾನ ಆಳು.

**मुलाईम** (ಮುಲಾಈಮ್) ವಿ. ಫಾ. ಮೆತ್ತಗಾದ, ಶಾಂತ, ಸಾಧು, ವಿಧೇಯ, ಕೋಮಲ, ನಾಜೂಕು, ಸುಂದರ, ಸುರೂಪವುಳ್ಳ.

**मुलाखात** (ಮುಲಾಖಾತ್) ಸ್ತ್ರೀ. ಅರ. ಭೆಟ್ಟಿ, ದರ್ಶನ.

**मुलाजा** (ಮುಲಾಜಾ) ಪು. ಅರ. (ಮುಲಾಹಿಜಾ) ಆದರ, ಪ್ರೀತಿ, ಗೌರವ, ಲಕ್ಷ್ಯ, ಗಣನೆ.

**मुलामा–म्मा** (ಮುಲಾಮಾ) ಪು. ಅರ. ಮುಲಾಮು, ಗಿಲೀಟು, ಬಣ್ಣಕೊಡುವಿಕೆ, ಮುಲಾಮು ಕೊಡುವಿಕೆ.

**मुलूक–ख** (ಮುಲೂಕ್–ಖ್) ಪು. ಅರ. ಪ್ರದೇಶ, ವಿಭಾಗ, ಪ್ರಾಂತ, ರಾಷ್ಟ್ರ

**मुलुखगिरी** (ಮುಲುಖಗಿರೀ) ಸ್ತ್ರೀ. ಫಾ.+ಅರ. ದಿಗ್ವಿಜಯ, ಪರರಾಜ್ಯಾಪಹರಣ.

**मुले बाळे, मुले लेकरे** (ಮುಲೇ ಬಾಳೆ, ಮುಲೆ ಲೇಕರೆ) ಪು. ಮಕ್ಕಳು–ಮರಿ, ಹುಡುಗ-ಹುಪ್ಪಡಿಯರು, ಹುಪ್ಪಡಿಗಳು.

**मुशकील** (ಮುಶಕಿಲ್) ವಿ. ಅರ. ಕಠಿಣವಾದ, ಬಿರುಸು, ಅಶಕ್ಯ, ಅಡಚಣೆ, ತೊಂದರೆ, ಅಡ್ಡಿ, ಕಷ್ಟ, ಬಿಕ್ಕಟ್ಟು, ಎದುರು, ಎಡಚು, ಗೂಢತತ್ವ, ಸಂಕಟ.

**मुशाफर** (ಮುಶಾಫರ್) ಪು. ಅರ. ಪ್ರವಾಸಿ, ಯಾತ್ರಿಕ, ಸಂಚಾರಿ, ಪ್ರಯಾಣಿಕ, ಮಾರ್ಗಸ್ಥ, ಹಾದಿಕಾರ.

**मुशाफरी** (ಮುಶಾಫರೀ) ಸ್ತ್ರೀ. ಯಾತ್ರೆ, ಯಾತ್ರೆ ಮಾಡುವಿಕೆ.

**मुशारखोर** (ಮುಶಾರ್‌ಖೋರ್) ವಿ. ಅರ. ಸಂಬಳ ಪಡೆಯುವ ಆಳು, ಸೇವಕ.

**मुशारा** (ಮುಶಾರಾ) ಪು. ಅರ., **मुशाहिरा** (ಮುಶಾಹಿರಾ) ಪು. ವೇತನ, ಸಂಬಳ, ಪಗಾರ, ವಿದ್ಯಾರ್ಥಿ ವೇತನ, ಕೂಲಿ, ಜೀತ.

**मुष्टि** (ಮುಷ್ಟಿ) ಸ್ತ್ರೀ. ಸಂ. ಮುಷ್ಟಿಗೆ, ಮುಟ್ಟಿಗೆ, ಮುಷ್ಟಿ, ಮುಟ್ಟಿಗೆ ತುಂಬ ವಸ್ತು, ಕಪಿಯ ಹಿಡಿತ, ಹಿಡಿ.

**मुष्टिका** (ಮುಷ್ಟಿಕಾ) ಸ್ತ್ರೀ. ಸ. ಹಿಡಿ, ಮುಷ್ಟಿ.

**मुष्टिघात** (ಮುಷ್ಟಿಘಾತ್) ಪು. ಸಂ. ಮುಷ್ಟಿಯಿಂದ ಹೊಡೆಯುವಿಕೆ, ಗುದ್ದು, ಪೆಟ್ಟು.

**मुष्टि प्रयोग** (ಮುಷ್ಟಿಪ್ರಯೋಗ) ಪು. ಗುದ್ದುವಿಕೆ, ಬಡೆಯುವಿಕೆ, ಮುಷ್ಟಿಯಿಂದ ಹೊಡೆಯುವಿಕೆ.

**मुष्टिप्रहार** (ಮುಷ್ಟಿಪ್ರಹಾರ್) ಪು. ಮುಷ್ಟಿಯ ಹೊಡೆತ, ಮುಷ್ಟಿಯ ಬಡೆತ, ಗುದ್ದುವಿಕೆ.

**मुष्टिमात्र** (ಮುಷ್ಟಿಮಾತ್ರ) ನ. ಪು. ಒಂದು ಮುಟ್ಟಿಗೆ ಒಂದು ಮುಟ್ಟಿಗೆ ವಸ್ತು.

**मुष्टिमोदक** (ಮುಷ್ಟಿಮೋದಕ್) ಪು. (ವ್ಯಂಗ್ಯ) ಗುದ್ದು, ಗುದ್ದಿನ ಉಂಡಿ, ಮುಟ್ಟಿಗೆ ಮೋದಕ.

**मसकट–ड, मुसकूर** (ಮುಸಕಟ್–ಡ್, ಮುಸಕೂರ್) ನ. ಮುಖ, ಮೊಸಡಿ.

**मुसकूट** (ಮುಸಕೂಟ್) ನ. ಮುಖ.

**मुसक(कु)टणे** (ಮುಸಕ(ಕು)ಟಣೇ) ಕ್ರಿ. ಅ. ಮೋರೆಗೆ ಹೊಡೆ, ಕೆನ್ನೆಗೆ ಹೊಡೆ, ಮೋರೆ ಮುಚ್ಚಿಕೊಳ್ಳು, ಮುಸುಕು ಹಾಕು, ಮುಚ್ಚಿಕಟ್ಟು.

**मुसके** (ಮುಸಕೇ) ನ. ಹಿಂ. ಬಾಯಿ ಜಾಳಿಗೆ, ಮೋತಿ ಮುಸುಕು, ಬಾಯಿಕಲ್ಲಿ, ಮೊಗವಾಡ.

**मुसक्या** (ಮುಸಕ್ಯಾ) ಸ್ತ್ರೀ. ಬಹು ವ. ಹಿಂ. ಕೈಕಾಲು. **–बांधणे** (–ಬಾಂಧಣೇ) ಕ್ರಿ. ಸ. ಕೈಕಾಲು ಕಟ್ಟು.

**मुसं(सां)डा** (ಮುಸಂ(ಸಾಂ)ಡಾ) ಪು. **मुसंडी** (ಮುಸಂಡೀ) ಸ್ತ್ರೀ. ಸೆಳವಿನ ಪ್ರವಾಹ, ಜಲಧಾರೆ, ಗಲಬು, ತಲೆಯಿಂದ ಹಾಯುವಿಕೆ, ರಭಸದಿಂದ ಹಾಯುವಿಕೆ.

**मुसमस–शी** (ಮುಸಮುಸ್–ಶೀ) ಸ್ತ್ರೀ. ಪ್ರಾಯದ ಹುಮ್ಮಸ, ಯೌವನದ ಸೊಕ್ಕು, ಪ್ರಾಯದ ಹೆಮ್ಮೆ, ತಾರುಣ್ಯದ ಅಹಂಕಾರ, ಹರೆಯದ ಬಿಂಕು.

**मुसमुसणे** (ಮುಸಮುಸಣೇ) ಕ್ರಿ. ಯೌವನದ ಸೊಕ್ಕೇರು, ಪ್ರಾಯದ ಹೆಮ್ಮೆಪಡು, ಅಹಂಕರಿಸು, ಅಹಂಕಾರಪಡು.

**मुसलमान** (ಮುಸಲ್ಮಾನ) ಪು. ಅರ. ಮುಸಲ್ಮಾನ. **मारून मुटकून मुसलमान करणे** (ಮಾರೂನ್ ಮುಟಕೂನ್ ಮುಸಲ್ಮಾನ ಕರಣೇ) ಕ್ರಿ. ಸ. ಒತ್ತಾಯದಿಂದ ಒಪ್ಪಿಸು, ಹೊಡೆದು ಬಡೆದು ಅನುಮತಿ ಪಡೆ, ಗುದ್ದಿ ಗುದ್ದಿ ಹಾದೆನ್ನಿಸು.

**मुसळ** (ಮುಸಳ್) ನ. ಒನಿಕೆ, ಕುಟ್ಟುಕೋಲು. **सगळेच मुसळ केरात** (ಸಗಳೇಚ್ ಮುಸಳ್‌ಕೇರಾತ್) ಗಾದೆಯಮಾತು. ಮಾಡಿದ್ದೆಲ್ಲ ಮಣ್ಣುಗೂಡುವಿಕೆ.

**मुसळणे** (ಮುಸಳಣೇ) ಕ್ರಿ. ಅ. ಬೇಸರಪಡು, ನಿರ್ವಿಣ್ಣನಾಗು, ಹತಾಶನಾಗು.

**मुसळदेवता** (ಮುಸಳದೇವತಾ) ಸ್ತ್ರೀ. ಗಂಡಭೇರಿ, ಗಡಸು ಹೆಂಗಸು.

**मुसळधार** (ಮುಸಳ್‌ಧಾರ್) ಸ್ತ್ರೀ. ದೊಡ್ಡಮಳೆ, ಸುರಿಮಳೆ.

**मुसळ–ळचा** (ಮುಸಳ್–ಳ್ಯಾ) ಪು. ಬಲಿಷ್ಠ, ಬಡ್ಡು, ವೈಕಟ್ಟಿನ, ದುಂಡುಮೈಯ,ದೃಢಾಂಗ,ಕಟ್ಟಾಳು, ಧೀರ.

**मुसळी** (ಮುಸಳೀ) ಸ್ತ್ರೀ. ಸಣ್ಣಒನಿಕೆ.

**मुसळे** (ಮುಸಳೇ) ನ. ಸಕ್ಕರೆಯ ಯಂತ್ರದ ಭಾಗ, ಒನಿಕೆ.

**मुसाफर** (ಮುಸಾಫರ್) ಪು.ಅರ. ಪ್ರವಾಸಿ.

**मुसावणे** (ಮುಸಾವಣೇ) ಕ್ರಿ. ಸ. ಪಸರಿಸು, ಹಬ್ಬು, ವಿಸ್ತರಿಸು, ವ್ಯಾಪಿಸು, ಹರಡು, ಚೆಲ್ಲರಿ, ಉಬ್ಬು, ತುಂಬು, ಉಕ್ಕೇರು.

**मुस्तकीम** (ಮುಸ್ತಕೀಮ್)ವಿ.ಅರ. ಕಾಯಂ(ನೌಕರ).

**मुहूर्त** (ಮುಹೂರ್ತ) ಪು. ಸ. ಗಳಿಗೆ, ಮಂಗಲ ಕಾರ್ಯದ ದಿವಸ.

**मुळकं(खं)ड** (ಮುಳಕಂ(ಖಂ)ಡ್) ನ. **मुळकुंडी** (ಮುಳಕುಂಡೀ) ಸ್ತ್ರೀ. ಹಡಗಿನ ಪಟದ ಭಾಗ.

**मुळका** (ಮುಳಕಾ) ಪು. ಕ. ಆತುರತೆ, ಅವಸರ, ಶೀಘ್ರತೆ.

**मुळमुळ** (ಮುಳಮುಳ್) ಸ್ತ್ರೀ. ಅಂಜುತ್ತ ಮಾತ ಮಾತನಾಡುವಿಕೆ.

**मुळमुळणे** (ಮುಳಮುಳಣೇ) ಕ್ರಿ. ಸ. ಅಂಜುತ್ತ ಮಾತನಾಡು.

**मुळमुळीत** (ಮುಳಮುಳೀತ್) ವಿ. ಅನಿಶ್ಚಿತ, ಅಸ್ಪಷ್ಟ, ನೇಟು, ಇಲ್ಲದ ರುಚಿಹೀನ, ಸಪ್ಪಗಿನ, ಪೊಳ್ಳು, ಮೆತ್ತಗಿನ.

**मुळा** (ಮುಳಾ) ಪು. ಮೂಲಂಗಿ, ಮುಲ್ಲಂಗಿ.

**मुळामहूर्ती** (ಮುಳಾಮುಹೂರ್ತೀ) ತೀರ ಪ್ರಾರಂಭಕ್ಕೆ.

**मुळारंभ** (ಮುಳಾರಂಭ) ಪು. ಪ್ರಾರಂಭ, ಓಂ.

**मुळारी** (ಮುಳಾರೀ) ಸ್ತ್ರೀ. ಮದುಮಗಳ ಜೊತೆ ಗಾರತಿ.

**मुळावणे** (ಮುಳಾವಣೇ) ಕ್ರಿ. ಅ. ಗಿಡಬೇರುಬಿಡು.

**मुळी** (ಮುಳೀ) ಸ್ತ್ರೀ. ಬೇರು, ಮೂಲಿಕೆ.

**मुळचा पाताळीगडणे** (ಮುಳ್ಯಾ ಪಾತಾಳೀಗಡಣೇ) ಕ್ರಿ. ಅ. (ಗಾದೆಯಮಾತು) ಬೇರುಪಾತಾಳಕ್ಕಿಳಿ, ಬೇರು ಗಟ್ಟಿಯಾಗು.

**मुळी** (ಮುಳೀ) ಕ್ರಿ. ವಿ. ಅಪೂಟ, ಏನೂ (ಇಲ್ಲ)

**मुळे** (ಮುಳೇ) ಕ್ರಿ. ವಿ. ಮೂಲಕ, ಕಾರಣದಿಂದ, ಪ್ರಯುಕ್ತ.

**मूग** (ಮೂಗ್) ಪು. ಹೆಸರು, ಹೆಸರುಕಾಳು.

**मूगगिळणे** (ಮೂಗ್‌ಗಿಳಣೇ) ಕ್ರಿ. ಸ. ಸಹನಮಾಡು, ಸುಮ್ಮನಿರು, ನುಂಗು, ತಾಳಿಕೊಳ್ಳು, ಅಪಮಾನ ಸಹಿಸು.

**मूठ** (ಮೂಠ್) ಸ್ತ್ರೀ. ಮುಷ್ಟಿಗೆ, ಹಿಡಿ, ಎತ್ತಿನತಡಿ–ಥಡಿ.

**झाकली मूठ सव्वा लाखाची** (ಝಾಕಲೀ ಮೂಠ್ ಸವ್ವಾ ಲಾಖಾಚೀ) (ಗಾದೆಯಮಾತು) ಬಿಗಿದ ಮುಷ್ಟಿಯಲ್ಲಿ ಲಕ್ಷ ರೂಪಾಯಿಗಳು ಸಹ ಇರ ಬಹುದು.

**मूठ अवळणे** (ಮೂಠ್ ಅವಳಣೇ) ಕ್ರಿ. ಸ. ಮುಷ್ಟಿಗೆ ಗಟ್ಟಿ ಹಿಡಿ, ಕೊಡುವಿಕೆ ನಿಲ್ಲಿಸು.

**मूठदाबणे** (ಮೂಠ್‌ದಾಬಣೇ) ಕ್ರಿ. ಸ. ಲಂಚಕೊಡು.

**मठीत असणे** (ಮುಠೀತ್ ಅಸಣೇ) ಕ್ರಿ.ಅ. ಕೈಯಲ್ಲಿರು, ಸ್ವಾಧೀನವಾಗಿರು, ಹೇಳಿದಂತೆ ಕೇಳು.

**मूठमाति** (ಮೂಠ್‌ಮಾತೀ) ಸ್ತ್ರೀ. ಮುಷ್ಟಿಗೆಮಣ್ಣು, ಹೆಣಕ್ಕೆ ಮಣ್ಣು ಹಾಕುವಿಕೆ, ಮಣ್ಣುಕೊಡುವಿಕೆ.

**मूढ** (ಮೂಢ) ವಿ. ಸಂ. ಮೂರ್ಖ, ಮಂದ, ಅಜ್ಞಾನಿ, ತಿಳಿಗೇಡಿ.

**मूढमति** (ಮೂಢಮತಿ) ಮೂರ್ಖ, ಮಂದಬುದ್ಧಿಯ.

**मूत–त्र** (ಮೂತ್–ತ್ರ) ನ. ಮೂತ್ರ.

**मूतखडा** (ಮೂತ್‌ಖಡಾ) ಪು. ಅಶ್ಮರಿರೋಗ, ಮೂತ್ರ ರೋಗ, ಮೂತ್ರಗಲ್ಲು, ಮೂತ್ರಜಲ್ಲಿ.

**मूत्रढाळ** (ಮೂತ್ರಢಾಳ್) ಪು. ಮೂತ್ರವರ್ಧನೆ, ಮೂತ್ರಹೆಚ್ಚುವಿಕೆ.

**मूत्रदाह** (ಮೂತ್ರದಾಹ್) ಉಚ್ಚೆಯಉರಿ, ಮೂತ್ರದ ಬಿಸಿ, ಮೂತ್ರ ಸುಡುವಿಕೆ.

**मूत्रपिंड** (ಮೂತ್ರಪಿಂಡ) ಪು. ಸಂ. ಮೂತ್ರಪಿಂಡ, ಮೂತ್ರಗ್ರಂಥಿ.

**मूत्रमार्ग** (ಮೂತ್ರಮಾರ್ಗ) ಪು. ಸಂ. ಮೂತ್ರನಲಿಕೆ, ಮೂತ್ರಮಾರ್ಗ, ಮೂತ್ರನಾಳ.

**मूत्रशलाका** (ಮೂತ್ರಶಲಾಕಾ) ಸ್ತ್ರೀ. ಸಂ. ಮೂತ್ರ ಶಲಾಕೆ, ಮೂತ್ರ ಹೊರತೆಗೆಯುವ ನಲಿಕೆ.

**मूत्राशय** (ಮೂತ್ರಾಶಯ) ಮೂತ್ರಾಶಯ.

**मूत्रावरोध** (ಮೂತ್ರಾವರೋಧ) ಪು. ಮೂತ್ರ ಕಟ್ಟು ವಿಕೆ, ಮೂತ್ರನಿಲ್ಲುವಿಕೆ.

**मूत्रावष्टंभ** (ಮೂತ್ರಾವಷ್ಟಂಭ) ಪು. ಸಂ. ಉರಿ ಮೂತ್ರರೋಗ.

**मूत्रल, मूत्रोत्पादक** (ಮೂತ್ರಲ, ಮೂತ್ರೋತ್ಪಾದಕ್) ವಿ. ಮೂತ್ರ ಮಾಡಿಸುವ, ಉಚ್ಚೆ ಹೊರಬೀಳಿಸುವ, ಮೂತ್ರವರ್ಧಕ.

**मूत्रोत्सर्ग** (ಮೂತ್ರೋತ್ಸರ್ಗ) ಪು. ಉಚ್ಚೆ ಹೊಯ್ಯುವಿಕೆ, ಮೂತ್ರ ಬಿಡುವಿಕೆ.

**मूद** (ಮೂದ್) ಸ್ತ್ರೀ. ಕ. ಮುದ್ದೆ, ಅನ್ನದ ಮುದ್ದೆ ಬಟ್ಟಲದಲ್ಲಿ ಹಾಕಿ ಮಾಡಿದ ಅನ್ನದ ಮುದ್ರೆ.

**मूर** (ಮೂರ್) ಸ್ತ್ರೀ. ವಿ. ದ್ರವಿಸುವಿಕೆ, ಒಸರುವಿಕೆ, ಬಸಿಯುವಿಕೆ, ಹಾನಿ, ಇಬ್ಬನ್ನಿ, ಮಂಜು.

**मूर्ख** (ಮೂರ್ಖ) ಪು. ಮೂರ್ಖ, ಬುದ್ಧಿಹೀನ, ತಿಳಿಗೇಡಿ, ಸೋಮಾರಿ, ಅಜ್ಞ, ಮಂಕು, ದಡ್ಡ, ಮಂದಗಾದೆ.

**मूर्छना** (ಮೂರ್ಛನಾ) ಸ್ತ್ರೀ. } ಮೂರ್ಛೆ, ಬವಳಿ.
**मूर्छा** (ಮೂರ್ಛಾ) ಸ್ತ್ರೀ. }

**मूर्छागत** (ಮೂರ್ಛಾಗತ) ವಿ. } ಮೂರ್ಛೆ ಹೋದ, ಬವಳಿಕೆ ಬಂದ.
**मूर्छित** (ಮೂರ್ಛಿತ) ವಿ. }

**मूर्त** (ಮೂರ್ತ) ವಿ. ಸಂ. ಪ್ರತ್ಯಕ್ಷ, ಸಾಕ್ಷಾತ್ಕರಿಸಿದ.

**मूर्ति** (ಮೂರ್ತಿ) ಸ್ತ್ರೀ. ಸಂ. ಪುತ್ಥಳಿ, ಮೂರ್ತಿ, ಪ್ರತಿಮೆ, ವಿಗ್ರಹ.

**मूर्तिमंत–मान** (ಮೂರ್ತಿಮಂತ–ಮಾನ್) ವಿ. ಸಂ. ಸಾಕಾರ, ಕ್ರಿ. ವಿ. ಸಾಕ್ಷಾತ್.

**मूर्तिपूजा** (ಮೂರ್ತಿಪೂಜೆ) ಮೂರ್ತಿಪೂಜೆ, ಪ್ರತಿಮಾಪೂಜೆ.

**मूर्ति लहान पण कीर्ति मोठी** (ಮೂರ್ತೀ ಲಹಾನ್ ಪಣ ಕೀರ್ತಿ, ಮೋಠೀ) ಸ್ತ್ರೀ. ಗಾದೆಯಮಾತು. ಮೂರ್ತಿ ಸಣ್ಣದಾದರೂ ಕೀರ್ತಿ ದೊಡ್ಡದು.

**मूर्धन्य** (ಮೂರ್ಧನ್ಯ) ವಿ. ಮಿದುಳಿನ, ಮಿದುಳಿಗೆ ಸಂಬಂಧಿಸಿದ. (ವ್ಯಾಕರಣ) ಟ ವರ್ಗದ ಅಕ್ಷರಗಳು.

**मूर्धा** (ಮೂರ್ಧಾ) ಸ್ತ್ರೀ. } ಅಂಗಳ ಮುಂಭಾಗ, ತಲೆ, ಮುಂಡ.
**मूर्धान** (ಮೂರ್ಧಾನ) ನ. }

**मूर्धाभिषेक** (ಮೂರ್ಧಾಭಿಷೇಕ) ಪು. ಅಭ್ಯಂಗಸ್ನಾನ, ಪಟ್ಟಾಭಿಷೇಕವಿಧಿ, ಪ್ರತಿಷ್ಠಾಪನಾವಿಧಿ.

**मूल** (ಮೂಲ್) ನ. ಕೂಸು, ಬಾಲ, ಬಾಲಕ, ಸಣ್ಣ ಹುಡುಗ. ೨. ಸಂ. ಮೂಲ, ತಳಹದಿ.

**मूलशब्द** (ಮೂಲಶಬ್ದ) ಪು. ಸಂ. ಮೂಲಶಬ್ದ, ಪ್ರತ್ಯಯಹತ್ತದಿದ್ದ ಶಬ್ದ, ಪ್ರಕೃತಿ, ಶಬ್ದವ್ಯುತ್ಪತ್ತಿ, ಶಬ್ದನಿಷ್ಪತ್ತಿ, ಶಬ್ದಸಾಧನ, ಶಬ್ದಾರ್ಥ ವಿಚಾರ.

**मूलगामी** (ಮೂಲಗಾಮೀ) ವಿ. ಸಂ. ಮೂಲಗಾಮಿ, ಮೂಲವಿಚಾರಕ್ಕೆ ಹೋಗುವ, ಸಂಪ್ರದಾಯಕ್ಕೆ ಅಂಟುವ, ಬೇರುನತನಕ ಇಳಿಯುವ.

**मूलारंभ** (ಮೂಲಾರಂಭ) ಪು. ಸಂ. ಪ್ರಾರಂಭ.

**मूल्य** (ಮೂಲ್ಯ) ನ. ಸಂ. ಬೆಲೆ, ಕಿಮ್ಮತ್ತು, ಕ್ರಯ, ಖರೀದಿ, ದೊಡ್ಡತನ.

**मूल्यवान्** (ಮೂಲ್ಯವಾನ್) ವಿ. ಸಂ. ಬೆಲೆಯುಳ್ಳ, ಹೆಚ್ಚಿನ ಬೆಲೆಯ, ಬೆಲೆಗೊತ್ತಾಗದ, ಖರ್ಚಿನ, ಪ್ರಿಯ, ತುಟ್ಟಿ.

**मूल्यमापन** (ಮೂಲ್ಯಮಾಪನ) ನ. ಸಂ. ಬೆಲೆಕಟ್ಟುವಿಕೆ, ಕ್ರಯಕಟ್ಟುವಿಕೆ.

**मूल्यांक** (ಮೂಲ್ಯಾಂಕ) ಪು. ಬೆಲೆಯ ಅಂಕೆ.

**मूष** (ಮೂಷ್) ಪು. ಧಾ. } ಇಲಿ, ಮೂಷಕ, ಹೆಗ್ಗಣ, ದೊಡ್ಡ ಇಲಿ, ವಂಚಕ, ಮಿತ್ರ ದ್ರೋಹಿ.
**मूषक** (ಮೂಷಕ್) ಪು. ಸ. }

**मूस** (ಮೂಸ್) ಸ್ತ್ರೀ. ಕುಲುಮೆ. ೨. ಅಚ್ಚು ಪಡಿ.

**मूळ** (ಮೂಳ್) ನ. ಬೇರು, ಮೂಲ, ಬುಡ, ಅಡಿ, ಮೂಲಕಾರಣ, ಧಾತು, ಮೂಲಗ್ರಾಮ.

**मुळावरयेणे–बसणे** (ಮುಳಾವರಯೇಣೇ–ಬಸಣೇ) ಕ್ರಿ. ಅ. ನಾಶಕ್ಕೆ ಕಾರಣವಾಗು.

**मूळखणणे** (ಮೂಳ್‌ಖಣಣೇ) ಕ್ರಿ. ಸ. ಬೇರುಕೀಳು, ಬೇರುಸಹಿತ ಹಡ್ಡು, ಪೂರ್ಣನಾಶಮಾಡು, ಬೇರು ಸಹ ಕಿತ್ತೊಗೆ.

**मूळाक्षरे** (ಮುಳಾಕ್ಷರೇ) ಪು. ಬಹುವ. ಮೂಲಾಕ್ಷರ, ಪ್ರಾರಂಭದ ಅಕ್ಷರಗಳು.

**मूळग्रंथ** (ಮೂಳಗ್ರಂಥ) ಪು. ಪ್ರಮಾಣಗ್ರಂಥ, ಮೊದಲನೆಯ ಪ್ರತಿ, ಗ್ರಂಥದ ಮೂಲಪ್ರತಿ, ಬುಡ ಕಟ್ಟಿನಹೊತ್ತಿಗೆ.

**मूळधन** (ಮೂಳಧನ) ನ. ಬಂಡವಲು, ಮೂಲಧನ, ಪ್ರಾರಂಭದಲ್ಲಿ ತೊಡಗಿಸಿದ ಹಣ.

**मूळपत्र** (ಮೂಳ್‌ಪತ್ರ) ನ. ಅಸಲುಕಾಗದಪತ್ರ, ಮೂಲ ದಸ್ತಾಐವಜು, ಮೂಲ ಲಿಖಿತಪತ್ರ, ಮೂಲಕರಾರನಾಮೆ.

**मूळपीठ** (ಮೂಳ್ ಪೀಠ್) ನ. ಹಿರಿಯರಸ್ಥಾನ, ಪಿತೃಗಳ ಸ್ಥಾನ, ಮೂಲಪೀಠ, ಪೂರ್ವಜರಪೀಠ, ಮುಖ್ಯಪೀಠ.

**मूळपीठिका** (ಮೂಳ್ ಪೀಠಿಕಾ) ಸ್ತ್ರೀ. ಪ್ರಾರಂಭ, ಆರಂಭದಿಂದ ಕೊನೆಯವರೆಗಿನ ವರದಿ.

**मूळपुरुष** (ಮೂಳಪುರುಷ) ಪು. ಮೂಲಪುರುಷ, ಮೊದಲಪುರುಷ, ವಂಶದಗೋತ್ರ ಪತಿ.

**मूळप्रकृति** (ಮೂಳ್‌ಪ್ರಕೃತಿ) ಮೂಲಸ್ವಭಾವ, ಪ್ರಾರಂಭದ ಸೃಷ್ಟಿ, ಮೂಲಪ್ರಕೃತಿ.

**मूळव्याध-धी** (ಮೂಳವ್ಯಾಧ್-ಧೀ) ಸ್ತ್ರೀ. ಮೂಲವ್ಯಾಧಿ, ಗುದಕೀಲಕ, ಗುದಾಂಕುರ.

**मूळस्वभाव** (ಮೂಳ್‌ಸ್ವಭಾವ) ಪು. ಹುಟ್ಟುಗುಣ, ಜನ್ಮಸ್ವಭಾವ, ಮೂಲಪ್ರಕೃತಿ.

**मृग** (ಮೃಗ) ಪು. ಸಂ. ಪಶು, ಚಿಗರೆ, ಎರಳೆ, ಹರಿಣ, ಪ್ರಾಣಿ, ಜಿಂಕೆ, ಹುಲ್ಲೆ, ದುಪ್ಪಿ, ಐದನೆಯ ನಕ್ಷತ್ರ.

**मृगजळ** (ಮೃಗಜಳ್) ನ. } ಮೃಗದಜಲ,
**मृगतृषा** (ಮೃಗತೃಷಾ) ಸ್ತ್ರೀ. ಸಂ. } ಬಯಲ್ದೊರೆ.

**मृगनाभि** (ಮೃಗನಾಭಿ) } ಚಿಗರೆಯ ಹೊಕ್ಕಳು,
**मृगमद** (ಮೃಗಮದ) ಪು. ಸಂ. } ಕಸ್ತೂರಿ.

**मृगनयना** (ಮೃಗನಯನಾ) ಸ್ತ್ರೀ. ಸಂ. ಸುಂದರಸ್ತ್ರೀ, ಮೃಗನೇತ್ರೆ, ಜಿಂಕೆಗಣ್ಣೆ.

**मृगबार** (ಮೃಗಬಾರ್) ಪು. ಮೊದಲನೆಯ ಬೆಳೆ, ಪ್ರಥಮ ಬೆಳೆ.

**मृगया** (ಮೃಗಯಾ) ಸ್ತ್ರೀ. ಸಂ. ಬೇಟೆ, ವಿಹಾರ, ಶಿಕಾರಿ, ಬೇಟೆಯಾಡುವಿಕೆ, ಬೆನ್ನಟ್ಟುವಿಕೆ, ಹುಡುಕುವಿಕೆ.

**मृगलांछन** (ಮೃಗಲಾಂಛನ) } ಹರಿಣ ಗುರುತಿನವ,
**मृगांक** (ಮೃಗಾಂಕ್) ಪು. ಸಂ. } ಚಂದ್ರ, ಶಶಿ.

**मृगशिर,शीर्ष** (ಮೃಗಶಿರ) ಪು. ಐದನೆಯ ನಕ್ಷತ್ರ.

**मृगी** (ಮೃಗೀ) ಸ್ತ್ರೀ. ಸಂ. ಹೆಣ್ಣುಜಿಂಕೆ, ಹೆಣ್ಣೆರಳೆ, ಹುಲ್ಲೆ.

**मृणाल** (ಮೃಣಾಲ್) ಪು. ಕಮಲದದೇಟು, ಕಮಲದ ಕೋಮಲದೇಟು, ದಂಟು, ಕಮಲವೃಂತ.

**मृण्मय** (ಮೃಣ್ಮಯ) ವಿ. ಸಂ. ಮಣ್ಣಿನಿಂದಮಾಡಿದ.

**मृत** (ಮೃತ) ವಿ. ಸಂ. ಸತ್ತ, ನಿಷ್ಪ್ರಯೋಜನ, ನಿರುಪಯೋಗಿ, ರೂಢಿತಪ್ಪಿದ, ಅಪ್ರಚಲಿತ, ಭಸ್ಮೀಭೂತ, ಸುಟ್ಟುಹೋದ, ಹಾನಿಗೊಳಗಾದ.

**मृतक** (ಮೃತಕ) ನ. ಸಂ. ಔರ್ಧ್ವದೇಹಿಕ, ಶವಸಂಸ್ಕಾರ, ಹೆಣದ ವಿಧಿ.

**मृतप्राय** (ಮೃತಪ್ರಾಯ) ವಿ. ಸಂ. ಸತ್ತಂತಿರುವ, ಸಾಯಲಾಗಿರುವ.

**मृतलेखदान** (ಮೃತಲೇಖದಾನ) ನ. ಸಂ. ಮೃತ್ಯುಪತ್ರ, ಅಂತ್ಯಕಾಲಲೇಖನ, ಮೃತ್ಯುಪತ್ರದಂತೆ ಕೊಡಲಾದ ಕೊಡುಗೆ.

**मृताशौच** (ಮೃತಶೌಚ) ನ. ಸೂತಕ, ಸತ್ತವನಿಗಾಗಿ ಮೈಲಿಗೆ.

**मृति** (ಮೃತಿ) ಸ್ತ್ರೀ. ಸಂ. ಸಾವು, ಮರಣ, ಗುರಿತಪ್ಪುವಿಕೆ, ಗುರಿತಪ್ಪಿದ ಸ್ಥಿತಿ.

**मृत्तिका** (ಮೃತ್ತಿಕಾ) ಸ್ತ್ರೀ. ಸಂ. ಮಣ್ಣು.

**मृत्तिकाहोणे** (ಮೃತಿಕಾಹೋಣೇ) ಕ್ರಿ.ಅ. ಮಣ್ಣಾಗು, ಬೂದಿಯಾಗು, ನಾಶಹೊಂದು.

**मृत्यु** (ಮೃತ್ಯು) ಪು. ಸಂ. ಸಾವು, ಮರಣ, ಯಮ.

**मृत्युपावणे** (ಮೃತ್ಯುಪಾವಣೇ) ಕ್ರಿ. ಅ. ಸಾಯು, ಮರಣಹೊಂದು, ಯಮನಕಡೆಗೆ ಹೋಗು, ಯಮನನ್ನು ಹಿಂಬಾಲಿಸು.

**मृत्युकळा** (ಮೃತ್ಯುಕಳಾ) ಸ್ತ್ರೀ. ಸಾವಿನಚರ್ಯೆ, ಮೃತ್ಯುಚಿಹ್ನ, ಸಾಯುವಿನಸ್ಥಿತಿ, ಮರಣದ ಬಾಗಿಲಲ್ಲಿರುವಿಕೆ.

**मृत्युपंचक** (ಮೃತ್ಯುಪಂಚಕ) ನ. ಸಂ. ಜ್ಯೋತಿಶ್ಶಾಸ್ತ್ರದ ಒಂದು ಯೋಗ, ಮೃತ್ಯುಪಂಚಕ.

**मृत्युपंथ** (ಮೃತ್ಯುಪಂಥ) ಪು. ಸಂ. ಮರಣ ಸಮೀಪಿಸುವಿಕೆ.

**मृत्युपत्र** (ಮೃತ್ಯುಪತ್ರ) ನ. ಸ. ಮೃತ್ಯುಪತ್ರ, ಸಾಯುವಕಾಲದಲ್ಲಿ ಮಾಡಲಾದ ವ್ಯವಸ್ಥಾಪತ್ರ.

**मृत्युपत्राधिकारी** (ಮೃತ್ಯುಪತ್ರಾಧಿಕಾರೀ) ಪು. ಸಂ. ಮೃತ್ಯುಪತ್ರದಂತೆ ಅಧಿಕಾರ ಪಡೆದವ, ಮೃತ್ಯುಪತ್ರಾನುಸಾರ ಆಸ್ತಿ ಪಡೆದವ, ಹಕ್ಕುಧಾರ.

**मृदंग** (ಮೃದಂಗ್) ಪು. ಮೃದಂಗ, ವಾದ್ಯವಿಶೇಷ, ಒಂದು ಪ್ರಕಾರದ ಚರ್ಮವಾದ್ಯ, ಪಕ್ವವಾದ್ಯ.

**मृदंगी-ग्या** (ಮೃದಂಗೀ-ಗ್ಯಾ) ವಿ. ಮೃದಂಗವಾದಕ ಪಕ್ವ ವಾದ್ಯ ಬಾರಿಸುವ.

**मृदु** (ಮೃದು) ವಿ. } ಕೋಮಲ, ಮೆತ್ತಗಾದ,
**मृदुल** (ಮೃದುಲ್) ವಿ. } ಸ್ನಿಗ್ಧ, ಅಶಕ್ತ, ಎಳೆಯ, ಮಮತೆಯ, ಕನಿಕರದ.

**मृषा** (ಮೃಷಾ) ವಿ. ಸುಳ್ಳು, ಅಸತ್ಯ, ನಿರುಪಯೋಗಿ.

**मेकण** (ಮೇಕಣ) ನ. ಕೂಗಣೆ, ಕರ್ಣಮಲ, ಮೂಗಿನ ಒಣಗಿದ ಮಲ.

**मेकाड-डा** (ಮೇಕಾಡ್-ಡಾ) ಪು. ಬುರುಸು, ಜಿಗಿ, ಬುರುಜು, ಭೂಸು.

**मेकूड** (ಮೇಕೂಡ್) ಹಕ್ಕಳಿ, ಒಣ ಸುಂಬಳ.

**मेख** (ಮೇಖ) ಸ್ತ್ರೀ. ಗೂಟ, ದಶಿ, ಸಣ್ಣ ಮುಂಡಿಗೆ, ಕಟ್ಟಿಗೆಯ ಹೊರೆ.

**मेखबसणे** (ಮೇಃಖಬಸಣೇ) ಕ್ರಿ. ವಿ. ಗೂಟು ಕೂಡು, ಗೂಟಬಡೆ, ಹಾನಿಯಾಗು.

**मेखमारणे** (ಮೆಃಖಮಾರಣೇ) ಸ್ತ್ರೀ. ಹಾನಿಮಾಡು, ಗೂಡನಿಲ್ಲಿಸು, ಬಲುಮೆಯಿಂದ ತೀರಿಸು, ಮೊಳೆ ಹೊಡೆ.

**मेखच़** (ಮೇಃಖಚೂ) ಪು. ಕಟ್ಟಿಗೆಯ ಕೊಡತಿ, ಕೊಡೆತೆ.

**मेखलणे** (ಮೇಃಖಲಣೇ) ಕ್ರಿ. ಸ. ಮೊಳೆಹೊಡೆ, ಗಟ್ಟಿ ಗೊಳಿಸು,ನಿಲ್ಲಿಸು, ಒತ್ತಾಯದಿಂದ ಬಂದುಮಾಡು.

**मेखला** (ಮೇಃಖಲಾ) ಸ್ತ್ರೀ. ಸಂ. ನಡುಪಟ್ಟಿ.

**मेखाटणे** (ಮೇಃಖಾಟಣೇ) ಕ್ರಿ. ಸ. ಮೊಳೆಹೊಡೆದು ಕೂಡಿಸು, ಬಡಿ, ಬೈಯ್ಯು, ಹೀಯಾಳಿಸು.

**मेखाटीस बसणे** (ಮೇಃಖಾಟೀಸ್ ಬಸಣೇ) ಕ್ರಿ. ಅ. ಆಗ್ರಹಮಾಡು, ಹಟಹಿಡಿ, ಒತ್ತಾಯಿಸು, ಧರಣಿ ಕೂಡ್ರು.

**मेख्या** (ಮೇಃಖ್ಯಾ) ಕ್ರಿ. ವಿ. ಧರಣಿ ಕೂತವ, ಹಟ ಹಿಡಿಯುವ, ಒತ್ತಾಯಿಸುವ, ಬೆದರಿಸುವ, ಕಣ್ಣು ಕಿಸಿಯುವ.

**मेंग** (ಮೇಃಂಗ್) ಸ್ತ್ರೀ. ಹಾವಿನ ಪರಿ, ಗೋಲು, ಹರೆ, ೨. ಹಕ್ಕಳಿ, ಹಕ್ಕಳಿಕೆ.

**मेंगणे** (ಮೇಃಂಗಣೇ) ಕ್ರಿ. ವಿ. ಪರಿಬಿಡು, ಹಕ್ಕಳಿ ಚೆಲ್ಲು, ಪರಿಬಿಚ್ಚು, ಹಿಂಜರಿ, ಹಿನೆಲೆಬಿಟ್ಟು, ಹಿಮ್ಮೆಟ್ಟು, ಹಿಂದಡಿಯಿಡು, ನಿವೃತ್ತಿ ಹೊಂದು.

**मेंग्या** (ವೇಃಂಗ್ಯಾ) ವಿ. ನಿವೃತ್ತಿ ಹೊಂದಿದ, ಹಿಮ್ಮೆಟ್ಟಿದ, ಹಿಂದಡಿಯಿಟ್ಟ, ಅಶಕ್ತ, ಬಲಹೀನ, ಕೈಲಾಗದ.

**मेंग्या मारवाडी** (ಮೇಃಂಗ್ಯಾ ಮಾರವಾಡೀ) ಪು. ಗೋಮುಖ ವ್ಯಾಘ್ರ, ಮರುಳನಂತೆ ಕಾಣುವ ಧೂರ್ತ.

**मेंगावणे** (ಮೇಃಗಾವಣೇ) ಕ್ರಿ. ಸ. ಪರಿಬಿಡು.

**मेघ** (ಮೇಃಘ) ಪು. ಮೋಡ, ಕತ್ತಲೆ, ಮಬ್ಬು.

**मेघगर्भ** (ಮೇಃಘಗರ್ಭ) ಪು. ಆಣೆಕಲ್ಲು, ಆಲಿಕಲ್ಲು, ನೀರ್ಗಲ್ಲು, ಹಿಮಕಣ.

**मेघडंबर** (ಮೇಃಘಡಂಬರ) ನ. ಮೇಃಘ ಗರ್ಜನೆ, ಮೋಡಗಳ ಸಪ್ಪಳ, ಟೊಳ್ಳು ಅಂಜಿಕೆ, ಸುಳ್ಳು ಅಂಜಿಕೆ.

**मेघमंडल** (ಮೇಃಘಮಂಡಲ) ವಿ. ಮೋಡಗಳ ಸಾಲು, ಮೇಃಘಪಂಕ್ತಿ, ವಾತಾವರಣ.

**मेज** (ಮೇಃಜ) ನ. ಪೋ. ಮೇಜು, ಟೇಬಲ್.

**मेजणी** (ಮೇಃಜಣೀ) ಸ್ತ್ರೀ. '**मोजणी**' ನೋ.

**मेजणे** (ಮೇಃಜಣೇ) ಕ್ರಿ. ಸ. '**मोजणे**' ನೋ.

**मेजवानी** (ಮೇಃಜವಾನೀ) ಸ್ತ್ರೀ. ಫಾ. ಮೇಃಜವಾನಿ, ಉತ್ತಮ ಭೋಜನ.

**मेजोटी** (ಮೇಃಜೋಟೀ) ಸ್ತ್ರೀ. ಪತ್ತಾರನ ಉಪಕರಣ.

**मेट** (ಮೇಃಟ್) ವಿ. ಮೊಣಕಾಲ ಮಡಿಚುವಿಕೆ, ಮೊಣಕಾಲ ಬಾಗು.

**मेटेंघेणे** (ಮೇಃಟೆಘೇಣೇ) ಕ್ರಿ. ಸ. ಕುಸ್ತಿಹಿಡಿ.

**मेटेबसणे** (ಮೇಃಟೆಬಸಣೇ) ಕ್ರಿ. ಅ. ಕುಗ್ಗು.

**मेटेमारणे** (ಮೇಃಟ್‌ಮಾರಣೇ) ಕ್ರಿ. ಸ. ಕೂತುಬಿಡು, ಧರಣಿಹಿಡಿ, ನೆಲಹಿಡಿ, ಕೈಕಾಲು ಚೆಲ್ಲು.

**मेटका** (ಮೇಃಟಕಾ) ಪು. ಸೆಳೆತ, ಸುಳುಕು, ಎಳೆತ, ನರಹಿಡಿತ, ಮನೋದ್ರೇಕ, ಆವೇಗ, ಉಳುಕು.

**मेड** (ಮೇಃಡ್) ಸ್ತ್ರೀ. } ಮುಂಡಿಗೆ, ಗೂಟ, ದಶಿ,
**मेडका** (ಮೇಃಡಕಾ) ಪು. } ಯಾಪ, ೨. ಜೂಜು, ಮೇಃಟೆ, ಪಂದ್ಯ, ಪಂತ.

**मेंड** (ಮೇಃಂಡ) ಪು. ತೀಕ್ಷ್ಣಧಾರೆ, ಕತ್ತಿಬಾಯಿ. ೨. ಗಡಿ, ಸೀಮೆ, ಸರಹದ್ದು.

**मेंडकी** (ಮೇಃಂಡಕೀ) ಸ್ತ್ರೀ. ಕೈಕುಕ್ಕಡಿ, ತೋಳ ಕುಕ್ಕಡಿ, ಕೈಕಾಲುಗಳ ಮುಖ್ಯಧಮನಿ.

**मेंडग्ळ** (ಮೇಃಂಡಗೂಳ್) ನ. ಪರೋಪಜೀವಿ, ಪರ ಪಿಂಡಿ, ಗಿಡದ ದಡ್ಡು.

**मेढ** (ಮೇಃಢ್) ಸ್ತ್ರೀ. – ಫಾ. (ಪು) ಟಿಸಿಲುಗಂಬ, ಸಣ್ಣಕಂಬ.

**मेंढका–क्या** (ಮೇಃಂಢಕಾ–ಕ್ಯಾ) ಪು. } ಕುರುಬ,
**मेंढपाळ** (ಮೆಃಂಢಪಾಳ್) ಪು. } ಕುರಿಗಾರ, ಕುರಿಕಾಯುವವ, (ವ್ಯಂಗ್ಯ) ಸಭಾಪಾಲಕ.

**मेंढरू** (ಮೇಃಂಢರೂ) ನ. ಕುರಿ, ಉಣ್ಣೆಗುರಿ.

**मेंढवाडा** (ಮೇಃಂಢವಾಡಾ) ಪು. ಕುರಿಯ ದಡ್ಡಿ, ಕುರಿಯ ಹಿಂಡು.

**मेढकी** (ಮೇಃಢಕೀ) ಸ್ತ್ರೀ. **मेढके** (ಮೇಃಢಕೇ) ನ. ಸಣ್ಣ ಕಂಬ.

**मेढावणे** (ಮೇಃಢಾವಣೇ) ಕ್ರಿ. ಅ. ಸುತ್ತಿಕೊಳ್ಳು.

**मेढी** (ಮೇಃಢೀ) ಸ್ತ್ರೀ. '**मेढकी**' ನೋ.

**मेढेकरी** (ಮೇಃಢೇಕರೀ) ಪು. ಆಶ್ರಯಸ್ಥಾನ, ಶ್ರದ್ಧಾ ಸ್ಥಾನ, ಕಂಬ.

**मेढेजोशी** (ಮೇಃಢೇಜೋಶೀ) ಪು. ಜ್ಯೋತಿಷಿ, ದೈವ ಹೇಳುವವ, ಫಲಜ್ಯೋತಿಷಿ.

**मेंढा** (ಮೇಃಂಢಾ) ಪು. ಗಂಡುಕುರಿ, ಟಗರು.

**मेंढी** (ಮೇಂಢೀ) ಸ್ತ್ರೀ. ಹೆಣ್ಣುಕುರಿ, ಉಣ್ಣೆಯ ಹೆಣ್ಣುಕುರಿ.

**मेण** (ಮೇಣ) ನ. ಮೇಣ, ಕೊಬ್ಬು. ಜಿಡ್ಡು.

**मेणकाढणे** (ಮೇಣಕಾಢಣೇ) ಕ್ರಿ. ಸ. ಮೈಮುರಿ ಹೊಡೆ,

**एका मेण्यात दोन सुऱ्या** (ಏಕಾ ಮೇಣ್ಯಾತ್ ದೋನ್ ಸುರ್ಯಾ) ಗಾದೆಯ ಮಾತು. ಒಂದೇ ಒರೆಯಲ್ಲಿ ಎರಡು ಖಡ್ಗಗಳು, ಅಶಕ್ಯಮಾತು.

**मेणकट** (ಮೇಣಕಟ್) ವಿ. ಎಣ್ಣೆಕಮ್ಮಟು, ಎಣ್ಣೆಗ ಮಟು, ಜಿಡ್ಡು, ಎಣ್ಣೆಹೊಲಸು.

**मेणकटणे** (ಮೇಣ್‌ಕಟಣೇ) ಕ್ರಿ. ಅ. ಎಣ್ಣೆ ಕಮ್ಮಟಾಗು, ಎಣ್ಣೆಯಿಂದ ಹೊರಿಸಾಗು.

**मेणकापड** (ಮೇಣಕಾಪಡ್) ನ. ಮೇಣದಬಟ್ಟೆ, ಎಣ್ಣೆ ಬಟ್ಟೆ.

**मेणचट** (ಮೇಣಚಟ್) ವಿ. ಜಿಗುಟಾದ. ೨. ಅಗಲಾದ, ಸಪಾಟಾದ, ಸಮವಾದ, ನೆಲಸಮವಾದ, ೨. ನುಣುಪಾದ, ಮಂದ, ಖಂಡಿತವಾದ, ಜೀನ.

**मेणबत्ती** (ಮೇಣಬತ್ತೀ) ಸ್ತ್ರೀ. ಮೇಣಬತ್ತಿ.

**मेणावणे** (ಮೇಣಾವಣೇ) ಕ್ರಿ. ಅ. ಮೆತ್ತಗಾಗು, ಎಣ್ಣೆ ಪೂಸು, ಕೊಬ್ಬು ಒರಿಸು, ಕೊಬ್ಬು, ಎಣ್ಣೆಮೈಯವನಾಗು, ಲಠ್ಠನಾಗು.

**मेणा** (ಮೇಣಾ) ಪು. ಫಾ. ಮೇಣೆ, ಪಲ್ಲಕ್ಕಿ, ಡೋಲಿ, ದಂಡಿಗೆ.

**मेणेडोळे** (ಮೇಣೇಡೋಳೇ) ಪು. ಪಿಚ್ಚುಗಣ್ಣು, ಪಿಚ್ಚು ತುಂಬಿದ ಕಣ್ಣು, ಎಣ್ಣೆಗಣ್ಣು.

**मेण्या मारवाडी** (ಮೇಣ್ಯಾ ಮಾರವಾಡೀ) ಪು. ಅಸಡ್ಡಾಳ ಮನುಷ್ಯ.

**मेतकूट** (ಮೇತಕೂಟ್) ನ. ಮೆಂತೆಯಹಿಟ್ಟು, ಮೆಂತೆಯ ಮಿಶ್ರಣ ಪುಡಿ. ೨. ಸ್ನೇಹ.

**—जमणे** (—ಜಮಣೇ) ಕ್ರಿ. ಅ. ಗೆಳೆತನವಾಗು.

**मेतकूट जमणे** (ಮೇತಕೂಟ್ ಜಮಣೇ) ಕ್ರಿ. ಸರಿಹೊಂದು, ಗೆಳೆತನವಾಗು, ಸಮ್ಮತವಾಗು, ಸಹಮತವಾಗು, ಒಮ್ಮತವಾಗು.

**मेथकूट** (ಮೇಥ್‌ಕೂಟ್) ನ. **मेतकूट** ನೋ.

**मेथी** (ಮೇಥೀ) ಸ್ತ್ರೀ. ಮೆಂತೆ.

**मेद** (ಮೇದ್) ಪು. ಎಲುಬಿನಲ್ಲಿಯ ಮಜ್ಜೆ, ಎಲುಬಿನಸಾರ, ಎಲುಬಿನಸತ್ವ, ನೆಣ.

**मेंदगी** (ಮೆಂದಗೀ) ಸ್ತ್ರೀ. ಶ್ರಮ, ದಣಿವು, ಆಯಾಸ, ಕೊಬ್ಬು.

**मेंदट** (ಮೇಂದಟ್) ವಿ. ನಿರಸ, ರುಚಿಹೀನ, ಸಪ್ಪಗಿನ, ಚಪ್ಪಡೆ, ಸಪಾಟ, ನೆಲಸಮ, ನುಣುಪಾದ, ಮಂದ.

**मेंदी** (ಮೇಂದೀ) ಸ್ತ್ರೀ. ಮದರಂಗಿ, ಮೇಹಂದಿ.

**मेदिनी** (ಮೇದಿನೀ) ಸ್ತ್ರೀ. ಸಂ. ಭೂಮಿ, ಇಳೆ, ಪೃಥ್ವಿ, ಮೇದಿನಿ, ಮಣ್ಣು, ಸೃಷ್ಟಿ.

**मेंदू** (ಮೇಂದೂ) ಪು. ಮಿದುಳು.

**मेध** (ಮೇಧ) ಪು. ಸಂ. ಯಜ್ಞ, ತ್ಯಾಗ, ಹೋಮ.

**मेधा** (ಮೇಧಾ) ಸ್ತ್ರೀ. ಸಂ. ಚುರುಕುಬುದ್ಧಿ, ತೀಕ್ಷ್ಣಜ್ಞಾನ.

**मेध्य** (ಮೇಧ್ಯ) ವಿ. ಸಂ. ಯಜ್ಞಪದಾರ್ಥ, ಹವನದ ಪದಾರ್ಥ, ಪವಿತ್ರ ಪದಾರ್ಥ.

**मेमटा** (ಮೇಮಟಾ) } ಗಂಭೀರ,
**मेमुटमाऱ्या** (ಮೇಮುಟ್‌ಮಾರ್ಯಾ) ವಿ. } ಶಾಂತವಾಗಿ ಕಾಣುವ, ಬಹಿರಂಗದಲ್ಲಿ ಮರ್ಯಾದೆ ತೋರಿಸುವ, ೨. ಹೊಟ್ಟೆಕಿಚ್ಚಿನ ಮತ್ಸರವುಳ್ಳ.

**मेर** (ಮೇರ್) ಸ್ತ್ರೀ. ಕ. ಮೇರೆ, ನಾಲ್ಕು ದಿಕ್ಕುಗಳು

**मेरू** (ಮೇರು) ಪು. ಸಂ. ಮೇರು ಪರ್ವತ.

**मेला** (ಮೇಲಾ) ವಿ. ಸತ್ತವ (ಬೈಗಳು) ಸಾಯಲಿ ! (ಕೇವಲ ಹೆಣ್ಣುಮಕ್ಕಳ ಮಾತು).

**मेवा** (ಮೇವಾ) ಪು. ಫಾ. ಹಣ್ಣುಹಂಪಲ.

**मेश** (ಮೇಶ್) ಪು. ಕುರಿ. ೨. ಮೇಷರಾಶಿ.

**मीन-करणे** (ಮೀನ್-ಕರಣೇ) ಕ್ರಿ. ಅನುಮಾನಮಾಡು. ೨. ಮಿಜಿಮಿಜಿಮಾಡು.

**मेशपात्र** (ಮೇಶಪಾತ್ರ) ಪು. ದುರ್ಬಲ ಮನುಷ್ಯ, ಜಡ, ಮಂದ.

**मेष** (ಮೇಷ) ಪು. ಸಂ. ಕುರಿ, ಮೇಷ. ೨. ಮೇಷರಾಶಿ.

**मेषी** (ಮೇಷೀ) ಸ್ತ್ರೀ. ಹೆಣ್ಣುಕುರಿ.

**मेषोन्मेष** (ಮೇಷೋನ್ಮೇಷ್) ಪು. ಸಂ. ಎವೆ ಬಡೆಯುವಿಕೆ, ರೆಪ್ಪೆ ಬಡೆಯುವಿಕೆ, ರೆಪ್ಪೆ ತೆರೆಯುವಿಕೆ ಬಿಡುವಿಕೆ,

**मेस्तरी** (ಮೇಸ್ತರೀ) ಪು. ಇಂ. ಪೋ. (ಮಾಸ್ಟರ್) ಬಡಿಗ, ಪತ್ತಾರ ಇವರ ಬಗೆಗೆ ಆದರದ ಶಬ್ದ.

**मेह** (ಮೇಹ) ಮೂತ್ರರೋಗ, ಮೇಲಿಂದ ಮೇಲೆ ಮೂತ್ರ ಆಗುವಿಕೆ.

**मेहनत** (ಮೇಹನತ್) ಸ್ತ್ರೀ. ಅರ. ವ್ಯಾಯಾಮ, ಪರಿಶ್ರಮ, ದುಡಿತ, ಮಜೂರಿ, ಪರಿಶ್ರಮದ ಮೂಲ್ಯ ಕಷ್ಟ, ದಾವತಿ, ಗಾಸಿ.

**मेहनती** (ಮೇಹನತೀ) ವಿ. ಅರ. ಶ್ರಮಪಡುವವ, ಪರಿಶ್ರಮ ತಕ್ಕೊಳ್ಳುವವ.

**मेहमान–मन** (ಮೇಹಮಾನ್‌-ಮನ) ಪು. ಫಾ. ನೆಂಟ, ಬೀಗ, ಆಪ್ತ.

**मेहर** (ಮೇಹರ್) ಸ್ತ್ರೀ. (ಮೆಹೆರ್) ಪು. ಫಾ. ದಯೆ, ಅನುಗ್ರಹ, ಒಲುಮೆ, ಸಮ್ಮತಿ, ಉಪಕಾರ, ಕೃಪೆ, ಪ್ರೀತಿ.

**मेहरनजर** (ಮೇಹರ್‌ನಜರ್) ಸೀ. ಫಾ. ಕೃಪಾದೃಷ್ಟಿ ದಯಾದೃಷ್ಟಿ, ದಯಾವಲೋಕನ, ದಯಾದರ, ಅನುಕೂಲ ಭಾವ, ಇಷ್ಟಭಾವ, ಉಪಕಾರ ದೃಷ್ಟಿ, ಹಿತಕರಬುದ್ಧಿ, ಪ್ರೀತಿಯ ನೋಟ.

**मेहरबान** (ಮೇಹರಬಾನ್) ವಿ.ಫಾ. ಕೃಪಾದೃಷ್ಟಿಯ, ದಯೆಯುಳ್ಳ, ಹಿತಕರ ಬುದ್ಧಿಯ, ಪ್ರೀತಿಯ ನೋಟದ.

**मेहरबानी** (ಮೇಹರಬಾನೀ) ಸ್ತ್ರೀ. ಫಾ. ಕೃಪೆ, ದಯೆ, ಪ್ರೀತಿಯನೋಟ. '**मेहर**' ನೋ.

**मेहराब** (ಮೇಹರಾಬ್) ಸ್ತ್ರೀ. ಅರ. ಗೋಡೆಯ ಕಮಾನು. ("**महिरप**') ನೋ.

**मेहरी** (ಮೇಹರೀ) ಸ್ತ್ರೀ. ಬಧಿರ, ಮರಗಟ್ಟುರವಿಕೆ, ಜುಮ್ಮು ಹಿಡಿಯುವಿಕೆ.

**मेहूण** (ಮೇಹೂಣ್) ನ. ದಾಂಪತ್ಯ ಔತಣ, ಗಂಡ ಹೆಂಡತಿಯರನ್ನು ಊಟಕ್ಕೆ ಕರೆಯುವಿಕೆ.

**मेहुणचार** (ಮೇಹುಣಚಾರ್) ಪು. ಬೀಗನ ಆತಿಥ್ಯ.

**मेहुणा** (ಮೇಹುಣಾ) ಪು. ಹೆಂಡತಿಯ ತಮ್ಮ–ಅಣ್ಣ, ತಂಗಿಯ ಅಥವಾ ಅಕ್ಕನಗಂಡ ಬೀಗ.

**मेहुणी** (ಮೇಹುಣೀ) ಸ್ತ್ರೀ. ಹೆಂಡತಿಯ ಅಕ್ಕ–ತಂಗಿ.

**मेळ** (ಮೇಳ್) ಪು. ಸರಿಹೊಂದಿಕೆ, ತಾಳ.

**मेळा** (ಮೇಳಾ) ಪು. ಜಾತ್ರೆ ಜನರಗುಂಪು, ಸಂಘ, ಸಂಸತ್ತು.

**मेळावा** (ಮೇಳಾವಾ) ಪು. ಸಮ್ಮೇಳನ.

**मैत्र** (ಮೈತ್ರ) ಪು. ಮಿತ್ರ, ಗೆಳೆಯ, ಸ್ನೇಹಿತ, ಮಿತ್ರತ್ವದ, ಗೆಳೆತನದ.

**मैत्रकी** (ಮೈತ್ರಕೀ)
**मैत्रिकी** (ಮೈತ್ರಿಕೀ) ಸ್ತ್ರೀ. } ಗೆಳೆತನ, ಸ್ನೇಹ, ಮಿತ್ರತ್ವ, ಜೊತೆಗಾರಿಕೆ.
**मैत्री** (ಮೈತ್ರೀ)

**मैत्रीण** (ಮೈತ್ರೀಣ್) ಸ್ತ್ರೀ. ಜೊತೆಗಾರ್ತಿ, ಗೆಳತಿ, ಸಖಿ.

**मैथुन** (ಮೈಥುನ್) ನ. ಸಂ. ಮೈಥುನ, ಸಂಭೋಗ.

**मैंद** (ಮೈಂದ) ವಿ. ಭಾರವಾದ ಭಾರವುಳ್ಳ, ಮಂದ, ಕಠಿಣ, ಹೆಡ್ಡ, ಅಜ್ಞ.

**मैंदाची नगरी** (ಮೈಂದಾಚೀ ನಗರೀ) ಸ್ತ್ರೀ. ಹುಚ್ಚರ ಅಡ್ಡೆ, ಡಾಂಭಿಕರ ಸಂಘ, ಮೋಸಗಾರರ ನಗರ, ಠಕ್ಕರ ಪಟ್ಟಣ.

**मैदा** (ಮೈದಾ) ಪು. ಫಾ. ಮೈದಾ, ಗೋದಿಯ ಸಣ್ಣ ಹಿಟ್ಟು.

**मैदान** (ಮೈದಾನ್) ನ. ಫಾ. ಬಯಲು, ಬೈಲು, ಸಪಾಟಭೂಮಿ, ವಿಶಾಲ ಕ್ಷೇತ್ರ, ಸಮಭೂಮಿ.

**मैना** (ಮೈನಾ) ಸ್ತ್ರೀ. ಹಿಂ. ಮೈನಾಹಕ್ಕಿ.

**मैयत** (ಮೈಯತ್) ವಿ. ಅರ. ಸತ್ತ. ೨. ಶವ ಸಂಸ್ಕಾರ.

**मैया** (ಮೈಯಾ) ವಿ. ಅರ. ಒಂದುನೂರು.

**मैयातैन** (ಮೈಯಾತೈನ್) ವಿ. ಅರ. ಎರಡುನೂರು.

**मैल** (ಮೈಲ್) ಪು. ಹಿಂ. ಹೊಲಸು, ಮಲ, ಪುರೀಷ ೨. ಇಂ. ಮೈಲು.

**मैफल** (ಮೈಫಲ್) ಸ್ತ್ರೀ. ಅರ. ಕವಿ ಸಮ್ಮೇಲನ, ಗಾಯನಕೂಟ.

**मोईन** (ಮೋಈನ್) ವಿ. ಅರ. ಕಲ್ಪಿಸಿಕೊಟ್ಟ. (ವರ್ಷಾಶನ)

**मोकद्दमा** (ಮೊಕದ್ದಮಾ) ಪು. ಅರ. ಫಿರ್ಯಾದೆ, ದಾವೆ, ಮೊಕದ್ದಮೆ, ಖಟ್ಲೆ.

**मोकलणे मोकळणे** (ಮೋಕಲಣೇ ಮೋಕಳಣೇ) ಕ್ರಿ. ಸ. ಮುಕ್ತಮಾಡು, ಸ್ವತಂತ್ರಮಾಡು, ಉದ್ಗರಿಸು, ಚೀರಾಡು, ಘೋಷಿಸು.

**मोकळ** (ಮೋಕಳ್) ಸ್ತ್ರೀ. ಅವ್ಯವಸ್ಥಿತವಾಗಿ ಚೆಲ್ಲಿದ ವಸ್ತು. ೨. ಋಣ ತೀರಿಸುವಿಕೆ. ೩. ಶಿಥಿಲತನ.

**मोकळा** (ಮೋಕಳಾ) ವಿ. ಮುಕ್ತ, ಸ್ವತಂತ್ರ. ೨. ಖುಲ್ಲಾ. ೩. ಬಿಡುವು, ಪುರುಸತ್ತು ಇರುವ.

**मोकळा सोडणे** (ಮೋಕಳಾ ಸೋಡಣೇ) ಕ್ರಿ.ಸ. (ಗೂಳಿ) ಬಿಡು, ಬಿಡುಗಡೆಮಾಡು.

**मोकळीक** (ಮೋಕಳೀಕ) ಸ್ತ್ರೀ. ಬಿಡುಗಡೆ, ವಿಮೋಚನೆ, ಸ್ವತಂತ್ರತೆ, ಅಪ್ಪಣೆ. ೨. ಬಿಡುವು, ಪುರಸೊತ್ತು.

**मोकळी भाजी** (ಮೋಕಳೀ ಭಾಜೀ) ಸ್ತ್ರೀ. ಉಗಿ ಕೊಟ್ಟ ಪಲ್ಲೆ, ಉಗಿಯಿಂದ ಬೇಯಿಸಿದ ಪಲ್ಲೆ, ಹಿಟ್ಟು ಹಚ್ಚದ ಪಲ್ಯ.

**मोकळे रान–मैदान** (ಮೋಕಳೇ ರಾನ್–ಮೈದಾನ್) ನ. ಬೇಕಾದಷ್ಟು ಅನುಕೂಲತೆ. ೨. ತಡೆ, ಅಡ್ಡಿಗಳಿಲ್ಲದ ಸಂಧಿ.

**मोका** (ಮೋಕಾ) ಪು. ಅರ. ಸಮಯ, ಕಾಲ, ಸಂಧಿ, ಅವಕಾಶ.

**मोकाट** (ಮೋಕಾಟ್) ಕ್ರಿ.ವಿ. ಅನಿಯಂತ್ರಿತವಾಗಿ, ಹೇಳುವವರು, ಕೇಳುವವರು ಇಲ್ಲ.

**मोकाशी** (ಮೋಕಾಶೀ) ಪು. ಅರ. ಇನಾಮು ಜಮೀನಿನ ಮೂಲಕ.

**मोकासा** (ಮೋಕಾಸಾ) ಪು. ಅರ. ಜಮಾಬಂದಿ ಹಿಸ್ಸೆ, ಮಹಸೂಲ ಪಾಲು, ಜಮಾಬಂದಿ ಜೂಡಿ.

**मोख, मोक** (ಮೋಖ್, ಮೋಕ್) ಪು. ತಿಳಿಲು, ತಿಳಲು, ತಿರುಳು, ಕೊಬ್ಬರಿ, ಮೊಳಕೆ, ಚಿಗುರು, ಅಂಕುರ.

**मोखा** (ಮೋಖಾ) ಪು. ಹರೆ, ಕೋಲು.

**मोग** (ಮೊಗ್) ಪು.ಕ. ಮೊಳಕೆ, ಅಂಕುರ, ಚಿಗುರು, ಮೊಗ್ಗೆ, ಜಂತು, ಸೂಕ್ಷ್ಮ ಜೀವಾಣು.

**मोगर** (ಮೊಗರ್) ಪು. ಕೊಡತಿ, ಕಟ್ಟಿಗೆಯ ಸಣ್ಣ ಕೊಡತಿ, ಚಮ್ಮಟಿಗೆ, ಗಂಟು, ಬುಗುಟಿ, ಗುಂಡು.

**मोगरा** (ಮೊಗರಾ) ಪು. ಒಂದು ಜಾತಿಯ ಹೂವು, ಮಲ್ಲಿಗೆ ಹೂವು. ವಿ. ಹೆಡ್ಡ, ಜಡಮತಿ.

**मोगरी** (ಮೊಗರೀ) ಸ್ತ್ರೀ. ಅರಬಿಮಲ್ಲಿಗೆ ಹೂವು.

**मोगरेल** (ಮೋಗರೇಲ್) ನ. ಮಲ್ಲಿಗೆಹೂವಿನ ಎಣ್ಣೆ.

**मोगलाई** (ಮೊಗಲಾಈ) ಸ್ತ್ರೀ. ನಿಜಾಮನ ರಾಜ್ಯ. ೨. ಮುಸಲ್ಮಾನರ ರಾಜ್ಯ. ೩. ಅರಾಜಕ, ಅವ್ಯವಸ್ಥಿತ.

**मोगली एरंड** (ಮೋಗಲೀ ಏರಂಡ್) ಪು. ಕಾಡಔಡಲ ಗಿಡ.

**मोगली बेदाणा** (ಮೋಗಲೀ ಬೇದಾಣಾ) ಪು. ಒಂದು (ಒಣ) ದ್ರಾಕ್ಷಿ.

**मोगली मिरची** (ಮೋಗಲೀ ಮಿರಚೀ) ಸ್ತ್ರೀ. ಮೆಣಸಿನ ಗಿಡ.

**मोगा** (ಮೊಗಾ) ಪು. ಕ. ಮೊಗೆ, ಮಣ್ಣಿನ ಪಾತ್ರೆ.

**मोगरा** (ಮೋಗಾರಾ) ಪು. ಗಿಡದ ಮೊಳಕೆ.

**मोघ** (ಮೋಘ) ವಿ. ಸಂ. ವ್ಯರ್ಥ, ನಿರುಪಯೋಗಿ, ಕೆಲಸಕ್ಕೆ ಬಾರದ, ನಿರುಪಯುಕ್ತ, ಹುರುಳಿಲ್ಲದ, ಅತೃಪ್ತಿಕರ, ದುರಭಿಮಾನದ, ನಿಷ್ಫಲ.

**मोघणे** (ಮೋಘಣೇ) ಕ್ರಿ. ಸ. ಬಿತ್ತು, ಕಾಳುಹಾಕು, ಕೂರಿಗೆಯಿಂದ ಬಿತ್ತು.

**मोघम** (ಮೋಘಮ್) ಕ್ರಿ. ವಿ. ಅರ. (ಮುಬಹಮ್) ಸಂದಿಗ್ಧವಾಗಿ, ಸ್ಪಷ್ಟನುಡಿಯದೆ.

**मोघा** (ಮೋಘಾ) ಪು. ಕ. ಮಣ್ಣಿನ ಮೊಗೆ, ಒಂದು ಪ್ರಕಾರದ ತಂಬಿಗೆ, ದೊಡ್ಡ ಹೂಜೆ, ಕೂಜೆ, ಬಿಂದಿಗೆ.

**मोचरू** (ಮೋಚರೂ) ವಿ. ಸ್ವತಂತ್ರಮಾಡುವವ, ಬಿಡಿಸುವವ, ಬಂಧಮುಕ್ತಮಾಡುವವ.

**मोचणे** (ಮೋಚಣೇ) ಕ್ರಿ. ಸ. ಸ್ವತಂತ್ರಮಾಡು, ಬಿಡಿಸು, ಬಂಧಮುಕ್ತಮಾಡು.

**मोचन** (ಮೋಚನ್) ನ. ಸಂ. ಸ್ವಾತಂತ್ರ್ಯ, ಬಿಡುಗಡೆ, ವಿಮೋಚನೆ, ಮುಕ್ತಿ, ಮುಕ್ತಾಯ ಮಾಡುವಿಕೆ.

**मोचरस** (ಮೋಚರಸ್) ಪು. ಅತ್ತಿ, ಆಲ, ಮುಂ. ಗಳ ರಸ.

**मोचा** (ಮೋಚಾ) ಪು. ಹಿಂ. ಮೊಚ್ಚೆ, ಕಾಲಮರಿಗೆ, ಪಾಪೋಸು.

**मोची** (ಮೋಚೀ) ಪು.ಹಿಂ. ಚರ್ಮಕಾರ, ಮೊಚ್ಚೆಗಾರ, ಸಮಗಾರ.

**मोचित** (ಮೋಚಿತ) ವಿ. ಸಂ. ಬಿಡುಗಡೆಮಾಡಿದ.

**मोज** (ಮೋಜ) ನ. ಅಳತೆ, ಅಳೆಯುವಿಕೆ, ಎಣಿಸುವಿಕೆ, ಎಣಿಕೆ.

**मोजका** (ಮೋಜಕಾ) ವಿ. ಮಿತ, ಅಲ್ಪಸ್ವಲ್ಪ.

**मोजणी** (ಮೋಜಣೀ) ಸ್ತ್ರೀ. ಅಳತೆ, ಅಳೆಯುವಿಕೆ, ಭೂಮಿಯ ಅಳತೆ.

**मोजणीदार** (ಮೋಜಣೀದಾರ್) ಪು. ಭೂಮಿಯ ಅಳತೆಮಾಡುವವನು, ಪೈಮಾಷಿದಾರ.

**मोजणे** (ಮೋಜಣೇ) ಕ್ರಿ. ಅಳೆ, ಎಣಿಸು, ಪ್ರಶಂಸಿಸು, ಗಣನೆಮಾಡು, ಸನ್ಮಾನ್ಯನೆಂದು ತಿಳಿ.

**मोजदात–द** (ಮೋಜದಾತ್–ದ್) ಸ್ತ್ರೀ. }
**मोजदास्त** (ಮೋಜದಾಸ್ತ್) } **'मोजणी'** ನೋ.

**मोजीव** (ಮೋಜೀವ) ವಿ. **'मोजका'** ನೋ.

**मोजा** (ಮೋಜಾ) ಪು. ಕೈಚೀಲು, ಕೈಗವಸು, ಹಸ್ತಾಚ್ಛಲ.

**मोजेबंद** (ಮೋಜೇಬಂದ್) ಕಾಲುಚೀಲು ಕಟ್ಟುವ ದಾರ–ನಾಡಿ.

**मोट** (ಮೋಟ್) ಸ್ತ್ರೀ. ಮೊಟ್ಟೆ, ನೀರಿನ ಮೊಟ್ಟೆ, ಯಾತ, ಒಜ್ಜೆ, ಭಾರ.

**मोटबांधणे** (ಮೋಟ್‌ಬಾಂಧಣೇ) ಕಸುವಿನಿಂದ ಕಟ್ಟು, ಯಾತಹೊಡೆ, ಮೊಟ್ಟೆಕಟ್ಟು.

**राजाभिषेक** (ರಾಜಾಭಿಷೇಕ್) ಪು. ಪಟ್ಟಾಭಿಷೇಕ, ಸಿಂಹಾಸನಾರೋಹಣ. **राज्याभिषेक** ನೋ.

**राजावर्त** (ರಾಜಾವರ್ತ) ಪು. ಕಡಿಯ ರತ್ನ, ಕಡಿಮೆ ಬೆಲೆಯ ರತ್ನ.

**राजासन** (ರಾಜಾಸನ) ನ. ಸಂ. ಸಿಂಹಾಸನ.

**राजाज्ञा** (ರಾಜಾಜ್ಞಾ) ಸ್ತ್ರೀ. ಸಂ. ಅರಸನ ಅಪ್ಪಣೆ, ಅರಸನ ಹುಕುಮು.

**राजी** (ರಾಜೀ) ವಿ. ಅರ. ಅನುಕೂಲ, ಒಪ್ಪುವ, ಅನುಮತಿಸುವ.

**राजीखुषी** (ರಾಜೀಖುಷೀ) ಸ್ತ್ರೀ. ಫಾ. ಸಂಪೂರ್ಣ ಅನುಮತಿ, ಒಪ್ಪಿಗೆ.

**राजीनामा** (ರಾಜೀನಾಮಾ) ಪು. ಫಾ. ತ್ಯಾಗಪತ್ರ, ಸೇವಾತ್ಯಾಗಪತ್ರ, ಕೆಲಸಬಿಟ್ಟ ಓಲೆ.

**राजीरजावंतीने** (ರಾಜೀರಜಾವಂತೀನೇ) ಕ್ರಿ. ವಿ. ಸಂಪೂರ್ಣ ಒಪ್ಪಿಗೆಕೊಟ್ಟು, ಮಾನ್ಯಮಾಡಿ.

**राजीव** (ರಾಜೀವ) ಪು. ಸಂ. ಕಮಲ.

**राजीव नयन नेत्र–लोचन–अक्ष** (ರಾಜೀವ ನಯನ–ನೇತ್ರ–ಲೋಚನ–ಅಕ್ಷ) ಪು. ಸಂ. ಸುಂದರ.

**राजेंद्र** (ರಾಜೇಂದ್ರ) ಪು. ರಾಜಶ್ರೇಷ್ಠ, ರಾಯಶ್ರೇಷ್ಠ, ರಾಜಾಧಿರಾಜ. 'राजराज' ನೋ.

**राजे राजवाडे** (ರಾಜೇ ರಾಜವಾಡೇ) ಅರಸರು, ಸರದಾರರು ಮುಂತಾದವರು.

**राजेश्री** (ರಾಜೇಶ್ರೀ) 'राजश्री' ನೋ.

**राजेळे** (ರಾಜೇಳೇ) ನ. ಬಾಳೆಯ ಹಣ್ಣಿನ ಒಂದು ಜಾತಿ.

**राज्य** (ರಾಜ್ಯ) ನ. ಸಂ. ರಾಜ್ಯ, ಆಳುವಿಕೆ, ಸರಕಾರ, ಗವ್ಹರ್ನಮೆಂಟ, ಸಂಸ್ಥಾನ, ಆಡಳಿತೆ.

**राज्य कारभार** (ರಾಜ್ಯ ಕಾರಭಾರ) }ಪು. ಸಂ. ಆಡಳಿತ, ರಾಜ್ಯ ನಡೆಯಿಸುವಿಕೆ, ಆಳುವಿಕೆ.
**राज्यभार** (ರಾಜ್ಯಭಾರ) ಪು. ಸಂ. }

**राज्याभिलाष** (ರಾಜ್ಯಾಭಿಲಾಷ) ಪು. ರಾಜ್ಯದ ಅಭಿಲಾಷೆ, ರಾಜ್ಯಾಕಾಂಕ್ಷೆ, ರಾಜ್ಯಬೆಳೆಯಿಸುವ ಆಸೆ, ಪರರಾಜ್ಯದ ಆಸೆ.

**राज्याभिषेक** (ರಾಜ್ಯಾಭಿಷೇಕ) ಪು. ಸಂ. ಪಟ್ಟಾಭಿಷೇಕ, ಸಿಂಹಾಸನಾರೋಹಣ, ಗದ್ದುಗೆ ಏರುವಿಕೆ, ರಾಯಗದ್ದುಗೆ ಏರುವಿಕೆ, ರಾಜ್ಯಾಧಿಕಾರ ಪಡೆಯುವಿಕೆ.

**राठ** (ರಾಠ್) ವಿ. ಹುರು–ಬುರುಕು, ಥರಕಲು, ದೋರಗು, ಒರಟಾದ, ಕರ್ಕಶ.

**राड** (ರಾಡ್) ಸ್ತ್ರೀ. ಕ. ರಾಡಿ, ಕೆಸರು, ಅರಲು, ಹೋಳಿಯ ಬೂದಿ, ಹೊಲಸು ನೀರು, ಹುದುಲು.

**राडा** (ರಾಡಾ) ಪು. ಕಾರ್ಯ ಬಾಹುಲ್ಯ, ಕೆಲಸದ ರಾಶಿ.

**रांड** (ರಾಂಡ್) ವಿ. ೧. ಸೂಳೆ. ೨. ವಿಧವೆ.

**रांडपोरे** (ರಾಂಡಪೋರೇ) ನ. ವಿಧವೆ ಮತ್ತು ಆಕೆಯ ಮಕ್ಕಳು.

**राणवसा** (ರಾಣವಸಾ) ಪು. ಅರಸನ ಗರಡಿಮನೆ.

**राणा** (ರಾಣಾ) ಪು. ರಾಜ, ರಾಯ, ಒಡೆಯ, ಮುಖ್ಯಸ್ಥ, ನೇತಾ.

**राणी** (ರಾಣೀ) ಸ್ತ್ರೀ. ರಾಣಿ, ರಾಜನ ಹೆಂಡತಿ, ಅರಸಿ.

**रात** (ರಾತ) ಸ್ತ್ರೀ. ರಾತ್ರಿ, ಇರುಳು, ಒಂದು ಜಾತಿಯ ೨. ಹುಳ. ೩. ಕಣ್ಣಿನ ಕೆಂಪುತನ.

**रातड** (ರಾತಡ್) ವಿ. ಸಾದಗೆಂಪು.

**रातवा** (ರಾತವಾ) ಕ್ರಿ. ವಿ. ಇಡೀರಾತ್ರಿ, ಪೂರಾ ಇರುಳು.

**राता** (ರಾತಾ) ವಿ. ಸಾದಗೆಂಪು, ತಾಮ್ರವರ್ಣದ, ಒಂದು ಪ್ರಕಾರದ ಅಕ್ಕಿ.

**रातंबा** ರಾತಂಬಾ) ಪು. ಒಂದು ಜಾತಿಯ ಗಿಡದ ಫಲ, ರಾತಂಬಿ ಫಲ.

**रातांधळा** (ರಾತಾಂಧಳಾ) ವಿ. ರಾತ್ರಿಯಲ್ಲಿ ಕಣ್ಣು ಕಾಣದವ.

**रातांधळे** (ರಾತಾಂಧಳೇ) ನ. ಇರುಳು ಗರುಡುತನ, ರಾತ್ರಿ ಕಣ್ಣು ಕಾಣದಿರುವಿಕೆ.

**रातावणे** (ರಾತಾವಣೇ) ಸ. ರಾತ್ರಿ ಸಮೀಪಿಸು, ಇರುಳು ಆರಂಭವಾಗು, ಮೂರೂಸಂಜೆಯಾಗು.

**रातोरात** (ರಾತೋರಾತ್) ಕ್ರಿ. ವಿ. ಅದೇ ರಾತ್ರಿ, ರಾತ್ರಿಯಲ್ಲಿಯೇ, ಇರುಳಿರುಳಿನಲ್ಲಿ.

**रात्र–त्री** (ರಾತ್ರ–ತ್ರಿ) ಸ್ತ್ರೀ. ಇರುಳು, ರಾತ್ರಿ.

**रात्रवैऱ्याची** (ರಾತ್ರವೈರ್ಯಾಚೀ) ಸ್ತ್ರೀ. (ಗಾದೆಯ ಮಾತು) ಸಂಕಟದ ರಾತ್ರಿ.

**रात्रकिडा** (ರಾತ್ರಕಿಡಾ) ಪು. ಒಂದು ಜಾತಿಯ ಹುಳ.

**रात्रंदिवस** (ರಾತ್ರಂದಿವಸ) ಕ್ರಿ. ವಿ. ಹಗಲಿರುಳು, ಯಾವಾಗಲೂ.

**रात्रौ** (ರಾತ್ರೌ) ಕ್ರಿ. ವಿ. ಸಂ. ರಾತ್ರಿಯಲ್ಲಿ, ಇರುಳಿನಲ್ಲಿ, ಕತ್ತಲೆಯಲ್ಲಿ.

**रांधण** (ರಾಂಧಣ) ನ. ರೊಟ್ಟಿಯ ಹಂಚು, ತವೆ, ಉಕ್ಕೇರುವಿಕೆ, ತಳಮಳಿಕೆ, ತಳಮಳಿಸುವಿಕೆ.

**रांधणे** (ರಾಂಧಣೇ) ಕ್ರಿ. ಸ. ಕುದಿಸು, ಅಡಿಗೆಮಾಡು, ಉಕ್ಕೇರಿಸು, ಬೇಯಿಸು, ತಳಮಳಿಸು.

**रांधप** (ರಾಂಧಪ) ನ. ಕುದಿಸುವಪದಾರ್ಥ, ಅನ್ನ, ಪಲ್ಲೆ.

रांधपी (ರಾಂಧಪೀ) ಪು. ಅಡಿಗೆಯವ, ಸೂದ, ಬಲ್ಲವ, ಬಾಣಸಿಗ.

रांधा (ರಾಂಧಾ) ಪು. ಅಡಿಗೆ, ಅರೆದ ಮುದ್ದೆ.

राधा (ರಾಧಾ) ಸ್ತ್ರೀ. ನೃತ್ಯಗಾರತಿ, ನರ್ತಕಿ, ನರ್ತಕಿ ವೇಷಧಾರಿಣಿ.

रान (ರಾನ) ನ. ಅಡವಿ, ಕಾಡು, ಅರಣ್ಯ, ಹಾಳು ಅಡವಿ, ಹಾಳು ನೆಲ, ನಟು, ನಿರುಪಯೋಗಿ ನೆಲ, ಕಳೆ, ಅಲಬು, ಕಸ.

रानडुकर (ರಾನಡುಕರ್) ನ. ಕಾಡಹಂದಿ.

रानमांजर (ರಾನಮಾಂಜರ) ನ. ಅಡವಿಬೆಕ್ಕು, ಕಾಡ ಬೆಕ್ಕು.

रान खवळणे (ರಾನ ಖಳವಣೇ) ಕ್ರಿ. ಅ. ಕ್ಷೋಭಿಸು, ರೇಗಿಗೇಳು.

रानात पडणे (ರಾನಾತ್ ಪಡಣೇ) ಕ್ರಿ. ಅ. ಒಬ್ಬಂಟಿಗನಾಗು, ಅಡವೀ ಬೀಳು, ದಿಕ್ಕಿಲ್ಲದಂತಾಗು, ಏಕಾಕಿಯಾಗು.

रिकाम्या रानीं (ರಿಕಾಮ್ಯಾರಾನೀ) ಕ್ರಿ. ವಿ. ಲಾಭವಿಲ್ಲದ ಉದ್ಯೋಗದಲ್ಲಿ, ವ್ಯರ್ಥ ಪರಿಶ್ರಮದಲ್ಲಿ.

रानात शिरणे (ರಾನಾಂತ್ ಶಿರಣೇ) ಕ್ರಿ. ಅ. ಅಡವಿಯಲ್ಲಿ ಸೇರು, ಅಡವಿಯಲ್ಲಿ ಸುತ್ತಾಡು, ಅಲೆದಾಡು, ಅಡವಿ ಬೀಳು.

रानक(ग)ट (ರಾನಕ(ಗ)ಟ) ವಿ. ಮರ್ಯಾದೆಯಿಲ್ಲದ, ಅನಾಗರಿಕ, ಅಸಂಸ್ಕೃತ, ಹಳ್ಳಿಗ.

रानजेवण (ರಾನಜೇವಣ) ನ. ಸಂ. ವನಭೋಜನ.

रानभाजी (ರಾನಬಾಜೀ) ಸ್ತ್ರೀ. ಅಡವಿಪಲ್ಲೆ, ತನ್ನಿಂದ ತಾನೆ ನಾಟದ ಪಲ್ಲೆ.

रानमाणूस (ರಾನ್‌ಮಾಣೂಸ್) ನ. ಅಡವಿಯ ಮನುಷ್ಯ, ಕಾಡಮನುಷ್ಯ, ಅಸಂಸ್ಕೃತ ಮನುಷ್ಯ.

रानशेण – णी (ರಾನಶೇಣ – ಣೀ) ಕಾಡಕುಳ್ಳು, ಕಾಕುಳ್ಳು, ಅಡವಿ ಸಗಣೆ, ಕಾಡಸಗಣೆ.

रानोमाळ (ರಾನೋಮಾಳ್) ಕ್ರಿ. ವಿ. ಗುಡ್ಡ–ಬೈಲಿನಲ್ಲಿ, ಅಡವಿಯಲ್ಲಿ, ಬೈಲಿನಲ್ಲಿ.

रानोरान (ರಾನೋರಾನ್) ಕ್ರಿ. ವಿ. ಗುಡ್ಡ ಗುಡ್ಡಗಳಲ್ಲಿ, ಅಡವಿಯಲ್ಲಿ.

राप (ರಾಪ್) ಪು. ಸಂಕೋಚ, ಸ್ತಂಭಕ, ಔಷಧ.

रापणी (ರಾಪಣೀ) ಸ್ತ್ರೀ. ಭಾವನೆ, ಮನಸ್ಸು, ಒತ್ತಾಯ, ಆಗ್ರಹ, ಬಲುಮೆ, ಒತ್ತಾಯ ಹಾಕುವಿಕೆ, ಒತ್ತಾಯ ಪಡಿಸುವಿಕೆ.

रापणे (ರಾಪಣೇ) ಕಿ- ಅ. ಒಳಹೋಗು, ಒಳಗೆ ಹೋಗು, ಶ್ರಮಪಡು, ಮಿತಿಮೀರಿದುಡಿ, ತಡಕಾಡು, ಕತ್ತಲೆಯಲ್ಲಿ ಹುಡುಕು, ಹಿಂಡು, ಬಿಗಿಸು, ಅನಿಸು.

रापी (ರಾಪೀ) ಸ್ತ್ರೀ. ಫಾ. ಚರ್ಮಕಾರರ ಸಾಧನ, ಥಪ್ಪಿ, ರಂಪಿಗೆ.

राब (ರಾಬ್) ಸ್ತ್ರೀ. ದುಡಿತ, ಶ್ರಮ, ಪರಿಶ್ರಮ. ೨. ಬಿಸಿ ತಿಳಿವು ಬೆಲ್ಲ. ೩. ಹೋಗಿಬರುವಿಕೆ, ವಾಡಿಕೆ.

राबड (ರಾಬಡ್) ಸ್ತ್ರೀ. ದುಡಿತ, ಶ್ರಮ, ಪರಿಶ್ರಮ.

राबडणे (ರಾಬಡಣೇ) ಕ್ರಿ. ಸ. ದುಡಿ, ಶ್ರಮಪಡು, ಪರಿಶ್ರಮಮಾಡು.

राबणावळ (ರಾಬಣಾವಳ್) ಸ್ತ್ರೀ. ದುಡಿತದ ಕೂಲಿ, ಪರಿಶ್ರಮದ ಪ್ರತಿಫಲ, ಪಶುವನ್ನು ಸಾದು ಮಾಡುವ ಕೂಲಿ.

राबणी (ರಾಬಣೀ) } ಸ್ತ್ರೀ. { ಪರಿಶ್ರಮ ಪಡುವಿಕೆ,
राबणूक ರಾಬಣೂಕ್) } ಸ್ತ್ರೀ. { ದುಡಿಯುವಿಕೆ.

राबणे (ರಾಬಣೇ) ಕ್ರಿ. ಸ. ಕೆಲಸಮಾಡು, ದುಡಿ, ಪರಿಶ್ರಮಪಡು, ಉಳು, ನೇಗಿಲಹೊಡೆ, ಕೃಷಿಮಾಡು.

राबता (ರಾಬತಾ) ಪು. ಅರ. ಸಂಬಂಧ, ಸಂಪರ್ಕ. ದಿನಾಲು ಪೂರೈಸುವ ಸರಕು.

राम (ರಾಮ) ಪು. ಸಂ. ರಾಮ, ದೇವರ ಹೆಸರು, ವಿಷ್ಣುವಿನ ಅವತಾರ. ೨. ಶಕ್ತಿ, ಬಲ, ಆವೇಶ, ಸ್ವಾರಸ್ಯ.

रामटोला (ರಾಮಟೋಲಾ) ಪು. ಸಂ. ಜೋರಿನ ಹೊಡೆತ, ರಭಸದ ಪೆಟ್ಟು, ರಭಸದ ಏಟು.

रामदास (ರಾಮದಾಸ್) ಪು. ರಾಮದಾಸ ಸ್ವಾಮಿ.

रामनवमी (ರಾಮನವಮೀ) ಸ್ತ್ರೀ. ಶ್ರೀರಾಮನ ಹುಟ್ಟಿದ ದಿನ, ಚೈತ್ರಶುದ್ಧ ನವಮಿ.

रामपहारा (ರಾಮಪಹಾರಾ) ಪು. ಬೆಳಗಿನ ಜಾವ, ಮಂಗಲ ಸಮಯ.

रामपात्र (ರಾಮಪಾತ್ರ) ನೀರು ಕುಡಿಯುವ ವಿಶಿಷ್ಟ ಪಾತ್ರೆ.

रामफळ (ರಾಮಫಳ್) ನ. ಒಂದು ಜಾತಿಯಹಣ್ಣು, ರಾಮಫಲ, ರಾಮಫಲ ಗಿಡ.

रामबाण (ರಾಮಬಾಣ್) ಪು. ಸಂ. ರಾಮನಬಾಣ, ೨. ಖಂಡಿತ ಉಪಾಯ, ತಪ್ಪದಂತಹ ಉಪಾಯ, ಪ್ರಮಾದಾತೀತ ಉಪಾಯ.

राम म्हणणे (ರಾಮಮ್ಹಣಣೇ) ಕ್ರಿ. ಅ. ಪ್ರಾಣಬಿಡು.

रामारगाडा (ರಾಮಾರಗಾಡಾ) ಪು. ಕೆಲಸದ ಭಾರ, ತೊಂದರೆ, ಕಷ್ಟ.

**रामरक्षा** (ರಾಮರಕ್ಷಾ) ಸ್ತ್ರೀ. ಸಂ. ಶ್ರೀರಾಮ ಚಂದ್ರನ ಸ್ತೋತ್ರ, ರಾಮರಕ್ಷೆ.

**रामराम** (ರಾಮರಾಮ) (ಉದ್ಗಾರ) ನಮಸ್ಕಾರ, ರಾಮರಾಮ. ೨. ಸಾಕಾಯಿತು. ೩. ಪು. ಬೀಳ್ಕೊಡುವಿಕೆ.

**रामा** (ರಾಮಾ) ಪು. (ಮುಂಬಯಿಯಲ್ಲಿ) ಮನೆಯ ಆಳು.

**रामानुज** (ರಾಮಾನುಜ) ಪು. ಲಕ್ಷ್ಮಣ. ೨. ಪ್ರಸಿದ್ಧ ಸುಧಾರಕರು, ವೈಷ್ಣವಮತ ಸಂಪ್ರದಾಯ, ರಾಮಾನುಜ ಸ್ವಾಮಿ.

**रामायण** (ರಾಮಾಯಣ) ಪು. ರಾಮಾಯಣ, ರಾಮಚರಿತ್ರೆ, ವಾಲ್ಮೀಕಿ ಮಹರ್ಷಿಕೃತ ಮಹಾ ಕಾವ್ಯ. ೨. ದುರ್ದೈವಿ ಜೀವನ, ಜೀವನದ ಗಂಡಾಂತರ.

**रामोशी** (ರಾಮೋಶೀ) ಪು. ಬೇಡರಂತಹ ಒಂದು ಜಾತಿ, ಕಳುವು ಮಾಡುವವರ ಒಂದು ಜಾತಿ, ಕನ್ನ ಹಾಕುವವರು.

**राय** (ರಾಯ) ಪು. ರಾಜ, ಅರಸು, ಗೌರವದ ಪದವಿ.

**रायआवळा** (ರಾಯಆವಳಾ) ಪು. ರಾಯ ನೆಲ್ಲಿ ಕಾಯಿ, ಒಂದು ನೆಲ್ಲಿಯ ಪ್ರಕಾರ, ಆ ಜಾತಿಯ ಗಿಡ.

**रायते** (ರಾಯತೇ) ನ. ಭರ್ತ, ಭಜ್ಜಿ, ರಾಯತ.

**रायभोग** (ರಾಯಭೋಗ) ಪು. ಅರಸನ ಬೆಡಗು, ವಿಲಾಸ, ಒಂದು ಜಾತಿಯ ಅಕ್ಕಿ.

**रायवळ** (ರಾಯವಳ್) ಫಾ. ಸರ್ವ ಸಾಧಾರಣ, ಸಾಮಾನ್ಯ, ಮಾವಿನ ಒಂದು ಜಾತಿ.

**राव** (ರಾವ್) ಪು. ಗೌರವದ ಪದವಿ, ಹಲವು ಕುಟುಂಬಗಳ ಗುಂಪು, '**राय**' ನೋ.

**रावकी** (ರಾವಕೀ) ಸ್ತ್ರೀ. ರಾಯನ ಪದವಿ, ರಾವ ಜಾತಿಯ ಹಕ್ಕು–ಬಾಧ್ಯತೆ.

**रावखंडा** (ರಾವಖಂಡಾ) } ಪು. { ಹರಳತುಟಿ,
**रावखंडे** (ರಾವಖಂಡೇ) } { ಸೀಳಿದ ತುಟಿ, ಬಿರಿದ ತುಟಿ.

**रावजी** (ರಾವಜೀ) ಪು. ಪತಿಗಾಗಿ ಮರ್ಯಾದೆ ಕೊಡುವ ಶಬ್ದ, ರಾವಜಿ, ರಾಯರು. '**राजश्री**' ನೋ.

**रावटी** (ರಾವಟೀ) ಸ್ತ್ರೀ. ಸಣ್ಣಡೇರೆ, ತಂಬು, ಶಿಬಿರ, ಬಿಡಾರ, ಪಟಗೃಹ, ರಾಹುಟಿ.

**रावण** (ರಾವಣ) ಪು. ರಾವಣ, ಲಂಕೆಯ ಅರಸು, ರಾಮನ ಎದುರಾಳಿ, ವಿರಾಟ ಮನುಷ್ಯ ಅಜಸ್ರ ಅಸಡ್ಡೆಯ ಮನುಷ್ಯ.

**रावण माजणे** (ರಾವಣ ಮಾಜಣೇ) ಕ್ರಿ. ಅ. ಸೊಕ್ಕಿಗೆ ಬರು, ಮದವೇರು, ಗರ್ವಿಷ್ಠನಾಗು, ಅಹಂಕಾರ ಬರು, ಉದ್ಧತನಾಗು.

**रावणराज्य** (ರಾವಣರಾಜ್ಯ) ನ. ಸಂ. ರಾವಣ ರಾಜ್ಯ, ಅಶಾಂತಿರಾಜ್ಯ, ಅವ್ಯವಸ್ಥಿತ ಆಡಳಿತೆ ಭಯಂಕರ ದಬ್ಬಾಳಿಕೆ, ಅವಿವೇಕದ ರಾಜ್ಯಭಾರ.

**रावणवेळा** (ರಾವಣವೇಳಾ) ಸ್ತ್ರೀ. ಯುದ್ಧತಿಥಿ, ಜಗಳಾಟದ ವೇಳೆ, ಯುದ್ಧ ಪ್ರಾರಂಭ ಮುಹೂರ್ತ, ಕಾಳಗದ ವೇಳೆ.

**रावणाचा लेक** (ರಾವಣಾಚಾ ಲೇಕ್) ಪು. ಸಂ. ರಾವಣನ ಮಗ, ಜಂಭಗಾರ, ಬಡಾಯ ಬಡಕ, ಬಾಯ್ಬಡಕರ ಆತ್ಮ ಪ್ರಾಥಿಮೆಯವ.

**रावणी** (ರಾವಣೀ) ಸ್ತ್ರೀ. ಚರ್ಮ ಹದಮಾಡುವ ಕುಂಡ, ತೊಗಲ ಬಾನಿ.

**रावरंक** (ರಾವರಂಕ್) ದ್ವಂದ್ವ ಒಡೆಯ–ಬಡವ, ಒಡೆಯ–ಆಳು.

**रावा** (ರಾವಾ) ಪು. ಗಿಣಿ, ಗಿಳಿ, ಶುಕ, ಅರ್ಥ ತಿಳಿಯದೆ ಅನುಸರಿಸುವವ, ಕಿರಿದುಟಿಯಿದ್ದ, ಕಿರಿದುಟಿಗನಾದ.

**राशि** (ರಾಶಿ) ಸ್ತ್ರೀ. ಸಂ. ರಾಶಿ, ಗುಂಪು, ಸಮೂಹ, ಜ್ಯೋತಿಷ್ಯಶಾಸ್ತ್ರದ ಒಂದು ರಾಶಿ, ರಕಮು.

**राशिचक्र** (ರಾಶಿಚಕ್ರ) ನ. ಸಂ. ರಾಶಿ ಮಂಡಲ.

**राशी** (ರಾಶೀ) ವಿ. ಸರ್ವಸಾಮಾನ್ಯವಾದ, ಸಾಧಾರಣ, ಮಧ್ಯಮತರಗತಿಯ.

**राष्ट्र** (ರಾಷ್ಟ್ರ) ನ. ಸಂ. ದೇಶ, ದೊಡ್ಡದೇಶ, ರಾಜ್ಯ, ಜನಸಮ್ಮರ್ಥ.

**रास** (ರಾಸ್) ಸ್ತ್ರೀ. '**राशि**' ನೋ.

**रासक्रीडा** (ರಾಸಕ್ರೀಡಾ) ಸ್ತ್ರೀ. ಕೃಷ್ಣನಾಡಿದ ಆಟ, ಕುಣಿತ.

**रासभ** (ರಾಸಭ) ಪು. ಸಂ. ಗಂಡುಕತ್ತೆ.

**रासभी** (ರಾಸಭೀ) ಸ್ತ್ರೀ. ಸಂ. ಹೆಣ್ಣುಕತ್ತೆ.

**रासमाथा** (ರಾಸಮಾಥಾ) ಪು. ಸುಗ್ಗಿಯಾದ ಹೊಲ.

**रासवट** (ರಾಸವಟ್) ವಿ. ಗುಂಪಾದ, ಸಮೂಹದ.

**रास्त** (ರಾಸ್ತ) ವಿ. ಫಾ. ಯೋಗ್ಯ, ತಕ್ಕ, ಒಪ್ಪತಕ್ಕ, ಪ್ರಾಮಾಣಿಕ, ನ್ಯಾಯ, ಸರಿಯಾದ, ಸಮ, ಸತ್ಯ, ಖರೆ, ಯೋಗ್ಯವಾಗಿ, ತಕ್ಕಂತೆ, ನ್ಯಾಯವಾಗಿ, ನಿಜವಾಗಿ, ಸತ್ಯವಾಗಿ.

**रास्ता** (ರಾಸ್ತಾ) ಪು. ಫಾ. ಒಂದು ಪ್ರಕಾರದ ಸೀರೆ, ರಾಸ್ತಾ.

**राहणे** (ರಾಹಣೇ) ಕ್ರಿ. ಅ. ಇರು, ನಿಲ್ಲು, ವಸತಿ ಮಾಡು, ಮುಂದೆಸಾಗು, ನಿಗ್ರಹಿಸು, ಬಿಗಿಹಿಡಿ, ತಡೆ.

**राहून** (ರಾಹೂನ್) ಕ್ರಿ. ವಿ. ನಿಂತು, ವಾಸಿಸಿ, ಮುಂದೆಸಾಗಿ, ತಡೆದು.

**राहून राहून** (ರಾಹೂನ್ ರಾಹೂನ್) ಕ್ರಿ. ವಿ. ಮೇಲಿಂದ–ಮೇಲೆ, ಆಗಾಗ್ಗೆ. ೨. ನಡು–ನಡುವೆ. ೩. ಏನೆಂದರೂ.

**राहू** (ರಾಹು) ಪು. ನವಗ್ರಹಗಳಲ್ಲಿ ಒಂದು ಗ್ರಹ, ದೈತ್ಯ. ೨. ಗಂಟು, ಗಿಣ್ಣು. ೩. ಭೇದನ ಬಿಂದು, ಅಸ್ಥಿಗುಲ್ಮ.

**राहुग्रास** (ರಾಹುಗ್ರಾಸ) ಪು. ಸಂ. ಗ್ರಹಣ, ರಾಹುಗ್ರಹಣ.

**राहुटी** (ರಾಹುಟೀ) ಸ್ತ್ರೀ. }
**राहोटी** (ರಾಹೋಟೀ) ಸ್ತ್ರೀ. } 'रावटि' ನೋ.

**राळ** (ರಾಳ್) ಪು. ರಾಳ, ಗುಗ್ಗುಳಜಾತಿ, ಕೆಟ್ಟಸ್ಥಿತಿ, ಕ್ಷುದ್ರಕೀಟಕ, ಬೆಳ್ಳಿ–ಬಂಗಾರಗಳ ಗಟ್ಟಿ, ಪಾಳ.

**राळा** (ರಾಳಾ) ಪು. ನವಣೆ, ನವಣಕ್ಕಿ.

**राक्षस** (ರಾಕ್ಷಸ) ಪು. ರಾಕ್ಷಸ, ಭಯಂಕರ ಮನುಷ್ಯ, ದೈತ್ಯ, ದಾಂಡಿಗ, ಪಿಶಾಚಿ, ಭೂತ.

**राक्षसवेळ** (ರಾಕ್ಷಸವೇಳ್) ಸ್ತ್ರೀ. ಸಂಧಿಕಾಲ, ಸಂಧ್ಯಾಕಾಲ.

**राक्षसी** (ರಾಕ್ಷಸೀ) ಸ್ತ್ರೀ. ರಕ್ಕಸಿ. ೨. ವಿ. ದೈತ್ಯ ಸಂಬಂಧದ, ಕ್ರೂರವಾದ, ಮಿತಿಮೀರಿದ, ಪ್ರಚಂಡ, ಧೈರ್ಯವುಳ್ಳ, ಸಾಹಸಿ, ಉದ್ದಂಡ.

**राक्षसी-शी–ण** (ರಾಕ್ಷಸೀ–ಶೀ–ಣ್) ಸ್ತ್ರೀ. ರಕ್ಕಸಿ, ಹೆಣ್ಣು ರಾಕ್ಷಸ.

**राक्षसी उपाय** (ರಾಕ್ಷಸೀ ಉಪಾಯ) ಪು. ತೀವ್ರ ಉಪಾಯ, ಉಗ್ರೋಪಾಯ, ಭಯಾನಕ, ಉಪಚಾರ.

**राक्षसी उपचार** (ರಾಕ್ಷಸೀ ಉಪಚಾರ) ಪು. ಭಯಾನಕ ಔಷಧ.

**राक्षसीहाड** (ರಾಕ್ಷಸೀಹಾಡ್) ಪು. ಗಟ್ಟಿಎಲುಬು, ಬಿರುಸುದೇಹ, ಗಟ್ಟಿ ಶರೀರಯಷ್ಟಿ.

**राज्ञी** (ರಾಜ್ಞೀ) ಸ್ತ್ರೀ. ರಾಣಿ, ಅರಸಿ, ಅರಸನಹೆಂಡತಿ.

**रिक(का)बी** (ರಿಕ್(ಕಾ)ಬೀ) ಸ್ತ್ರೀ. ಅರ. ರಿಕಾಪು, ಅಂಗವಡಿ.

**रिकामका** (ರಿಕಾಮಕಾ) ವಿ. ಬರಿಯ ಜೊಳ್ಳು, ಖಾಲಿ, ಹುರುಳಿಲ್ಲದ, ನಿರರ್ಥಕ, ಪೊಳ್ಳಾದ, ಬರಿದಾದ.

**रिकाम चावडी** (ರಿಕಾಮ್‌ಚಾವಡೀ) ಸ್ತ್ರೀ. ಹರಟೆಯ ಜಾಗೆ, ನಿರುದ್ಯೋಗಿಗಳ ಸ್ಥಳ.

**रिकाम टवळा** (ರಿಕಾಮ್‌ಟವಳಾ) ಪು. }
**रिकामटेकडा** (ರಿಕಾಮ್‌ಟೇಕಡಾ) ವಿ. } ಉಂಡಾಡಿಗ, ನೈಮಣಿಯಲಾರದ, ನಿರುದ್ಯೋಗಿ.

**रिकामपण** (ರಿಕಾಮಪಣ) ನ. ಖಾಲಿ ಇರುವಿಕೆ, ನಿರುದ್ಯೋಗಿತನ. ೨. ಬಿಡುವು, ಅವಕಾಶ.

**रिकामा** (ರಿಕಾಮಾ) ವಿ. ಖಾಲೀ ಒಳಗೆ ಏನೂ ಇರದ (ಪಾತ್ರೆ)

**रिक्त** (ರಿಕ್ತ) ವಿ. ಸಂ. ತೆರವಾದ, ಖಾಲೀ, ಬರಿಗೈಯ, ಅನಾಥ, ನಿರಾಧಾರಿ.

**रिक्तपाणी** (ರಿಕ್ತಪಾಣೀ) ಸ್ತ್ರೀ. ಬರಿಗೈಯವ.

**रिंगण** (ರಿಂಗಣ) ನ. ವರ್ತುಲ, ದುಂಡನ್ನಗೆರೆ.

**रिंगी** (ರಿಂಗೀ) ಸ್ತ್ರೀ. ಅಂಟಾಳಕಾಯಿಗಿಡ, ಅಂಟವಾಳಕಾಯಿ.

**रिंगे** (ರಿಂಗೇ) ನ. ಅಂಟಾಳಕಾಯಿ.

**रिघणे** (ರಿಘಣೇ) ಕ್ರಿ. ಒಳಹೊಗು, ಒಳಸೇರು, ಸುರುಮಾಡು, ಪ್ರಾರಂಭಿಸು, ನೂಕು, ಇರಿ, ಭೇದಿಸು.

**रिघाव–वा** (ರಿಘಾವ–ವಾ) ಪು. ಒಳಹೋಗುವಿಕೆ, ಪ್ರಾರಂಭ, ನೂಕುವಿಕೆ (ನೂಕು)

**रिचवणी** (ರಿಚವಣೀ) ಸ್ತ್ರೀ. ಸುರುವುವಿಕೆ, ಖಾಲಿ ಮಾಡುವಿಕೆ.

**रिचवणे** (ರಿಚವಣೇ) ಕ್ರಿ. ಸ. ಸುರುವು, ಖಾಲಿ ಮಾಡು, ಪ್ರವಹಿಸು.

**रिझणे** (ರಿಝಣೇ) ಕ್ರಿ. ಅ. ಆನಂದವಾಗು, ಆನಂದಪಡು, ಸಂತೋಷಪಡು.

**रिझविणे** (ರಿಝವಿಣೇ) ಕ್ರಿ. ಸಂ. ಸಂತೋಷಪಡಿಸು, ಆನಂದಬಡಿಸು, ಉಲ್ಲಸಿತಗೊಳಿಸು.

**रिझाऊ** (ರಿಝಾಊ) ವಿ. ಸಂತುಷ್ಟ, ಆನಂದಬಡುವ, ಸಮಾಧಾನಹೊಂದುವ.

**रिंठा** (ರಿಂಠಾ) ಪು. (
**रिंठी** (ರಿಂಠೀ) ( रिंमी ನೋ.

**रिणकर–री** (ರಿಣಕರ್–ರೀ) ಪು. **ऋणकरी** ನೋ. ಕಡಗಾರ, ಸಾಲಗಾರ, ಸಾಲಕೊಟ್ಟವ, ಸಾಲಿಗ, ಸಾವುಕಾರ.

**रिणको** (ರಿಣಕೊ) ಪು. ಸಾಲಿಗ. **ऋणका** ನೋ.
**रिता** (ರಿತಾ) ವಿ. **रिक्त** ನೋ.
**रिताभरला** (ರಿತಾಭರಲಾ) ವಿ. ಖಾಲಿಯೋ ತುಂಬಿ ದುದೋ.
**रिद्धि** (ರಿದ್ಧಿ) ಸ್ತ್ರೀ. ವೃದ್ಧಿ, ರೊಕ್ಕ, ವೈಭವ, ಉನ್ನತಿ, ಪ್ರಗತಿ.
**रिद्धिसिद्धि** (ರಿದ್ಧೀ ಸಿದ್ಧೀ) ಸ್ತ್ರೀ. ವೈಭವ ಹಾಗೂ ಪೂರ್ಣತೆ.
**रिपरिप** (ರಿಪರಿಪ) ಸ್ತ್ರೀ. ಕಾಟ. ೨. ಜಿಬಿ ಜಿಬಿ ಮಳೆ.
**रिपरिपलावणे** (ರಿಪರಿಪ್‌ಲಾವಣೇ) ಕ್ರಿ. ಅ. ಕಾಡಿಸು, ತಲೆ ಬೇಸರಿಡು.
**रिपु** (ರಿಪು) ಪು. ಸಂ. ವೈರಿ, ಶತ್ರು, ಹರಿ, ಹಗೆ, ವಿರೋಧಿ, ಎದುರಾಳಿ, ಆಗದವ.
**रिवाज** (ರಿವಾಜ್) ಪು. ಅರ. ರೀತಿ, ಪದ್ಧತಿ, ರೂಢಿ, ವಾಡಿಕೆ, ಸಂಪ್ರದಾಯ, ಬಳಕೆ, ದೇಶವ್ಯವಹಾರ.
**रिसालदार** (ರಿಸಾಲದಾರ್) ಪು. ಅರ+ಫಾ. ರಿಸಾಲದ ಮೇಲಧಿಕಾರಿ, ಕುದುರೆಯ ಸೈನ್ಯದ ಅಧಿಕಾರಿ, ಕುದುರೆ ದಂಡಿನ ಅಧಿಕಾರಿ.
**रिसाला** (ರಿಸಾಲಾ) ಪು. ಫಾ. ಕುದುರೆಯ ದಂಡು, ಅಶ್ವಸೈನ್ಯ.
**रीग-घ** (ರೀಗ್-ಘ) ಸಾಲು, ದಟ್ಟಣಿ.
**-लागणे** (-ಲಾಗಣೇ) ಕ್ರಿ. ಅ. ಸಾಲು ಹತ್ತು, ಮಂದಿ ಮುಕುರು.
**रीज-झ** (ರೀಜ್-ಝ್) ಸ್ತ್ರೀ. ಆನಂದ, ಸಂತೋಷ. ಸಲಿಗೆ, ಸಲುಗೆ, ವಾತ್ಸಲ್ಯ, ಹುಚ್ಚು ನಂಬಿಗೆ.
**रीण** (ರೀಣ್) ನ. ಸಾಲ, ಕೈಗಡ, ಋಣ.
**रीत-ति** (ರೀತ್-ತಿ), **रीतभात** (ರೀತ್‌ಭಾತ್) } ಸ್ತ್ರೀ. ಪದ್ಧತಿ, ರೀತಿ, ಬಗೆ, ಪ್ರಕಾರ, ತರ, ಶೈಲಿ, ನಡತೆ, ಮರ್ಯಾದೆ, ಚಾಳಿ, ಚಟ.
**रीतखेस** (ರೀತ್‌ಖೇಸ್), **रीतरिवाज** (ರೀತರಿವಾಜ್) } ಪು. ಪದ್ಧತಿ, ರೂಢಿ.
**रीम** (ರೀಮ್) ನ. ಇಂ. ಹಾಳಿಗಳ ರೀಮು.
**रीस** (ರೀಸ್) ಪು. ಕರಡಿ, ದಾಂಡಿಗ, ೨. ಅಪರಾಧ, ತಪ್ಪು, ಹೊಲಸು, ರಸಿಕೆ, ಅಸಹ್ಯ.
**रुई** (ರುಈ) ಸ್ತ್ರೀ. ೨. ಎಕ್ಕೆಯ ಗಿಡ.
**रुईफूल** (ರುಈಫೂಲ) ನ ಎಕ್ಕೆ ಹೂವಿನ ಅಂಚು.
**रुईफूलकाठ** (ರುಈಫೂಲ್‌ಕಾಠ್) ಪು. ಎಕ್ಕೆಹೂವಿನ ಅಂಚು.
**रुकार** (ರುಕಾರ್) ಪು. ಅನುಮತಿ, ಸಮ್ಮತಿ, ಒಪ್ಪಿಗೆ, ಕಬೂಲಿ.
**रुकारदेणे** (ರುಕಾರ್‌ದೇಣೇ), **रुकारणे** (ರುಕಾರಣೇ) } ಕ್ರಿ. ಸ. ಅನುಮತಿನೀಡು ಸಮ್ಮತಿಸು, ಒಪ್ಪು, ಕಬೂಲಿಕೊಡು.
**रुखरुख** (ರುಖರುಖ್) ಸ್ತ್ರೀ. ಪಶ್ಚಾತ್ತಾಪ, ಕಸವಿಸಿ, ಅಸಮಾಧಾನ.
**रुखवत** (ರುಖವತ್) ನ. ಮದುಮಗಳ ಮನೆಗೆ ಹೋಗುವ ಮೊದಲು ವರನಿಗೆ ಕೊಡುವ ಊಟ. ೨. ಸಿಂಗರಿಸಿದ ಸಾಮಗ್ರಿ.
**रुखसत** (ರುಖಸತ್) ಸ್ತ್ರೀ. ಅರ. ಅನುಪಸ್ಥಿತಿ, ಬಿಡುವು, ರಜೆ.
**रुखा** (ರುಖಾ) ವಿ. ಸರಳ, ಸಾದಾ, ಸಾಧಾರಣ, ನಿಷ್ಕಪಟ, ಶುಷ್ಕ, ಒಣಗಿದ, ಬತ್ತಿದ, ರುಕ್ಷ.
**रुखाडी-ड्या** (ರುಖಾಡೀ-ಡ್ಯಾ), **रुख्या-खी** (ರುಖ್ಯಾ-ಖೀ) } ವಿ. ಗಿಡವೇರಲು ನಿಪುಣ,
**रुगळणे** (ರುಗಳಣೇ) ವಿ. ಸೊರಗು, ಬಡಕಾಗು.
**रुग्ण** (ರುಗ್ಣ) ವಿ. ಸಂ. ಬೇನೆಬಿದ್ದವ, ರೋಗಿ.
**रुचणे** (ರುಚಣೇ) ಕ್ರಿ. ಅ. ರುಚಿಹತ್ತು, ಮಾನ್ಯವಾಗು, ಸವಿಅನಿಸು, ರುಚಿಸು.
**रुचि** (ರುಚಿ) ಸ್ತ್ರೀ. ಸವಿ, ಸುವಾಸನೆ, ಸುಗಂಧ, ರುಚಿ, ರಸ, ರಸಿಕತೆ. ೨. ಅಭಿರುಚಿ.
**रुचि(च)कर** (ರುಚಿ(ಚ)ಕರ) ವಿ. ಸಂ. ಸ್ವಾದಿಷ್ಟ, ಕಮ್ಮನ್ನ, ರುಚಿಕರ.
**रुचिर** (ರುಚಿರ) ಸಂ. ಸುಂದರವಾದ, ರಮಣೀಯ, ಮನೋಹರ, ಸಂತೋಷಕರ.
**रुजणे** (ರುಜಣೇ) ಕ್ರಿ.ಅ. ಚಿಗುರು ಒಡೆ, ಅಂಕುರಿಸು, ಹಬ್ಬು, ಮೊಳಕೆ ಒಡೆ.
**रुजविणे** (ರುಜವಿಣೇ) ಕ್ರಿ.ಸ. ಚಿಗುರೊಡಿಸು, ಅಂಕುರಿಸ ಹಚ್ಚು, ಹಬ್ಬಿಸು, ಮೊಳಕೆಯೊಡೆಯಿಸು.
**रुजवण** (ರುಜವಣ್) ಸ್ತ್ರೀ. ಚಿಗುರು, ಮೊಳಕೆ, ಅಂಕುರ, ಹಬ್ಬುವಿಕೆ, ಬಿತ್ತಿಗೆ, ನಾಟುವಿಕೆ.
**रुजामा** (ರುಜಾಮಾ) ಪು. ಫಾ. ಅರಳೆಯ ತೆಳ್ಳನ್ನ ಹಾಸಿಗೆ, ಅರಳೆಯ ತಿಳುವು ಹಾಸಿಗೆ.
**रुजुवात** (ರುಜುವಾತ್) ಸ್ತ್ರೀ.ಅರ. ಸಮಕ್ಷಮ ಮಾಡಿಸುವಿಕೆ, ಎದುರು-ಬದುರು ನಿಲ್ಲಿಸುವಿಕೆ, ಮಾರೊಡ್ಡುವಿಕೆ.
**रुजू** (ರುಜೂ) ವಿ.ಅರ. ಸಿದ್ಧ, ಸಜ್ಜ, ತಯಾರಾದ, ಕಬೂಲಾದ, ಹಜರ ಮಾಡಿದ, ಒಪ್ಪಿಗೆಕೊಟ್ಟ.
**रुझणे** (ರುಝುಣೇ) ಕ್ರಿ. **रुजणे** ನೋ.
**रुटुखुटु** (ರುಟುಖುಟು) ಕ್ರಿ.ವಿ. ಭಾರವಾಗಿ, ಪ್ರಯಾಸದಿಂದ, ದುಃಖದಿಂದ.

**रुंड–ढ** (ರುಂಡ–ಢ) ನ.ಸಂ. ಕುತ್ತಿಗೆ, ಶಿರ, ರುಂಡ (ಕೊಯ್ದ).

**रुंडमाला** (ರುಂಡಮಾಲಾ) ಸ್ತ್ರೀ.ಸ. ರುಂಡಮಾಲೆ.

**रुणझुण** (ರುಣಝುಣ) ಸ್ತ್ರೀ. ಆಭರಣದ ಮಧುರ ಧ್ವನಿ.

**रुणझुणणे** (ರುಣಝುಣಣೇ) ಕ್ರಿ.ಅ. ಝುಣಝುಣಿಸು, ಮಧುರಧ್ವನಿಯಾಗು.

**रुतण** (ರುತಣ) ನ. ಬೆಳೆಯುಳ್ಳ ಸ್ಥಾನ, ಬೆಳೆಯುಳ್ಳ ಭೂಮಿ.

**रुतणे** (ರುತಣೇ) ಕ್ರಿ.ಅ. ನೆಡು, ನಿಲ್ಲಿಸು, ಕಾಲೂರಿ ನಿಲ್ಲು, **रिघणे** ನೋ.

**रुंद** (ರುಂದ) ವಿ. ಅಗಲವಾದ, ಅಡ್ಡಗಲ.

**रुंदी** (ರುಂದೀ) ಸ್ತ್ರೀ. ಅಗಲಳತೆ.

**रुंदट** (ರುಂದಟ್) ವಿ. ಅಗಲವಾದ.

**रुंदाट** (ರುಂದಾಟ್) ವಿ. ಬಹಳ ಅಗಲವಾದ.

**रुंदावण** (ರುಂದಾವಣ) ನ. ಅಗಲು ಮಾಡುವಿಕೆ, ಅಗಲಾಗುತ್ತ ಹೋಗುವಿಕೆ.

**रुंदावणे** (ರುಂದಾವಣೇ) ಕ್ರಿ.ಅ. ಅಗಲಾಗು, ಅಗಲಾಗುತ್ತ ಹೋಗು.

**रुंदावा** (ರುಂದಾವಾ) ಪು., **रुंदी** (ರುಂದೀ) ಸ್ತ್ರೀ. ಅಗಲಳತೆ.

**रुदित** (ರುದಿತ) ನ. ಅಳುವಿಕೆ.

**रुद्र** (ರುದ್ರ) ಪು.ಸಂ. ಶಿವ, ಶಂಕರ, ಶಿವನ ಹೆಸರು.

**रुद्रभूमि** (ರುದ್ರಭೂಮಿ) ಸ್ತ್ರೀ.ಸ. ಸ್ಮಶಾನ, ಮಸಣ.

**रुद्रावतार** (ರುದ್ರಾವತಾರ) ಪು.ಸ. ಶಿವನ ಅವತಾರ, ಶಿವಾವತಾರ, ಉಗ್ರತನ, ಸಾಹಸ, ಭಯಂಕರ ರೂಪ.

**रुद्राक्ष** (ರುದ್ರಾಕ್ಷ) ಪು. ರುದ್ರಾಕ್ಷ, ರುದ್ರಾಕ್ಷಿ.

**रुंधणे** (ರುಂಧಣೇ) ಕ್ರಿ. ಅ., **रुधणे** (ರುಧಣೇ) ಕ್ರಿ. ಸಿಕ್ಕುಬೀಳು, ಸಿಗುಬೀಳು, ವಿಲಂಬಿಸು, ತಡೆ, ದಿಙ್ಮೂಢನಾಗು.

**रुधिर** (ರುಧಿರ) ನ.ಸಂ. ರಕ್ತ, ನೆತ್ತರ.

**रुपडे** (ರೂಪಡೇ) ನ. ರೂಪ, ಸುಂದರತೆ.

**रुपणे** (ರುಪಣೇ) ಕ್ರಿ.ಅ. ಸಿಕ್ಕುಬೀಳು.

**रुपया** (ರುಪಯಾ, ರುಪಾಯಾ) ಪು. ರೂಪಾಯಿಯ ನಾಣ್ಯ.

**रुपा** (ರುಪಾ) ಪು. ಬಿಳಿಹಂಡ (ಎತ್ತು), ಬಿಳಿ ಹಂಡಾದ.

**रुपे** (ರುಪೇ) ನ. ಬೆಳ್ಳಿ.

**रुपेरी** (ರುಪೇರೀ) ವಿ. ಬೆಳ್ಳಿಗಿನ, ಬೆಳ್ಳಿಯ.

**रुबकार** (ರುಬಕಾರ) ವಿ. ಫಾ. ಎದುರುಗಿನ, ಉಪಸ್ಥಿತಿಯಲ್ಲಿ.

**रुबरू** (ರುಬರೂ) ಕ್ರಿ.ವಿ.ಫಾ. ಎದುರು-ಬದುರಾಗಿ, ಮೋರೆಯ ಎದುರಿಗೆ.

**रुमणी** (ರುಮಣೀ) ಸ್ತ್ರೀ. ಹೇಗಿಲ ಹಿಡಿಕೆ.

**रुमाल** (ರುಮಾಲ) ಪು. ಫಾ. ರುಮಾಲ. ೨. ಕರವಸ್ತ್ರ, ಅರಿವೆಯ ಚೌಕು ತುಂಡು. ೩. ಲೆಕ್ಕಪತ್ರದ ಗಂಟು.

**रुष्ट** (ರುಷ್ಟ) ವಿ. ಸಿಟ್ಟಿಗೆದ್ದ, ಕ್ರೋಧಿತ, ರೇಗಿಗೆದ್ದ, ಅಸಂತುಷ್ಟ.

**रुसका** (ರುಸಕಾ) ವಿ. ಸಂ. ಸೆಟಕೊಳ್ಳುವ, ಬಿಗಿದುಕೊಳ್ಳುವ, ಹಟಮಾರಿ, ಮುನಿಸಿನ.

**रुसणे** (ರುಸಣೇ) ಕ್ರಿ. ಸೆಟಕೊಳ್ಳು, ಬಿಗಿದುಕೊಳ್ಳು, ಹಟಮಾಡು, ಮುನಿಸು ಮಾಡು.

**रुसवा, रुसवाफुगवा** (ರುಸವಾ, ರುಸವಾಫುಗವಾ) ಪು. ಸಿಟ್ಟು, ಕೋಪ, ಸೆಟಕೊಳ್ಳುವಿಕೆ, ಹಟ, ರೇಗು. ಬಿಗಿದುಕೊಳ್ಳುವಿಕೆ, ಸೆಡವು.

**रुसविणे** (ರುಸವಿಣೇ) ಕ್ರಿ.ಸ. ಸಿಟ್ಟಿಗೆಬ್ಬಿಸು, ಕೋಪವನ್ನುಂಟು ಮಾಡು, ಕಾಡು, ಅಸಂತೋಷಪಡಿಸು, ಅಪರಾಧಮಾಡು.

**रुळणे** (ರುಳಣೇ) ಕ್ರಿ. ಅ. ಹಾರಾಡು (ಕೂದಲು), ಕುರುಳಿಸು, ಜೋಲಾಡು, ಹೊರಳಿಸು, ಲಟ್ಟಿಸು, ಹರಿಸು. ೨. ಅಭ್ಯಾಸವಾಗು, ರೂಢಿಯಾಗಿ.

**रुक्ष** (ರುಕ್ಷ) ವಿ.ಸಂ. ಒಣ, ಸತ್ವಹೀನ, ಒಣಗಿದ, ನಿಸ್ಸತ್ವ, ಅಶಕ್ತ, ನಿರ್ಜನವಾದ, ಮರುಭೂಮಿಯಾದ, ಸ್ನೇಹಶೂನ್ಯ.

**रू** (ರೂ) ಪು. ಹಿಂಜಿದ ಹತ್ತಿ, ಅರೆದ ಹತ್ತಿ.

**रूख** (ರೂಖ) ಪು. ವೃಕ್ಷ, ಗಿಡ, ತರು, ಕುಂಜ.

**रूच** (ರೂಚ್) ಸ್ತ್ರೀ. ರುಚಿ, ರಸ, ಸವಿ, ಮಾಧುರ್ಯ, ಕಂಪು, ಸುವಾಸನೆ, ರಸಿಕತೆ, ಆಯ್ಕೆ, ಅಭಿರುಚಿ.

**रूढ** (ರೂಢ) ವಿ. ಸಂ. ರೂಢಿಯಾದ, ಸಲುಗೆಯ, ವಾಡಿಕೆಯ, ಪ್ರಚಾರದಲ್ಲಿದ್ದ, ಜನಪ್ರಿಯ, ಲೋಕಮಾನ್ಯ.

**रूढि** (ರೂಢಿ) ಸ್ತ್ರೀ. ರೂಢಿ, ಸಲುಗೆ, ವಾಡಿಕೆ, ಪ್ರಚಾರ, ಕೀರ್ತಿ, ಜನಪ್ರಿಯತೆ, ಲೋಕಮಾನ್ಯತೆ.

**रूदार** (ರೂದಾರ್) ವಿ. ಹತ್ತಿ ತುಂಬಿದ, ಅರಳೆ ತುಂಬಿದ, ಅರಳೆಯುಳ್ಳ.

**रूप** (ರೂಪ್) ನ. ಸಂ. ಆಕಾರ, ಚೆಲುವಿಕೆ, ಕಾಣುವಿಕೆ, ಸ್ಥಿತಿ, ಚರ್ಯೆ, ಸ್ವಭಾವ. (೨. ವ್ಯಾಕರಣ ರೂಪ) ಕ್ರಿಯಾರೂಪ.

**रूप पालटणे** (ರೂಪಪಾಲಟಣೇ) ಕ್ರಿ. ವಿ. ಆಕಾರ ಬದಲಾಗು, ಚೆಲುವುಗೆಡು, ಸ್ಥಿತಿ ಪರಿವರ್ತಿಸು, ಸ್ವಭಾವ ಬದಲಾಗು.

**रूपास येणे** (ರೂಪಾಸ್‌ಯೇಣೇ) ಕ್ರಿ. ಸ. ಆಕಾರ ಹೊಂದು, ಕೀರ್ತಿ ಪಡೆ, ಪೂರ್ಣತ್ವ ಹೊಂದುತ್ತಿರು.

**रूपक** (ರೂಪಕ್) ನ. ಸಂ. ಅಲಂಕಾರಗಳಲ್ಲಿ ಒಂದು, ಸಾಮ್ಯ, ತಾದ್ರೂಪ್ಯ, ಐಕ್ಯತೆ, ಸಂಗೀತದಾಟಿ.

**रूपडे** (ರೂಪಡೇ) ನ. ಸ್ವರೂಪ, ಸೌಂದರ್ಯ, ಆಕಾರ, ಮುಖವಾಡ, ವೇಷ, ಸೋಗು, ನೆವ, ನಿಮಿತ್ತ.

**रूपरंग** (ರೂಪರಂಗ್) ನ. ಕಾಣಿಸುವಿಕೆ, ತೋರುವಿಕೆ, ರೂಪ.

**रूपरेषा** (ರೂಪರೇಷಾ) ಸ್ತ್ರೀ. ಸ. ಆಕಾರ, ಸ್ವರೂಪ, ಚರ್ಯೆ. **रूप** ನೋ.

**रूपलावण्य** (ರೂಪಲಾವಣ್ಯ) ನ. ಸಂ. ಆಕಾರಸೌಂದರ್ಯ, ಸೌಂದರ್ಯ, ಚೆಲುವು, ಚೆಲ್ವಿಕೆ, ಅಂದ, ಬೆಡಗು.

**रूपवती** (ರೂಪವತೀ) ಸ್ತ್ರೀ. ಸ. ಸುಂದರಿ, ಚೆಲುವೆ, ಬೆಡಗುಗಾರತಿ, ಲಾವಣ್ಯವತಿ, ಅಪ್ಸರೆ.

**रूपवान** (ರೂಪವಾನ್) ವಿ. ಸ. ಸುಂದರವಾದ, ಚೆಲುವಾದ, ಬೆಡಗಿನ, ಅಂದವಾದ, ಆಕಾರವುಳ್ಳ.

**रूपस** (ರೂಪಸ್) ವಿ. ಉತ್ತಮ ಆಕಾರದ, ಸುಂದರ, ನೋಟ, ಅಂದವಾದ ನೋಟ, ಚೆಲುವು.

**रूपांतर** (ರೂಪಾಂತರ) ನ. ಸಂ. ರೂಪಾಂತರ, ಬದಲಾವಣೆ, ಸ್ಥಿತಿಭಿನ್ನತೆ, ಪರಿಸ್ಥಿತಿ ಬದಲಾಗುವಿಕೆ.

**रूपावली** (ರೂಪಾವಲೀ) ಸ್ತ್ರೀ. ಸಂ. ಶಬ್ದರೂಪಾವಲಿ, ಪದಾವಲಿ (ವ್ಯಾಕರಣದಲ್ಲಿ).

**रूपी** (ರೂಪೀ) ವಿ. ಸಂ. ಪ್ರತ್ಯಯ. – (ಅಂಥ) ರೂಪವುಳ್ಳ.

**रूप्य** (ರೂಪ್ಯ) ವಿ. ಸ. ಬೆಳ್ಳಿಯ, ರಜತದ, ಬೆಳ್ಳಿಗಿನ, ಶುಭ್ರವಾದ.

**रूबरू** (ರೂಬರೂ) ಕ್ರಿ. ವಿ. ಫಾ. ಎದುರು–ಬದುರು.

**रूळ** (ರೂಳ್) ಪು. ರುಳಿ ಗೆಜ್ಜೆ, ಕಾಲು ಗೆಜ್ಜೆ. ೨. ರೈಲುಕಂಬಿ. ೩. ಗೆರೆ ತೆಗೆಯುವ ಪಟ್ಟಿ.

**रे** (ರೇ) ಸಂ. ಸಂಬೋಧನ, ಎಲೋ, ಎಲಾ.

**रेकणे** (ರೇಕಣೇ) ಕ್ರಿ. ಸ. ಬರೆ, ಚಿತ್ರಿಸು. ೨. ಒದರು (ಕೋಣ), ಗೊಗ್ಗರು ದನಿಯಿಂದ ಒದರು.

**रेकला** (ರೇಕಲಾ) ಪು. ಒಂದು ಪ್ರಕಾರದ ಬಂಡಿ.

**रेकाट्या** (ರೇಕಾಟ್ಯಾ) ವಿ. ಗೊಗ್ಗುರು ಧ್ವನಿಯ, ಗೊಗ್ಗರ ಧನಿಯ.

**रेंकणे** (ರೇಂಕಣೇ) **रेकणे** ನೋ.

**रेखणी** (ರೇಖಣೀ) ಸ್ತ್ರೀ. ಗೆರೆಹೊಡೆಯುವಿಕೆ, ಆಕರಿಸುವಿಕೆ, ಚಿತ್ರ ತೆಗೆಯುವಿಕೆ.

**रेखणे** (ರೇಖಣೇ) ಕ್ರಿ. ಅ. ಗೆರೆ ಹೊಡೆ, ಸೀಮೆ ಗೊತ್ತುಮಾಡು, ಚಿತ್ರಿಸು, ವರ್ಣಿಸು, ಸಾವಕಾಶ ತಿಕ್ಕು.

**रेखाटणी** (ರೇಖಟಣೀ) ಸ್ತ್ರೀ. **रेखणी** ನೋ.

**रेखटणे** (ರೇಖಟಣೇ) ಕ್ರಿ. ಸ. ಗೆರೆಹೊಡೆ, ವರ್ಣಿಸು, **रेखणे** ನೋ.

**रेखाटणे** (ರೇಖಾಟಣೇ) ಕ್ರಿ. ಸ. ಚಿತ್ರಿಸು, ಗೆರೆಹೊಡಿಸು, ವರ್ಣಿಸ ಹಚ್ಚು.

**रेखला** (ರೇಖಲಾ) ವಿ. ಯೋಗ್ಯ, ನ್ಯಾಯ, ನಿಜ, ತಕ್ಕ, ಕಾಯದೆ ಪ್ರಕಾರದ, ನಿಯಮಾನುಸಾರ.

**रेखा** (ರೇಖಾ) ಸ್ತ್ರೀ. ಸಂ. ಗೆರೆ, ರೇಖೆ, ಸರಳ ರೇಖೆ, ವಕ್ರರೇಖೆ, ಮಧ್ಯಾಹ್ನ.

**रेखागणित** (ರೇಖಾಗಣಿತ) ನ. ಸಂ. ಭೂಮಿತಿ, ಭೂಮಿತಿ ಶಾಸ್ತ್ರ.

**रेखान्तर** (ರೇಖಾಂತರ) ನ. ಸಂ. ರೇಖಾಂಶ, ರೇಖಾವೃತ್ತಗಳ ಅಂತರ, ಸಾಯನ ಭೋಗ.

**रेंगणे** (ರೇಂಗಣೇ) ಕ್ರಿ. ಕುಂಟು, ದೇಕು, ಹರಿದಾಡು, ಅಂಬೆಗಾಲಿಡು, ಆಲಸ್ಯಗಾರನಾಗು, ಕೆಲಸತಪ್ಪಿಸು, ವೇಳೆ ಗಳೆ.

**रेंगळ** (ರೇಂಗಳ್) ಸ್ತ್ರೀ. ವಿಪುಲತೆ, ಅತಿ ಔದಾರ್ಯ, ದುಂದುಗಾರಿಕೆ, ಪ್ರಚುರತೆ.

**रेंग(गा)ळणे** (ರೇಂಗ(ಗಾ)ಳಣೇ) ಕ್ರಿ. ಕುಂಟು, ಹಿಂದೆ ಬೀಳು, ಕಾಲು ಹಿಂದೆ ಜರಿ. (ಕೆಲಸ) ಸಾವಾಕಾಶವಾಗಿ ಸಾಗು.

**रेघ, रेघोटी** (ರೇಘ, ರೇಘೋಟೀ) ಸ್ತ್ರೀ. ರೇಷೆ, ರೇಖೆ, ಗೆರೆ, ಮಾರ್ಗ, ದಾರಿ.

**लक्ष्मण–** (ಲಕ್ಷ್ಮಣ–) ಸ್ತ್ರೀ. ಖಂಡಿತ ಮಾತು.

**रेघ ओढून–काढून–देणे** (ರೇಘ ಓಢೂನ್–ಕಾಢೂನ್–ದೇಣೇ) ಕ್ರಿ. ಸ. ನಿಯಮಹಾಕು, ಮಾರ್ಗದೋರು, ದಾರಿತೋರಿಸು.

**रेंच** (ರೇಂಚ) ಪು. ದೃಷ್ಟಿಯಾಗುವಿಕೆ, ಕಣ್ಣು ಹತ್ತುವಿಕೆ, ಬಿಂಕ, ಗರ್ವ, ಹೆಮ್ಮೆ, ಒಣಹೆಮ್ಮೆ ಊಹೆ.

**रेच** (ರೇಚ) ನ. } ಹೊರಕಡಿಗೆಯ ಔಷಧ,
**रेचन** (ರೇಚನಾ) ಸ್ತ್ರೀ. } ರೇಚನ, ಭೇದಿಮಾಡಿಸುವಿಕೆ, ಭೇದಿಯ ಔಷಧ.

**रेचक** (ರೇಚಕ) ನ. ಸಂ. ಭೇದಿಯ ಔಷಧ, ಜುಲಾಬು.

**रेटणे** (ರೇಟಣೇ) ಕ್ರಿ. ಸ. ನೂಕು, ದಬ್ಬು, ಹಿಂದೆ ಹಾಕು, ಅಡಚಣೆ ದೂರಮಾಡು, ಮುಂದೆಹೋಗು, ದಾಟು. ೨. (ಕೆಲಸ) ನೆರವೇರಿಸು.

**रेटून** (ರೇಟೂನ್) ಕ್ರಿ. ವಿ. ನೂಕಿ, ದಬ್ಬಿ, ಹಿಂದೆ ಹಾಕಿ, ಮುಂದೆಹೋಗಿ, ದಾಟಿ.

**रेटारेट** (ರೇಟಾರೇಟ್) ಸ್ತ್ರೀ. ದಬ್ಬುವಿಕೆ, ತಳ್ಳುವಿಕೆ, ಹಿನ್ನುಗ್ಗುವಿಕೆ, ತಡೆಯುವಿಕೆ. ೨. ಜನದಟ್ಟಣೆ.

**रेड** (ರೇಡ್) ಸ್ತ್ರೀ. ಅತಿವಿಪುಲತೆ, ಅತಿಸಂಪನ್ನ, ಸಮೃದ್ಧಿ, ಅತ್ಯಧಿಕತೆ.

**रेडकू** (ರೇಡಕೂ) ನ. **रेडक** (ರೇಡಕ್) ನ. ಎಮ್ಮೆಯ ಕರು.

**रेडका** (ರೇಡಕಾ) ಪು. ಕೋಣ, ಕೊಂಡೂಣಿ.

**रेडकी** (ರೇಡಕಿ) ಸ್ತ್ರೀ. ಹೆಣ್ಣುಕರು, ಮಣಕ.

**रेडा** (ರೇಡಾ) ಪು. ಕೋಣ.

**रेणु** (ರೇಣು) ನ. ಪರಾಗ, ಧೂಲಿ, ಧೂಳಿ, ಹುಡಿ, ರೇಣು, ಮಣ್ಣು.

**रेत** (ರೇತ) ನ. ರೇತಸ್ಸು, ವೀರ್ಯ, ಧಾತು.

**रेतदाणी** (ರೇತದಾಣೀ) ಸ್ತ್ರೀ. ಮಳಲಕುಡಿಕೆ, ಉಸುಕಿನ ಮಡಿಕೆ.

**रेती** (ರೇತೀ) ಸ್ತ್ರೀ. ಉಸುಕು, ಉಸುಬು, ಮಳಲು.

**रेंद** (ರೇಂದ್) ಸ್ತ್ರೀ. ಹೊಲಸುನೀರು, ಕೆಸರು, ಹರಿಗಾಲುವೆಯ ನೀರು, ರಾಡಿಯನೀರು, ಗುತ್ತಿಗೆ, ಸೆರೆಯಭಟ್ಟಿ.

**रेंदवणी** (ರೇಂದವಣೀ) ಸ್ತ್ರೀ. ಹೊಲಸುನೀರು.

**रेंदा** (ರೇಂದಾ) ಪು. **रेंद** ನೋ.

**रेंदाळणे** (ರೇಂದಾಳಣೇ) ಕ್ರಿ. ವಿ. ಹೊಲಸಾಗು, ಕೆಸರಾಗು, ರಾಡಿಯಾಗು, ಕೆಸರುತುಂಬು.

**रेप** (ರೇಪ) ಸ್ತ್ರೀ. ಬಂಡೆಗಲ್ಲು, ಅಜಸ್ರಕಿಲೆ, ವಿಪರೀತ ಉನ್ನತ–ಮನುಷ್ಯ.

**रेफ** (ರೇಫ್) ಪು. ಸಂ. ಅರ್ಕಾವಳಿ (ವ್ಯಾಕರಣ) ರೇಫ, ರಕ್ಕೆಬಂದ ಒತ್ತಿನ ಗುರುತು.

**रेमटणे** (ರೇಮಟಣೇ) ಕ್ರಿ. ವಿ. ಒಳನೂಕು, ಒಳದಬ್ಬು.

**रेरेरेरे** (ರೇರೇರೇರೇ) ಉದ್ಗಾರ. ಎಲೆಲೆ ದುಃಖವ್ಯಕ್ತಮಾಡುವಿಕೆ.

**रेरेकरणे** (ರೇರೇಕರಣೇ) ಕ್ರಿ. ಅ. ದುಃಖಿಸು, ದುಃಖ ವ್ಯಕ್ತಮಾಡು.

**रेलचेल** (ರೇಲಚೇಲ್) ಸ್ತ್ರೀ. ಅತಿವಿಪುಲತೆ **'रेड'** ನೋ.

**रेलणे** (ರೇಲಣೇ) ಕ್ರಿ. ಅ. ಹೊರಬೀಳು, ಕಿವುಚು, ಕೆಳಗೆಬೀಳು, ಪುಡಿಯಾಗು, ಚೂರು ಚೂರಾಗು, ನಾಶವಾಗು, ಒರಗು, ಅಡ್ಡಾಗು, ಮಗ್ಗುಲಾಗಿ ಮಲಗು.

**रेव** (ರೇವ್) ಸ್ತ್ರೀ. ರೇವೆ, ರೇವೆಮಣ್ಣು, ಸಣ್ಣ ಉಸುಬು, ಧಾನ್ಯದ ಕಣ.

**रेवट** (ರೇವಟ್) ವಿ.
**रेवठील** (ರೇವಠೀಲ್) ವಿ. } ಉಸುಬಿನ, ಉಸುಕಿನ, ಮಳಲಿನ, ಉಸುಬಿನ ಅರ್ಕಲೇಪಿಸಿದ.

**रेवडी** (ರೇವಡೀ) ಸ್ತ್ರೀ. ರೇವಡಿ, ಮಿಠಾಯಿ. ೨. ಫಜೀತಿ, ಅವಮಾನ, ನಿರ್ಲಜ್ಜತನ.

**रेवणी** (ರೇವಣೀ) ಸ್ತ್ರೀ. ಕಿಲ್ಲೆಯ ಹೊರನೆಲ, ಕಂದಕ.

**रेवणे** (ರೇವಣೇ) ಸ್ತ್ರೀ. ಕೆಳಗೆ ಇಳಿ, ಅವನತವಾಗು, ತುಂಬಿಸು.

**रेवती** (ರೇವತೀ) ಸ್ತ್ರೀ. ನಕ್ಷತ್ರಗಳಲ್ಲಿ ಕಡೆಯದು, ರೇವತಿ, ಒಂದು ಪ್ರಕಾರದ ಹೂವು.

**रेवस** (ರೇವಸ) ನ. ಹಡಗದ ಮಾರ್ಗದ ಹಿಂದಿನ ಜಲರೇಷೆ.

**रेवा** (ರೇವಾ) ಪು. ಹೊಲಸು ನೀರು, ರಾಡಿ.

**रेवाचिनी** (ರೇವಾಚೀನೀ) ಸ್ತ್ರೀ. ಒಂದು ಭೇದಿಯ ಔಷಧಿ.

**रेवाळ** (ರೇವಾಳ್) ವಿ. ಉಸುಕಿನ, ರೇವೆಯ **'रेव'** ನೋ.

**रेशीम** (ರೇಶೀಮ್) ನ. ರೇಶಿಮೆ.

**रेशीमकिडा** (ರೇಶೀಮ್‌ಕಿಡಾ) ಪು. ರೇಶಿಮೆಯಹುಳು.

**रेशमी** (ರೇಶಮೀ) ವಿ. ಸ. ರೇಶಿಮೆಯ, ರೇಶಿಮೆಯಿಂದ ನೇಯ್ದ.

**रेषा** (ರೇಷಾ) ಸ್ತ್ರೀ. ಸಂ. ಗೆರೆ.

**रेस** (ರೇಸ್) ಪು. ಇಂ. ಕುದುರೆಯ ಪಂದ್ಯ.

**रोकड** (ರೋಕಡ್) ಸ್ತ್ರೀ. ನಗದು ರೊಕ್ಕ, ನಗದು ಬೆಲೆ, ನಗದು ಹಣ.

**रोकडा** (ರೋಕಡಾ) ವಿ. ನಗದು ಬೆಲೆಯ, ಸಿದ್ಧ, ತಯಾರಾದ, ರೋಖ ಬೆಲೆಯ. ೨. ರೊಕ್ಕದ ರೂಪದಲ್ಲಿಯ.

—**सवाल** (–ಸವಾಲ್) ಪು. ಸ್ಪಷ್ಟ ಪ್ರಶ್ನೆ.

**रोकडीहुंडी** (ರೋಕಡೀಹುಂಡೀ) ಸ್ತ್ರೀ. ದರ್ಶನಿಹುಂಡಿ.

**रोख** (ರೋಖ್) ಪು. ನಗದು ರೊಕ್ಕ. ೨. ಒಲವು, ದೃಷ್ಟಿ, ಅಭಿರುಚಿ, ಸಾಗುವಿಕೆ, ಸಾಗಾಟ, ಪ್ರಕೃತಿ, ಇಚ್ಛೆ.

**रोखणी** (ರೋಃಖಣೀ) ಸ್ತ್ರೀ. ಉಜ್ಜು ಗೊರಡು, ಯೋಜನೆ, ನಕಾಶೆ, ಕಾರ್ಯದ ರೂಪರೇಷೆ, ಅಂದಾಜು.

**रोखणे** (ರೋಃಖಣೇ) ಕ್ರಿ. ಸ. ಕಾವಲಲ್ಲಿಡು, ತಡೆಯುಲ್ಲಿಡು, ಅಡ್ಡಿಮಾಡು, ತಡೆ, ಅಭ್ಯಂತರಿಸು. ೨. ಗುರಿಇಡು, ದಿಟ್ಟಿಸು.

**रोखून पाहणे** (ರೊಖೂನ್ ಪಾಹಣೇ) ಕ್ರಿ.ಸ. ದಿಟ್ಟಿಸಿ ನೋಡು, ಕಣ್ಣು ಕೆರಳಿಸಿನೋಡು.

**रोखविक्री** (ರೋಃಖವಿಕ್ರಿ) ಸ್ತ್ರೀ. ನಗದು ಮಾರಾಟ, ರೋಃಖ ಮಾರಾಟ.

**रोखा** (ರೋಃಖಾ) ಪು. ಅರ. ಸಾಲ ಪತ್ರ, ಕತಬಿ, ಖತ್ತು.

**रोखारोखी** (ರೋಃಖಾರೋಃಖೀ) ಕ್ರಿ. ವಿ. ನಗದು ನಗದಾಗಿ, ಚೊಕ್ಕಟವಾಗಿ.

**रोखी** (ರೋಃಖೀ) ಸ್ತ್ರೀ. ನಗದು ಹಣದ ವ್ಯವಹಾರ, ನಾಣ್ಯ ಚಲಾವಣೆ, ಚಿನಿವಾಲಿಕೆ.

**रोग** (ರೋಗ್) ಪು. ಸಂ. ರೋಗ, ಬೇನೆ, ವ್ಯಾಧಿ. ೨. ಹೊಟ್ಟೆಕಿಚ್ಚು.

**रोगट** (ರೋಗಟ) ವಿ. ರೋಗಿಯಾದ, ರೋಗಹತ್ತಿದ, ಅಜಾರಿಯಾದ, ಬೇನೆಗೊಳಕುತನದ.

**रोगटणे** (ರೋಗಟಣೇ) ಕ್ರಿ. ವಿ. ಬೇನೆ ಬೀಳು, ವ್ಯಾಧಿಗ್ರಸ್ಥನಾಗು.

**रोगण** (ರೋಗಣ್) ನ. ಫಾ. ಮಿರುಗಿನ ಎಣ್ಣೆ, ಕೀಲೆಣ್ಣೆ, ರೋಗನು, ವಾರ್ನಿಸು.

**रोगनिदान** (ರೋಗನಿದಾನ್) ನ. ಸಂ. ರೋಗಚಿಕಿತ್ಸೆ ರೋಗಪರೀಕ್ಷೆ, ವ್ಯಾಧಿ ವಿಮರ್ಶೆ, ಬೇನೆಯ್ಸ್ಪರೀಕ್ಷೆ.

**रोगनिदानशास्त्र** (ರೋಗನಿದಾನಶಾಸ್ತ್ರ) ನ. ಸಂ. ರೋಗಚಿಕಿತ್ಸಾಶಾಸ್ತ್ರ, ರೋಗಲಕ್ಷಣಶಾಸ್ತ್ರ, ರೋಗವಿಜ್ಞಾನ.

**रोगभावना** (ರೋಗಭಾವನಾ) ಸ್ತ್ರೀ. ಸಂ. ರೋಗಕಲ್ಪನೆ, ವ್ಯಾಧಿಯ ಚಿಹ್ನೆ, ರೋಗಲಕ್ಷಣ, ರೋಗದ ಕುರುಹು.

**रोगराई** (ರೋಗರಾಈ) ಸ್ತ್ರೀ. ಬೇನೆ, ರೋಗ, ಬೇನೆಯ ಹಾವಳಿ.

**रोंगा** (ರೋಂಗಾ) ಪು. ವಿ. ಬೇನೆಗೊಳಕ, ಕೆಟ್ಟ ಮೋರೆಯ, ಎಲುಬಿನ ಹಂದರದ, ಸೊರಗಿದ.

**रोंगाळणे** (ರೋಂಗಾಳಣೇ) ಸೊರಗು, ಬೇನೆಬೀಳು, ವ್ಯಾಧಿಗ್ರಸ್ತನಾಗು, ತಡೆಮಾಡು, ಅಲೆದಾಡು, ಹಿಂದೆಮುಂದೆನೋಡು,

**रोगिष्ट** (ರೋಗಿಷ್ಟ)
**रोगी** (ರೋಗೀ)
**रोग्या** (ರೋಗ್ಯಾ)
**रोगेला** (ರೋಗೇಲಾ) } ವಿ. '**रोगट**' ನೋ.

**रोचक** (ರೋಚಕ್) ವಿ. ಸಂ. ಮೋಜಿನ, ರುಚಿಸುವ.

**रोज** (ರೋಜ್) ಕ್ರಿ. ವಿ. ಫಾ. ದಿನಾಲು, ನಿರಂತರ, ಯಾವಾಗಲೂ, ತಪ್ಪದೆ.

**रोजउठून** (ರೋಜ್‌ಉಠೂನ್)
**रोजरोज** (ರೋಜರೋಜ) ಕ್ರಿ. ವಿ. ಫಾ. } ಪ್ರತಿದಿನ, ದಿನಬೆಳಗಾದರೆ, ನಿತ್ಯವೂ.

**रोजकरी** (ರೋಜಕರೀ) ಪು. **रोजंदार** (ರೋಜಂದಾರ) ಪು. ದಿನಗೂಲಿಯ ಆಳು.

**रोजकीर्द** (ರೋಜಕೀರ್ದ) ಸ್ತ್ರೀ. ಪ್ರತಿದಿನದ ಲೆಕ್ಕ, ಡೈರಿ, ದೈನಿಕ ವ್ಯವಹಾರದ ವಹಿ, ರೋಜಕಿರ್ದಿ.

**रोजखर्डा–खरडा** (ರೋಜಖರ್ಡಾ–ಖರಡಾ) ಪು. ವ್ಯಾಪಾರಿಯ ದೈನಿಕ ಲೆಕ್ಕಪತ್ರ.

**रोजगार** (ರೋಜಗಾರ್) ಪು. ಫಾ. ದಿನಗೂಲಿ, ಉದ್ಯೋಗ, ಧಂದೆ, ನವಕರಿ.

**रोजगारी** (ರೊಜಗಾರೀ) ಸ್ತ್ರೀ. ದಿನದ ಸಂಬಳದ, ದೈನಿಕ ವೇತನದ, ದಿನಗೂಲಿಯ.

**रोजगुजारा** (ರೋಜಗುಜಾರಾ) ಪು. ಫಾ. ಜೀವನ ಸಾಗಿಸುವಿಕೆ, ದಿನಗಳೆಯುವಿಕೆ.

**रोजगुदस्त-स्ता** (ರೋಜಗುದಸ್ತ–ಸ್ತಾ) ವಿ.ಫಾ. ನಿನ್ನೆ, ಕಳೆದದಿನ, ಹಿಂದಿನದಿನ.

**रोजच्यारोज** (ರೋಜಚ್ಯಾರೋಜ್) ಕ್ರಿ. ವಿ. ದಿನದಿನಕ್ಕೆ, ದಿನಾಲು, ಪ್ರತಿದಿನ, ದಿನ ಬೆಳಗಾಗುತ್ತಲೆ.

**रोजदार** (ರೋಜದಾರ್) ವಿ. '**रोजकरी**' ನೋ.

**रोजनामा** (ರೋಜನಾಮಾ) ಪು. ಫಾ. ಖಾತೆ ಲೆಕ್ಕದ ಪುಸ್ತಕ, ಖತಾವಣಿ, ಖಾತೆವಹಿ.

**रोजनिशी** (ರೋಜನಿಶೀ) ಸ್ತ್ರೀ. ಫಾ. ದೈನಂದಿನಿ, ಡೈರಿ.

**रोजमजुरी** (ರೋಜಮಜೂರೀ) ಸ್ತ್ರೀ. ಫಾ. ದಿನಗೂಲಿ.

**रोजमरा–मारा** (ರೋಜಮರಾ–ಮಾರಾ) ಪು. ಫಾ.
**रोजमुरा** (ರೋಜಮುರಾ) ಪು. } ಕೂಲಿ, ಸಂಬಳ, ಜೀತ, ಪಗಾರ.

**रोजमेळ** (ರೋಜಮೇಳ್) ಪು. ದೈನಿಕ ಹೊಂದಾಣಿಕೆ, ದಿನದ ತಾಳೆ.

**रोजवडा** (ರೋಜವಡಾ) ಪು. ದಿನದ ಲೆಕ್ಕ. '**रोजकीर्द**' ನೋ.

**रोजवारी** (ರೋಜವಾರೀ) ಸ್ತ್ರೀ. ದಿನದ ವರದಿ, ದೈನಿಕ ವರದಿ.

**रोजा** (ರೋಜಾ) ಪು. ಅರ. ರಮಜಾನ್‌ದ ಉಪವಾಸ. ೨. ಗೋರಿ. ೩. ತೋಟ.

**रोजिनदार** (ರೋಜಿನದಾರ್) } ಪು. } ದಿನದ ಸಂಬಳದವನು.
**रोजीवाला** (ರೋಜೀವಾಲಾ) }

**रोजि(जी)ना** (ರೋಜಿ(ಜೀ)ನಾ) ವಿ. ದಿನಗೂಲಿಯವ. ೨. ಪ್ರತಿದಿನ.

**रोजी** (ರೋಜೀ) ಸ್ತ್ರೀ. ಫಾ. ದಿನಗೂಲಿ, ದಿನದವೆಚ್ಚ, ದಿನದಬಳಿಕೆ, ಭತ್ತೆ. ೨. ವ್ಯವಸಾಯ. ೩. ಕ್ರಿ. ವಿ. ಪ್ರತಿದಿನಕ್ಕೆ.

**रोट** (ರೋಟ್) ಪು. ದಪ್ಪರೊಟ್ಟಿ, ರೊಟ್ಟಿ, ಬಕ್ಕರಿ.

**रोटी** (ರೋಟೀ) ಸ್ತ್ರೀ. ರೊಟ್ಟಿ, ಬಕ್ಕರಿ.

**–बेटी व्यवहार** (–ಬೇಟೀ ವ್ಯವಹಾರ) ಪು. ಭೋಜನ, ಮದುವೆ, ಮುಂ.ಗಳ ಸಂಬಂಧ.

**रोठा** (ರೋಠಾ) ಪು. } ತಯಾರಾದ ಅಡಿಕೆ, ಪಕ್ವವಾದ ಅಡಿಕೆ.
**रोठीसुपारी** (ರೋಠೀಸುಪಾರಿ) ಸ್ತ್ರೀ. }

**रोड** (ರೋಡ್) ವಿ. } ಬಡಕ, ತೆಳ್ಳಗಿನ, ಸೊರಗಿದ, ಕ್ಷೀಣವಾದ, ತೆಳು.
**रोडका** (ರೋಡಕಾ) ವಿ. }
**रोडगेला** (ರೋಡಗೇಲಾ) }

**रोडगा** (ರೋಡಗಾ) ಪು. ನೇವೇದ್ಯದ ರೊಟ್ಟಿ.

**रोडणे** (ರೋಡಣೇ) ಕ್ರಿ. ಅ. ಸೊರಗು, ಸವೆ, ಕ್ಷೀಣವಾಗು, ಅಶಕ್ತನಾಗು, ಬಲಗುಂದು.

**रोडावणे** (ರೋಡಾವಣೇ) ಕ್ರಿ. ಅ. ಕೃಶವಾಗು, ಬಡಕಾಗು, ತೆಳ್ಳಗಾಗು.

**रोदन** (ರೋದನ್) ನ. ಸಂ. ಅಳುವಿಕೆ, ಆಕ್ರೋಶ, ದುಃಖ, ವಿಲಾಪ, ಕಣ್ಣೀರು ಸುರಿಸುವಿಕೆ.

**रोधणे** (ರೋಧಣೇ) ಕ್ರಿ. ಅಡ್ಡಿಮಾಡು, ತಡೆಹಿಡಿ, ಹಿಂದೆಜಗ್ಗು.

**रोध** (ರೋಧ) ನ. ಸಂ. ಅಡ್ಡಿ, ಆತಂಕ, ಅಡ್ಡಿಮಾಡುವಿಕೆ, ಹಿಂದೆಜಗ್ಗುವಿಕೆ.

**रोप** (ರೋಪ್) ನ. } ಸಸಿ, ಎಳೆಗಿಡ, ಕೋಮಲತರು, ವನಸ್ಪತಿ.
**रोपा** (ರೋಪಾ) }

**रोपणे** (ರೋಪಣೇ) ನಾಟು, ಅಂಕುರಿಸು, ಗಿಡಹಚ್ಚು, ಒಳಗೆತುರುಕು, ಒಳಹೊಗು.

**रोंबटणे** (ರೋಂಬಟಣೇ) ಕ್ರಿ. ಒಳಗೆ ನುಗಿಸು, ಬಲುಮೆಯಿಂದ ನುಗಿಸು, ಜುಲುಮೆಯಿಂದ ತುರುಕು.

**रोमटणे** (ರೋಮಟಣೇ) ಕ್ರಿ. ಅ. ನೂಕು, ದೂಡು, ತಿವಿ.

**रोम** (ರೋಮ್) ಪು. ಸಂ. ಕೂದಲು.

**रोमांच** (ರೋಮಾಂಚ) ಪು. ರೋಮಾಂಚ, ಕೂದಲಿನ ನವಿರು, ಪುಲಕ, ಮೈಮೇಲೆ ಮುಳ್ಳೇಳುವುದು.

**रोव** (ರೋವ್) ಪು. ನಡಿಸುವಿಕೆ, ನೆಡುವಿಕೆ, ನಿಲ್ಲಿಸುವಿಕೆ, ಅಂಕುರಿಸಿದ ಕಾಳು, ಮೊಳಕೆಯೊಡೆಯುವಿಕೆ.

**रोवणे** (ರೋವಣೇ) ಕ್ರಿ. ನೆಡು, ನಿಲ್ಲಿಸು.

**रोवंथ** (ರೋವಂಥ) ನ. ಪು. ಮೆಲುಕಾಡಿಸುವಿಕೆ, ಮೆಲುಕುಹಾಕುವಿಕೆ, ಮನನಮಾಡುವಿಕೆ.

**रोवंथणे** (ರೋವಂಥಣೇ) ಕ್ರಿ. ಮೆಲುಕಾಡಿಸು, ಚಿಂತಿಸು, ಧ್ಯಾನಮಾಡು.

**रोवळा** (ರೋವಳಾ) ಪು. ದೊಡ್ಡರವಳಿಗೆ, ದೊಡ್ಡಬುರಡಿ.

**रोवळी** (ರೋವಳೀ) ಸ್ತ್ರೀ. ರವಳಿಗೆ, ಅಕ್ಕಿ ತೊಳೆಯುವ ವಿಶಿಷ್ಟಾಕಾರದ ಬುಟ್ಟಿ.

**रोशनाई** (ರೋಶನಾಈ) ಸ್ತ್ರೀ. } ಉತ್ಸವದ ದೀಪಗಳು, ದೀಪೋತ್ಸವ.
**रोष्णाई** (ರೋಷ್ಣಾಈ) ಸ್ತ್ರೀ. }

**रोशेल** (ರೋಶೇಲ್) ನ. ಮಸಾಲೆಯ ಎಣ್ಣೆ.

**रोष** (ರೋಷ್) ಪು. ಸಂ. ಕ್ರೋಧ, ಸಿಟ್ಟು, ಕೋಪ, ಮುನಿಸು.

**रोह** (ರೋಹ್) ಪು. 'रोव' ನೋ.

**रोहिणी** (ರೋಹಿಣೀ) ಸ್ತ್ರೀ. ನಾಲ್ಕನೆಯ ನಕ್ಷತ್ರ, ರೋಹಿಣಿ, ಒಂಬತ್ತು ವರ್ಷದ ಬಾಲಿಕೆ.

**रोळ** (ರೋಳ್) ಪು. ಕ್ರಮ, ಪದ್ಧತಿ, ಅನುಕ್ರಮ, ಓಟ, ಗತಿ, ದಿಕ್ಕು, ನಡತೆ, ವೃತ್ತಿ, ಮಾಲಿಕೆ.

**रौद्र** (ರೌದ್ರ) ವಿ. ಸಂ. ರುದ್ರಾವತಾರ ತಾಳಿದ, ಕೋಪ, ಸಿಟ್ಟು, ಮುನಿಸು, ಕೋಪೋದ್ರೇಕ, ಕುಪಿತ, ಕ್ರೋಧಿತ, ಸಿಟ್ಟಾದ, ಮುನಿದ, ಸೆಣಸಿದ.

**रौप्य** (ರೌಪ್ಯ) ನ. ಸಂ. ಬೆಳ್ಳಿ, ರಜತ. ೨. ವಿ. ಬೆಳ್ಳಿಯ, ರಜತದ.

**रौरव** (ರೌರವ) ಪು. ಸಂ. ರೌರವ ನರಕ.

**रौक्ष्य** (ರೌಕ್ಷ್ಯ) ನ. ಸಂ. ಒಣತನ, ರುಕ್ಷ.

**ऱ्या ऱ्या** (ರ್‍ಯಾ ರ್‍ಯಾ) ಸ್ತ್ರೀ. ಬಾಲಕರು ಕೊಳಲೂದುವಿಕೆ.

**ऱ्या ऱ्या लावणे** (ರ್‍ಯಾ ರ್‍ಯಾ ಲಾವಣೇ) ಕ್ರಿ. ಅ. ತಕರಾರು ಹೇಳು.

# ल ಲ

**ल** (ಲ) ಮೂರನೆಯ ಅವರ್ಗೀಯ ವ್ಯಂಜನ, ಇಪ್ಪತ್ತೆಂಟನೆಯ ವ್ಯಂಜನ.

**लई** (ಲಈ) ವಿ. (ಗ್ರಾಮ್ಯ) ಬಹಳ, ಅಧಿಕ, ವಿಪುಲ.

**लईलूट** (ಲಈಲೂಟ್) ಸ್ತ್ರೀ. ಅತ್ಯಧಿಕತೆ, ಅತಿಶಯತೆ, ಹೇಳಲಾರದಷ್ಟು. ೨. ಇರುವಿಕೆ.

**लककन–दिशी** (ಲಕಕನ್–ದಿಶೀ) ಕ್ರಿ. ವಿ. ಒಮ್ಮೆಲೆ, ಚಟ್ಟನೆ, ಬೇಗನೆ.

**लकट(ड)णे** (ಲಕಟ(ಡ)ಣೇ) ಕ್ರಿ. ವಿ. 'लगडणे' ನೋ.

**लकडवाला** (ಲಕಡವಾಲಾ) ಪು. ಉರುವಲ ಮಾರುವವ, ಕಟ್ಟಿಗೆ ಮಾರುವವ.

**लकडा** (ಲಕಡಾ) ಪು. ಬೇಸಾಯ. ೨. ಬೆನ್ನುಹತ್ತುವಿಕೆ, ತೊಂದರೆಕೊಡುವಿಕೆ, ಪೀಡಿಸುವಿಕೆ, ಕಾಡುವಿಕೆ.

**लकडा लावणे** (ಲಕಡಾಲಾವಣೇ) ಕ್ರಿ. ಸಂ. ತೊಂದರೆ ಕೊಡು, ಪೀಡಿಸು, ಒತ್ತಾಯ ಮಾಡಿ ಬೇಡು.

**लकडी** (ಲಕಡೀ) ಸ್ತ್ರೀ. ಕಟ್ಟಿಗೆ, ಉರುವಲು, ಮರ, ಸೌದೆ.

**लकडखाना** (ಲಕಡ್‌ಖಾನಾ) ಪು. ಕಟ್ಟಿಗೆಯ ಅಡ್ಡೆ, ಸೌದೆಯ ಅಡ್ಡೆ.

**लकतर** (ಲಕತರ್) ನ. ಹರಕ ಅರಿವೆ, ತುಂಡು ಬಟ್ಟೆ, ಹರಕಬಟ್ಟೆ.

**लकपक** (ಲಕಪಕ್) ವಿ. ತೀವ್ರವಾದ, ಚುರುಕಾದ, ಸುಟಿಯಾದ, ಚಟುವಟಿಕೆಯ, ವ್ಯವಸ್ಥಿತ, ಅಚ್ಚುಕಟ್ಟಾದ, ನೆತ್ತಗಾದ, ಸೊಗಸಿನ, ಅಂದಚೆಂದವಾದ.

**लकब** (ಲಕಬ್) ಸ್ತ್ರೀ. ಅರ. ಕುಚೇಷ್ಟೆ, ಮಂಗಚೇಷ್ಟೆ, ೨. ಸ್ವಭಾವ, ರೀವಿ.

**लकलकणे** (ಲಕಲಕಣೇ) ಕ್ರಿ. ಅ. ಹೊಳೆ, ಮಿಂಚು, ಚೆಂದಕಾಣು, ಲಕಲಕಿಸು, ಪ್ರಕಾಶಿಸು, ಪ್ರಸಿದ್ಧಿ ಹೊಂದು, ಕೀರ್ತಿಪಡೆ, ಮಿನುಗು, ಥಳಥಳಿಸು.

**लकलकाट** (ಲಕಲಕಾಟ್) ಪು.} ಹೊಳೆಯುವಿಕೆ,
**लकलकी** (ಲಕಲಕೀ) ಸ್ತ್ರೀ. } ಮಿಂಚು, ಮಿಂಚುವಿಕೆ, ಪ್ರಕಾಶ, ಪ್ರಕಾಶಿಸುವಿಕೆ, ಕಾಂತಿ ತೇಜ, ಹೊಳಪು, ತೀಕ್ಷ್ಣಬುದ್ಧಿ ಚಮಕು.

**लकलकीत** (ಲಕಲಕೀತ್) ವಿ. ಮಿಂಚುವ, ಹೊಳೆಯುವ, ಪ್ರಕಾಶಿಸುವ, ಪ್ರಸಿದ್ಧಿಗೆಬರುವ.

**लकाकणे** (ಲಕಾಕಣೇ) ಕ್ರಿ. ಅ. 'लकलकणे' ನೋ.

**लकाकी** (ಲಕಾಕೀ) } ಸ್ತ್ರೀ. 'लकलकाट' ನೋ.
**लखाकी** (ಲಖಾಕೀ) }

**लंका** (ಲಂಕಾ) ಸ್ತ್ರೀ. ಸ. ರಾವಣನ ರಾಜಧಾನಿ.

**लंकेची पार्वती** (ಲಂಕೇಚೀ ಪಾರ್ವತೀ) ಸ್ತ್ರೀ. (ತ್ಯಾಗ ಮಾಡಿ) ಬಡತನಬಂದವಳು.

**लकारी** (ಲಕಾರೀ) ವಿ. ಅರಗಿನ ಒಡವೆ ಮಾಡುವವ, ಬಣ್ಣ ಕೊಡುವವ.

**लकेरी** (ಲಕೇರೀ) ಸ್ತ್ರೀ. (ಸಂಗೀತ) ಆಲಾಪ.

**लक्क** (ಲಕ್ಕ) } ಕ್ರಿ. ವಿ. { ಸ್ವಚ್ಛ, ಸ್ಪಷ್ಟ, ಝಳ
**लक्ख** (ಲಕ್ಖ) } { ಝಳ.

**लक्का** (ಲಕ್ಕಾ) ಪು. ಪಾರಿವಾಳ, ಸಮಾಚಾರ ಒಯ್ಯುವ ಹಕ್ಕಿ.

**लखपाचोळी** (ಲಖಪಾಚೋಳೀ) ಸ್ತ್ರೀ. ಸುಳ್ಳಾಡುವಿಕೆ, ವಾಚಾಳಿತನ.

**लखपति** (ಲಖಪತೀ) ಪು. ಲಕ್ಷಾಧೀಶ, ಕೋಟ್ಯಾಧೀಶ, ಶ್ರೀಮಂತ, ಕುಬೇರ.

**लखलखणे** (ಲಖಲಖಣೇ) ಕ್ರಿ. ಅ. ನಿಗಿನಿಗಿ ಮಿಂಚು, 'लकलकणे' ನೋ.

**लखाकी** (ಲಖಾಕೀ) ಸ್ತ್ರೀ. 'लकाकी' ನೋ.

**लखलखी** (ಲಖಲಖೀ) ಸ್ತ್ರೀ. 'लकलकी' ನೋ.

**लखलखाट** (ಲಖಲಖಾಟ್) ಪು. ಹೊಳೆಯುವಿಕೆ.

**लखलखीत** (ಲಖಲಖೀತ್) ಕ್ರಿ. ವಿ. 'लकलकीत' ನೋ.

**लखलाभ** (ಲಖಲಾಭ) ಪು. ದೊಡ್ಡಲಾಭ, ಬಹಳ ಲಾಭ, ವಿಶೇಷಲಾಭ.

**लखोटा** (ಲಖೋಟಾ) ಪು. ಲಖೋಟೆ, ಬಂದು ಮಾಡಿದ ಪತ್ರ, ಅಂಟಿಸಿದ ಪತ್ರ.

**लग** (ಲಗ್) ಪು. ತೊಲೆ, ಗಂಟು, ಬಂಧನ, ಸಂಬಂಧ ಸಂಖ್ಯೆಯಲ್ಲಿಯ ಸಮಾನತೆ.

**लंग** (ಲಂಗ್) ವಿ. ಅಶಕ್ತನಾದ, ತೀರಸೊರಗಿದ. ೨. ಕುಂಟ, ಹೆಳವ.

**लंगडणे** (ಲಂಗಡಣೇ) ಕ್ರಿ. ಅ. ಕುಂಟು, ನಿಲ್ಲು.

**लंगडदीन** (ಲಂಗಡದೀನ್) } ವಿ. { ಕುಂಟ, ಹೆಳವ,
**लंगडा** (ಲಂಗಡಾ) } { ಕಾಲ್ಮುರಿದವ.

**लंगणे** (ಲಂಗಣೇ) ಕ್ರಿ. ವಿ. ಕುಂಟು, ಕುಂಟನಡೆ, ಬೇನೆಬೀಳು.

**लगडघाई** (ಲಗಡ್‌ಘಾಈ) ಸ್ತ್ರೀ. ಅವಸರ, ಅಂತ್ಯತ ಅವಸರ.

**लगडणे** (ಲಗಡಣೇ) ಕ್ರಿ. ಅಂಟಿಸು, ಅಂಟುಹಚ್ಚು, ಅಂಟುಕೊಳ್ಳು, ಕೂಡಿಕೊಳ್ಳು.

**लगट** (ಲಗಟ) ಸ್ತ್ರೀ. ಅಂಟು, ಅಂಟಿಕೊಳ್ಳುವಿಕೆ, ಕೂಡುವಿಕೆ. ೨. ಸಲಿಗೆ,ಅಸಭ್ಯವರ್ತನೆ, (ಸ್ತ್ರೀಯ ರೊಡನೆ.)

**लगड** (ಲಗಡ್) ಸ್ತ್ರೀ. ಬಂಗಾರದ ಚಿಣಿ, ಬೆಳ್ಳಿಯ ಚಿಣಿ.

**लगडणे** (ಲಗಡಣೇ) ಕ್ರಿ. ಸ. ಬಂಗಾರ ಕರಗಿಸಿ ಸುರಿ, ಸುರುವು.

**लगत** (ಲಗತ್) ಸ್ತ್ರೀ. ಸಂಬಂಧ, ಹೊಂದಿಕೆ, ಸೇರಿಕೆ, ಬಂಧುತ್ವ,ನೆಂಟತನ, ಬೀಗತನ.೨ ಕ್ರಿ.ವಿ. ಹತ್ತಿರ.

**लगत मजकूर** (ಲಗತ್ ಮಜಕೂರ್) ಪು. ಅರ. ಉದ್ದಕ್ಕೆ ಬರೆದ ಲೇಖ, ಪರಿಚ್ಛೇದಮಾಡದೆ ಬರೆದ ಲೇಖ.

**लगता** (ಲಗತಾ) ವಿ. ನೆಂಟ, ಬೀಗ, ನೆರೆಯ. ೨.ಪು. ರಾಷ್ಟ್ರು, ಸಂಬಂಧ.

**लगती** (ಲಗತೀ) ವಿ. ಶರೀರ ಸಂಬಂಧದ, ಶರೀರ ಸಂಬಂಧವುಳ್ಳ,ವೈವಾಹಿಕ ಸಂಬಂಧದ, ಹತ್ತಿರದವ.

**लगदन** (ಲಗದನ್) ಕ್ರಿ.ವಿ. ಮಾಂಸದ ಮುಷ್ಟಿ, **लचका** ನೋ.

**लगदा** (ಲಗದಾ) ಪು. ಕೆಸರಮುದ್ದಿ, ಕಚ್ಚು.

**लगबग** (ಲಗಬಗ್) ಸ್ತ್ರೀ. ಗಡಬಿಡಿ, ಕೂಡಲೆ, ಅವಸರ, ಅವಸರದಿಂದ, ಗಡಿಬಿಡಿಯಿಂದ.

**लंगर** (ಲಂಗರ್) ಪು. ಲಂಗರ, ನಂಗರು, ನೇಗಿಲೆ, ಹಡಗು ನಿಲ್ಲಿಸುವ ಸರಪಣಿ.

**लंगरखोर** (ಲಂಗರಖೋರ್) ಲಂಗರಿನ ಹಗ್ಗ.

**लगा** (ಲಗಾ) ಪು. }
**लगाबांधा** (ಲಗಾಬಾಂಧಾ) ಪು. } ನೆಂಟತನ, ಸಂಬಂಧ.

**लगाम** (ಲಗಾಮ್) ಪು. ಫಾ. ಲಗಾಮು, ಕಡಿವಾಣ, ಅಂಕೆ.

**लगावणे** (ಲಗಾವಣೇ) ಕ್ರಿ. ಸ. }
**लगविणे** (ಲಗವಿಣೇ) ಕ್ರಿ. ಸ. } ಹೊಡೆ, ಬಡಿ. ಥಳಿಸು.

**लंगूल** (ಲಂಗೂಲ್) ನ. ಬಾಲ, ತೋಕೆ, ಪೃಚ್ಛ, ಕೊನೆ, ತುದಿ.

**लगेच** (ಲಗೇಚ್) ಕ್ರಿ. ವಿ. ಕೂಡಲೆ, ಒಮ್ಮೆಲೆ.

**लगेलगे** (ಲಗೇಲಗೇ) ಕ್ರಿ. ವಿ. ಅವಸರದಿಂದ, ಗಡಬಡಿಯಿಂದ, ಓಟ, ಆಡಾಡಿ, ಅವಸರ, ಗಡಬಿಡಿ, ಉತ್ಸುಕತೆ.

**लगेहात** (ಲಗೇಹಾತ್) ಕ್ರಿ.ವಿ. ಕೂಡಲೆ, ಆಗಿಂದಾಗ್ಗೆ, ಕೈಯಲ್ಲಿದ್ದಾಗಲೇ.

**लंगोट** (ಲಂಗೋಟ್) ಪು. ಜಟ್ಟಿಗಳು ಹಾಕುವ ಲಂಗಟ.

**लंगोटी** (ಲಂಗೋಟೀ) ಸ್ತ್ರೀ. ಲಂಗೋಟಿ, ಮುಂಜಿವೆಗೆ ಧರಿಸುವ ಬಟ್ಟೆಯ ಪಟ್ಟಿ, ಲಂಗಟ.

**लंगोटीमित्र** (ಲಂಗೋಟೀ ಮಿತ್ರ) ಪು. }
**लंगोटीयार** (ಲಂಗೋಟೀಯಾರ್) ಪು. } ಬಾಲ ಮಿತ್ರ, ಬಾಲ ಸ್ನೇಹ, ಲಂಗೋಟಿ ಗೆಳೆಯ.

**लगोलग** (ಲಗೋಲಗ್) }
**लगोलाग** (ಲಗೋಲಾಗ್) } ತತ್‌ಕ್ಷಣ,ಆಗಿಂದಾಗ್ಗೆ, ಉಸಿರು ಬಿಡದೆ.

**लग्न** (ಲಗ್ನ) ನ. ಸಂ. ವಿವಾಹ, ಮದುವೆ. ೨. ವಿ. ಸಂಬಂಧಿತ, ಜೋಡಿಸಿದ, ಹೊಂದಿದ.

**लग्नकार्य** (ಲಗ್ನಕಾರ್ಯ) ನ. ಸಂ. ಮದುವೆಯ ಕೆಲಸ, ಪ್ರಸಂಗ, ಮದುವೆಯ ಧಾರ್ಮಿಕ ವಿಧಿ.

**लग्नघटिका** (ಲಗ್ನಘಟಿಕಾ) ಸ್ತ್ರೀ. ಸಂ. ಮದುವೆಯ ಗಳಿಗೆ, ಲಗ್ನದವೇಳೆ, ಮದುವೆಯ ವೇಳೆ, ಯೋಗ್ಯ ಸಮಯ.

**लग्नचिठी** (ಲಗ್ನಚಿಠೀ) ಸ್ತ್ರೀ. ಮದುವೆಯ ಓತಣ, ಲಗ್ನದ ಆಮಂತ್ರಣ.

**लग्नचुडा** (ಲಗ್ನಚುಡಾ) ಪು. ತೋಳಸರಿಗೆ, ಕಂಕಣ, ಕಡಗ.

**लग्नप्रयोजन** (ಲಗ್ನಪ್ರಯೋಜನ) }
**लग्नप्रस्थ** (ಲಗ್ನಪ್ರಸ್ಥ) ನ. } ಮದುವೆಯ ಮೇಜವಾನಿ, ಮದುವೆಯ ಊಟ.

**लग्नमुहूर्त** (ಲಗ್ನಮುಹೂರ್ತ) ಪು. **लग्नघठिका** ನೋ.

**लग्नशिष्टाई** (ಲಗ್ನಶಿಷ್ಟಾಈ) ಸ್ತ್ರೀ. ಮದುವೆಯ ಮಧ್ಯಸ್ಥಿಗೆ.

**लग्नसराई** (ಲಗ್ನಸರಾಈ) ಸ್ತ್ರೀ. ಮದುವೆಯ ಹಂಗಾಮು, ಮದುವೆಯ ದಿನಗಳು.

**लग्नसोहळा** (ಲಗ್ನಸೋಹಳಾ) ಪು. ಲಗ್ನಸಮಾರಂಭ, ಮದುವೆಯ ವೈಭವ, ಲಗ್ನದಸಡಗರ.

**लंघणे** (ಲಂಘಣೇ) ಕ್ರಿ. ಅ. ಅಶಕ್ತನಾಗು, ಬಡಕಾಗು, ಸೊರಗು. ೨. ದಾಟು, ಮೀರು.

**लंघन** (ಲಂಘನ) ನ. ಉಪವಾಸ. ೨. ಸಂ. ದಾಟುವಿಕೆ, ಪಾರಾಗುವಿಕೆ.

**लघळ** (ಲಘಳ್) ವಿ. ಬಹಳ ಮಾತಾಡುವವ. ೨. ನಾಚಿಕೆಯಿಲ್ಲದವ.

**लघवी** (ಲಘವೀ) ಸ್ತ್ರೀ. ಮೂತ್ರ ವಿಸರ್ಜನ.

**लघिमा** (ಲಘಿಮಾ) ಪು. ಹಗುರುತನ, ಕಡಿಮೆತನ. ೨. ಹೀನಮಟ್ಟ.

**लघु**(ಲಘು) ವಿ.ಸಂ. ಸಣ್ಣದಾದ,ಕಿರಿದಾದ, ಹಗುರು, ಸಣ್ಣ, ಗಿಡ್ಡ,ತುಚ್ಛ.

**लघुकोन** (ಲಘುಕೋನ) ಪು. ಸಂ. ಲಘುಕೋನ.

**लघुत्व** (ಲಘುತ್ವ) ನ. ಸ. ಕಿರಿಯತನ, ಕಡಿಮೆಯ ತನ, ತುಚ್ಛತ್ವ, ಕೀಳ್ಮೆ.

**लघुलेखक** (ಲಘುಲೇಖಕ) ಪು. ಶೀಘ್ರಲೇಖಕ, ಧ್ವನಿ ಲೇಖಕ, ಆಶುಲೇಖಕ.

**लघुलेखन – लघ लेखन विद्या** (ಲಘುಲೇಖನ – ಲಘು ಲೇಖನ ವಿದ್ಯಾ) ನ. ಸಂ. ಆಶುಲೇಖನವಿದ್ಯೆ, ಶೀಘ್ರಲೇಖನವಿದ್ಯೆ (ಶಾರ್ಟ್‌ಹ್ಯಾಂಡ್)

**लघुशंका** (ಲಘುಶಂಕಾ) ಸ್ತ್ರೀ. ಮೂತ್ರ ವಿಸರ್ಜನೆ, ಒಂದಕ್ಕೆ ಹೋಗುವಿಕೆ, ಉಚ್ಚೆ ಹೊಯ್ಯುವಿಕೆ.

**लघ्वी** (ಲಘ್ವೀ) ಸ್ತ್ರೀ. ಸಂ. ಉಚ್ಚೆ, ಮೂತ್ರ. ೨. ಮೂತ್ರ ವಿಸರ್ಜನೆ.

**लचक** (ಲಚಕ್) ಸ್ತ್ರೀ. ಉಳುಕು 'लजत' ನರ ತೊಡಕು. ೨. ಚಪಲತೆ.

**लचकणे** (ಲಚಕಣೇ) ಕ್ರಿ. ಅ. ಉಳುಕುಹಿಡಿ, ಉಳುಕು ತುಂಬು, ನರಹಿಡಿ, ನರತೊಡಗು.

**लचका** (ಲಚಕಾ) ಪು. ಮಾಂಸದ ಮುಷ್ಟಿಗೆ, लगधन ನೋ.

**लचं(चां)ड** (ಲಚಂ(ಚಾಂ)ಡ) ನ. ತೊಡಕು, ೨. ಗೊಂದಲ, ಪೇಚಿನ ಪ್ರಸಂಗ,ಅರಿಷ್ಟ, ಬಿಕ್ಕಟ್ಟು.

**लचांडखोर**, (ಲಚಾಂಡಖೋರ್) ವಿ., **लचांडा–डी** (ಲಚಾಂಡಾ–ಡೀ) ವಿ. ಗೊಂದಲ ಹಾಕುವ, ಕಷ್ಟ ಕರ, ಅಡಚಣಿಯ, ಅಡಚಣಿಯುಳ್ಳ, ಕುಯು ಕ್ತಿಯ, ಸಲ್ಲದ ವ್ಯವಹಾರಸ್ಥ.

**लजत** (ಲಜತ್) ಸ್ತ್ರೀ. ಅರ. ರುಚಿ, ಸ್ವಾದ.

**लज्जा** (ಲಜ್ಜಾ) ಸ್ತ್ರೀ.ಸಂ. ಲಜ್ಜೆ, ಮಾನ, ಮರ್ಯಾದೆ, ಗೌರವ. ೨. ನಾಚಿಕೆ, ನಾಚುವಿಕೆ.

**लज्जेकज्जेने** (ಲಜ್ಜೆಕಜ್ಜೇನೇ) ಕ್ರಿ.ವಿ. ಮಾನಮರ್ಯಾದೆ ಯಿಂದ, ನಾಚಿಕೆಯಿಂದ, ಗೌರವದಿಂದ.

**लज्जायमान** (ಲಜ್ಜಾಯಮಾನ) ವಿ.ಸಂ., **लज्जाशील** ಲಜ್ಜಾಶೀಲ್) ವಿ. ನಾಚಿಕೆಯುಳ್ಳ, ಮರ್ಯಾದೆಯ, ನಾಚುವ. ನಾಚಿಕೆ ಕಳೆದುಕೊಂಡ.

**लज्जित** (ಲಜ್ಜಿತ) ವಿ. ಸಂ. ಲಜ್ಜಿತ, ಅಪಮಾನ ಹೊಂದಿದ.

**लज्जेचा** (ಲಜ್ಜೇಚಾ) ವಿ. ನಾಚಿಕೆಯ, **लज्जाशील** ನೋ.

**लटक** (ಲಟಕ್) ಸ್ತ್ರೀ. ಡೌಲು, ಸಡಗರ, ಠೀವಿ, ಮುಖಭಾವ, ರಾಗ, ಧಾಟಿ, ಪದ್ಧತಿ.

**लटकणे** (ಲಟಕಣೇ) ಕ್ರಿ.ಅ. ಅವಲಂಬಿಸಿರು, ತೂಗು ಹಾಕು, ಜೋತು ಬಿಡು, ಮುಗ್ಧನಾಗು.

**लटका** (ಲಟಕಾ) ವಿ. ಸುಳ್ಳು, ಅಸತ್ಯ, ಅಪ್ರಾಮಾ ಣಿಕ, ಪೊಳ್ಳು,ಜೊಳ್ಳು, ವ್ಯರ್ಥ, ಹುರುಳಿಲ್ಲದ. ೨. ಕೃತಕ, ನಟನೆಯ.

**लटकाताठा** (ಲಟಕಾತಾಠಾ) ಪು. ದುರಭಿಮಾನಿ, ವ್ಯರ್ಥಆಡಂಬರ, ಸುಳ್ಳುಜಂಭ.

**लटकावणे** (ಲಟಕಾವಣೇ) ನ. ತೂಗುಹಾಕು, ತೂಗು ಹಾಕಿಸು,ಜೋತಾಡಿಸು, ನೇತಾಡಿಸು, ಏಲಾಡಿಸು, ಹಿಂಬಾಲಿಸು.

**लटपट** (ಲಟಪಟ್) ಸ್ತ್ರೀ. ಸುಳ್ಳುಕಾರಣ, ಅಸತ್ಯ ನಿಮಿತ್ತ. ೨. ಜಗಳ, ವಾಗ್ವಾದ, ಕ್ಷೋಭ, ಭಯ.

**लटपटणे** (ಲಟಪಟಣೇ) ಕ್ರಿ. ಅ. ಸುಳ್ಳು ಕಾರಣ ಹೇಳು, ಅಸತ್ಯ ನಿಮಿತ್ತಮಾಡು, ಧೈರ್ಯಗುಂದು. ವಾಗ್ವಾದಿಸು, ಹಾಳಾಗು.

**लटपटीत** (ಲಟಪಟೀತ್) ವಿ. ಅಸ್ಥಿರ, ಚಂಚಲ, ಅಲೆ ದಾಡುವ, ಭಯಭೀತ, ಅಲ್ಲಾಡುವವ, ಹೊಯ್ದಾ ಡುವ.

**लटपट्या** (ಲಟಪಟ್ಯಾ) ವಿ. ಅತಿಪ್ರಸಂಗಿ, ಚುರುಕು, ಉಸಾಬರಿ ಮಾಡುವ. ೨. ದಿಟ್ಟ, ಪ್ರಯತ್ನಶೀಲ.

**लटंबर** (ಲಟಂಬರ್) ಸ್ತ್ರೀ.ಇಂ. (ಲಂಬರ್) ಗಂಟು ಮೂಟೆ, ಸೈನಿಕರ ಸಾಮಾನು, ಗೊಂದಲ. ೨. ಚಿಕ್ಕ ಮಕ್ಕಳ ಪರಿವಾರ, ಬಹಳ ಮಕ್ಕಳು.

**लटरफटर** (ಲಟರ್‌ಫಟರ್) ವಿ. ಸುಳ್ಳು ಸೊಟ್ಟು, ನಿರುಪಯೋಗಿ ವಸ್ತು, ಕಸ, ಮುಂತಾದುವು. ಬಗೆ ಬಗೆಯ ವಸ್ತು, ವಿವಿಧ ಸರಕು.

**लटलटणे** (ಲಟಲಟಣೇ) ಕ್ರಿ.ಸ. **लटपटणे** ನೋ.

**लटारणा** (ಲಟಾರಣಾ) ವಿ. ಬಹು ದೊಡ್ಡ, ಬಹಳ ಭಾರದ, ಭಯಂಕರ.

**लटिका** (ಲಟಿಕಾ) ವಿ. **लटका** ನೋ.

**लटीकवाद** (ಲಟೀಕವಾದ) ಪು. ಸುಳ್ಳುಸುದ್ದಿ, ಸುಳ್ಳು ಹೇಳಿಕೆ, ಸುಳ್ಳುಪ್ರಕಟಣೆ, ಅಸತ್ಯಪ್ರಚಾರ.

**लटोरा** (ಲಟೋರಾ) ವಿ. ಗಟ್ಟಿ, ದಪ್ಪ, ದಾಂಡಿಗ, ದಿಟ್ಟ.

लठ्ठ (ಲಠ್ಠ) ವಿ. ಸ್ಥೂಲ, ಲಠ್ಠ, ದಾಂಡಿಗ. ೨. ಪು. ಹಿಂ. ದೊಡ್ಡಬಡಿಗೆ, ದೊಡ್ಡಕೋಲು, ಸೊಂಟೆ, ದೊಣ್ಣೆ, ಟೊಣಪೆ.

लठ्ठनिरंजन, लठ्ठंभारती, लठ्ठेश्वर (ಲಠ್ಠನಿರಂಜನ್, ಲಠ್ಠಂಭಾರತೀ, ಲಠ್ಠೇಶ್ವರ) ಪು. ಗಟ್ಟಿಮನುಷ್ಯ, ಅಜಸ್ರ, ದಾಂಡಿಗ ಮನುಷ್ಯ, ಸ್ಥೂಲದೇಹದವನು.

लठ्ठालठ्ठी (ಲಠ್ಠಾಲಠ್ಠೀ) ಸ್ತ್ರೀ. ಬಡಿದಾಟ, ಬಡಿಗೆಯಿಂದ ಹೊಡೆದಾಟ.

लठ्ठा, लठ्ठ्या (ಲಠ್ಠಾ, ಲಠ್ಠ್ಯಾ) ವಿ. लठ ನೋ.

लंड (ಲಂಡ್) ಪು. ವಿಧಿ–ನಿಷೇಧವಿಲ್ಲದವನು, ನಾಸ್ತಿಕ, ಅಧಾರ್ಮಿಕ, ಧೂರ್ತಮನುಷ್ಯ, ಮೋಸಗಾರನು, ಕಪಟ ಮನುಷ್ಯ, ಯಾರನ್ನೂ ಲೆಕ್ಕಿಸದವನು.

लड (ಲಡ್) ಸ್ತ್ರೀ. (ಮುತ್ತಿನ) ಮಾಲೆ, ಹೂಮಾಲೆ.

लडथड (ಲಡಥಡ್) ಸ್ತ್ರೀ. ಜಗಳದ ವಿಷಯ, ವಾದದ ಸಂಗತಿ, ಪೇಚಿನ ಮಾತು.

लडी (ಲಡೀ) ಸ್ತ್ರೀ. लड ನೋ.

लडबड (ಲಡಬಡ್) ಸ್ತ್ರೀ. ಅವ್ಯವಸ್ಥೆ, ಅಸಡ್ಡಾಳತೆ, ನಡುವೆ ಮಾತಾಡುವಿಕೆ, ಬೇರೆಯವರ ಕೆಲಸದಲ್ಲಿ ಕೈಹಾಕುವಿಕೆ.

लडबडणे (ಲಡಬಡಣೇ) ಕ್ರಿ. ಸ. ಅಲ್ಲಾಡು, ಹರಿದಾಡು, ಕುಲುಕು, ನಡುವೆ ಬಾಯಿಹಾಕು.

लडबड्या (ಲಡಬಡ್ಯಾ) ಪು. ಎರಡನೆಯವರ ಕೆಲಸದಲ್ಲಿ ಕೈಹಾಕುವ, ಉಸಾಬರಿ ಮಾಡುವ.

लडिवाळ (ಲಡಿವಾಳ್) ವಿ. ಪ್ರೀತಿಯ, ಸಲುಗೆಯ, ಮುದ್ದಿನ, ಮೆಚ್ಚಿನ, ಅತಿಪ್ರಿಯ.

लंडी (ಲಂಡೀ) ವಿ. ಅಂಜುಬರುಕ, ಹೇಡಿ.

लड्डू (ಲಡ್ಡೂ) ಪು. ಉಂಡೆ, ಲಾಡೂ.

लढणे (ಲಢಣೇ) ಕ್ರಿ. ಸ. ಯುದ್ಧಮಾಡು, ಪ್ರಯತ್ನಿಸು, ಯತ್ನಿಸು, ಎದುರಾಗು, ಯೋಜನೆ ಪೂರೈಸು, ತೀರಮುಟ್ಟು.

लढत (ಲಢತ್) ಸ್ತ್ರೀ. ಹೋರಾಟ, ಕಾದಾಟ, ಪ್ರಯತ್ನ, ಯುದ್ಧ.

लढविणे (ಲಢವಿಣೇ) ಕ್ರಿ. ಸ. ಕಾದಾಡಿಸು, ಹೋರಾಡಿಸು, ಪ್ರಯತ್ನಿಸು, ಯುದ್ಧಮಾಡಿಸು, ಉಪಯೋಗಿಸು.

अक्कल, डोके– (ಅಕ್ಕಲ್, ಡೋಕೇ–) ಕ್ರಿ. ಸ. ಯೋಚಿಸು, ಹಂಚಿಕೆಹಾಕು.

लढवय्या (ಲಢವಯ್ಯಾ) ಪು. ವೀರನು, ಶೂರನು, ಯುದ್ಧಪಂಡಿತ, ಬಂಟನು.

लढाई (ಲಢಾಈ) ಸ್ತ್ರೀ. ಸಮರ, ಯುದ್ಧ, ಕಾಳಗ, ಹೋರಾಟ.

लढा (ಲಢಾ) ಪು. ಹೋರಾಟ, ಚಳುವಳಿ, ಅತಿ ಪ್ರಯತ್ನ, ವಿರೋಧ, ಅಡ್ಡಿ.

लढाऊ (ಲಢಾಊ) ವಿ. ಯುದ್ಧಸ್ವಭಾವದ, ಯುದ್ಧ ಸಂಬಂಧದ, ಕಾದಲು ಯೋಗ್ಯ.

लत (ಲತ್) ಸ್ತ್ರೀ. ಯುಕ್ತಿ, ತಂತ್ರ, ಹಂಚಿಕೆ. ೨. ಕೆಟ್ಟಚಟ, ದುರಭ್ಯಾಸ.

लता (ಲತಾ) ಸ್ತ್ರೀ. ಸಂ. ಬಳ್ಳಿ, ಲತೆ.

लतागृह (ಲತಾಗೃಹ) ನ. ಸಂ. ಬಳ್ಳಿ ಮಂಟಪ, ಬಳ್ಳಿ ಹಂದರ, ಲತಾಮಂದಿರ, ಲತಾಮಂಟಪ.

लतावणे (ಲತಾವಣೇ) ಕ್ರಿ. ಅ. ಕೆಟ್ಟಚಾಳಿಗೆ ಹತ್ತು, ದುರ್ಮಾರ್ಗಕ್ಕೆ ಹತ್ತು.

लत्ता (ಲತ್ತಾ) ಸ್ತ್ರೀ. ಸಂ. ಒದೆತ, ಲತ್ತೆ, ಕಾಲಿನೊದೆತ. ೨. ಫಾ. ಬಟ್ಟೆ, ಅರಿವೆ.

कपडा– (ಕಪಡಾ–) ಪು. ಅರಿವೆ ಅಂಚಡಿ.

लत्ताप्रहार (ಲತ್ತಾಪ್ರಹಾರ) ಪು. ಸಂ. ಒದೆತ ಹೊಡೆತ, ಒದೆತ, ಒದೆಯುವಿಕೆ.

लतकोडगा (ಲತಕೋಡಗಾ) ವಿ. ನಾಚಿಕೆಯಿಲ್ಲದವ, ಲಜ್ಜಾಹೀನ.

लथडणे (ಲಥಡಣೇ) लथाडणे (ಲಥಾಡಣೇ) ಕ್ರಿ. ಸ. ಒದೆ, ಲತ್ತೇಹಾಕು, ತಿರಸ್ಕರಿಸು, ಧಿಃಕರಿಸು, ತಳ್ಳಿಬಿಡು.

लदाव (ಲದಾವ್) ಪು. ಅರ. ಮಣ್ಣುಕಮಾನು, ಅರಲಿನ ಕಮಾನು, ಮಣ್ಣುಗೂಡೆ, ಕಮಾನುಕಟ್ಟಲು ಹಾಕಿದ ಮಣ್ಣುಗೂಡೆ.

लद्दा (ಲದ್ದಾ) ಪು. ಗಟ್ಟಿ ಕೆಸರು, ಗಟ್ಟಿ ರಾಡಿ, ಗಿಲಾವಿಗೆಯ ಕೆಸರು.

लपका (ಲಪಕಾ) ಪು. लचका ನೋ.

लंपट (ಲಂಪಟ) ವಿ. ಸಂ. ಅನುರಕ್ತ, ಸ್ತ್ರೀವ್ಯಾಮೋಹದ, ವಿಷಯಾಸಕ್ತ, ಐಹಿಕಸುಖಾಸಕ್ತ.

लपटणे (ಲಪಟಣೇ) लपेटणे (ಲಪೇಟಣೇ) ಕ್ರಿ. ಅ. ಸುತ್ತು, ಹೊದಿಕೆಹಾಕು.

लपंडाव (ಲಪಂಡಾವ) ಪು. लपंडाई (ಲಪಂಡಾಈ) ಕಣ್ಣುಮುಚ್ಚಾಲೆಯ ಆಟ, ಮೋಸಗಾರಿಕೆ, ಕಣ್ಣುಮುಚ್ಚಣಿಕೆಯ ಆಟ, ಗುಪ್ತಕಾರಸ್ಥಾನ.

लपणे (ಲಪಣೇ) ಕ್ರಿ. ಅ. ಅಡಗು, ಅಡಗಿಕೊಳ್ಳು, ಕಾಣದಂತಿರು, ಕಣ್ಮರೆಮಾಡು, ಬಚ್ಚಿಡು, ಅವಿತುಕೊಳ್ಳು.

**लपविणे** (ಲಪವಿಣೇ) ಕ್ರಿ. ಸ. ಅಡಗಿಸು, ಬಚ್ಚಿಡು, ಕಾಣದಂತಿರಿಸು, ಮುಚ್ಚಿಡು, ಅವಿತುಕೊಂಡಿರಿಸು.

**लपून छपून** (ಲಪೂನ್‌ಛಪೂನ್) ಕ್ರಿ. ವಿ. ಕದ್ದು ಮುಚ್ಚಿ, ತಿಳಿಯದಂತೆ, ಹೊಳೆಯದಂತೆ, ಕಳುವಾಗಿ, ಕಳ್ಳತನದಿಂದ.

**लप्पं छप्पं** (ಲಪ್ಪಂ ಛಪ್ಪಂ) ವಿ. ರಹಸ್ಯವಾಗಿ, ಗುಪ್ತ ತನದಿಂದ, ಗುಟ್ಟಾಗಿ.

**लपेट** (ಲಪೇಟ್) ಸ್ತ್ರೀ. ಸುತ್ತುವಿಕೆ.

**लपेटा** (ಲಪೇಟಾ) ಪು. ಬಳೆ, ಕಡಗ, ಕಂಕಣ, ತೋಡೆ, ತೋಳಸರಿಗೆ.

**लफ्फा** (ಲಫ್ಫಾ) ಪು. ೧. ಮುತ್ತಿನ ಸರ. ೨. ಜರ ತಾರೀ ವಸ್ತ್ರ.

**लफ्फेदार** (ಲಫ್ಫೇದಾರ್) ವಿ. ಜರದಂಚಿನ, ಜರದ.

**लफंगा** (ಲಫಂಗಾ) ವಿ. ಫಟಿಂಗ, ಮೋಸಗಾರ, ಠಕ್ಕ, ಸುಳ್ಳುಮಾತಿನ.

**लफंग्या** (ಲಫಂಗ್ಯಾ) ವಿ. ಅಲೆದಾಡುವವ, ಅಪ್ರಾಮಾಣಿಕ.

**लफडा -डे** (ಲಫಡಾ -ಡೇ) ನ. ಇಲ್ಲದ, ಒಣ ಉಸಾಬರಿ.

**लंब** (ಲಂಬ) ವಿ. ಸಂ. ಉದ್ಧವಾದ.

**लंब** (ಲಂಬ) ಪು. ಸಂ. **लंबक** (ಲಂಬಕ) ಪು. ನೀರ ಳತೆಯ ಗುಂಡು, ಲಂಬಕ, ಸಮಕೋನಗಾಮಿ, ನೇರಳತೆ, ಗಡಿಯಾರದ ಲಂಬಕ, ತೂಗಾಡುವ ಗೋಲು, ಗಡಿಯಾರದ ತೂಗಾಡುವ ಕೈ.

**लंबकर्ण** (ಲಂಬಕರ್ಣ) ಪು. ಲಂಬಕರ್ಣ, ಉದ್ದಕಿವಿ, ಚಾಡಿಕೇಳುವವ. ೨. ಕತ್ತೆ, ಮೊಲ.

**लंबवर्तुळ** (ಲಂಬವರ್ತುಳ) ನ. ಸಂ. ದೀರ್ಘವರ್ತುಲ, ಅಂಡಾಕೃತಿವರ್ತುಲ, 'ಪ್ಯಾರಾಬೋಲಾ'.

**लंबवर्तुळाकार** (ಲಂಬವರ್ತುಳಾಕಾರ) ವಿ. ದೀರ್ಘ ವರ್ತುಲಾಕಾರದ, ಅಂಡಾಕೃತಿ ವರ್ತುಲದ.

**लंबवृत्त** (ಲಂಬವೃತ್ತ) ನ. ಸಂ. ಅಂಡಾಕೃತಿ ವರ್ತುಲ.

**लंबा-बे** (ಲಂಬಾ-ಬೇ) ಕ್ರಿ. ವಿ. ಉದ್ದವಾಗಿ.

**लबलबीत** (ಲಬಲಬೀತ್) ತೆಳ್ಳಗೆ ನೀರುನೀರಾಗಿ· ವಿ. ಹಸಿಯಾದ, ಆರ್ದ್ರವಾದ, ತೆಳುವಾದ.

**लबाड** (ಲಬಾಡ್) ವಿ. ಮೋಸಗಾರ, ಸುಳು, (ಸಣ್ಣ ಹುಡುಗರಿಗೆ) ಹುಶಾರಿ, ಚುರುಕು.

**लबाडकी** (ಲಬಾಡಕೀ) **लबाडी** (ಲಬಾಡೀ) ಸ್ತ್ರೀ. ಅಸತ್ಯತೆ, ಅಸತ್ಯತನ, ಸಟೆ, ಹುಸಿ, ತಗಲು, ಅಸತ್ಯ, ಸುಳ್ಳು.

**लबाडझबाड** (ಲಬಾಡ್‌ಝಬಾಡ್) ವಿ. ಅಸತ್ಯವಾದ, ಅಸತ್ಯತನದ, ಸಟೆಯಾದ.

**लंबाडा-ड्या** (ಲಂಬಾಡಾ-ಡ್ಯಾ) ವಿ. ಉದ್ದ, ಎತ್ತರ, ಬಡಕ, ತಿಳುವಾದ, ಎತ್ತರವಾದ, ಉದ್ದಾಗಿ ತೆಳ್ಳಗಿರುವ.

**लंबायमान** (ಲಂಬಾಯಮಾನ) ವಿ. ಸಂ. ಜೋತಾಡುವ. ೨. ಅತಿಉದ್ದ. ೩. ಠಕ್ಕ. ೪. ಓಡಿಹೋದವ.

**लंबोदर** (ಲಂಬೋದರ್) ಪು. ಸಂ. ಗಣಪತಿ, ದೊಡ್ಡ ಹೊಟ್ಟೆ, ದೊಡ್ಡಹೊಟ್ಟೆಯುಳ್ಳವ.

**लब्ध** (ಲಬ್ಧ) ವಿ. ಸಂ. ದೊರೆತ, ಸಿಕ್ಕ, ಪ್ರಾಪ್ತ, ಗಳಿಸಿದ, ದೊರಕಿಸಿದ.

**लब्धप्रतिष्ठा-लब्धप्रतिष्ठित** (ಲಬ್ಧಪ್ರತಿಷ್ಠ-ಲಬ್ಧಪ್ರತಿಷ್ಠಿತ) ವಿ.ಸಂ. ಕೀರ್ತಿ ಹೊಂದಿದವನು, ಹೆಸರು ಗಳಿಸಿದವನು.

**लब्धि** (ಲಬ್ಧಿ) ಸ್ತ್ರೀ. ಸಂ. ಪ್ರಾಪ್ತಿ, ಲಾಭ, ಆದಾಯ, ಹಿತ, ಪ್ರಯೋಜನ.

**लभ्य** (ಲಭ್ಯ) ವಿ. ಸಂ. ದೊರೆಯುವ, ದೊರೆಯ ತಕ್ಕ, ದೊರಕಿಸತಕ್ಕ, ಪ್ರಾಪ್ಯ, ಹೊಂದತಕ್ಕ, ಸಂಪಾದಿಸಲು ಸುಲಭ, ಲಾಭ, ಫಾಯದೆ.

**लभ्यमान** (ಲಭ್ಯಮಾನ) ನ. ಗಳಿಕೆ, ಪ್ರಾಪ್ತಿ, ಪ್ರಾಪ್ತವಾಗುವಿಕೆ.

**लभ्यांश** (ಲಭ್ಯಾಂಶ) ಪು. ಸಂ. ಲಾಭ, ಹಿತ, ಪ್ರಯೋಜನ, ಫಾಯಿದೆ.

**लय** (ಲಯ) ಪು. ಲಯ, ಮಾಯ, ನಾಶವಾಗುವಿಕೆ, ನಾಶ, ಕೆಡು, ಆರಿಸುವುದು, ಏಕಾಗ್ರಚಿತ್ತ, ಅತಿ ವಿಪುಲತೆ, ನಿಲ್ಲುವಿಕೆ. ೨. ಲಯ (ಸಂಗೀತದಲ್ಲಿ)

**लयलूट** (ಲಯಲೂಟ್) ಸ್ತ್ರೀ. ಅತಿವಿಪುಲತೆ, ಅತ್ಯಂತ ಪ್ರಗತಿ.

**ललकारणे** (ಲಲಕಾರಣೇ) ಕ್ರಿ. ಅ. ಕೂಗು, ಒದರು, ಒದರಿಹೇಳು, ಪುಕಾರಿಸು, ಎಚ್ಚರಿಕೆಕೊಡು, ಅರಚು, ಬೊಬ್ಬಿಡು, ಗೋಳಿಡು. ೨. ಆಹ್ವಾನ, ಛಾಲೆಂಜ್.

**ललना** (ಲಲನಾ) ಸ್ತ್ರೀ. ಸಂ. ಸ್ತ್ರೀ, ಲಲನೆ, ಸುಂದರಿ, ಹೆಂಗಸು, ಸ್ವೈರವೃತ್ತಿಯ ಸ್ತ್ರೀ, ಅಂಕೆಯಿಲ್ಲದ ಸ್ತ್ರೀ, ಕಾಮುಕಸ್ತ್ರೀ.

**लललल** (ಲಲಲಲ) ಉದ್ಗಾರ, ಅಲಲಲ! ನಿರಾಶಾ ಜನಕ, ಆಶ್ಚರ್ಯಜನಕ, ಉದ್ಗಾರ.

**ललाट** (ಲಲಾಟ) ನ. ಸಂ. ಹಣೆ, ದೈವ, ದೈವ ಲೇಖನ.

**ललाटलिखित** (ಲಲಾಟಲಿಖಿತ) ವಿ. ಸಂ. ಹಣೆಯಲ್ಲಿ, ಬರೆದ, ದೈವಲಿಖಿತ, ಮೊದಲೇ ವಿಧಿಸಿದ, ಸಂಕಲ್ಪಿತ. ೨. ನ. ಹಣೆಯುಬರಹ.

**ललाटरेखा-षा** (ಲಲಾಟರೇಖಾ-ಷಾ) ಸ್ತ್ರೀ. ದೈವ ರೇಷೆ-ರೇಖೆ, ಹಣೆಬರೆಹ, ದೈವದಲ್ಲಿ ಬರೆದುದು.

**ललिता** (ಲಲಿತಾ) ಸ್ತ್ರೀ. ಸುಂದರ ಸ್ತ್ರೀ.

**लतुपतु** (ಲತುಪತು) ನ. } ಉಬ್ಬಿಸುವಿಕೆ, ನಂಬಿಸುವಿಕೆ, ಪುಸಲಾಯಿಸುವಿಕೆ, ಮೋಸಮಾಡುವಿಕೆ.
**लल्लुपत्तु** (ಲಲ್ಲುಪತ್ತು) }

**लव** (ಲವ್) ಸ್ತ್ರೀ. ಮೈಮೇಲಿನ ಕೋಮಲ ಕೂದಲು, (ಹೆಣ್ಣುಮಕ್ಕಳಿಗೆ) ಮೂಗಿನ ಕೆಳಗೆ ಮೀಸೆಯಂತೆ ಕಾಣುವ ಕೂದಲು.

**लवकर** (ಲವಕರ್) ಕ್ರಿ. ವಿ. ಬೇಗನೆ, ಶೀಘ್ರವಾಗಿ, ಅವಸರದಿಂದ, ಕೂಡಲೆ, ತ್ವರಿತವಾಗಿ, ಸತ್ವರ.

**लवका-लवचीक** (ಲವಕಾ-ಲವಚೀಕ್) ವಿ. ಬಗ್ಗಿಸುವಂತಹ, ಬಾಗುವ. ೨. ಸ್ಥಿತಿಸ್ಥಾಪಕ, ಮಿದುವಾದ, ಮೆತ್ತಗಾದ.

**लवचीकपणा** (ಲವಚೀಕಪಣಾ) ಪು. ಸ್ಥಿತಿಸ್ಥಾಪಕತ್ವ, ಗಟ್ಟಿತನ.

**लवंग** (ಲವಂಗ) ಸ್ತ್ರೀ. ಲವಂಗ.

**लवंगेल** (ಲವಂಗೇಲ್) ನ. ಲವಂಗದ ಎಣ್ಣೆ, ಲವಂಗ ತೈಲ.

**लवंडणे** (ಲವಂಡಣೇ) ಕ್ರಿ.ಸ. ಉರುಳಿಸು, ಬಾಗಿಸು, ಚೆಲ್ಲು. ೨. ಅಡ್ಡಾಗು, ಅಡ್ಡ ಮೈಚೆಲ್ಲು, ಪಕ್ಕಚೆಲ್ಲು, ಒರಗು, ಒರಗಿಕೊಳ್ಳು, ಅನು, ಆತುಕೊಳ್ಳು.

**लवण** (ಲವಣ್) ನ. ಸಂ. ಉಪ್ಪು, ಲವಣ, ಕ್ಷಾರ, ಕೆಳಭೂಮಿ. ೨. ವಿ. ಉಪ್ಪುಸ್ವಾದ, ಲವಣದ, ಕ್ಷಾರವುಳ್ಳ, ಉಪ್ಪಿನ.

**लवणी** (ಲವಣೀ) ಸ್ತ್ರೀ. ಬಾಗಿದಮೈ, ಬಾಗಿದದೇಹದ ಪೊಳ್ಳುಭಾಗ.

**लवणे** (ಲವಣೇ) ಕ್ರಿ. ಅ. ಬಾಗು, ಬಗ್ಗು, ಮಣಿ, ಎರಗು, ಡೊಗ್ಗು, ತಗ್ಗು, ವಶವಾಗು.

**लवलवणे** (ಲವಲವಣೇ) ಕ್ರಿ. ಅ. ತೆವಳು, ಹೂವಿನಂತೆ, ಒದ್ದಾಡು, ಯುಕ್ತಿತೋರು, ಮಾತಿನ ಆತುರತೆ ತೋರು.

**लवलवीत** (ಲವಲವೀತ್) ವಿ. ಬಾಗಿದ, ಬಗ್ಗಿದ, ಮಣಿದ, ಎರಗಿದ, ತಗ್ಗಿದ 'लपलपीत' ನೋ.

**लवला-लवलाही** (ಲವಲಾ-ಲವಲಾಹೀ) ಕ್ರಿ. ವಿ. ಬೇಗನೆ, ಕ್ಷಣದಲ್ಲಿ, ನಿಮಿಷದಲ್ಲಿ.

**लवलेश** (ಲವಲೇಶ) ಪು. ಸಂ. ತುಂಡು, ತುಣುಕು, ಹನಿ, ಅಂಶ, ಭಾಗ, ಚೂರು, ಅಲ್ಪಾಂಶ.

**लवाजमा** (ಲವಾಜಮಾ) ಪು. ಅರ. ಪರಿವಾರ, ಗೃಹಕೃತ್ಯಗಳು, ಮನೆಯಾಳು, ಸಂಗಡಿಗರು, ದೊಡ್ಡವರನ್ನು ಹಿಂಬಾಲಿಸಿರುವ ಆಳು-ಹೋಳು.

**लवाद** (ಲವಾದ್) ಪು. ಅರ. ಮಧ್ಯಸ್ಥ, ಪ್ರಮಾಣ ಪುರುಷ, ನ್ಯಾಯಸ್ಥ, ಪಂಚ.

**लवादी** (ಲವಾದೀ) ಸ್ತ್ರೀ. ಅರ. ಮಧ್ಯಸ್ಥನ ಕೆಲಸ, ನ್ಯಾಯಸ್ಥನ, ನ್ಯಾಯಾಧೀಶನ ಕರ್ತವ್ಯ, ಮಧ್ಯಸ್ಥನ ಸಂಬಂಧ.

**लव्हा** (ಲವ್ಹಾ) ಪು. ಕವುಜಗ ಹಕ್ಕಿಯ ಜಾತಿಯ ಪ್ರವಾಸ ಪಕ್ಷಿ, ನೀರಹಾವುಸೆ.

**लशकर, लष्कर** (ಲಶಕರ್, ಲಷ್ಕರ್) ನ.ಫಾ. ಲುಷ್ಕರ, ದಂಡು, ಸೈನ್ಯ.

**लष्करगिर** (ಲಷ್ಕರ್‌ಗಿರೀ) ಸ್ತ್ರೀ. ಫಾ. ಸೈನ್ಯದ ಚಾಕರಿ, ದಂಡಿನಲ್ಲಿಯ ನೌಕರಿ.

**लष्करी** (ಲಷ್ಕರೀ) ವಿ. ಫಾ. ಸೈನ್ಯದ, ಸೈನ್ಯ ಸಂಬಂಧದ.

**लशीखरूज** (ಲಶೀಖರೂಜ) ಸ್ತ್ರೀ. ತೀಟೆಬಿಡುವಹುರುಕು.

**लस** (ಲಸ್) ಸ್ತ್ರೀ. ಚುಚ್ಚುಮದ್ದು, ರೋಗಪ್ರತಿಬಂಧಕ ಔಷಧ.

**लसणा-ण्या** (ಲಸಣಾ-ಣ್ಯಾ) ಪು. ಚಿಣಚುಗಲ್ಲು, ಬಿಳಿಯ ಬಿರುಸುಗಲ್ಲು.

**लसलशीत** (ಲಸಲಶೀತ್) ವಿ. ಅತಿಪ್ರಕ್ಷುಬ್ಧ, ಕೆಂಪಗೆ ಕಾಯಿಸಿದ, ತಾಜಾ, ಮೋಹಕ, ಸುಂದರ, ವಿಕಸಿತ, ಅರಳಿದ.

**लसलसणे** (ಲಸಲಸಣೇ) ಕ್ರಿ. ಅ. ಪ್ರಕ್ಷುಬ್ಧವಾಗು, ಕುದಿ, ಕಾಯಿಸು, ತಾರುಣ್ಯದಿಂದ ಸುಂದರಕಾಣು, ಸೊಬಗುಹೊಂದು.

**लसूण लसण** (ಲಸೂಣ, ಲಸಣ) ಸ್ತ್ರೀ. ಬಳ್ಳೊಳ್ಳಿ.

**लहंगा** (ಲಹಂಗಾ) ಪು. ಝಗಾ, ಪರಕಾರ, ಲಂಗ (ಹೆಂಗಸರ ಹುಡುಗೆ). ೨. ಚಲ್ಲಣ, ಷರಾಯಿ, ಪಾಯಜಾಮು.

**लहर** (ಲಹರ) ಸ್ತ್ರೀ. ತರಂಗ, ತೆರೆ, ಅಲೆ, ಸ್ಫೂರ್ತಿ, ಕ್ಷಣಿಕ ಕಲ್ಪನೆ, ಆಲೋಚನೆ.

**लहरमारणे** (ಲಹರಮಾರಣೇ) ಕ್ರಿ. ಅ. ಸುತ್ತು ಹಾಕು, ಸುತ್ತಾಡು.

**लहरदार** (ಲಹರ್‌ದಾರ) ವಿ. ಮೋಜಿನವನು, ಊಹೆಗಾರನು, ಕಲ್ಪಕನು.

**लहरी** (ಲಹರೀ) ವಿ. ಲೋಲಮತಿ, ಚಂಚಲತೆ, ಅದ್ಭುತ.

**लहा** (ಲಹಾ) ಕ್ರಿ. ವಿ. } ದೇಕುತ್ತ, ದೇಗುತ್ತ, ತೇಕುತ್ತ, ಉತ್ಕಂಠಿತನಾಗಿ.
**लहालहा** (ಲಹಲಹಾ) ಕ್ರಿ. ವಿ. }

**लहान** (ಲಹಾನ್) ವಿ. ಸಣ್ಣ, ಕಿರಿ, ಗಿಡ್ಡ, ತುಸು.

**लहानखुरी** (ಲಹಾನ್‌ಖುರೀ) ವಿ. ಸಣ್ಣಕಾಲಿನ, ಗಿಡ್ಡಕಾಲಿನ.

**लहानगा** (ಲಹಾನಗಾ) ವಿ. ಸಣ್ಣವ, ಕಿರಿಯುವ, ಚಿಕ್ಕವ, ಗಿಡ್ಡ, ಎಳೆವಯಸ್ಸಿನ.

**लहानथोर** (ಲಹಾನ್‌ಥೋರ್) ವಿ. ಸಣ್ಣವರು ಮತ್ತು ದೊಡ್ಡವರು.

**लहानपण** (ಲಹಾನಪಣ್) ನ. ಚಿಕ್ಕತನ, ಎಳೆಯುತನ, ಕಿರಿಯತನ, ಬಾಲ್ಯ, ಚಿಕ್ಕಂದು, ಬಾಲ್ಯಾವಸ್ಥೆ.

**लहानसर** (ಲಹಾನ್‌ಸರ್) ವಿ. ಸಣ್ಣಮಾಟ.

**लहानसहान** (ಲಹಾನ್‌ಸಹಾನ್) ವಿ. ಸಣ್ಣ, ಸಾಮಾನ್ಯ.

**लहानावणे** (ಲಹಾನಾವಣೇ) ಕ್ರಿ. ಅ. ಸಣ್ಣಾಗು, ಕಡಿಮೆಯಾಗು, ಇಳಿ, ಬಡಕನಾಗು.

**लहीन** (ಲಹೀನ್) ವಿ. ಲೀನ, ನಮ್ರ, ವಿಧೇಯ, ನಿಗರ್ವದ, ವಿನಯಶೀಲ.

**लळा** (ಲಳಾ) ಪು. ಪ್ರೇಮ, ಮಮತೆ, ಆಸಕ್ತಿ, ಅಭಿರುಚಿ.

**लळीत** (ಲಳೀತ್) ನ. ಲಗ್ನಸಮಾರಂಭದ ಕಡೆಯ ದಿನದ ಮನರಂಜನೆ, ಗೊಂದಲ, ವಿವಾಹಾಂತ್ಯ ಮನರಂಜನೆ.

**लक्ष** (ಲಕ್ಷ) ಪು. ಲಕ್ಷ, ನೂರುಸಾವಿರ, ಶತಸಹಸ್ರ, ಆನಂದದ ಸಂಗತಿ, ಥಿಕ್ಕಿ, ಗುರಿ, ಚಿತ್ತ, ಹಾಸ್ಯಕ್ಕೆ ಪಾತ್ರವಾದ ವಸ್ತು.

**लक्षक** (ಲಕ್ಷಕ) ವಿ. ಧ್ಯಾನಗೊಡುವ, ನಿರೀಕ್ಷಿಸುವ, ಆಲೋಚನೆಮಾಡುವ.

**लक्षवाहणे** (ಲಕ್ಷವಾಹಣೇ) ಕ್ರಿ. ಸ. ಲಕ್ಷ್ಯಪುಷ್ಪ–ದಳ ದೇವರಿಗೆ ಏರಿಸು.

**लक्षण** (ಲಕ್ಷಣ) ನ. ಸಂ. ಲಕ್ಷಣ, ಚಿಹ್ನ, ಗುರುತು, ಕುರುಹು, ಸೂಚನೆ, ಸಂಜ್ಞೆ, ವ್ಯಾಖ್ಯೆ.

**लक्षणा** (ಲಕ್ಷಣಾ) ಸ್ತ್ರೀ. ಸಂ. ಗರ್ಭಿತಾರ್ಥ.

**लक्षशः** (ಲಕ್ಷಶಃ) ಕ್ರಿ. ವಿ. ಸಂ. ಲಕ್ಷಗಟ್ಟಲೆ, ಅಪರಂಪಾರ.

**लक्षावधि** (ಲಕ್ಷಾವಧಿ) ಕ್ರಿ. ವಿ. ಎಷ್ಟೋ, ಅಪರಿಮಿತವಾಗಿ, ಅಳತೆಯಿಲ್ಲದಷ್ಟು.

**लक्षाधीश** (ಲಕ್ಷಾಧೀಶ) ಪು. ಸಂ. (ಲಕ್ಷಾಧೀಶ, ಅತಿ (ಶ್ರೀಮಂತ, (ಕುಬೇರ.
**लक्षापति** (ಲಕ್ಷಾಪತಿ) ಪು.

**लक्षानुलक्ष** (ಲಕ್ಷಾನುಲಕ್ಷ) ಕ್ರಿ. ವಿ. ಲಕ್ಷಾನುಲಕ್ಷ, ಲಕ್ಷಗಟ್ಟಲೆ, ಅಸಂಖ್ಯ.

**लक्षिणे** (ಲಕ್ಷಿಣೇ) ಕ್ರಿ. ಅ. ಲಕ್ಷ್ಯವಿಡು, ನೋಡು, ಆಲೋಕಿಸು, ವಿಚಾರಮಾಡು, ಎದುರುನೋಡು, ದಾರಿನೋಡು, ನಿರೀಕ್ಷಿಸು.

**लक्षित** (ಲಕ್ಷಿತ) ವಿ. ಸಂ. ಲಕ್ಷ್ಯವಿಟ್ಟು, ನೋಡಿದ, ಆಲೋಚಿಸಿದ, ವಿಚಾರಮಾಡಿದ, ತಿಳಕೊಂಡ, ಅರಿತ, ಭೇದನೋಡಿದ, ವಿವೇಚಿಸಿದ.

**लक्ष्मी** (ಲಕ್ಷ್ಮೀ) ಸ್ತ್ರೀ. ಸಂ. ಲಕ್ಷ್ಮಿ, ಸಂಪತ್ತು, ಐಶ್ವರ್ಯ, ವಿಷ್ಣುವಿನ ಹೆಂಡತಿ, ಸೌಂದರ್ಯ, ಹಣ.

**लक्ष्मीपति** (ಲಕ್ಷ್ಮೀಪತಿ) ಪು. ವಿಷ್ಣು, ಐಶ್ವರ್ಯವಂತ. 'लक्षाधीश' ನೋ.

**लक्ष्मीचा होरा** (ಲಕ್ಷ್ಮೀಚಾ ಹೋರಾ) ಪು. ಸಂಪತ್ತಿನ ಕಾಲ, ಶ್ರೀಮಂತಿಕೆಯ ಕಾಲ, ಉನ್ನತಿಯ ಕಾಲ, ಪ್ರಗತಿಯ ಸಮಯ, ಏಳ್ಗೆಯ ಕಾಲ.

**लक्ष्मीवन्त** (ಲಕ್ಷ್ಮೀವಂತ್) ವಿ. ) ಶ್ರೀಮಂತಿಕೆಯುಳ್ಳ,
**लक्ष्मीवान्** (ಲಕ್ಷ್ಮೀವಾನ್) ವಿ. ) ಊರ್ಜಿತನಾದ, ಉನ್ನತಿಹೊಂದಿದ, ಏಳಿಗೆಯ.

**लक्ष्य** (ಲಕ್ಷ್ಯ) ನ. ಸಂ. ಗುರಿ, ಉದ್ದೇಶ್ಯ.

**लक्ष्यभेद** (ಲಕ್ಷ್ಯಭೇದ್) ಪು. ಗುರಿಹೊಡೆಯುವಿಕೆ, ಉದ್ದೇಶ ಸಾಧಿಸುವಿಕೆ.

**लाक, लाकण** (ಲಾಕ್, ಲಾಕಣ್) ಸ್ತ್ರೀ. ಹಗ್ಗಕ್ಕೆ ಕಟ್ಟಿದ ವಸ್ತು, ಹಗ್ಗಕ್ಕೆ ಸಂಬಂಧಿಸಿದ ವಿಷಯ.

**लाकूड** (ಲಾಕೂಡ್) ನ. ಕಟ್ಟಿಗೆ, ಸೌದೆ.

**लाकडी** (ಲಾಕಡೀ) ವಿ. ಕಟ್ಟಿಗೆಯ, ಕಟ್ಟಿಗೆಯಿಂದ ಮಾಡಿದ, ಸೌದೆಯ.

**लाकूडफाटा** (ಲಾಕೂಡ್‌ಫಾಟಾ) ಪು. ಕಟ್ಟಿಗೆಕುಳ್ಳು, ಉರವಲ.

**लांकणे** (ಲಾಂಕಣೇ) ಕ್ರಿ. ಸ. ಅರಗು ಕೂಡಿಸು, ಅರಗು ಒತ್ತು, ಅರಗಿನ ಲೇಪಕೊಡು, ಅರಗು ಲೇಪಿಸು, ಅರಗಿನ ಮುದ್ರೆಯೊತ್ತು.

**लाख** (ಲಾಖ್) ಸ್ತ್ರೀ. ಅರಗು. ೨. ಪು. ಒಂದುಲಕ್ಷ.

**लाखाचा पालनवाला–पोशिंदा** (ಲಾಖಾಚಾ ಪಾಲನವಾಲಾ–ಪೋಶಿಂದಾ) ಪು. ಲಕ್ಷಾವಧಿ ಜನರ ರಕ್ಷಕ ರಾಜ (ಶಿವಾಜಿ ಮಹಾರಾಜ).

**लाखाच्या ठिकाणी** (ಲಾಖಾಚ್ಯಾ ಠಿಕಾಣೀ) ಕ್ರಿ. ವಿ. ಲಕ್ಷಕ್ಕೆ ಸಮೀಪ, ಕಡಿಮೆಯೆಂದರೆ ಒಂದು ಲಕ್ಷ.

**लाखट** (ಲಾಖಟ್) ವಿ. ಅರ್ಧ ತುಂಬಿದ, ಅಪೂರ್ಣ.

**लाखटणे** (ಲಾಖಟಣೇ) ಕ್ರಿ.ಸ. ಅರಗುಹಚ್ಚು, ಅರಗು ತುಂಬು, ದಪ್ಪವಾಗು, ಸ್ಥೂಲವಾಗು, ಬಲಹೀನ ವಾಗು, ದುರ್ಬಲವಾಗು.

**लाखा** (ಲಾಖಾ) ಪು. ಬುರುಸು, ಜೂಲು, ಜಿಗಿ, ಭೂಸು,

**लाखो** (ಲಾಖೋ) ಕ್ರಿ. ವಿ. ಲಕ್ಷಗಟ್ಟಲೆ.

**लाखोटा** (ಲಾಖೋಟಾ) ಪು.ಹಿಂ. ಲಖೋಟೆ, ಅಂಟಿಸಿದ ಪತ್ರ, 'ಎನ್‌ವೆಲಪ್'.

**लाखोपति** (ಲಾಖೋಪತಿ) ಪು. ಲಕ್ಷಾಧೀಶ.

**लाखोली** (ಲಾಖೋಲೀ) ಸ್ತ್ರೀ. ಒಂದು ಲಕ್ಷದ ಸಂಖ್ಯೆ, ಲಕ್ಷದ ಗುಂಪು. ೨. ಲಕ್ಷಾವಧಿ ಬೈಗುಳ.

**लाखोशा** (ಲಾಖೋಶಾ) **लाखो** ನೋ.

**लाख्या** (ಲಾಖ್ಯಾ) ವಿ. ಲಕ್ಷದ ಬೆಲೆಯ, ಅಧಿಕಬೆಲೆಯ, ಪ್ರಥಮ ತರಗತಿಯ, ಅತ್ಯುತ್ತಮ, ಲಕ್ಷಕ್ಕೊಂದು.

**लाग** (ಲಾಗ್) ಪು. ಸಂಬಂಧ, ಯೋಗ್ಯ ಸಂಬಂಧ, ಏಕರೂಪ, ಏಕರೀತಿ, ಏಕನಿಷ್ಠೆ, ಸ್ಥಿರಭಾವ, ಸೊನ್ನೆ ಹೊಡೆತ, ಪ್ರಯತ್ನ, ಗುರಿ, ಉದ್ದೇಶ, ಹಂಗಾಮು, ಬಗಲರಿವೆ, (ಕುಪ್ಪಸದ.)

**लागट** (ಲಾಗಟ) ವಿ. ಚಟಹತ್ತಿದ, ವ್ಯಸನವುಳ್ಳ, ದಾರಿ ಹಿಡಿದ, ಚುಚ್ಚುಮಾತಿನ. ೨. ಪ್ರೇಮಮಾಡುವ.

**लागण** (ಲಾಗಣ) ಸ್ತ್ರೀ. ಬಿತ್ತುವಿಕೆ, ಬಿತ್ತುವಭೂಮಿ. ೨. ರೋಗದ ಪ್ರಸಾರ.

**लागणदार** (ಲಾಗಣದಾರ್) ಸ್ತ್ರೀ. ಭೂಸಾಗುವಳಿ ಮಾಡುವವ, ಭೂಮಿ ಉತ್ತುವವ, ರೈತ, ಒಕ್ಕಲಿಗ.

**लागणे** (ಲಾಗಣೇ) ಕ್ರಿ.ಅ. ಹತ್ತು. ೨. ಉತ್ಪನ್ನವಾಗು. ೩. ಸ್ಪರ್ಶಿಸು. ೪. (ಮನಸ್ಸಿಗೆ) ಹತ್ತು. ೫. ಪ್ರಾರಂಭಿಸು. ೬. ಬೆಲೆಬೀಳು. ೭. ಬೇಕಾಗು.

**लागून असणे** (ಲಾಗೂನ್ ಅಸಣೇ) ಕ್ರಿ. ಅ. ಹತ್ತಿ ಕೊಂಡಿರು, ಸಂಬಂಧವಿರು, ಸ್ನೇಹಕಾಯ್ದು ಕೊಂಡಿರು.

**लाग लागवड** (ಲಾಗ ಲಾಗವಡ್) ಸ್ತ್ರೀ. ಕಮತ ಮಾಡುವಿಕೆ, ಕಮತ, ಒಕ್ಕಲಿಗ, ಸಾಗುವಳಿ.

**लागलाच, लागलेला, लागलेच** (ಲಾಗಲಾಚ್, ಲಾಗ ಲೇಚ್, ಲಾಗಲೇಚ್) ಕ್ರಿ. ವಿ. ಕ್ಷಣದಲ್ಲಿ, ಒಮ್ಮೆಲೆ, ಆಗಿಂದಾಗ.

**लागलेला** (ಲಾಗಲೇಲಾ) ವಿ. ಹತ್ತಿದ, ಕೊಳೆತ, ತಿಂದ, ತುಕ್ಕು ಹಿಡಿದ, ಜಂಗು ಹತ್ತಿದ.

**लागवड** (ಲಾಗವಡ್) ಸ್ತ್ರೀ. ಸಾಗುವಳಿಖರ್ಚು, ವೆಚ್ಚ.

**लागवण** (ಲಾಗವಣ್) ಸ್ತ್ರೀ. ಬಿತ್ತುವಿಕೆ, ಬೀಜ ಚೆಲ್ಲುವಿಕೆ, ಬೀಜ ಹಾಕುವಿಕೆ.

**लागवेग** (ಲಾಗವೇಗ್) ಪು. ಅವಸರ, ತ್ವರೆ, ಗತಿ, ವೇಗ.

**लागाबांधा** (ಲಾಗಾಬಾಂಧಾ) ಪು. ಸಂಬಂಧ, ಆಪತ್ತು, ನೆಂಟತನ, ಬೀಗತನ.

**लागावळ** (ಲಾಗವಳ್) ಸ್ತ್ರೀ. ಗೆರೆ, ಮಾರ್ಗ, ಸರಪಳಿ, ಪದ್ಧತಿ.

**लागी** (ಲಾಗೀ) ಕ್ರಿ. ವಿ.
**लागून** (ಲಾಗೂನ್) ಕ್ರಿ. ವಿ. } ಸಮೀಪ, ನೆರೆಯಲ್ಲಿ, ಹತ್ತಿಕೊಂಡು, ಬಳಿ
**लागुनी** (ಲಾಗುನೀ) ಕ್ರಿ. ವಿ. ಯಲ್ಲಿ,... ಇಂದ.

**लागू** (ಲಾಗೂ) ವಿ. ಯುಕ್ತ, ಯೋಗ್ಯ, ತಕ್ಕ. ೨. ಅನ್ವಯಿಸುವ.

**लागू असणे** (ಲಾಗೂ ಅಸಣೇ) ಕ್ರಿ. ವಿ. ಸಂಬಂಧ ವಿರು, ಉಪಯೋಗ ಬೀಳು, ಅನ್ವಯಿಸು, ಉದಾ ಹರಣೆಯಾಗು, ಹತ್ತಿಕೊಂಡಿರು.

**लागू पडणे–होणे** (ಲಾಗೂ ಪಡಣೇ–ಹೋಣೇ) ಕ್ರಿ. ಅ. ಅನ್ವಯಿಸು, ಪರಿಣಾಮವಾಗು, ಸಫಲವಾಗು, ಹೊಂದಿಕೆಯಾಗು.

**लागू करणे** (ಲಾಗೂ ಕರಣೇ) ಕ್ರಿ. ಸ. ಅಂಟಿಸು, ಹಚ್ಚು, ಅಮಲಿನಲ್ಲಿತರು, ಪ್ರಮಾಣಿಸು, ಜಾರಿ ಮಾಡು.

**लांगूल** (ಲಾಂಗೂಲ) ನ. ಬಾಲ, ಪುಚ್ಛ, ಕೊನೆ, ತುದಿ, ಪರಿಮಿತಿ.

**–चालन** (–ಚಾಲನ್) ನ. ಸಂ. ಮುಖಸ್ತುತಿ ಮಾಡು, ದೈನ್ಯತೋರು.

**लागोपाठ** (ಲಾಗೋಪಾಠ) ಕ್ರಿ. ವಿ. ಒಂದರಹಿಂದೆ ಒಂದು, ಹತ್ತಿಕೊಂಡು, ಬೆನ್ನಿಗೆ ಹತ್ತಿಕೊಂಡು, ಕೂಡಲೆ.

**लाग्या** (ಲಾಗ್ಯಾ) ವಿ. ಶೂರ, ಬಲ್ಲಿದ, ಧೈರ್ಯವುಳ್ಳ, ಸೊಗಸಿನ, ವಿನೋದದ. ೨. ಸೊಗಸುಗಾರ, ಮೋಜಿ ನವನು.

**लाघव** (ಲಾಘವ) ನ. ಸಂ. ಲಘುತ್ವ, ಕಿರಿತನ, ಮಾರ್ದವ, ಸಭ್ಯತೆ, ಚುರುಕುತನ. ೨. ಮೋಸ.

**लाघवी** (ಲಾಘವೀ) ವಿ. ಮೋಹಕ.

**लाच** (ಲಾಚ್) ಸ್ತ್ರೀ. ಲಂಚ, ಗೋಪಾಳ.

**लाचखाऊ** (ಲಾಚ್‌ಖಾಊ) ವಿ. ಲಂಚಬಡಕ, ಲಂಚ ಗೂಳಿ.

**लाचखोर** (ಲಾಚಖೋರ್) ವಿ. } ಲಂಚಗೊಳಿ,
**लाचलुचपत** (ಲಾಚಲುಚಪತ್) ಸ್ತ್ರಿ. } ಲಂಚಬಡಕ
**लाचलूच** (ಲಾಚಲೂಚ) ಸ್ತ್ರಿ. } ತನ.

**लाचार** (ಲಾಚಾರ್) ವಿ. ಫಾ. ದಿಕ್ಕಿಲ್ಲದ, ನಿರಾಶ್ರಿತ, ನಿರಾಧಾರ. ೨. ಕೈಲಾಗದ ದೀನ.

**लाचारी** (ಲಾಚಾರೀ) ಸ್ತ್ರೀ. ದಿಕ್ಕಿಲ್ಲದಿರುವಿಕೆ, ಅಸಹಾಯ ಸ್ಥಿತಿ.

**लाचावणे** (ಲಾಚಾವಣೇ) ಕ್ರಿ. ಅ. ಮೋಹಕ್ಕೆಬೀಳು, ಚಟಹತ್ತು, ಆಧೀನವಾಗು.

**लांछन** (ಲಾಂಛನ) ನ. ಸಂ. ಗುರುತು, ಮುದ್ರೆ. ೨. ಕಲಂಕ, ಅಪವಾದ, ಗುಲ್ಲು.

**लांछित** (ಲಾಂಛಿತ) ವಿ. ಸಂ. ಗುರುತುಳ್ಳ ಚಿಹ್ನ, ಮುದ್ರಿತ, ಕಲಂಕಿತ, ಅಪವಾದಿತ, ಗುಲ್ಲುಹೊಡೆದ, ಒರೆದ.

**लाज** (ಲಾಜ್) ಸ್ತ್ರೀ. ಲಜ್ಜೆ, ನಾಚಿಕೆ, ಮರ್ಯಾದೆ, ಅವಮಾನ, ಸಂಕೋಚ, ದಾಕ್ಷಿಣ್ಯ, ಮುರುಕು.

**लाज राखणे** (ಲಾಜ ರಾಖಣೇ) ಕ್ರಿ. ಸ. ಮರ್ರ್ಯಾದೆ ರಕ್ಷಿಸು.

**लाजेकाजें** (ಲಾಜೇಕಾಜೇ) ಕ್ರಿ. ವಿ. ನಾಚಿಕೆ ಕಾಯ್ದುಕೊಂಡು.

**लाजट** (ಲಾಜಟ್) ವಿ. } ನಾಚುವ, ಲಜ್ಜೆಯುಳ್ಳ,
**लाजरा** (ಲಾಜರಾ) ವಿ. } ಸಂಕೋಚಿಸುವ, ದಾಕ್ಷಿಣ್ಯದ,
**लाजाळु** (ಲಾಜಾಳು) ವಿ. } ಮರವತ್ತಿನ, ವಿನಯದ.

**लाजणें** (ಲಾಜಣೇ) ಕ್ರಿ. ಅ. ನಾಚು, ಮುರುಕ ಮಾಡು, ಸಂಕೋಚಪಡು, ವಿನಯದೋರು, ದಾಕ್ಷಿಣ್ಯ ತೋರು, ಸ್ಪರ್ಶಿಸಲು ಅಂಜು.

**लाजभीड** (ಲಾಜಭೀಡ್) ಸ್ತ್ರೀ. ಲಜ್ಜೆ ಸಂಕೋಚ.

**लाजमर्यादा** (ಲಾಜಮರ್ಯಾದಾ) ಸ್ತ್ರೀ. ನಾಚಿಕೆ, ಮರ್ಯಾದೆ.

**लाजलज्जा** (ಲಾಜಲಜ್ಜಾ) ಸ್ತ್ರೀ. ನಾಚಿಕೆ ಮರ್ರ್ಯಾದೆ.

**लाजविणे** (ಲಾಜವಿಣೇ) ಕ್ರಿ. ಸ. ನಾಚಿಸು, ಮುರವತ್ತಿಗೆ ಹಾಕು. ೨. ಹಿಂದೆಹಾಕು.

**लाजाळू** (ಲಾಜಾಳೂ) ನ. ಮುಟ್ಟಲ ಮುರಿಕೆಗಿಡ, ವನಸ್ಪತಿ.

**लाजिमा** (ಲಾಜಿಮಾ) ಪು. ಅರ. ಕಾರ್ಯಕಲಾಪ, ಉದ್ಯೋಗ ಧಂದೆ, ಹಂಚಿಕೆ, ಉಪಾಯ, ನಿವಾರಣೆ.

**लाजिरवाणा** (ಲಾಜಿರವಾಣಾ) ವಿ. ನಾಚಿಕೆಯಾಗುವ, ನಾಚಿಕೆಗೇಡಿತನದ.

**लाट** (ಲಾಟ) ಸ್ತ್ರೀ. ತರಂಗ, ತೆರೆ. ೨. ಅಕಸ್ಮಾತಾಗಿ ಸಿಕ್ಕ ಧನ. ೩. ದೊಡ್ಡತೊಲೆ, ಜೆಲಗ, ದೊಡ್ಡಜೆಲಗ. ೪. ಹಾವಳಿ. ೫. ಜನಕ್ಷೋಭ.

**लाटणी–णे** (ಲಾಟಣೀ–ಣೇ) ಸ್ತ್ರೀ. ನ. ಲಟ್ಟಣಿಗೆ.

**लाटणे** (ಲಾಟಣೇ) ಕ್ರಿ. ಸ. ಲಟ್ಟಿಸು, ಅಗಲು ಮಾಡು. ೨. ಕಸಿದುಕೊಳ್ಳು, ಅಪಹರಿಸು.

**लाटण्या** (ಲಾಟಣ್ಯಾ) ವಿ. ದುಡುಕಿನ, ಅವಿಚಾರದ.

**लाटालाट** (ಲಾಟಾಲಾಟ್) ಸ್ತ್ರೀ. ಅರೆಯುವಿಕೆ, ತಿಕ್ಕುವಿಕೆ, ಕಸಿದುಕೊಳ್ಳುವಿಕೆ, ಲಟ್ಟಿಸುವಿಕೆ, ಕೈಕೊಡುವಿಕೆ.

**लाटचा** (ಲಾಟ್ಯಾ) ವಿ. ಅರೆಯುವ, ತಿಕ್ಕುವ, ಕಸಿದುಕೊಳ್ಳುವ.

**लाटचा गंगाजी** (ಲಾಟ್ಯಾ ಗಂಗಾಜೀ) ಪು. ತಿಕ್ಕುವವನು, ಬಲವಂತ ಪಡಿಸುವವನು.

**लाटा** (ಲಾಟಾ) ಪು. ಉಳ್ಳೆ, ಮುದ್ದೆ, ಗುಳ್ಳೆ.

**लाड** ಲಾಡ್) ಪು. ಬಹುವ, ಸಲಿಗೆ, ಸಲುಗೆ, ಪ್ರೇಮ, ಅಕ್ಕರ ಲಾಲನೆ.

**लाड पुरविणे** (ಲಾಡ ಪುರವಿಣೇ) ಕ್ರಿ. ಸ. ಮಕ್ಕಳು ಬೇಡಿದುದನ್ನು ಕೊಡು, ಲಾಲಿಸು, ಮುದ್ದಿನಲ್ಲಿ ಬೆಳೆಸು.

**लाडावणे** (ಲಾಡಾವಣೆ) ಕ್ರಿ. ಅ. ಜಂಭಮಾಡು, ಹೆಮ್ಮೆಪಡು. ೨. ಕ್ರಿ. ಸ. ಮುದ್ದಿನಲ್ಲಿ ಬೆಳೆಸು, ಅಚ್ಛಾ ಮಾಡು.

**लाडका** (ಲಾಡಕಾ) ವಿ. ಸಲುಗೆಯ, ಪ್ರೀತಿಯ, ಲೋಲ, ಸಲುಗೆಯಿಂದ ಕೆಡಿಸು, ಪ್ರೀತಿಯಿಂದ ಗೆಡಿಸು.

**लांडगा** (ಲಾಂಡಗಾ) ಪು. ತೋಳ, ವೃಕ.

**लांडगी** (ಲಾಂಡಗೀ) ಸ್ತ್ರೀ. ಹೆಣ್ಣು ತೋಳ.

**लांडा** (ಲಾಂಡಾ) ವಿ. ಗಿಡ್ಡ, ಬಾಲಕಡಿದ. ೨. ಪು. ಮುಸಲ್ಮಾನ.

**लांडाकारभार** (ಲಾಂಡಾಕಾರಭಾರ) ಪು. ಇಲ್ಲದ ಉಸಾಬರಿ, ಒಣಉಸಾಬರಿ, ಅಲ್ಲದ ಕಾರಭಾರ.

**लांडालटका** (ಲಾಂಡಾಲಟಕಾ) ವಿ. ಅಸತ್ಯವಾದ, ಸುಳ್ಳು, ಪೊಳ್ಳಾದ, ಬಡಾಯದ, ಕೊರತೆಯ, ಅಭಾವದ.

**लांडीलबाडी** (ಲಾಂಡೀಲಬಾಡೀ) ಸ್ತ್ರೀ. ಮೋಸ, ಸುಳ್ಳುತನ, ಸುಳ್ಳುಗಾರಿಕೆ.

**लाडीगोडी** (ಲಾಡೀಗೋಡೀ) ಸ್ತ್ರೀ. ಸವಿಮಾತಾಡುವಿಕೆ, ಮನವೊಲಿಸುವಿಕೆ, ಸುಳ್ಳು ಹೊಗಳುವಿಕೆ, ಉಬ್ಬಿಸುವಿಕೆ.

**विनवणी, विनवण्क** (ವಿನವಣೀ, ವಿನವಣೂಕ್) ಸ್ತ್ರೀ. ಬೇಡಿಕೆ, ಪ್ರಾರ್ಥನೆ, ವಿನಯಭಾವ.

**विनविणे** (ವಿನವಿಣೇ) ಕ್ರಿ. ಸ. ಬೇಡು, ಪ್ರಾರ್ಥಿಸು, ವಿನಯದೋರು, ನೆರಳು, ಭಿಕ್ಷೆಬೇಡು.

**विना** (ವಿನಾ) ಕ್ರಿ. ವಿ. ಹೊರತು, ಅಲ್ಲದೆ, ಹೊರ್ತು, ಅದನ್ನುಳಿದು.

**विनाकारण** (ವಿನಾಕಾರಣ) ಕ್ರಿ. ವಿ. ಕಾರಣವಿಲ್ಲದೆ, ಅನಿಮಿತ್ತವಾಗಿ, ಅಕಾರಣವಾಗಿ, ಹೇತುವಿಲ್ಲದೆ.

**विनाश** (ವಿನಾಶ) ಪು. ಸಂ. ಕೇಡು, ನಾಶ, ಪ್ರಲಯ, ಹಾನಿ, ಸಂಹಾರ, ವಿಧ್ವಂಸ.

**विनाशकाल** (ವಿನಾಶಕಾಲ) ಪು. ಸಂ. ದುರ್ದೈವ, ಪ್ರಲಯಕಾಲ, ಸಂಹಾರಸಮಯ, ವಿಧ್ವಂಸವೇಳೆ.

**विनाश काले विपरीत बुद्धिः** (ವಿನಾಶ ಕಾಲೇ ವಿಪರೀತ ಬುದ್ಧಿಃ) ಸ್ತ್ರೀ. ಸಂ. ಗಾದೆಯ ಮಾತು. ಕೇಡಿನ ಕಾಲಕ್ಕೆ ಕೇಡಿನ ಬುದ್ಧಿ, ದೈವಹತ್ಯಕ್ಕೆ ಪಾಪಬುದ್ಧಿ.

**विनाशी** (ವಿನಾಶೀ) ವಿ. ಸಂ. ನಾಶಹೊಂದುವ, ಕೊಳೆಯುವ, ಕ್ಷೀಣದಶೆಗೆ ಬರುವ.

**विनिमय** (ವಿನಿಮಯ) ಪು. ಸಂ. ಬದಲಾಯಿಸುವಿಕೆ, ಕೊಡಕೊಳ್ಳುವಿಕೆ, ಸಾಟೆ, ವಟಾವು, ಹುಂಡಿಯ ಧಾರಣೆ, ಹುಂಡಿ ಕೊಡಕೊಳ್ಳುವಿಕೆ, ಅದಲುಬದಲು.

**विचार विनिमय** (ವಿಚಾರ ವಿನಿಮಯ) ಪು. ಸಂ. ವಿಚಾರದ ಅದಲು ಬದಲು, ಕೂಡಿ ವಿಚಾರಿಸುವಿಕೆ.

**विनियोग** (ವಿನಿಯೋಗ) ಪು. ನಿಯಮನ, ಅಧಿಕಾರ, ಪದವಿ, ಅರ್ಜಿ, ಪ್ರಾರ್ಥನೆ, ಮನವಿ, ಬಿನ್ನಹ. ೨ ಖರ್ಚು, ಉಪಯೋಗ, ಬಳಕೆ.

**विनीत** (ವಿನೀತ) ಪು. ಅಭ್ಯಸಿತ, ಸುಶಿಕ್ಷಿತ, ಪಾರಂಗತ, ತೇರ್ಗಡೆಯಾದ, ನಮ್ರ, ಸಾಧು, **विनयी** ನೋ.

**विनोद** (ವಿನೋದ) ಪು. ಮೋಜು, ಹಾಸ್ಯ, ಅಣಕು, ತಮಾಷೆ, ನಗೆಚಾಟಿಕೆ.

**विनोदास्पद** (ವಿನೋದಾಸ್ಪದ) ವಿ. ಸಂ. ಹಾಸ್ಯಾಸ್ಪದ, ವಿನೋದವೆನಿಸುವ, ನಗೆಗೀಡಾದ.

**विनोदी** (ವಿನೋದೀ) ವಿ. ವಿನೋದಿ, ವಿನೋದಿಸುವ, ವಿನೋದಗೊಳಿಸುವ, ನಗಿಸುವ, ಹಾಸ್ಯಕಾರಕ, ಚೇಷ್ಟೆಯ ಗುಣದ, ಹಾಸ್ಯಗಾರನಾದ.

**विन्मुख** (ವಿನ್ಮುಖ) ವಿ. ಸಂ. ಮೋರೆತಿರುವಿದ, ಪರಾಙ್ಮುಖ, ನಿವಾರಿಸಿದ, ಆಚೆಗಿರುವ, ತಪ್ಪಿದ, ವಿರುದ್ಧ, ಪ್ರತಿಕೂಲ, ಲಜ್ಜಿತ, ನಾಚಿದ.

**विपट** (ವಿಪಟ್) ಸ್ತ್ರೀ. ಭಿನ್ನಮತ, ವಿರುದ್ಧಮತ, ಪ್ರತಿಕೂಲತೆ, ಅಸಮ್ಮತಿ, ಜಗಳ ಅಸಮಾದಾನ, ಭಿನಾಭಿಪ್ರಾಯ, ತಡೆ, ತೊಂದರೆ.

**विपत्–द्** (ವಿಪತ್–ದ್) ಸ್ತ್ರೀ. ಸಂ. ಸಂಕಟ, ವಿಪತ್ತು, ಆತಂಕ, ಅಡ್ಡಿ, ಆಪತ್ತು, ದುರ್ದಶೆ.

**विपत्ति** (ವಿಪತ್ತಿ) ಸ್ತ್ರೀ. ಸಂ. ( ಅನರ್ಥ, ದುರವಸ್ಥೆ,
**विपदा** (ವಿಪದಾ) ಸ್ತ್ರೀ. ಸಂ. ( ದುಃಸ್ಥಿತಿ.

**विपथगामी** (ವಿಪಥಗಾಮೀ) ವಿ. ಸಂ. ವಾಮಮಾರ್ಗಿ, ದುರ್ಮಾರ್ಗಿ, ಅಡ್ಡಹಾದಿ ಹಿಡಿಯುವ.

**विपद्ग्रस्त** (ವಿಪದ್‌ಗ್ರಸ್ತ) ವಿ. ಸಂ. ( ವಿಪತ್ಪೀಡಿತ,
**विपन्न** (ವಿಪನ್ನ) ವಿ. ಸಂ. ( ಸಂಕಟಗ್ರಸ್ತ, ವಿಪತ್ತಿಗೊಳಗಾದ, ದುರ್ದೆಸೆಗೀಡಾದ.

**विपरीत** (ವಿಪರೀತ) ವಿ. ವಿರುದ್ಧ, ತಿರುವು, ಪ್ರತಿಕೂಲ, ಎದುರಾಗಿರುವ, ಹೊಂದಲಾರದ, ಸರಿಹೊಂದದ.

**विपर्यस्त** (ವಿಪರ್ಯಸ್ತ) ವಿ. ಸಂ. ತಪ್ಪಾಗಿ ತಿಳಿಸಿದ, ಸುಳ್ಳಾಗಿ ಹೇಳಿದ, ತಿರುವು ಮುರುವಾಗಿ ಹೇಳಿದ.

**विपर्यय** (ವಿಪರ್ಯಯ) ಪು. ಸಂ. ವಿರೋಧ, ಪ್ರತಿಕೂಲತೆ, ಎದುರಾಳಿ, ಹೊಂದದಿರುವಿಕೆ.

**विपर्यास** (ವಿಪರ್ಯಾಸ) ಪು. ಸ. ವಿರೋಧ, (ಅರ್ಥ) ಕೆಡಿಸುವಿಕೆ, ಪ್ರತಿಕೂಲತೆ.

**विपल** (ವಿಪಲ) ನ. ಸಂ. ಪಳದ ೬೦ನೆಯ ಭಾಗ.

**विपक्ष** (ವಿಪಕ್ಷ) ಪು. ಸಂ. ಎದುರಾಳಿ, ಪ್ರತಿವಾದಿ.

**विपाक** (ವಿಪಾಕ) ಪು. ಸಂ. ಪಕ್ವದೆಸೆ, ಪ್ರೌಢಾವಸ್ಥೆ, ಪರಿಣಾಮ, ಪ್ರೌಢದಸೆ.

**विपिन** (ವಿಪಿನ್) ನ. ಸಂ. ಕಾಡು, ಅರಣ್ಯ, ಗುಡ್ಡ, ವನ.

**विपुल** (ವಿಪುಲ) ವಿ. ಸ. ಬಹಳ, ಧಾರಾಳ, ಅಗಣಿತ, ಬೇಕಾದಷ್ಟು, ಸಮೃದ್ಧ.

**विप्र** (ವಿಪ್ರ) ಪು. ಸಂ. ಬ್ರಾಹ್ಮಣ, ದ್ವಿಜ, ಹಾರುವ.

**विप्रलाप** (ವಿಪ್ರಲಾಪ) ಪು. ಜಗಳ, ಗದ್ದಲ, ಜಗಳಾಟ, ಅತಿದುಃಖ, ಬಡಬಡಿಸುವಿಕೆ, ಗಳಹುವಿಕೆ.

**विफल** (ವಿಫಲ್) ವಿ. ಸಂ. ನಿಷ್ಫಲ, ವ್ಯರ್ಥ, ನಿರುಪಯುಕ್ತ, ತೃಪ್ತಿಕರವಲ್ಲದ, ಹುರುಳಿಲ್ಲದ, ಒಯ್ಯಾರದ.

**विबुध** (ವಿಬುಧ್) ವಿ. ಪಂಡಿತ, ತತ್ವಜ್ಞ, ಜ್ಞಾನಿ, ಈಶ್ವರ, ದೇವತೆ.

**विभक्त** (ವಿಭಕ್ತ) ವಿ. ಸಂ. ಪಾಲಾದ, ಬೇರೆಯಾದ, ದೂರಿದ್ದ, ಅಗಲಿದ, ವಿಭಕ್ತ, ತುಂಡುಮಾಡಿದ, ಪ್ರತ್ಯೇಕಿಸಿದ.

**विभक्तभाव** (ವಿಭಕ್ತಭಾವ) ಪು. ದ್ವಿಭಾವ, ಎರಡು ಬಗೆ, ಇಬ್ಬಗೆತನ, ಪರಕೀಯ ಭಾವನೆ.

**विभक्ति** (ವಿಭಕ್ತಿ) ಸ್ತ್ರೀ. ಸಂ. (ವ್ಯಾಕರಣದಲ್ಲಿ) ವಿಭಕ್ತಿ.

**विभव** (ವಿಭವ) ಪು. ಸಂ. ಉಚ್ಚಪದವಿ, ವೈಭವ, ಮಹತ್ವ, ಡೌಲು, ಸಂಪತ್ತು, ಪ್ರಭಾವ, ಕೀರ್ತಿ, ಮಹಿಮೆ, ಶೋಭೆ, ತೇಜಸ್ಸು, ಗಾಂಭೀರ್ಯ.

**विभाग** (ವಿಭಾಗ) ಪಾಲು, ತುಂಡು, ಚೂರು, ಪ್ರತ್ಯೇಕವಾಡಿದ ಸ್ಥಿತಿ. ೨. ಖಾತೆ, ಇಲಾಖೆ.

**विभागदार** (ವಿಭಾಗದಾರ) ಪು. ಪಾಲುಗಾರ, ಹಕ್ಕುದಾರ, ಪಿತ್ರಾರ್ಜಿತ ಹಕ್ಕುದಾರ, ವತನದ ಹಕ್ಕುದಾರ, ದಾಯಾದಿ.

**विभागणे** (ವಿಭಾಗಣೇ) ಕ್ರಿ. ಸ. ಕಡಿ, ಭಾಗಮಾಡು, ಪಾಲುಮಾಡು, ಛೇದಿಸು, ವಿಂಗಡಿಸು, ಬೇರ್ಪಡಿಸು, ಹಂಚು.

**विभागित** (ವಿಭಾಗಿತ) ವಿ. ಭಾಗಿಸಲ್ಪಟ್ಟ, ಕಡಿದ, ಛೇದಿಸಿದ, ವಿಂಗಡಿಸಿದ, ಬೇರ್ಪಟ್ಟ.

**विभागी** (ವಿಭಾಗೀ) ಪು. **विभागदार** ನೋ.

**विभावन** (ವಿಭಾವನ) ನ. ಸಂ. } ವಿಚಾರಿಸುವಿಕೆ,
**विभावना** (ವಿಭಾವನಾ) ಸ್ತ್ರೀ. ಸಂ. } ಆಲೋಚಿಸುವಿಕೆ, ಕಲ್ಪಿಸುವಿಕೆ, ಗ್ರಹಿಸುವಿಕೆ, ಭಾವಿಸುವಿಕೆ, ಊಹಿಸುವಿಕೆ, ತರ್ಕಿಸುವಿಕೆ.

**विभाषा** (ವಿಭಾಷಾ) ಸ್ತ್ರೀ. ಪರಭಾಷೆ.

**विभिन्न** (ವಿಭಿನ್ನ) ವಿ. ಸಂ. ಬೇರೆಯಾದ, ಒಡೆದ, ಪ್ರತ್ಯೇಕಿಸಿದ, ಬೇರ್ಪಡಿಸಿದ.

**विभु** (ವಿಭು) ಪು. ಸಂ. ಸರ್ವಾಂತರ್ಯಾಮಿ, ಒಡೆಯ, ಈಶ್ವರ, ಸರ್ವವ್ಯಾಪಿ.

**विभू** (ವಿಭೂ) ಪು. ಸಂ. ಸೈನ್ಯ ರಚನೆ, ಸೈನ್ಯ, ವ್ಯೂಹ.

**विभूत** (ವಿಭೂತ್) ಸ್ತ್ರೀ. ಬೂದಿ, ರಕ್ಷಾ, ಭಸ್ಮ, ಐಶ್ವರ್ಯ.

**विभूति** (ವಿಭೂತಿ) ಸ್ತ್ರೀ. ರಕ್ಷಾ ಭಸ್ಮ. ೨. ದೈವಿಕ ಪುರುಷ, ವೀರ ಪುರುಷ, ಅವತಾರಿಕ ಪುರುಷ, ಸಾಧು, ಮಹಾ ಪುರುಷ.

**विभूति पूजा** (ವಿಭೂತಿ ಪೂಜಾ) ಪು. ಸ. ವೀರಪೂಜೆ, ಮಹಾ ಪುರುಷ ಗೌರವ, ಸಾಧು ಪುರುಷ ಪೂಜೆ, ವೀರ ಸತ್ಕಾರ.

**विभूषण** (ವಿಭೂಷಣ) ನ. ಸಂ. ಅಲಂಕಾರ, ಆಭರಣ, ಶೋಭೆ, ಅಲಂಕಾರ, ಭೂಷಣ, ಬಿರುದಿನ ಗುರುತು.

**विभ्रम** (ವಿಭ್ರಮ) ಭ್ರಾಂತಿ, ಭ್ರಮೆ, ತಪ್ಪು, ಅಶುದ್ಧ, ಅತಿಕ್ರಮ, ತಪ್ಪು ಅಭಿಪ್ರಾಯ, ಗೊಂದಲ, ಹುಚ್ಚು, ಮೂರ್ಛೆ, ತಲೆತಿರುಗುವಿಕೆ.

**विभ्रांत** (ವಿಭ್ರಾಂತ) ವಿ. ಭ್ರಮಿಷ್ಟ, ಭ್ರಾಂತಿಷ್ಠ, ಗೊಂದಲದಲ್ಲಿಬಿದ್ದ, ತಪ್ಪಿದ, ಆಶ್ಚರ್ಯಚಕಿತ.

**विमत** (ವಿಮತ) ವಿ. ಸಂ. ಸಮ್ಮತಿಸದಿರುವ, ಅಸಮ್ಮತ, ಒಪ್ಪದ, ಅಮಾನ್ಯಮಾಡುವ, ಮೆಚ್ಚದಿರುವ, ಅನುಮೋದನ ಕೊಡದಿರುವ, ನಿರಾಕರಿಸುವ.

**विमति** (ವಿಮತಿ) ವಿ. ಸಂ. ಒಡೆದ, ತಿಳಿಗೇಡಿ, ಹುಚ್ಚ, ಅತ್ಯಂತ ಉತ್ಸುಕ.

**विमनस्क–विमना** (ವಿಮನಸ್ಕ–ವಿಮನಾ) ವಿ. ಸಂ. ದುಃಖಿತ, ಶೋಕಾಕುಲ, ದುಃಖಕರ, ಖಿನ್ನ, ಕ್ಷುಬ್ಧ.

**विमल** (ವಿಮಲ್) ವಿ. ಸಂ. ಸ್ವಚ್ಛ, ಸ್ಪಷ್ಟ, ಪವಿತ್ರ, ಶುಭ, ಮಂಗಲಕರ, ಯಶಸ್ಕರ.

**विमा** (ವಿಮಾ) ಪು. ಫಾ. ಇನ್ಶೂರೆನ್ಸ್, ವಿಮೆ.

**विमाता** (ವಿಮಾತಾ) ಸ್ತ್ರೀ. ಸಂ. ಮಲತಾಯಿ, ವಿಮಾತೆ.

**विमान** (ವಿಮಾನ) ನ. ಸಂ. ವಿಮಾನ, ಆಕಾಶಯಾನ.

**विमार्ग** (ವಿಮಾರ್ಗ) ಪು. ಸಂ. ವಿರುದ್ಧದಾರಿ, ಕೆಟ್ಟ ಹಾದಿ, ದುರ್ಮಾರ್ಗ, ಕೆಟ್ಟಹಂಚಿಕೆ.

**विमुक्त** (ವಿಮುಕ್ತ) ವಿ. ಸಂ. ಬಿಡುಗಡೆ ಹೊಂದಿದ, ವಿಮುಕ್ತ, ಸ್ವತಂತ್ರವಾದ, ಬಂಧಮುಕ್ತ, ಸಡಿಲಾದ.

**विमुक्ति** (ವಿಮುಕ್ತಿ) ಸ್ತ್ರೀ. ಸಂ. ಅಂತ್ಯಮುಕ್ತಿ, ಮೋಕ್ಷ.

**विमुख** (ವಿಮುಖ) ವಿ. ಸಂ. ಮೋರೆ ತಿರುವಿದ, ವಿರುದ್ಧ.

**विमेकरी–विमेदार** (ವಿಮೇಕರೀ–ವಿಮೇದಾರ್) ಪು. ವಿಮೆಮಾಡಿದವನು, ವಿಮೆ ಇಳಿಸಿದವನು.

**विमोचन–विमोक्षण** (ವಿಮೋಚನ–ವಿಮೋಕ್ಷಣ) ನ. ಸಂ. ಬಿಡುಗಡೆ, ಸಡಿಲುಮಾಡುವಿಕೆ, ಸ್ವತಂತ್ರವಾಗುವಿಕೆ, ಬಂಧನ ರಹಿತವಾಗುವಿಕೆ.

**वियद्गंगा** (ವಿಯದ್ಗಂಗಾ) ಸ್ತ್ರೀ. ಸಂ. ಆಕಾಶಗಂಗೆ, ದೇವಗಂಗೆ, ಸುಂದರವಸ್ತು, ವಿದ್ವನ್ಮಂಡಲ.

**वियुक्त, वियोजित** (ವಿಯುಕ್ತ, ವಿಯೋಜಿತ) ವಿ., ವಿ. ಸಂ. ಕೂಡಿದ, ಸಂಲಗ್ನ, ಪ್ರತ್ಯೇಕಿಸಿದ, ಬೇರ್ಪಡಿಸಿದ, ಬಿಡಿಸಿದ, ದೂರಮಾಡಿದ.

**वियोग** (ವಿಯೋಗ) ಪು. ಅಗಲುವಿಕೆ, ದೂರಾಗುವಿಕೆ, ಬಿಡುಗಡೆ, ವಿಂಗಡನೆ, ನಿಯೋಗ, ವಿಚ್ಛೇದ.

**विरक्त** (ವಿರಕ್ತ) ವಿ. ಸಂ. ಸಾಧು, ವಿಕಾರಮುಕ್ತ, ಸನ್ಯಾಸಿ, ಸಂಸಾರತ್ಯಕ್ತ, ಕರ್ಮಮುಕ್ತ.

**विरक्ति** (ವಿರಕ್ತಿ) ಸ್ತ್ರೀ. ಸಂ. ವೈರಾಗ್ಯ, ಕರ್ಮ ಮುಕ್ತಿ, ನಿವೃತ್ತಿ, ನಿರಾಶೆ.

**विरघळणे** (ವಿರ್ಘಳಣೇ) ಕ್ರಿ. ಅ. ಕರಗು, ಸಡಿಲಾಗು, ನೀರಾಗು, ದ್ರವಿಸು, ತಿಳುವಾಗು.

**विरचणे** (ವಿರಚಣೇ) ಕ್ರಿ. ಸ. ರಚಿಸು, ಮಾಡು, ವ್ಯವಸ್ಥೆಗೊಳಿಸು, ಕ್ರಮವಾಗಿಡು, ಸಾವರಿಸು.

**विरचित** (ವಿರಚಿತ) ವಿ. ಸಂ. ಮಾಡಿದ, ವ್ಯವಸ್ಥೆ, ಮಾಡಿದ, ಕ್ರಮವಾಗಿಟ್ಟ, ಸಾವರಿಸಿದ, ರಚಿಸಿದ.

**विरजण** (ವಿರಜಣ) ನ. ಹೆಪ್ಪು, ಹೆಪ್ಪುಹಾಕುವಿಕೆ.

**विरजण घालणे** (ವಿರಜಣ ಘಾಲಣೇ) ಕ್ರಿ. ಸ. ಹೆಪ್ಪು ಹಾಕು, ಹೆಪ್ಪಿಸು. ೨. ನಿರಾಶೆಗೊಳಿಸು.

**विरजण पाडणे** (ವಿರಜಣ ಪಾಡಣೇ) ಕ್ರಿ. ಸ. ಹದ ಗೆಡಿಸು, ಕೆಲಸ ಕೆಡಿಸು, ಧಿಃಕ್ಕರಿಸು.

**विरजणे** (ವಿರಜಣೇ) ಕ್ರಿ. ಅ. ಹೆಪ್ಪುಹತ್ತು, ಮೊಸ ರಾಗು. ೨. ಕ್ರಿ. ಅ. ಹೆಪ್ಪುಹಾಕು.

**विरड** (ವಿರಡ್) ಸ್ತ್ರೀ. ದಿನದ ಇಬ್ಭಾಗಗಳು.

**विरणे** (ವಿರಣೇ) ಕ್ರಿ. ಅ. ಕರಗು, ದ್ರವಿಸು, ದಯೆ ಬರು, ಅನುಮಾನಮಾಡು, ನೀರಾಗು, ತೆಳ್ಳಗಾಗು. ೨. (ಬಟ್ಟೆ) ನೇಯ್ಗೆ ಕೆಡು.

**विरथ** (ವಿರಥ) ವಿ. ಸಂ. ರಥಹೀನ, ರಥವಿಲ್ಲದ.

**विरपणे** (ವಿರಪಣೇ) ಕ್ರಿ. ಅ. ಕಳೆತೆಗೆ, ಕಸಕೀಳು, ಹೊಲಸು ತೆಗೆ.

**विरपणी** (ವಿರಪಣೀ) ಸ್ತ್ರೀ. ಕಳೆ, ಕಸ, ಹೊಲಸು, ಹೊಲಸು ತೆಗೆಯುವಿಕೆ.

**विरंबणे** (ವಿರಂಬಣೇ) ಕ್ರಿ. ಅ. ಲಜ್ಜಿತನಾಗು, ಲಜ್ಜೆ ಪಡು, ನಾಚು, ಭಂಗಿತವಾಗು.

**विरमणे** (ವಿರಮಣೇ) ಕ್ರಿ. ಅ. ನಿಲ್ಲು. ೨. ವಿಶ್ರಮಿಸು. ೩. ಮೆತ್ತಗಾಗು.

**विरल** (ವಿರಲ) ವಿ. ಸಂ. ತೆಳುವಾದ, ಅಪರೂಪ ವಾದ, ವಿಲವಾದ, ಅಪೂರ್ವ, ಉತ್ಕೃಷ್ಟ, ಸಡಿ ಲಾದ, ಕಳಚಿದ,

**विरवड** (ವಿರವಡ್) ಸ್ತ್ರೀ. ಬಿತ್ತಿದ ಉಪಧಾನ್ಯ, ಅಕ್ಕಡಿಕಾಳು.

**विरवदी–धी** (ವಿರವದೀ–ಧೀ) ಸ್ತ್ರೀ. ಕಾಲುಂಗುರ.

**विरवीर** (ವಿರವೀರ್) ಸ್ತ್ರೀ. } ತಿನಿಸುವಿಕೆ, ತಿನಿಸು
**विरविरी** (ವಿರವಿರೀ) ಸ್ತ್ರೀ. } ಬಿಡುವಿಕೆ.

**विरविरणे** (ವಿರವಿರಣೇ) ಕ್ರಿ. ಸ. ತಿನಿಸು, ಕೆರೆ, ತುರಿಸು, ತಿನಿಸುಬಿಡು.

**विरविरीत** (ವಿರವಿರೀತ್) ವಿ. ಜರ್ಜರ, ಬಹಳ ಸವೆದ.

**विरस** (ವಿರಸ) ವಿ. ಸಂ. ರಸಹೀನ, ರಸರಹಿತ, ದುರ್ಮುಖ.

**विरह** (ವಿರಹ) ಪು. ಸಂ. ವಿಯೋಗ, ಅಗಲುವಿಕೆ, ದೂರಿರುವಿಕೆ, ಪ್ರತ್ಯೇಕವಾಗುವಿಕೆ.

**विरह व्यथा** (ವಿರಹ ವ್ಯಥಾ) ನ. ಸಂ. ( ವಿರಹದುಃಖ,
**विरह दुःख** (ವಿರಹ ದುಃಖ) ಪು. ಸಂ. ( ಅಗಲುವಿಕೆಯ ಕಷ್ಟ, ವಿಯೋಗ ವ್ಯಥೆ.

**विरहाग्नि, विरहानल** ( ವಿರಹಾಗ್ನಿ, ವಿರಹಾನಲ್ ) ಪು. ಸಂ. ವಿಯೋಗಾಗ್ನಿ, ವಿಯೋಗದುಃಖ, ವಿರಹ ತಾಪ, ವಿರಹಾಗ್ನಿ, ಅಗಲುವಿಕೆ ದುಃಖ, ವಿರಹ ವ್ಯಥೆ.

**विरहिणी** (ವಿರಹಿಣೀ) ಸ್ತ್ರೀ. ಸಂ. ಅಗಲಿದಾಕೆ, ದೂರಿ ದ್ದಾಕೆ, ಪತಿ ವಿಯೋಗದಿಂದ ದುಃಖಿತಳು.

**विरहित** (ವಿರಹಿತ) ವಿ. ಸಂ. ಇಲ್ಲದ, ಹೊರತಾದ.

**विरही** (ವಿರಹೀ) ಪು. ಸಂ. ವಿರಹಹೊಂದಿದವ.

**विरळा** (ವಿರಳಾ) ವಿ. ಅಪರೂಪ, ತೀರಕಡಿಮೆಯಾದ,

**विराग** (ವಿರಾಗ) ಪು. ಸಂ. ವಿಕಾರರಹಿತತನ, ಆಶಾ ತ್ಯಾಗ, ವ್ಯಾಮೋಹ ವಿಮುಕ್ತತೆ, ಅನಾಸಕ್ತಿ.

**विरागी** (ವಿರಾಗೀ) ವಿ. ಸಂ. ಬೈರಾಗಿ, ಸಾಧು, ಸಜ್ಜನ, ಸಂಸಾರ ತ್ಯಾಗಿ, ವಿಕಾರ ರಹಿತ, ಅನಾ ಸಕ್ತಿಯ.

**विराजणे** (ವಿರಾಜಣೇ) ಕ್ರಿ. ಅ. ಶೋಭಿಸು, ಚೆಂದ ಕಾಣು, ಸುಂದರಕಾಣು, ಹೊಳೆ, ಮಿಂಚು, ಪ್ರಕಾಶಿಸು.

**विराट्** (ವಿರಾಟ್) ವಿ. ಭಯಂಕರ, ದೊಡ್ಡ, ವಿಶಾಲ, ವಿಸ್ತೃತ.

**–पुरुष** (ಪುರುಷ) ಪು. ಸಂ. ಆದಿ ಪುರುಷ.

**विराजमान** (ವಿರಾಜಮಾನ) ವಿ. ಸಂ. ಶೋಭಿಸುವ, ಹೊಳೆಯುವ, ಸುಂದರ, ಕಂಗೊಳಿಸುವ.

**विराजित** (ವಿರಾಜಿತ) ವಿ. ಸಂ. ಅಲಂಕೃತ.

**विराम** (ವಿರಾಮ) ಪು. ಸಂ. ಆರಾಮು, ವಿಶ್ರಾಂತಿ, ವಿಶ್ರಮ, ತಡೆಯುವಿಕೆ, ನಿದ್ರೆ, ಆಶ್ರಯ, ಮೃತ್ಯು, ಸಾವು, ನಿಲುಗಡೆ, ಉತ್ಸಾಹ, ಸ್ಫೂರ್ತಿ, ಕಸುವು, ಅಡಿಕೆಗಿಡದ ತೊಗಟೆ.

**विरी** (ವಿರೀ) ಸ್ತ್ರೀ. ಶಕ್ತಿ, ಸಾಮರ್ಥ್ಯ, ಕಸುವು, ಬಲ.

**विरुद्ध** (ವಿರುದ್ಧ) ವಿ. ಸಂ. ವಿರುದ್ಧ, ವಿಪರೀತ, ಪ್ರತಿಕೂಲ, ಎದುರಾಗಿರುವ.

**विरूळ** (ವಿರೂಳ) ವಿ. ಜಾಳಿಗೆ, ಜಾಳಿಗೆಯಾಗಿ ನೇಯ್ದ, ಅಗಲಾಗಿ ನೇಯ್ದ.

**विरूढणे** (ವಿರೂಢಣೇ) ಕ್ರಿ. ಅ. ವಿರಾಜಮಾನನಾಗು, ಏರು, ಹತ್ತು, ಪಟಕ್ಕೆ ಚೌಕಟ್ಟುಹಾಕು, ಕಟ್ಟು, ಅಡರು, ಮೇಲೇರು.

**विरूप** (ವಿರೂಪ) ವಿ. ಸಂ. ಕೆಟ್ಟರೂಪದ, ಲಜ್ಜಿತ, ಅವಮಾನಿತ, ಕುರೂಪದ, ಅಸಡ್ಡಾಳ.

**विरोध** (ವಿರೋಧ) ಪು. ಸಂ. ವಿರೋಧ, ವಿಪರೀತ, ಎದುರಿಸುವಿಕೆ, ಪ್ರತಿಭಟನೆ, ಅಸಂಗತಿ.

**विरोधभक्ति** (ವಿರೋಧಭಕ್ತಿ) ಪು. ಸಂ. ವಿರೋಧಭಕ್ತಿ, ಪ್ರತಿಗಾಮಿಭಕ್ತಿ, ವ್ಯತ್ಯಾಸಭಕ್ತಿ, ಅನ್ಯಮಾರ್ಗ ಭಕ್ತಿ, ವಿರೋಧಮಯ ಭಕ್ತಿ, ಪ್ರತಿಭಟಿಸುವ ಭಕ್ತಿ, ಪ್ರತಿಯತ್ನ ಭಕ್ತಿ.

**विरोधी** (ವಿರೋಧಿ) ವಿ. ಸಂ. ವೈರಿ, ಎದುರಾಳಿ, ಅಲ್ಲದ್ದು, ಹೊಂದದ, ಪ್ರತಿದ್ವಂದಿ, ಎದುರಿಸುವವ, ಹೋರಾಡುವ, ಎದುರು ಬದಿಯ, ಪ್ರತಿಪಕ್ಷದ.

**विलग** (ವಿಲಗ) ವಿ. ಅಗಲಿದ, ಬೇರೆಯಾದ, ದೂರಾದ.

**विलग्न** (ವಿಲಗ್ನ) ವಿ. ಸಂ. ಅಗಲಿದ, ಬೇರ್ಪಟ್ಟ.

**विलंब** (ವಿಲಂಬ) ಪು. ಸಂ. ತಡ, ಸಾವಕಾಶತನ, ವಿಲಂಬ, ವಿಳಂಬ, ಆಲಸ್ಯ, ಸೋಮಾರಿತನ, ವೈಗಳ್ಳತನ.

**विलंबित** (ವಿಲಂಬಿತ) ವಿ. ಸಂ. ತಡಮಾಡಿದ, ಸಮಯ ಮೀರಿದ, ಆಲಸ್ಯದ, ತಾಮಸದ, ನಿಧಾನಿತ, ತಡವಾದ, ಸಾವಕಾಶವಾದ, ಮಂದ. ೨. (ಗಾಯನ) ವಿಲಂಬಿತ (ರಾಗ)

**विलय** (ವಿಲಯ) ಪು. ಸಂ. ನಾಶ, ಪ್ರಳಯ, ಸಂಹಾರ, ಧ್ವಂಸ, ವಿಧ್ವಂಸ.

**विलया जाणे** (ವಿಲಯಾ ಜಾಣೇ) ಕ್ರಿ. ಅ. ನಾಶವಾಗು, ಪ್ರಲಯವಾಗು, ಸಂಹಾರವಾಗು, ಲಯ ಹೊಂದು.

**विलसणे** (ವಿಲಸಣೇ) ಕ್ರಿ. ಅ. ಒಪ್ಪು, ಶೋಭಿಸು, ಪ್ರಕಾಶಿಸು, ಹೊಳೆ, ಸುಂದರವಾಗಿರು, ಪ್ರವೀಣನಾಗು.

**विलसित** (ವಿಲಸಿತ) ವಿ. ಶೋಭಿಸಿದ, ಒಪ್ಪಿದ, ಪ್ರಕಾಶಿಸಿದ, ಸುಂದರವಾದ.

**विलक्षण** (ವಿಲಕ್ಷಣ) ವಿ. }
**विलक्षणिक** (ವಿಲಕ್ಷಣಿಕ) ವಿ. } ವಿಚಿತ್ರವಾದ, ಕಲ್ಪನೆಗೆ ಮೀರಿದ, ತರ್ಕಕ್ಕೆ ಮೀರಿದ, ವಿಶೇಷ, ವಿಲಕ್ಷಣ, ಲೋಕೋತ್ತರ, ಚಮತ್ಕಾರದ, ಅಸಾಧಾರಣ, ಅಪರೂಪ.

**विलाज** (ವಿಲಾಜ) ಪು. ಉಪಾಯ, **इलाज** ನೋ. ಚಿಕಿತ್ಸೆ, ಹಂಚಿಕೆ, ಪರಿಹಾರ, ಔಷಧ.

**विलाप** (ವಿಲಾಪ) ಪು. ದುಃಖ, ಪ್ರಲಾಪ, ವಿಲಾಪ, ಆಕ್ರೋಶ, ರೋದನ, ಅಳುವು, ಗೋಳಾಟ.

**विलापणे** (ವಿಲಾಪಣೇ) ಕ್ರಿ. ಸ. ದುಃಖಪಡು, ದುಃಖಿಸು, ವಿಲಾಪಿಸು, ಆಕ್ರೋಶಿಸು, ಗೋಳಾಡು.

**विलापिका** (ವಿಲಾಪಿಕಾ) ಸ್ತ್ರೀ. ಸಂ. ರೋದನಕಾವ್ಯ, ಶೋಕಗೀತೆ, ವಿಲಾಪಿಕೆ, ದುಃಖೋದ್ಗಾರ.

**विलायत** (ವಿಲಾಯತ್) ಸ್ತ್ರೀ. ಅರ. ಪರದೇಶ, ಇಂಗ್ಲಂಡ.

**विलायती** (ವಿಲಾಯತೀ) ವಿ. ಅರ. ಪರದೇಶದ, ಪರದೇಶ ಸಂಬಂಧದ. ೨. ಉತ್ತಮ ತರಗತಿಯ.

**विलास** (ವಿಲಾಸ) ಪು. ಸಂ. ವೈಭವ, ಸಡಗರ, ಐಸಿರಿ, ಸಿಂಗಾರ, ಲೀಲೆ, ಕ್ರೀಡೆ, ಪ್ರಣಯಚೇಷ್ಟೆ, ವಿಲಾಸ, ಸುಖ.

**विलासी** (ವಿಲಾಸೀ) ವಿ. ಸಂ. ವಿಲಾಸ ಮಾಡುವವ ರಸಿಕ.

**विलासिनी** (ವಿಲಾಸಿನೀ) ಸ್ತ್ರೀ. ಸಂ. ಸುಖದಿಂದಿರುವಾಕೆ, ಲೀಲೆಯುಳ್ಳಾಕೆ, ಕ್ರೀಡಾಪ್ರಿಯೆ, ಬೆಡಗಿನಾಕೆ, ವಿಲಾಸಿನಿ

**विलेपन** (ವಿಲೇಪನ) ನ. ಸಂ. }
**विलेप** (ವಿಲೇಪ) ಪು. ಸಂ. } ಮೆತ್ತುವಿಕೆ, ಸಾರಿಸುವಿಕೆ, ಧೂಳಿಸುವಿಕೆ, ತೊಳೆಯುವಿಕೆ.

**विलेपणे** (ವಿಲೇಪಣೇ) ಕ್ರಿ. ಸ. ಮೆತ್ತು, ಸಾರಿಸು, ತೊಡೆ, ಪೂಸು, ಹಚ್ಚು.

**विलोकणे** (ವಿಲೋಕಣೇ) ಕ್ರಿ. ಸ. ನೋಡು, ನಿರೀಕ್ಷಿಸು, ಪರೀಕ್ಷಿಸು, ದಿಟ್ಟಿಸು, ಲಕ್ಷ್ಯಕೊಡು, ವಿಚಾರಿಸು, ಆಲೋಚಿಸು, ದೃಷ್ಟಿಕ್ಷೇಪಿಸು, ಅಭಿಪ್ರಾಯಪಡು.

**विलोकन** (ವಿಲೋಕನ) ನ. ಸಂ ನೋಟ, ಪರೀಕ್ಷೆ, ದೃಷ್ಟಿಕ್ಷೇಪ, ವಿಚಾರ, ಆಲೋಚನೆ.

**विलोकित** (ವಿಲೋಕಿತ) ವಿ. ಸಂ. ಪರೀಕ್ಷಿಸಿದ, ನೋಡಿದ, ವಿಚಾರಿಸಲ್ಪಟ್ಟ.

**विलोम** (ವಿಲೋಮ) ವಿ. ಸಂ. ವಿರುದ್ಧ, ವ್ಯತ್ಯಾಸ, ವ್ಯಸ್ತ, ವಿಲೋಮ, ಪ್ರತಿಕೂಲ, ಬೇರೆಯಾದ, ತೀರ ವಿರುದ್ಧ, ಸರಿಬಾರದ.

**विलोम क्रिया** (ವಿಲೋಮ ಕ್ರಿಯಾ) ಸ್ತ್ರೀ. ವಿರೋಧಿ ಕ್ರಿಯೆ, ತಲೆ ಕೆಳಗಾಗುವಿಕೆ.

**विलोम त्रैराशिक** (ವಿಲೋಮ ತ್ರೈರಾಶಿಕ) ನ. ಸಂ. ವ್ಯಸ್ತ ತ್ರೈರಾಶಿಕ, ನೀತಿಬಾಹಿರನು, ರೂಢಿಗೆ ವಿರುದ್ಧ ನಾ–ದವನು–ಳು–ದುದು.

**विल्हा–ल्हे** (ವಿಲ್ಹಾ–ಲ್ಹೇ) ಪು. ಸ್ತ್ರೀ. ಅರ. ಗೊತ್ತು, ತರಗತಿ, ಸಾಲು, ವರಿಸೆ, ಜಾತಿ, ವರ್ಗ, ತರ, ದರ್ಜೆ, ಹುದ್ದೆ, ಘನತೆ.

**विल्हेस लागणे** (ವಿಲ್ಹೇಸ್ ಲಾಗಣೇ) ಕ್ರಿ. ಅ. ಗೊತ್ತಿಗೆ ಹಚ್ಚು, ವ್ಯವಸ್ಥೆಯಾರಂಭಿಸು, ವ್ಯವಸ್ಥಿತವಾಗು.

**विल्हेस लावणे** (ವಿಲ್ಹೇಸ್ ಲಾವಣೇ) ಕ್ರಿ. ಸ. ಒಪ್ಪಿಸು, ವಶದಲ್ಲಿಕೊಡು, ತೀರಿಸು, ವ್ಯವಸ್ಥೆಮಾಡು, ವರ್ಗೀಕರಣಮಾಡು.

**विल्हेवाट** (ವಿಲ್ಹೇವಾಟ್) ಸ್ತ್ರೀ. ವಿ. ವ್ಯವಸ್ಥೆ ೨. (ವ್ಯಂಗ್ಯ) ಹಾಳುಮಾಡುವಿಕೆ.

**विल्हेवार** (ವಿಲ್ಹೇವಾರ್) ವಿ. ಕ್ರಮವಾಗಿ, ಓರಣದಿಂದ.

**विल्हेवारी** (ವಿಲ್ಹೇವಾರೀ) ಸ್ತ್ರೀ. ವರ್ಗೀಕರಣ, ತರಗತಿ, ದರ್ಜೆ, ತರಗತಿ ಮಾಡುವಿಕೆ, ಆರಿಸುವಿಕೆ.

**विवंचणे** (ವಿವಂಚಣೇ) ಕ್ರಿ. ಅ. ಆಲೋಚಿಸು, ಚಿಂತಿಸು, ದುಃಖಿಸು.

**विवंचना** (ವಿವಂಚನಾ) ಸ್ತ್ರೀ. ಆಲೋಚನೆ, ಚಿಂತನೆ, ದುಃಖ, ದುಃಖದ ಅನಿರ್ಣಯ, ಅಸಹ್ಯದುಃಖ, ಮನಕ್ಷೋಭೆ.

**विवर** (ವಿವರ) ನ. ಸಂ. ಗುದ್ದು, ಗುಹೆ, ಗವಿ, ಹೋರು, ಬಿಲ.

**विवरण** (ವಿವರಣ) ನ. ಸಂ. ಖುಲಾಸೆ, ವರ್ಣದ, ಸ್ಪಷ್ಟೀಕರಣ, ದರ್ಶನ, ಪ್ರದರ್ಶನ.

**विवरणे** (ವಿವರಣೇ) ಕ್ರಿ. ಸ. ಅರ್ಥಹೇಳು, ಭಾಷಾಂತರಿಸು, ಉಪನ್ಯಾಸಮಾಡು, ಟೀಕಿಸು, ಭಾಷ್ಯೆಬರೆ, ಅರ್ಥಾಂತರಮಾಡು.

**विवर्ण** (ವಿವರ್ಣ) ವಿ. ಸಂ. ಮಾಸಿದ ಬಣ್ಣದ, ಕಲಂಕಿತ, ಮುಖಹೀನ, ಬಣ್ಣಗುಂದಿದ.

**विवश** (ವಿವಶ) ವಿ. ಸಂ. ಪರತಂತ್ರವಾದ, ಪರಹಸ್ತದ, ಸ್ವಾಧೀನವಾದ, ಗುಲಾಮ.

**विवशी** (ವಿವಶೀ) ಸ್ತ್ರೀ. ಅಸಹಾಯ ಸ್ತ್ರೀ.

**विवसा** (ವಿವಸಾ) ಸ್ತ್ರೀ. ಇಚ್ಛೆ, ಅಪೇಕ್ಷೆ, ಆಕಾಂಕ್ಷೆ, ಒಲವು, ಪ್ರೀತಿ.

**विवळणे** (ವಿವಳಣೇ) ಕ್ರಿ. ಅ. ನೆರಳು, ಮುಳುಗು, ಗುಣಗುಟ್ಟು, ಅಳು ವಿಲಾಪಿಸು, ದುಃಖಪಡು.

**विवक्षा** (ವಿವಕ್ಷಾ) ಸ್ತ್ರೀ. ಸಂ. ಮಾತಾಡುವ ಇಚ್ಛೆ, ಆಕಾಂಕ್ಷೆ, ಅಪೇಕ್ಷೆ.

**विवक्षित** (ವಿವಕ್ಷಿತ) ವಿ. ಸಂ. ಇಚ್ಛಿತ, ಅಪೇಕ್ಷಿತ, ಆಕಾಂಕ್ಷಿತ. ೨. ಠರಾಯಿಸಿದ.

**विवाद** (ವಿವಾದ) ಪು. ಸಂ. ಜಗಳ, ವಿವಾದ, ಚರ್ಚೆ, ಮಾತಿನಹೋರಾಟ, ವಾಗ್ವಾದ, ಆಪ್ತಾಲೋಚನೆ, ಫಿರ್ಯಾದಿ, ಖಂಡನೆ.

**विवादणे** (ವಿವಾದಣೇ) ಕ್ರಿ. ಅ. ಚರ್ಚಿಸು, ವಾಗ್ವಾದ ಮಾಡು, ಜಗಳಾಡು, ಖಂಡಿಸು, ಹೆದರಿಸು, ವಾದಿಸು, ಸಪ್ರಮಾಣ ಸಿದ್ಧಮಾಡು.

**विवाद विषय** (ವಿವಾದ ವಿಷಯ) ಪು. ಸಂ. ಚರ್ಚೆಯ ವಿಷಯ, ಸಂಶಯ, ಸಮಸ್ಯೆ, ಬಿಗಿಕೆಲಸ, ಕಠಿಣ ಕಾರ್ಯ, ತಂಟೆಯವಿಷಯ.

**विवादी** (ವಿವಾದೀ) ವಿ. ಸಂ. ವಾದಿಸುವ, ಜಗಳಾಡುವ, ಹೋರಾಡುವ, ಚರ್ಚಿಸುವ, ಎದುರಿಸುವ.

**विवाह** (ವಿವಾಹ) ಪು. ಸಂ. ಲಗ್ನ, ಮದುವೆ, ವಿವಾಹ.

**–विच्छेद** (–ವಿಚ್ಛೇದ) ಪು. ಸಂ. ಮದುವೆಯ ಮುಗಿತಾಯ ಘಟಸ್ಫೋಟ.

**विवाहणे** (ವಿವಾಹಣೇ) ಕ್ರಿ. ಸ. ಮದುವೆಯಾಗು, ಲಗ್ನವಾಗು, ವಿವಾದಿಸು.

**विवाहित** (ವಿವಾಹಿತ) ವಿ. ಸಂ. ಮದುವೆಯಾದ, ಲಗ್ನವಾದ, ವಿವಾಹಿತ.

**विवाही** (ವಿವಾಹೀ) ಪು. ಸಂ. ಲಗ್ನನಾದವನು, ಚತುರ್ಭುಜನಾದವನು.

**विविध** (ವಿವಿಧ) ವಿ. ಸಂ. ಬಗೆಬಗೆಯ, ತರತರದ, ವಿವಿಧ, ಅನೇಕಾನೇಕ, ನಾನಾಬಗೆಯ.

**विविध गुणाकार** (ವಿವಿಧ ಗುಣಾಕಾರ) ಪು. ಸಂ. ವಿವಿಧಗುಣಾಕಾರ (ಗಣಿತದಲ್ಲಿ)

**विविध त्रैराशिक** (ವಿವಿಧ ತ್ರೈರಾಶಿಕ) ನ. ಸಂ. ಬಹುತ್ರೈರಾಶಿಕ, ಬಹುರಾಶಿಕ, ಪಂಚರಾಶಿಕ.

**विविध भागाकार** (ವಿವಿಧ ಭಾಗಾಕಾರ) ಪು. ಸಂ. ವಿವಿಧ ಭಾಗಾಕಾರ.

**विविध मिळवणी** (ವಿವಿಧ ಮಿಳವಣೀ) ಸ್ತ್ರೀ. ವಿವಿಧ ಬೇರೀಜು, ವಿವಿಧ ಸಂಕಲನ.

**विविध वजाबाकी** (ವಿವಿಧ ವಜಾಬಾಕೀ) ಸ್ತ್ರೀ. ವಿವಿಧ ವಜಾಬಾಕಿ, ವಿವಿಧ ವ್ಯವಕಲನ.

**विवृत्त** (ವಿವೃತ) ವಿ. ಸಂ. ವಿಸ್ತರಿಸಿದ, ಸ್ಪಷ್ಟೀಕರಿಸಿದ, ಪ್ರಶಂಸಿತ, ಅರ್ಥಹಚ್ಚಿದ.

**विवेक** (ವಿವೇಕ) ಪು. ಸಂ. ತಿಳುವಳಿಕೆ, ಬುದ್ಧಿವಂತಿಕೆ, ವಿಚಾರ, ಉಚಿತ ಕಾರ್ಯ ಸ್ವಾತಂತ್ರ್ಯ.

**विवेकी** (ವಿವೇಕೀ) ವಿ. ಸಂ. ತಿಳಿದವ, ಬುದ್ಧಿವಂತ, ಜ್ಞಾನಿ, ವಿಚಾರವುಳ್ಳ, ಪರಹಿತಾಲೋಚನೆಯ.

**विवेचक** (ವಿವೇಚಕ) ನ. ಸಂ. ವಿಮರ್ಶಕ, ವಿಚಕ್ಷಕ, ಪಂಡಿತ, ಆಲೋಚಿಸುವ, ಭಾಷ್ಯಕಾರ, ಟೀಕಿಸುವ.

**विवेचन** (ವಿವೇಚನ) ನ. ಸಂ. ವಿಮರ್ಶೆ,ಪಾಂಡಿತ್ಯ, ಆಲೋಚನೆ, ಭಾಷ್ಯ, ಟೀಕೆ, ವರ್ಗೀಕರಣ.

**विवेचित** (ವಿವೇಚಿತ) ವಿ. ಸಂ. ವಿಮರ್ಶಿಸಿದ, ಆಲೋಚಿಸಿದ, ವರ್ಗೀಕೃತ.

**विशंक** (ವಿಶಂಕ) ವಿ. ಸಂ. ಭಯಂಕರ, ಭಯಾನಕ, ನಿರ್ಭೀತ, ನಿಶ್ಶಂಕ, ಭೀತಿಯಿಲ್ಲದಿರುವಿಕೆ.

**विशद** (ವಿಶದ) ವಿ. ಸಂ. ಸ್ಪಷ್ಟವಾದ, ಪ್ರತ್ಯಕ್ಷ, ಋಜುವಾದ,ಪರಿಸ್ಫುಟ,ಸ್ಪಷ್ಟವಾದ,ಕಂಡುಬರುವ.

**विशाखा** (ವಿಶಾಖಾ) ಸ್ತ್ರೀ. ಟೊಂಗೆ, ಭಾಗ, ಒಂದು ನಕ್ಷತ್ರ, ವಿಶಾಖಾ, ಉಪಭಾಗ, ಹದಿನಾರನೆಯ ನಕ್ಷತ್ರ.

**विशाल** (ವಿಶಾಲ) ವಿ. ಸಂ. ದೊಡ್ಡ, ವಿಶೇಷಣ, ಬಹುದೊಡ್ಡ, ಮಹತ್, ವಿಶಾಲವಾದ, ಪ್ರಚಂಡ, ಹೇರಳ.

**विशालकोन** (ವಿಶಾಲಕೋನ್) ಪು. ಸಂ. ವಿಶಾಲ ಕೋನ, (ಭೂಮಿತಿ ಶಾಸ್ತ್ರದಲ್ಲಿ.)

**विशिष्ट** (ವಿಶಿಷ್ಟ) ವಿ. ಸ. ಆರಿಸಿದ, ವಿಶಿಷ್ಟ, ವೈಯಕ್ತಿಕ, ಪ್ರತ್ಯೇಕ,ಸೂಕ್ಷ್ಮದೃಷ್ಟಿಯ,ಕೋಮಲವಾದ, ನಾಜೂಕು, ಒಂದೇ ವಿಷಯದಲ್ಲಿ ಮಗ್ನನಾದ, ರತ.

**विशी** (ವಿಶೀ) ಸ್ತ್ರೀ. ಇಪ್ಪತ್ತನೆಯ ವರ್ಷ ವಯಸ್ಸು, ಇಪ್ಪತ್ತರ ಗುಂಪು, ಇಪ್ಪತ್ತು ಸಂಖ್ಯೆ.

**विशुद्ध** (ವಿಶುದ್ಧ) ವಿ. ಸಂ. ನಿರ್ಮಲ, ಸ್ವಚ್ಛತೆ' ನಿರ್ಮಲತ, ಸರಳತನ, ಶುದ್ಧಿ, ಭಾವಿಕತನ.

**विशेष** (ವಿಶೇಷ) ವಿ. ಸಂ. ಹೆಚ್ಚು, ಹೆಚ್ಚಿನ.

**विशेषण** (ವಿಶೇಷಣ) ನ. ಸಂ. (ವ್ಯಾಕರಣ) ವಿಶೇಷಣ.

**विशेषतः** (ವಿಶೇಷತಃ) ಕ್ರಿ.ವಿ. ವಿಶೇಷವಾಗಿ, ಮುಖ್ಯವಾಗಿ, ಪ್ರತ್ಯೇಕವಾಗಿ, ಮುಖ್ಯತ್ಯ.

**विशेषनाम** (ವಿಶೇಷನಾಮ) ನ. ಸಂ. ಅಂಕಿತನಾಮ, (ವ್ಯಾಕರಣದಲ್ಲಿ.)

**विशेषेकरून** (ವಿಶೇಷೆಕರೂನ್) ಕ್ರಿ. ವಿ. ಬಹಳಮಾಡಿ, ಅಂದಾಜಾಗಿ, **विषेशतः** ನೋ.

**विशेष्य** (ವಿಶೇಷ್ಯ) ಗುಣವುಳ್ಳ, ವಿಶೇಷಣವುಳ್ಳ.

**विशोभित** (ವಿಶೋಭಿತ) ವಿ. ಸಂ. ಶೋಭಿಸದ, ಚೆಂದ ಕಾಣದ, ಸರಿಬಾರದ, ಹೊಂದಲಾರದ, ಒಪ್ಪದ, ಅಯೋಗ್ಯ, ಅಯುಕ್ತ.

**विश्रांति** (ವಿಶ್ರಾಂತಿ) ಸ್ತ್ರೀ. ಸಂ. ವಿಶ್ರಾಂತಿ, ಆರಾಮ, ಬಿಡುಗಡೆ, ದುಃಖಶಮನ, ಉಪಶಮನ.

**विश्राम** (ವಿಶ್ರಾಮ) ಪು. ವಿಶ್ರಾಂತಿ, ಮುಕ್ತಿ, ಬಿಡುಗಡೆ, ಮಹಾಪುರುಷ. ೨. ಉಲ್ಲಾಸ.

**विश्रामणे** (ವಿಶ್ರಾಮಣೇ) ಕ್ರಿ. ಅ. ವಿಶ್ರಮಿಸು,ನಿಲ್ಲು.

**विश्रुत** (ವಿಶ್ರುತ) ವಿ. ಸಂ. ಪ್ರಸಿದ್ಧ, ಕೀರ್ತಿಹೊಂದಿದ, ಹೆಸರಾದ, ವಿಶ್ರುತ, ಸರ್ವಶ್ರುತ, ಪ್ರಖ್ಯಾತ.

**विश्रुति** (ವಿಶ್ರುತಿ) ಸ್ತ್ರೀ. ಸಂ. ಕೀರ್ತಿ, ಪ್ರಸಿದ್ಧಿ, ಯಶಸ್ಸು, ಪ್ರತಿಷ್ಠೆ, ಪ್ರಖ್ಯಾತಿ.

**विश्लेष** (ವಿಶ್ಲೇಷ) ಪು. ಬೇರೆಯಾಗುವಿಕೆ, ಬೇರ್ಪಡುವಿಕೆ, ಅಗಲುವಿಕೆ, ಭೇದಮಾಡುವಿಕೆ.

**विश्लेषण** (ವಿಶ್ಲೇಷಣ) ನ. ಸಂ. ಸ್ಪಷ್ಟೀಕರಣ. ೨. ವಿಂಗಡಿಸುವಿಕೆ.

**विश्लेषणे** (ವಿಶ್ಲೇಷಣೇ) ಕ್ರಿ. ಸ. ವಿವೇಚಿಸು, ಸ್ಪಷ್ಟೀಕರಿಸು, ಬೇರ್ಪಡಿಸು.

**विश्व** (ವಿಶ್ವ) ನ. ಸಂ. ಜಗತ್ತು, ವಿಶ್ವ, ಸಕಲ ಸೃಷ್ಟಿ.

**विश्वकर्मा** (ವಿಶ್ವಕರ್ಮಾ) ಪು. ಸಂ. ವಿಶ್ವಕರ್ಮ, ದೇವತೆಗಳ ಶಿಲ್ಪಿ, ಬ್ರಹ್ಮ, ಜಗತ್ಕರ್ತೃ. ಕಲಾಕಾರ, ಜಗತ್ತಿನ ಶಿಲ್ಪಿ.

**विश्वकुटुंबी** (ವಿಶ್ವಕುಟುಂಬೀ) ಪು. ಸಂ. ಜಗತ್ತೇ ಕುಟುಂಬವೆಂದು ತಿಳಿದವನು, ಉದಾರಧೀ, ವಿಶ್ವಪ್ರೇಮಿ.

**विश्वतः** (ವಿಶ್ವತಃ) ಕ್ರಿ. ವಿ. ಸರ್ವಥಾ, ಎಲ್ಲಕಡೆಗೆ, ಬೇಕಾದಲ್ಲಿಗೆ.

**विश्वतोमुखी** (ವಿಶ್ವತೋಮುಖೀ) ಕ್ರಿ. ವಿ. ಎಲ್ಲರ ಮಾತಿನಲ್ಲಿ, ಜಗದ್ಭರಿತವಾಗಿ.

**विश्वपाल** (ವಿಶ್ವಪಾಲ) (ಪು. ಸಂ. ಜಗತ್ಪಾಲಕ,
**विश्वंभर** (ವಿಶ್ವಂಭರ) (ಜಗದ್ಭರಿತ.

**विश्वविद्यालय** (ವಿಶ್ವವಿದ್ಯಾಲಯ) ನ. ಸಂ. ಯುನಿವ್ಹರ್ಸಿಟಿ, ವಿಶ್ವವಿದ್ಯಾಲಯ, ಸರ್ವವಿದ್ಯಾಮಂದಿರ, ವಿಶ್ವಕಲಾನಿಲಯ.

**विश्वव्यापक** (ವಿಶ್ವವ್ಯಾಪಕ) **विश्वव्यापी** (ವಿಶ್ವವ್ಯಾಪೀ) ವಿ. ವಿಶ್ವವ್ಯಾಪಕ, ಜಗದ್ಭರಿತ, ಸರ್ವವ್ಯಾಪಿ, ನೋಡಿದಲ್ಲಿರುವ.

**विश्वसनीय** (ವಿಶ್ವಸನೀಯ) ವಿಶ್ವಾಸಾರ್ಹ, ನಂಬಿಗೆಯ, ನಂಬುಗೆಯ, ನಂಬತಕ್ಕ, ವಿಶ್ವಾಸವುಳ್ಳ, ಪ್ರಾಮಾಣಿಕ, ನಿಜವಾದ, ಸರಿಯಾದ.

**विश्वसाक्षी** (ವಿಶ್ವಸಾಕ್ಷೀ) ವಿ. ಸಂ. ಸರ್ವಸಾಕ್ಷಿ, ಜಗತ್ತನ್ನೇ ನೋಡುವ, ವಿಶ್ವದೃಷ್ಟಿ.

**विश्वसित** (ವಿಶ್ವಸಿತ) ವಿ. ಸಂ. ನಂಬಿದ, ವಿಶ್ವಾಸ ವಿಟ್ಟ, ಶ್ರದ್ಧೆಯಿಟ್ಟ.

**विश्वात्मा** (ವಿಶ್ವಾತ್ಮಾ) ಪು. ಸಂ. ಜಗದಾತ್ಮಾ, ಬ್ರಹ್ಮ.

**विश्वामित्र** (ವಿಶ್ವಾಮಿತ್ರ) ಪು. ಸಂ. ವಿಶ್ವಾಮಿತ್ರ, ಪ್ರಸಿದ್ಧ ಋಷಿ.

**विश्वास** (ವಿಶ್ವಾಸ) ಪು. ಸಂ. ನಂಬಿಗೆ, ನಂಬುಗೆ, ಶ್ರದ್ಧೆ, ಅಭಿವಚನ, ಸಹಾಯ.

**विश्वासघात** (ವಿಶ್ವಾಸಘಾತ) ಪು. ಸಂ. ವಚನ ಭಂಗ, ಅಪಕಾರ, ವಿಶ್ವಾಸಘಾತ, ನಂಬುಗೆಗೇಡಿತನ.

**विश्वासघातकी** (ವಿಶ್ವಾಸಘಾತಕೀ) ವಿ. ನಂಬುಗೆ ಗೇಡಿ, ವಚನಭಂಗಮಾಡುವವ, ಮೋಸಗಾರ, ವಿಶ್ವಾಸಘಾತಕ.

**विश्वासणे** (ವಿಶ್ವಾಸಣೇ) ಕ್ರಿ. ನಂಬುಗೆಯಿಡು, ನಂಬು, ವಿಶ್ವಾಸವಿಡು.

**विश्वासी–सू** (ವಿಶ್ವಾಸೀ–ಸೂ) **विश्वासूक** (ವಿಶ್ವಾಸೂಕ) ವಿ. ಸಂ. ನಂಬುಗೆಯ, ನಂಬಿಗೆಯ ವಿಶ್ವಾಸವಿಟ್ಟ, ವಿಶ್ವಾಸಕ್ಕೆ ಪಾತ್ರ ಸರಳ, ಪ್ರಾಮಾಣಿಕ, ಸಜ್ಜನ, ನ್ಯಾಯಸ್ಥ, ಸಾತ್ವಿಕ.

**विश्वेश्वर** (ವಿಶ್ವೇಶ್ವರ) ಪು. ಸಂ. ಜಗದೀಶ, ವಿಶ್ವೇಶ್ವರ, ಜಗದೊಡೆಯ.

**विष** (ವಿಷ್) ನ. ಸಂ. ನಂಜು, ವಿಷ, ಕಹಿಪದಾರ್ಥ.

**विषकंठ** (ವಿಷಕಂಠ್) ನ. ಸಂ. ಶಂಕರ, ಮಹಾದೇವ.

**विषप्रयोग** (ವಿಷಪ್ರಯೋಗ) ಪು. ಸಂ. ವಿಷಹಾಕು, ನಂಜು ಉಣ್ಣಿಸು.

**विषम** (ವಿಷಮ) ವಿ. ಸಂ. ಅಸಮ, ಸರಿಯಿಲ್ಲದ, ವಿಲಕ್ಷಣ, ತರತರದ, ಶತ್ರುತ್ವದ, ಇಜ್ಜೋಡಿಯ.

**विषम अपूर्णांक** (ವಿಷಮ ಅಪೂರ್ಣಾಂಕ) ಪು. ಸಂ. ಅಪೂರ್ಣಾಂಕದ ಪ್ರಕಾರ, ಛೇದ ಕಡಿಮೆ ಅಂಶ ಹೆಚ್ಚಿರು ಅಪೂರ್ಣಾಂಕ.

**विषम काल** (ವಿಷಮಕಾಲ) ಪು. ಸಂ. ಆಪತ್ತಿ, ದುರ್ದೈವಕಾಲ, ಅಶುಭಕಾಲ.

**विषमज्वर** (ವಿಷಮಜ್ವರ) ಪು. ಸಂ. ಮುದತಿಯ ಜ್ವರ, ವಿಷಮಜ್ವರ.

**विषमत्रिभुज** (ವಿಷಮತ್ರಿಭುಜ) ವಿಷಮಭುಜತ್ರಿಕೋಣ, (ಭೂಮಿತಿ ಶಾಸ್ತ್ರದಲ್ಲಿ).

**विषम भाव** (ವಿಷಮಭಾವ) ಪು. ಸಂ. ಶತ್ರುತ್ವ ಭಾವನೆ, ಅಮಿತ್ರತ್ವ.

**विषम भोजन** (ವಿಷಮಭೋಜನ) ನ. ಸಂ. ಅಸಮ ಕಾಲದ ಭೋಜನ.

**विषमस्थ** (ವಿಷಮಸ್ಥ) ವಿ. ಸಂ. ಆಪತ್ತಿಯಲ್ಲಿ ಮುಳುಗಿದ, ವಿಪದ್ಗ್ರಸ್ಥ, ತೊಂದರೆಗೀಡಾದ.

**विषमान्न** (ವಿಷಮಾನ್ನ) ನ. ಸಂ. ವಿಶಿಷ್ಟ ಭೋಜನ.

**विषय** (ವಿಷಯ) ಪು. ಸಂ. ಮಾತು. ೨. ಭೋಗ್ಯ ವಸ್ತು. ೩. ದೇಶ. ೪. ಧನ.

**विषयवासना** (ವಿಷಯವಾಸನಾ) ಸ್ತ್ರೀ. ಸಂ. ಕಾಮವಾಸನೆ, ಇಂದ್ರಿಯ ವಿಷಯದ ಆಕರ್ಷಣೆ.

**विषयवीर** (ವಿಷಯವಿರ) ವಿ. ಇಂದ್ರಿಯ ವಿಷಯ ತ್ಯಜಿಸಿದ, ಇಂದ್ರಿಯ ವಿಷಯ ಜಿತ.

**विषयसुख** (ವಿಷಯ ಸುಖ) ನ. ಸಂ. ರತಿಸುಖ, ಸರ್ವೇಂದ್ರಿಯ ಸುಖ.

**विषयी** (ವಿಷಯೀ) ವಿ. ಸಂ. ವಿಷಯಲಂಪಟ, ವಿಷಯಾಭಿಲಾಷಿ, ಕಾಮಾಸಕ್ತ, ವಿಷಯಮಗ್ನ.

**विषयी** (ವಿಷಯೀ) ಕ್ರಿ. ವಿ. ಬಗೆಗೆ, ಬಗ್ಗೆ, ಸಂಬಂಧಾನುಸಾರವಾಗಿ, ಕುರಿತು.

**विषवल्ली** (ವಿಷವಲ್ಲೀ) ಸ್ತ್ರೀ. ನಂಜಿನ ಬಳ್ಳಿ, ವಿಷದ ಬಳ್ಳಿ, ನೀಚ ಮನುಷ್ಯ.

**विषहर** (ವಿಷಹರ) ಪು. ಸಂ. **विषहारक** (ವಿಷಹಾರಕ) ವಿ. ಸಂ. ವಿಷನಾಶಕ, ವಿಷ ಇಳಿಸುವ.

**विषाण** (ವಿಷಾಣ) ಪು. ಸಂ. ಕೊಂಬು, ಕೋಡು, ಶೃಂಗ, ದಂತ.

**विषाद** (ವಿಷಾದ) ಪು. ಸಂ. ದುಃಖ, ಕಷ್ಟ, ಪರಿತಾಪ, ಮನೋವ್ಯಥೆ, ಭಾವಪೀಡೆ, ದಣಿವು, ಆಯಾಸ, ಜೋಲುಮುಖ, ಖಿನ್ನತೆ, ಉದಾಸೀನತೆ, ಅಸಹ್ಯ, ತಿರಸ್ಕಾರ.

**विषादी** (ವಿಷಾದೀ) ದುಃಖಿತ, ಭಾವಪೀಡಿತ, ನಿರುತ್ಸಾಹಿ, ಆಯಾಸಗೊಂಡ, ಉದಾಸೀನನಾದ, ಖಿನ್ನ.

**विषार** (ವಿಷಾರ) ಪು. ವಿಷವಸ್ತು, ನಂಜಿನ ಜಿನಸು.

**विषारणे** (ವಿಷಾರಣೇ) ಕ್ರಿ. ಅ. ವಿಷವಾಗು, ವಿಷ ಹಾಕು, ನಂಜುಣ್ಣಿಸು, ವಿಷವೇರು.

**विषारी** (ವಿಷಾರೀ) ವಿ. ನಂಜುಳ್ಳ, ವಿಷಮಯ.

**विषुववृत्त** (ವಿಷುವವೃತ್ತ) ನ. ಸಂ. (ಭೂಮಧ್ಯವ
**विषुवमंडल** (ವಿಷುವಮಂಡಲ) ನ. ಸಂ. (ರೇಷೆ, ವಿಷು
**विषुवरेखा** (ವಿಷುವರೇಖಾ) ಸ್ತ್ರೀ. ಸಂ. (ವೃತ್ತ.

**विष्ठा** (ವಿಷ್ಠಾ) ಸ್ತ್ರೀ. ಮಲ, ಮನುಷ್ಯನ ಮಲ, ಪುರೀಷ, ಶೌಚ, ಹೇಲು.

**विष्ठी** (ವಿಷ್ಠೀ) ವಿ. ಸಂ. ಬಿಗಾರಿ, ಬಿಟ್ಟಿ, ಪುಕ್ಕಟೆ ಕೆಲಸ ಮಾಡಿಸುವಿಕೆ.

**विष्णु** (ವಿಷ್ಣು) ಪು. ಸಂ. ದೇವರ ಹೆಸರು, ವಿಷ್ಣು.

**विष्णुलोक** (ವಿಷ್ಣುಲೋಕ) ಪು. ಸಂ. ವಿಷ್ಣುಲೋಕ, ವೈಕುಂಠ, ವಿಷ್ಣುವಿನ ವಾಸಸ್ಥಾನ.

**विसकटणे** (ವಿಸಕಟಣೇ) ಕ್ರಿ. ಸ. ಕೆಡಿಸು, ಬೀಸಾಡು, ಹರಿ, ಅವ್ಯವಸ್ಥೆಮಾಡು, ಚದರಿಸು.

**विसकटा विसकट** (ವಿಕಸಟಾ ವಿಕಸಟ್) ಸ್ತ್ರೀ. ಚೆಲ್ಲುವಿಕೆ, ಬೀಸಾಡುವಿಕೆ, ಚದರಿಸುವಿಕೆ.

**विसकळ** (ವಿಸಕಳ್) ವಿ. ಚೆಲ್ಲುವ, ಹರಿಯುವ, ಚದರುವ, ತೆರೆಯುವ, ಬಿಚ್ಚುವ, ಬೈಲಾಗುವ, ಅರಳುವ, ಎಲ್ಲರಿಗೂ ತಿಳಿಯುವ, ಸ್ಪಷ್ಟ.

**विसकळणे** (ವಿಸಕಳಣೇ) ಕ್ರಿ. ಅ. ಚೆಲ್ಲು, ಚದರಿಸು, ಬಿಚ್ಚು, ಹರಿ, ಅವ್ಯವಸ್ಥೆಮಾಡು, ಬೈಲಾಗು.

**विसकळीत** (ವಿಸಕಳೀತ) ವಿ. ಚದುರಿಸಿದ, ಪಸರಿಸಿದ ಬೈಲಾದ, ಅವ್ಯವಸ್ಥಿತ.

**विसंगत** (ವಿಸಂಗತ್) ವಿ. ಸಂ. ಅಸಂಬದ್ಧ, ಅಸಮಾನವಾದ, ಹೊಂದದ, ಹೊಂದಿಕೆಯಿಲ್ಲದ,

**विसण** (ವಿಸಣ) ನ. ಬೆರಿಕೆಯ ನೀರು, ಬೆರೆಸುವ ನೀರು.

**विसप** (ವಿಸಪ್) ನ. ಇಸಬು, ಒಂದು ಪ್ರಕಾರದ ತ್ವಚೆರೋಗ.

**विसंबणे** (ವಿಸಂಬಣೇ) } ವಿಶ್ವಾಸವಿಡು,
**विसमणे** (ವಿಸಮಣೇ) ಕ್ರಿ. ಸ. } ಅವಲಂಬಿಸು.

**विसर** (ವಿಸರ) ಪು. ಮರೆವು, ನೆನಪಿಲ್ಲದಿರುವಿಕೆ, ವಿಸ್ಮರಣ, ವಿಸ್ಮೃತಿ.

**विसरणे** (ವಿಸರಣೇ) ಕ್ರಿ. ಅ. ಮರೆ, ನೆನಪಿಲ್ಲದಿರು, ಮರೆವಾಗು, ವಿಸ್ಮರಣವಾಗು, ವಿಸ್ಮೃತಿಹೊಂದು–ಆಗು.

**विसर पडणे** (ವಿಸರ ಪಡಣೇ) ಕ್ರಿ. ಅ. ಮರೆತುಹೋಗು, ವಿಸ್ಮರಣವಾಗು.

**विसराळ** (ವಿಸರಾಳ್) ವಿ. ಮರೆಯುವ, ವಿಸ್ಮರಿಸುವ, ವಿಸ್ಮೃತ, ಅಜಾಗ್ರತ, ತಾತ್ಸಾರದ, ಉಪೇಕ್ಷೆಯ.

**विसर्ग** (ವಿಸರ್ಗ) ಪು. ಸಂ. ವಿಸರ್ಗ, ತ್ಯಾಗ, ಬಿಡುವಿಕೆ, ವಿಸರ್ಗ. (ಃ)

**विसर्जणे** (ವಿಸರ್ಜಣೇ) ಕ್ರಿ. ಸ. ಬಿಡು, ತ್ಯಜಿಸು, ತೊರೆ, ಬಿಟ್ಟುಬಿಡು, ಒಳಗಾಗು, ಅರ್ಪಿಸು.

**विसर्जन** (ವಿಸರ್ಜನ) ಕ್ರಿ. ನ. ಸಂ. ಬಿಡುವಿಕೆ, ಚೆಲ್ಲುವಿಕೆ, ಮರಣಹೊಂದು, ಒಳಗಾಗುವಿಕೆ, ಅರ್ಪಣ, ಮರಣ ಹೊಂದುವಿಕೆ, ತೊರೆಯುವಿಕೆ.

**विसर्जित** (ವಿಸರ್ಜಿತ) ವಿ. ಸಂ. ಚೆಲ್ಲಿದ, ಚಲ್ಲಾಪಿಲ್ಲಿ ಮಾಡಿದ, ತೊರೆದ, ಸತ್ತ, ಒಳಗಾದ, ಅರ್ಪಿತ.

**विसवणे** (ವಿಸವಣೇ) ಕ್ರಿ. ಅ. ತಡೆಹಿಡಿ, ವಿಶ್ರಾಂತಿ ತಕ್ಕೊಳ್ಳು, ಗಟ್ಟಿಯಾಗು, ಆಗ್ರಹ ಹಿಡಿ, ಕೆಳಗೆ ಮುಳುಗು.

**विसविशीत** (ವಿಸವಿಶೀತ್) ಮೆತ್ತಗಾದ, ನೀರುನೀರಾದ.

**विस(सु)ळणे** (ವಿಸ(ಸು)ಳಣೇ) ಕ್ರಿ ಸ. ತೊಳೆ, ಸ್ವಚ್ಛಮಾಡು, ತಿಕ್ಕು, ಗಲಬಲಿಸು, ಬಾಯಿತೊಳೆ.

**विस(सु)ळवणी** (ವಿಸ(ಸು)ಳವಣೀ) ಸ್ತ್ರೀ. ತೊಳೆಯುವಿಕೆ, ತಿಕ್ಕುವಿಕೆ, ಸ್ವಚ್ಛಮಾಡುವಿಕೆ, ಬಾಯಿ ತೊಳೆಯುವಿಕೆ, ಮುಕ್ಕಳಿಸುವಿಕೆ.

**विसा** (ವಿಸಾ) ಸ್ತ್ರೀ. ಇಪ್ಪತ್ತು, ಎರಡು ಹತ್ತು, ಗೆದ್ದ ಅಂಕೆಗಳು, ಹೊಡೆದಗೆರೆ, ಎಳೆದಗೆರೆ, ಕವಡಿ.

**विसाड** (ವಿಸಾಡ್) ಪು. ಕಸಿಕೊಂಬೆ, ಕಿಸಿಯ ಸಸಿ, ಕಲಮು, ಕಲಮಿನಗಿಡ, ಸರಕಾರಿ ಹಣದ ಪಾವತಿ, ತೆರಿಗೆಯ ರಸೀದಿ.

**विसाण** (ವಿಸಾಣ್) ನ. } ಬಿಸಿನೀರಲ್ಲಿ ಹಾಕುವ
**विसावण** (ವಿಸಾವಣ್) ನ. } ಬೆರಿಕೆಯ ನೀರು.

**विसार–रा** (ವಿಸಾರ–ರಾ) ಪು. ಮುಂಗಡ ಹಣ, ಮುಂಗಡ ಕೊಟ್ಟಹಣ, ಮುಂಗಡ.

**विसावणे** (ವಿಸಾವಣೇ) ಕ್ರಿ. ಸ. ದಣಿವಾರಿಸಿಕೊಳ್ಳು, ವಿಶ್ರಮಿಸು, ಬೇಸರಗಳೆ, ನಿಲ್ಲು, ನಿಲ್ಲಿಸು, ಮುಚ್ಚು, ವಿರಮಿಸು, ಶಾಂತನಾಗಿರು, ಮಲಗು, ಅವಲಂಬಿಸು.

**विसावा** (ವಿಸಾವಾ) ಪು. ವಿಶ್ರಾಂತಿ, ಆರಾಮು, ದಣಿವಾರಿಸುವಿಕೆ, ಮುಚ್ಚಳ, ನಿಲ್ಲುವಿಕೆ, ವಿರಾಮ, ಅವಲಂಬನ, ಶಾಂತಿ, ಮಲಗುವಿಕೆ, ಸಹಾಯ, ಪರಿಹಾರ, ಊಬು, ಚಿತ್ರದಕೆಲಸ ಒಬ್ಬನಸ್ಥಾನದಲ್ಲಿ ಇನ್ನೊಬ್ಬನು ಬರುವಿಕೆ, ನೆರವು.

**विसूत्र** (ವಿಸೂತ್ರ) ವಿ. ಸಂ. ನಿಯಮದ ವಿರುದ್ಧ, ಅಕ್ರಮವಾದ, ವಿಷಮ, ನಿಯಮಬಾಹ್ಯ, ಅವ್ಯವಸ್ಥಿತ.

**विस्कटणे** (ವಿಸ್ಕಾಟಣೇ) ಕ್ರಿ. ಸ. ಚೆಲ್ಲಾಪಿಲ್ಲಿಮಾಡು, ಹರವು, ಕೆಡಿಸು, ಚೆಲ್ಲುವರಿಸು. '**विसकटणे**' ನೋ.

**विस्तर** (ವಿಸ್ತರ) ಪು. ಸಂ. ವಿಸ್ತರಣೆ, ವಿಸ್ತಾರ, ವ್ಯಾಪ್ತಿ, ಪ್ರಸರಣ, ಅತಿವಿಸ್ತಾರ, ಬೇಸರ.

**विस्तरणे** (ವಿಸ್ತರಣೇ) ಕ್ರಿ. ಸ. ವಿಸ್ತರಿಸು, ವಿಸ್ತಾರ ಮಾಡು, ವ್ಯಾಪ್ತಿಮಾಡು, ಬೇಸರಪಡು.

**विस्तार** (ವಿಸ್ತಾರ) ಪು. ಸಂ. ವಂಶ, ಹಬ್ಬುವಿಕೆ, ವಿಸ್ತಾರ, ಕುಲದ ಬೆಳವಣಿಗೆ.

**विस्तारणे** (ವಿಸ್ತಾರಣೇ) ಕ್ರಿ. ಅ. ವಿಸ್ತರಿಸು, ವ್ಯಾಪಿಸು, ಅಗಲುಮಾಡು, ಪಸರಿಸು, ಅಗಲುಗೊಳಿಸು.

**विस्तारी** (ವಿಸ್ತಾರೀ) ಸ್ತ್ರೀ. ಪತ್ರಾವಳಿ, ಊಟದಎಲೆ.

**विस्तीर्ण** (ವಿಸ್ತೀರ್ಣ) ವಿ. ಸಂ. ಅಗಲವಾದ, ಉಬ್ಬಿದ, ವ್ಯಾಪಿಸಿದ.

**विस्तृत** (ವಿಸ್ತೃತ) ನ. **'विस्तार'** ನೋ.

**विस्तव** (ವಿಸ್ತವ) ಪು. ಬೆಂಕಿ, ಅಗ್ನಿ, ಜ್ಯೋತಿ, ಕಿಚ್ಚು, ದಾವಾನಲ, ದಾಹ, ಆಪತ್ತಿ, ಉತ್ಸಾಹ.

**विस्तव न जाणे** (ವಿಸ್ತವ ನ ಜಾಣೇ) ಕ್ರಿ. ಅ. ದ್ವೇಷ. (ಗಾದೆಯಮಾತು) ಹಗೆತನವಿರು ಬದ್ಧದ್ವೇಷಿಯಾಗಿರು.

**विस्तू** (ವಿಸ್ತೂ) ಪು. **'विस्तव'** ನೋ.

**विस्फोट** (ವಿಸ್ಫೋಟ) ಪು. ನ. ಉದ್ರೇಕ, ಉತ್ಸಾಹ, ಸ್ಫೂರ್ತಿ, ಕುರುಹು, ಅತ್ಯುಷ್ಣತೆ ಹೊರಬೀಳುವಿಕೆ, ಪ್ರಕಟವಾಗುವಿಕೆ, ಬಹಿರಂಗಪಡುವಿಕೆ.

**विस्फोटक** (ವಿಸ್ಫೋಟಕ್) ವಿ. ಸಂ. ಗುಳ್ಳೆ, ಬೊಕ್ಕೆ, ಬೊಕ್ಕಲು, ಗುಳ್ಳೆಯ ಪದಾರ್ಥ, ಗುಳ್ಳೆ ಏರುವ. (ಔಷಧ)

**विस्फोटजनक** (ವಿಸ್ಫೋಟಜನಕ) ವಿ. ಸಂ. ಗುಳ್ಳೆ ಏಳುವ, ಗುಳ್ಳೆಎಬ್ಬಿಸುವ, ಪ್ರಕಟ ಗೊಳಿಸುವ.

**विस्मय** (ವಿಸ್ಮಯ) ಪು. ಆಶ್ಚರ್ಯ, ಅಚ್ಚರಿ, ಬೆರಗು, ಚೋದ್ಯ.

**विस्मरण** (ವಿಸ್ಮರಣ) ನ. ಸಂ. ಮರೆವು, ನೆನಪಾಗದಿರುವಿಕೆ, ನೆನಪಿಲ್ಲದಿರುವಿಕೆ, ಉಪೇಕ್ಷೆ.

**विस्मृत** (ವಿಸ್ಮೃತ) ವಿ. ಸಂ. ಮರೆತ, ನೆನಪಿಲ್ಲದ, ಉಪೇಕ್ಷಿಸಿದ.

**विस्मृति** (ವಿಸ್ಮೃತಿ) ಸ್ತ್ರೀ. ಸಂ. ಮರೆವು, ಮರೆಹು, ನೆನಪುಹಾರುವಿಕೆ.

**विस्मित** (ವಿಸ್ಮಿತ) ವಿ. ಸಂ. ಆಶ್ಚರ್ಯಚಕಿತ, ನಕ್ಕ.

**विहंगम** (ವಿಹಂಗಮ) ಪು. ಸಂ. ಪಕ್ಷಿ, ಹಕ್ಕಿ, ಗಗನವಿಹಾರಿ.

**विहंगम दृष्टि** (ವಿಹಂಗಮ ದೃಷ್ಟಿ) ವಿಸ್ತೃತವಾದ ದೃಷ್ಟಿಯಿಂದ ಮಾಡಿದ ಪರಿಶೀಲನ.

**विहरण** (ವಿಹರಣ) ನ. ಸಂ. } ವಿಶ್ರಾಂತಿಗಾಗಿ
**विहार** (ವಿಹಾರ) ಪು. ಸಂ. } ತಿರುಗಾಟ.

**विहरणे** (ವಿಹರಣೇ) ಕ್ರಿ. ಅ. } ವಿಶ್ರಾಂತಿಗಾಗಿ ತಿರು
**विहारणे** (ವಿಹಾರಣೇ) ಕ್ರಿ. } ಗಾಡು, ವಿಶ್ರಾಂತಿ ತಕ್ಕೊಳ್ಳು.

**विहारी** (ವಿಹಾರೀ) ವಿ. ಸಂ. ತಿರುಗಾಡುವವ, ವಿಶ್ರಾಂತಿಗಾಗಿ ತಿರುಗಾಡುವ, ಬೈಲುಹವೆತಕ್ಕೊಳ್ಳುವ, ಘಟಿಂಗ, ಘಟಿಂಗತನಮಾಡುವವ, ವಿಷಯಾಸಕ್ತ, ಲಂಪಟತನದ.

**विहित** (ವಿಹಿತ) ವಿ. ಸಂ. ಯೋಗ್ಯ, ಸರಿಯಾದ, ನಿಯುಕ್ತ.

**विहीण** (ವಿಹೀಣ) ಸ್ತ್ರೀ. ಬೀತಿ, ಬೀಗತ್ತಿ.

**–विहीन** (–ವಿಹೀನ) ಪ್ರತ್ಯಯ. ಇಲ್ಲದ, ಪಡೆಯದ.

**विहीर** (ವಿಹೀರ್) ಸ್ತ್ರೀ. ಅರ. (ಬೀರ್) **"विहिर"** ನೋ.

**विहीरहुंडा** (ವಿಹೀರ್‌ಹುಂಡಾ) ಪು. ನೀರಿನ ತೆರಿಗೆ, ನೀರಿನ ಸುಂಕ.

**विव्हल** (ವಿವ್ಹಲ) ವಿ. ಸಂ. } ದುಃಖಿತ.
**विव्हलित** (ವಿವ್ಹಲಿತ) ವಿ. ಸಂ. }

**विव्हळगौर** (ವಿವ್ಹಳಗೌರ) ಸ್ತ್ರೀ. ತಕರಾರಿನ ಸ್ತ್ರೀ, ಯಾವಾಗಲೂ ನೆರಳುತ್ತಿರುವ ಸ್ತ್ರೀ, ಕಿರಿಕಿರಿಯ ಹೆಂಗಸು.

**विळका–खा** (ವಿಳಕಾ–ಖಾ) ಪು. ಗಂಟು, ಸುತ್ತು ಗಟ್ಟುವಿಕೆ, ಅಪ್ಪುವಿಕೆ, ಗಟ್ಟಿಹಿಡಿಯುವಿಕೆ, ಬಿಗಿತ.

**विळचण** (ವಿಳಚಣ) ನ. ಸ. **"विसण"** ನೋ.

**विळवणे** (ವಿಳವಣೇ) ಕ್ರಿ. ಅ. ನೆರಳು, ಮರುಗು, ತಳಮಳಿಸು, ವಿಲಾಪಿಸು, ವಿವ್ಹಲಿಸು, ನೆರಳಾಡು. ೨. ನ. ನೆರಳಾಟ, ನೆರಳುವಿಕೆ, ಸಂಕಟದ ಕೂಗು.

**विळविळणे** (ವಿಳವಿಳಣೇ) ಕ್ರಿ. ಅ. ಚಡಪಡಿಸು, ಒದ್ದಾಡು, ಹರಿದಾಡು.

**विळविळीत** (ವಿಳವಿಳೀತ್) ವಿ. ಮೆತ್ತಗಾದ, ಅಗಲ ಹೆಣೆಯ, ಪೊಳ್ಳುಹೆಣಿಕೆಯ, ಮೆತ್ತಗಾಗಿರುವ, ಸಡಿಲಾದ.

**विळा** (ವಿಳಾ) ಪು. ಕುಡಗೋಲು.

**विळयाभोपळयाचे सख्य** (ವಿಳ್ಯಾಭೋಪಳ್ಯಾಚೇ ಸಖ್ಯ) ನ. ದ್ವೇಷ, ಹಗೆತನ.

**विळाखिळा** (ವಿಳಾಖಿಳಾ) ಪು. ಕುಡಗೋಲು, ಕುರ್ಪಿ.

**विळी** (ವಿಳೀ) ಸ್ತ್ರೀ. ಕ. ಈಳಿಗೆ.

**विळा मोडून खिळा करणे** (ವಿಳಾ ಮೋಡೂನ್ ಖಿಳಾ ಕರಣೇ) ಕ್ರಿ. ಸ. ನಿರರ್ಥಕವಾದ ಪರಿಶ್ರಮಮಾಡು.

**विक्षिप्त** (ವಿಕ್ಷಿಪ್ತ) ವಿ. ಸಂ. ವಿಚಿತ್ರ, ಮನಸ್ಸಿಗೆ ಬಂದಂತೆ ಆಚರಿಸುವವ, ತಲೆತಿರುಕ.

**विक्षेप** (ವಿಕ್ಷೇಪ) ಪು. ಸಂ. ವೈಚಿತ್ರ್ಯ, ನಿರ್ಧಾರ, ಉನ್ಮಾದ.

**विज्ञप्ति** (ವಿಜ್ಞಪ್ತಿ) ಸ್ತ್ರೀ. ಸಂ. ವಿನಂತಿ, ವಿಧೇಯತನ, ನಮ್ರತನದ ಬೇಡಿಕೆ.

**विज्ञात** (ವಿಜ್ಞಾತ) ವಿ. ಸಂ. ಪ್ರಸಿದ್ಧ, ಹೆಸರಾದ, ಗೊತ್ತಿದ್ದ.

**विज्ञाता** (ವಿಜ್ಞಾತಾ) ವಿ. ಸಂ. ಬಲ್ಲವ, ವಿಜ್ಞಾನಿ, ಗೊತ್ತಿದ್ದವ, ತಿಳಿದುಕೊಂಡವ.

**विज्ञान** (ವಿಜ್ಞಾನ) ನ. ಸಂ. ಜ್ಞಾನ, ಶಾಸ್ತ್ರ, ಅನುಭವ, ತಿಳುವಳಿಕೆ.

**विज्ञानमय** (ವಿಜ್ಞಾನಮಯ) ವಿ. ಸಂ. ಜ್ಞಾನಪರಿಪೂರ್ಣ.

**विज्ञानमयकोश** (ವಿಜ್ಞಾನಮಯಕೋಶ) ಚೈತನ್ಯದ ನಾಲ್ಕನೆಯ ಅವಸ್ಥೆ.

**विज्ञापक** (ವಿಜ್ಞಾಪಕ) ವಿ. ವಿಜ್ಞಾಪಕ, ಅಧ್ಯಾಪಕ, ಜ್ಞಾನದಾತ, ಜ್ಞಾನದಾನಿ.

**विज्ञापणे** (ವಿಜ್ಞಾಪಣೇ) ಕ್ರಿ. ಸವಿನಯ ಹೇಳು, ಪ್ರಾರ್ಥಿಸು, ಬೇಡಿಕೊಳ್ಳು.

**विज्ञापन** (ವಿಜ್ಞಾಪನ) ನ. ಸಂ. ಸವಿನಯ, ವಿನಯ, ಪ್ರಾರ್ಥನೆ, ಬೇಡಿಕೆ, ವಿಜ್ಞಾಪನೆ, ಶಿಕ್ಷಣ, ಪತ್ರವ್ಯವಹಾರ, ಸಮಾಚಾರ, ಸಂಬಂಧ.

**विज्ञापना** (ವಿಜ್ಞಾಪನಾ) ಸ್ತ್ರೀ. ಪ್ರಾರ್ಥನೆ, ವಿನಂತಿ, ಬೇಡುವಿಕೆ.

**वीख** (ವೀಖ) ನ. ವಿಷ, ನಂಜು.

**वीर** (ವೀರ) ವಿ. ಸಂ. ವೀರ, ಗಟ್ಟಿಗ, ಬಂಟ, ಶೂರ.

**वीरवैष्णव** (ವೀರವೈಷ್ಣವ) ಪು. ಸಂ. ವೀರವೈಷ್ಣವ, ವೈಷ್ಣವರಲ್ಲಿಯ ಉಪಶಾಖೆ.

**वीरशैव** (ವೀರಶೈವ) ಪು. ಸಂ. ಲಿಂಗಾಯತ ಮತ.

**वीरकन्या** (ವೀರಕನ್ಯಾ) ಸ್ತ್ರೀ. ಸಂ. ಶ್ರೀಷ್ಮಮಗಳು, ಶ್ರೀಷ್ಮನ ಮಗಳು, ವೀರನ ಮಗಳು.

**वीरचरित्र** (ವೀರಚರಿತ್ರ) ನ. ಸಂ. ವೀರಚರಿತ್ರ, ಶೂರನ ಚರಿತ್ರೆ, ವೀರನ ಜೀವನ ಚರಿತ್ರೆ.

**वीरपत्नि** (ವೀರಪತ್ನಿ) ಸ್ತ್ರೀ. ವೀರನ ಹೆಂಡತಿ, ವೀರಭಾರ್ಯೆ.

**वीररस** (ವೀರರಸ) ಪು. ಸಂ. ನವರಸಗಳಲ್ಲಿ ಒಂದು, ಧಾತು, ಶೂರತನ.

**वीरश्री** (ವೀರಶ್ರೀ) ಸ್ತ್ರೀ. ವೀರಶ್ರೀ, ಶೌರ್ಯ, ಅತ್ಯುತ್ಸಾಹ.

**वीरासन** (ವೀರಾಸನ) ನ. ಮಂಡೆಯು ಕೂಡುವಿಕೆ, ಮೊಂಡೆಗಾಲು, ಶೂರನ ಕೂಡುವಿಕೆ, ಕಾಲ್ಬೆರಳ ಮೇಲೆ ಕೂಡುವಿಕೆ.

**वीर्य** (ವೀರ್ಯ) ನ. ಸಂ. ಧಾತು, ವೀರ್ಯ. ೨. ಶೌರ್ಯ, ಶಕ್ತಿ, ಸಾಮರ್ಥ್ಯ, ಕಸುವು.

**वीज** (ವೀಜ್) ಸ್ತ್ರೀ. ಮಿಂಚು, ವಿದ್ಯುತ್ತು.

**विजेरी** (ವಿಜೇರೀ) ಸ್ತ್ರೀ. ವಿದ್ಯುತ್ಕೋಶ.

**वीट** (ವೀಟ) ಪು. ಬೇಸರ, ಬೇಸರಿಕೆ, ಜುಗುಪ್ಸೆ, ಚಿಂತೆ, ಅಧೈರ್ಯ, ಸಸ್ಯವ್ಯಾಧಿ. ೨. ಸ್ತ್ರೀ. ಇಟ್ಟಂಗಿ ಬೇನೆ, ಅಪಮಾನ, ನಿಂದೆ, ಪತನ.

**वीटबंदी** (ವೀಟಬಂದೀ) ವಿ. ಇಟ್ಟಂಗಿಯ (ಕಟ್ಟಡ).

**वीण** (ವೀಣ್) ಸ್ತ್ರೀ. ಈಯುವಿಕೆ, ಹಡೆಯುವಿಕೆ, ಜನ್ಮ. ೨. ನೇಯ್ಗೆ.

**वीणा** (ವೀಣಾ) ಸ್ತ್ರೀ. ವೀಣೆ, ತಂತುವಾದ್ಯ.

**वीत** (ವೀತ) ಸ್ತ್ರೀ. ಒಂದು ಗೇಣು. ೨. ನ. ಬೆತ್ತ.

**वीतराग** (ವೀತರಾಗ) ವಿ. ಸಂ. ಪ್ರೇಮರಹಿತ, ಆಸಕ್ತಿರಹಿತ, ನಿರಾಸಕ್ತ.

**वीस** (ವೀಸ್) ವಿ. ಇಪ್ಪತ್ತು, ಎರಡುಹತ್ತು.

**वीक्षण** (ವೀಕ್ಷಣ) ನ. ಸಂ. ನೋಟ, ನೋಡುವಿಕೆ, ದೃಶ್ಯ.

**वीक्षणे** (ವೀಕ್ಷಣೇ) ಕ್ರಿ. ಸಂ. ನೋಡು, ಆಲೋಚಿಸು, ದರ್ಶಿಸು, ವಿವೇಚಿಸು.

**वृक** (ವೃಕ) ಪು. ತೋಳ.

**वृकोदर** (ವೃಕೋದರ) ಪು. ಸಂ. ತೆಳ್ಳನ್ನ ಹೊಟ್ಟೆಯುಳ್ಳವ, ಬಂಧುರ ದೇಹದವ. ೨. ಭೀಮ.

**वृत्त** (ವೃತ್ತ) ನ. ಸಂ. ಛಂದಸ್ಸಿನ ಪ್ರಕಾರ, ನಡತೆ, ನಿರ್ವಾಹ, ಧಂದೆ, ಸುದ್ದಿ, ಮಂಡಲ, ವರ್ತುಲ, ಛಂದೋವೃತ್ತ.

**वृत्तखंड** (ವೃತ್ತಖಂಡ). ಪು. ಸಂ. ತ್ರಿಜ್ಯ, ವರ್ತುಲ ಭಾಗ.

**वृत्तपाद** (ವೃತ್ತಪಾದ) ಪು. ಸಂ. ವೃತ್ತದಚರಣ, ಒಂದು ಛಂದೋವೃತ್ತದ ಸಾಲು.

**वृत्तांत** (ವೃತ್ತಾಂತ) ಪು. ಸಂ. ಸುದ್ದಿ, ವೃತ್ತಾಂತ, ಮಾಹಿತಿ, ಲೆಕ್ಕ, ವರದಿ.

**ವೃತ್ತಾಂಶ** (ವೃತ್ತಾಂಶ) ಪು. ಸಂ. ಹೋರೆ, ವ್ಯವಸಾಯ. ೨. ಭೂಮಿತಿಯಲ್ಲಿಯ ತ್ರಿಜ್ಯ, ವರ್ತುಲಾಂಶ.

**ವೃತ್ತಿ** (ವೃತ್ತಿ) ಸ್ತ್ರೀ. ಸಂ. ವರ್ತನೆ, ಒಲವು, ಮನಸ್ಸಿನ ಒಲವು.

**ವೃತ್ತಿಚ್ಛೇದ** (ವೃತ್ತಿಚ್ಛೇದ) ಪು. ಸಂ. ಕೆಲಸದಿಂದ ತೆಗೆದುಹಾಕುವಿಕೆ, ಜೀವನೋಪಾಯವನ್ನು ಕಸಿದುಕೊಳ್ಳುವಿಕೆ.

**ವೃಥಾ** (ವೃಥಾ) ವಿ. ಸಂ. ವ್ಯರ್ಥವಾಗಿ, ಸುಮ್ಮನೆ, ದುರಭಿಮಾನದಿಂದ, ಪುಕ್ಕಟೆಯಾಗಿ, ಕಾರಣವಿಲ್ಲದೆ.

**ವೃಥಾದಾನ** (ವೃಥಾದಾನ) ನ. ಸಂ. ವಿನಾಕಾರಣಕೊಡುವಿಕೆ, ನಿರುಪಯೋಗಿದಾನ, ಲಾಭರಹಿತ ಕಾಣಿಕೆ.

**ವೃಥಾಪುಷ್ಟ** (ವೃಥಾಪುಷ್ಟ) ವಿ. ಸುಮ್ಮನೆ ಬೆಳೆದ, ನಿರರ್ಥಕ ಸೊಕ್ಕಿದ, ವ್ಯರ್ಥಪುಷ್ಟ.

**ವೃಂದ** (ವೃಂದ) ನ. ಸಂ. ಸಮೂಹ, ಗುಂಪು, ಸಮುದಾಯ, ದೊಡ್ಡಸಂಖ್ಯೆ.

**ವೃಂದಾರಕ** (ವೃಂದಾರಕ) ಪು. ದೇವತೆ, ಶ್ರೇಷ್ಠಪುರುಷ.

**ವೃಂದಾವನ** (ವೃಂದಾವನ) ನ. ಸಂ. ತುಳಸಿಯಕಟ್ಟೆ. ೨. ಗೋಕುಲದ ವೃಂದಾವನ.

**ವೃದ್ಧ** (ವೃದ್ಧ) ವಿ. ಸಂ. ಮುದುಕ, ಮುಪ್ಪಾದ, ವಯಸ್ಸಾದವ.

**ವೃದ್ಧಾಚಾರ** (ವೃದ್ಧಾಚಾರ) ಪು. ಸಂ. ಹಿರಿಯರಪದ್ಧತಿ, ಆರ್ಯರವಾಡಿಕೆ.

**ವೃದ್ಧಾಪಕಾಲ, ವೃದ್ಧಾವಸ್ಥಾ** (ವೃದ್ಧಾಪಕಾಳ, ವೃದ್ಧಾವಸ್ಥಾ) ಪು. ಮುಪ್ಪು, ಮುಪ್ಪಿನಕಾಲ, ವಾರ್ಧಿಕ್ಯ.

**ವೃದ್ಧಿ** (ವೃದ್ಧಿ) ಸ್ತ್ರೀ. ಸಂ. ಬೆಳವಣಿಗೆ, ಪ್ರಗತಿ, ಹೆಚ್ಚಳ, ಬಡತಿ, ೨. ಜನನಕಾಲದ ಮೈಲಿಗೆ (ಹನ್ನೆರಡು ದಿನ), ಬಡ್ಡಿ.

**ವೃದ್ಧಿಂಗತ** (ವೃದ್ಧಿಂಗತ) ವಿ. ಸಂ. ಬೆಳೆದ, ಬೆಳೆಯುತ್ತ ಬಂದ, ಮುಂದುವರೆದ.

**ವೃಶ್ಚಿಕ** (ವೃಶ್ಚಿಕ) ಪು. ಚೇಳು. ೨. ಹನ್ನೆರಡು ರಾಶಿಗಳಲ್ಲಿ ಒಂದು (ಎಂಟನೆಯದು)

**ವೃಷಭ** (ವೃಷಭ) ಪು. ಸಂ. ಎತ್ತು, ಹೋರಿ. ೨. ವೃಷಭರಾಶಿ (ಹನ್ನೆರಡು ರಾಶಿಗಳಲ್ಲಿ ಎರಡನೆಯದು)

**ವೃಷ್ಟಿ** (ವೃಷ್ಟಿ) ಸ್ತ್ರೀ. ಸಂ. ಮಳೆ, ಸುರಿಯುವಿಕೆ, ಗುಂಡಿನ ಸುರಿಮಳೆ, ಬಡಬಡನೆ ಸುರಿಯುವುದು, ಗಳಗಳನೆ ಸುರಿಯುವಿಕೆ.

**ವೃಕ್ಷ** (ವೃಕ್ಷ) ಪು. ಸಂ. ಗಿಡ, ಕಂಟಿ.

**ವೇಖಂಡ** (ವೇಖಂಡ್) ನ. ನಾರುಬೇರು, ಬಜೆ.

**ವೇಂಗ** (ವೇಂಗ್) ಸ್ತ್ರೀ. ಆಲಿಂಗನ, ಅಪ್ಪುವಿಕೆ, ಅವಚಿಕೊಳ್ಳುವಿಕೆ.

**ವೇಂಗ ಮಾರಣೆ** (ವೇಂಗ್ ಮಾರಣೇ) ಕ್ರಿ. ಸ. ಅಲಂಗಿಸು, ಅಪ್ಪಿಕೊಳ್ಳು, ಅವಚಿಕೊಳ್ಳು.

**ವೇಂಗೆವರ ಘೇಣೆ** (ವೇಂಗೇವರ ಘೇಣೇ) ಕ್ರಿ. ಎತ್ತಿಕೊಳ್ಳು, ನಡದ ಮೇಲೆ ಕೂಡ್ರಿಸಿಕೊಳ್ಳು.

**ವೇಂಗೆತ ಮಾವಣೆ** (ವೇಂಗೇತ ಮಾವಣೇ) ಕ್ರಿ. ಅ. ಅಪ್ಪಿಗೆಯಲ್ಲಿ ಹಿಡಿಸು.

**ವೇಗ** (ವೇಗ) ಪು. ಸಂ. ವೇಗ, ಓಟ, ಪರಿಮಾಣ, ರಭಸ, ಆವೇಗ, ಗತಿ, ಸ್ಫೂರ್ತಿ.

**ವೇಗವಾನ್** (ವೇಗವಾನ್) ವಿ. ಲಗುಬಗೆಯುಳ್ಳ, ರಭಸದ, ಸ್ಫೂರ್ತಿಯುಳ್ಳ, ಆವೇಗದ.

**ವೇಂಗಟಣೆ** (ವೇಂಗಟಣೇ) ಕ್ರಿ. ಸ. ಗಟ್ಟಿಯಾಗಿ ಅಪ್ಪು, ಕೊಕ್ಕೆ ಸಿಕ್ಕಿಸು, ತಬ್ಬು.

**ವೇಂಗಡಣೆ** (ವೇಂಗಡಣೇ) ಕ್ರಿ. ಸ. ಅಣಕಿಸು, ಸೊಟ್ಟುಬಾಯಿಮಾಡು, ಹಂಗಿಸು, ಅಂಗಲಾಚಿ ಬೇಡು.

**ವೇಂಗಣೆ** (ವೇಂಗಣೇ) ಕ್ರಿ. ಅ. ಮೇಲೆ ಏರು, ಮೇಲೆ ಹತ್ತು, ದಣಿ, ಅನುಮಾನಮಾಡು, ಅನುಮಾನಿಸು.

**ವೇಂಗಳಣೆ** (ವೇಂಗಳಣೇ) ಕ್ರಿ. ಸ. ಆಲಂಗಿಸು, ಅಪ್ಪಿಸಿಕೊಳ್ಳು.

**ವೇಗಳಣೆ** (ವೇಗಳಣೇ) ಕ್ರಿ. ಅ. ಬೇರ್ಪಡಿಸು, ಬೇರೆ ಮಾಡು, ಹೊರ್ತುಪಡಿಸು, ದೂರಿಡು, ಹೊರಹಾಕು, ಬಾಹಿರವಾಗಿಡು, ತೆಗೆದುಹಾಗು.

**ವೇಗಳಾ** (ವೇಗಳಾ) ವಿ. ಬೇರೆ, ಬೇರೆಯಾದ, ಹೊರ್ತು.

**ವೇಗಳೀಕ** (ವೇಗಳೀಕ್) ಸ್ತ್ರೀ. ಬೇರೆಯಾಗುವಿಕೆ.

**ವೇಗಳೇಚಾರ** (ವೇಗಳೇಚಾರ್) ಪು. ಬೇರೆತನ, ಪರಕೀಯತೆ, ಬೇರ್ಪಡಿಸುವಿಕೆ.

**ವೇಗೆ, ವೇಗಿ** (ವೇಗೇ, ವೇಗೀ) ಕ್ರಿ. ಬೇಗನೆ, ವೇಗವಾಗಿ, ಝುಟ್ಟನೆ.

**ವೇಂಗಾಟೀ** (ವೇಂಗಾಟೀ) ಸ್ತ್ರೀ. **ವ್ಯಂಗ** ನೋ.

**ವೇಂಘಣೆ** (ವೇಂಘಣೇ) ಕ್ರಿ. ಸ. **ವೇಂಗಣೆ** ನೋ.

**ವೇಚ** (ವೇಚ್) ಪು. ಆರಿಸುವಿಕೆ. ೨. ವೆಚ್ಚ, ಖರ್ಚು.

**ವೇಚಕ** (ವೇಚಕ) ವಿ. ಅ. ಆರಿಸಿದ, ಆರಿಸಿ ತೆಗೆದ, ಆರಿಸಿಟ್ಟ, ವಿಶೇಷ.

**ವೇಚಕುಲ್ಯಾ** (ವೇಚಕುಲ್ಯಾ) ಸ್ತ್ರೀ.

**ವೇಚಖರ್ಚ** (ವೇಚಖರ್ಚ) ಪು. ವೆಚ್ಚ, ಬಳಕೆ, ಖರ್ಚು.

**ವೇಚಣೆ** (ವೇಚಣೇ) ಕ್ರಿ. ಸ. ಆರಿಸು. ೨. ಕ್ರಿ. ಅ. ಕ. ಖರ್ಚಾಗು, ವೆಚ್ಚವಾಗು.

**ವೇಚಾ** (ವೇಚಾ) ಪು. ಸಂ. ಸಂಕಲನ, ಆಯ್ಕೆ, ಸಂಗ್ರಹ.

**वेज–जे** (ವೇಜ–ಜೇ) ನ. ಸೂಜಿಯ ಎಜ್ಜ–ಕಣ್ಣು.

**वेट–ठ** (ವೇಟ್–ಠ್) ಸ್ತ್ರೀ. ಹುಲ್ಲಿನ ಹುರಿ, ಕರಳಿನ ಮುರಿಗೆ, ಹಗ್ಗದ ಗಂಟು, ಹಗ್ಗದ ತೊಡಕು.

**वेटाळणे** (ವೇಟಾಳಣೇ) ಕ್ರಿ. ಸ. ಸುತ್ತುಹಾಕು, ಒಟ್ಟುಗೂಡಿಸು, ಸುತ್ತುಗಟ್ಟು.

**वेटाळा** (ವೇಟಾಳಾ) ಪು. ಸಂ. ಸುತ್ತು, **वेटाळे–वेटोळे** (ವೇಟಾಳೇ–ವೇಟೋಳೇ) ನ. ಸಂ. ಸಿಂಬಿ ಮಾಡುವಿಕೆ, ಸುರುಳಿ ಸುತ್ತುವಿಕೆ.

**वेटाळी, वेंटाळी** (ವೇಟಾಳೀ, ವೇಂಟಾಳೀ) ಸ್ತ್ರೀ. ಸುತ್ತು, **वेट** ನೋ., ಮೊಟ್ಟೆ.

**वेटोळे** (ವೇಟೋಳೇ) ನ. ಸುತ್ತು, ಸುರುಳಿ.

**वेठ** (ವೇಠ್) ಸ್ತ್ರೀ. ಹಿಂ. ಬಿಟ್ಟಿ, ಕೂಲಿಯನ್ನು ಕೊಡದೆ ದುಡಿಸಿಕೊಳ್ಳುವಿಕೆ.

**वेठीस धरणे** (ವೇಠೀಸ್ ಧರಣೇ) ಕ್ರಿ. ಸ. ಬಿಟ್ಟಿಹಿಡಿ, ದುಡಿಸಿಕೊಳ್ಳು.

**वेठकरी** (ವೇಠಕರೀ) ಪು. ಬಿಟ್ಟಿಗಾರ, ಮೊಟ್ಟೆಗಾರ, ಮೋಟಗಾರ.

**वेठण** (ವೇಠಣ) ನ. ಜತಿಗೆ, ಸುಪ್ಪೊತ್ತಿಗೆ.

**वेठचा** (ವೇಠ್ಯಾ) ಪು. ಬಿಟ್ಟಿಯವ, ಬಿಟ್ಟಿಹೊತ್ತವ, ಬಿಟ್ಟಿಮಾಡುವ.

**वेठबिगार** (ವೇಠ್‌ಬಿಗಾರ್) ಸ್ತ್ರೀ. ಬಿಟ್ಟಿ.

**वेड** (ವೇಡ) ನ. ಹುಚ್ಚು, ಅತ್ಯಾಸಕ್ತಿ. ೨. ಅತಿಪ್ರೀತಿ.

**वेड लावणे** (ವೇಡ ಲಾವಣೇ) ಕ್ರಿ. ಸ. ಮೋಹಿಸು, ಆಕರ್ಷಿಸು, ಹುಚ್ಚುಹಿಡಿಸು.

**वेडचाचे सोंग घेणे** (ವೇಡ್ಯಾಚೇ ಸೋಂಗ್ ಘೇಣೇ) ಕ್ರಿ. ಸ. ಹುಚ್ಚನ ಸೋಗು ಹಾಕು.

**वेडगळ, वेडका** (ವೇಡಗಳ್, ವೇಡಕಾ) ವಿ. ಹುಚ್ಚ, ಹುಚ್ಚತನದ, ಅರೆಹುಚ್ಚ.

**वेडगळणे** (ವೇಡಗಳಣೇ) ಕ್ರಿ. ಹುಚ್ಚುಹತ್ತು, ಬುದ್ಧಿಗೆಡು, ಹುಚ್ಚಾಗು, ದಾರಿತಪ್ಪು.

**वेडगेला** (ವೇಡಗೇಲ್ಲಾ) ವಿ. ಹುಚ್ಚನಂತೆ ಕಾಣುವವ.

**वेडथर** (ವೇಡ್‌ಥರ್) ವಿ. ಹುಚ್ಚ, ಭಾವನಾಮಯ.

**वेडदुल्ला** (ವೇಡದುಲಾ) ಪು. ಎಬ್ಬಂಕ, ಅರೆಹುಚ್ಚ.

**वेडपट** (ವೇಡಪಟ್) ವಿ. ಹುಚ್ಚ.

**वेडवणे** (ವೇಡವಣೇ) ಕ್ರಿ. ಸ. ಅಣಕಿಸು.

**वेडसर** (ವೇಡಸರ್) ವಿ. ಅರೆಹುಚ್ಚ, ಹುಚ್ಚನಂತೆ ಆಚರಿಸುವವ.

**वेडा** (ವೇಡಾ) ಪು. ಹುಚ್ಚ. ೨. ಮೂಢ, ಮೂರ್ಖ.

**वेडापिस** (ವೇಡಾಪಿಸಾ) ವಿ. ವಿಕಾರಹೊಂದಿದ, ಕೆರಳಿದ, ಆಸಕ್ತ.

**वेडा धोतरा** (ವೇಡಾ ಧೋತರಾ) ವಿ. ಬುದ್ಧಿಗೇಡಿ, ಅರೆಹುಚ್ಚ.

**वेडापीर** (ವೇಡಾಪೀರ್) ಪು. ಅವಿಚಾರದಿಂದ ಮುನ್ನುಗ್ಗುವ, ಹುಚ್ಚುಸಾಹಸದ.

**वेडावाकडा** (ವೇಡಾವಾಕಡಾ) ವಿ. ಅಡ್ಡತಿಡ್ಡ, ಡೊಂಕು ಬುದ್ಧಿಯ.

**वेडा मधुरा** (ವೇಡಾ ಮಧುರಾ) ಪು. ಒಂದು ಜಾತಿಯ ಜ್ವರ.

**वेडावणे** (ವೇಡಾವಣೇ) ಕ್ರಿ. ಸ. ಅಣಕಿಸು.

**वेडाविद्रा** (ವೇಡಾವಿದ್ರಾ) ವಿ. ಸಂ. ವಿದ್ರೂಪ, ಕುರೂಪ, ಹುಚ್ಚು.

**वेडेचार** (ವೇಡೇಚಾರ್) ಪು. ಹುಚ್ಚುತನ, ಹುಚ್ಚಾಚಾರ ಕುಚೇಷ್ಟೆ, ಕೀಟಲೆ, ಚೆಲ್ಲಾಟ.

**वेडेपीक** (ವೇಡೇಪೀಕ್) ನ. ಮಿತಿಮೀರಿದ ಬೆಳೆ.

**वेडे भाग्य** (ವೇಡೇ ಭಾಗ್ಯ) ನ. ಮಿತಿಮೀರಿದ ಸಂಪತ್ತು ಮೂಢನಿಗೆ ದೊರೆತ ಭಾಗ್ಯ.

**वेडचांचा बाजार** (ವೇಡ್ಯಾಂಚಾ ಬಾಜಾರ್) ಪು. ಮೂರ್ಖರ ಸಂತೆ, ವಿಚಿತ್ರ ರೀತಿಯಿಂದ ವರ್ತಿಸುವ ಜನರು.

**वेढ** (ವೇಢ್) ನ. ಕಾಲುಂಗುರ.

**वेढणे** (ವೇಢಣೇ) ಕ್ರಿ. ಸ. ಆವರಿಸು, ಸುತ್ತುಗಟ್ಟು, ಮುತ್ತು, ಮುತ್ತಿಗೆಹಾಕು. ೨. ನ. ಕಾಲಿನ ಬೆರಳ ಉಂಗುರ.

**वेढा** (ವೇಢಾ) ಪು. ಮುತ್ತಿಗೆ ಸುತ್ತುಗಟ್ಟುವಿಕೆ.

**वेढा घालणे–देणे** (ವೇಢಾ ಘಾಲಣೇ–ದೇಣೇ) ಕ್ರಿ. ಸ. ಮುತ್ತಿಗೆಹಾಕು, ಸುತ್ತುಗಟ್ಟು, ಮುತ್ತು.

**वेणी** (ವೇಣೀ) ಸ್ತ್ರೀ. ಹೆಳಲು, ಜಡೆ, ಹೆಣಿಕೆ.

**वेणीफणी** (ವೇಣೀಫಣೀ) ಸ್ತ್ರೀ. ಹೆಳಲು, ಕೇಶಭೂಷಣ.

**वेणु** (ವೇಣು) ಪು. ಕೊಳಲು, ವೇಣು, ಕಿನ್ನರಿ, ಮುರಲಿ.

**वेत** (ವೇತ್) ಪು. ಬೆತ್ತ, ಸೂಲ (ದನ ಈಯುವ)

**वेतन** (ವೇತನ) ನ. ಸಂ. ಸಂಬಳ.

**वेतनी** (ವೇತನೀ) ವಿ. ಸಂಬಳಕ್ಕಾಗಿ ದುಡಿಯುವವ.

**वेताळ** (ವೇತಾಳ) ಪು. ಭೂತ, ವೇತಾಳ, ಬೇತಾಳ, ಪಿಶಾಚಿ, ಪಿಶಾಚಿಗಳ ಅರಸು.

**वेत्ता** (ವೇತ್ತಾ) ಪು. ಸಂ. ಜ್ಞಾನಿ, ಅನುಭವಿ, ಬಲ್ಲವ.

**वेत्र** (ವೇತ್ರ) ಪು. ಬೆತ್ತ, ದೊಡ್ಡಮನೆತನದ ಹಿರಿಯನ ಕೈಗೋಲು.

**वेत्रधर, -धारी** (ವೇತ್ರಧರ-ಧಾರೀ) ಪು. ಸಂ. ವೇತ್ರ ಧಾರಿ, ದ್ವಾರಪಾಲಕ.

**वेत्रपाणी** (ವೇತ್ರಪಾಣೀ) ಪು. ಸಂ. ಸಾರಥಿ. ೨. ದ್ವಾರಪಾಲಕ.

**वेद** (ವೇದ) ಪು. ಸಂ. ಬಹು. ನಾಲ್ಕು ವೇದಗಳು, ಆಧ್ಯಾತ್ಮಿಕ ಗ್ರಂಥ.

**वेदना** (ವೇದನಾ) ಸ್ತ್ರೀ. ಸಂ. ಸಂವೇದನೆ, ಕಳೆ, ಹೊಡೆತ, ನೋವು.

**वेदमूर्ति** (ವೇದಮೂರ್ತಿ) ಪು. ಸಂ. ವೇದಪಂಡಿತ.

**वेदवाचा** (ವೇದವಾಚಾ) ಸ್ತ್ರೀ. ಸಂ. ಸರಸ್ವತಿ, ಸರಸ್ವತಿಯ ಹೆಸರು.

**वेदशास्त्रसंपन्न** (ವೇದಶಾಸ್ತ್ರ ಸಂಪನ್ನ) ವಿ. ಸಂ. ವೇದ ಮತ್ತು ಶಾಸ್ತ್ರ ಬಲ್ಲವ, ಪಂಡಿತ. ೨. ಪುರೋಹಿತನ ಒಕ್ಕಣಿಕೆ.

**वेदांग** (ವೇದಾಂಗ) ಪು, ಸಂ. ವೇದದ ಭಾಗ, ಆರು ವೇದಾಂಗಗಳು.

**वेदान्त** (ವೇದಾಂತ) ಪು. ಸಂ. ಬ್ರಹ್ಮವಿದ್ಯೆ.

**वेदि-दी** (ವೇದೀ-ದೀ) ಸ್ತ್ರೀ. ಸಂ. } ಯಜ್ಞವೇದಿಕೆ.
**वेदिका** (ವೇದಿಕಾ)

**वेदित** (ವೇದಿತ) ವಿ. ಸಂ. ತಿಳಿಸಿದ.

**वेदितव्य** (ವೇದಿತವ್ಯ) ವಿ. ಸಂ. ಜ್ಞಾನಹೊಂದಲು ತಕ್ಕ, ಜ್ಞಾನಲಾಭಕ್ಕೆ ಯೋಗ್ಯ, ತಿಳಕೊಳ್ಳಬೇಕಾದ.

**वेदोक्त** (ವೇದೋಕ್ತ) ವಿ. ಸಂ. ವೇದದಲ್ಲಿ ಹೇಳಿದ, ವೇದದಿಂದ ತೋರಿಸಲ್ಪಟ್ಟ.

**वेध** (ವೇಧ) ಪು. ತೂತು, ಛಿದ್ರ, ಎಜ್ಜ. ೨. ಆಕರ್ಷಣೆ, ಹುಚ್ಚು, ೩. ಭಾರ. ೪. ಚಿಂತೆ.

**वेधक** (ವೇಧಕ) ವಿ. ಸಂ. ಚುಚ್ಚುವ, ಕೀಟಲೆ ಕೊಡುವ, ಪ್ರಖರ, ಚುರುಕಾದ, ಉತ್ಸುಕ, ಉತ್ಸಾಹಿ.

**वेधणे** (ವೇಧಣೇ) ಕ್ರಿ. ಸ. ತೂತು ಸರಿ, ಛಿದ್ರ ಮಾಡು, ಛಿದ್ರತೆಗೆ, ಪರಿಣಾಮ ಹೊಂದು, ಪೋಣಿಸು.

**वेधशाला** (ವೇಧಶಾಲಾ) ಪು. ಸಂ. ವೇಧಶಾಲೆ, ಋತುಮಾನ ನಿರ್ಧಾರಣ ಸಂಸ್ಥೆ.

**वेंधळा** (ವೇಂಧಳಾ) ವಿ. ಮೂರ್ಖ, ಹುಚ್ಚ.

**वेधित** (ವೇಧಿತ) ವಿ. ತೂತುಮಾಡಿದ, ಎಜ್ಜ ಹಾಕಿದ, ಎಜ್ಜ ತೆಗೆದ.

**वेम** (ವೇಮ) ನ. } ಹಣಿಗೆಯ ಹೊಡೆತ, ನೇಕಾರನ
**वेमा** (ವೇಮಾ) ಪು. } ಕೆಲಸ, ಹಣಿಗೆ ಬಡೆಯುವಿಕೆ.

**वेरझार** (ವೇರಝಾರ) ಸ್ತ್ರೀ. ಎಡತಾಕಿಸುವಿಕೆ, ಕಷ್ಟದ ಓಡಾಟ. **येरझारा** ನೋ.

**वेल** (ವೇಲ್) ಪು. ಬಳ್ಳಿ, ಲತೆ.

**वेल वाढणे** (ವೇಲ್ ವಾಢಣೇ) ಕ್ರಿ. ಅ. ಬಳ್ಳಿ ಹಬ್ಬು, ವಂಶವೃದ್ಧಿಯಾಗು, ಬಳಿ ಬೆಳೆ.

**वेलची** (ವೇಲಚೀ) ಸ್ತ್ರೀ. } ಯಾಲಕ್ಕಿ, ಎಲಕ್ಕಿ.
**वेलदोडा** (ವೇಲದೋಡಾ) ಪು.

**वेलबुट्टी-टी** (ವೇಲಬುಟೀ-ಟ್ಟೀ) ಸ್ತ್ರೀ. ಬಟ್ಟೆಯ ಮೇಲೆ ತೆಗೆದ ಬಳ್ಳಿ.

**वेलविस्तार** (ವೇಲ್‌ವಿಸ್ತಾರ) ಪು. ಬಳ್ಳಿಯ ಹಬ್ಬುವಿಕೆ.

**वेला** (ವೇಲಾ) ಸ್ತ್ರೀ. ಸಮುದ್ರತೀರ, ಕಾಲ, ಮರ್ಯಾದೆ, ಸೀಮೆ.

**वेलांटी** (ವೇಲಾಂಟೀ) ಸ್ತ್ರೀ. ಇಕಾರದ ಚಿಹ್ನ (ಮರಾಠಿಯಲ್ಲಿ)

**वेलांटी** (ವೇಲಾಂಟೀ) ಸ್ತ್ರೀ. ವ್ಯಂಜನಕ್ಕೆ 'इ', 'ई' ಕಾರಗಳನ್ನು ಜೋಡಿಸುವ ಗುರುತು.

**वेल्हाळ** (ವೇಲ್ಹಾಳ್) ಪು. (ಕಾವ್ಯದಲ್ಲಿ) ಗಂಡ, ಪ್ರಿಯ ಪುರುಷ.

**वेल्हाळा-ळी** (ವೇಲ್ಹಾಳಾ-ಳೀ) ಪ್ರಿಯ, ಪ್ರೀತಿಯ.

**वेश्या** (ವೇಶ್ಯಾ) ಸ್ತ್ರೀ. ಸಂ. ಸೂಳೆ, ವ್ಯಭಿಚಾರಿಣಿ, ಹಾದರಗಿತ್ತಿ, ಗಣಿಕೆ.

**वेव्हार** (ವೇವ್ಹಾರ್) ಪು. ವ್ಯವಹಾರ, ಕೊಡಕೊಳ್ಳುವಿಕೆ, ವ್ಯಾಪಾರ.

**वेष** (ವೇಷ್) ಪು. ಸಂ. ವೇಷ, ಪೋಷಾಕು, ಡ್ರೆಸ್ಸು, ಉಡುಪು, ಸೋಗು, ಮಾರುವೇಷ, ವೇಷದ ಉಡುಪು.

**वेषधारी** (ವೇಷಧಾರೀ) ವಿ. ಸೋಗುಹಾಕಿದ-ಹಾಕುವ, ಸೋಗಿನ ಉಡುಪು ಧರಿಸಿದವ.

**वेष्टक** (ವೇಷ್ಟಕ್) ವಿ. ಸಂ. ಸುತ್ತುಗಟ್ಟುವ.

**वेष्टणे** (ವೇಷ್ಟಣೇ) ಕ್ರಿ. ಸ. ಸುತ್ತುಗಟ್ಟು, ಸುತ್ತು, ಹುಲುಗಿಸು, ಹೊದಗಿಸು, ವೇಷ್ಟಿಸು.

**वेष्टन** (ವೇಷ್ಟನ್) ಸ್ತ್ರೀ. ಸುತ್ತು, ಸುತ್ತುಹಾಕುವಿಕೆ, ಸುತ್ತುವಿಕೆ.

**वेष्टित** (ವೇಷ್ಟಿತ) ವಿ. ಸಂ. ಸುತ್ತಿದ, ಸುತ್ತು ಹಾಕಿದ, ಸುತ್ತುಹಾಕಲ್ಪಟ್ಟ.

**वेस** (ವೇಸ್) ಅಗಸೆ, ಹಳ್ಳಿಯ ಅಗಸೆ.

**वेशीवर टांगणे** (ವೇಶೀವರ್ ಟಾಂಗಣೇ) ಕ್ರಿ. ಸಂ. ಬಹಿರಂಗ ಪಡಿಸು.

**वेसकट-ड** (ವೇಸಕಟ್-ಡ್) ನ. ಬೇಲಿ.

**वेसकर–री** (ವೇಸಕರ–ರೀ) ಪು. ಅಗಸೆ ಕಾಯುವ ಅಧಿಕಾರಿ, ಚಾವಡಿಗ, ಕೊತವಾಲ.

**वेसण** (ವೇಸಣ) ನ. ಮುಗದಾಣ, ಮೂಗುದಾಣ, ಮೂಗುದಾರ. ೨. ಅಂಕುಶ, ನಿಯಂತ್ರಣ.

**वेसन** (ವೇಸನ್) ಸ್ತ್ರೀ. ವ್ಯಸನ, ಕುಚಾಳಿ, ದುಷ್ಟಟ, ಕೆಟ್ಟಚಟ.

**वेसवा** (ವೇಸವಾ) ಸ್ತ್ರೀ. ವೇಶ್ಯಾ, ಸೂಳೆ, ನೀತಿಭ್ರಷ್ಟ ಸ್ತ್ರೀ.

**वेसवार** (ವೇಸವಾರ್) ಪು. ಮಸಾಲೆ, ಮಸಾಲೆಯ ಸಾಮಾನು.

**वेळ** (ವೇಳ್) ಪು. ಸಮಯ, ವೇಳೆ. ೨. ಸ್ತ್ರೀ. ಪ್ರಸಂಗ, ಸರತಿ.

**वेळ दवडणे** (ವೇಳ್ ದವಡಣೇ) ಕ್ರಿ. ಸ. ವೇಳೆಗಳೆ. ವೇಳೆಹಾಕು, ವ್ಯರ್ಥಕಾಲಹರಣ ಮಾಡು.

**वेळ मारून नेणे** (ವೇಳ್ ಮಾರೂನ್ ನೇಣೇ) ಕ್ರಿ. ಸ. ಸಂಕಟವನ್ನು ನೀಗಿಸು, ಸಂಕಟದಲ್ಲಿಂದ ಪಾರಾಗು.

**वेळचा गुण** (ವೇಳಚಾ ಗುಣ) ಪು. ಕಾಲದ ಸುಪರಿಣಾಮ, ಕಾಲದ ವರ್ಚಸ್ಸು, ಆಭರಣ.

**वेळ अवेळ** (ವೇಳ್ ಅವೇಳ್) ಶುಭಾಶುಭವೇಳೆ ಕ್ರಿ. ವಿ. ಬೇಕಾದಾಗ, ಬೇಕಾದ ಸಮಯದಲ್ಲಿ.

**वेळकट–कूट** (ವೇಳ್‌ಕಟ್–ಕೂಟ್) ಪು. ಗಳದತುಂಡು.

**वेळकाठी** (ವೇಳ್‌ಕಾಠೀ) ಸ್ತ್ರೀ. ಗಳದ ಕೋಲು, ಬಡಿಗೆ.

**वेळकाळ** (ವೇಳ್‌ಕಾಳ್) ಪು. ವೇಳೆ, ಪ್ರಸಂಗ.

**वेळ न वारी** (ವೇಳ್ ನ ವಾರೀ) ಕ್ರಿ. ವಿ. ಅಯೋಗ್ಯ ವೇಳೆಯಲ್ಲಿ.

**वेळणी** (ವೇಳಣೀ) ಅನ್ನ ಬಡಿಸುವ, ಅಗಲವಾದ ಪಾತ್ರೆ.

**वेळणे** (ವೇಳಣೇ) ಕ್ರಿ. ಸ. } ಅಗಳಾಡಿಸು, ಅಲುಗಾಡಿಸು.
**वेळविणे** (ವೇಳವಿಣೇ) ಕ್ರಿ. ಸ. }

**वेळेनुसार** (ವೇಳೇನುಸಾರ್) ಕ್ರಿ. ವಿ. ಪ್ರಸಂಗಾನುಸಾರ, ಕಾಲೋಚಿತವಾಗಿ.

**वेळप्रसंग** (ವೇಳ್‌ಪ್ರಸಂಗ್) ಪು. ಸಂ. (ಯುಕ್ತಾಯುಕ್ತ) ಪ್ರಸಂಗ.

**वेळ मारणारा-मान्या** (ವೇಳ್ ಮಾರಣಾರಾ–ಮಾರ್‍ಯಾ) ಪು. ಪ್ರಸಂಗಾವಧಾನಿ, ನೀಗಿಸಿಕೊಂಡುಹೋಗುವವ.

**वेळेवारी** (ವೇಳೇವಾರೀ) ಕ್ರಿ. ಅ. ಯೋಗ್ಯ ಸಮಯದಲ್ಲಿ.

**वेळा** (ವೇಳಾ) ಸ್ತ್ರೀ. ಬಹು. ಪ್ರಸಂಗಗಳು. ೨. ಸರತಿ, ಸಲ.

**किती वेळा** (ಕಿತೀ ವೇಳಾ) ಕ್ರಿ. ವಿ. ಎಷ್ಟು ಸಲ.

**वेळाईत** (ವೇಳಾಈತ್) ವಿ. ಸಮಯಕ್ಕೆ ಸಹಾಯ ಮಾಡುವ, ಪ್ರಸಂಗಾನುಸಾರ ಸಹಾಯ ನೀಡುವ, ಸಮಯಾನುವರ್ತಿ ಸಹಾಯಕ.

**वेळू** (ವೇಳೂ) ಪು. ಗಳ.

**वेळो वेळा, ळी** (ವೇಳೊ ವೇಳಾ, ಳೀ) ಕ್ರಿ. ವಿ. ವೇಳೆ ವೇಳೆಗೆ, ಕಾಲಕಾಲಕ್ಕೆ, ಮೇಲಿಂದ ಮೇಲೆ.

**वै** (ವೈ) ಸ್ತ್ರೀ. ಬೇಲಿ.

**वैकल्य** (ವೈಕಲ್ಯ) ನ. ಸಂ. ಬಲಹೀನತೆ, ದೌರ್ಬಲ್ಯ, ಭಗ್ನಸ್ಥಿತಿ.

**वैकल** (ವೈಕಲ) ವಿ. ಸಂ. } ವ್ಯರ್ಥ.
**वायकळ** (ವಾಯಕಳ್) ಕ್ರಿ. ವಿ. }

**वैकुंठ** (ವೈಕುಂಠ) ಪು. ಸಂ. ವೈಕುಂಠ, ವಿಷ್ಣುಲೋಕ, ವಿಷ್ಣುವಿನ ವಾಸಸ್ಥಾನ.

**वैखरी** (ವೈಖರೀ) ಸ್ತ್ರೀ. ಸಂ. ಮಾತುಗಾರಿಕೆ, ವಾಕ್ಶಕ್ತಿ

**वैगुण्य** (ವೈಗುಣ್ಯ) ನ. ಸಂ. ಕುಂದು, ನ್ಯೂನ, ಕೊರತೆ, ದೋಷ.

**वैचक्षण्य** (ವೈಚಕ್ಷಣ್ಯ) ನ. ಸಂ. ನೈಪುಣ್ಯ, ವಿಚಕ್ಷಣತೆ, ಪಾರಂಗತತನ, ಪ್ರಾವೀಣ್ಯ, ಪ್ರವೀಣತೆ.

**वैचित्र्य** (ವೈಚಿತ್ರ್ಯ) ನ. ಸಂ. ವಿಚಿತ್ರತನ, ವೈಚಿತ್ರ್ಯ, ಸೋಗುವಳಿ, ವಿವಿಧತೆ.

**वैजयंती** (ವೈಜಯಂತೀ) ಸ್ತ್ರೀ. ಸಂ. ತುಳಸೀಗಿಡ, ವೈಜಯಂತಿ.

**वैताग** (ವೈತಾಗ್) ಪು. ವಿರಕ್ತಿ, ತಿರಸ್ಕಾರ, ಹೇಸಿಕೆ, ಅಸಹ್ಯತನ, ಜಿಗುಪ್ಸೆ.

**वैतागणे** (ವೈತಾಗಣೇ) ಕ್ರಿ. ಅ. ಬೇಜಾರಾಗು, ಬೇಸರಿಕೆ ಬರು.

**वैदिकी** (ವೈದಿಕೀ) ಸ್ತ್ರೀ. ಸಂ. ಪುರೋಹಿತತನ, ಉಪಾಧ್ಯಾಯಿಕೆ.

**वैदिक** (ವೈದಿಕ) ವಿ. ವೇದಸಂಬಂಧದ, ವೇದಬಲ್ಲವ. ೨. ಪು. ವೇದಜ್ಞ, ಪುರೋಹಿತ.

**वैद्य** (ವೈದ್ಯ) ಪು. ಸಂ. ವೈದ್ಯ, ವೈದ್ಯಉದ್ಯೋಗದವ, ಔಷಧಕೊಡುವವನು, ರೋಗವಾಸಿಮಾಡುವವ, ರೋಗಚಿಕಿತ್ಸಕ.

**वैद्यक** (ವೈದ್ಯಕ) ನ. ಸಂ. ರೋಗ ಚಿಕಿತ್ಸಾಶಾಸ್ತ್ರ.

**वैद्यकी** (ವೈದ್ಯಕೀ) ಸ್ತ್ರೀ. ವೈದ್ಯರ ವ್ಯವಸಾಯ.

**वैद्यक्रिया** (ವೈದ್ಯಕ್ರಿಯಾ) ಸ್ತ್ರೀ. ಸಂ. ವೈದ್ಯರ ಉಪಚಾರ.

**वैद्यगिरी** (ವೈದ್ಯಗಿರೀ) ಸ್ತ್ರೀ. ವೈದ್ಯನ ವ್ಯವಸಾಯ.

**वैद्यराज** (ವೈದ್ಯರಾಜ) ಪು. ಸಂ. ದೊಡ್ಡವೈದ್ಯ, ಪ್ರಸಿದ್ಧ ವೈದ್ಯ.

**वैधर्म्य** (ವೈಧರ್ಮ್ಯ) ನ. ಸಂ. ಗುಣಭೇದ, ವಿಪರೀತ ಗುಣ.

**वैधव्य** (ವೈಧವ್ಯ) ನ. ಸಂ. ವೈಧವ್ಯ, ವಿಧವೆಯಾಗುವಿಕೆ, ಗಂಡಸಾಯುವಿಕೆ.

**वैनसे** (ವೈನಸೇ) ಸ್ತ್ರೀ. "**वनसे**" ನೋ. ನಾದಿನಿ.

**वैपरीत्य** (ವೈಪರೀತ್ಯ) ನ. ಸಂ. ವಿರೋಧ, ವಿರುದ್ಧ ದಿಕ್ಕು.

**वैपुल्य** (ವೈಪುಲ್ಯ) ನ. ಸಂ. ಸಮೃದ್ಧಿ, ವಿಪುಲತೆ.

**वैफल्य** (ವೈಫಲ್ಯ) ನ. ಸಂ. ವಿಫಲತೆ, ವ್ಯರ್ಥತನ, ನಿರುಪಯೋಗಿತನ, ಸೋಲು.

**वैभव** (ವೈಭವ) ನ. ಸಂ. ಸಂಪತ್ತು, ಸಡಗರ, ಮಹಿಮೆ, ಹಿರಿಮೆ.

**वैमनस्य** (ವೈಮನಸ್ಯ) ನ. ಸಂ. ವಿಮನಸ್ಕತೆ, ದುಃಖ.

**वैमानिक** (ವೈಮಾನಿಕ) ಪು. ಸಂ. ವೈಮಾನಿಕ, ವಿಮಾನ ಸಂಚಾಲಕ.

**वैयक्तिक** (ವೈಯಕ್ತಿಕ) ವಿ. ಸಂ. ವ್ಯಕ್ತಿಗತವಾದ, ಒಬ್ಬನಿಗೆ ಸಂಬಂಧಿಸಿದ, ವಿಶಿಷ್ಟವ್ಯಕ್ತಿಯ.

**वैयाकरण** (ವೈಯಾಕರಣ) ಪು. ಸಂ. ವ್ಯಾಕರಣ ಶಾಸ್ತ್ರಜ್ಞ.

**वैयाकरणी** (ವೈಯಾಕರಣೀ) ಪು. ವ್ಯಾಕರಣಶಾಸ್ತ್ರ ಬಲ್ಲವ.

**वैर** (ವೈರ್) ನ. ಸಂ. ದ್ವೇಷ, ಹಗೆತನ, ಶತ್ರುತ್ವ, ವಿರೋಧ.

**वैरण** (ವೈರಣ) ಸ್ತ್ರೀ. ಮೇವು, ಹೊಟ್ಟು, ಮೇವು–ಮಿಡಿಚಿ, ಮೇವು ಕಾವಳಿ.

**वैरणे** (ವೈರಣೇ) ಕ್ರಿ. ಸಂ. ಸಾವಕಾಶವಾಗಿ ಸುರುವು, ಸಾವಕಾಶವಾಗಿ ಒಬ್ಬೆ ಹಾಕು.

**वैरा** (ವೈರಾ) ಕ್ರಿ. ವಿ. ಕುಟ್ಟಲು ತೆಗೆದಧಾನ್ಯ, ಕಣಜದಿಂದ ತೆಗೆದಕಾಳು.

**वैरागर** (ವೈರಾಗರ್) ಪು. ರತ್ನದ ಕಣಿ, ಗಣಿ.

**वैरागी** (ವೈರಾಗೀ) ಪು. ಬೈರಾಗಿ, ಸನ್ಯಾಸಿ, ಸಾಧು, ಭಕ್ತ.

**वैराग्य** (ವೈರಾಗ್ಯ) ನ. ಸಂ. ವೈರಾಗ್ಯ, ವಿರಕ್ತಿ, ಐಹಿಕ ಆಶಾತ್ಯಾಗ.

**वैराण** (ವೈರಾಣ್) ವಿ. ಫಾ. ಹುಲ್ಲಿನ, ಹಾಳು, ಏಕಾಂತ, ನಿರ್ಜನ, ಉದಾಸ, ಹಾಳುಬಿದ್ದ.

**वैराणी** (ವೈರಾಣೀ) ವಿ. ಫಾ. ಹಾಳುತನ, ಏಕಾಂತ, ಔದಾಸೀನ್ಯ, ಖಿನ್ನತೆ.

**वैरी** (ವೈರೀ) ಪು. ಸಂ. ಶತ್ರು, ಸಪತ್ನ, ಶತ್ರುತ್ವದ.

**वैल** (ವೈಲ್) ಪು. ಹಿಂದೊಲೆ, ಅಗ್ಗಿಷ್ಟಿಕೆಯ ಹೊರ ಭಾಗ.

**वैलचूल** (ವೈಲ್‌ಚೂಲ್) ಸ್ತ್ರೀ. ಹಿಂದೊಲೆಯ ಒಲೆ.

**वैलक्षण्य** (ವೈಲಕ್ಷಣ್ಯ) ನ. ಸಂ. ವಿಲಕ್ಷಣತನ, ಅಪರಿಚಯ, ವಿಲಕ್ಷ್ಯ.

**वैलाटी–ठी** (ವೈಲಾಟೀ–ಠೀ) ಸ್ತ್ರೀ. ಘಟ್ಟದ ಪ್ರದೇಶ.

**वैवर्ण्य** (ವೈವರ್ಣ್ಯ) ನ. ಸಂ. ಭಿನ್ನಭಿನ್ನ ಬಣ್ಣದ ಇರುವಿಕೆ, ಕಲಬೆರಿಕೆ.

**वैशाख** (ವೈಶಾಖ) ಪು. ಸಂ. ಹಿಂದೂ ವರ್ಷದ ಎರಡನೆಯ ತಿಂಗಳು, ವೈಶಾಖ ಮಾಸ.

**वैश्य** (ವೈಶ್ಯ) ಪು. ವೈಶ್ಯ, ಬಣಜಿಗ.

**वैश्वदेव** (ವೈಶ್ವದೇವ) ಪು. ವೈಶ್ವದೇವ, ನೈವೇದ್ಯ, ಕಾಣಿಕೆ, ಬಲಿ.

**वैश्वानर** (ವೈಶ್ವಾನರ) ಪು. ಸಂ. ಬೆಂಕಿ, ಕಿಚ್ಚು, ವೈಶ್ವಾನರ ಅಗ್ನಿ.

**वैषम्य** (ವೈಷಮ್ಯ) ವಿ. ಸಂ. ಅಸಮಾನತೆ, ವಿಷಮತೆ, ವೈಷಮ್ಯ, ವಿಪತ್ತಿ.

**वैषयिक** (ವೈಷಯಿಕ) ವಿ. ಭೋಗವಿಲಾಸದ, ಲೈಂಗಿಕ.

**वैष्णव** (ವೈಷ್ಣವ) ಪು. ವಿಷ್ಣುವಿನ ಭಕ್ತ, ವೈಷ್ಣವ.

**वोपणे** (ವೋಪಣೇ) ಕ್ರಿ. ಸಂ. ಸಮರ್ಪಿಸು, ಕೊಡು.

**वोसंडणे, वोसांडणे** (ವೋಸಂಡಣೇ, ವೋಸಾಂಡಣೇ) ಕ್ರಿ. ಅ. ತುಂಬಿಹರಿ, ತುಂಬಿಹೊರಚೆಲ್ಲು.

**व्यक्त** (ವ್ಯಕ್ತ) ವಿ. ಸಂ. ಸ್ಪಷ್ಟ, ದರ್ಶಿತ, ಗೊತ್ತಾದ, ಸ್ಪಷ್ಟೋಚ್ಚಾರಕ.

**व्यक्तगणित** (ವ್ಯಕ್ತಗಣಿತ) ನ. ಸಂ. ಸ್ಪಷ್ಟಗಣಿತ, ಅಂಕಗಣಿತ, ಸಂಖ್ಯಾಶಾಸ್ತ್ರ ಗಣಿತ.

**व्यक्तश्रेणी** (ವ್ಯಕ್ತಶ್ರೇಣೀ) ಸ್ತ್ರೀ. ಅಂಕಗಣಿತ ಶ್ರೇಣಿ.

**व्यक्ति** (ವ್ಯಕ್ತಿ) ಸ್ತ್ರೀ ಸಂ. ವ್ಯಕ್ತಿ, ಒಬ್ಬವ. ೨. ಸ್ತ್ರೀ. ವ್ಯಕ್ತಪಡಿಸುವಿಕೆ.

**व्यक्तिवाचक** (ವ್ಯಕ್ತಿವಾಚಕ) ವಿ. ಸಂ. ವಿಶೇಷ ನಾಮ, ಪುರುಷವಾಚಕ.

**व्यक्तिस्वातंत्र्य** (ವ್ಯಕ್ತಿಸ್ವಾತಂತ್ರ್ಯ) ನ. ಸಂ. ವ್ಯಕ್ತಿ ಸ್ವಾತಂತ್ರ್ಯ, ವ್ಯಕ್ತಿಗತ ಸ್ವಾತಂತ್ರ್ಯ.

**व्यंग** (ವ್ಯಂಗ) ವಿ. ಸಂ. ರೂಪಗೆಟ್ಟ, ನ್ಯೂನ, ವಿದ್ರೂಪ, ಅವಯವ ಹೀನ, ಕೊರತೆಯ, ಕುರೂಪಿ, ಕುರೂಪತೆ, ಅಂಗವೈಕಲ್ಯ, ದೋಷ.

**व्यग्र** (ವ್ಯಗ್ರ) ವಿ. ಸಂ. ಚಿಂತಿತ, ಪ್ರಕ್ಷುಬ್ಧ, ಕ್ರೋಧಿತ, ಕಳವಳಗೊಂಡ.

**व्यजन** (ವ್ಯಜನ) ವಿ. ಬೀಸಣಿಕೆ, ತಟ್ಟಿ, ಕೇರುಂಬೊಲ,

**व्यंजन** (ವ್ಯಂಜನ) ನ. ಸಂ. ವ್ಯಂಜನ, ಸ್ವರರಹಿತ, ಅಕ್ಷರ, ಚಟ್ನಿ, ಬಾಡಿಸಿಕೊಳ್ಳುವ ಪದಾರ್ಥ, ಆವ್ಲ್ಲ, ಹುಳಿ, ದಿಟ್ಟಮಾತು, ಗುರ್ತು.

**व्यतिक्रम** (ವ್ಯತಿಕ್ರಮ) ಪು. ವಿರುದ್ಧಕ್ರಮ, ವಿರುದ್ಧ ರೀತಿ, ಸೇಡಿನ ಭಾವನೆ, ವಿರುದ್ಧ ನೀತಿ.

**व्यतिरिक्त** (ವ್ಯತಿರಿಕ್ತ) ವಿ. ಸಂ. ವಿಂಗಡನೆ, ಪ್ರತ್ಯೇಕ, ಬೇರೆ, ಹೊರ್ತು, ಅಭಾವದ.

**व्यतिरेक** (ವ್ಯತಿರೇಕ) ಪು. ಸಂ. ಹೆಚ್ಚಾಗುವಿಕೆ, ಪ್ರತಿ ಷೇದ, ವಿನಾಯತಿ, ಆಕ್ಷೇಪಣೆ, ಅಸಮಾಧಾನ, ಅಸಂಬಂಧ.

**व्यतिपात** (ವ್ಯತಿಪಾತ) ಪು. ಸಂ. ಜ್ಯೋತಿಶಾಸ್ತ್ರ ದಲ್ಲಿಯ ಹದಿನೇಳು ಯೋಗಗಳಲ್ಲಿ ಒಂದು, ಅಶುಭ ಯೋಗ.

**व्यत्यय** (ವ್ಯತ್ಯಯ) ಪು. ಸಂ. ಅಡ್ಡಿ, ಆತಂಕ.

**व्यथित** (ವ್ಯಥಿತ) ವಿ. ಸಂ. ದುಃಖಿ, ಆಪತ್ತಿನಲ್ಲಿ ಸಿಕ್ಕ, ಆತಂಕಗೊಂಡ.

**व्यथिष्ठ** (ವ್ಯಥಿಷ್ಠ) ವಿ. ಸಂ. ವ್ಯಾಧಿಗ್ರಸ್ತ, ನೆಟ್ಟಗಾಗ ದಂತಹ.

**व्यभिचार** (ವ್ಯಭಿಚಾರ) ಪು. ಸಂ. ಹಾದರ. ೨. ದುರ್ವರ್ತನೆ.

**व्यभिचारी** (ವ್ಯಭಿಚಾರೀ) ವಿ. ವ್ಯಭಿಚಾರಿ, ಅನೀತಿ ಯುವ.

**व्यय** (ವ್ಯಯ) ಪು. ಸಂ. ಖರ್ಚು, ಬೆಲೆ, ವೆಚ್ಚ.

**व्ययशील** (ವ್ಯಯಶೀಲ) ವಿ. ಸಂ. ಖರ್ಚಾಗುವ, ಬೆಲೆ ಯುಳ್ಳ, ವೆಚ್ಚದ, ದುಂದುಗಾರ, ಉಡಾಳ, ಖರ್ಚಿಗ, ಅಳತೆಗೆಟ್ಟ.

**व्ययी** (ವ್ಯಯೀ) ವಿ. ಸಂ. ಉದಾರ ಹಸ್ತದ, ಕೊಡು ಗೈಯ್ಯ.

**व्यर्थ** (ವ್ಯರ್ಥ) ವಿ. ಸಂ. ಬರಿಯ, ಕಾರಣವಿಲ್ಲದ, ಜೊಳ್ಳು, ಹುರುಳಿಲ್ಲದ, ನಿರರ್ಥಕ, ಒಯ್ಯಾರದ, ಒಣ ಆಡಂಬರದ, ಲಾಭವಿಲ್ಲದ.

**व्यवच्छिन्न** (ವ್ಯವಚ್ಛಿನ್ನ) ವಿ. ಸಂ. ನಿರ್ದಿಷ್ಟ, ಗೊತ್ತುಪಡಿದ.

**व्यवच्छेद** (ವ್ಯವಚ್ಛೇದ) ಪು. ಸಂ. ನಿಶ್ಚಯ, ಅಪ ವಾದ, ಖಂಡ, ತುಂಡು.

**व्यवधान** (ವ್ಯವಧಾನ) ನ. ಸಂ. ನಡುವೆಬರುವಿಕೆ, ಮಧ್ಯಸ್ಥಿಕೆ, ಅವಕಾಶ, ಎಡೆ, ಅಂತರ, ವಿರಾಮ ಕಾಲ, ವ್ಯವಧಾನ, ಕಿಂಡಿ, ಸಂದು, ಬಿರುಕು, ಮಧ್ಯದ ಕಾಲ, ಮಹದಂತರ.

**व्यवसाय** (ವ್ಯವಸಾಯ) ಪು. ಸಂ. ಉದ್ಯೋಗ, ವ್ಯಾಪಾರ, ಒಕ್ಕಲತನ, ಕಾರ್ಯ, ಪರಿಶ್ರಮ, ವ್ಯಾಸಂಗ, ಅಚಲವ್ಯಾಸಂಗ, ಆಪಾದನೆ, ನಿಶ್ಚಿತ ಮತ, ದೃಢನಂಬಿಗೆ.

**व्यवसायी** (ವ್ಯವಸಾಯೀ) ಪು. ಸಂ. } ಉದ್ಯೋಗಿ,
**व्यवसायक** (ವ್ಯವಸಾಯಕ) ವಿ. } ಉದ್ಯೋಗಸ್ಥ, ಒಕ್ಕಲುತನದ, ಪರಿಶ್ರಮದ, ವ್ಯವಸಾಯಕ್ಕೆ ಸಂಬಂಧಿಸಿದ, ವ್ಯಾಸಂಗವುಳ್ಳ, ಆಪಾದಿತ, ನಿಶ್ಚಿತ ಮತದ, ದೃಢನಂಬಿಗೆಯ.

**व्यवस्था** (ವ್ಯವಸ್ಥಾ) ಸ್ತ್ರೀ. ಸಂ. ಏರ್ಪಾಡು, ಕ್ರಮ, ವ್ಯವಸ್ಥೆ, ಕೊನೆ, ಮಿತಿ, ಗುರಿ, ಅಂತ್ಯ, ಪರಿಣಾಮ, ಹರಿವು, ಹರಿಬು, ಪತ್ರಿಕೆಯ ಸಂಚಿಕೆ, ವಿವಾದಾಂಶ.

**व्यवस्थापक** (ವ್ಯವಸ್ಥಾಪಕ) ಪು. ಸಂ. ವ್ಯವಸ್ಥಾಪಕ, ವ್ಯವಸ್ಥೆಮಾಡುವ, ಕೊನೆಯ, ಮಿತಿಯುಳ್ಳ, ಗುರಿಯುಳ್ಳ.

**व्यवस्थापन** (ವ್ಯವಸ್ಥಾಪನ) ನ. ಸಂ. ವ್ಯವಸ್ಥೆ ಮಾಡುವಿಕೆ, ಕೊನೆಗೊಳ್ಳುವಿಕೆ, ತೀರಿಸುವಿಕೆ, ಗುರಿ ಯಿರುವಿಕೆ.

**व्यवस्थापित** (ವ್ಯವಸ್ಥಾಪಿತ) ವಿ. ಸಂ. } ವ್ಯವಸ್ಥೆಮಾಡ
**व्यवस्थित** (ವ್ಯವಸ್ಥಿತ) ವಿ. ಸಂ. } ಲ್ಪಟ್ಟ, ಕೊನೆ ಗೊಂಡ, ಕ್ರಮಬದ್ಧ, ಗುರಿಯುಳ್ಳ.

**व्यवहार** (ವ್ಯವಹಾರ) ಪು. ಸಂ. ಉಪಯೋಗ, ಬಳಕೆ, ವ್ಯವಹಾರ.

**व्यवहारचातुर्य** (ವ್ಯವಹಾರಚಾತುರ್ಯ) ನ. ನೀತಿ, ವ್ಯವಹಾರಚಾತುರ್ಯ, ಕೌಶಲ್ಯ, ನಡೆವಳಿಕೆಯ ಜಾಣ್ಮೆ.

**व्यवहारविषय** (ವ್ಯವಹಾರವಿಷಯ) ಪು. ಸಂ. ವ್ಯವ ಹಾರ ಜ್ಞಾನ, ವ್ಯವಹಾರಬುದ್ಧಿ.

**व्यवहारशुद्ध** (ವ್ಯವಹಾರಶುದ್ಧ) ವಿ. ಸಂ. ನೀತಿಯ ನಡೆವಳಿಕೆಯುಳ್ಳ, ಶುದ್ಧಾಚರಣೆಯ, ವ್ಯವಹಾರ ವನ್ನನುಸರಿಸಿದ.

**व्यवहारशून्य** (ವ್ಯವಹಾರಶೂನ್ಯ) ವಿ. ಸಂ. ವ್ಯವ ಹಾರಭ್ರಷ್ಟ, ವ್ಯವಹಾರಶೂನ್ಯ, ನೀತಿಗೆಟ್ಟ.

**व्यवहारज्ञ** (ವ್ಯವಹಾರಜ್ಞ) ಪು. ನ. ನಡೆವಳಿಕೆಬಲ್ಲವ, ರೀತಿ ತಿಳಿದವ.

**व्यवहारज्ञान** (ವ್ಯವಹಾರಜ್ಞಾನ) ನ. ಸಂ. ನಡೆವಳಿಕೆಯ ಜಾಣ್ಮೆ, ವ್ಯವಹಾರ ನೀತಿ.

**व्यवहारी** (ವ್ಯವಹಾರೀ) ವಿ. ಸಂ. ಜಾಣ, ವ್ಯವಹಾರ ಬಲ್ಲವ.

**व्यवहारी अपूर्णांक** (ವ್ಯವಹಾರೀ ಅಪೂರ್ಣಾಂಕ) ಪು. ಸಂ. ಭಿನ್ನಾಂಕ, ವ್ಯವಹಾರಿ ಅಪೂರ್ಣಾಂಕ.

**व्यवहार्य** (ವ್ಯವಹಾರ್ಯ) ವಿ. ಸಂ. ವ್ಯವಹಾರಕ್ಕೆ ಯೋಗ್ಯ, ಮಾಡಲಿಕ್ಕೆಬರುವ.

**व्यसन** (ವ್ಯಸನ) ನ. ಸಂ. ದುಃಖ. ೨. ಚಟ, ದುಶ್ಚಟ, ಕೆಟ್ಟ ಚಟ, ದುರಭ್ಯಾಸ.

**व्यसनी** (ವ್ಯಸನೀ) ವಿ. ದುಶ್ಚಟಗಳಿದ್ದ, ೨. ಅತಿ ದುಃಖಿತ.

**व्यसनासक्त, व्यसनीक** (ವ್ಯಸನಾಸಕ್ತ, ವ್ಯಸನೀಕ್) ವಿ. ಕೆಟ್ಟ ನಡತೆಯುವ, ದುರಭ್ಯಾಸಗಳುಳ್ಳವ.

**व्यस्त** (ವ್ಯಸ್ತ) ವಿ. ಸಂ. ವ್ಯತಿಕ್ರಮ, ಸಮವಲ್ಲದ, ಅಸಮ.

**व्यस्तत्रैराशिक** (ವ್ಯಸ್ತತ್ರೈರಾಶಿಕ) ನ. ಸಂ. ವ್ಯಸ್ತ ತ್ರೈರಾಶಿಕ, ವ್ಯಸ್ತತ್ರಿಕಾಶಿ, ವಿಲೋಮ ಗಣಿತ ಪದ್ಧತಿ.

**व्यस्ताव्यस्त** (ವ್ಯಸ್ತಾವ್ಯಸ್ತ) ವಿ. ಸಂ. ವ್ಯಸ್ತಾವ್ಯಸ್ತ, ಅವ್ಯವಸ್ಥಿತ, ಅತಿರೇಕವಾಗಿ ಆಕ್ರಮುಗೊಂಡ.

**व्याकरण** (ವ್ಯಾಕರಣ) ನ. ಸಂ. ವ್ಯಾಕರಣ, ಶುದ್ಧ ಭಾಷಾಶಾಸ್ತ್ರ.

**व्याकरणकार** (ವ್ಯಾಕರಣಕಾರ), **व्याकरणी** (ವ್ಯಾಕರಣೀ) ಪು. ವ್ಯಾಕರಣಕಾರ, ವ್ಯಾಕರಣಜ್ಞ, ಭಾಷಾಶಾಸ್ತ್ರ.

**व्याकुल** (ವ್ಯಾಕುಲ) ವಿ. ಸಂ., **व्याकूळ** (ವ್ಯಾಕೂಳ್) ವಿ. ವ್ಯಾಕುಲ, ದುಃಖಿತ, ಪ್ರಕ್ಷುಬ್ಧ, ಅವಮಾನಿತ.

**व्याक्रोश** (ವ್ಯಾಕ್ರೋಶ) ಪು. ಅತಿದುಃಖ, ಗೋಳಾಟ, ವಿಲಾಪ.

**व्याख्या** (ವ್ಯಾಖ್ಯಾ) ಸ್ತ್ರೀ. ಸಂ. ವಿವರಣೆ, ಸ್ಪಷ್ಟೀಕರಣ, ವರ್ಣನೆ, ಟೀಕೆ, ಟಿಪ್ಪಣೆ.

**व्याख्याता** (ವ್ಯಾಖ್ಯಾತಾ) ಪು. ಸಂ. ವ್ಯಾಖ್ಯಾನುಕಾರ, ಭಾಷಣಕಾರ, ಲೆಕ್ಚರಾರ್.

**व्याख्यान** (ವ್ಯಾಖ್ಯಾನ) ನ. ಸಂ. ವ್ಯಾಖ್ಯಾನ, ಭಾಷಣ, ಟೀಕೆ, ಸ್ಪಷ್ಟೀಕರಣ.

**व्याघ्र** (ವ್ಯಾಘ್ರ) ಪು. ಸಂ. ಹುಲಿ.

**व्याघ्रांबर** (ವ್ಯಾಘ್ರಾಂಬರ) ನ. ಸಂ. ಹುಲಿಯ ತೊಗಲು, ಹುಲಿತೊಗಲಿನಬಟ್ಟೆ. ೨. ಪು. ಶಿವ, ಮಹಾದೇವ.

**व्याज** (ವ್ಯಾಜ) ನ. ಸಂ. ಸೋಗು ನೆಪ. ೨. ವಿ. ಸುಳ್ಳು.

**व्याज** (ವ್ಯಾಜ್) ನ. ಬಡ್ಡಿ.

**व्याजबट्टा** (ವ್ಯಾಜಬಟ್ಟಾ) ಪು. ಬಡ್ಡಿವ್ಯವಹಾರ.

**व्याजस्तुति** (ವ್ಯಾಜಸ್ತುತಿ) ವಿ. ಸಂ. ಅಲಂಕಾರ. (ಒಂದುಪ್ರಕಾರದ) ನಿಂದೆಯೊಡನೆ ಸ್ತುತಿ.

**व्याजाऊ** (ವ್ಯಾಜಾಊ) ವಿ., **व्याजी** (ವ್ಯಾಜೀ) ವಿ. ಬಡ್ಡಿಯ, ಬಡ್ಡಿಮಾಲ, ಬಡ್ಡಿಗೆ ಕೊಟ್ಟ.

**व्याध** (ವ್ಯಾಧ) ಪು. ಸಂ. ಬೇಟೆಗಾರ, ಬೇಡ, ಶಿಕಾರಿಯುವ, ಬೇಡರವ.

**व्याधि** (ವ್ಯಾಧಿ) ವಿ. ಸ್ತ್ರೀ. ಸಂ. ಬೇಡತಿ, ರೋಗ, ದುಃಖ, ಅಡ್ಡಿ.

**व्याधित** (ವ್ಯಾಧಿತ) ವಿ. ಸಂ. ಅಸ್ವಸ್ಥ, ಬೇಸರಗೊಂಡ, ಬೇನೆಯು, ಬೇನೆಗೊಂಡ.

**व्याधिष्ठ** (ವ್ಯಾಧಿಷ್ಠ) ವಿ. ದೊಡ್ಡಬೇನೆಯು, ಮಹಾರೋಗದ.

**व्यान** (ವ್ಯಾನ) ಪು. ಸಂ. ಪಂಚಪ್ರಾಣಗಳಲ್ಲೊಂದು, ವ್ಯಾನ.

**व्याप** (ವ್ಯಾಪ) ಪು. ವಿಸ್ತಾರ, ಹಬ್ಬುವಿಕೆ, ಪಸರಿಸುವಿಕೆ, ಹಿರಿಯ ಉಸಾಬರಿ.

**व्यापक** (ವ್ಯಾಪಕ) ವಿ. ಸಂ. ವಿಸ್ತಾರವಾದ, ವಿಸ್ತರಿತ, ಹಬ್ಬಿದ, ಬಹುಸಮಾವೇಶಕ, ಬಹಳ ಹಿಡಿಯುವಂತಹ.

**व्यापणे** (ವ್ಯಾಪಣೇ) ಕ್ರಿ. ವಿ. ಹಬ್ಬು, ವಿಸ್ತಾರಗೊಳ್ಳು, ಸಮಾವೇಶವಾಗು, ಬಹಳಹಿಡಿ, ಹೆಚ್ಚಾಗಿ ತುಂಬಿರು.

**व्यापन** (ವ್ಯಾಪನ) ನ. ಸಂ. ಹಬ್ಬುವಿಕೆ, ವಿಸ್ತಾರ, ಸಮಾವೇಶ, ಹೆಚ್ಚಾಗಿ ತುಂಬುವಿಕೆ.

**व्यापार** (ವ್ಯಾಪಾರ) ಪು. ಸಂ. ವ್ಯಾಪಾರ, ವ್ಯವಹಾರ, ಕರ್ಮ, ಕೃತಿ, ಧಂದೆ, ಚಟುವಟಿಕೆ.

**व्यापारी** (ವ್ಯಾಪಾರೀ) ಪು. ವ್ಯಾಪಾರಸ್ಥ, ವ್ಯವಹಾರಸ್ಥ, ಉದ್ಯಮುಗಾರ, ಉದ್ಯೋಗವಂತ.

**व्यापारी संघ** (ವ್ಯಾಪಾರೀಸಂಘ) ಪು. ವ್ಯಾಪಾರಸ್ಥರ ಸಂಘ, ವ್ಯಾಪಾರಸ್ಥರಸಂಸ್ಥೆ, ಉದ್ಯೋಗಸ್ಥ ಮಂಡಲ.

**व्यापी** (ವ್ಯಾಪೀ) ವಿ. "व्यापक" ನೋ.

**व्यापृत** (ವ್ಯಾಪೃತ) ವಿ. ಸಂ., **व्याप्त** (ವ್ಯಾಪ್ತ) ವಿ. ಮಗ್ನ, ಹಬ್ಬಿದ, ವಿಸ್ತೃತ.

**व्याप्ति** (ವ್ಯಾಪ್ತಿ) ಸ್ತ್ರೀ. ಸಂ. ವ್ಯಾಪ್ತಿ, ವಿಸ್ತರಣೆ, ಹಬ್ಬುವಿಕೆ, ಬಲಿಯುವಿಕೆ.

**व्यायाम** (ವ್ಯಾಯಾಮ) ಪು. ವ್ಯಾಯಾಮ, ಶಾರೀರಿಕ ಶ್ರಮ, ಅಂಗಸಾಧನೆ, ತಾಲೀಮು.

**व्याल–ळ** (ವ್ಯಾಲ–ಳ) ಪು. ಸಂ. ಹಾವು, ಸರ್ಪ.

**व्यावहारिक** (ವ್ಯಾವಹಾರಿಕ) ವಿ. ಸಂ. ವ್ಯವಹಾರಕ್ಕೆ ಸಂಬಂಧಿಸಿದ, ಉದ್ಯೋಗಕ್ಕೆ ಸಂಬಂಧಿಸಿದ.

**व्यावृत्ति** (ವ್ಯಾವೃತ್ತಿ) ಸ್ತ್ರೀ. ಸಂ. ಪ್ರತ್ಯೇಕ, ಅಗಲಾಗುವಿಕೆ, ಪರಿಶ್ರಮ, ಬೇರೆಬೇರೆ ಇರುವಿಕೆ, ಅಪವಾದ ಗೊಂದಲ, ಕ್ಷೋಭ.

**व्यास** (ವ್ಯಾಸ) ಪು. ಸಂ. ವ್ಯಾಸ, ಪುರಾಣ ಬರೆಹಗಾರ. ೨. (ಭೂಮಿತಿ) ವ್ಯಾಸ.

**व्यासपीठ** (ವ್ಯಾಸಪೀಠ) ನ. ಸಂ. ಗದ್ದುಗೆ, ವ್ಯಾಸಪೀಠ, ಪೌರಾಣಿಕನ ಆಸನ, ಸಭೆಯಲ್ಲಿಯ ಮುಖ್ಯ ಅಥಿತಿಯ ಸ್ಥಾನ.

**व्यासंग** (ವ್ಯಾಸಂಗ) ಪು. ಸಂ. ಅಭ್ಯಾಸ, ಮಗ್ನತೆ, ಏಕಾಗ್ರಚಿತ್ತ.

**व्यासंगी** (ವ್ಯಾಸಂಗೀ) ವಿ. ಅಭ್ಯಾಸಿ, ಅಭ್ಯಾಸದಲ್ಲಿ ಮಗ್ನನಾದ, ಏಕಾಗ್ರ ಚಿತ್ತದ.

**व्यासार्ध** (ವ್ಯಾಸಾರ್ಧ) ಪು. ಸಂ. ತ್ರಿಜ್ಯಾ, ವರ್ತುಲದಲ್ಲಿಯ ಕೇಂದ್ರದಿಂದ ಪರಿಘಕ್ಕೆ ಮುಟ್ಟಿದರೇಖೆ.

**व्याहत** (ವ್ಯಾಹತ) ವಿ. ಸಂ. ತಡೆಹಿಡಿದ, ವಿರೋಧಿಸಿದ, ಅಡ್ಡಿಮಾಡಲ್ಪಟ್ಟ, ಆತಂಕಗೊಂಡ.

**व्याही** (ವ್ಯಾಹೀ) ಪು. ಬೀಗ, ಸೊಸೆಯ–ಅಳಿಯನ ಅಪ್ಪ, ನೆಂಟ.

**व्याक्षेप** (ವ್ಯಾಕ್ಷೇಪ) ಪು. ವಿರೋಧ, ಅಡ್ಡಿ, ಹಿಂಜರಿಯುವಿಕೆ, ಕಾಲೆಳೆಯುವಿಕೆ, ಆಕ್ಷೇಪ ತಕ್ಕೊಳ್ಳುವಿಕೆ.

**व्याक्षोभ** (ವ್ಯಾಕ್ಷೋಭ) ಪು. ಸಂ. ಮನಃಕ್ಷೋಭ, ಉದ್ರೇಕ, ರೇಗು.

**व्युत्क्रम** (ವ್ಯುತ್ಕ್ರಮ) ಪು. ವ್ಯುತ್ಕ್ರಮ, ವಿಪರೀತ ಧರ್ಮ.

**व्युत्पत्ति** (ವ್ಯುತ್ಪತ್ತಿ) ಸ್ತ್ರೀ. ಜನ್ಮ, ಹುಟ್ಟುವಿಕೆ, ರಚನೆ, ಶಬ್ದದಮೂಲ.

**व्युत्पन्न** (ವ್ಯುತ್ಪನ್ನ) ವಿ. ಸಂ. ಸಾಹಿತ್ಯಿಕ, ಪಂಡಿತ, ಜ್ಞಾನಿ.

**व्यूह** (ವ್ಯೂಹ) ಪು. ಸಂ. ಸೈನ್ಯರಚನೆ, ಸೈನ್ಯದ ಸಂಚಲನ ವ್ಯವಸ್ಥೆ, ಯುದ್ಧ ರಚನಾತಂತ್ರ, ವ್ಯೂಹ ರಚನೆ.

**व्योम** (ವ್ಯೋಮ) ನ. ಸಂ. ಆಕಾಶ, ಗಗನ, ಸ್ವರ್ಗ, ಅಂತರೀಕ್ಷ, ಬಯಲು.

**व्रज** (ವ್ರಜ) ಪು. ಸಂ. ಗೌಳಿಗರ ಛಾವಣಿ, ಒಂದು ಜಾತಿ, ಸಮೂಹ.

**व्रण** (ವ್ರಣ) ಪು. ಸಂ. ಗಾಯ, ಹುಣ್ಣು, ಯಾತನೆ, ಹಾನಿ, ಮನನೋಯಿಸುವಿಕೆ, ಹುಣ್ಣು.

**व्रत** (ವ್ರತ್) ನ. ಸಂ. ನಿಯಮ, ಧಾರ್ಮಿಕ ಪ್ರತಿಜ್ಞೆ.

**व्रतबंध** (ವ್ರತಬಂಧ) ಪು. ಸಂ. ಉಪನಯನ, ಮೌಂಜೀ ಬಂಧನ, ಮುಂಜಿವೆ.

**व्रतभंग** (ವ್ರತಭಂಗ) ಪು. ಸಂ. ವ್ರತಭಂಗ, ಆಣೆ ಮುರಿಯುವಿಕೆ, ಹರಕೆ ಹಾಳುಮಾಡುವಿಕೆ.

**व्रतस्थ** (ವ್ರತಸ್ಥ) ಪು. ಸಂ.
**व्रती** (ವ್ರತೀ) ವಿ. ಸಂ.
{ ವ್ರತಸ್ಥ, ವ್ರತದ ಪ್ರತಿಜ್ಞೆ ಮಾಡುವವ, ಆಣೆ ಮಾಡುವವ, ತಕ್ಕೊಳ್ಳುವವ.

**व्रतवैकल्य** (ವ್ರತವೈಕಲ್ಯ) ನ. ಸಂ. ವ್ರತ, ಉಪಾಸನೆ, ಮುಂ.

**व्रात्य** (ವ್ರಾತ್ಯ) ಪು. ಸಂ. ವ್ರತಬಂಧನರಹಿತ ಬ್ರಾಹ್ಮಣ, ೨. ಜಾತಿಗೆಟ್ಟ, ಉಪನಯನವಾಗದ ಬ್ರಾಹ್ಮಣ, ಮುಂಜಿವೆಯಿಲ್ಲದೆ ಬೆಳೆದ ಬ್ರಾಹ್ಮಣರ ಹುಡುಗ.

**व्रात्यष्टोम** (ವ್ರಾತ್ಯಷ್ಟೋಮ) ಪು. ಸಂ. ಪರಧರ್ಮದವರನ್ನು ಹಿಂದೂ ಧರ್ಮದಲ್ಲಿ ತೆಗೆದುಕೊಳ್ಳುವ ವಿಧಿ.

**व्रीडा** (ವ್ರೀಡಾ) ಕ್ರಿ. ಸಂ. ವಿನಯ, ಲಜ್ಜಾ, ನಾಚಿಕೆ.

**व्रीहि** (ವ್ರೀಹಿ) ಪು. ಸಂ. ಅಕ್ಕಿ, ಅನ್ನ, ನೆಲ್ಲು.

**व्हाण** (ವ್ಹಾಣ) ಸ್ತ್ರೀ. ಕೆರವು, ಕಾಲಮರಿಗೆ. **वहाण** ನೋ.

**व्हाळ** (ವ್ಹಾಳ್) ಪು. ಕ. ಹೊಳೆ.

**व्हाळी** (ವ್ಹಾಳೀ) ಸ್ತ್ರೀ. ಕ. ಹೊಳೆ, ಸಣ್ಣ ಹೊಳೆ.

## श ಶ

**श** ಶ: ಐದನೆಯ ಅವರ್ಗೀಯ ವ್ಯಂಜನ, ಮೂವತ್ತನೆಯ ವ್ಯಂಜನ.

**शक** (ಶಕ) ಪು. ರಾಜ್ಯಶಾಸನ, 'ಶಕ' ವರ್ಷ, ಚರಿತ್ರಕಾಲ. ೨. ಸ್ತ್ರೀ. ಅರ. ಸಂಶಯ. ೩. ಶಕರೆಂಬ ಮ್ಲೇಂಛ ಜಾತಿ.

**शककर्ता** (ಶಕಕರ್ತಾ) ಪು. 'ಶಕ' ವರ್ಷಸ್ಥಾಪಕ, ಶಕನೆಂಬ ರಾಜ. ೨. ಮಹಾಪರಾಕ್ರಮ, ರಾಜ್ಯಸ್ಥಾಪಕ.

**शकट** (ಶಕಟ) ಪು. ಸಂ. ಬಂಡಿ, ಚಕ್ಕಡಿ.

**शकल** (ಶಕಲ) ನ. ಸಂ. ತುಂಡು, ತುಣುಕು, ಚೂರು, ಯುಕ್ತಿ, ಯೋಜನೆ, ಮೋರೆ.

**शकणे** (ಶಕಣೇ) ಕ್ರಿ. ಅ. ಶಕ್ಯವಾಗು, ಸಾಧಿಸು, ಸಾಧ್ಯವಿರು.

**शंकणे** (ಶಂಕಣೇ) ಕ್ರಿ. ಸ. ಶಂಕಿಸು, ಸಂದೇಹಪಡು, ಶಂಕೆಗೊಳ್ಳು.

**शंकर** (ಶಂಕರ) ಪು. ಸಂ. ಶಿವ, ಶಂಕರಾಚಾರ್ಯ, ೨. ಶುಭ, ಕಲ್ಯಾಣಕರ, ಮಂಗಲ.

**शंकराचार्य** (ಶಂಕರಾಚಾರ್ಯ) ಪು. ಸಂ. ಶಂಕರಾಚಾರ್ಯ, ಅದ್ವೈತ ಮತೋದ್ಧಾರಕ ಆಚಾರ್ಯರು.

**शंका** (ಶಂಕಾ) ಸ್ತ್ರೀ. ಸಂ. ಸಂಶಯ, ಸಂದೇಹ, ಅಳುಕು, ಭಯ, ಅಂಜಿಕೆ.

**शंका घेणे** (ಶಂಕಾ ಘೇಣೇ) ಕ್ರಿ. ಸ. ಸಂಶಯಿಸು, ಸಂದೇಹಪಡು, ಭಯಪಡು, ಅಂಜು.

**शंका धरणे** (ಶಂಕಾ ಧರಣೇ) ಕ್ರಿ. ಸ. ಭಯಪಡು, ಭಯಗೊಳ್ಳು, ಹೆದರು.

**शंकाशील–ळ** (ಶಂಕಾಶೀಲ–ಳ್) ವಿ. ಶಂಕಾಯುಕ್ತ, ಸಂಶಯ ಸ್ವಭಾವದ, ಮಬ್ಬಾದ, ಅಸ್ಪಷ್ಟ, ಸಂದಿಗ್ಧ.

**शंकासूर** (ಶಂಕಾಸೂರ) ಪು. ಸ. ಒಂದು ಹೂ ಗಿಡದ ಹೆಸರು, ಶಂಕಾರೂಪಿ ರಾಕ್ಷಸ, ಸಂಶಯ ರಾಕ್ಷಸ.

**शंकित** (ಶಂಕಿತ) ವಿ. ಸಂ. ಸಂಶಯಗೊಂಡ, ಸಂಶಯ ತಕ್ಕೊಂಡ.

**शंकु** (ಶಂಕು) ಪು. ಸಂ. ಒಂದು ಯಂತ್ರ, ಶಂಕು. ೨. ದಪ್ಪ ಮೊಳೆ, ಮೊನೆ, ಚೂಪು, ಗಡಿಯಾರದ ಮುಖ. ೩. ಮೂಲೆ, ಸಂಖ್ಯಾಸ್ಥಾನ. ೪ (ಸಂಖ್ಯೆ) 'ಶಂಕು'.

**शकुन** (ಶಕುನ) ಪು. ನಿಮಿತ್ತ, ಶಕುನ, ಕಣಿ, ಶುಭಾಶುಭಲಕ್ಷಣ.

**शकुनवंती** (ಶಕುನವಂತೀ) ಸ್ತ್ರೀ. ಕಣಿ ಹೇಳುವಾಕೆ, ಶುಭಾಶುಭ ಲಕ್ಷಣ ಪುಸ್ತಕ, ಶಕುನ ಗ್ರಂಥ.

**शकुन्याजोशी** (ಶಕುನ್ಯಾಜೋಶೀ) ಪು. ಸಂ. ಜ್ಯೋತಿಷಿ, ಕಣಿಗಾರ, ಶುಭಾಶುಭ ಹೇಳುವವ.

**शकुनि** (ಶಕುನಿ) ಪು. ಧೂರ್ತ. ೨. ಕೌರವರ ಮಾವ.

**शकुनिमामा** (ಶಕುನಿಮಾಮಾ) ಪು. ಶಕುನಿ. ೨.ಲಾ. ಕುಬುದ್ಧಿವಂತ, ಅಡ್ಡಮಾರ್ಗತೋರುವವ, ದುರ್ಮಾರ್ಗಕ್ಕೆ ಹಚ್ಚುವವ.

**शंकु यंत्र** (ಶಂಕುಯಂತ್ರ) ನ. ಸೂರ್ಯನ ಗತಿದರ್ಶಕ ಯಂತ್ರ, ಶಂಕುಯಂತ್ರ.

**शंकुवृत्त** (ಶಂಕುವೃತ್ತ) ನ. ಸಂ. ಶಂಕುವೃತ್ತ, ಶಂಕುವಿನ ತಳ, ಕಾಲದರ್ಶಕ ವೃತ್ತಫಲಕ.

**शकून** (ಶಕೂನ) ಪು. ಸಂ. **शकुन** ನೋ.

**शक्त** (ಶಕ್ತ) ಪು. ಸಂ. ಬಲಿಷ್ಠ, ಸಾಮರ್ಥ್ಯವುಳ್ಳ, ಗಟ್ಟಿಯಾದ, ಬಲವುಳ್ಳ, ಸಮರ್ಥ, ಗಟ್ಟಿಗ.

**शक्ति** (ಶಕ್ತಿ) ಸ್ತ್ರೀ. ಸಂ. ಕಸುವು, ಯೋಗ್ಯತೆ, ಸಾಮರ್ಥ್ಯ, ಕಬ್ಬಿಣ ಭಾಲೆ.

**शक्तिमंत –मान** (ಶಕ್ತಿಮಂತ –ಮಾನ್) ವಿ. ಸಂ. ಶಕ್ತ, ಸಮರ್ಥ, ಗಟ್ಟಿಗ, ಯೋಗ್ಯ, ಕಸುವುಳ್ಳ.

**शक्तिक्षीण** (ಶಕ್ತಿಕ್ಷೀಣ) ವಿ.ಸಂ. ಅಸಮರ್ಥ, ಹೇಡಿ, ಪೊಳ್ಳಾದ, ಅಯೋಗ್ಯ, ಕಸುವಿಲ್ಲದ.

**शक्त्यनुसार, शक्त्यनुरूप** (ಶಕ್ತ್ಯನುಸಾರ, ಶಕ್ತ್ಯನುರೂಪ) ಕ್ರಿ. ವಿ. ಯೋಗ್ಯತಾನುಸಾರ, ಕೈಲಾದ ಮಟ್ಟಿಗೆ.

**शक्तिवंत** (ಶಕ್ತಿವಂತ) ವಿ. ಸಂ. ಗಟ್ಟಿಗ.

**शक्य** (ಶಕ್ಯ) ವಿ. ಸಂ. ಸಾಧ್ಯವಾದ, ಕೈಗೂಡತಕ್ಕ, ವಶವಾದ, ಕಾರ್ಯರೂಪಕ್ಕೆ ಬರಲಿರುವ.

**शक्यार्थ** (ಶಕ್ಯಾರ್ಥ) ವಿ. ಸಂ. ಮಥಿತಾರ್ಥ, ಒಳಗುಟ್ಟು, ರಹಸ್ಯ.

**शक्र** (ಶಕ್ರ) ಪು. ಸಂ. ಇಂದ್ರನ ಹೆಸರು.

**शक्रधनु** (ಶಕ್ರಧನು) ನ. ಸಂ. ಇಂದ್ರಧನುಸ್ಸು, ಕಾಮನಬಿಲ್ಲು.

**शंख** (ಶಂಖ) ಪು. ಸಂ. ಶಂಖ. ೨. ಮೂರ್ಖಮನುಷ್ಯ, ಅಶಿಕ್ಷಿತಮಾನವ, ಅರ್ಥವಿಹೀನನಾದವ.

**शंख करणे, शंख वाजविणे** (ಶಂಖಕರಣೇ, ಶಂಖವಾಜವಿಣೇ) ಕ್ರಿ. ವಿ. ಬೊಬ್ಬೆಗಟ್ಟು, ಶಂಖಊದು.

**शंखजिरे** (ಶಂಖಜಿರೇ) ಪು. ಬಹು. ಸಂಜೀರಿಗೆ.

**शंखध्वनि** (ಶಂಖಧ್ವನಿ) ಪು. ಸಂ. ಬೊಬ್ಬೆ, ಶಂಖಧ್ವನಿ, ಬೊಬ್ಬೆಯ ಸಪ್ಪಳ.

**शंखशास्त्र** (ಶಂಖಶಾಸ್ತ್ರ) ನ. ಸಂ. ಶಂಖಶಾಸ್ತ್ರ, ಶಂಖದಲಾಕ್ಷಣಿಕ ಶಾಸ್ತ್ರ.

**शंखिनी** (ಶಂಖಿನೀ) ಸ್ತ್ರೀ. ಸಂ. ಹೆಣ್ಣಿನ ಪ್ರಕಾರ, ಸ್ತ್ರೀ ಜಾತಿ ವಿಭಾಗ, ಶಂಕಿನಿ, ನಾಲ್ಕು ಪ್ರಕಾರಗಳಲ್ಲಿ (ಕಾಡು) ಸ್ತ್ರೀಯ ಜಾತಿ.

**शंखोबा** (ಶಂಖೋಬಾ) ಪು. ಸಂ. ದಡ್ಡ, ಮೂರ್ಖನಾದವ, ತಿಳಿಗೇಡಿ ಮನುಷ್ಯ, ಅಜ್ಞಾನಿಯಾದವ, ಉರುಟುಮನುಷ್ಯ.

**शठ** (ಶಠ) ಪು. ಸಂ. ಸೊಕ್ಕಿನ, ಮದಕ್ಕೇರಿದ, ನೀಚ, ಮೋಸದ, ಠಕ್ಕ.

**शंड** (ಶಂಡ) ವಿ. (**षंढ**) ನೋ.

**शत** (ಶತ) ವಿ. ಸಂ. ನೂರು.

**शतक** (ಶತಕ) ನ.ಪು. ನೂರರ ಗುಂಪು. ೨. ನೂರು "ರನ್" (ಕ್ರಿಕೆಟ್). ೩. ಶತಮಾನ (ಶಕ, ಇಸ್ವಿ ಇ.

**शतगुण** (ಶತಗುಣ) ವಿ. ನೂರು ಮಡಿಯಾದ, ನೂರು ಪಟ್ಟಿನ, ನೂರರಷ್ಟಾದ.

**शतचूर्ण** (ಶತಚೂರ್ಣ) ನ. ಸಂ. ಪುಡಿ, ಚೂರ್ಣ, ಸೂಕ್ಷ್ಮ ಚೂರ್ಣ, ಚೂರ್ಣಾವಸ್ಥೆ, ತುಳಿದು ಪುಡಿ ಮಾಡಿದ ಅವಸ್ಥೆ.

**शतंजीव** (ಶತಂಜೀವ) ಪು. ಸಂ. ಉದ್ಗಾರ– ಆಶೀರ್ವಚನ, ಶತಜೀವಿಸೆನ್ನುವಿಕೆ, ಹರಕೆ, ನೂರು ವರ್ಷ ಬಾಳೆನ್ನುವಿಕೆ.

**शततारका** (ಶತತಾರಕಾ) ಸ್ತ್ರೀ. ಸಂ. ನಕ್ಷತ್ರದ ಹೆಸರು, ಇಪ್ಪತ್ತುನಾಲ್ಕನೆಯ ನಕ್ಷತ್ರ.

**शतपदी** (ಶತಪದೀ) ಸ್ತ್ರೀ. ಸಂ. **शतपावली** (ಶತಪಾವಲೀ) ಸ್ತ್ರೀ. ಶತಪದಿ, ಉಂಡು ನೂರಡಿ ಇಡುವಿಕೆ, ನೂರು ಹೆಜ್ಜೆ ಯಾಟ.

**शतमूर्ख** (ಶತಮೂರ್ಖ) ವಿ. ಮೂಢ, ಬಹಳೀ ತಿಳಿಗೇಡಿಯು.

**शतशः** (ಶತಶಃ) ಕ್ರಿ. ವಿ. ನೂರುಮಡಿಯಾಗಿ, ನೂರಾರುರೀತಿಯಾಗಿ.

**शतायु** (ಶತಾಯು) ವಿ. ಸಂ. **शतायुषी** (ಶತಾಯುಷೀ) ವಿ. ಸಂ. ನೂರುವರ್ಷ ಬದುಕಿದ, ಬದುಕುವ.

**शताळशी** (ಶತಾಳಶೀ) ವಿ. ನೂರುಮಡಿ ಮೈಗಳ್ಳ, ಶತಾಲಸಿಗ.

**शत्रु** (ಶತ್ರು) ಪು. ಸಂ. ವೈರಿ, ಹಗೆ, ಅಹಿತ, ಪ್ರತಿಸ್ಪರ್ಧಿ, ಎದುರಾಳಿ

**शन(नि) वार** (ಶನ(ನಿ)ವಾರ ಪು. ಶನಿವಾರ.

**शनिवासर** (ಶನಿವಾಸರ) ಪು. ಸಂ. ಒಂದುಗ್ರಹ, ಶನಿಗ್ರಹ, ವೈರಿ, ಎದುರುಗಾರ.

**शनैःशनैः** (ಶನೈಃಶನೈಃ) ಕ್ರಿ. ವಿ. ಸಾವಕಾಶವಾಗಿ, ಕ್ರಮೇಣ.

**शनैश्चर, शनैश्वर** (ಶನೈಶ್ಚರ,ಶನೈಶ್ವರ) ಪು. ಸಂ. ಶನಿಗ್ರಹ.

**शपथ** (ಶಪಥ) ಸ್ತ್ರೀ. ಸಂ. ಆಣೆ, ಪ್ರಮಾಣ.

**शपथ वाहणें** (ಶಪಥ್ ವಾಹಣೇ) ಕ್ರಿ. ಸ. ಆಣೆಮಾಡು, ಆಣೆತಕ್ಕೊಳ್ಳು.

**शपथ वाहायला मोकळा होणे** (ಶಪಥ ವಾಹಾಯಲಾ ಮೋಕಳಾ ಹೋಣೇ) ಕ್ರಿ. ಅ. ಆಣೆತಕ್ಕೊಳ್ಳುವ ಸ್ಥಿತಿ ಸಂಪಾದಿಸು.

**शफ** (ಶಫ) ಪು. ಗೊರಸು, ಖುರ. (ಗೊರಸಿನ ಒಂದು ಭಾಗ)

**शबल** (ಶಬಲ) ವಿ. ಸಂ. ಗೊಂದಲಕ್ಕೀಡಾದ, ೨. ಪೇಚು. ೩. ವಿ. ಬಣ್ಣಬಣ್ಣದ. ೪. ಪು. ೫. ಶಬಲರಾಜ.

**शब्द** (ಶಬ್ದ) ಪು. ಶಬ್ದ, ಧ್ವನಿ, ನಿಂದೆ, ಕಿವಿ ಹಿಂಡುವಿಕೆ.

**शब्द टाकणे** (ಶಬ್ದಟಾಕಣೇ) ಕ್ರಿ. ಸ. ಹೇಳಿನೋಡು, ಕೇಳಿನೋಡು, ಶಿಫಾರಸುಮಾಡು, ಹೇಳಿಡು.

**शब्दकोश-ष** (ಶಬ್ದಕೋಶ–ಷ) ಪು. ಸಂ. ಶಬ್ದಕೋಶ, ಶಬ್ದಮಂಜರಿ, 'ಶಬ್ದಕೋಶ' ಪುಸ್ತಕ.

**शब्दखंडन** (ಶಬ್ದಖಂಡನ) ನ. ಸ. ಮಾತುಗೆಲ್ಲುವಿಕೆ. ಮಾತುಭಂಗಿಸುವಿಕೆ, ಮಾತಿನ ಟೀಕೆ.

**शब्दच्छल** (ಶಬ್ದಚ್ಛಲ) ಪು. ಸಂ. ಶಬ್ದಚ್ಛಲ, ಮಾತಿನ ಹಟ, ಹಟವಾದಿತನ, ಎರಡರ್ಥದ ಮಾತು, ಮಾತಿನಾಟ-

**शब्द ताडन** (ಶಬ್ದತಾಡನ) ನ. ಸಂ. ಶಬ್ದದ ಹೊಡೆತ, ಬೆದರಿಸುವಿಕೆ, ಕಿವಿಹಿಂಡುವಿಕೆ, ದಬ್ಬಾಳಿಸುವಿಕೆ, ಹೆದರಿಸುವಿಕೆ.

**शब्दपांडित्य** (ಶಬ್ದಪಾಂಡಿತ್ಯ) **शब्द चातुर्य** (ಶಬ್ದಚಾತುರ್ಯ) ನ. ಸಂ. ಮಾತಿನ ಜಾಣ್ಮೆ, ಶಬ್ದಪಾಂಡಿತ್ಯ, ಭಾಷಣ, ವಕ್ತೃತ್ವ, ವಾಕ್ಚಾತುರ್ಯ.

**शब्दपाल्हाळ** (ಶಬ್ದಪಾಲ್ಹಾಳ್) ನ. ಬಡಬಡಿಕೆ. ೨. ಹೊಗಳುವಿಕೆ, ಒಣಮಾತು, ಅಧಿಕಪ್ರಸಂಗ.

**शब्दप्रमाण** (ಶಬ್ದಪ್ರಮಾಣ) ನ. ಸಂ. ಸಾಕ್ಷಿ, ಬಾಯಿಸಾಕ್ಷಿ, ಶಬ್ದಸಾಕ್ಷಿ, ಪುರಾವೆ.

**शब्दप्रहार** (ಶಬ್ದಪ್ರಹಾರ) ಪು. ಸ. ಮಾತಿನ ಹೊಡೆತ, ನಿಂದೆ, ಬೈಯ್ಯುವಿಕೆ.

**शब्दभेद** (ಶಬ್ದಭೇದ) ಪು. ಪರ್ಯಾಯಶಬ್ದ, ಮಾತಿನ ಭೇದ, ಮಾತಿನಲ್ಲಿ ಬದಲಾಗುವಿಕೆ.

**शब्दयोगी अव्यय** (ಶಬ್ದಯೋಗೀ ಅವ್ಯಯ) ಪು. ಸಂ. ಸಂಬಂಧವಾಚಕಾವ್ಯಯ ಶಬ್ದ, ಉಪಸರ್ಗ.

**शब्दरचना** (ಶಬ್ದರಚನಾ) ಪು. ಸಂ. ಶಬ್ದರಚನೆ, ಶಬ್ದಕಟ್ಟುವಿಕೆ, ಶಬ್ದಬಂಧನ, ಪದಯೋಜನೆ, ವಾಕ್ಯರಚನೆ.

**शब्दवाद** (ಶಬ್ದವಾದ) ಪು. ಸಂ. ಮಾತಿನ ಜಗಳ, ವಾಕ್ಕಲಹ, ವ್ಯಾಗ್ಯುದ್ಧ.

**शब्दशः** (ಶಬ್ದಶಃ) ಕ್ರಿ. ವಿ. ಇದ್ದಂತೆ, ಇದ್ದಕ್ಕಿದ್ದಂತೆ, ಅಕ್ಷರಶಃ, ಅರ್ಥಕ್ಕನುಸಾರವಾಗಿ, ಯಥಾಪ್ರತಿ.

**शब्दसंग्रह** (ಶಬ್ದಸಂಗ್ರಹ) ಪು. ಸಂ. ಶಬ್ದಸಂಗ್ರಹ, ಶಬ್ದಸಮೂಹ. "**शब्दकोश**" ನೋ.

**शब्दसाधनविद्या** (ಶಬ್ದಸಾಧನವಿದ್ಯಾ) ಸ್ತ್ರೀ. ಸಂ.

**शब्दसाधना** (ಶಬ್ದಸಾಧನಾ) ಸ್ತ್ರೀ. ಶಬ್ದಾರ್ಥ ವಿಚಾರ ವಿದ್ಯೆ, ಶಬ್ದಾರ್ಥನಿಷ್ಪತ್ತಿ, ಶಬ್ದೋತ್ಪತ್ತಿ ಪಾಂಡಿತ್ಯ.

**शब्दाचा मार** (ಶಬ್ದಾಚಾಮಾರ) ಪು. ಸಂ. ಮಾತಿನ ಹೊಡೆತ, ದೂಷಣೆ, ಬೆದರಿಕೆ "**शब्दप्रहार**" ನೋ.

**शब्दातिशयालंकार** (ಶಬ್ದಾತಿಶಯಾಲಂಕಾರ) ಪು. ಸಂ. ಪದಬಾಹುಲ್ಯ, ಅನಾವಶ್ಯಕ ಪದಪ್ರಯೋಗ, ನಿರರ್ಥಕ ಶಬ್ದಪಾಂಡಿತ್ಯ.

**शब्दार्थ** (ಶಬ್ದಾರ್ಥ) ಪು. ಸಂ. ಶಬ್ದಾರ್ಥ, ಶಬ್ದದ ಗುಟ್ಟು.

**शब्दालंकार** (ಶಬ್ದಾಲಂಕಾರ) ಪು. ಸಂ. ಅಲಂಕಾರದ ಒಂದು ಭಾಗ, ಮಾತಿನ ಬೆಡಗು, ಅಲಂಕಾರ ಶಾಸ್ತ್ರದ ಒಂದು ಪ್ರಕಾರ.

**शंभर** (ಶಂಭರ) ವಿ. ನೂರು.

**शम** (ಶಮ) ಪು. ಸಂ. ಶಾಂತಿ, ಶಾಂತಿ ಮಾಡುವಿಕೆ, ಅಂತ್ಯಶಾಂತಿ, ಎಚ್ಚರಿರುವಿಕೆ.

**शमणे** (ಶಮಣೇ) ಕ್ರಿ. ಅ. ಶಾಂತನಾಗು, ಇಂದ್ರಿಯ ದಮನ ಮಾಡು, ಇಂದ್ರಿಯ ನಿಗ್ರಹ ಮಾಡು.

**शमन** (ಶಮನ) ನ. ಸಂ. ಶಾಂತಿ.

**शमी** (ಶಮೀ) ಸ್ತ್ರೀ. ಬನ್ನಿಯ ಗಿಡ. ೨. ವಿ. ಶಮನ ಮಾಡುವವ, ನಾಶಗೊಳಿಸುವವ.

**शयन** (ಶಯನ) ನ. ಸಂ. ಮಲಗುವಿಕೆ, ಹಾಸಿಗೆ, ಪಾಸುಗೆ.

**–यान** (ಯಾನ್) ನ. ಸ್ಲೀಪರ್ ಕೋಚ್. (ಮಲಗುವ ರೈಲುಡಬ್ಬೆ)

**शयनागार** (ಶಯನಾಗಾರ) ಪು. ಸಂ. ಮಲಗುವ ಮನೆ, ಹಲವರು ಮಲಗುವ ಮನೆ, ಶಯ್ಯಾಗೃಹ, ಸಜ್ಜೆಮನೆ.

**शय्या** (ಶಯ್ಯಾ) ಸ್ತ್ರೀ. ಸಂ. ಹಾಸಿಗೆ, ಮಲಗುವಿಕೆ.

**शर** (ಶರ) ಪು. ಸಂ. ಬಾಣ, ವೃತ್ತಭಾಗ, ಷಟ್ಪದಿ ಛಂದಸ್ಸಿನ ಪ್ರಕಾರ.

**शरजाल** (ಶರಜಾಲ) ನ. ಸಂ. ಬಾಣ ಸಮೂಹ, ಬಾಣಗಳ ಹಾರಾಟ.

**शरण** (ಶರಣ) ನ. ಸಂ. ರಕ್ಷಣೆ, ಜೋಪಾಸನೆ, ಕಾಪಾಡುವಿಕೆ, ಚಿತೆ.

**शरण असणे** (ಶರಣ ಅಸಣೇ) ಕ್ರಿ. ಅ. ರಕ್ಷಣಕ್ಕಾಗಿ ಬರು, ವಶನಾಗು, ಶರಣುಬಾ.

**शरण जाणे–येणे** (ಶರಣ ಜಾಣೇ–ಯೇಣೇ) ಕ್ರಿ. ಅ. ಮೊರೆ ಹೋಗು, ಶರಣುಹೋಗು, ಕಂಗೆಡು, ಆಶ್ರಯಪಡೆ.

**शरण रिघणे** (ಶರಣ ರಿಘಣೇ) ಕ್ರಿ. ಅ. ದೀನನಾಗು, ದೀನನಾಗಿ ಶರಣುಹೋಗು,

**शरणागत** (ಶರಣಾಗತ) ವಿ. ಸಂ. ಶರಣ ಬಂದವ, ಮೊರೆ ಹೊಕ್ಕ, ಆಶ್ರಯಪಡೆದ, ಶರಣಾರ್ಥಿ.

**शरणागतवत्सल** (ಶರಣಾಗವತ್ಸಲ) ವಿ. ಸಂ. ಶರಣಾಗತ ವತ್ಸಲ, ಮೊರೆಹೊಕ್ಕವರನ್ನು ರಕ್ಷಿಸುವವ.

**शरणार्थी** (ಶರಣಾರ್ಥೀ) ಪು. ಸಂ. **शरणागत** ನೋ. ಓಡಿ ಬಂದವ.

**शरत्–द्** (ಶರತ್–ದ್) ಸ್ತ್ರೀ. ಸಂ.<br>**शरत्काल** (ಶರತ್ಕಾಲ) ಪು. ಸಂ.<br>**शरदृतु** (ಶರದೃತು) ಪು.<br>} ಶರತ್ಕಾಲ, ಶರದೃತು, ಚಳಿಗಾಲ, ಶರತ್ಕಾಲ

**शरत्संपात** (ಶರತ್‌ಸಂಪಾತ) ಪು. ಸಂ. ಹಗಲು–ರಾತ್ರಿ ಸಮಕಾಲ, ಶರತ್ಸಂಪಾತ.

**शरधि** (ಶರಧಿ) ಪು. ಬತ್ತಳಿಕೆ, ಸಾಗರ, ಸಮುದ್ರ, ಕಡಲು.

**शरपंजर** (ಶರಪಂಜರ) ಪು. ಸಂ. ಬಾಣದಿಂದ ಹೊಡೆಯಲ್ಪಟ್ಟ ಶರೀರ, ಶರಪಂಜರ.

**शरपंजरी पडणे** (ಶರಪಂಜರೀ ಪಡಣೇ) ಕ್ರಿ. ಸಂ. ಆಪತ್ತಿಯಲ್ಲಿ ಸಿಗು, ಸಂಕಟದಲ್ಲಿ ಸಿಗು.

**शरबत** (ಶರಬತ್) ನ. ಸಂ. ಶರಬತ್, ತಂಪು ಪಾನೀಯ, ಪಾನಕ.

**शरभ** (ಶರಭ) ಪು. ಸಂ. ಮಿಡಿತೆ, ಪತಂಗ, ಶಲಭ.

**शरम** (ಶರಮ) ಸ್ತ್ರೀ. ಫಾ. ನಾಚಿಕೆ, ಲಜ್ಜೆ, ಅವಮಾನ.

**शरमणे** (ಶರಮಣೇ) ಕ್ರಿ. ಅ. ನಾಚಿಕೆಪಡು, ಲಜ್ಜಿತನಾಗು.

**शरमिंदा** (ಶರಮಿಂದಾ) ವಿ. ಫಾ. ನಾಚಿಕೆಗೀಡಾದ, ಲಜ್ಜಿತ, ಅವಮಾನಿತ, ದಬ್ಬಲ್ಪಟ್ಟ.

**शरसंधान** (ಶರಸಂಧಾನ) ನ. ಸಂ. ಬಾಣಹೂಡುವಿಕೆ, ಶರಸಂಧಾನ.

शरासन (ಶರಾಸನ) ನ. ಸಂ. ಬಾಣದ ಹಾಸುಗೆ, ಶರಾಸನ.

शराब (ಶರಾಬ್) ಸ್ತ್ರೀ. ಅರ. ಸೆರೆ, ಮದ್ಯ, ಮಾದಕ ಪೇಯ.

शरीर (ಶರೀರ) ನ. ಸಂ. ದೇಹ, ಮೈ, ಶರೀರ.

शरीरकष्ट (ಶರೀರಕಷ್ಟ) ಪು. ಸಂ. ಶಾರೀರಿಕ ಶ್ರಮ, ದಣಿವು.

शरीरदंड (ಶರೀರದಂಡ) ಪು. ಸಂ. ಶಾರೀರಿಕ ಶಾಸನ, ಶಾರೀರಿಕ ಶಿಕ್ಷೆ.

शरीरप्रकृति (ಶರೀರಪ್ರಕೃತಿ) ಸ್ತ್ರೀ. ಶಾರೀರಿಕ ಆರೋಗ್ಯ.

शरीरभोग (ಶರೀರಭೋಗ) ಪು. ಶಾರೀರಿಕ ದುಃಖ, ಶರೀರವಿಲಾಸ.

शरीरसंपत्ति (ಶರೀರ ಸಂಪತ್ತಿ) ಸ್ತ್ರೀ. ದೇಹಸಂಪತ್ತಿ, ಆರೋಗ್ಯಭಾಗ್ಯ, ಶಾರೀರಿಕ ಸಾಮರ್ಥ್ಯ, ದೇಹದ ಕಸುವು.

शरीरसंबंध (ಶರೀರಸಂಬಂಧ) ಪು. ಸಂ. ಶರೀರ ಸಂಬಂಧ, ಆಪ್ತಸಂಬಂಧ, ನೆಂಟತನ, ವಿವಾಹ, ವೈವಾಹಿಕ ಸಂಬಂಧ.

शरीरी (ಶರೀರೀ) ವಿ. ಸಂ. ಶರೀರ ಪಡೆದ– ಯುವ, ಶರೀರಧಾರಕ.

शर्करा (ಶರ್ಕರಾ) ಸ್ತ್ರೀ. ಸಂ. ಸಕ್ಕರೆ, ಸಣ್ಣ ಕಲ್ಲುಗಳ ಮಿಶ್ರಣ, ಹರಳು, ಜಲ್ಲಿ.

शर्त (ಶರ್ತ) ಸ್ತ್ರೀ. ಅರ. ಜಿದ್ದು, ೨. ಷರತ್ತು.

शर्यत (ಶರ್ಯತ) ಸ್ತ್ರೀ. ಅರ. ಹೋರಾಟ, ಸ್ಪರ್ಧೆ.

शलक–ख (ಶಲಕ್–ಖ್) ಸ್ತ್ರೀ. ಗುಂಡಿನ ಸುರಿಮಳೆ, ಬಡಬಡನೆ ಸುರಿಯುವಿಕೆ.

शलगम (ಶಲಗಮ್) ಪು. ಫಾ. ಮುಲ್ಲಂಗಿಯಂಥ ಗಡ್ಡೆ, ಶಲಗಮ.

शलभ (ಶಲಭ) ಪು. ಸಂ. ಪತಂಗ, ಮಿಡಿತೆ,ಮಿಡಿಚೆ, ದೀಪದ ಮಕ್ಕು.

शलाका (ಶಲಾಕಾ) ಸ್ತ್ರೀ. ಸಂ. ಕಂಬಿ, ಸಲಾಕೆ, ಮೊನೆಯುಳ್ಳ ಕೋಲು.

शल्य (ಶಲ್ಯ) ನ. ಸಂ. ಮುಳ್ಳು, ಗೂಟ, ಚುಚ್ಚು ಮಾತು, ಶಸ್ತ್ರ.

शव (ಶವ) ನ. ಸಂ. ಮೃತದೇಹ, ೨. ಹೇಡಿಮನುಷ್ಯ.

शवयान (ಶವಯಾನ) ಪು. ಸ. ಸಿದಿಗೆ, ಶವದಾನಿ, ಹೆಣದ ಚಟ್ಟು.

शवच्छेदक (ಶವಚ್ಛೇದಕ) ಪು. ಸಂ. ಶವಚ್ಛೇದ, ಶವ ಪರೀಕ್ಷಕ, ಹೆಣ ಕೊಯ್ದು ಪರೀಕ್ಷಿಸುವವನು.

शवविच्छेदन (ಶವವಿಚ್ಛೇದನ) ನ. ಸಂ. ಹೆಣಕೊಯ್ಯುವಿಕೆ, 'ಪೋಸ್ಟ್ ಮಾರ್ಟೆಮ್', ಶವಪರೀಕ್ಷೆ.

शशधर, शशांक (ಶಶಧರ,ಶಶಾಂಕ), शशि (ಶಶೀ) ಪು.ಸಂ. ಚಂದ್ರ.

शष्प (ಶಷ್ಪ) ನ. ಸಂ. ಕೋಮಲ ಹುಲ್ಲು, ಎಳೆ ಹುಲ್ಲು. ೨. ಸ್ತ್ರೀ-ಪುರುಷ ಲಿಂಗದ ಮೇಲಿನ ಕೂದಲು.

शस्त्र (ಶಸ್ತ್ರ) ಶಸ್ತ್ರ, ಆಯುಧ, ಹತ್ಯಾರ.

शस्त्रकार (ಶಸ್ತ್ರಕಾರ) ಪು. ಶಸ್ತ್ರಕಾರ, ಆಯುಧ ಮಾಡುವವನು, ಆಯುಧಜ್ಞ.

शस्त्रपाणी (ಶಸ್ತ್ರಪಾಣೀ) ಕ್ರಿ. ಸ. ಕೈಯಲ್ಲಿ ಶಸ್ತ್ರ ಧರಿಸಿದ.

शस्त्रविद्या (ಶಸ್ತ್ರವಿದ್ಯಾ) ಸ್ತ್ರೀ. ಸಂ. ಶಸ್ತ್ರವಿದ್ಯೆ, ಆಯುಧವಿದ್ಯೆ, ಶಸ್ತ್ರಚಿಕಿತ್ಸೆ, ಶಸ್ತ್ರವೈದ್ಯವಿದ್ಯೆ.

शस्त्रवैद्य (ಶಸ್ತ್ರವೈದ್ಯ) ಪು. ಶಸ್ತ್ರವೈದ್ಯ, ಶಸ್ತ್ರವಿದ್ಯೆ ಬಲ್ಲವ, ಸರ್ಜನ್.

शस्त्रवैद्यक (ಶಸ್ತ್ರವೈದ್ಯಕ) ಪು. ಶಸ್ತ್ರವಿದ್ಯಾಶಾಸ್ತ್ರ ಸರ್ಜರಿ.

शस्त्रक्रिया (ಶಸ್ತ್ರಕ್ರಿಯಾ) ಸ್ತ್ರೀ. ಸಂ. ಶಸ್ತ್ರಕ್ರಿಯೆ, ಆಪರೇಶನ್.

शस्त्राभ्यास (ಶಸ್ತ್ರಾಭ್ಯಾಸ) ಸೈನಿಕನ ಶಸ್ತ್ರದ ಅಭ್ಯಾಸ, ಶಸ್ತ್ರಧಾರಿಯ ಅಭ್ಯಾಸ, ಶಸ್ತ್ರಾಭ್ಯಾಸ.

शह (ಶಹ) ಪು. ಫಾ. ಅಡ್ಡಿ, ಅಕಸ್ಮಾತ್ ಆತಂಕ, ನಿಗ್ರಹ, ಬಿಗಿಹಿಡಿಯುವಿಕೆ (ಚದುರಂಗ) ರಾಜನಿಗೆ 'ಚೆಕ್' ಮಾಡುವಿಕೆ.

शहर (ಶಹರ) ನ. ಅರ. ಪಟ್ಟಣ, ದೊಡ್ಡ ಊರು.

शहरगुंडा (ಶಹರಗುಂಡಾ) ಪು. ಸಂ. ಪಟ್ಟಣದ ಉಡಾಳ, ನಗರದ ಖಿಲಾಡಿ.

शहरवासी (ಶಹರವಾಸೀ) ವಿ. ಪಟ್ಟಣವಾಸಿ, ಪಟ್ಟಣದಲ್ಲಿರುವವ.

शहरी (ಶಹರೀ) ವಿ. ಅರ. ಪಟ್ಟಣಕ್ಕೆ ಸಂಬಂಧಿಸಿದ.

शहरा–हारा (ಶಹರಾ–ಹಾರಾ) ಪು. ರೋಮಾಂಚ, ಮೈಮೇಲಿನ ಮುಳ್ಳು.

शहा (ಶಹಾ) ಪು. ಫಾ. ಅರಸು, ರಾಜ, ಒಡೆಯ, ಯಜಮಾನ.

शहाजादा (ಶಹಾಜಾದಾ) ಪು. ಫಾ. ಯುವರಾಜ, ರಾಜಕುಮಾರ, ಅರಸನ ಮಗ.

**शहाजिरे** (ಶಹಾಜಿರೇ) ಪು. ಬಹು ವ. ಸಣ್ಣಜೀರಿಗೆ, ಶಾಜೀರಿಗೆ.

**शहाजोग** (ಶಹಾಜೋಗ್) ವಿ. ಸಂಭಾವಿತ, ಪ್ರಾಮಾಣಿಕ, ಪ್ರಶಂಸನೀಯ, ಸ್ತುತ್ಯ, ಉತ್ತಮ, ಘನ, ಲಾಭಕರ, ಹುಂಡಿಯ ಪ್ರಕಾರ. ೨. ಮೋಸದ, ಕೃತಕ.

**शहाणपण** (ಶಹಾಣಪಣ) ನ. ಜಾಣತನ, ಬುದ್ಧಿವಂತಿಕೆ.

**शहणा** (ಶಹಾಣಾ) ವಿ. ಜಾಣ, ಹುಷಾರ, ಬುದ್ಧಿವಂತ, ಚತುರ.

**शहणासुरता** (ಶಹಾಣಾಸುರತಾ) ವಿ. ತಿಳುವಳಿಕೆಯುಳ್ಳವ.

**शहाण्णव** (ಶಹಾಣ್ಣವ) ವಿ. ತೊಂಬತ್ತಾರು (೯೬).
**–कुळी** (ಕುಳೀ) ವಿ. ೯೬ ಒಕ್ಕಲಿನ ಉಚ್ಚ ಮರಾಠಾ ಜಾತಿಯ.

**शहातूत** (ಶಹತೂತ್) ಸ್ತ್ರೀ. ಫಾ. ಉಪ್ಪುನೇರಳೆ, ತುತ್ತಿಯ ಗಿಡ.

**शहात्तर** (ಶಹಾತ್ತರ) ವಿ. ಎಪ್ಪತ್ತಾರು.

**शहानिशा** (ಶಹಾನಿಶಾ) ಪು. ಅರ. (ಸಹೀನ ಸಹೀ) ಪೂರ್ಣಚೌಕಸಿ, ನಿಜ ಅಥವಾ ಸುಳ್ಳು ಇದರ ಪರೀಕ್ಷೆ.

**शहामृग** (ಶಹಾಮೃಗ) ಪು. ಒಂದು ಪಕ್ಷಿ, ಗ್ರೀಕರು ನಂಬಿದ್ದ ಒಂದು ಪೌರಾಣಿಕ ಪ್ರಾಣಿ, ಒಂದು ಜಾತಿಯ ನಂಬಲಾಗದ ಪಕ್ಷಿ, ಅತಿದೊಡ್ಡ ಪಕ್ಷಿ, ಕಲ್ಪಿತ ಪಕ್ಷಿ.

**शहांयशी–शायंशी** (ಶಹಾಂಯಶೀ–ಶಾಯಂಶೀ) ವಿ. ಎಂಬತ್ತಾರು (೮೬)

**शाहारा** (ಶಾಹಾರಾ) ಪು. ರೋಮಾಂಚ.

**शहाळें** (ಶಾಹಾಳೇ) ನ. ಎಳೆತೆಂಗು, ಎಳೆದೆಂಗು.

**शाइदी** (ಶಾಇದೀ) ಸ್ತ್ರೀ. ಅರ. ಸಾಕ್ಷಿ, ಪುರಾವೆ, ಸಾಕ್ಷಿದಾರ.

**शाइदीदार** (ಶಾಇದೀದಾರ್) ಪು. ಫಾ. ಸಾಕ್ಷಿಗ, ಪುರಾವೆಕೊಡುವವ.

**शाई** (ಶಾಈ) ಸ್ತ್ರೀ. ಫಾ. (ಸಿಯಾಹೀ) ಮಸಿ, ಶಾಯಿ, ಮಷಿ.

**शाक** (ಶಾಕ) ಸ್ತ್ರೀ. ಸಂ. } ಪಲ್ಲೆ, ಕಾಯಿ
**शाकभांजी** (ಶಾಕಭಾಜೀ) ಸ್ತ್ರೀ. } ಪಲ್ಲೆ.

**शाखपांला** (ಶಾಖಪಾಲಾ) ಪು. 'शाक' ನೋ.

**शाकारणी** (ಶಾಕಾರಣೀ) ಸ್ತ್ರೀ. ಹಂಚು ಹಾಕಿಸುವಿಕೆ.

**शाकारणे** (ಶಾಕಾರಣೇ) ಕ್ರಿ. ಸಂ. ಹಂಚು ಹಾಕಿಸು.

**शाकाहारी** (ಶಾಕಾಹಾರೀ) ಮಾಂಸ ತಿನ್ನದವನು, ಶಾಕಾಹಾರಿ, ಸಸ್ಯಾಹಾರಿ.

**शाखा** (ಶಾಖಾ) ಸ್ತ್ರೀ. ಸಂ. ಟೊಂಗೆ, ಭಾಗ, ಉಪಭಾಗ, ಅಂಗ, ಡಂಪಿ, ಕೊಂಬೆ, ಶಾಖೆ.

**शाखी** (ಶಾಖೀ) ವಿ. ಸಂ. ಟೊಂಗೆಯಿದ್ದ, ಭಾಗದ, ಉಪಭಾಗವಿದ್ದ.

**शागि –गीर्द** (ಶಾಗಿ(ಗೀ)ರ್ದ) ಪು. ವಿದ್ಯಾರ್ಥಿ, ಶಿಷ್ಯ. ೨ ಸೇವಕ, ಬ್ರಾಹ್ಮಣಜಾತಿಯ ಸೇವಕ–ಅಂತೇವಾಸಿ.

**शाटी** (ಶಾಟೀ) ಸ್ತ್ರೀ. ಬಟ್ಟೆ, ಹೊರುವಬಟ್ಟೆ, ಸನ್ಯಾಸಿಯಹೊದಿಕೆ, ಸಾಧುವಿನ ಉತ್ತರೀಯ, ಕೌಪೀನ.

**शाडू** (ಶಾಡೂ) ಸ್ತ್ರೀ. (ಅರಿಸಿಣ ಬಣ್ಣದ) ಮಣ್ಣು, ಕರಿಮಣ್ಣು.

**शाण्णव** (ಶಾಣ್ಣವ) ವಿ. ತೊಂಬತ್ತಾರು. (೯೬)
**–कुळी** (ಕುಳೀ) ವಿ. ಉಚ್ಚಕುಲದ (ಮರಾಠಾ).

**शांत** (ಶಾಂತ) ವಿ. ಸಂ. ಸಮಾಧಾನವಿದ್ದ, ಉಪಶಮವಾದ, ಮೆತ್ತಗಿನ, ಸಾಧುಸ್ವಭಾವದ, ಮೃದು, ಸೌಮ್ಯ, ಸದ್ದಿಲ್ಲದ.

**शांति** (ಶಾಂತಿ) ಸ್ತ್ರೀ. ಸಂ. ಶಾಂತಿ, ಸಮಾಧಾನ, ಸದ್ದಿಲ್ಲದಿರುವಿಕೆ, ದೋಷನಿವಾರಕ ಧಾರ್ಮಿಕವಿಧಿ, ಮೃತ್ಯು, ಸಾವು.

**शांतवन** (ಶಾಂತವನ) ನ. ಸ್ವಾಂತನ, ಶಾಂತಗೊಳಿಸುವಿಕೆ, ತೃಪ್ತಿಪಡಿಸುವಿಕೆ.

**शांतविणे** (ಶಾಂತವಿಣೇ) ಕ್ರಿ. ಅ. ಶಾಂತಗೊಳಿಸು, ತೃಪ್ತಿ ಪಡಿಸು, ದುಃಖನಿವಾರಿಸು, ಸಮಾಧಾನ ಹೇಳು, ರಮಿಸು.

**शांतिहोम** (ಶಾಂತಿಹೋಮ) ಪು. ಸಂ. ದೋಷ ನಿವಾರಕ–ವಿಧಿ, ಶಾಂತಿಹೋಮ, ಶಾಂತಿಗಾಗಿ ಕೊಟ್ಟ ಆಹುತಿ, ಶಾಂತಿಪ್ರೀತ್ಯರ್ಥಕ, ಅಗ್ನಿಬಲಿ.

**शान** (ಶಾನ್) ಸ್ತ್ರೀ. ಅರ. ತೇಜಸ್ವಿತೆ, ಮುಖಕಾಂತಿ, ಅಲಂಕಾರ, ಶೃಂಗಾರ.

**शानदार** (ಶಾನದಾರ್) ಸ್ತ್ರೀ. ಫಾ. ಸುಂದರವಾದ, "छानदार" ನೋ.

**शानदारी** (ಶಾನದಾರೀ) ಸ್ತ್ರೀ. ಫಾ. ಸೌಂದರ್ಯ. "छानदारी" ನೋ.

**शान(शो)क** (ಶಾನ(ಶೋ)ಕ) ವಿ. ಡೌಲು ಮಾಡುವವ.

**शान(शो)की** (ಶಾನ(ಶೋ)ಕೀ) ಸ್ತ್ರೀ. ಫಾ. ಡೌಲು.

**शाप** (ಶಾಪ) ಪು. ಸಂ. ಬೈಯ್ಯುವಿಕೆ, ಬೈಗಳು, ಶಾಪ, ಹಾವಳಿ, ಕೆಡಕು.

**शापग्रस्त** (ಶಾಪಗ್ರಸ್ತ) ವಿ. ಸಂ. ಶಾಪತಟ್ಟಿದ, ಶಾಪಿತ, ತಿರಸ್ಕೃತ, ಕೆಡಕಿನ, ಅಸಹ್ಯ.

**शापणे** (ಶಾಪಣೇ) ಕ್ರಿ. ಸಂ. ಬೈಯು, ಶಾಪಕೊಡು, ತಿರಸ್ಕರಿಸು, ಕೆಡಕುಮಾಡು, ಅಸಹ್ಯಪಡು, ಶಪಿಸು, ಹೇವರಿಸು.

**शापदग्ध** (ಶಾಪದಗ್ಧ) ವಿ. ಸಂ. ಶಾಪದಗ್ಧ, ಶಾಪದಿಂದ ಸುಡಲ್ಪಟ್ಟ, ಹೇವರಿಸಿದ, ಶಪಿಸಲ್ಪಟ್ಟ.

**शापबद्ध** (ಶಾಪಬದ್ಧ) ವಿ. ಸಂ. ಶಾಪದಿಂದ ಬಂಧಿತ, ಹೇವರಿಸಿದ, ಶಾಪಕ್ಕೊಳಗಾದ, ಶಪಿಸಲ್ಪಟ್ಟ.

**शापमुक्त** (ಶಾಪಮುಕ್ತ) ವಿ. ಸಂ. ಶಾಪದಿಂದ ಬಿಡುಗಡೆಯಾದ, ಶಾಪದಿಂದ ಮುಕ್ತನಾದ, ಹೇಯುಗಳೆದ.

**शापमोचन** (ಶಾಪಮೋಚನ) ನ. ಸಂ. ಶಾಪದಿಂದ ಮುಕ್ತ ಮಾಡುವಿಕೆ, ಹೇಯುಗಳೆಯುವಿಕೆ.

**शापित** (ಶಾಪಿತ) ವಿ. ಸಂ. "**शापबद्ध**" ನೋ.

**शांबर** (ಶಾಂಬರ) ನ. ಮಂತ್ರ, ಇಂದ್ರಜಾಲ, ಪಿಶಾಚಿವಿದ್ಯೆ, ಕಣ್ಣುಕಟ್ಟು.

**शांबरी** (ಶಾಂಬರೀ) ಸ್ತ್ರೀ. ಮಂತ್ರಗಾರತಿ, ಐಂದ್ರಜಾತಿ, ಯಕ್ಷಿಣಿ.

**शाबास** (ಶಾಬಾಸ್) ಉದ್ಗಾರ. ಫಾ. ಭಲೆ! ಬಹಾದ್ದೂರ! ವಾಹವಾ!

**शाबासकी** (ಶಾಬಾಸಕೀ) ಸ್ತ್ರೀ. ಫಾ. ಬಹಾದ್ದೂರಿಕೆ, ಹೊಗಳಿಕೆ, ಪ್ರಶಂಸೆ, ಸ್ತೋತ್ರ, ಸ್ತುತಿ, ಕೊಂಡಾಟ.

**शाबूत** (ಶಾಬೂತ್) ವಿ. ಅರ. (ಸಾಬಿತ್) ಗಟ್ಟಿ, ಜೀವಂತ, ಗಾಯವಾಗದಿದ್ದ, ನೋಯದಿದ್ದ, ಗಟ್ಟಿಗೊಂಡ, ನಿರ್ಧಾರಿತ, ಪರೀಕ್ಷಿತ, ಸಿದ್ಧಾಂತವಾದ, ನಿಜವೆಂದು ತೋರಿಸಿದ.

**शाब्द** (ಶಾಬ್ದ) ವಿ. ಸಂ. }
**शाब्दिक** (ಶಾಬ್ದಿಕ) } ಬಾಯಿಂದಾಡಿದ, ಬಾಯಿಮಾತಿನ, ನುಡಿಯ, ವಾಣಿಯ, ಕೇವಲ, ನಾಮಮಾತ್ರದ, ಹೆಸರಿಗೆ ಇರುವ.

**शामक** (ಶಾಮಕ್) ವಿ. ಸಂ. ಶಾಂತಮಾಡುವ, ತೃಪ್ತಿಗೊಳಿಸುವ.

**शामदान** (ಶಾಮದಾನ್) ನ. ಫಾ. ಸಮಯಿಪಾತ್ರೆ, ಮೇಣಬತ್ತಿಯ ಸ್ತಂಭ.

**शायदी** (ಶಾಯದೀ) ಸ್ತ್ರೀ. ಅರ. **शाहिदी** ನೋ.

**शायदीदार** (ಶಾಯದೀದಾರ್) ಪು. ಅರ. **शाइदीदार** ನೋ.

**शायी** (ಶಾಯೀ) ವಿ. ಸಂ. ಮಲಗುವವ. ೨. ಸ್ತ್ರೀ. ಫಾ. ಮಸಿ, ಮಷಿ.

**शांयशी** (ಶಾಂಯಶೀ) ವಿ. ಎಂಬತ್ತಾರು.

**शारदीय** (ಶಾರದೀಯ) ವಿ. ಸಂ. ನವರಾತ್ರಿ.

**शारदीय नवरात्र** (ಶಾರದೀಯ ನವರಾತ್ರ) ನವರಾತ್ರಿಯು

**शारीर** (ಶಾರೀರ) ವಿ. ಸಂ. }
**शारीरिक** (ಶಾರೀರಿಕ) ವಿ. ಸಂ. } ಶರೀರಸಂಬಂಧದ.

**शारीरशास्त्र** (ಶಾರೀರಶಾಸ್ತ್ರ) ಸ್ತ್ರೀ. ಸಂ. ಶರೀರಶಾಸ್ತ್ರ, ಅಂಗಶಾಸ್ತ್ರ, ಇಂದ್ರಿಯಶಾಸ್ತ್ರ, ವಿದ್ಯಾಶಾಸ್ತ್ರ.

**शार्दूल** (ಶಾರ್ದೂಲ) ಪು. ಸಂ. ಹುಲಿ.

**शाल** (ಶಾಲ) ಸ್ತ್ರೀ. ಫಾ. ಹೊರುವಶಾಲು.

**शालजोडी** (ಶಾಲಜೋಡಿ) ಸ್ತ್ರೀ. ಹೊರುವ ಶಾಲಿನ ಜೋಡು.

**शालक** (ಶಾಲಕ) ಪು. ಬೀಗ.

**शाला** (ಶಾಲಾ) ಸ್ತ್ರೀ. ಸಾಲೆ, ಅಂತಸ್ಥ, ಪಡಸಾಲೆ.

**–शालि** (–ಶಾಲಿ) ವಿ. ಪ್ರತ್ಯಯ. ಉಳ್ಳ.

**शालिग्राम** (ಶಾಲಿಗ್ರಾಮ) ವಿ. ಗಂಡಕಿ ನದಿಯ ಕರೇಕಲ್ಲು, ವಿಷ್ಣುವಿನ ಚಿನ್ಹ, ಶಾಲಿಗ್ರಾಮ.

**शालिवाहन** (ಶಾಲಿವಾಹನ) ಪು. ಅರಸನ ಹೆಸರು, ಶಕಕರ್ತ ಅರಸು.

**शालीवाहन** (ಶಾಲೀವಾಹನ) ನ. ಶಕದ ಹೆಸರು.

**–शाली** (–ಶಾಲೀ) ಪ್ರತ್ಯಯ. ಸಂ. ಉಳ್ಳವ. ೨.ವಿ. ಹೊಳೆಯುವ, ಮಿಂಚುವ, ಲಕಲಕಿಸುವ.

**शावक** (ಶಾವಕ) ಪು. ಸಂ. ಮರಿ, ಕುನ್ನಿ, ಕರು.

**शाश्वत** (ಶಾಶ್ವತ) ವಿ. ಸಂ. ಗಟ್ಟಿಯಾದ, ಅಬಾಧಿತ, ಬಾಳಿಕೆಗೆ ಬರುವ, ತಾಳಿಕೆಯ, ಚಿರಸ್ಥಾಯಿತ್ವ.

**शाश्वतिक** (ಶಾಶ್ವತಿಕ) ವಿ. ಸಂ. "**शाश्वत**" ನೋ. ತಾಳುವ, ಚಿರ.

**शाश्वती** (ಶಾಶ್ವತೀ) ಸ್ತ್ರೀ. ಸಂ. "**शाश्वत**" ನೋ. ಸ್ಥಿರತೆ, ದೃಢತೆ, ಸ್ಥೈರ್ಯ.

**शासणे** (ಶಾಸಣೇ) ಕ್ರಿ. ಸ. ಶಿಕ್ಷಿಸು, ದಂಡಿಸು, ಶಾಸನ ಮಾಡು, ಅಮಲು ನಡೆಯಿಸು, ತಾಡಿಸು.

**शासन** (ಶಾಸನ) ನ. ಸಂ. ಶಿಕ್ಷೆ, ದಂಡ, ಶಾಸನ ಮಾಡುವಿಕೆ, ಅಮಲು ನಡೆಯಿಸುವಿಕೆ. ೨. ಸರಕಾರ, ಗವರ್ನಮೆಂಟ್. ೩. ಶಿಲಾಲೇಖ.

**शासनशास्त्र** (ಶಾಸನಶಾಸ್ತ್ರ) ರಾಜ್ಯಶಾಸ್ತ್ರ, ರಾಜ್ಯಪದ್ಧತಿ ಶಾಸ್ತ್ರ.

**शासनीय** (ಶಾಸನೀಯ) ವಿ. ಸಂ. ದಂಡನೀಯ, ಶಿಕ್ಷಾರ್ಹ, ದಂಡನಾರ್ಹ.

**शासित** (ಶಾಸಿತ) ವಿ. ಸಂ. ಶಿಕ್ಷಿಸಲ್ಪಟ್ಟ, ದಂಡಿಸಲ್ಪಟ್ಟ, ಅಮಲು ನಡೆಯಿಸಿದ. ೨. ಆಳಲ್ಪಡುವ, ಆಡಳಿಕೆಯ.

**शास्ता** (ಶಾಸ್ತಾ) ಪು. ಸಂ. ದಂಡಮಾಡುವವ. ೨. ಅಧಿಕಾರ ನಡೆಯಿಸುವವ, ಅಮಲುದಾರ, ಅಧಿಕಾರಿ.

**शास्त्र** (ಶಾಸ್ತ್ರ) ನ. ಸಂ. ಶಾಸ್ತ್ರೀಯ ಗ್ರಂಥ, ಶಾಸ್ತ್ರ, ನಿಬಂಧ, ಪ್ರಬಂಧ.

**शास्त्रापुरता असणे** (ಶಾಸ್ತ್ರಾಪುರತಾ ಅಸಣೇ) ಕ್ರಿ. ಅ. ಹೆಸರಿಗೆ ಮಾತ್ರ ಇರು, ಹುರುಳಿಲ್ಲದಿರು.

**शास्त्रतः** (ಶಾಸ್ತ್ರತಃ) ಕ್ರಿ. ವಿ. ಶಾಸ್ತ್ರಾನುಸಾರವಾಗಿ, ಶಾಸ್ತ್ರಾರ್ಥಕ್ಕೆತಕ್ಕಂತೆ.

**शास्त्रदर्शी** (ಶಾಸ್ತ್ರದರ್ಶೀ) ಪು.
**शास्त्रवेत्ता** (ಶಾಸ್ತ್ರವೇತ್ತಾ) ಪು.
**शास्त्रसंपन्न** (ಶಾಸ್ತ್ರಸಂಪನ್ನ) ಪು.
**शस्त्रज्ञ** (ಶಾಸ್ತ್ರಜ್ಞ)
**शास्त्रपारंगत** (ಶಾಸ್ತ್ರಪಾರಂಗತ) ಪು.) } ಶಾಸ್ತ್ರ ಅಥವಾ ಕಾರ್ಯ್ದ ಬಲ್ಲವ, ನಿಪುಣ, ಶಾಸ್ತ್ರ ಪಾರಂಗತ.

**शास्त्रमर्यादा** (ಶಾಸ್ತ್ರಮರ್ಯಾದಾ) ಪು. ಶಾಸ್ತ್ರದ ತೋರಿದ ಸೀಮೆ, ಮರ್ಯಾದೆ, ಶಾಸ್ತ್ರದ ಎಲ್ಲೆ.

**शास्त्रव्युत्पत्ति** (ಶಾಸ್ತ್ರವ್ಯುತ್ಪತ್ತಿ) ಸಂ. ಶಾಸ್ತ್ರದ ವ್ಯುತ್ಪತ್ತಿ, ಶಾಸ್ತ್ರದ ಮೂಲ ಸಿದ್ಧಾಂತ.

**शास्त्रार्थ** (ಶಾಸ್ತ್ರಾರ್ಥ) ಪು. ಶಾಸ್ತ್ರದ ರಹಸ್ಯ, ಶಾಸ್ತ್ರಾರ್ಥ, ಶಾಸ್ತ್ರದ ಗುಟ್ಟು, ಶಾಸ್ತ್ರದ ಮರ್ಮ, ಶಾಸ್ತ್ರದ ತಿರುಳು, ಶಾಸ್ತ್ರತೋರಿದ ಮಾರ್ಗ, ಶಾಸ್ತ್ರ ಯೋಜಿತ ಸೀಮೆ.

**शास्त्रार्थ करणे** (ಶಾಸ್ತ್ರಾರ್ಥ ಕರಣೇ) ಕ್ರಿ. ಅ. ಶಾಸ್ತ್ರಕ್ಕಾಗಿ ಮಾಡು, ಹೆಸರಿಗೆ ಮಾತ್ರ ಮಾಡು.

**शास्त्रार्थास असणे** (ಶಾಸ್ತ್ರಾರ್ಥಾಸ ಅಸಣೇ) ನಿಯಮ ಮಾತ್ರಕ್ಕಿರು, ಹೆಸರಿಗೆ ಮಾತ್ರ ಇರು.

**शास्त्री** (ಶಾಸ್ತ್ರೀ) ಪು. ಸಂ. '**शास्त्रदर्शी**' ನೋ. ಬಲ್ಲವ, ಪಂಡಿತ.

**शास्त्रीय** (ಶಾಸ್ತ್ರೀಯ) ವಿ. ಸಂ. ಶಾಸ್ತ್ರಕ್ಕೆ ಸಂಬಂಧಿಸಿದ, ವಿಜ್ಞಾನಕ್ಕೆ ಸೇರಿದ, ಶಾಸ್ತ್ರದ.

**शाहिदी** (ಶಾಹಿದೀ) ವಿ. ಸಂ. ಸಾಕ್ಷಿ, ಪುರಾವೆ.

**शाहिदी–शाहिदीदा–शाहीद** (ಶಾಹಿದೀ–ಶಾಹಿದೀದಾ–ಶಾಹಿದ) ಸ್ತ್ರೀ. ಫಾ. ಸಾಕ್ಷಿದಾರ, ಪುರಾವೆಕೊಡುವವ.

**शाहीर** (ಶಾಹೀರ್) ಪು. ಸಂ. ಲಾವಣಿಗಾರ, ಕವಿ, ಕಬ್ಬಿಗ, ಕವನ ಕಟ್ಟುವವ.

**शाळा** (ಶಾಳಾ) ಸ್ತ್ರೀ. ಶಾಲೆ, ಸ್ಕೂಲ್.

**शाळासोबती** (ಶಾಳಾ ಸೋಬತೀ) ಪು. ಸಾಲೆಯ ಗೆಳೆಯ.

**शाळकरी** (ಶಾಳಕರೀ) ಪು. ಸಣ್ಣವಯಸ್ಸಿನ, ಸಾಲೆಗೆ ಹೋಗುವ ವಯಸ್ಸಿನವ, ಸಾಲೆಗೆ ಹೋಗುವವ.

**शाळू** (ಶಾಳೂ) ಪು. ಆರಳುಜೋಳ, ಜೋಳ, ಜೋಳದ ಪ್ರಕಾರ, ಎಳೆಜೋಳ, ಬಿಳೀಜೋಳ.

**शाळू दिवस** (ಶಾಳೂ ದಿವಸ) ಪು. ತುಸುಹೊತ್ತು ಕೆಲವು ದಿವಸ.

**शाळू सोबती** (ಶಾಳೂ ಸೋಬತೀ) ಪು. ಕೆಲದಿನದ ಗೆಳೆಯ, ಕೆಲಸದ ಪೂರ್ತಿ ಗೆಳೆಯ, ಸ್ವಲ್ಪದಿನ ಬಾಳುವ ವಸ್ತು.

**शाळूसोबत** (ಶಾಳೂ ಸೋಬತ) ಸ್ತ್ರೀ. ಕೆಲ ದಿನದ ಗೆಳೆತನ.

**शाळे** (ಶಾಳೇ) ನ. ಎಳೆತೆಂಗು, ನೀರ್ಗಾಯಿ.

**शाळोत्री** (ಶಾಳೋತ್ರೀ) ಪು. ಪಶುವೈದ್ಯ, ದನಗಳವೈದ್ಯ.

**शिऊळ** (ಶಿಊಳ್) ಸ್ತ್ರೀ. ಕ. ನೊಗಗುಣಿಕೆ, ಶಿಳ್ಳು.

**शिंक** (ಶಿಂಕ್) ಸ್ತ್ರೀ. ಸೀನು, ಸೀನುವಿಕೆ.

**शिक (कि) काई** (ಶಿಕ (ಕೀ) ಕಾಯೀ) ಸ್ತ್ರೀ. ಕ. ಸೀಗೆಕಾಯಿ.

**शिकणे** (ಶಿಕಣೇ) ಕ್ರಿ. ಸಂ. ಕಲಿ, ವಿದ್ಯಾಭ್ಯಾಸಮಾಡು.

**शिंकणे** (ಶಿಂಕಣೇ) ಕ್ರಿ. ಅ. ಸೀನು, ಸೀನುಬರು.

**शिंकरणे** (ಶಿಂಕರಣೇ) ಕ್ರಿ ಸ. ಮೂಗುಸೀಟು, ಸುಂಬಳತೆಗೆ.

**शिकंदर** (ಶಿಕಂದರ್) ಪು. ಫಾ. ಅಲೆಕ್ಸಾಂಡರ. ೨. ವಿ. ಶೂರ, ಬಲಶಾಲಿ.

**नशीब–** (ನಶೀಬ್–) ನ. ಸುದೈವ.

**शिकरा** (ಶಿಕರಾ) ಪು. ಗಿಡುಗ, ೨. ದುರಪಹಾರಿ.

**शिकल** (ಶಿಕಲ್) ಸ್ತ್ರಿ. ಅರ. ಗೌರವ, ಮರ್ಯಾದೆ, ೨. ಹೊಳಪು, ತೇಜಸ್ಸು.

**शिकल चढणे–उतरणे** (ಶಿಕಲ ಚಢಣೇ–ಉತರಣೇ) ಗೌರವ ಹೆಚ್ಚಾಗು, ಗೌರವ ಇಳಿ.

**शिकलगार** (ಶಿಕಲಗಾರ್) ಪು. ತು. ಚಿಕಲಗಾರ, ಆಯುಧಗಳನ್ನು ಹದ ಮಾಡುವವ, ಶಿಕಲಗಾರ.

**शिकवण** (ಶಿಕವಣ) ಸ್ತ್ರೀ. ಕಲಿಸುವಿಕೆ, ಪ್ರೇರಿಸುವಿಕೆ.

**शिकवणी** (ಶಿಕವಣೀ) ಸ್ತ್ರೀ. ಕಲಿಸುವಿಕೆ. ೨. ಟ್ಯೂಶನ್.

**शिकविणे** (ಶಿಕವಿಣೇ) ಕ್ರಿ. ಕಲಿಸು, ಬೋಧಿಸು, ಪ್ರೇರಿಸು.

**शिकस्त** (ಶಿಕಸ್ತ) ಸ್ತ್ರೀ. ಫಾ. ಪರಾಜಯ, ಸೋಲು, ದುರವಸ್ಥೆ, ಕೆಟ್ಟಗತಿ. ೨. ಮಹಾಪ್ರಯಾಸ.

**शिकस्त** (ಶಿಕಸ್ತ) ವಿ. ಪರಾಜಿತ, ಸೋತ, ದುರವಸ್ಥೆಗೀಡಾದ, ನಷ್ಟ, ತುಂಡಾದ.

**शिकस्त करणे** (ಶಿಕಸ್ತ ಕರಣೇ) ಕ್ರಿ. ವಿ. ಪರಾಜಯ ಗೊಳಿಸು, ೨. ಅತ್ಯಧಿಕಮಾಡು, ಕೊನೆಮುಟ್ಟು.

**शिकाऊ**(ಶಿಕಾಊ) ವಿ. ಕಲಿಯುವವ, ತರಬೇತಿಯಲ್ಲಿರುವ.

**शिकार** (ಶಿಕಾರ) ಸ್ತ್ರೀ. ಬೇಟೆ, ಶಿಕಾರಿ, ಆಟ.

**साधली तर शिकार नाही तर भिकार** (ಸಾಧಲೀ ತರ ಶಿಕಾರ ನಾಹೀ ತರ ಭಿಕಾರ) ಗಾದೆಯ ಮಾತು. ಸಿಕ್ಕರೆ ಶಿಕಾರಿ ಇಲ್ಲವೆ ಭಿಕಾರಿ. (ದೈವದ ವಶದಲ್ಲಿಯ ಸಂಗತಿ).

**शिकारखाना** (ಶಿಕಾರಖಾನಾ) ಪು. ಸಂ. ಮೃಗಾಲಯ, ಪಶು ಸಂಗ್ರಹಾಲಯ, ಕಾಡು ಮಿಕಗಳ ಮನೆ, ಕಾಡು ಮೃಗಗಳ ಸಂಗ್ರಹ.

**शिकारी** (ಶಿಕಾರೀ) ಪು. ಬೇಟೆಯಾಡುವವ, ಬೇಟೆಕಾರ, ೨. ವಿ. ಬೇಟೆಯ (ನಾಯಿ ಮುಂ.)

**शिंकारणी** (ಶಿಂಕಾರಣೀ) ಸ್ತ್ರೀ. ನೆಲವು.

**शिंकारणें** (ಶಿಂಕಾರಣೇ) ಕ್ರಿ. ನೆಲವಿನಲ್ಲಿಡು, ತೂಗು ಹಾಕು, ನೆಲುವು ಮಾಡು.

**शिंकाळी–शिकाळी** (ಶಿಂಕಾಳೀ–ಶಿಕಾಳೀ) ಸ್ತ್ರೀ. ನೆಲವು, ಕವಣೆ, ಕಲ್ಬೀಸಕ.

**शिकी** (ಶಿಕೀ) ಸ್ತ್ರೀ. ಸಮುದ್ರದ ಕಲ್ಲು ಬಂಡೆಯ ಸಾಲು, ಹಾಯಿಯ ಭಾಗ.

**शिंके–शिके** (ಶಿಂಕೇ–ಶಿಕೇ) ನ. ನೆಲವು.

**शिकेकाई** (ಶಿಕೇಕಾಯಿ) ಸ್ತ್ರೀ. ಕ. ಸೀಗೇಕಾಯಿ.

**शिक्का** (ಶಿಕ್ಕಾ) ಪು. ಫಾ. ಅಧಿಕಾರ, ಮುದ್ರೆ, ಅಧಿಕಾರ ಮುದ್ರೆ, ಅರಸನ ಮುದ್ರೆ, ಅಂಚೆಯ ಮುದ್ರೆ.

**शिक्कासही** (ಸಿಕ್ಕಾಸಹೀ) ಸ್ತ್ರೀ. ಮುದ್ರೆಯ ಹಸ್ತಾಕ್ಷರ, ಮುದ್ರೆ ಹಾಗೂ ಹಸ್ತಾಕ್ಷರ.

**शिक्केकटार** (ಸಿಕ್ಕೇಕಟಾರ) ಸ್ತ್ರೀ. ಅರಸು ಮುದ್ರೆ, ರಾಜ ಚಿಹ್ನ.

**शिक्केनीस** (ಶಿಕ್ಕೇನೀಸ್) ಪು. ರಾಜ ಮುದ್ರಾ ರಕ್ಷಕ, ರಾಜ ಮುದ್ರೆಯ ಕಾವಲುಗಾರ.

**शिक्केबरदार** (ಶಿಕ್ಕೇಬರದಾರ) ಪು. ರಾಜ ಚಿಹ್ನಾಧಿಕಾರಿ, ರಾಜ ಚಿಹ್ನ ರಕ್ಷಣಾಧಿಕಾರಿ.

**शिखंडी** (ಶಿಖಂಡೀ) ಪು. ಸಂ. ನಪುಂಸಕ, ಹೇಡಿ, ಕೈಲಾಗದವ.

**शिखर** (ಶಿಖರ) ನ. ಸಂ. ಕಳಸ, ತುದಿ, ತೆನೆ, ಪರ್ವತದ ತುದಿ, ಶಂಕ್ವಾಕೃತಿ ಗೋಪುರ, ಶೃಂಗ, ನಿಶ್ಚಿತ ಸಿದ್ಧಾಂತ, ಸಮಾಪ್ತಿ, ಕೊನೆ, ತುತ್ತತುದಿ, ಅಂತ್ಯ ನಿರ್ಣಯ.

**शिखा** (ಶಿಖಾ) ಸ್ತ್ರೀ. ಸಂ. ಜೆಂಡಿಕೆ, ಶಿಖಾ, ತುದಿ, ಶಿಖರ, ಬೆಂಕಿಯ ಜ್ವಾಲೆ.

**शिखी** (ಶಿಖೀ) ಪು. ಸಂ. ನವಿಲು, ಮಯೂರ, ಅಗ್ನಿ, ಹೆಣ್ಣು ನವಿಲು. ೨. ವಿ. ತುದಿಯಿದ್ದ, ಜೆಂಡಿಕೆಯಿದ್ದ.

**शिंग** (ಶಿಂಗ್) ನ. ಕೋಡು, ಕಹಳೆ, ಕೊಂಬು, ತುತೂರಿ.

**शिंगावर घेणे** (ಶಿಂಗಾವರ ಘೇಣೇ) ಕ್ರಿ. ಅ. ಗಂಡಸು ತನದಿಂದ ಎದುರಿಸು, ಕೆಚ್ಚಿನಿಂದ ಹೋರಾಡು.

**आलें अंगावर तर घेतलें शिंगावर** (ಆಲೇ ಅಂಗಾವರ ತರ ಘೇತಲೇ ಶಿಂಗಾವರ್) ಗಾದೆಯ ಮಾತು. ಏರಿ ಬಂದರೆ ಎಳೆದು ಕುಟ್ಟು.

**शिंगे मोडून वासरांत शिरणे** (ಶಿಂಗೇ ಮೋಡೂನ್ ವಾಸವಾಸರಾತ್ ಶಿರಣೇ) ಕ್ರಿ.ಅ. ಹಲ್ಲು ಮುರಕೊಂಡು ಹುಡುಗರಲ್ಲಿ ಸೇರು. (ಸಣ್ಣವನಂತೆ ನಟಿಸುವ ದೊಡ್ಡ ಮನುಷ್ಯ)

**शिंग फुंकणे** (ಶಿಂಗ್ ಫುಂಕಣೇ) ಕ್ರಿ. ಅ. ತುತೂರಿ ಊದು, ಕೊಂಬು ಊದು, ಕಾಳಗದ ಆಹ್ವಾನ ಕೊಡು.

**शिंगट** (ಶಿಂಗಟ್) ನ. ಸಣ್ಣ ತುತೂರಿ, ಕೊಂಬು, ಕೋಡು, ಕಹಳೆ. ೨. ಕುಡಿಯುವ ಪಾತ್ರೆ.

**शिंगटणे** (ಶಿಂಗಟಣೇ) ಕ್ರಿ. ಸ. ತುತೂರಿ ಊದು, ಕೋಡಿನಿಂದ ಬೀಸಾಡು, ಕೋಡಿನಿಂದ ತಿವಿ–ಚಿಮ್ಮು, ಕೋಡಿನಿಂದ ಎಸೆ.

**शिंगडी –डें** (ಶಿಂಗಡೀ –ಡೇ) ಸ್ತ್ರೀ. –ನ. ಹಣ್ಣಿನ ತಿಳಲು, ಕಾಯಿ ಬೀಜಕೋಶ, ತರಕಾರಿ, ಕಾಯಿಪಲ್ಲೆ.

**शिगडी** (ಶಿಗಡೀ) ಸ್ತ್ರೀ., **शिगा** (ಶಿಗಾ) ಪು. ಪಾಮ ಗಿಡದ ಟೊಂಗೆ, ಕೊಂಬೆ, ತಾಳೆ ಜಾತಿಯ ಮರದ ಟೊಂಗೆಯ ತುದಿ.

**शिंगरू** (ಶಿಂಗರೂ) ನ. ಸಣ್ಣ ಕುದುರೆ, ಕುದುರೆಯ ಮರಿ, ದಡ್ಡಯುವಕ, ಹೊಸಬ, ಕಡಿಯುವವ. ೨. ಹೇಸರಗತ್ತೆ.

**शिंगा** (ಶಿಂಗಾ) ಪು. ಕುದುರೆ ಮರಿ, ಎಳೆಗುದುರೆ. ೨. ಕತ್ತೆಯಮರಿ.

**शिंगाटणे** (ಶಿಂಗಾಟಣೇ) ಕ್ರಿ.ಅ. ಬಹಳವಾಗಿ ಬೈಯ್ಯು, ಪೂರ್ತಿ ಬೈಯ್ಯು. **शिंग्रटणे** ನೋ.

**शिंगाडा** (ಶಿಂಗಾಡಾ) ಪು. ಒಂದು ಜಾತಿಯ ಗಿಡ, ಆ ಗಿಡದ ಫಲ.

**शिंगाडचा** (ಶಿಂಗಾಡ್ಯಾ) ಪು. ತುತೂರಿ ಬಾರಿಸುವವ, ಕಹಳೆಗಾರ, ಕೊಂಬಿನವ.

**शिगाळ** (ಶಿಂಗಾಳ್) ವಿ. ಉದ್ದ ಕೊಂಬಿನ, ಉದ್ದ ಕೋಡಿನ (ಪಶು).

**शिगाळ्** (ಶಿಂಗಾಳೂ) ವಿ. ಮೊಳಕೆಯೊಡೆದ, ಅಂಕುರಿಸಿದ, ಹಾಸ್ಯಕ್ಕೆ ಗುರಿಯಾದ.

**शिंगी** (ಶಿಂಗೀ) ಸ್ತ್ರೀ. ಕುದುರೆ ಮರಿ, ಕತ್ತೆಯಮರಿ, ಹೆಣ್ಣುಕುದುರೆ, ಚುರುಕು ಹುಡುಗಿ, ಚಪಲಬಾಲೆ, ತಿಳಿಗೇಡಿ ಹುಡುಗಿ.

**शिजणे** (ಶಿಜಣೇ) ಕ್ರಿ.ಅ. ಕುದಿ,ಬೇಯು,ತಳಮಳಿಸು, ಮತ್ಸರಪಡು, ಪ್ರಕ್ಷೋಭಿಸು, ವಿಚಾರಮಗ್ನನಾಗು, ಸೆಕೆಯಾಗು.

**शिजविणे** (ಶಿಜವಿಣೇ) ಕ್ರಿ. ಸ. ಕುದಿಸು, ಬೇಯಿಸು.

**शिंजाळ्** (ಶಿಂಜಾಳೂ) ವಿ. ಕುದಿಯುವ, ಬೇಯುವ, ಬೇಗ ಕುದಿಯುವ, ಪ್ರಕ್ಷೋಭಿಸುವ.

**शिंट** (ಶಿಂಟ್) ಸ್ತ್ರೀ. ಮಳೆ ಹನಿ.

**शिंट उडणे –उडवणे** (ಶಿಂಟ ಉಡಣೇ –ಉಡವಣೇ) ಕ್ರಿ. ಅ. ಪ್ರೋಕ್ಷಣ ಮಾಡು, ಸಿಂಪಡಿಸು, ಚಿಮುಕಿಸು, ಸೇಚಿಸು.

**शिटणे** (ಶಿಟಣೇ) ಕ್ರಿ. ಸ. ಮಲಹಾಕು, ಸಗಣಿ ಹಾಕು.

**शिटवा** (ಶಿಟವಾ) ಪು. ಪಕ್ಷಿಗಳ ಮಲ, ಪಕ್ಷಿಯ ಪುರೀಷ, ಪಕ್ಷಿಯ ಶೌಚ.

**शिटाऊ** (ಶಿಟಾಊ) ವಿ. ನೀಚ, ಮಾನಗೇಡಿ.

**शिटावणे** (ಶಿಟಾವಣೇ) ಕ್ರಿ. ಅ. ಚೇಷ್ಟೆಮಾಡು, ಸಿಟ್ಟೆಗೇಳು, ರೇಗಿಗೇಳು, ಕ್ರೋಧಿಸು, ಸೆಟೆ.

**शिटी** (ಶಿಟೀ) ಸ್ತ್ರೀ. ಸೀಟಿ.

**शिडकणे, शिडकावणे** (ಶಿಡಕಣೇ, ಶಿಡಕಾವಣೇ) ಕ್ರಿ. ಅ. ಸಿಂಪಡಿಸು, ಚಿಮುಕಿಸು, ಸೇಚಿಸು.

**शिडकाव** (ಶಿಡಕಾವ್) ಪು. ಸಿಂಪಡಿಸುವಿಕೆ, ಚಿಮುಕಿಸುವಿಕೆ, ಸೇಚಿಸುವಿಕೆ.

**शिडशिड** (ಶಿಡಶಿಡ್) ಕ್ರಿ. ವಿ. ಸಿಟಿ ಸಿಟಿ, ಜಿಟಜಿಟ, ಸಿಡಿಮಿಡಿಗೊಂಡು, ತುಚ್ಛತೆಯಿಂದ.

**शिडशिड करणे** (ಶಿಡ್‌ಶಿಡ್ ಕರಣೇ) ಕ್ರಿ. ಅ. ಸಿಡಿಮಿಡಿಗೊಳ್ಳು, ತುಚ್ಛಮಾಡು, ತಿರಸ್ಕರಿಸು, ಹೀನ ಮಾಡು.

**शिडशिडणे** (ಶಿಡಶಿಡಣೇ) ಕ್ರಿ. ಅ. ಜುಬ್ಬರ ಮಳೆಯಾಗು, ಜಿಟಜಿಟ ಮಳೆಯಾಗು, ಬಡಬಡಿಸು.

**शिडशिडी** (ಶಿಡಶಿಡೀ) ಸ್ತ್ರೀ. ಜಿಟಜಿಟ ಮಳೆ ಸೋರುವಿಕೆ, ತುಂತುರಹನಿಯಾಗುವಿಕೆ.

**शिडशिडीत** (ಶಿಡಶಿಡೀತ್) ವಿ. ತೆರಪಿರುವ, ಬಯಲಾಗಿರುವ,ಹೆಚ್ಚು ಉಳಿದ, ಕೃಶ, ಬತ್ತಿದ,ಕ್ಷೀಣವಾದ, ತಿಳುವಾದ, ಒಣಗಿದ, ಗಟ್ಟಿ, ಬೇರೆಬೇರೆಯಾದ.

**शिडाईत** (ಶಿಡಾಈತ್) ನ. ಅಂಟಿಸುವಿಕೆ, ಹೊಂದಿಸುವಿಕೆ, ಜೋಡಿಸುವಿಕೆ, ಕಸಿಮಾಡುವಿಕೆ, ಚಿಗುರು, ಮೊಳಕೆ, ಪಲ್ಲವ, ವಂಶಜ, ವಂಶಾಂಕುರ.

**शिडी–ढी** (ಶಿಡೀ–ಢೀ) ಸ್ತ್ರೀ. ನಿಚ್ಚಣಿಕೆ, ಏಣಿ, ಸೋಪಾನ, ಹಂತ, ಪಾವಟಿಗೆ.

**शिणक, शिणीक** (ಶಿಣಕ, ಶಿಣೀಕ್) ಸ್ತ್ರೀ. ಕಳೆಬರುವಿಕೆ, ವೇದನೆಯಾಗುವಿಕೆ, ತೀವ್ರ ವೇದನೆ.

**शिणकणे** (ಶಿಣಕಣೇ) ಕ್ರಿ. ಅ. ಕಳೆಬರು, ತೀವ್ರ ವೇದನೆಯಾಗು.

**शिणणे** (ಶಿಣಣೇ) ಕ್ರಿ. ಅ. ದಣಿವಾಗು, ದಣುವಾಗು, ಮಾಂದ್ಯಬರು, ದುರ್ಬಲನಾಗು, ನಿರುತ್ಸಾಹಿಯಾಗು, ಸೋತುಹೋಗು.

**शिणशिणणे** (ಶಿಣಶಿಣಣೇ) ಕ್ರಿ. ಸ. ಹಲ್ಲು ತಿನ್ನು, ಹಲ್ಲು ಕಚ್ಚು, ಹಲ್ಲು ಕಡಿ.

**शितडण** (ಶಿಂತಡಣೇ) ಕ್ರಿ. ಅ. ಹನಿಹನಿಸೋರು, ಸಿಂಚಿಸು, ಸೇಚಿಸು.

**शितडा** (ಶಿಂತಡಾ) ಪು. ಹನಿಹನಿ ಸೋರುವಿಕೆ, ಚಿಮ್ಮುವಿಕೆ, ಸಿಂಪಡಿಸುವಿಕೆ, ಸೇಚಿಸುವಿಕೆ.

**शितडी** (ಶಿತಡೀ) ಸ್ತ್ರೀ. ಮುದ್ದಿಗಟ್ಟಿದ ಪದಾರ್ಥ, ಹೆಪ್ಪು, ಗರಣೆ.

**शितळ** (ಶಿತಳ್) ವಿ. ತಂಪು, ಸೌಮ್ಯ, ಶಾಂತ, ಹಗುರು.

**शितळचिनी** (ಶಿತಳ್‌ಚಿನೀ) ಸ್ತ್ರೀ. ಒಂದು ಬಗೆಯ ಸುವಾಸನೆಯ ಸಸ್ಯ, ಗಂಧ ಮೆಣಸು, ನಾರುಬೇರು, ಚಿನ್ನಿಬೇರು.

**शितळाई** (ಶಿತಳಾಈ) ಸ್ತ್ರೀ. ತಂಪುತನ, ಸೌಮ್ಯತನ, ಶಾಂತತೆ, ಹಗುರುತನ.

**शिताब** (ಶಿತಾಬ್) ವಿ. ಫಾ. ಚುರುಕಾದ, ಉದ್ಯೋಗಶೀಲ, ಉತ್ಸಾಹಿ, ಉತ್ಸುಕ, ಸುಡುವ.

**शिताबी** (ಶಿತಾಬೀ) ಸ್ತ್ರೀ. ಫಾ. ಚುರುಕಾಗುವಿಕೆ, ಉದ್ಯೋಗಶೀಲತೆ, ಉತ್ಸಾಹ, ಉತ್ಸುಕತೆ, ಉತ್ಕಂಠತೆ, ಆತುರತೆ, ಉಗ್ರತೆ, ಸುಡುವಿಕೆ, ಉತ್ಕಟತೆ.

**शिंतोडा** (ಶಿಂತೋಡಾ) ಪು. ಮಳೆಹನಿ, ಜಿರಿಜಿರಿಹನಿ, ಚಿಮ್ಮುವಿಕೆ, ಸೇಚಿಸುವಿಕೆ. ೨. ಅಪಶಬ್ದ.

**शिंतोडणे** (ಶಿಂತೋಡಣೇ) ಕ್ರಿ. ಸ. ಸಿಂಪಡಿಸು, ಚಿಮುಕಿಸು, ಗೊಜ್ಜು, ಹನಿಮಳೆ ಸುರಿ, ಹನುಕು, ಹನಿಯಾಗು.

**शिथिल** (ಸಿಥಿಲ್) ವಿ. ಸಂ. ಸಡಿಲು, ಪೊಳ್ಳು, ಅಸ್ಪಷ್ಟ, ಸೈಲು, ಮೆತ್ತಗಾದ, ಅಲಕ್ಷ್ಯದ, ಜೋರಿಲ್ಲದ, ಬೇಸರಿಕೆಯ, ದುರ್ಬಲ, ಬಳಲಿದ, ಬೆಂಡಾದ, ಮಂದಮಸಕಾದ, ಮಂದಬುದ್ಧಿಯ, ನಿಸ್ತೇಜ.

**शिंद** (ಶಿಂದ್) ಸ್ತ್ರೀ. ಸಿಂದಿಯ ಗಿಡ.

**शिंदळ** (ಶಿಂದಳ್) ಸ್ತ್ರೀ. ಪೂಂಶ್ಚಲಿ, ಹಾದರಗಿತ್ತಿ, ಗಣಿಕೆ.

**शिंदळकी** (ಶಿಂದಳಕೀ) ಸ್ತ್ರೀ. ಸೂಳೆತನ, ವ್ಯಭಿಚಾರ, ಕಾಮುಕತೆ, ಅಶುದ್ಧತೆ, ಹಾದರ, ಹಾದರಗಿತ್ತಿತನ, ಗಣಿಕೆತನ.

**शिंदळचार** (ಶಿಂದಳಚಾರ)
**शिंदळचाळा** (ಶಿಂದಳಚಾಳಾ) ಪು.
**शिंदळदेव** (ಶಿಂದಳದೇವ)
} ಸೂಳೆಯ ನಡತೆ, ವ್ಯಭಿಚಾರ, ಕಾಮುಕತನ, ಗಣಿಕೆಯ ವ್ಯವಹಾರ.

**शिंदळवडा–वाडा** (ಶಿಂದಳವಡಾ–ವಾಡಾ) ಪು. ಹಾದರದ ಮನೆ, ಹಾದರಗಿತ್ತಿಯ ಅಡ್ಡೆ, ಹಾದರದ ವಾಡೆ.

**शिंदी** (ಶಿಂದೀ) ಸ್ತ್ರೀ. ಸಿಂದಿ ಗಿಡ, ಅಡವಿಯಲ್ಲಿ ಬೆಳೆದ ಸಿಂದಿಗಿಡ, ಖರ್ಜೂರಗಿಡದ ರಸ.

**शिदो(धो)री** (ಶಿದೋ(ಧೋ)ರೀ) ಸ್ತ್ರೀ. ಸೀದಾ, ಕಟ್ಟಿದ ಬುತ್ತಿ, ಬುತ್ತಿಗಂಟು, ಆಹಾರಸಾಮಗ್ರಿ, ಕೂಳು, ಅನ್ನಪಾನ, ಆಹಾರ.

**शिदी–द्दी** (ಶಿದೀ–ದ್ದೀ) ಪು. ಅರ. ಸಿದ್ದಿಯವ, ಅಬಿಸೀನಿಯಾದ ಮನುಷ್ಯ, ನೀಗ್ರೊ.

**शिधा** (ಶಿಧಾ) ಪು. ಅನ್ನಸಾಮಗ್ರಿ, ಅಡಿಗೆಯ ಸಾಮಾನು. ಇ. ರೇಷನ್.

**शिधापाणी** (ಶಿಧಾಪಾಣೀ) ಸ್ತ್ರೀ.
**शिधासामान** (ಶಿಧಾಸಾಮಾನ) ನ.
**शिधासामग्री** (ಶಿಧಾಸಾಮಗ್ರೀ) ಸ್ತ್ರೀ.
( **शिधा** ನೋ.

**शिनळ** (ಶಿನಳ್) ವಿ. "**शिंदळ**" ನೋ.

**शिनळकी** (ಶಿನಳಕೀ) ಸ್ತ್ರೀ. "**शिंदळकी**" ನೋ.

**शिनळचार–चाळे** (ಶಿನಳಚಾರ ಚಾಳೇ) ಪು. ನ. "**शिंदळचार**" ನೋ.

**शिना** (ಶಿನಾ) ಕ್ರಿ. ವಿ. ಪ್ರತ್ಯೇಕ, ಬೇರೆ.

**शिपका** (ಶಿಪಕಾ) ಪು. ನೀರುಗೊಜ್ಜುವಿಕೆ, ನೀರು ಚಿಮ್ಮಿಸುವಿಕೆ.

**शिंप** (ಶಿಂಪ್) ಸ್ತ್ರೀ. ಸಿಂಪು, ಸೀಪು, ಅರ್ಧಸಿಂಪು.

**शिंपट–टी** (ಶಿಂಪಟ–ಟೀ) ಸ್ತ್ರೀ.
**शिंपटे** (ಶಿಂಪಟೇ) ನ.
{ ಅಡಕೆಯ ದೇಟು, ಅಡಕೆಯ ತುಂಬು

**शिपटणें** (ಶಿಪಟಣೇ) ಕ್ರಿ. ಸ. ಸಿಂಪಡಿಸು, ಗೊಜ್ಜು.

**शिपटी** (ಶಿಪಟೀ) ಸ್ತ್ರೀ. ಅಡಿಕೆಯ ಗೊಂಚಲು, ಸಣ್ಣ ಕೊಂಬೆ, ಗೆಲ್ಲು ಕಡ್ಡಿ, ತಿಳುವಾದ ಕೋಲು, ಬೆತ್ತ.

**शिंपडणे** (ಶಿಂಪಡಣೇ) ಕ್ರಿ. ಸ. ಸಿಂಪಡಿಸು, ಚಿಮ್ಮು, ಸೇಚಿಸು, ಸಿಂಚಿಸು.

**शिंपण–णी** (ಶಿಂಪಣ–ಣೀ) ಸ್ತ್ರೀ. ಸಿಂಪಡಿಸುವಿಕೆ, ಚಿಮ್ಮುಸುವಿಕೆ, ಚಿಮ್ಮಿಸುವಿಕೆ.

**शिंपणे** (ಶಿಂಪಣೇ) ಕ್ರಿ. ಸ. "**शिंपडणे**" ನೋ.

**शिंपला–शिपला** (ಶಿಂಪಲಾ–ಶಿಪಲಾ) ಪು. ದೊಡ್ಡ ಸಿಂಪು, ಚಿಪ್ಪು, ಕರಟ, ಸಿಪ್ಪೆ, ಹಕ್ಕಳೆ, ತಪ್ಪಟೆ, ತೋಪಿನ ಗುಂಡು.

**शिंपली,–शिपली** (ಶಿಂಪಲೀ,–ಶಿಪಲೀ) ಸ್ತ್ರೀ. ಸಣ್ಣ ಸಿಂಪು, ಸಣ್ಣ ಚಿಪ್ಪು, ಸಣ್ಣ ಸಿಪ್ಪೆ, ಸಣ್ಣ ತೋಪಿನ ಗುಂಡು.

**शिंपा** (ಶಿಂಪಾ) ಸ್ತ್ರೀ. ತೆಂಗಿನ ಜುಬ್ಬರ, ತೆಂಗಿನ ಕವಚ.

**शिपाई** (ಶಿಪಾಈ) ಪು. ಫಾ. ಸಿಪಾಯಿ, ಸೈನಿಕ, ಕಾಲಾಳು. ಇ. ಭಟ, ಸೇವಕ, ಆಳು, ಜವಾನ.

**शिपाईगिरी** (ಶಿಪಾಈಗಿರೀ) ಸ್ತ್ರೀ. ಸಂ. ಸಿಪಾಯಿ ಕೆಲಸ, ಸೈನಿಕನ ಕೆಲಸ, ಜವಾನನ ಕಾರ್ಯ.

**शिपाईप्यादा** (ಶಿಪಾಈಪ್ಯಾದಾ) ಪು. ಫಾ. ಕಾಲಾಳು.

**शिपाईबाणा** (ಶಿಪಾಈಬಾಣಾ) ಪು. ಸೈನಿಕರ ಶೌರ್ಯ. "**शिपाईगिरी**" ನೋ. ಸೈನಿಕನ ತೇಜ, ಸಿಪಾಯಿಯ ಕೆಚ್ಚು.

**शिंपी** (ಶಿಂಪೀ) ಸ್ತ್ರೀ. ಸಿಂಪಿಗ. **शिंपली** ನೋಡಿರಿ.

**शिफारशी हुंडी** (ಶಿಫಾರಶೀ ಹುಂಡೀ) ಸ್ತ್ರೀ. ಫಾ. ಹುಂಡಿ ಅಡತಿ, ಹುಂಡಿ ಉದ್ಯೋಗ.

**शिफारस** (ಶಿಫಾರಸ್) ಸ್ತ್ರೀ. ಶಿಫಾರಸು, ಯೋಗ್ಯತಾ ಪತ್ರ, ಆಶ್ರಯ, ಆಧಾರ, ಪಾಲನೆ.

**शिबंदी** (ಶಿಬಂದೀ) ಸ್ತ್ರೀ. ಫಾ. ಪರಿವಾರ, ಸೇವಕರ ಸಮೂಹ, ರಕ್ಷಕದಲ, ಅನಿಯಮಿತ ಶಿಫಾಯಿದಲ, ಶಿಬ್ಬಂದಿ.

**शिबिका** (ಶಿಬಿಕಾ) ಸ್ತ್ರೀ. ಸಂ. ಪಲ್ಲಕ್ಕಿ, ತೆರೆದ ಪಲ್ಲಕ್ಕಿ.

**शिबिर** (ಶಿಬಿರ) ನ. ಸಂ. ಬೀಡು, ವಸತಿ, ಶಿಬಿರ, ಡೇರೆ

**शिबे** (ಶಿಬೇ) ನ. ಸಣ್ಣ ಹಡಗ, ಚಿಬ್ಬು (ಚರ್ಮ ರೋಗ.)

**शिमगा** (ಶಿಮಗಾ) ಪು. ಹೋಳಿಯ ಹುಣ್ಣಿವೆ, ಗೊಂದಲ, ಅವ್ಯವಸ್ಥೆ, ಹೋಳಿಯ ಹಬ್ಬ, ಫಾಲ್ಗುಣಶುದ್ಧ, ಕ್ರಮ ಭಂಗ, ಪೌರ್ಣಿಮೆಯ ಹಬ್ಬ, ಬೊಬ್ಬೆ ಕುಟ್ಟುವಿಕೆ, ಅಪಜಯ, ಹೇಸಿ ನಡತೆ, ನಾಶ, ಸರ್ವನಾಶ.

**शिमगा करणे** (ಶಿಮಗಾ ಕರಣೇ) ಕ್ರಿ. ಸಂ. ಹೋಳಿಯ ಹಬ್ಬ ಪಾಲಿಸು, ಬೊಬ್ಬೆಹೊಡೆ, ನಾಶಮಾಡು.

**शिमटी** (ಶಿಮಟೀ) ಸ್ತ್ರೀ. ತೆಳ್ಳಗಿನ ಕೋಲು, ಸಣ್ಣ ಕೋಲು, ವಿದ್ಯುತ್ ಗುಂಡಿ, ವಿದ್ಯುತ್ಪ್ರವಾಹವನ್ನು ತಡೆಯುವ ಇಲ್ಲವೆ ಪ್ರಾರಂಭಿಸುವ ಗುಂಡಿ, ಸಣ್ಣ ಕೊಂಬೆ, ಗೆಲ್ಲು ಕಡ್ಡಿ.

**शिमा** (ಶಿಮಾ) ಸ್ತ್ರೀ. ಸೀಮೆ, ಮರ್ಯಾದೆ, ಕಡೆಯ ಹದ್ದು, ಎಲ್ಲೆ.

**शिर** (ಶಿರ) ನ. ಸಂ. ತಲೆ, ತುದಿ, ಶಿಖರ, ಸೈನ್ಯದ ವಾಹನ.

**शिर सुरी तुझ्या हाती** (ಶಿರ ಸುರೀ ತುಜ್ಯಾ ಹಾತೀ) (ಗಾದೆಯ ಮಾತು) ಕುಡಲಗೋಲು ಕುಂಬಳ ಕಾಯಿ ನಿನ್ನ ಕೈಯಲ್ಲಿ, ಬೇಕಾದರೆ ನನ್ನನ್ನು ಕೊಲ್ಲು.

**शिर हातावर घेणे** (ಶಿರ ಹಾತಾವರ ಘೇಣೇ) ಕ್ರಿ. ಸಂ. (ಗಾದೆ) ತಲೆ ಅಂಗೈಯಲ್ಲಿ ತಕ್ಕೊಳ್ಳು, ಸಾಹಸ ಮಾಡು, ಮರಣಕ್ಕೆ ಸಿದ್ಧನಾಗು.

**शिरी असणे** (ಶಿರೀ ಅಸಣೇ) ಕ್ರಿ. ಅ. ತುದಿಯಲ್ಲಿರು, ಉಚ್ಚ ಸ್ಥಾನಕ್ಕೇರು, ಕೊನೆಮುಟ್ಟು.

**शिरकमल** (ಶಿರಕಮಲ) ನ. ಸಂ. ಶಿರಕಮಲ, (ಕಾವ್ಯದಲ್ಲಿ ಶಿರಕ್ಕೆ ಕೊಟ್ಟ ಉಪಮೆ) ತಲೆದಾವರೆ.

**शिरकणे** (ಶಿರಕಣೇ) ಕ್ರಿ. ಅ. ಸಿಕ್ಕು ಬೀಳು, ಸಿಗಬೀಳು, ತೂರಿ ಒಳಹೊಗು, ನಾಟು, ಒಳಸೇರು, ಪ್ರವೇಶಿಸು, ಸೇರಿಸು, ಒಳಗೆ ತುರುಕು.

**शिरकवणी** (ಶಿರಕವಣೀ) ಸ್ತ್ರೀ. } ಸಿಕ್ಕು ಬೀಳು
**शिरकविणे** (ಶಿರಕವಿಣೇ) ಕ್ರಿ. ಸಂ. } ವಿಕೆ, ಒಳಹೋಗುವಿಕೆ, ನಾಟುವಿಕೆ, ಪ್ರವೇಶಿಸುವಿಕೆ, ಚುಚ್ಚುವಿಕೆ, ಒಳಗೆ ತುರುಕುವಿಕೆ.

**शिरका** (ಶಿರಕಾ) ಪು. ಫಾ. ಹುಳಿರಸ.

**शिरकावणी** (ಶಿರಕಾವಣೀ) ಸ್ತ್ರೀ. ಪ್ರವೇಶ.

**शिरकावणे** (ಶಿರಕಾವಣೇ) ಕ್ರಿ. ಸ. ಒಳಸೇರಿಸು, ನಾಟಿಸು, ತೂರಿ ಒಳಸೇರಿಸು, ಪ್ರವೇಶಿಸು.

**शिरकी** (ಶಿರಕೀ) **सरकी** ನೋ.

**शिरकुटी** (ಶಿರಕುಟೀ) ಸ್ತ್ರೀ. **शिमटी** ನೋ.

**शिरगीर** (ಶಿರಗೀರ್) ಸ್ತ್ರೀ. ಫಾ. ಹುಂಜದ ತುರಾಯಿ, ತುರಾಯಿ.

**शिरच्छेद** (ಶಿರಚ್ಛೇದ) ಪು. ಸಂ. ತಲೆ ಹೊಡೆಯುವಿಕೆ, ಕೊಲ್ಲುವಿಕೆ, ಶಿರಚ್ಛೇದ, ರುಂಡ ಕೊಯ್ಯುವಿಕೆ.

**शिरजोर** (ಶಿರಜೋರ್) ವಿ. ಫಾ. ತಲೆ ಭಾರದ, ತಲೆ ಒಜ್ಜೆಯ, ಬೇಸರವಾದ, ತಲೆಬಿರುಸ. ೨. ಹಟಮಾರಿ, ಕಲಹದ, ಗದ್ದಲದ, ಅವಿಚಾರದ, ಅಜಾಗರೂಕ, ಗೊಂದಲದ.

**शिरजोरी** (ಶಿರಜೋರೀ) ಸ್ತ್ರೀ. ಫಾ. ತಲೆಭಾರ ಆಗುವಿಕೆ, ಬೇಸರವಾಗುವಿಕೆ, ಹಟಮಾರಿತನ, ಉದ್ಧಟತನ.

**शिरटी** (ಶಿರಟೀ) ಸ್ತ್ರೀ. **शिमटी** ನೋ.

**शिरणे** (ಶಿರಣೇ) ಕ್ರಿ. ಸ. ಸೇರು, ಒಳಹೋಗು, ಪ್ರವೇಶಿಸು, ಒಳಸೇರು.

**शिरपाव** (ಶಿರಪಾವ) ಪು. ರುಮಾಲ, ಮುಂಡಾಸ, ಪಟಕೆ, ತಲೆಯವಸ್ತ್ರ, ಪಗಡಿ.

**शिरपुटणे** (ಶಿರಪುಟಣೇ) ಕ್ರಿ. ಸ. ಕೋಲಿನಿಂದ ತಲೆಗೆ ಒಡೆ, ಬಡಿಗೆಯಿಂದ ತಲೆಗೆ ಪೆಟ್ಟು ಹಾಕು.

**शिरपुटी** (ಶಿರಪುಟೀ) ಸ್ತ್ರೀ. ಸಣ್ಣಕೋಲು, ಬಡಿಗೆ.

**शिरपेच** (ಶಿರಪೇಚ್) ಪು. ಫಾ. ರುಮಾಲದಲ್ಲಿಯ ರತ್ನದ ತುರಾಯಿ, ತುರಾಯಿ.

**शिरविणे** (ಶಿರವಿಣೆ) ಕ್ರಿ. ಸ. ತುರುಕು, ಒಳಸೇರಿಸು, ಹೊಗಸು.

**शिरशिरणे** (ಶಿರಶಿರಣೇ) ಕ್ರಿ. ಅ. ಮುಳ್ಳುಬರು, ನಡುಗು, ಕಂಪಿಸು.

**शिरशिरी** (ಶಿರಶಿರೀ) ಸ್ತ್ರೀ. ನಡುಗುವಿಕೆ, ಕಂಪಿಸುವಿಕೆ, ಮುಳ್ಳುಬರುವಿಕೆ, ನಡುಕ ಬರುವಿಕೆ.

**शिरस** (ಶಿರಸ್) ಪು. ಒಂದು ಜಾತಿಯಗಿಡ, ಶಿರಸಿಗಿಡ, ಸಾಸಿವೆಗಿಡ.

**शिरसा** (ಶಿರಸಾ) ಕ್ರಿ. ವಿ. ಸಂ. ತಲೆಬಾಗಿ, ತಲೆವಾಗಿ, ನಮ್ರನಾಗಿ, ಭಕ್ತಿಪೂರ್ವಕ.

**शिरसामान्य,–वंद्य** (ಶಿರಸಾಮಾನ್ಯ–ವಂದ್ಯ) ವಿ. ಸಂ. ಆದರಭಾವದ, ಶಿರಸಾವಂದ್ಯ, ತಲೆಯಿಟ್ಟು ವಂದಿಸಿದ.

**शिरसाष्टांग नमस्कार** (ಶಿರಸಾಷ್ಟಾಂಗ ನಮಸ್ಕಾರ)
**शिरसाष्टांग दंडवत** (ಶಿರಸಾಷ್ಟಾಂಗ ದಂಡವತ್)
ಪು. ಸಂ. } ಶಿರಸಾಷ್ಟಾಂಗ, ದಂಡವತ್ ಪ್ರಣಾಮ.
ನ. ಸಂ. }

**शिरस्ता** (ಶಿರಸ್ತಾ) ಪು. ಫಾ. ರೂಢಿ, ಸಂಪ್ರದಾಯ, ನಡವಳಿಕೆ, ನಡೆವಳಿಕೆ, ವಾಡಿಕೆ, ಪದ್ಧತಿ, ಅಭ್ಯಾಸ ಸುಂಕ, ತೆರಿಗೆ, ಬಳಕೆ, ಪ್ರಯೋಗಕ್ರಮ.

**शिरस्तेदार** (ಶಿರಸ್ತೇದಾರ್) ಪು. ಸಂ. ಶಿರಸ್ತೇದಾರ, ನ್ಯಾಯಾಲಯದ ಮುಖ್ಯಕಾರಕೂನ.

**शिरस्तेवाईक** (ಶಿರಸ್ತೆವಾಈಕ್) ಕ್ರಿ.ವಿ. ರೂಢಿಯಂತೆ, ಮಾನಮರ್ಯಾದೆಯಂತೆ, ರೂಢಿಪ್ರಕಾರ, ಸಂಪ್ರದಾಯಾನುಸಾರ.

**शिरस्त्राण** (ಶಿರಸ್ತ್ರಾಣ) ನ. '**शिरपाव**' ನೋ.

**शिरस्नान** (ಶಿರಸ್ನಾನ) ನ. ತಲೆಯಸಹ ಜಳಕ, ಅಭ್ಯಂಗಸ್ನಾನ, ಸಚ್ಛೈಲಸ್ನಾನ, ತಲೆಯ ಮೇಲಿನ ಜಳಕ.

**शिरा** (ಶಿರಾ) ಪು. ಸಿಹಿಸಜ್ಜಿಗೆ, ಸಜ್ಜಿಗೆ, ಹುಗ್ಗಿ. ೨. ಸ್ತ್ರೀ. ಬಹುವ. ನರ, ಮೈಯೊಳಗಿನ ನರಗಳು.

**शिराटा–रांटा** (ಶಿರಾಟಾ–ರಾಂಟಾ) ಪು. ಕಸಬರಗೆ, ಪೊರಕೆ, ಕಡ್ಡಿಕಸಬರಗೆ.

**शिराणी** (ಶಿರಾಣೀ) ಸ್ತ್ರೀ. ಆನಂದ, ಸುಖ, ಸಂತೋಷ, ಬೆಲೆಯುಳ್ಳ ವಸ್ತು.

**शिराळ** (ಶಿರಾಳ್) ವಿ. ನರ ಎದ್ದುಕಾಣುವ ಮೈಯುವ, ನರ ಉಬ್ಬಿದ, ಉಬ್ಬಿದ ನರದ. ಪಟ್ಟೆಪಟ್ಟೆಯು, ಬಣ್ಣದ ಗೆರೆಯು.

**शिराळशेट(टी)चे राज्य** (ಶಿರಾಳಶೇಟ(ಟೀ)ಚೇ ರಾಜ್ಯ) ನ. ಸಂ. ಶಿರಾಳಶೆಟ್ಟಿಯ ರಾಜ್ಯ, ಅವ್ಯವಸ್ಥೆಯ ರಾಜ್ಯ, ಗೊಂದಲದ ರಾಜ್ಯ, ಕ್ಷಣಿಕ ರಾಜ್ಯ.

**शिरें** (ಶಿರೇ) ನ. ಕೆತ್ತಿದ ಬಡಿಗೆ, ಕುದಿಸಿದ ಸೆಜ್ಜೆಯ ನೀರು (ಮಸಿಗಾಗಿ).

**शिरोधार्य** (ಶಿರೋಧಾರ್ಯೇ) ಕ್ರಿ. ವಿ. "**शिरसावंद्य**" ನೋ.

**शिरोभाग** (ಶಿರೋಭಾಗ) ಪು. ಸಂ. ತಲೆಯ ಭಾಗ, ಶ್ರೇಷ್ಠಭಾಗ, ಮುಖ್ಯಭಾಗ.

**शिरोभूषण** (ಶಿರೋಭೂಷಣ) ನ. ಸಂ. ತಲೆಯ ಆಭರಣ.

**शिरोमणी** (ಶಿರೋಮಣೀ) ಪು. ತಲೆಯ ರತ್ನಾಭರಣ, ಶಿರಸ್ತ್ರಾಣದ ರತ್ನ, ಮುಖ್ಯಸ್ಥ, ಶ್ರೇಷ್ಠಮನುಷ್ಯ. **मूर्खशिरोमणी** (ಮೂರ್ಖಶಿರೋಮಣೀ) ಪು. ಮೂರ್ಖರಲ್ಲಿ ಹೆಚ್ಚಿನವನು, ಮೂರ್ಖರ ರಾಜನು, ತೀರ ಹುಚ್ಚ.

**शिलक, शिल्लक** (ಶಿಲಕ್, ಶಿಲ್ಲಕ್) ಸ್ತ್ರೀ. ಫಾ. ಸಲ್ಪ, ಶಿಲ್ಲಕ, ಬಾಕಿ, ಕೈಹಣ.

**शिलक झाडा** (ಶಿಲಕ್ ಝುಡಾ) ಪು. ಅಥಾವೆಯ ಬಾಕಿ, ವರ್ಷಾಂತ್ಯದ ಬಾಕಿ.

**शिलक काढणे–उतरणे** (ಶಿಲಕ್ ಕಾಢಣೇ–ಉತರಣೇ) ಕ್ರಿ. ಸ. ಶಿಲ್ಕು ತೆಗೆ, ಲೆಕ್ಕ ಪೂರ್ಣಮಾಡು, ಅಥಾವೆ ತೆಗೆ.

**शिलकणे** (ಶಿಲಕಣೇ) ಕ್ರಿ. ಸ. ಬೆಂಕಿಹಚ್ಚು, ಉರಿಹಚ್ಚು, ಸುಡು, ಉರಿಸು, ಹೊತ್ತಿಸು, ಉತ್ತೇಜಿಸು.

**शिलकबाकी** (ಶಿಲಕ್ ಬಾಕೀ) ಸ್ತ್ರೀ. "**शिलक झाडा**" ನೋ.

**शिलकी** (ಶಿಲಕೀ) ವಿ. ಅರ. ಉಳಿದ, ಉಳಿದದ್ದು, ಪೂರ್ಣವಾಗದಿದ್ದದ್ದು. ೨. ಹೆಚ್ಚು ಹಣ ಉಳಿದ (ಬಡ್‌ಜೆಟ್) (ಅಂದಾಜುಪತ್ರ).

**शिलगणे** (ಶಿಲಗಣೇ) ಕ್ರಿ. ಅ. ಉರಿ.

**शिलगावणे** (ಶಿಲಗಾವಣೇ) ಕ್ರಿ.ಸ. ಹೊತ್ತಿಸು, (ದೀಪ, ಬೀಡಿ, ಮುಂ.) ದೀಪಹಚ್ಚು.

**शिलंगण** (ಶಿಲಂಗಣ್) ನ. ಸೀಮೋಲ್ಲಂಘನ, ವಿಜಯಾದಶಮಿ ಹಬ್ಬ.

**शिलपुटी** (ಶಿಲಪುಟೀ) ಸ್ತ್ರೀ. ಚೂರು, ಚಕ್ಕೆ, ಸಕ್ಕೆ, ತುಣುಕು.

**शिलशिला** (ಶಿಲಶಿಲಾ) ಪು. ಫಾ. ಸೆಳೆತ, ಭಾಷಣ ಪ್ರವಾಹ, ಜಲಪ್ರವಾಹ, ಪ್ರವಾಹ, ಶ್ರೇಣಿ, ಸಾಲು.

**शिला** (ಶಿಲಾ) ಸ್ತ್ರೀ. ಸಂ. ಕಲ್ಲು, ಬಂಡೆ, ಹೊಸ್ತಿಲು, ಹೊಸ್ತಲು, ಹಲಗೆ, ಚಪ್ಪಡಿ, ಸಮಾಧಿಕಲ್ಲು.

**शिलाई** (ಶಿಲಾಈ) ಸ್ತ್ರೀ. ಹೊಲಿಗೆ, ಹೊಲಿಗೆಯ ಕೂಲಿ.

**शिलाकुसुम** (ಶಿಲಾಕುಸುಮ) ನ.ಸಂ. ಶಿಲಾಕುಸುಮ, ಕಲ್ಲುಹೂವು, ಸುಲಭವಾಗಿ ಉರಿಯುವ ಒಂದು ದ್ರವ, ಸಾಮ್ರಾಣಿ.

**शिलाजित** (ಶಿಲಾಜಿತ) ಪು. ಶಿಲಾಜಿತ, ಒಂದು ಔಷಧ. ೨. ಕಪ್ಪು ಬಣ್ಣದ ಒಂದು ಖನಿಜ, ಮಣ್ಣುತೈಲ, ಮೃತ್ತಿಕಾತೈಲ, ಪೆಟ್ರೋಲಿಯಂ.

**शिलारस** (ಶಿಲಾರಸ್) ಪು. ಶಿಲಾರಸ, **शिलाकुसुम** ನೋ.

**शिलालेख** (ಶಿಲಾಲೇಖ) ಪು. ಶಿಲಾಲೇಖ, ಕಲ್ಲುಬರೆಹ, ಶಿಲಾಲಿಪಿ, ಶಿಲಾಲೇಖನ, ಶಾಸನ.

**शिलेखाना** (ಶಿಲೇಖಾನಾ) ಪು. ಅರ+ಫಾ. ಕವಚ, ಚಿಲಕತ್ತು, ಚಿಲಖತ್ತು, ಆಯುಧಶಾಲೆ, ಯುದ್ಧ ದ್ರವ್ಯಾಗಾರ.

**शिलेटोप** (ಶಿಲೇಟೋಪ್) ಪು. ಕವಚ, ಚಿಲಕತ್ತು.

**शिलेदार** (ಶಿಲೇದಾರ್) ಪು. ಅರ. ಸಿಪಾಯಿ, ಸೈನಿಕ, ಸ್ವಂತಕುದುರೆ ಸೈನಿಕ, ಜಂಭಕೊಚ್ಚುವವ, ಪೌಲಿನವನು.

**शिलेदारी** (ಶಿಲೇದಾರೀ) ಸ್ತ್ರೀ. ಅರ. ಜಂಭ ಕೊಚ್ಚುವಿಕೆ, ಬಡಾಯಿ ಬಡೆಯುವಿಕೆ, ಬಡಬಡಿಸುವಿಕೆ.

**शिलेपास–स्त** (ಶಿಲೇಪಾಸ್–ಸ್ತ್) ವಿ. ತಯಾರಾದ, ಸಿದ್ಧ, ಕಟಿಬದ್ಧ.

**शिलेभाले** (ಶಿಲೇಭಾಲೇ) ಪು. ಕವಚ, ಚಿಲಖತ್ತು, ಭಲ್ಲೆಗಳಿಂದ ಸಿದ್ಧನಾದವನು.

**शिल्या भाटचानिशी** (ಶಿಲ್ಯಾ ಭಾಟ್ಯಾನಿಶೀ) ಕ್ರಿ. ವಿ. ಕವಚ, ಚಿಲಖತ್ತು, ಭಲ್ಲೆಗಳಿಂದ ಸಜ್ಜಾಗಿ.

**शिल्प** (ಶಿಲ್ಪ) ನ. ಸಂ. ಹಸ್ತಕೌಶಲ್ಯ, ಕೆತ್ತನೆಯ ಕೆಲಸ, ಕೈಕಸಬು.

**शिल्पकर्म** (ಶಿಲ್ಪಕರ್ಮ) ನ. ಸಂ. ಹಸ್ತಕೌಶಲ್ಯದ ಉದ್ಯೋಗ, ಕೆತ್ತನೆಯ ಕೆಲಸ, ಕೈಗಾರಿಕೆ.

**शिल्पकार** (ಶಿಲ್ಪಕಾರಾ) ಪು. ಸಂ. ಶಿಲ್ಪಿ, ಶಿಲ್ಪವಿದ್ಯಾ ಪ್ರವೀಣ, ಕಲಾಕಾರ, ಕೈಕೆಲಸದಲ್ಲಿ ಜಾಣ, ಕೈಗಾರಿಕೆಯಲ್ಲಿ ಜಾಣ, ಶಿಲ್ಪಕಲಾವಿದ, ಕಸಬುದಾರ.

**शिल्पविद्या** (ಶಿಲ್ಪವಿದ್ಯಾ) ಸ್ತ್ರೀ. ಸಂ. ಹಸ್ಕಕೌಶಲ್ಯ ಕೈಗಾರಿಕೆಯ ಜಾಣ್ಮೆ.

**शिल्पशाला** (ಶಿಲ್ಪಶಾಲಾ) ಸ್ತ್ರೀ. ಸಂ. ಹಸ್ತಕೌಶಲ್ಯ ಸಾಲೆ, ಕಾರಖಾನೆ, ಶಿಲ್ಪವಿದ್ಯಾಸಾಲೆ.

**शिल्पशास्त्र** (ಶಿಲ್ಪಶಾಸ್ತ್ರ) ನ. ಸಂ. ಕೈಗಾರಿಕೆಯ ಸಾಲೆ, ಉದ್ಯೋಗಸಾಲೆ, ಕಲಾಮಂದಿರ, ಶಿಲ್ಪ ಶಾಸ್ತ್ರ, ಕೈಗಾರಿಕೆಯಶಾಸ್ತ್ರ.

**शिल्पशास्त्री** (ಶಿಲ್ಪಶಾಸ್ತ್ರೀ) ಪು. ಶಿಲ್ಪವಿದ್ಯಾಗುರು 'शिल्पकार' ನೋ.

**शिल्पी** (ಶಿಲ್ಪೀ) ಪು. ಕಸುಬಿನ, ಕೈಗಾರಿಕೆಯವ.

**शिंव** (ಶಿಂವ್) ಸ್ತ್ರೀ. ಸೀಮೆ, ಮರ್ಯಾದೆ, ಅಂತ್ಯ ಸೀಮೆ, ಅಂಚು, ಬದಿ, ಗಡಿ, ಎಲ್ಲೆ.

**शिव** (ಶಿವ) ಪು. ಸಂ. ದೇವರ ಹೆಸರು. ೨. ವಿ. ಪವಿತ್ರ.

**शिवशिव** (ಶಿವಶಿವ್) ಸ್ತ್ರೀ. ಆಸೆ, ಉತ್ಸುಕತೆ.

**शिवावरचा बेलउचलणे** (ಶಿವಾವರಚಾ ಬೇಲ್ ಉಚಲಣೇ) ಕ್ರಿ. ಸಂ. ದೇವರ ಮೇಲಿನ ಬಿಲ್ವಎತ್ತಿ, ಪ್ರತಿಜ್ಞೆ ಮಾಡಿ ಹೇಳು.

**शिवण** (ಶಿವಣ) ಸ್ತ್ರೀ. ಹೊಲಿಗೆ, ಹೊಲಿಗೆಯ ಸಾಮಾನು, ಹೊಲಿಯ ತಕ್ಕ ಬಟ್ಟೆಗಳು.

**शिवणकर** (ಶಿವಣಕರ್) ಪು. ಹುಲ್ಲು ಛಾವಣಿ ಕಟ್ಟುವವ, ಗುಡಿಸಲು ಹಾಕುವವನು.

**शिवणकाम** (ಶಿವಣಕಾಮ) ನ. ಹೊಲಿಗೆಯ ಕೆಲಸ, ಹೊರಗೆ.

**शिवणावळ** (ಶಿವಣಾವಳ್) ಸ್ತ್ರೀ. ಹೊಲಿಗೆಯ ಕೂಲಿ.

**शिवणे** (ಶಿವಣೇ) ಕ್ರಿ. ಸಂ. ಹೊಲಿ, ಜೋಡಿಸು. ೨. ಮುಟ್ಟು, ಸಂಪರ್ಕಬರು, ಸಂಬಂಧಬರು.

**शिवर** (ಶಿವರ) ವಿ. ನಿಂದಕ, ನಿಂದಿಸುವವ, ಅಪಮಾನಾಸ್ಪದ.

**शिवराळ** (ಶಿವರಾಳ್) ವಿ. ಬೈಯ್ಯುವವ, ಬೈಯುವ ಚಟದ.

**शिवराई** (ಶಿವರಾಈ) ಸ್ತ್ರೀ. ತಾಮ್ರದ ನಾಣ್ಯ, ಶಿವಾಜಿ ಕಾಲದ ನಾಣ್ಯ.

**शिवरात्र–त्रि** (ಶಿವರಾತ್ರ–ತ್ರಿ) ಕ್ರಿ. ಸಂ. ಶಿವರಾತ್ರಿ, ಮಹಾಶಿವರಾತ್ರಿ, ಶಿವಪೂಜೆಯ ಮಹತ್ವದ ದಿನ.

**शिवशिवणे** (ಶಿವಶಿವಣೇ) ಕ್ರಿ. ಸ. ಜುಮ್ಮೆನ್ನು, ಭುಗಿಲ್ಲೆನ್ನು, ರೋಮಾಂಚವೇಳು.

**शिवस्व** (ಶಿವಸ್ವ) ಪು. ಶಿವನಿಗೆ ಅರ್ಪಿಸಿದ ವಸ್ತು, ಮೀಸಲಿಟ್ಟವಸ್ತು, ಉಪಯೋಗಿಸಲಿಕ್ಕೆ ಬಾರದಂತಹ ಎರಡನೆಯವರ ವಸ್ತು.

**शिवळ** (ಶಿವಳ್) ಸ್ತ್ರೀ. ನೊಗಗಣಿ, ಸಿಳ್ಳು, ಸೀಟಿ.

**शिवाय** (ಶಿವಾಯ) ಕ್ರಿ. ವಿ. ಅರ. ಹೊರ್ತು, ಅಲ್ಲದೆ, ಹೆಚ್ಚಿನ, ಅಧಿಕ.

**शिवायमिळकत** (ಶಿವಾಯಮಿಳಕತ್) ಸ್ತ್ರೀ. ಜೊತೆ ಹಣ, ಉಪಧನ, ಉತ್ಪನ್ನದ ಹೊರತಾಗಿ ಬಂದ ಹಣ.

**शिवार** (ಶಿವಾರ) ನ. ಭೂಮಿ, ಜಮೀನು, ಅಡವಿ, ಹಳ್ಳಿಯಬೈಲು, ಕಾಡು, ಅರಣ್ಯ, ಜಂಗಲು, ಒಣ ಭೂಮಿ.

**शिवारपंडित** (ಶಿವಾರಪಂಡಿತ) ಪು. ಹಳ್ಳಿಯಪಂಚ, ಹಳ್ಳಿಯಜಾಣ, ಡಾಂಭಿಕ ಪಂಡಿತ, ಜಾಣನಂತೆ ವರ್ತಿಸುವ ದಡ್ಡ.

**शिवाशिव** (ಶಿವಾಶಿವ) ಸ್ತ್ರೀ. ಮೈಲಿಗೆ, ಹೊರಗಾಗುವಿಕೆ, ಮುಟ್ಟುಚಟ್ಟು.

**शिवी** (ಶಿವೀ) ಸ್ತ್ರೀ. ಬೈಗಳು, ನಿಂದೆ, ಬೈಯುವಿಕೆ.

**शिवीगाळ–ळी** (ಶಿವೀಗಾಳ್–ಳೀ) ಸ್ತ್ರೀ. ಬೈಯುವಿಕೆ, ನಿಂದಿಸುವಿಕೆ, ದೂಷಿಸುವಿಕೆ, ಬೈದಾಟ.

**शिशिर** (ಶಿಶಿರ) ಪು. ಸಂ. } ಶಿಶಿರಋತು,
**शिशिरऋतु** (ಶಿಶಿರಋತು) ಪು. } ಚಳಿಗಾಲ.

**शिशी** (ಶಿಶೀ) ಸ್ತ್ರೀ. ಫಾ. ಸೀಸಮದ ಕಟ್ಟೆಗೆ.

**शिशु** (ಶಿಶು) ಪು. ಸಂ. ಕೂಸು, ಕರ, ಮರಿ, ನಾಯಿಮರಿ, ಕುನ್ನಿ.

**शिष्ट** (ಶಿಷ್ಟ) ವಿ. ಸಂ. ದೊಡ್ಡವ, ಸುಶಿಕ್ಷಿತ, ವ್ಯವಸ್ಥಿತ, ಉತ್ತಮ, ಕ್ರಮಬದ್ಧವಾದ, ವಿರುದ್ಧವಾದ.

**शिष्टसंप्रदाय** (ಶಿಷ್ಟಸಂಪ್ರದಾಯ) ಪು. ಹಿರಿಯರ ರೂಢಿ, ಲೋಕವಂದ್ಯರೂಢಿ, ಸರ್ವಮಾನ್ಯ ಆಚರಣೆ, ಶಿಷ್ಟಸಂಪ್ರದಾಯ.

**शिष्टसंभावना** (ಶಿಷ್ಟಸಂಭಾವನಾ) ಸ್ತ್ರೀ. ಪೂಜ್ಯ ಭಾವನೆ, ಸತ್ಕಾರ.

**शिष्टाइकी, शिष्टाई** (ಶಿಷ್ಟಾಇಕೀ, ಶಿಷ್ಟಾಈ) ಸ್ತ್ರೀ. ಸಂಧಾನಮಾಡುವವನು, ಮಧ್ಯಸ್ಥ, ಮಧ್ಯಸ್ಥಿಕೆ ನಡೆಯಿಸುವವನು.

**शिष्टाचार** (ಶಿಷ್ಟಾಚಾರ್) ಪು. ಸಂ. ಸಜ್ಜನರ ನಡೆವಳಿಕೆ, ಶಿಷ್ಟರ ನಡತೆ.

**शिष्य** (ಶಿಷ್ಯ) ಪು. ಸಂ. ಶಿಷ್ಯ, ವಿದ್ಯಾರ್ಥಿ, ಅನುಯಾಯಿ, ೨. ಅನುಭವವಿಲ್ಲದವನು, ಉಮೇದವಾರ.

**शिष्यवृत्ति** (ಶಿಷ್ಯವೃತ್ತಿ) ಸ್ತ್ರೀ. ಸಂ. ವಿದ್ಯಾರ್ಥಿವೇತನ, ವಿದ್ಯಾರ್ಥಿ ಸಂಬಳ.

**शिष्यशाखा** (ಶಿಷ್ಯಶಾಖಾ) ಸ್ತ್ರೀ. ಗುರು–ಬಂಧು ಸಂಬಂಧ, ಶಿಷ್ಯಶಾಖೆ, ಗುರುಶಿಷ್ಯಶಾಖೆ, ಆ ಶಿಷ್ಯ ಶಾಖೆಯವನು, ಆಯಾಮತದ ಗುಂಪು, ವಿಶಿಷ್ಟ ಮತದಗುಂಪು.

**शिसकारी, शिसारी** (ಶಿಸಕಾರೀ, ಶಿಸಾರೀ) ಸ್ತ್ರೀ. ತಿರಸ್ಕಾರ, ಬೇಸರ, ಹೇಸಿಕೆ, ಅಸಹ್ಯ, ರೋಸಿಕೆ, ಹೇಸುವಿಕೆ.

**शिसव–वा** (ಶಿಸವ–ವಾ) ಪು. ಸೀಸವುದ ಕಟ್ಟಿಗೆ, ಸೀಸವದಕಟ್ಟಿಗೆ.

**शिसवि–शीसवी** (ಶಿಸವಿ–ಶೀಸವೀ) ಸ್ತ್ರೀ. ಸಿಸುವೇ ಗಿಡದ ಸಂಬಂಧ.

**शिसा** (ಶಿಸಾ) ಪು. ಸಂ. ಸೀಸೆ, ಸಿಸಾಯಿ, ಕುಪ್ಪಿ, ಬಾಟಲಿ, ಬುದಲಿ, ಸಾರಾಯಿ ಬುರುಡೆ, ದ್ರಾಕ್ಷಾರಸದ ದೊಡ್ಡ ಸೀಸೆ.

**शिसाटी** (ಶಿಸಾಟೀ) ಸ್ತ್ರೀ. ಸ. ಓಕರಿಕೆ, ವಾಕರಿಕೆ, ಹೇಸಿಕೆ, ಅಸಹ್ಯವಾಗುವಿಕೆ, ವಾಂತಿ.

**शिसारी** (ಶಿಸಾರೀ) ಸ್ತ್ರೀ. ತುಂಬಿ ಬಂದ ಚಳಿ, ಒಮ್ಮೆಲೆ ಬಂದ ಚಳಿ, ಒಮ್ಮೆಲೆ ಎದ್ದ ರೋಮಾಂಚ. ಮೂರ್ಛೆ, ಬವಳಿ, ಉದ್ರೇಕ, ವಿಕೋಪ.

**शिसें** (ಶಿಸೇ) ನ. ಸೀಸ, (ಧಾತು).

**शिस्त** (ಶಿಸ್ತ) ಸ್ತ್ರೀ. ಫಾ. (ಶುಸ್ತಾ) ಶಿಸ್ತ, ವ್ಯವಸ್ಥೆ, ಅಚ್ಚುಕಟ್ಟುತನ, ಓರಣ, ಶಿಕ್ಷಣ, ಶಿಕ್ಷೆ.

**शिस्तबाकी** (ಶಿಸ್ತಬಾಕೀ) ಸ್ತ್ರೀ. ಉಳಿದ ಬಾಕಿ, ವಸೂಲಾಗದ ಬಾಕಿ, ಬರಬೇಕಾದ ಹಣ.

**शिस्तवार** (ಶಿಸ್ತವಾರ) ವಿ. ಸಂ. ಓರಣದ, ಯೋಗ್ಯ, ವ್ಯವಸ್ಥಿತ, ಸರಿಯಾದ, ಶುದ್ಧ, ತಕ್ಕ.

**शिळट–टी** (ಶಿಳಟ್–ಟೀ) ಸ್ತ್ರೀ. ಗಾಳಿಯ ತಂಪು, ವಾತಾವರಣದ ಶೈತ್ಯ, ವಾತಾವರಣದ ತಂಪು, ಅಪಕ್ವತನ, ಅನುಭವಹೀನತೆ, ಹಸಿತನ.

**शिळणधार** (ಶಿಳಣಧಾರ), **शिळंधार** (ಶಿಳಂಧಾರ), **शिळाधार** (ಶಿಳಾಧಾರ) ವಿ. ಭಯಂಕರ ಜಡ, ಬಹು ಭಾರ, ಭಾರವುಳ್ಳ, ಕಠಿಣ, ಅಸಹನೀಯ, ಹೊರಲಾಗದ.

**शिळपट** (ಶಿಳಪಟ) ವಿ. ಮೊಂಡಕತ್ತೆ, ಸಡಿಲು, ನೇಟವಿಲ್ಲದ್ದು, ಸಳ್ಳಕವಾದ, ಉದಾಸೀನ, ಮಂದ, ಮೆತ್ತಗಾದ, ಸೌಮ್ಯ, ಪಳಗಿಸಿದ, ಈಲಾಗಿರುವ, ತಿದ್ದಿದ, ನಿಸ್ತೇಜ.

**शिळवट, शिळवड** (ಶಿಳವಟ, ಶಿಳವಡ) ವಿ. ತಂಗಳಾದ, ಹಳಸಿದ, ನೀರಸ, ಇಳಿದ, ನೀರುಬಿಟ್ಟ.

**शिळविणें** (ಶಿಳವಿಣೇ) ವಿ. ತಂಗಳಮಾಡು, ನೀರಸ ಮಾಡು, ಹಳಯಿಸು.

**शिळा** (ಶಿಳಾ) ವಿ. ಸಂ. ತಂಗಳು, ಹಳಸಿದ, ಕೆಟ್ಟ, ನೀರಸಾದ, ಹಳಿಯಿಸಿದ, ತಣ್ಣಗಾದ, ೨. ಸ್ತ್ರೀ. **शिला** ನೋ. ಬಂಡೆಗಲ್ಲು, ದೊಡ್ಡಕಲ್ಲು.

**शिळाछाप** (ಶಿಳಾಛಾಪ) ಪು. ಶಿಲಾಮುದ್ರಣ, ಕಲ್ಲಚ್ಚು.

**शिळापाका** (ಶಿಳಾಪಾಕಾ) ವಿ. **शिळा** ನೋ.

**शिळासप्तमी** (ಶಿಳಾಸಪ್ತಮೀ) ಸ್ತ್ರೀ. ಶ್ರಾವಣ ಶುದ್ಧ ಸಪ್ತಮೀ.

**शिळी, शिळई** (ಶಿಳೀ, ಶಿಳಈ) ಸ್ತ್ರೀ. ಶೀಟಿ, ಸಿಳ್ಳು, ಸಿಳಪಿ.

**शिळोपा** (ಶಿಳೋಪಾ) ಪು. ದಿನದ ತಂಪು ವೇಳೆ, ಹಗಲಿನ ಶಾಂತ ವೇಳೆ, ಶೀತ ವಾತಾವರಣ, ತಣ್ಣಗಿನ ಸಮಯ. ೨. ಗತಕಾಲ.

**शिळोप्याच्या गप्पा** (ಶಿಳೋಪ್ಯಾಚ್ಯಾ ಗಪ್ಪಾ) ಸ್ತ್ರೀ. ಹೋದ ಕಾಲದ, ಹಳೆಯ ಮಾತುಗಳ ನೆನಪು.

**शिक्षक** (ಶಿಕ್ಷಕ) ಪು. ಸಂ. ಕಲಿಸುವವ, ಗುರು, ಕಲಿಸುವ ವ್ಯಕ್ತಿ.

**शिक्षण** (ಶಿಕ್ಷಣ) ನ. ವಿದ್ಯೆ, ಕಲಿಸುವಿಕೆ, ತಿದ್ದುಪಡೆ ಮಾಡುವಿಕೆ, ಶಿಕ್ಷೆ ಕೊಡುವಿಕೆ.

**शिक्षणे** (ಶಿಕ್ಷಣೇ) ಕ್ರಿ. ವಿ. ಕಲಿಸು, ತಿದ್ದು, ತರಬೇತಿಗೊಳಿಸು, ಶಿಕ್ಷೆ ಕೊಡು, ಶಿಕ್ಷಿಸು, ತಿದ್ದು, ತಾಡಿಸು.

**शिक्षा** (ಶಿಕ್ಷಾ) ಸ್ತ್ರೀ. ಸಂ. ಶಿಕ್ಷೆ, ತಿದ್ದುವಿಕೆ, ಶಿಕ್ಷಿಸುವಿಕೆ, ತಿದ್ದುವಿಕೆ.

**शिक्षित** (ಶಿಕ್ಷಿತ) ವಿ. ಸಂ. ಕಲಿತ, ತಿದ್ದಲ್ಪಟ್ಟ, ತಿದ್ದು ಪಡೆಯಾದ, ಶಿಕ್ಷಿಸಲ್ಪಟ್ಟ.

**शींक** (ಶೀಂಕ) ಸ್ತ್ರೀ. ಸೀನು.

**शीग** (ಶೀಗ್) ಸ್ತ್ರೀ. ತುದಿ, ತಲೆ, ಮಾಪಿನಲ್ಲಿ ತುಂಬಿದ ಕಾಳಿನ ಮೇಲ್ಭಾಗ.

**शिगेला जाणे** (ಶಿಗೇಲಾ ಜಾಣೇ) ಕ್ರಿ. ಸ. ಮೇಲಕ್ಕೇರು, ಪೂರ್ಣ ತುಂಬು, ತುದಿಗೇರು, ತುಂಬಿಬರು.

**शीगलोट** (ಶಿಗಲೋಟ್) ಸ್ತ್ರೀ. ವಿಪುಲತೆ, ವೈಪುಲ್ಯ, ಅತಿಶಯ ಹೇರಳತನ, ಹೇರಳಿಕೆ.

**शीघ्र** (ಶೀಘ್ರ) ವಿ. ಸಂ. ತೀವ್ರ, ಅವಸರದ. ಕ್ರಿ.ವಿ. ಅವಸರದಿಂದ, ಬೇಗ, ಶೀಘ್ರವಾಗಿ.

**शीघ्रकवि** (ಶೀಘ್ರಕವಿ) ಪು. ಶೀಘ್ರಕವಿ, ಆಶುಕವಿ, ಉತ್ಸ್ಫೂರ್ತಕ ಕವಿ.

**शीघ्रकोपी** (ಶೀಘ್ರಕೋಪೀ) ವಿ. ಬೇಗ ಸಿಟ್ಟಿಗೇಳುವ, ಮುಂಗೋಪಿ.

**शीघ्रबुद्धि** (ಶೀಘ್ರಬುದ್ಧಿ) ವಿ. ಸ. ಚುರುಕು ಬುದ್ಧಿ, ತೀಕ್ಷ್ಣಬುದ್ಧಿ, ಹರಿತ ಬುದ್ಧಿ, ಸೂಕ್ಷ್ಮ ಬುದ್ಧಿಯ.

**शीट** (ಶೀಟ್) ಸ್ತ್ರೀ. ಹಕ್ಕಿಗಳ ಮಲ, ಪಕ್ಷಿವಿಷ್ಟೆ. ಮುದ್ರಿತ ಚೀಟಿ ಬಟ್ಟೆ.

**शीड** (ಶೀಡ್) ನ. ಹಡಗಿನ ಪಟ, ಹಾಯಿ.

**शीड उतरणे** (ಶೀಡ್ ಉತರಣೇ) ಕ್ರಿ. ಸ. ಹಡಗಿನ ಪಟ ಇಳಿಸು, ಹಾಯಿ ಇಳಿಸು, ಕೆಳಗಿಳಿ, ಪರಾಜಿತ ನಾಗು.

**शीड उभारणे** (ಶೀಡ್ ಉಭಾರಣೇ) ಕ್ರಿ. ಸ. ಹಡಗಿನ ಪಟ ಏರಿಸು, ಉನ್ನತಿ ಹೊಂದು, ಭರಾಟೆಗೇರು.

**शीड चढणे** (ಶೀಡ್‌ಚಢಣೇ) ಕ್ರಿ. ಶ್ರೇಷ್ಠಪದಕ್ಕೇರು, ಉನ್ನತನಾಗು.

**शीडकाठी** (ಶೀಡ್‌ಕಾಠೀ) ಸ್ತ್ರೀ. ಹಡಗಿನ ಪಟದ ಕಂಬ, ಹಾಯಿಕಂಬ.

**शीण** (ಶೀಣ್) ಪು. **शीणभाग** (ಶೀಣಭಾಗ) ಪು. ದಣಿವು, ಬೇಸರಿಕೆ, ಮಾಂದ್ಯ, ದೌರ್ಬಲ್ಯ, ನಿರುತ್ಸಾಹ, ಕಸಾರಿಕೆ, ಆಯಾಸ, ಬಾಯಾರಿಕೆ, ಗ್ಲಾನಿ, ಬಳಲಿಕೆ, ಓಕರಿಕೆ.

**शीत** (ಶೀತ್) ನ. ಅಗಳು, ಅನ್ನದ ಅಗಳು, ಕಣ. ೨. ಧನುಸ್ಸಿನ ದಾರ. ೩. ವಿ. ಸಂ. ತಂಪು, ಚಳಿ, ತಂಪಾದ, ಚಳಿಯುಳ್ಳ.

**शीत कटिबंध** (ಶೀತಕಟಿಬಂಧ) ಪು. ಸಂ. ಶೀತಕಟಿಬಂಧ, ತಂಪು ಭೂವಲಯ, ತಂಪುಕಟಿಬಂಧ, ಶೀತಭೂಮೇಖಲೆ, ತಂಪು ನಡುಕಟ್ಟು.

**शीतकट–ण** (ಶೀತಕಟ–ಣ) ನ.
**शीतकूट–ण** (ಶೀತಕೂಟ–ಣ) ನ.
**शीतगण** (ಶೀತಗಣ) } **शीत** ನೋ.

**शीतज्वर** (ಶೀತಜ್ವರ) ಪು. ನೆಗಡಿಜ್ವರ, ಚಳಿಜ್ವರ, ಮಲೇರಿಯಾ.

**शीतल –ळ** (ಶೀತಲ್–ಳ್) ವಿ. ಸಂ. ಶೀತಲ, ತಂಪಾದ, ತಣ್ಣಗಾದ, ಮೆತ್ತಗಾದ.

**शीतला** (ಶೀತಲಾ) ಸ್ತ್ರೀ. ಸಂ. ಮೈಲಿ, ಸಿಡುಬು, ಮೈಲಿದೇವಿ, ದೊಡ್ಡಮ್ಮ.

**शीतोष्ण** (ಶೀತೋಷ್ಣ) ವಿ. ಸಂ. ಬೆಚ್ಚಗಿನ, ಶೀತವೂ ಉಷ್ಣವೂ ಆದ, ಮಂದೋಷ್ಣವಾದ, ಉಗುರು ಬೆಚ್ಚಗಿನ.

**शीप** (ಶೀಪ್) ಸ್ತ್ರೀ. ನ. **शिंप** ನೋ. ಸಿಂಪೆ, ಸೀಪೆ, ಸೀಪು.

**शीम** (ಶೀಮ್) ಸ್ತ್ರೀ. ಸೀಮೆ, ಮರ್ಯಾದೆ, ಎಲ್ಲೆ.

**शीर** (ಶೀರ್) ಪು. "**शिर**" ನೋ. ತಲೆ. ೨. ನರ.

**शिरा काढणे** (ಶಿರಾ ಕಾಢಣೇ) ಕ್ರಿ.ವಿ. ಒದರಿಕೊಳ್ಳು, ಕಂಠ ಬಿಗಿದು ಮಾತಾಡು.

**शिरा ताणणे** (ಶಿರಾ ತಾಣಣೇ) ಕ್ರಿ. ಅ. ನರಗಳನ್ನು ಬಿಗಿದು ಮಾತಾಡು, ಒದರಿ ಮಾತಾಡು, ಜಗಳತೆಗೆ, ಜಗಳಾಡು, ಕಡಿದಾಡು, ಸಿಟ್ಟಿನಿಂದ, ಆವೇಶದಿಂದ ಮಾತಾಡು.

**शिरा फुगवणें, शिरा ताणून बोलणे, शिरा ताणून ओरडणे** (ಶಿರಾ ಫುಗವಣೇ, ಶಿರಾ ತಾಣೂನ್ ಬೋಲಣೇ) ಶಿರಾ ತಾಣೂನ್ ಓರಡಣೇ) ಕ್ರಿ. ಸ. ಜಗಳತೆಗೆ, ಒದರಿ ಮಾತಾಡು, ಜಗಳಾಡು, ಕಡಿದಾಡು, ಸಿಟ್ಟಿಗೇಳು, ಆವೇಶದಿಂದ ಮಾತಾಡು.

**शीर्ष** (ಶೀರ್ಷ) ನ. ಸಂ. ಶಿರಃಕೋಣ, "**शिर**" ನೋ.

**शील** (ಶೀಲ) ನ. ಸಂ. ಸಭ್ಯವರ್ತನ, ಸಜ್ಜನಿಕೆ, ಸುಸ್ವಭಾವ, ಶೀಲ. ೨. **–शील** (–ಶೀಲ) ಪ್ರತ್ಯಯ. ಉಳ್ಳ, ಹೊಂದಿದ ೩. ಗುಣವುಳ್ಳ ಮಗ್ನನಾದ (ಅಧ್ಯಯನಶೀಲ, ಕರ್ಮಶೀಲ).

**शीलवन्त,–वान्** (ಶೀಲವಂತ,–ವಾನ್) ವಿ.ಸಂ. ಮಡಿವಂತನಾದ, ಆಚಾರಶುದ್ಧನಾದ, ಉತ್ತಮ ಸ್ವಭಾವದ, ಶುದ್ಧಚಾರದ, ನೀತಿವಂತ.

**शीव** (ಶೀವ್) ಸ್ತ್ರೀ. ಸಂ. ಗಡಿ, ಸೀಮೆ, **शीम** ನೋ.

**शीवकरी, शीवशेजारी** (ಶೀವಕರೀ, ಶೀವಶೇಜಾರೀ) ವಿ. ನೆರೆಯ ಮನೆಯ, ಸೀಮೆಯ ಹತ್ತಿರದ, ಸೀಮಾ ಸಮೀಪದ.

**शीवधोंडा** (ಶೀವಧೋಂಡಾ) ಪು. ಸೀಮೆಯ ಕಲ್ಲು, ಗಡಿಯ ಕಲ್ಲು, ಗಡಿಯ ಗುರುತು.

**शीळ** (ಶೀಳ್) ಸ್ತ್ರೀ. ಸಿಳ್ಳು, ಸೀಟಿ. ೨. ಕಲ್ಲು. ೩. ನ. ಸ್ವಭಾವ.

**शुक** (ಶುಕ) ಪು. ಸಂ. ಗಿಳಿ, ಗಂಡು ಗಿಳಿ.

**शुकी** (ಶುಕೀ) ಸ್ತ್ರೀ. ಹೆಣ್ಣುಗಿಳಿ.

**शुकनासिक** (ಶುಕನಾಸಿಕ) ವಿ. ಗಿಳಿಯ ಮೂಗಿನ.

**शुक्क** (ಶುಕ್ಕು) ಉದ್ಗಾರ. ಶುಕ್–ಉಸುಕ್ (ಬೆಕ್ಕು ಮುಂತಾದವನ್ನು ಹೊಡೆದೋಡಿಸಲು).

**शुक्क असणे** (ಶುಕ್ಕು ಅಸಣೇ) ಕ್ರಿ. ಅ. ಶಾಂತನಾಗಿರು, ನಿರ್ಜನ ಪ್ರದೇಶದಲ್ಲಿರು.

**शुक्ति,–शुक्तिका** (ಶುಕ್ತಿ,–ಶುಕ್ತಿಕಾ) ಸ್ತ್ರೀ. ಸಂ. ಸಿಂಪು, ಚಿಪ್ಪು, ಮುತ್ತಿನ ಸಿಂಪು.

**शुक्र** (ಶುಕ್ರ) ಪು. ನವಗ್ರಹಗಳಲ್ಲಿ ಒಂದು. ೨. ವೀರ್ಯ, ಧಾತು.

**शुक्रवार** (ಶುಕ್ರವಾರ) ಪು. ಶುಕ್ರವಾರ.

**शुक्ल** (ಶುಕ್ಲ) ವಿ. ಸಂ. ಬಿಳಿಯ, ಸ್ವಚ್ಛ, ಹೊಳಪಿನ. ೨. (ಪಂಚಾಂಗ) ಶುಕ್ಲಪಕ್ಷದ ಶುದ್ಧ, ಸುದಿ.

**शुक्लकाष्ठ** (ಶುಕ್ಲಕಾಷ್ಠ) ನ. ಸಂ. ಅಡಚಣಿ, ಆತಂಕ, ದುಃಖ, ಪೀಡಕ, ತೊಂದರೆ ನೀಡುವವ.

**शुक्लपक्ष** (ಶುಕ್ಲಪಕ್ಷ) ಪು. ಶುಕ್ಲಪಕ್ಷ, ಶುದ್ಧಪಕ್ಷ, ೨. ಉನ್ನತಿ, ಪ್ರಗತಿ, ಅಭಿವೃದ್ಧಿ, ಏಳ್ಗೆ, ಸಾಗುವಿಕೆ.

**शुचि, शुचिर्भूत** (ಶುಚಿ, ಶುಚಿರ್ಭೂತ) ವಿ. ಸಂ. ಶುದ್ಧ, ಸ್ವಚ್ಛ, ನಿರ್ಮಲ, ಕಲಂಕರಹಿತ, ನಿಷ್ಪಾಪ, ಹಸನ, ಮಡಿ, ಪವಿತ್ರ, ಶುದ್ಧಮನಸ್ಸಿನ, ನಿಷ್ಪಾಪಿ.

**शुंठ** (ಶುಂಠ) ವಿ. ದಡ್ಡ, ಮೂರ್ಖ, ಪಾಷಾಣ, ಹೆಡ್ಡ, ಮದಡ, ಮಂಕು, ಟೊಣಪ. ೨. (**सुंठ**) ಶುಂಠಿ.

**शुंठी** (ಶುಂಠೀ) ಸ್ತ್ರೀ. ಶುಂಠಿ, ಖಾರಗೆಣಸು, ಅಲ್ಲ.

**शुंडा, शुंडादंड** (ಶುಂಡ, ಶುಂಡಾದಂಡ) ಸ್ತ್ರೀ. ಸಂ. ಆನೆಯ ಸೊಂಡಿಲು, ಆನೆಯ ಸೊಂಡೆ, ಆನೆಯ ಹಸ್ತ.

**शुत्** (ಶುತ್) ಅ. "**शुक**" ನೋ.

**शुद्ध** (ಶುದ್ಧ) ವಿ. ಸಂ. ಸ್ವಚ್ಛವಾದ. (ಪಂಚಾಂಗ) ಶುಕ್ಲಪಕ್ಷ. "**शुचि**" ನೋ.

**शुद्ध अपूर्णांक** (ಶುದ್ಧ ಅಪೂರ್ಣಾಂಕ) ಪು. ಸಂ. ಶುದ್ಧ ಅಪೂರ್ಣಾಂಕ, ಯಾವ ಹೆಸರೂ ಇಲ್ಲದ ಅಪೂರ್ಣಾಂಕ, $\frac{3}{4}$, $\frac{5}{6}$ ಮುಂ.

**शुद्ध पक्ष** (ಶುದ್ಧ ಪಕ್ಷ) ಪು. "**शुक्ल**" ನೋ.

**शुद्धबुद्ध** (ಶುದ್ಧಬುದ್ಧ) ಸ್ತ್ರೀ. ಸಂ. ತಿಳುವಳಿಕೆ, ಅರಿವು, ಎಚ್ಚರ.

**शुद्धवृत्ति** (ಶುದ್ಧವೃತ್ತಿ) ಸ್ತ್ರೀ. ಸಂ. ಸರಳ ಸ್ವಭಾವ, ಸರಳ ಮನಸ್ಸು, ಸ್ವಚ್ಛವರ್ತನೆ, ಪ್ರಾಮಾಣಿಕತೆ.

**शुद्ध समाचार** (ಶುದ್ಧಸಮಾಚಾರ) ಪು. ಸಂ. ಶುಭ ವಾರ್ತೆ, ಒಳ್ಳೆಯ ಸುದ್ದಿ.

**शुद्धि** (ಶುದ್ಧಿ) ಸ್ತ್ರೀ. ಸಂ. ಪಾವಿತ್ರ್ಯ, ನಿರ್ಮಲತನ, ಭಾವಶುದ್ಧಿ.

**शुद्धीवर आणणे** (ಶುದ್ಧೀವರ ಅಣಣೇ) ಕ್ರಿ.ಸ. ಎಚ್ಚರ ಗೊಳಿಸು, ಸುಧಾರಿಸು, ಸರಳ ಮಾರ್ಗಕ್ಕೆ ಹಚ್ಚು, ಬುದ್ಧಿ ಹೇಳು, ಸರಳಮಾರ್ಗಕ್ಕೆ ಹಚ್ಚು.

**शुद्धिपत्र** (ಶುದ್ಧಿಪತ್ರ) ನ. ಸಂ. ತಿದ್ದುಪಡೆ ಪುಟ, ಶುದ್ಧಿಪತ್ರ.

**शुद्धिसंस्कार** (ಶುದ್ಧಿಸಂಸ್ಕಾರ) ಪು. ಸಂ. ಶುದ್ಧಿ ಸಂಸ್ಕಾರ, ಜಾತಿಭ್ರಷ್ಟನಿಗಾಗಿ ಸಂಸ್ಕಾರ, ಜಾತಿ ಭ್ರಷ್ಟನಿಗಾಗಿ ಪುನಃ ಸ್ವಜಾತಿಯನ್ನು ಸೇರಲು ಮಾಡುವ ವಿಧಿ.

**शुनी** (ಶುನೀ) ಸ್ತ್ರೀ. ಸಂ. ಹೆಣ್ಣುನಾಯಿ, ಶುನಿ.

**शुंभ** (ಶುಂಭ) ವಿ. ದಡ್ಡ, ಜಡ, ಮಂದ, ಚಟುವಟಿಕೆ ಯಿಲ್ಲದ, ಮಂಕ, ಮೂಢ, ಮೂರ್ಖ.

**शुभ** (ಶುಭ) ವಿ. ಸಂ. ಮಂಗಲ, ಹಿತಕರ, ಸುದೈವ, ಚಲೋತನ, ಶುಭಕಾಲ, ಮಂಗಲಕರವಾದ, ಹಿತ ಕರವಾದ, ಸುದೈವಿಯಾದ, ಶುಭಕಾಲದ.

**शुभकर** (ಶುಭಕರ) ವಿ. ಸಂ. ಮಂಗಲಕರ, ಶ್ರೇಯಸ್ಕರ, ಯಶಸ್ಕರ, ಅನುಕೂಲ, ಸಹಾಯಕ.

**शुभकर्म, शुभकार्य** (ಶುಭಕರ್ಮ, ಶುಭಕಾರ್ಯ) ನ., ನ. ಸಂ. ಮಂಗಲಕಾರ್ಯ. ಗೆಲುವಿನ ಕೆಲಸ, ಉಲ್ಹಾಸದ ಸಮಾರಂಭ, ಹಬ್ಬದದಿನ.

**शुभग्रह** (ಶುಭಗ್ರಹ) ಪು. ಸಂ. ಮಂಗಲಗ್ರಹ, ಶುಭ ಗ್ರಹ, ಉತ್ತಮ ಫಲದಾಯಕಗ್ರಹ, ಶುಭತಾರೆ.

**शुभचिंतक** (ಶುಭಚಿಂತಕ) ವಿ. ಸಂ. ಕಲ್ಯಾಣಚಿಂತಕ, ಹಿತಚಿಂತಕ, ಒಳ್ಳೆಯದನ್ನು ಮಾಡುವವ.

**शुभचिन्ह, शुभलक्षण** (ಶುಭಚಿನ್ಹ, ಶುಭಲಕ್ಷಣ) ನ. ಸಂ. ಒಳ್ಳೆಯಶಕುನ, ಮಂಗಲದರ್ಶನ.

**शुभवार्ता** (ಶುಭವಾರ್ತಾ) ಸ್ತ್ರೀ. ಸಂ. ಒಳ್ಳೆಯಸುದ್ದಿ, ಆನಂದಕರವಾರ್ತೆ.

**शुभवेळ** (ಶುಭವೇಳ್) ಸ್ತ್ರೀ. ಶುಭಮುಹೂರ್ತ, ಶುಭ ಕಾಲ, ಸುಸಮಯ.

**शुभांगी** (ಶುಭಾಂಗೀ) ಸ್ತ್ರೀ. ಸುಂದರಸ್ತ್ರೀ, ರಂಭೆ, ಮಂಗಲಕರ ಅವಯವದಾಕೆ.

**शुभानन** (ಶುಭಾನನ) ಪು. ಸಂ. ಸುಂದರ, ಸುಂದರ ಮೊಗವುಳ್ಳವ.

**शुभानना** (ಶುಭಾನನಾ) ಸ್ತ್ರೀ. ಸಂ. "**शुभांगी**" ನೋ.

**शुभाशुभ** (ಶುಭಾಶುಭ) ವಿ. ಸಂ. ಒಳ್ಳೆಯ–ಕೆಡಕಿನ, ಪಾಪ–ಪುಣ್ಯ, ಹಿತ–ಅಹಿತದ. ಮಂಗಲ–ಅಮಂಗಲದ.

**शुभ्र** (ಶುಭ್ರ) ವಿ. ಸಂ. ಬಿಳಿಯ, ಸ್ವಚ್ಛ "**शुक्ल**" ನೋ.

**शुल्क** (ಶುಲ್ಕ) ನ. ಸಂ. ಸುಂಕ, ತೆರಿಗೆ, ಕರ, ಜಕಾತಿ, ವರದಕ್ಷಿಣೆ, ಕನ್ಯಾಶುಲ್ಕ.

**शुश्रूषा** (ಶುಶ್ರೂಷಾ) ಸ್ತ್ರೀ. ಸೇವೆ, ಚಾಕರಿ, ಸಹಾಯ.

**शुष्क** (ಶುಷ್ಕ) ನ. ಸಂ. ಒಣಗಿದ, ಬುದ್ಧಿಯಿಲ್ಲದ, ರಸವಿಲ್ಲದ, ನಿಸ್ತೇಜ, ರೋಗದಿಂದ ಬಡಕಾದ.

**शुष्काशुष्क** (ಶುಷ್ಕಾಶುಷ್ಕ) ವಿ. ಸಂ. ಪುಕ್ಕಟೆಯಾಗಿ, ಏನೂ ಲಾಭವಿಲ್ಲದೆ.

**शुष्कोपचार** (ಶುಷ್ಕೋಪಚಾರ) ಪು. ಸಂ. ಒಣ ಮಾತು, ಒಣಉಪಚಾರ, ಬಾಯಿಹೊಗಳಿಕೆ, ನಿರರ್ಥಕವರ್ಣನೆ.

**शूकर** (ಶೂಕರ) ಪು. ಹಂದಿ, ಹೊಲಸು ಮನುಷ್ಯ.

**शूकरी** (ಶೂಕರೀ) ಸ್ತ್ರೀ. ಹೆಣ್ಣುಹಂದಿ, ಹೊಲಸು ಹೆಂಗಸು.

**शूद्र** (ಶೂದ್ರ) ಪು. ಸಂ. ಚಾತುರ್ವರ್ಣ್ಯಗಳಲ್ಲಿ ಒಂದು, ಶೂದ್ರ, ಅಂತ್ಯಜ, ಹೊಲೆಯ, ಹರಿಜನ.

**शूद्री** (ಶೂದ್ರೀ) ಸ್ತ್ರೀ. ಶೂದರ್ವರ್ಣದಸ್ತ್ರೀ, ಕಡಿಮೆಯ ಕುಲದಾಕೆ.

**शून्य** (ಶೂನ್ಯ) ವಿ. ಸಂ. ಬರಿದಾದ, ಏನೂ ಇಲ್ಲದ, ನಿರರ್ಥಕವಾದ, ಅಭಾವದ, ಇಲ್ಲದಿರುವ.

**शून्य** (ಶೂನ್ಯ) ನ. ಸಂ. ಶೂನ್ಯ, ಏನೂ ಇಲ್ಲದ್ದು, ನಿರರ್ಥಕ, ಬರಿದಾಗಿರುವಿಕೆ, ಅಭಾವ, ಇಲ್ಲದಿರುವಿಕೆ, ವ್ಯರ್ಥವಾಗಿರುವಿಕೆ, ಬಿಂದು, ಅನುಸ್ವಾರ.

**शून्यवाद** (ಶೂನ್ಯವಾದ) ಪು. '**शून्य**' 'ಶೂನ್ಯ' ತತ್ವಜ್ಞಾನ.

**शून्याकार** (ಶೂನ್ಯಾಕಾರ) ವಿ. ಸಂ. ಶೂನ್ಯದ ಆಕಾರದ, ಏಕಾಂತದ, ನಿರ್ಜನ, ಹಾಳುಬಿದ್ದ, ದಿಕ್ಕಿಲ್ಲದ.

**शूर** (ಶೂರ) ಪು. ಸಂ. ಯೋದ್ಧ, ಜಟ್ಟಿ, ಗಟ್ಟಿಗ. ೨. ವಿ. ಧೈರ್ಯಶಾಲಿ, ಸಾಹಸಿ, ಯುದ್ಧದಲ್ಲಿ ಜಾಣನಾದ, ಜಟ್ಟಿಯೆನಿಸುವ, ಗಟ್ಟಿಗತನದ, ಧೈರ್ಯಶಾಲಿಯಾದ.

**शूर्प** (ಶೂರ್ಪ) ನ. ಸಂ. ಮೊರ, ಕಾಳುಹಸನು ಮಾಡುವ ಮೊರ.

**शूर्पनखा** (ಶೂರ್ಪನಖಾ) ಸ್ತ್ರೀ. ರಾವಣನ ತಂಗಿ, ಅಸಡ್ಡಾಳಸ್ತ್ರೀ, ಕುರೂಪಹೆಂಗಸು.

**शूल–ळ** (ಶೂಲ–ಳ್) ನ. ತೀವ್ರವೇದನೆ, ಮೊನೆಯಾದ ಮೊಳೆ. ೨. ಶೂಲ, ಗಲ್ಲು.

**शृंखला** (ಶೃಂಖಲಾ) ಸ್ತ್ರೀ. ಸಂ. ಸರಪಳಿ, ಪಾಶ, ಬಂಧನ, ಸರಪಣಿ.

**शृंखलाबंधन** (ಶೃಂಗಲಾಬಂಧನ) ನ. ಸಂ. ಸರಪಳಿಯಿಂದ ಬಿಗಿಯುವಿಕೆ, ಕಟ್ಟುವಿಕೆ, ಪಾಶದಲ್ಲಿ ಸಿಕ್ಕು ಬೀಳುವಿಕೆ.

**शृंग** (ಶೃಂಗ) ನ. ಸಂ. ಕೋಡು, ಶಿಖರ, ತುದಿ, ಕಳಸ, ಕಲ್ಲುಗುಡ್ಡ.

**शृंगार** (ಶೃಂಗಾರ) ಪು. ಸಂ. ಸಾಹಿತ್ಯದಲ್ಲಿಯ ವಿಶಿಷ್ಟ ಪ್ರಕಾರ, ಸಡಗರ, ಉಡುಪು, ಆಭರಣ, ಪ್ರೇಮ, ಪ್ರೇಮಾವಿಷ್ಕಾರ.

**शृंगारणे** (ಶೃಂಗಾರಣೇ) ಕ್ರಿ. ಸ. ಉಡುಪುಧರಿಸು, ಸಿಂಗರಿಸು, ಪ್ರೇಮಿಸು, ಅಲಂಕರಿಸು, ಚೆಂದಗೊಳಿಸು.

**शृंगारचेष्टा** (ಶೃಂಗಾರಚೇಷ್ಟಾ) ಸ್ತ್ರೀ. ಸಂ. ಶೃಂಗಾರ ಚೇಷ್ಟೆ, ಪ್ರೇಮವಿಕಾರಚೇಷ್ಟೆ, ಸ್ತ್ರೀಯರ ಪ್ರೇಮದ ಹಾವಭಾವ, ಹೆಂಗಸರ ಒನಪು, ಹೆಂಗಸರ ಒಯ್ಯಾರ, ಮುರುಕ.

**शृंगारिक** (ಶೃಂಗಾರಿಕ) ವಿ. ಸಂ. ಶೃಂಗಾರ ರಸವುಳ್ಳ, ಲಲಿತ. ೨. 'ರೋಮಾಂಟಿಕ್' (ಕಾದಂಬರಿ)

**शृगाल** (ಶೃಗಾಲ) ಪು. ಸಂ. ನರಿ.

**शृंगी** (ಶೃಂಗೀ) ವಿ. ಸಂ. ಕೋಡಿನ, ತುದಿಯುಳ್ಳ, ಕೋಡುಗಳಿದ್ದ.

**शे** (ಶೇ) ವಿ. ನೂರು, ನೂರಾರು.

**शेकडा** (ಶೇಕಡಾ) ಪು. ನೂರಕ್ಕೆ, ಪ್ರತಿಶತ, ಪ್ರತಿ ನೂರಕ್ಕೆ.

**शेकडों** (ಶೇಕಡೋ) ಕ್ರಿ. ವಿ. ಎಷ್ಟೋ, ನೂರು ಗಟ್ಟಲೆ.

**शेक** (ಶೇಕ) ಪು. ಕಾಸುವಿಕೆ, ಕಾವುಕೊಡುವಿಕೆ, ಬೆಚ್ಚಗಿಡುವಿಕೆ. ೨. ಏಟು, ಹಾನಿ.

**शेकणे** (ಶೇಕಣೇ) ಕ್ರಿ. ಸ. ಕಾಸು, ಕಾವುಕೊಡು, ಪ್ರೇರಿಸು, ಎಬ್ಬಿಸು. ೨. ಮೈಮೇಲೆ ಬರು, ಹಾನಿ ತಟ್ಟು.

**शेकशेकोटी** (ಶೇಕಶೇಕೋಟೀ) ಸ್ತ್ರೀ. ಕಾಸುವಿಕೆ-ಕಾವು ಕೊಡುವಿಕೆ, ಒತ್ತಡಕೊಡುವಿಕೆ. 'शेक' ನೋ.

**शेकशेगडी** (ಶೇಕಶೇಗಡೀ) ಸ್ತ್ರೀ. ಬಾಳಂತಿಗೆ ಕಾವು ಕೊಡುವಿಕೆ, ಬಾಣಂತಿಗೆ ಮಾಡುವ ಕಾವಿನ ಉಪ ಚಾರ, ಅಗ್ಗಿಷ್ಟಿಗೆಯ ಕಾವು.

**शेकाटणे** (ಶೇಕಾಟಣೇ) ಕ್ರಿ. ಸ. ಕಾಸು, ಕಾವು ಕೊಡು.

**शेकाटा** (ಶೇಕಾಟಾ) ಪು. ಕಾಸುವಿಕೆ, ಕಾವು, ಗಳದ ಕೋಲು.

**शेकाटी** (ಶೇಕಾಟೀ) ಸ್ತ್ರೀ. ಅಗ್ಗಿಷ್ಟಿಗೆ, ಹತ್ತಿಯ ಕಟ್ಟಿಗೆ.

**शेकार** (ಶೇಕಾರ) ಪು. ಚಪ್ಪರ, ಛಾವಣಿ, ಥಾಟು.

**शेकारणी** (ಶೇಕಾರಣೀ) ಸ್ತ್ರೀ. ಹೊದಿಸುವಿಕೆ, ಚಪ್ಪರ ಹೊದಿಸುವಿಕೆ, ಮನೆಹೊದಿಸುವಿಕೆ.

**शेकारणें** (ಶೇಕಾರಣೇ) ಕ್ರಿ. ಸ. ಮನೆಹೊದಿಸು, ಚಪ್ಪರ ಹೊದಿಸು.

**शेकावणें** (ಶೇಕಾವಣೇ) ಕ್ರಿ. ಅ. ಕಾವು ತಕ್ಕೊಳ್ಳು, ಕಾಯಿಸಿಕೊಳ್ಳು.

**शेकु-(को)टी** (ಶೇಕು-(ಕೋ)ಟೀ) ಸ್ತ್ರೀ. "**शेकाटी**" ನೋ.

**शेखर** (ಶೇಖರ) ಪು. ಸಂ. ಜುಟ್ಟು, ತುರಾಯಿ, ಹೆಡೆ, ತುದಿ, ಅದಿತುದಿ, ಪರ್ವತ ಶಿಖರ. ೨. ತುಪ್ಪಳ ಒಯ್ಯಾರ.

**शेखचिल्ली** (ಶೇಖಚಿಲ್ಲೀ) ಪು. ಹಿಂ. ಹುಚ್ಚ, ಹುಚ್ಚ ಮನುಷ್ಯ, ಅರೆಹುಚ್ಚ, ಅವಿಚಾರಿ, ಅವಿಚಾರಿ ಮನುಷ್ಯ.

**शेखी** (ಶೇಖೀ) ಸ್ತ್ರೀ. ಫಾ. ಗರ್ವ, ದುರಭಿಮಾನ, ಸೊಕ್ಕು, ಜಂಭ, ಡಾಂಭಿಕತನ.

**शेखी मिरवणे** (ಶೇಖೀಮಿರವಣೇ) ಕ್ರಿ. ಅ. ದೊಡ್ಡ ತನ ತೋರಿಸು, ಗರ್ವದಿಂದ ಮೆರೆ, ಸೊಕ್ಕಿಗೇರು, ಡಾಂಭಿಕನಾಗಿ ಮೆರೆ.

**शेखी** (ಶೇಖೀ) ಸ್ತ್ರೀ. ಫಾ. ಕಟ್ಟಕಡೆಗೆ, ಅಂತ್ಯದಲ್ಲಿ, ಕೊನೆಯಲ್ಲಿ, ತುದಿಯಲ್ಲಿ, ಕಡೆಯ ವೇಳೆಯಲ್ಲಿ.

**शेंग** (ಶೇಂಗ) ಸ್ತ್ರೀ. ಕಾಯಿ, ಬುಡ್ಡೆ, ತಬಟೆ, ಶೇಂಗಾ, ನೆಲಗಡಲೆ, ಬೈಮೂಗುಕಾಯಿ.

**शेगट** (ಶೇಗಟ್)
**शेगवा** (ಶೇಗವಾ) ಪು. } ನುಗ್ಗಿಯಕಾಯಿ.
**शेगूल** (ಶೇಗೂಲ್)

**शेगडी** (ಶೇಗಡೀ) ಸ್ತ್ರೀ. ಅಗ್ಗಿಷ್ಟಿಗೆ, ಒಲೆ.

**शेचाळ** (ಶೇಚಾಳ್) ವಿ. ನಾಲ್ವತ್ತಾರು.

**शेज** (ಶೇಜ್) ಸ್ತ್ರೀ. ಹಾಸಿಗೆ, ಶಯ್ಯಾ, ಕುಂಕುಮ ದಿಂದ ಬಿದ್ದಕಲೆ, ಅಕ್ಷತಾ ಕುಂಕುಮ.

**शेजभरणे** (ಶೇಜಭರಣೇ) ನ. ಶ್ರೇಣಿಹೆಚ್ಚು, ತರಗತಿ ಹೆಚ್ಚು.

**शेजारती** (ಶೇಜಾರತೀ) ಶಯ್ಯಾ ಆರತಿ, ದೇವರ ಶಯ ನದ ಆರತಿ.

**शेजार** (ಶೇಜಾರ) ಪು. ನೆರೆ, ನೆರೆಮನೆ, ನೆರೆಹೊರೆ, ಬದಿ, ಬಾಜು.

**शेजारपाजार** (ಶೇಜಾರ್‌ಪಾಜಾರ್) ಪು. ನೆರೆಹೊರೆ, ಅದಿಬದಿಗೆ, ಆಚೆ-ಈಚೆ, ಅತ್ತ-ಇತ್ತ.

**शेजारधर्म** (ಶೇಜಾರ್‌ಧರ್ಮ) ಪು. ನೆರೆಯವರೊಡನೆ ನಡೆಯುವ ರೀತಿ.

**शेजारी** (ಶೇಜಾರೀ) ಪು. }
**शेजारी पाजारी** (ಶೇಜಾರೀ ಪಾಜಾರೀ) ಪು. ಬಹುವ. } ನೆರೆಯವರು. ೨. ಕ್ರಿ. ವಿ. ನೆರೆಯಲ್ಲಿದ್ದ.

**शेजी** (ಶೇಜೀ) ಸ್ತ್ರೀ. ನೆರೆಹೊರೆ.

**शेट** (ಶೇಟ್) ಪು. ವ್ಯಾಪಾರಸ್ಥ, ಪೂಜ್ಯ ಮನುಷ್ಯ, ಉದ್ಯೋಗಪತಿ, ಉದ್ಯೋಗದ ಒಡೆಯರು. ೨. ನ. ಸ್ತ್ರೀ-ಪುರುಷಲಿಂಗದ ಮೇಲಿನ ಕೂದಲು.

**शेटसावकार** (ಶೇಟ್‌ಸಾವಕಾರ) ಪು. ಶೆಟ್ಟಿ ಸಾಹು ಕಾರ, ವ್ಯಾಪಾರಸ್ಥ ಗೀಪಾರಸ್ಥ.

**शेटाई** (ಶೇಟಾಈ) ಸ್ತ್ರೀ. ಸಾಹುಕಾರಿಕೆ, ವ್ಯಾಪಾರ ಉದ್ಯೋಗ, ಶೆಟ್ಟಿತನ, ಸಾಹುಕಾರನ ದೊಡ್ಡಸ್ತಿಕೆ.

**शेटाणी** (ಶೇಟಾಣೀ) ಸ್ತ್ರೀ. ಶೆಟ್ಟಿಯ ಹೆಂಡತಿ, ವ್ಯಾಪಾ ರಸ್ಥನ ಹೆಂಡತಿ.

**शेटचा** (ಶೇಟ್ಯಾ) ಪು. ವ್ಯಾಪಾರೀ ನಗರದ ಅಧಿಕಾರಿ, ನಗರಶೆಟ್ಟಿ, ಉದ್ಯಮ ಶ್ರೇಷ್ಠಿ.

**शेड** (ಶೇಡ್) ಸ್ತ್ರೀ. ತುಂಡು, ಕೋಡು, ತುಣುಕು, ಪಟ್ಟಿ, ಚೂರು, ನಾರು, ಸ್ವಭಾವ, ಸಣ್ಣಬೇರು. ೨. ಇಂ. 'ಶೆಡ್'ಗುಡಿಸಲು, ಸಪೂರವಾದ ಪಟ್ಟಿ.

**शेडा** (ಶೇಡಾ) ಪು. ಹಗ್ಗದ ತುಂಡು, ಹಗ್ಗದ ಭಾಗ, ಕಮಲದ ನಾಳ, ಕಮಲದ ದೇಟು, ಗಡಿಯಾಳದ ಸಣ್ಣ ಸರಪಳಿ.

**शेंडा** (ಶೇಂಡಾ) ಪು. ತುದಿ, ಕೊನೆ, ಶಿಖರ, ತಲೆ ಕಡೆಯಭಾಗ.

**साठी** (ಸಾಠೀ) ಸ್ತ್ರೀ. ಅರವತ್ತು ವರ್ಷದ ಅವಸ್ಥೆ, ಅರವು, ಮರೆವು, ಅರಳು-ಮರಳು ಮಾನಸಿಕ ದುರ್ಬಲತೆ.

**साठी** (ಸಾಠೀ) ಅವ್ಯಯ ಸಲುವಾಗಿ, ಅದಕ್ಕಾಗಿ, ಅದರ ಮೂಲಕ.

**साठीबुद्धि** (ಸಾಠೀಬುದ್ಧೀ) ಸ್ತ್ರೀ. ಅರವತ್ತರ ಮುಪ್ಪಿನ ಅವಸ್ಥೆಯ ಬುದ್ಧಿ, ಅರವತ್ತರ ಬುದ್ಧಿ.

**साठचाचा** (ಸಾಠ್ಯಾಚಾ) ವಿ. ಸಂ. ಕಾಯ್ದಿಡಲ್ಪಟ್ಟ, ಸಂರಕ್ಷಿತ, ಜಪ್ತಿಸಿಟ್ಟ.

**साड** (ಸಾಡ್) ಪು. ಹೃದಯ, ರಹಸ್ಯ, ಮಜ್ಜ, ಗರ್ಭ, ಹೃದಯ, ತಿಳಿಲು, ಹಣ್ಣಿನ ಒಳಭಾಗ.

**सांड** (ಸಾಂಡ್) ಪು. ಗೂಳಿ. ೨. ಉಡಾಳ. ೩. ಸ್ತ್ರೀ. ಸುರಿಸುವಿಕೆ.

**सांडणी** (ಸಾಂಡಣೀ) ಸ್ತ್ರೀ. ಹೆಣ್ಣು ಒಂಟೆ. **सांड** ನೋ.

**सांडणी स्वार** (ಸಾಂಡಣೀ ಸ್ವಾರ) ಪು. ಸಂ. ಒಂಟೆಯ ಮೇಲೆ ಕೂಡುವವ, ಒಂಟೆಯ ಮೇಲಿನ ಅಂಚೆಯಾಳು.

**सांडगा** (ಸಾಂಡಗಾ) ಪು. ಸಂಡಿಗೆ.

**सांडणे** (ಸಾಂಡಣೇ) ಕ್ರಿ. ಸ. ಚೆಲ್ಲು, ಒಗೆ, ಸೂಸು, ಚೆಲ್ಲಿಬಿಡು, ಬೀಸಾಡು, ಹೊರಚೆಲ್ಲು.

**सांडशी** (ಸಾಂಡಶೀ) ಸ್ತ್ರೀ. ಚಿಮ್ಮಟಿಗೆ, ಇಕ್ಕಳ.

**सांडस** (ಸಾಂಡಸ್) ಪು. ಇಕ್ಕಳ, ಒಂದು ಪ್ರಕಾರದ ಇಕ್ಕಳ.

**सांडासांड** (ಸಾಂಡಾಸಾಂಡ್) ಸ್ತ್ರೀ. ಚೆಲ್ಲುವಿಕೆ, ಒಗೆಯುವಿಕೆ, ಕಳೆಯುವಿಕೆ.

**साडी** (ಸಾಡೀ) ಸ್ತ್ರೀ. ಸೀರೆ, ಹೆಂಗಸರ ಉಡುಪು.

**साडू** (ಸಾಡೂ) ಪು. ಸಡ್ಡಕ, ಹೆಂಡತಿಯ ಅಕ್ಕನ, ತಂಗಿಯ ಗಂಡ.

**साडे** (ಸಾಡೇ) (ಪ್ರತ್ಯಯ) ಅರ್ಧ-'ವರೆ'- ೨. ಪು. ಬಹು. ಮದುವೆಯೊಳಗಿನ ಕಡೆಯ ವಿಧಿ.

**साडे करणे** (ಸಾಡೇ ಕರಣೇ) ಸ್ತ್ರೀ. ಕಡೆಯ ವಿಧಿ ಮಾಡು, ಮುಗಿಸು, ಅಧಿಕಾರದಿಂದ ದೂರಸರಿಸು, ಅವಮಾನಿಸು.

**साडेतीन शाहाणे** (ಸಾಡೇತೀನ ಶಾಹಾಣೇ) ಪು. ಬಹು. ಪೇಶವಾಯಿಯಲ್ಲಿಯ ಈ ನಾಲ್ಕು ಪ್ರಸಿದ್ಧ ವ್ಯಕ್ತಿಗಳು, ನಾಲ್ಕನೆಯವನಾದ ನಾನಾ ಫಡಣೀಸನಿಗೆ ಕುದುರೆ ಏರಲಿಕ್ಕೆ ಬರುತ್ತಿದ್ದಿಲ್ಲ ಆದುದರಿಂದ ಅವನು ಅರ್ಧಜಾಣ.

**साडे भावार्थी** (ಸಾಡೇ ಭಾವಾರ್ಥೀ) ವಿ. ಸ. ಸಾಧುವಿನ ವೇಷಧಾರಿ ಮೋಸಗಾರ, ಡಾಂಭಿಕ (ಸಾಧು)

**साडेसाती** (ಸಾಡೇಸಾತೀ) ಆಪತ್ಕಾಲ, 'ಶನಿ' ಏಳೂವರೆ ವರ್ಷ ರಾಶಿಗೆ ಬರುವಿಕೆ.

**सांडोसांड** (ಸಾಂಡೋಸಾಂಡ್) ಕ್ರಿ. ವಿ. ಪೂರ್ಣವಾಗಿ, ಅಂಚುಮುಟ್ಟ, ಹೊರಚೆಲ್ಲುವಂತೆ, ಸೂಸುವಷ್ಟು, ಓತಪ್ರೋತ.

**साण** (ಸಾಣ) ಸ್ತ್ರೀ. ಗಂಧದಕಲ್ಲು, ಸಾಣೆಕಲ್ಲು.

**साणा** (ಸಾಣಾ) ಪು. ಹರಿಗೋಲು, ತಾರಿ, ಕಡವು.

**साणे** (ಸಾಣೇ) ಅ. ಕಿಂಡಿ, ಗೋಡೆಯಲ್ಲಿಯ ಕಿಂಡಿ.

**सात** (ಸಾತ್) ವಿ. ಏಳು (೭)

**सातडें** (ಸಾತಡೇಂ) ಕ್ರಿ. ನ. ಚರ್ಮ, ತೊಗಲು, ಇಕ್ಕಳ.

**सातपुती** (ಸಾತಪುತೀ) ಸ್ತ್ರೀ. ಏಳುಪುತ್ರರ ತಾಯಿ, ಏಳು ಗಂಡು ಮಕ್ಕಳ ತಾಯಿ.

**सांतर** (ಸಾಂತರ) ವಿ. ಅಭ್ಯಂತರವುಳ್ಳ, ವಿಶ್ರಾಂತಿಯ.

**सातरस** (ಸಾತರಸ) ಪು. ಉತ್ತರ-ಪೂರ್ವ (ಈಶಾನ್ಯ) ಗಾಳಿ.

**सांतर स्पर्श** (ಸಾಂತರ ಸ್ಪರ್ಶ) ಪು. ಮಧ್ಯಂತರಸ್ಪರ್ಶ, ಸಂಬಂಧ.

**सात लबाड** (ಸಾತ್ ಲಬಾಡ್) ವಿ. ಭಯಂಕರ ಸುಳ್ಳಾಡುವವ, ಅಗಣಿತ ಸುಳ್ಳಾಡುವವ.

**सातवळा, सातोळा** (ಸಾತವಳಾ, ಸಾತೋಳಾ) ವಿ. ಏಳನೆಯ ತಿಂಗಳಲ್ಲಿ ಹುಟ್ಟಿದ, ಏಳರವ.

**सांतवणे** (ಸಾಂತವಣೇ) ಕ್ರಿ. ಸ. ಶಾಂತಗೊಳಿಸು, ಸಮಾಧಾನ ಪಡಿಸು, ಉಪಶಮುನಮಾಡು, ಮೆಚ್ಚಿಸು, ಸಂತೈಸು.

**सातसवाई** (ಸಾತಸವಾಈ) ವಿ. ಏಳು ಕಾಲಿನಷ್ಟು, ಹತ್ತೂವರೆ ಮಡಿ (ಸ್ಪರ್ಧೆಯಲ್ಲಿ ಆಡುವಾಗ)

**सातासायासानी** (ಸಾತಾಸಾಯಾಸಾನೀ) ಕ್ರಿ. ವಿ. ಭಗಿರಥ ಯತ್ನದಿಂದ, ಬಹಳ ಪ್ರಯತ್ನದಿಂದ.

**सातारे** (ಸಾತಾರೇ) ನ. **"सातवळा"** ನೋ. ಏಳರ ಕೂಸು, ಏಳು ತಿಂಗಳ ಕೂಸು.

**साताळशी** (ಸಾತಾಳಶೀ) ವಿ. ಬಹಳೇ ವೈಗಳ್ಳ, ಏಳು ಮಡಿ ವೈಗಳ್ಳ, ಆಲಸಿಗ.

**सातेरू** (ಸಾತೇರೂ) ನ. ಜೇನುಗೂಡು, ಜೇನುಹುಟ್ಟು, ತೊಟ್ಟಿ.

**सातू** (ಸಾತೂ) ಪು. ಸದಕ, ಬಾರ್ಲಿ, ಜವೆಗೋದಿ.

सांत्वन (ಸಾಂತ್ವನ) ನ. ಸಂ. ಸಮಾಧಾನಗೊಳಿಸುವಿಕೆ, ಉಪಶಮನ, ಮೆಚ್ಚಿಕೆ.

सात्त्विक (ಸಾತ್ವಿಕ್) ವಿ. ಸ. ಶುದ್ಧ, ಪವಿತ್ರ, ಸತ್ವವುಳ್ಳ.

साथ (ಸಾಥ್) ಸ್ತ್ರೀ. ಜತೆಗಾರಿಕೆ, ಪಾಲುಗಾರಿಕೆ. ೨. ಸ್ತ್ರೀ. ಅಂಟುರೋಗ.

साथी,-साथीदार (ಸಾಥೀ-ಸಾಥೀದಾರ್) ಪು. ಜತೆಗಾರ, ಪಾಲುಗಾರ, ಸಹಜೀವಿಕೆ, ಸಂಗತಿ.

साद (ಸಾದ್) ಪು. ಸ್ತ್ರೀ. ಕರೆಯುವಿಕೆ, ಕೂಗುವಿಕೆ, ಕೂಗು, ಓ ಅನ್ನುವಿಕೆ, ಒಪ್ಪಿಗೆ ಕೊಡುವಿಕೆ, ಮನ್ನಿಸುವಿಕೆ.

सादर (ಸಾದರ) ವಿ. ಅರ. ತಯಾರಾದ, ಗೌರವಾನ್ವಿತ, ಸಿದ್ಧ, ಅಣಿಯಾದ, ಸಜ್ಜು. ೨. ಕ್ರಿ.ವಿ.ಸಂ. ಆದರಯುಕ್ತ, ಆದರದಿಂದ, ಆದರಪೂರ್ವಕವಾಗಿ, ಬಂದುಹಾಜರಾದ.

सादर करणे (ಸಾದರ ಕರಣೇ) ಕ್ರಿ. ಸ. ಆದರದಿಂದ ಅರ್ಪಿಸು, ಸಮರ್ಪಿಸು, ಕಳುಹಿಸು, ಹೋಗಗೊಡು, ತಿಳಿಯಿಸು.

सादिलवार-री (ಸಾದಿಲ್‌ವಾರ್-ರೀ) ವಿ. ಅರ. ಕಿರುಕಳ ಖರ್ಚು, ಮೇಲಿನ ಖರ್ಚು.

सादी (ಸಾದೀ) ವಿ. ಕೂಡಿಸಿದ (ಆಳು) ವಸೂಲಿಗಾಗಿ ಬಾಗಿಲಕ್ಕೆ ಕುಳಿತವ.

सादृश्य (ಸಾದೃಶ್ಯ) ನ. ಸಂ. ಹೋಲಿಕೆ, ಉಪಮೆ, ಸಮಾನತೆ.

सांदोसांदी (ಸಾಂದೋಸಾಂದೀ) ಕ್ರಿ. ವಿ. ಮೂಲೆಮೂಲೆಯಲ್ಲಿ, ಓಣಿ ಓಣಿಗೆ, ಬೀದಿಬೀದಿಗೆ.

साद्यंत (ಸಾದ್ಯಂತ) ವಿ. ಸಂ. ಪೂರ್ಣ, ಇಡಿ, ಸಮಗ್ರ, ಕ್ರಿ. ವಿ. ಸಂಪೂರ್ಣವಾಗಿ, ಇಡಿಯ, ಸಮಗ್ರ.

सांद्र (ಸಾಂದ್ರ) ವಿ. ಸ. ಗಟ್ಟಿಯಾದ, ದೃಢವಾದ, ಜಿಗಿಜಿಗಿಯ, ಅಡಕವಾದ, ನಿಬಿಡ.

सांध (ಸಾಂಧ್) ಸ್ತ್ರೀ. ನ. ಸಂಧಿ, ಸಂದು, ಗಣ್ಣು, ಗಂಟು, ಪರು, ಸೀಳು, ಬಿರುಕು.

सांधकाम (ಸಾಂಧಕಾಮ್) ನ. ಬೆಸಿಗೆಯ ಕೆಲಸ, ಸಂಧಿಸುವಿಕೆ, ಜೋಡಿಸುವ ಕಾರ್ಯ, ಸೀಳು ಕೂಡಿಸುವಿಕೆ.

सांधणी (ಸಾಂಧಣೀ) ಕ್ರಿ. ಸ. ಬೆಸಿಕೆ, ಕೂಡಿಸುವಿಕೆ.

सांधणे (ಸಾಂಧಣೇ) ಕ್ರಿ. ಸ. ಬೆಸೆ, ಜೋಡಿಸು, ಸಂಧಿಸು, ಬೆಸಿಕೆ ಹಾಕು.

सांधण (ಸಾಂಧಣ್) ನ. सांधकाम ನೋ.

साधक (ಸಾಧಕ) ವಿ. ಕೈಗೂಡಿಸುವವ, ಪೂರ್ಣ ಮಾಡುವವ, ಕೊನೆಗಾಣಿಸುವವ, ಕಾರಣೀಭೂತನಾಗುವ, ಭಕ್ತಿಯನ್ನು ಮಾಡುವವ.

साधक बाधक (ಸಾಧಕ ಬಾಧಕ) ವಿ. ಸಂ. ಅನುಕೂಲ-ಪ್ರತಿಕೂಲದ, ಉಪಯೋಗಿ-ನಿರುಪಯೋಗಿ.

साधणूक (ಸಾಧಣೂಕ್) ಸ್ತ್ರೀ. ಸಾಧಿಸುವಿಕೆ, सांधकाम ನೋಡಿರಿ.

साधणे (ಸಾಧಣೇ) ಕ್ರಿ. ಸ. ಸಾಧಿಸು, ಕೈಗೂಡಿಸಿಕೊಳ್ಳು, ಆಚರಿಸು, ಸಾಧಿಸು, ಜಯಹೊಂದು, ಪೂರ್ಣ ಮಾಡು.

साधन (ಸಾಧನ) ನ. ಸಂ. ಸಾಹಿತ್ಯ, ಉಪಕರಣ.

साधनपत्र (ಸಾಧನಪತ್ರ) ನ. ಸಂ. ಕರಾರಿನ ಪತ್ರ, ಕರಾರಿನ ಕಾಗದ, ಉಪಕರಣಗಳ ಯಾದಿ, ದಸ್ತಾವೇಜು, ಕಾಗದ ಪತ್ರ.

साधना (ಸಾಧನಾ) ಸ್ತ್ರೀ. ಸಂ. ಯೋಗ, ತಪಶ್ಚರ್ಯೆ, ಸಾಧನೆ.

साधनिका (ಸಾಧನಿಕಾ) ಸ್ತ್ರೀ. ಸಂ. ಸಾಧನಮಾಡುವ ಶಾಸ್ತ್ರ.

साधनी (ಸಾಧನೀ) ಸ್ತ್ರೀ. ಲಂಬಕ, ಕೆಲಸಗಾರರ ಅಳತೆಯ ನೂಲು ಗುಂಡು.

साधनीय (ಸಾಧನೀಯ) ವಿ. ಸಂ. ಸಾಧಿಸಬಹುದಾದ, ಸಾಧಿಸತಕ್ಕ, ಸಾಧಿಸಲು ಯೋಗ್ಯ, ಸಂಪಾದಿಸತಕ್ಕ.

साधर्म्य (ಸಾಧರ್ಮ್ಯ) ನ. ಸಂ. ಗುಣಸಮಾನತೆ, ಧರ್ಮಸಮಾನತೆ.

साधलाद-ध (ಸಾಧಲಾದ್-ಧ್) ವಿ. ಅದೃಷ್ಟ, ದೈವ, ಭಾಗ್ಯ, ದೆಸೆ, ಪರಿಸ್ಥಿತಿ.

साधा (ಸಾಧಾ) ವಿ. ಸಂ. ಸರಳ, ಸಾದಾ, ಜೋಳೆ, ನಿಷ್ಕಪಟ, ಕೇವಲ, ಸಾಧಾರಣ.

सांधा (ಸಾಂಧಾ) ಪು. ಕೀಲು, ಸಂಧಿ, ಸಂದು, ಗಣ್ಣು, ಸಂದಕಟ್ಟು.

सांधा लचकणे (ಸಾಂಧಾ ಲಚಕಣೇ) ಕ್ರಿ. ಅ. ಕೀಲು, ಕೀಲುಸರಿ, ಕೀಲುಬದಿಗಾಗು, ಸಂದಿಸರಿ.

सांधा सुटणे (ಸಾಂಧಾ ಸುಟಣೇ) ಕ್ರಿ. ಸಂ. ಕೀಲು ಬಿಚ್ಚು, ಕೀಲು ಬೇರೆಯಾಗು, ಸಂದಿ ಬಿಚ್ಚು, ಜೋಡಣೆ ಬದಿಯಾಗು.

सांधासांध (ಸಾಂಧಾಸಾಂಧ) ಸ್ತ್ರೀ. ಕೂಡಿಸುವಿಕೆ-ಜೋಡಿಸುವಿಕೆ, ಹೊಂದಿಸುವುದು, ಬೆಸೆಯುವುದು, ದುರಸ್ತು, ಸರಿಪಡಿಪಡಿಸುವಿಕೆ.

**साधारण** (ಸಾಧಾರಣ) ವಿ. ಸಂ. ವಾಡಿಕೆಯ, ಕಾಲ ಕಸವಾದ, ಸಾಮಾನ್ಯ.

**साधारणधर्म** (ಸಾಧಾರಣಧರ್ಮ) ಪು. ಸಂ. ಸಾಮಾನ್ಯ ವಾಡಿಕೆ, ಸಾಮಾನ್ಯಗುಣ.

**साधारणपक्ष** (ಸಾಧಾರಣಪಕ್ಷ) ಪು. ಸಂ. ಸಾಮಾನ್ಯ ವ್ಯವಸ್ಥೆ, ಸರ್ವಸಂಬಂಧಿತ ವ್ಯವಸ್ಥೆ, ಸಾಮಾನ್ಯ ವಿಭಾಗ.

**साधित** (ಸಾಧಿತ) ವಿ. ಸಂ. ಪ್ರಾಪ್ತವಾದ, ಸಾಧಿಸಿದ, ಅನ್ಯಪ್ರಾಪ್ತ, ಪರರಿಂದ ತಕ್ಕೊಂಡ, ಸಂಪಾದಿತ.

**सांधी** (ಸಾಂಧೀ) ಸ್ತ್ರೀ. ಒಡಕು, ಬಿರುಕು, ಸಂದು, ಕೀಲು.

**सांधीकोंदी** (ಸಾಂಧೀಕೋಂದೀ) ಸ್ತ್ರೀ. ಸಂದಿಗೊಂದಿ, ಮೂಲೆಮೂಲೆ, ಕೀಲು–ಕುಣಿಕೆ.

**सांधीचा** (ಸಾಂಧೀಚಾ) ವಿ. ಸಂ. } ಮೂಲೆ, ಕತ್ತ
**सांधीतला** (ಸಾಂಧೀತಲಾ) ವಿ. } ಲೆಯ, ಅಸ್ಪಷ್ಟ, ಅವ್ಯಕ್ತ, ಗೂಢ, ಪ್ರಸಿದ್ಧಿ ಇಲ್ಲದ.

**सांधीव** (ಸಾಂಧೀವ) ವಿ. ಬೆಸೆದ, ಜೋಡಿಸಿದ, ಸಂಧಿಸಿದ.

**साधु** (ಸಾಧು) ಪು. ಸಂ. ಪವಿತ್ರಮನುಷ್ಯ, ವಿ. ಯೋಗ್ಯ, ಪವಿತ್ರ.

**साधुशील** (ಸಾಧುಶೀಲ) ವಿ. ಪವಿತ್ರ, ಪವಿತ್ರಾಚರಣೆಯ.

**साधुसंत** (ಸಾಧುಸಂತ) ಪು. ಬಹುವ. ಸಾಧು–ಭಕ್ತ, ಸಾಧು ಸತ್ಪುರುಷ, ಸಾಧು ಸನ್ಯಾಸಿ.

**सांधोसांधी** (ಸಾಂಧೋಸಾಂಧೀ) ಕ್ರಿ. ವಿ. ಮೂಲೆ ಮೂಲೆಗೆ, ಸರ್ವತ್ರ, ಎಲ್ಲ ಕಡೆಗೆ.

**साध्य** (ಸಾಧ್ಯ) ವಿ. ಸ. ಸಾಧಿಸತಕ್ಕ, ಮಾಡಬೇಕಾದ, ಸಂಪಾದನೀಯ, ದೊರಕಿಸಬಹುದಾದ, ಗಳಿಸ ಬಹುದಾದ.

**साध्याभ्युपगम** (ಸಾಧ್ಯಾಭ್ಯುಪಗಮ್) ಪು. ಸಂ. ಪ್ರಶ್ನೆ ಉತ್ಪನ್ನ ಮಾಡುವಿಕೆ, ವಿರೋಧಕ್ಕೆ ಆಸ್ಪದ ಕೊಡು ವಿಕೆ.

**साध्वी** (ಸಾಧ್ವೀ) ಸ್ತ್ರೀ. ಸಜ್ಜನ ಸ್ತ್ರೀ, ಪವಿತ್ರ ಮಹಿಳೆ, ಸಾಧುಸತಿ, ಪತಿವ್ರತೆ.

**सांध्य** (ಸಾಂಧ್ಯ) ವಿ. ಸಂ. ಸಂಜೆಯ ಸಂಬಂಧದ.

**सान–साना** (ಸಾನ್–ಸಾನಾ) ವಿ. ಸಣ್ಣ, ಚಿಕ್ಕ, ಕಿರಿ, ಚಿನ್ನೆ, ಪುಟ್ಟ, ಎಳೆಯ.

**सानक** (ಸಾನಕ) ಸ್ತ್ರೀ. ಸಣ್ಣ ತಟ್ಟೆ, ಸಣ್ಣ ತಾಟು.

**सानुकंप** (ಸಾನುಕಂಪ) ವಿ. ಸಂ. ದಯಾಶೀಲ, ದಯಾಳು, ಕರುಣಾಳು, ಕನಿಕರವುಳ್ಳ.

**सानुनासिक** (ಸಾನುನಾಸಿಕ) ವಿ. ಸಂ. ಮೂಗಿಗೆ ಸಂಬಂಧಿಸಿದ, ನಾಸಿಕ್ಯ.

**सानुस्वार** (ಸಾನುಸ್ವಾರ) ವಿ. ಸಂ. ಅನುಸ್ವಾರ ಮಯ, ಅನುಸ್ವಾರವುಳ್ಳ, ಬಿಂದುಕೂಡಿದ.

**सांनिध्य** (ಸಾಂನಿಧ್ಯ) ನ. ಸಂ. ನೆರೆ, ಸಾಮಿಪ್ಯ, ಸಮೀಪ ಪ್ರದೇಶ, ಹತ್ತಿರ.

**सांनिपातिक** (ಸಾಂನಿಪಾತಿಕ) ವಿ. ಸಂ. ನಾನಾವಿಧ, ಸಂಕೀರ್ಣ, ಬಗೆಬಗೆಯ, ತೊಡಕುತೊಡಕಾದ.

**साप** (ಸಾಪ್) ಪು. ಹಾವು, ಸರ್ಪ.

**सापट** (ಸಾಪಟ್) ಸ್ತ್ರೀ. "**सांध**" ನೋ.

**सापट** (ಸಾಪಟ್) ವಿ. ಸಂ. ಅಮಂಗಲ, ಕೆಟ್ಟ, ಹೊಲಸು, ಬಂಡು, ಮಲಿನ, ಅನ್ಯಾಯದ.

**सापड** (ಸಾಪಡ್) ಸ್ತ್ರೀ. ಒಕ್ಕಲುತನ, ಒಕ್ಕಲುತನದ ಪದ್ಧತಿ, ಕೃಷಿರೀತಿ, ಒಕ್ಕಲುತನದ ಕೆಲವು ನಿಯಮ ಗಳು.

**सापडणे** (ಸಾಪಡಣೇ) ಕ್ರಿ. ಸ. ಸಿಗು, ಸಿಕ್ಕಿಬೀಳು, ಸಿಗುಬೀಳು.

**सांपत्तिक** (ಸಾಂಪತ್ತಿಕ) ವಿ. ಸ. ಸಂಪತ್ತಿಯ, ಸಂಪತ್ತಿಗೆ ಸಂಬಂಧಿಸಿದ, ಆರ್ಥಿಕ, ಪ್ರಾಪಂಚಿಕ.

**सापत्न** (ಸಾಪತ್ನ) ವಿ. ಸ. ಮಲತಾಯಿ ಸಂಬಂಧದ. "**सावत्र**" ನೋ.

**सापत्नभाव** (ಸಾಪತ್ನಭಾವ) ಪು. ಸಂ. ಸವತಿಯರ ಭಾವನೆ. "**सावत्रभाव**" ನೋ.

**सापसारणे** (ಸಾಪಸಾರಣೇ) ಕ್ರಿ. ನ. ವ್ಯವಸ್ಥೆಮಾಡು, ಸುತ್ತು, ಮುಗಿಸು, ಚಾಪಿಸುತ್ತು.

**सापळा** (ಸಾಪಳಾ) ಪು. ನ. ಬಲೆ, ಇಲಿಯಬಲೆ, ಬೋನು, ಉಲರ್ಶಿ, ಯುಕ್ತಿ, ಅಸ್ಥಿಪಂಜರ, ಎಲುಬಿನ ಗೂಡು, ಕಂಕಾರ, ಬಹಿರಾಕೃತಿ, ರಚನೆ.

**सापळ्यात सापडणें** (ಸಾಪಳ್ಯಾತ ಸಾಪಡಣೇ) ಕ್ರಿ. ಅ. ಬಲೆಯಲ್ಲಿ ಬೀಳು, ಬಲೆಯಲ್ಲಿ ಸಿಗು, ಬೋನಿನಲ್ಲಿ ಸಿಕ್ಕಿಬೀಳು.

**सापळा होणें–वळणे** (ಸಾಪಳಾಹೋಣೇ–ವಳಣೇ) ಕ್ರಿ. ಅ. ಅಸ್ಥಿಪಂಜರವಾಗು, ತೀರಸೊರಗು.

**सापिका** (ಸಾಪಿಕಾ) ಸ್ತ್ರೀ. ನ. ದುಡ್ಡು, ತೀರ ಕಿರಿ ನಾಣ್ಯ, ತೀರಚಿಕ್ಕನಾಣ್ಯ, ರೊಕ್ಕ, ಭೂಮಿಯ ಆಳ ತೆಯ ಸಾಧನ, ಸರಪಳಿ.

**सापेक्ष** (ಸಾಪೇಕ್ಷ) ವಿ. ಸಂ. ಆಶೆಯುಳ್ಳ, ಆಕಾಂಕ್ಷೆ ಯುಳ್ಳ, ಪಡೆಯಬಹುದಾದ, ಅಪೇಕ್ಷಿತ, ಸರಿ ನೋಡುವಂತಹ, ತುಲನಾತ್ಮಕ, ಸಂಬಂಧವುಳ್ಳ, ವಿಷಯಕ.

**सापेक्षी** (ಸಾಪೇಕ್ಷೀ) ವಿ. ಸಂ. ಸುಜ್ಞ, ಜಾಣ, ಸೂಕ್ಷ್ಮ.

**साप्ताहिक** (ಸಾಪ್ತಾಹಿಕ) ವಿ. ನ. ನಿಯತಕಾಲಿಕ, ವಾರದ, ವಾರಪತ್ರಿಕೆ.

**सांप्रत** (ಸಾಂಪ್ರತ) ವಿ. ಸಂ. } ಸದ್ಯಕ್ಕೆ,
**सांप्रतकाळीं** (ಸಾಂಪ್ರತಕಾಳೀಂ) ಕ್ರಿ. ವಿ. } ಈಗ.

**सांप्रदायिक** (ಸಾಂಪ್ರದಾಯಿಕ) ವಿ. ಸಂ. ಪದ್ಧತಿ, ವಾಡಿಕೆ, ರೂಢಿ, ಚತುರ್ಥಿ ವಿಭಕ್ತ್ಯರ್ಥ, ಕೊಡುವಿಕೆ, ವಾಕ್‌ಸಂಪ್ರದಾಯ, ನುಡಿಗಟ್ಟು, ವಾಕ್ಯರಚನೆ, ಪದ್ಧತಿಯ, ವಾಡಿಕೆಯುಳ್ಳ, ರೂಢಿಯ, ವಾಕ್‌ಸಂಪ್ರದಾಯದ, ವಿಶಿಷ್ಟ ವಾಕ್ಯರಚನೆಯ.

**साफ** (ಸಾಫ) ವಿ. ಅರ. ಸ್ವಚ್ಛ, ಶುದ್ಧ, ಪವಿತ್ರ, ರೋಗರಹಿತ, ಮೃದು ಸರಳ, ಸ್ವಚ್ಛವಾಗಿ, ಶುದ್ಧವಾಗಿ, ಪವಿತ್ರವಾಗಿ, ಸರಳವಾಗಿ.

**साफल्य** (ಸಾಫಲ್ಯ) ನ. ಸಂ. ಸಫಲತೆ, ಕೈಗೂಡುವಿಕೆ, ಸಾಧ್ಯವಾಗುವಿಕೆ.

**साफसफा** (ಸಾಫಸಫಾ) **साफ** ನೋ.

**साफसफाई** (ಸಾಫಸಫಾಈ) ವಿ. ಕ್ರಿ. ಸ್ವಚ್ಛತೆ, ಶುದ್ಧಿ, ಪಾವಿತ್ರ್ಯ, ರೋಗರಾಹಿತ್ಯ, ಮೃದುತ್ವ.

**साफी** (ಸಾಫೀ) ಸ್ತ್ರೀ. ನ. ಸ್ವಚ್ಛತೆ, ಪವಿತ್ರತೆ.

**सांब** (ಸಾಂಬ್) ಪು. ಶಿವನ ಹೆಸರು, ಸರಳಮನುಷ್ಯ.

**सावडा** (ಸಾಬಡಾ) ವಿ. ಸರಳ, ಸಾದಾ, ನಿಷ್ಕಪಟ.

**सावण** (ಸಾಬಣ) ಪು. ನ. ( ಸಬಕಾರ, ಸಾಬಾಣ,
**साबू** (ಸಾಬೂ) ಪು. ( ಸಬ್ಬು, ಚಬಕಾರ, ( ಸೋಪು.

**सांबर** (ಸಾಂಬರ) ಪು. ಸಂಬರ, ಕಡವೆ, ಒಂದು ಜಾತಿಯ ಎರಳೆ.

**सांबा(भा)रे** (ಸಾಂಬಾ(ಭಾ)ರೇ) ನ. ಕ. ಹುಳಿ, ಸಂಬಾರ, ಹುಳಿ ಬೇಳೆ.

**साबर** (ಸಾಬರ) ನ. ಅರ. ಮಂತ್ರ, ಇಂದ್ರಜಾಲ, ಪಿಶಾಚಿವಿದ್ಯೆ, ಕಣ್ಣುಕಟ್ಟು, ಮಾಟ, ಯಕ್ಷಿಣಿ, ಅಭಿಚರಣ, ಮಂತ್ರ.

**साबरी** (ಸಾಬರೀ) ವಿ. ಅರ. ಮಂತ್ರಿತ, ಐಂದ್ರಜಾಲಿಕ, ಪೈಶಾಚ, ಕಣ್ಣುಕಟ್ಟಿನ, ಮಾಟದ.

**साबी(बू)त** (ಸಾಬೀ(ಬೂ)ತ್) ವಿ. ಅರ. ಗಟ್ಟಿ, ಸ್ಥಿರ, ಸ್ಪಷ್ಟ, ಕುಂದಿಲ್ಲದ, ಸುರಕ್ಷಿತ, ಗಟ್ಟಿ, ಸಿದ್ಧವಾದ. ೨. ಸಿದ್ಧವಾದ.

**साभरी** (ಸಾಭಾರೀ) ವಿ. ಸಹಾಯಕನು, ಸಹಾಯ ಮಾಡುವವನು, ಉಪಕಾರಿ, ಆಧಾರವಾಗಿರುವವನು.

**साभास** (ಸಾಭಾಸ್) ವಿ. ರೂಪುವುಳ್ಳ, ಸಾಕಾರದ, ಆಭಾಸಮಯ.

**सांभाळ** (ಸಾಂಭಾಳ್) ಪು. "**संभाळ**" ನೋ.

**सांभाळणे** (ಸಾಂಭಾಳಣೇ) ಕ್ರಿ. ಸಂ. '**संभाळणे**' ನೋ.

**साभिमान** (ಸಾಭಿಮಾನ್) ವಿ. ಹೆಮ್ಮೆಯಿಂದ, ಗರ್ವದಿಂದ. ೨. ವಿ. ಅಭಿಮಾನಿ.

**साम** (ಸಾಮ್) ನ. ಸಂ. ಮೂರನೆಯವೇದ, ಮನವೊಲಿಸುವಿಕೆ, ನಾಲ್ಕು ಉಪಾಯಗಳಲ್ಲಿ ಮೊದಲನೆಯದು, (ಸಾಮ, ದಾನ, ದಂಡ, ಭೇದ) ಸಮಾಧಾನ, ವಿರೋಧಿಗಳನ್ನು ಒಲಿಸುವಿಕೆ.

**सामका** (ಸಾಮಕಾ) ಕ್ರಿ. ವಿ. ಎದುರಿಗೆ, ಸಮ್ಮುಖ, ಸಮಕ್ಷಮ.

**सामग्री** (ಸಾಮಗ್ರೀ) ಸ್ತ್ರೀ. ಸಾಹಿತ್ಯ, ಸಾಮಾನ, ಉಪಕರಣ, ಮುಟ್ಟು.

**सामग्र्य** (ಸಾಮಗ್ರ್ಯ) ನ. ಸಂ. ಸಂಪೂರ್ಣತೆ, ಪೂರ್ಣತ್ವ, ಇಡಿಯತನ.

**सामंत** (ಸಾಮಂತ) ಪು. ಸಂ. ಸಂಸ್ಥಾನಿಕ, ಮಾಂಡಲಿಕ.

**सामता** (ಸಾಮತಾ) ಪು. ಬಡಿಗನ ಉಪಕರಣ, ಉಳಿ, ಕೊಡತಿ.

**सामना** (ಸಾಮನಾ) ಪು. ಎದುರಾಗುವಿಕೆ ೨. ಪಂದ್ಯ, ಮಲ್ಲಯುದ್ಧ, ಜಟ್ಟಿಕಾಳಗ.

**सामयिक** (ಸಾಮಯಿಕ) ವಿ. ಸಂ. ಸಮಯಕ್ಕೆ ಸರಿಯಾದ, ಹಂಗಾಮದ ನಿಯಮಿತ, ಕರಾರಮಾಡಿದ, ಕರಾರ ಹಾಕಿದ.

**सामरिक** (ಸಾಮರಿಕ) ವಿ. ಸಂ. ಯುದ್ಧಸಂಬಂಧದ, ಯುದ್ಧ ವಿಷಯದ.

**सामर्थ्य** (ಸಾಮರ್ಥ್ಯ) ನ. ಸಂ. ಶಕ್ತಿ, ಬಲ, ಯೋಗ್ಯತೆ.

**सामर्थ्यवान्–वंत** (ಸಾಮರ್ಥ್ಯವಾನ್–ವಂತ್) ವಿ. ಸಂ. ಶಕ್ತಿಯುಳ್ಳ, ಬಲವುಳ್ಳ, ಯೋಗ್ಯತೆಯುಳ್ಳ, ಕಸುವಿನ.

**सामलात** (ಸಾಮಲಾತ್) ಸ್ತ್ರೀ. ಅರ. ಪಾಲುಗಾರಿಕೆ, ಜೊತೆಗಾರಿಕೆ.

**सामवाइक–यिक** (ಸಾಮವಾಇಕ–ಯಿಕ) ವಿ. ಸಂ. ಕೂಡಿಯಿದ್ದ, ಸಮೂಹದ, ಸಾಮೂಹಿಕ.

**सामसूम** (ಸಾಮಸೂಮ) ಸ್ತ್ರೀ. ಶಾಂತತೆ, ನಿಶ್ಶಬ್ದತೆ, ಶೂನ್ಯತೆ, ಸಪ್ಪಳವಿಲ್ಲದಿರುವಿಕೆ. ೨. ಕ್ರಿ. ವಿ. ಗಲಾಟೆಯಿಲ್ಲದ, ಯಿಲ್ಲದೆ.

**सामायिक** (ಸಾಮಾಯಿಕ) ವಿ. ಸಮಯದ ವೇಳೆಗೆ ತಕ್ಕ.

**सामाइक भांडवल** (ಸಾಮಾಯಿಕ ಭಾಂಡವಲ್) ನ. ಸಾಮಾನ್ಯ ಮೂಲಧನ, ಸಾಮಾನ್ಯ ಬಂಡವಾಳ, ಸಾಮೂಹಿಕ ಬಂಡವಾಳ.

**सामाइक भांडवलदारी** (ಸಾಮಇಕ್ ಭಾಂಡವಲ ದಾರೀ) ಸ್ತ್ರೀ. ಸಮೂಹದ ಬಂಡವಲದ ಪಾಲು ಗಾರಿಕೆ, ಸಾಮಾನ್ಯ ಮೂಲಧನದ ಪಾಲುಗಾರಿಕೆ.

**सामाइक भांडवलाची मंडळी** (ಸಾಮಾಇಕ್ ಭಾಂಡವ ಲಾಚೀ ಮಂಡಳೀ) ಸ್ತ್ರೀ. ಸಾಮೂಹಿಕ ಬಂಡವಲದ ಮಂಡಲ–ಸಂಘ.

**सामाजिक** (ಸಾಮಾಜಿಕ) ವಿ. ಸಂ. ಸಮಾಜಕ್ಕೆ ಸಂಬಂಧಿಸಿದ, ಸಮಾಜಕ್ಕೆ ಒಳಪಟ್ಟ, ವಾಡಿಕೆಯ, ಸಾಂಪ್ರದಾಯಿಕ, ರೂಢಿಬದ್ಧ, ಸಮಾಜದ.

**सामान, सामानसुमान** (ಸಾಮಾನ, ಸಾಮಾನ ಸುಮಾನ್) ನ. ಸಂ. ಉಪಕರಣ, ಸಾಧನ, ಮುಟ್ಟು, ಸರಕು, ಹತ್ಯಾರ, ಸರಕುಸಾಮಾನ, ವಸ್ತು ಒಡವೆ.

**सामान्य** (ಸಾಮಾನ್ಯ) ನ. ಸಾಧಾರಣ, ಸಮಾನತೆ, **"साधारण"** ನೋ.

**सामान्यतः** (ಸಾಮಾನ್ಯತಃ) ಕ್ರಿ. ವಿ. ಸಾಮಾನ್ಯ ವಾಗಿ, ಸಾಧಾರಣವಾಗಿ, ವಾಡಿಕೆಯಂತೆ, ರೂಢಿ ಗನುಸರಿಸಿ.

**सामान्यनाम** (ಸಾಮಾನ್ಯನಾಮ) ನ. ಸಂ. ರೂಢ ನಾಮ (ವ್ಯಾಕರಣದಲ್ಲಿ)

**सामान्यरूप** (ಸಾಮಾನ್ಯರೂಪ) ನ. ಸಂ. ಪ್ರತ್ಯಯ ಕೂಡಿದ ಮೇಲೆ ಆಗುವ ನಾಮರೂಪಭೇದ, ವಿಭಕ್ತಿ ಪ್ರತ್ಯಯಗಳು ಹತ್ತುವಾಗ ಆಗುವ ನಾಮದ ವಿಕಾರ (ವ್ಯಾಕರಣದಲ್ಲಿ).

**सामान्य सर्वनाम** (ಸಾಮಾನ್ಯ ಸರ್ವನಾಮ) ನ. ಸಂ. ಸರ್ವನಾಮ ಭೇದ (ವ್ಯಾಕರಣದಲ್ಲಿ).

**सामावणे** (ಸಾಮಾವಣೇ) ಕ್ರಿ. ಅ. ಹಿಡಿಸು, ಒಳ ಸೇರಿಸಿಕೊಳ್ಳು.

**सामाशी** (ಸಾಮಾಶೀ) ವಿ. ಷಾಣ್ಮಾಸಿಕ, ಆರು ತಿಂಗಳ. ೨. ಆರುಮಾಸಿ ತೂಕದ.

**सामासिक** (ಸಾಮಾಸಿಕ) ವಿ. ಸಂ. ಕೂಡಿದ, ಸಮಾ ಸಾತ್ಮಕ, ಅನೇಕ ಭಾಗಗಳು ಕೂಡಿದ.

**सामीप्य** (ಸಾಮೀಪ್ಯ) ನ. ಸಂ. ನೆರೆ, ಸಾನ್ನಿಧ್ಯ, ಸಮೀಪತ್ವ, ಹೊಂದಿಕೆ, ಸಂಬಂಧ.

**सामील** (ಸಾಮೀಲ್) ವಿ. ಅರ. ಸೇರಿದ, ಕೂಡಿದ, ಭಾಗವಹಿಸಿದ.

**सामुदायिक** (ಸಾಮುದಾಯಿಕ) ವಿ. ಸಂ. ಎಲ್ಲರಿಗೂ ಸಂಬಂಧಿಸಿದ. **"सामुदाहिक"** ನೋ.

**सामुद्र** (ಸಾಮುದ್ರ) ವಿ. ಸಂ. ಸಾಗರಿಕ, ಸಮುದ್ರ ಸಂಬಂಧದ, ಅಂಗೈಯ ಮೇಲಿನ ಚಿಹ್ನೆ–ಕಲೆ–ಗುರುತು.

**सामुद्रधुनी** (ಸಾಮುದ್ರಧುನೀ) ಸ್ತ್ರೀ. ಜಲಸಂಧಿ, ಇಕ್ಕಟ್ಟು, ಎರಡು ಸಮುದ್ರ ಕೂಡಿಸುವ ಕಿರಿಯಗ ಲುಳ್ಳ ನೆಲಪಟ್ಟಿ.

**सामुद्रिक** (ಸಾಮುದ್ರಿಕ) ನ. ಸಂ. ಸಾಮುದ್ರಿಕ ಶಾಸ್ತ್ರ, ಹಸ್ತಸಾಮುದ್ರಿಕೆ, ಹಸ್ತಸಾಮುದ್ರಿಕ ಶಾಸ್ತ್ರಜ್ಞ.

**सामोपचार, सामोपाय** (ಸಾಮೋಪಚಾರ, ಸಾಮೋ ಪಾಯ) ಪು. ಸಂ. ಸಮಾಧಾನ, ವಿರೋಧಿ ಪಕ್ಷದ ಮನ ಒಲಿಸುವಿಕೆ, ಸಂಧಾನ.

**सामोरा** (ಸಾಮೋರಾ) ವಿ. ಎದುರಾಗಿ, ಮುಂಭಾಗದಲ್ಲಿ.

**साम्य** (ಸಾಮ್ಯ) ನ. ಸಂ., **साम्यता** (ಸಾಮ್ಯತಾ) ಸ್ತ್ರೀ. ಸಂ. ಹೋಲಿಕೆ, ಹೊಂದಿಕೆ, ಸಮಾನತೆ, ಏಕ ರೂಪತೆ, ಸಾದೃಶ್ಯ, ಸರಳತೆ, ಸಮಪಾತಳಿ.

**साम्राज्य** (ಸಾಮ್ರಾಜ್ಯ) ನ. ಸಂ. ಸಮ್ರಾಟನ ರಾಜ್ಯ, ವಿಶಾಲರಾಜ್ಯ.

**साय** (ಸಾಯ) ಸ್ತ್ರೀ. ಕೆನೆ.

**सायक** (ಸಾಯಕ) ಪು. ಸಂ. ಬಾಣ, ಶರ, ಕೋಲು, ಅಂಬು.

**सायंकाळ** (ಸಾಯಂಕಾಳ್) ಸ್ತ್ರೀ. ಸಂಜೆ, ಸಂಜೆಯ ಹೊತ್ತು.

**सायान्ह, –ण्ह** (ಸಾಯಾನ್ಹ, –ಣ್ಹ) ಪು. ಮೂರು ಸಂಜೆ, ಅಪರಾಹ್ಣ.

**सायटी** (ಸಾಯಟೀ) ಸ್ತ್ರೀ. ತಿಳುವುಕೆನೆ, ನುಣುಪುಮೈ.

**सायर** (ಸಾಯರ) ಸ್ತ್ರೀ. ಗೆರೆ, ಪಂಕ್ತಿ, ಸಾಲು, ಪರಂಪರೆ.

**सायरा** ಸಾಯರಾ) ಪು. ತಿಳುವಾದ ಪೊರೆ, ಚಲಚಿತ್ರ ಪಟ್ಟಿ, ಭಾವ ಚಿತ್ರಗಳ ತಯಾರಿಕೆಗೆ ಬೇಕಾಗುವ ಪರೆಯ ಪಟ್ಟಿ.

**सायरी** (ಸಾಯರೀ) ಸ್ತ್ರೀ. ವಿಶಿಷ್ಟ ಜಾತಿಯ ಗಿಡ.

**सायवान** (ಸಾಯವಾನ) ನ.ಫಾ. ಗುಡಾರ, ಮೇಲಾರ, ಆಸರೆ, ಮಂಟಪದ ಇಳಿಜಾರಾದ ಮುಂಭಾಗ.

**सायास** (ಸಾಯಾಸ್) ಪು. ಬಹುವ. ಖಟಪಟಿ, ಕಷ್ಟ, ದಣಿವು.

**सायाळ** (ಸಾಯಾಳ್) ಸ್ತ್ರೀ. ಮುಳ್ಳುಹಂದಿ, ಆ ಹಂದಿಯ ಮುಳ್ಳು, ಗರಿ.

**सायुज्य** (ಸಾಯುಜ್ಯ) ನ. ಸಂ. ಬ್ರಹ್ಮಸಾಮೀಪ್ಯ.

**सायुध** (ಸಾಯುಧ) ವಿ. ಸ. ಶಸ್ತ್ರಾಸ್ತ್ರಗಳುಳ್ಳ, ಶಸ್ತ್ರಾಸ್ತ್ರಗಳಿಂದ ಸುಸಜ್ಜಿತ.

**सार** (ಸಾರ) ನ. ಸಂ. ರಹಸ್ಯ, ತಾತ್ಪರ್ಯ, ಗುಟ್ಟು, ತಿರುಳು, ಸತ್ವ.

**सारक** (ಸಾರಕ) ವಿ. ಸಂ. ಭೇದಿ ಮಾಡುವ, ಭೇದಿಯ ಔಷಧ.

**सारखा** (ಸಾರಖಾ) ವಿ. ಹೊಂದುವ, ಹೋಲುವ, ಏಕರೂಪದ, ಸರಿಜೋಡಿಯ, ಸಮಾನಾಕಾರದ, ಸರಿಸಮ, ಈಡಾದ, ಸಮಾನ ಬಲದ, ಯೋಗ್ಯ ಸಮಜತೆಯ.

**सारखावणे** (ಸಾರಖಾವಣೇ) ಕ್ರಿ. ವಿ. ಒಂದೇ ರೀತಿಯಾಗಿ, ಒಂದೇ ಸವನೆ, ಅವಿರತೆ, ಸರಿಮಾಡು, ಹೊಂದಿ, ಸಮಬಲವಾಗಿ ಮಾಡು, ಸಮಾನಬಲದವನಾಗಿರು.

**सारंग** (ಸಾರಂಗ) ಪು. ಸಂ. ಸಂಗೀತದಲ್ಲಿಯ ಒಂದು ರಾಗ, 'ಸಾರಂಗ' ರಾಗ, ಎರಳೆ, ಚಿಗರೆ. ಚಿತ್ರ ವಿಚಿತ್ರ, ವಿವಿಧ ವರ್ಣಗಳ, ಬಹುಬಣ್ಣಗಳ.

**सारंगपाट** (ಸಾರಂಗಪಾಟ್) ಪು. ಚದುರಂಗದ ಆಟ, ಪಗಡೆಯ ಆಟ, ದ್ಯೂತದ ಆಟ, ಲೆತ್ತದ ಆಟ.

**सारंगा** (ಸಾರಂಗಾ) ವಿ. (ಕುದುರೆಯ) ಒಂದು ಬಣ್ಣದ, ಕಪ್ಪು ಬಣ್ಣದ, ಶಾಮವರ್ಣದ.

**सारंगी** (ಸಾರಂಗೀ) ಸ್ತ್ರೀ. ಹಿಂ. ಸಾರಂಗೀ ವಾದ್ಯ.

**सारजा** (ಸಾರಜಾ) ಸ್ತ್ರೀ. ಸರಸ್ವತಿಯ ಹೆಸರು.

**सारण** (ಸಾರಣ) ನ. ಕಡಬು, ಕರಚೀಕಾಯಿಯ ಒಳಗೆ ತುಂಬುವ ಸಕ್ಕರೆ ಕೊಬ್ಬರಿ. ೨. ಮಸಾಲೆ. ೩. ಜಲಪ್ರಪಾತ, ನೀರಿನಓಪ, ಸೆಳವು.

**सारणी** (ಸಾರಣೀ) ಸ್ತ್ರೀ. ಸಂಖ್ಯಾಪಟ, ಸಂಖ್ಯೆಯ ಪಟ, ಸಂಖ್ಯೆಯತಕ್ತೆ. ೨. ಕಾಲುವೆ, ನಳಿಗೆ, ದೊಡ್ಡ. ೩. ಬಲೆ, ಜಾಳಿಗೆ, ದೊಡ್ಡಕಲ್ಲಿ.

**सारणे** (ಸಾರಣೇ) ಕ್ರಿ. ವಿ. ಮುಂದೆ ಮಾಡು, ಮುಂದೆ ಸರಿ, ಮುಂದೆ ಹೋಗು, ತೀರಿಸು, ನಾಶಮಾಡು, ಕಡಿದು ಬಿಡು, ಹಾಳುಮಾಡು, ಬೇಗನೆ ಕಳುಹಿಸಿ ಕೊಡು.

**सारथी** (ಸಾರಥೀ) ಪು. ಸಂ. ರಥ ನಡೆಯಿಸುವವ, ಮುಂದಾಳು, ಆಧಾರ ಕೊಡುವವ.

**सारथ्य** (ಸಾರಥ್ಯ) ನ. ಸಂ. ರಥ-ನಡೆಯಿಸುವವನ ಕರ್ತವ್ಯ, ಧರ್ಮ. ೨. ಸಹಾಯ, ಸಹಕಾರ್ಯ.

**सारभोक्ता** (ಸಾರಭೋಕ್ತಾ) ಪು. ಸಂ. ಪರರಯತ್ನದ ಫಲ ಉಣ್ಣುವವ, ಪರಪುಷ್ಟಕಾಯದ, ಪರೋಪಜೀವಿ

**सारमंडळ** (ಸಾರಮಂಡಳ) ನ. ಸಂಗೀತದ ಒಂದು ತಂತು ವಾದ್ಯ.

**सारल्य** (ಸಾರಲ್ಯ) ನ. ಸಂ. ಸರಳತನ, ಸರಳತೆ, ನ್ಯಾಯ, ನೀತಿಮತ್ತೆ, ಪ್ರಾಮಾಣಿಕತೆ, ನಿಷ್ಕಾಪಟ್ಯ, ಸಭ್ಯತನ.

**सारवण** (ಸಾರವಣ) ಕ್ರಿ. ನ. ಕ. ಸಾರಿಸುವಿಕೆ, ತೋರಿಕೆಯ ಸೊಬಗು.

**सारवणे** (ಸಾರವಣೇ) ಕ್ರಿ. ಸಂ. ಸಾರಿಸು.

**सारवत** (ಸಾರವತ್) ನ. ಗಿಡಗಳ ಕಾಡಿಗೆ ರೋಗ, ವನಸ್ಪತಿಯ ಕಾಡಿಗೆ ರೋಗ, ಗಿಡಗಳ ನಾಶ, ಎಲೆ ಉದರುವ ರೋಗ.

**सारवान्** (ಸಾರವಾನ್) ಪು. ಫಾ. ೧. ಕಾರವಾನ. ೨. ವಿ. ಸಂ. ಸತ್ವವುಳ್ಳ, ಒಂಟೆಯ ಸ್ವಾರ.

**सारस** (ಸಾರಸ) ಪು. ಒಂದು ಪಕ್ಷಿ, ಭಾರಎತ್ತುವ ಯಂತ್ರ.

**सारसी** (ಸಾರಸೀ) ಸ್ತ್ರೀ. ಹೆಣ್ಣು ಸಾರಸ ಪಕ್ಷಿ, ಹೆಣ್ಣು ಬಕಪಕ್ಷಿ,

**सारस्वत** (ಸಾರಸ್ವತ) ಪು. ಸಂ. ಬ್ರಾಹ್ಮಣರ ಒಂದು ಉಪಜಾತಿ, ಆ ಜಾತಿಯ ಮನುಷ್ಯ.

**सारा** (ಸಾರಾ) ಪು. ಕಣ್ಣಿನಲ್ಲಿ ಬೆಳೆದ ಪರದೆ, ಆವರಣ. ೨. ಪು. ಕರ, ತೆರಿಗೆ. ೩. ವಿ. ಎಲ್ಲ, ಸಂಪೂರ್ಣ.

**सारांश** (ಸಾರಾಂಶ) ಪು. ಸಂ. ರಹಸ್ಯ, ತಥ್ಯ, ನಿರ್ಣಯ, ಸಾರ, ಸಾರಾಂಶದ ಭಾವ. ೨. ಕ್ರಿ. ವಿ. ಸ್ವಲ್ಪದರಲ್ಲಿ, ಸಾರಾಂಶವಾಗಿ.

**सारासार** (ಸಾರಾಸಾರ್) ವಿ. ಸಂ. ಯೋಗ್ಯಾಯೋಗ್ಯ (ವಿಚಾರ) ೨. ಸ್ತ್ರೀ. ದುರ್ಲಕ್ಷ.

**सारासुदीस** (ಸ್ಸಾರಾಸ್ಸುದೀಸ್) ಕ್ರಿ. ವಿ. ಇಡೀ ದಿನದೊಳಗೆ.

**सारिका** (ಸಾರಿಕಾ) ಸ್ತ್ರೀ. ಸಂ. ಒಂದು ಪಕ್ಷಿ, ಮೈನಾ.

**सारूप्य** (ಸಾರೂಪ್ಯ) ನ. ಸಂ. ಸಾದೃಶ್ಯ, ಹೋಲುವಿಕೆ, ಹೊಂದುವಿಕೆ, ನಾಲ್ಕು ಪ್ರಕಾರಗಳ ಮುಕ್ತಿಗಳಲ್ಲಿ ಒಂದು ಪ್ರಕಾರ, ಸಾರೂಪ್ಯ ಮುಕ್ತಿ.

**सारेकरी** (ಸಾರೇಕರೀ) ಪು. ಸಂ. ತೆರಿಗೆ ಕೊಡುವವ, ಕರತುಂಬುವವ.

**सारोख, सारूख** (ಸಾರೋಖ್, ಸಾರೂಖ್) ವಿ. ಪತ್ತುಳ್ಳ, ಚಲೋಪತ್ತಿನ, ಕುಶಲತನದ, ಕೌಶಲ್ಯದ, ಸ್ವಂತ ಜಾಣ್ಮೆ ತೋರಿಸುವ ಕೌಶಲ್ಯದ, ಸ್ವಂತ ಕೌಶಲ್ಯದರ್ಶಕ ಜಾಣ್ಮೆಯ.

**सार्थ** (ಸಾರ್ಥ) ವಿ. ಸಂ. ಅರ್ಥ ಸೂಚಿಸುವ, ಅರ್ಥ ಸಹಿತವಾದ, ವಾಸ್ತವಿಕವಾದ, ನಿಜವಾದ, ಅಢ್ಯ, ಗಟ್ಟಿ, ಮಜಬೂತಾದ, ಸಮಾನಾರ್ಥದ. ನ. ಮರಳು ಗಾಡಿನಲ್ಲಿ ಪ್ರಯಾಣ ಮಾಡುವವರ ಗುಂಪು, ಚಲಿಸುವ ಮನೆ.

**सार्थक** (ಸಾರ್ಥಕ) ವಿ. ಸಂ. ತೃಪ್ತಿಕರ, ಫಲದಾಯಕ.

**सार्थकी लावणे** (ಸಾರ್ಥಕೀ ಲಾವಣೇ) ಕ್ರಿ. ಸ. ಸದುಪಯೋಗಮಾಡು, ಉಪಯೋಗಕ್ಕೆ ಹಚ್ಚು, ಯೋಗ್ಯವಾಗಿ ಉಪಯೋಗಿಸು.

**सार्थक्य** (ಸಾರ್ಥಕ್ಯ) ನ. ಸಂ. ಯಶಸ್ಸು, ಸಿದ್ಧಿ, ಸಾಧನೆ, ವಿದ್ಯೆ, ಸಮಾಪ್ತಿ, ಸಫಲ.

**सार्द्र** (ಸಾರ್ದ್ರ) ವಿ. ಸಂ. ಒದ್ದೆಯಾದ, ತೇವವಾದ, ಹಸಿಯ, ಮಳೆಯ, ನೆನೆದ, ತೊಯ್ದ, ಒದ್ದೆಯಾದ.

**सार्ध** (ಸಾರ್ಧ) ವಿ. ಸಂ. ಅರ್ಧದಿಂದ ಹೆಚ್ಚುಮಾಡಿದ, ಅರ್ಧ ಬೆಳೆಯಿಸಿದ.

**सार्व** (ಸಾರ್ವ) ವಿ. ಸಂ. ಎಲ್ಲರಿಗೂ ಸಂಬಂಧಪಟ್ಟ.

**सार्वकाल** (ಸಾರ್ವಕಾಲ) ವಿ. ಸಂ. ಯಾವಾಗಲೂ, ಎಲ್ಲ ವೇಳೆಯಲ್ಲಿ, ಸರ್ವದಾ, ಸದಾ, ನಿತ್ಯವೂ, ಕಡೆತನಕ.

**सार्वकालिक** (ಸಾರ್ವಕಾಲಿಕ) ವಿ. ಸಂ. ಎಲ್ಲ ಕಾಲ ಸಂಬಂಧದ.

**सार्वजनिक** (ಸಾರ್ವಜನಿಕ) ನ. ಸಂ.
**सार्वत्रिक** (ಸಾರ್ವತ್ರಿಕ) ವಿ. ಸಂ. } ಎಲ್ಲಾ ಕಡೆಯ, ಇಡಿ, ಸರ್ವಸಾಧಾರಣ.

**सार्वभौतिक** (ಸಾರ್ವಭೌತಿಕ) ವಿ. ಎಲ್ಲ ಪ್ರಾಣಿ ಸಂಬಂಧದ.

**सार्वभौम** (ಸಾರ್ವಭೌಮ) ಪು. ಸಂ. ಮಹಾರಾಜ, ರಾಜಾಧಿರಾಜ. ೨. ವಿ. ಸ್ವತಂತ್ರ, 'ಸಾವರಿನ್', ಇಡೀ ಜಗತ್ತಿನ.

**सार्वलौकिक** (ಸಾರ್ವಲೌಕಿಕ) ವಿ. "**सार्वजनिक**" ನೋ.

**साल** (ಸಾಲ) ನ. ಫಾ. ವರುಷ, ವರ್ಷ. ೨. ಸ್ತ್ರೀ. ತೊಗಟೆ, ತೋಟೆ, ತೊಗಲು, ಸಿಪ್ಪೆ.

**सालगुदस्त** (ಸಾಲಗುದಸ್ತ) ನ. ಸಂ. ಹೋದ ವರ್ಷ, ಕಳೆದ ವರ್ಷ.

**सालट–ड** (ಸಾಲಟ-ಡ್) ನ. ಕಾಳು ಇಲ್ಲವೆ ಬೀಜದ ಸೊಪ್ಪೆ, ತಾಡು.

**सालदरसाल** (ಸಾಲದರಸಾಲ) ಕ್ರಿ. ವಿ. ಫಾ. ಪ್ರತಿ ವರ್ಷ, ವರ್ಷವರ್ಷಕ್ಕೆ.

**सालपट** (ಸಾಲಪಟ್) ನ. "**साल**" ನೋ.

**सालबंदी** (ಸಾಲಬಂದೀ) ಸ್ತ್ರೀ. ಫಾ. ತೆರಿಗೆ ತುಂಬುವ ಕಾಲ, ತೆರಿಗೆ ತುಂಬುವ ಮುದ್ದತ್ತು, ಕರದ ಅವಧಿ, ತೆರಿಗೆಯ ಗಡುವು.

**सालबेगमी, –बेजमी** (ಸಾಲಬೇಗಮೀ,– ಬೇಜ್‌ಮೀ) ಸ್ತ್ರೀ. ಫಾ. ವಾರ್ಷಿಕ ಸಂಗ್ರಹ, ವರ್ಷದ ಸಂಗ್ರಹ.

**सालबोली** (ಸಾಲಬೋಲೀ) ಸ್ತ್ರೀ. ವರ್ಷದ ಕರಾರು, ವರ್ಷದ ಮಾತು, ವಾರ್ಷಿಕ ಕರಾರು.

**सालमजकूर** (ಸಾಲಮಜಕೂರ) ಪು. ಚಾಲೂ ವರ್ಷ, ನಡೆಯುವ ವರ್ಷ.

**सालमिश्री –सालंमिश्री** (ಸಾಲಮಿಶ್ರೀ –ಸಾಲಂಮಿಶ್ರೀ) ಸ್ತ್ರೀ. ಸಾಲಾಮಿಶ್ರಿಯ ಬೇರಿನ ಚೂರ್ಣ.

**सालवार** (ಸಾಲವಾರ) ಕ್ರಿ. ವಿ. ವರ್ಷವರ್ಷಕ್ಕೆ.

**सालवारी** (ಸಾಲವಾರೀ) ಸ್ತ್ರೀ. ಇಡೀ ವರ್ಷದ ಅನುಕ್ರಮಿಕ ವರದಿ.

**सालस** (ಸಾಲಾಸ್) ವಿ. ಸ. ಪ್ರಾಮಾಣಿಕ, ದೋಷರಹಿತ, ಸಭ್ಯ.

**सालसपणा** (ಸಾಲಸ್‌ಪಣಾ) ಪು. **सालसी, सालसाई** (ಸಾಲಸೀ, ಸಾಲಸಾಈ) ಸ್ತ್ರೀ. ಪ್ರಾಮಾಣಿಕತನ, ದೋಷವಿಲ್ಲದಿರುವಿಕೆ, ಸಭ್ಯತೆ.

**साला** (ಸಾಲಾ) ಪು. ಸಂ. ಹೆಂಡತಿಯ ಅಣ್ಣ ತಮ್ಮ, ತಂಗಿಯ ಅಥವಾ ಅಕ್ಕನಗಂಡ.

**सालिना** (ಸಾಲಿನಾ)
**सालोसाल** (ಸಾಲೋಸಾಲ್) ಕ್ರಿ. ವಿ. } ಪ್ರತಿವರ್ಷ.

**साव** (ಸಾವ) ಪು. ಸಭ್ಯ, ಸಾಧು, ಪ್ರಾಮಾಣಿಕ, ಬ್ಯಾಂಕಿನ ಮ್ಯಾನೇಜರ, ಸರಾಫ, ಸಾವಕಾರ.

**सावकार** (ಸಾವಕಾರ) ಪು. ಶ್ರೀಮಂತ, ಧನವಂತ, ಬ್ಯಾಂಕಿನ ಮ್ಯಾನೇಜರ, ದುಡ್ಡಿನ ವ್ಯವಹಾರಸ್ಥ.

**सावकारी** (ಸಾವಕಾರೀ) ಸ್ತ್ರೀ. ಸಾವುಕಾರಿಕೆ, ಸರಾಫಿಯ ವ್ಯವಹಾರ, ಸಾಲಕೊಡುವ ವ್ಯವಸಾಯ.

**सावकाश** (ಸಾವಕಾಶ) ಕ್ರಿ. ವಿ. ಸಾವಕಾಶವಾಗಿ, ಮಂದವಾಗಿ, ನಿಧಾನವಾಗಿ.

**सावकाशी** (ಸಾವಕಾಶೀ) ಸ್ತ್ರೀ. ಸಾವಕಾಶ ನಡಿಗೆ, ಮಂದಗತಿ, ನಿಧಾನತೆ.

**सावकाशीने–घेणे** (ಸಾವಕಾಶೀನೇ–ಘೇಣೇ) ನಿಧಾನವಾಗಿ ತಕ್ಕೊಳ್ಳು, ಸಾವಕಾಶವಾಗಿ ತಕ್ಕೊಳ್ಳು, ಎಳಕೊಳ್ಳು.

**सावचित** (ಸಾವಚಿತ) ವಿ. ಜಾಗೃತ, ಸಾವಧಾನ, ಹುಷಾರ, ಬಲ್ಲವ, ಅರಿತ.

**सावज–द** (ಸಾವಜ–ದ) ನ. ಕಾಡುಪ್ರಾಣಿ, ಅಡವಿಯ ಪಶು, ಕಾಡುಮೃಗ, ಬೇಟೆಯ ಪಶು.

**सावट** (ಸಾವಟ) ನ. ನೆರಳು, ಕತ್ತಲೆ. ೨. ನೆರಳಿನ ಸ್ಥಳ, ನೆರಳು ಕೊಡುವ ಜಾಗೆ. ೩. ಕ್ರಿ. ವಿ. ಒಮ್ಮೆಲೆ.

**सावड** (ಸಾವಡ್) ಸ್ತ್ರೀ. ಪರಸ್ಪರ ಸಹಾಯ, ಅನ್ಯೋನ್ಯ ಸೇವೆ, ಪರಸ್ಪರ ವಿನಿಮಯ, ಅದಲು ಬದಲು ಸೇವೆ.

**सावत्र** (ಸಾವತ್ರ) ವಿ. ಮಲತಾಯಿಯ, ಮಲತಾಯಿಗೆ ಸಂಬಂಧಿಸಿದ, ಸವತಿಯ ಭಾವದ, ಸವತಿ ಭಾವನೆ, ನ. ಸವತಿ ಮತ್ಸರ.

**सावत्रभाऊ** (ಸಾವತ್ರಭಾಊ) ಪು. ಮಲ ಅಣ್ಣ–ತಮ್ಮ.

**सावत्रभाव** (ಸಾವತ್ರಭಾವ) ಪು. ಸ್ತ್ರೀಯರ ಸವತಿಯ ಮಕ್ಕಳ ವಿಷಯದ ಭಾವನೆ.

**सांवत्सर–रिक** (ಸಾಂವತ್ಸರ–ರಿಕ) ವಿ. ಸಂ. ವಾರ್ಷಿಕ, ಪ್ರತಿವರ್ಷದ.

**सावध** (ಸಾವಧ) ವಿ. ಎಚ್ಚರಿಕೆಯುಳ್ಳ, ಅರಿವುಳ್ಳ, ಪರಿಸ್ಥಿತಿ ತಿಳಿದುಬರುವ, ಎಚ್ಚರ, ಜಾಣ, ಜಾಗರೂಕ, ತತ್ಪರ, ಏಕ ಚಿತ್ತದ, ಲಕ್ಷ್ಯಗೊಡುವ.

**सावधगिरी** (ಸಾವಧಗಿರೀ) ಸ್ತ್ರೀ. ಎಚ್ಚರಿಕೆ, ಅರಿವು, ಪರಿಸ್ಥಿತಿ, ತತ್ಪರತೆ, ಏಕಚಿತ್ತ, ಲಕ್ಷ್ಯ, ಜಾಗರೂಕತೆ.

**सावधान** (ಸಾವಧಾನ) ನ. ಸಂ. ಎಚ್ಚರ, ಎಚ್ಚರಿಕೆ.

**सावधि–धिक** (ಸಾವಧಿ –ಧಿಕ) ವಿ. ಸಂ. ಅವಧಿಯುಳ್ಳ, ತಡವಿದ್ದ.

**सावन** (ಸಾವನ್) ವಿ. ಸಂ. ಸೂರ್ಯನ, ಸೌರ, ಪ್ರಾಕೃತಿಕ, ಸ್ವಾಭಾವಿಕ.

**सावपणा** (ಸಾವಪಣಾ) ಪು. ಪ್ರಾಮಾಣಿಕತೆ, ಸರಳತೆ, ಋಜುತೆ, ಸತ್ಯತೆ.

**सावयव** (ಸಾವಯವ) ವಿ. ಸಂ. ಅವಯವವುಳ್ಳ, ಭಾಗಗಳುಳ್ಳ.

**सावर** (ಸಾವರ) ನ. ಸ್ತ್ರೀ. ನರ, ಸ್ನಾಯು, ಬಲ, ಕಸುವು.

**सांवर** (ಸಾಂವರ್) ಪು. ಶಕ್ತಿ ತಿರುಗಿ ಪಡೆಯುವಿಕೆ, ಸ್ವಸ್ಥಿತಿಗೆ ಬರುವಿಕೆ.

**सावर–री** (ಸಾವರ–ರೀ) ಸ್ತ್ರೀ. ಬೂರಲ ಗಿಡ.

**सावरणे** (ಸಾವರಣೇ) ಕ್ರಿ. ಸ. ನೆಟ್ಟಗೆಮಾಡು, ವ್ಯವಸ್ಥಿತಪಡಿಸು.

**सावर्ण्य** (ಸಾವರ್ಣ್ಯ) ನ. ಸಂ. ವರ್ಣದ ಸಮಾನತೆ, ಅದೇ ಜಾತಿ, ಅದೇವರ್ಗ, ಅದೇಬಣ್ಣ.

**सावली** (ಸಾವಲೀ) ಸ್ತ್ರೀ. ನೆರಳು, ಛಾಯೆ, ಆಶ್ರಯ, ಬಿಂಬ, ಛಾಯೆ, ಮರೆ.

**सावली पडणे** (ಸಾವಲೀ ಪಡಣೇ) ಕ್ರಿ. ಅ. ನೆರಳು ಬೀಳು, ಎರಡನೆಯವರ ನೆರಳುಬೀಳು, ಗ್ರಹಣ ಹತ್ತು. ೨. ಪರಿಣಾಮವಾಗು (ಕೆಟ್ಟವನ).

**सावलीसउभा न राहणे** (ಸಾವಲೀಸ್ ಉಭಾ ನ ರಾಹಣೇ) ಕ್ರಿ. ಅ. ನೆರಳಿನಲ್ಲಿಯೂನಿಲ್ಲದಿರು, ತೀರದೂರವಾಗಿರು.

**सावली पायाखाली येणे** (ಸಾವಲೀ ಪಾಯಾಖಾಲೀ ಯೇಣೇ) ಕ್ರಿ. ಅ. ಮಧ್ಯಾಹ್ನವಾಗು, ನೆರಳು ಕಾಲಕೆಳಗೆ ಬರು.

**सावशेष** (ಸಾವಶೇಷ) ವಿ. ಸಂ. ಅವಶೇಷಯುಕ್ತ, ಉಳಿದದ್ದು, ಅವಶೇಷದಿಂದ ಸಹಿತವಾದ, ಬಾಕಿಯಿಂದ ಸಹಿತವಾದ ಉಳಿದುದು.

**सावळणे** (ಸಾವಳಣೇ) ಕ್ರಿ. ಅ. ಸುಧಾರಿಸು, ಸಂಭಾವಿತನಾಗು.

**सावळा** (ಸಾವಳಾ) ವಿ. ಸಾದುಗಪ್ಪಾದ, ಸಾದಗಪ್ಪಾದ, ಸಾಧಾರಣ ಬಣ್ಣವುಳ್ಳ.

**सावळागोंधळ** (ಸಾವಳಾ ಗೋಂಧಳ್) ಪು. ಗೊಂದಲ, ತೊಡಕು, ಗಡಿಬಿಡಿ, ಹುಚ್ಚು ಗೊಂದಲ, ಮನಸ್ಸು ಬೆರಗಾಗುವಿಕೆ.

**सावळी** (ಸಾವಳೀ) ಸ್ತ್ರೀ. ಅಡಿಕೆಯ ಗಿಡದ ಎಲೆ, ಅಡಿಕೆಯ ಗಿಡದ ಸಣ್ಣ ಎಲೆ.

**सावा** (ಸಾವಾ) ಪು. ಒಂದು ತರದ ಕಾಳು, ಸಾವಿಯ ಕಾಳು, ಸಾಗವಾನೆ ಗಿಡ.

**सावित्री** (ಸಾವಿತ್ರೀ) ಸ್ತ್ರೀ. ಸಂ. ಸಾವಿತ್ರಿ, ಗಂಡನ ಪ್ರಾಣವನ್ನು ಮರಳಿ ಪಡಕೊಂಡ ಸತಿ.

**साशंक** (ಸಾಶಂಕ್) ವಿ. ಸಂ. ಅನುಮಾನ ಪಡುವ, ನಂಬದ, ಖಾತ್ರಿಯಿಲ್ಲದ.

**साष्टांग** (ಸಾಷ್ಟಾಂಗ) ವಿ. ಸಂ. ಎಂಟೂ ಅವಯವ ಸಹಿತವಾದ, ಉದ್ದ (ಪ್ರಣಾಮ).

**सासपणे** (ಸಾಸಪಣೇ) ಕ್ರಿ. ಸ. ಕೈಯಾಡಿಸು, ತಡವರಿಸು, ಸವರಾಡು, ನೇವರು, ತಡಕಾಡು.

**सासर** (ಸಾಸರ) ನ. ಮಾವನ ಮನೆ.

**सासरीं एकादशी माहेरी शिवरात्र** (ಸಾಸರೀ ಎಕಾದಶೀ ಮಾಹೇರೀ ಶಿವರಾತ್ರ) (ಗಾದೆಯ ಮಾತು) ಅತ್ತೆಯ ಮನೆಯಲ್ಲಿ ಏಕಾದಶಿ, ತೌರು ಮನೆಯಲ್ಲಿ ಶಿವರಾತ್ರಿ. (ಎರಡೂ ಕಡೆಗೆ ಬಡತನ)

**सासरा** (ಸಾಸರಾ) ಪು. ಗಂಡನ-ಹೆಂಡತಿಯ ತಂದೆ, ಮಾವ.

**सासष्ट** (ಸಾಸಷ್ಟ) ವಿ. ಸಂ. ಅರವತ್ತಾರು.

**सांसारिक** (ಸಾಂಸಾರಿಕ) ವಿ. ಸಂ. ಸಾಂಸಾರಿಕ, ಸಂಸಾರಕ್ಕೆ ಸಂಬಂಧಿಸಿದ, ಐಹಿಕ, ಲೌಕಿಕ, ಭೌತಿಕ, ಮನೆಯ, ಸಂಸಾರದ.

**सांसिद्धिक** (ಸಾಂಸಿದ್ಧಿಕ) ವಿ. ಮೂಲದ, ಸಹಜ, ನಿಜ, ನೈಸರ್ಗಿಕ, ಸ್ವಾಭಾವಿಕ, ಹುಟ್ಟು, ಸೃಷ್ಟಿಯ.

**सासुरवाड –वाडी** (ಸಾಸುರವಾಡ್ –ವಾಡೀ) ಸ್ತ್ರೀ. ಅತ್ತೆಯ ಮನೆ, ಹೆಂಡತಿಯ ತವರು ಮನೆ.

**सासुरवाशी–सी–ण** (ಸಾಸುರವಾಶೀ–ಸೀ–ಣ್) ಸ್ತ್ರೀ. ಅತ್ತೆಯ ಮನೆಯಲ್ಲಿರುವ ಸ್ತ್ರೀ.

**सासुरवास** (ಸಾಸುರವಾಸ್) ಪು. ಅತ್ತೆಯ ಮನೆಯಲ್ಲಿರುವಿಕೆ, ಮಾವನ ಮನೆಯ ವಾಸ. ೨. ಕಾಟ, ಕೆಟ್ಟ ರೀತಿ ನಡಾವಳಿ.

**सासू** (ಸಾಸೂ) ಸ್ತ್ರೀ. ಅತ್ತೆ, ಗಂಡನ ತಾಯಿ.

**सास्ना** (ಸಾಸ್ನಾ) ಸ್ತ್ರೀ. ಗಂಗೆದೊಗಲು.

**साहंकार** (ಸಾಹಂಕಾರ) ವಿ. ಸಂ. ಗರ್ವದಿಂದ ಕೂಡಿದ, ಉದ್ಧತ, ಉದ್ದಾಮ, ಸೊಕ್ಕಿನ, ಅಹಂಕಾರದ, ಬಿಂಕದ.

**साहचर्य** (ಸಾಹಚರ್ಯ) ನ. ಸಂ. ಕೂಡಿ ಬಾಳುವಿಕೆ, ಕೂಡಿ ನಡೆಯುವಿಕೆ, ಕೂಡಿ ಇರುವಿಕೆ, ಸಹವಾಸ, ಜತೆ, ಗೆಳೆತನ.

**साहजिक** (ಸಾಹಜಿಕ) ವಿ. ಸಂ. ಸಹಜವಾದ, ಸ್ವಾಭಾವಿಕ, ನೈಸರ್ಗಿಕ, ಸಾದಾ, ಲಾಭಕರ, ಆಕಸ್ಮಿಕ, ಆಗಂತುಕ, ಸ್ವಯಂ ಸ್ಫೂರ್ತಿ.

**साहणे** (ಸಾಹಣೇ) ಕ್ರಿ. ನ. ಸಹನಮಾಡು, ತಾಳಿಕೊಳ್ಳು, ಸಹಿಸು. ೨. ಗೋಡೆಯೊಳಗಿನ ಕಿಂಡಿ, ಬೆಳಕಿಂಡಿ.

**साहन** (ಸಾಹನ) ವಿ. ಸ. ಸಣ್ಣ, ಚಿಕ್ಕ, ಕಿರಿ, ಅಲ್ಪ, ಎಳೆಯ.

**साहस** (ಸಾಹಸ) ನ. ಸಂ. ಧೈರ್ಯ, ಸಾಹಸ, ದುಡುಕು.

**साहसिक** (ಸಾಹಸಿಕ) ವಿ. ಸಂ. ದುಡುಕಿನ, ಅವಿಚಾರದ.

**साहसी** (ಸಾಹಸೀ) ವಿ. ಸಂ. ಅಜಾಗರೂಕ, ದುಡುಕುವ, ಧೈರ್ಯಶಾಲಿ.

**साहस्र** (ಸಾಹಸ್ರ) ವಿ. ಸಂ. ಸಾವಿರ ಸಂಖ್ಯೆಯ ಸಂಬಂಧದ.

**साहा** (ಸಾಹಾ) ವಿ. ಆರು.

**साहा महिन्याची जांभई** (ಸಾಹಾ ಮಹಿನ್ಯಾಚೀ ಜಾಂಭಈ) ಸ್ತ್ರೀ. ನ್ಯಾಯಾಲಯದಲ್ಲಿ ಕೊಳೆಯುತ್ತ ಬಿದ್ದ ಕೆಲಸ, ಕುಂಭಕರ್ಣನ ನಿದ್ದೆ.

**साहाय्य, साह्य** (ಸಾಹಾಯ್ಯ, ಸಾಹ್ಯ) ನ. ಸಂ. ಸಹಜೀವನ, ಸಹಾಯ, ಸಹಚರ್ಯೆ.

**साहित्य** (ಸಾಹಿತ್ಯ) ನ. ಸಂ. ಉಪಕರಣ, ಸಾಧನ, ಸಾಮಾನು, ಸಾಹಿತ್ಯ, ವಾಙ್ಮಯ.

**साहित्य शास्त्र** (ಸಾಹಿತ್ಯ ಶಾಸ್ತ್ರ) ನ. ವಾಙ್ಮಯ ಶಾಸ್ತ್ರ.

**साहून पाहून** (ಸಾಹೂನ್ ಪಾಹೂನ್) ಕ್ರಿ. ವಿ. ವಿಚಾರ ಮಾಡಿ, ನೋಡಿ-ಗೀಡಿ, ಹೇಳಿ-ಕೇಳಿ, ಹಾನಿಗೆ ಸಿದ್ಧವಾಗಿ.

**साहेब** (ಸಾಹೇಬ) ಪು. ಅರ. ಒಡೆಯ. ೨. ಹಿರಿಯ ಅಧಿಕಾರಿ, ವರಿಷ್ಠ. ೩. ಯರೋಪಿಯನ್ ಮನುಷ್ಯ, ಪರದೇಶದ ಮನುಷ್ಯ.

**साहोत्रा** (ಸಾಹೋತ್ರಾ) ನೂರಕ್ಕೆ ಆರುರೂಪಾಯಿ ಬಡ್ಡಿ.

**साह्यभूत** (ಸಾಹ್ಯಭೂತ) ವಿ. ಸಂ. ಸಹಾಯ ಮಾಡುವ, ಲಾಭಕರ, ಉಪಕಾರಿ.

**साळ** (ಸಾಳ) ಸ್ತ್ರೀ. ಶಾಲೆ, ಮಠ, ಕಾರಖಾನೆ, ಸ್ಥಲ, ಕರಡು. (ಕುಟ್ಟದಿದ್ದಅಕ್ಕಿ)

**साळ घालणें** (ಸಾಳಘಾಲಣೇ) ಸ್ತ್ರೀ. ನೇಯ್ಗೆಯನ್ನು ನಿಡಿದು ಹಾಸು, ಉಂಕೆಮಾಡು.

**साळई** (ಸಾಳಈ) ಸ್ತ್ರೀ.
**साळजिवाद** (ಸಾಳಜಿವಾದ) ನ. } ಕಾಡಹಂದಿ, ಮುಳ್ಳುಹಂದಿ, ಕಾಡುಮೃಗ, ಏದಿಹಂದಿ.

**साळढाळ** (ಸಾಳಢಾಳ್) ವಿ. ನ. ಸಾದಾ, ಸರಳ, ನಿಷ್ಕಪಟ, ಪ್ರಾಂಜಲ.

**साळणे** (ಸಾಳಣೇ) ಕ್ರಿ. ಸ. ಕತ್ತರಿಸು, ಬೋಳಿಸು, ಚಿಕ್ಕು, ತುದಿಕತ್ತರಿಸು, ಸವರು, ಕುಡಿಕತ್ತರಿಸು, ಕಸಿಮಾಡು.

साळपीस (ಸಾಳಪೀಸ್) ನ. ಕಾಡಹಂದಿ ಮುಳ್ಳು, ಗರಿ. ೨. ವಿ. ಲೇಖನಿ. ಪುಕ್ಕ, ಹೇಡಿ.

साळमाळ (ಸಾಳಮಾಳ್) ವಿ. ಅಸಡ್ಡಾಳ–ಉದ್ದ.

साळस्त्री (ಸಾಳಸ್ತ್ರೀ) ಪು. ಶಾಲೋತ್ರಿ, ಪಶುವೈದ್ಯ.

साळसूद–ध (ಸಾಳಸೂದ್–ಧ್) ವಿ. ಪ್ರಾಮಾಣಿಕ, ಸರಳ, ೨. (ವ್ಯಂಗ್ಯ) ವೇಷಧಾರಿ, ಕಪಟಿ, ಪಾಖಂಡಿ, ಉದ್ಧತ.

साळाभोळा (ಸಾಳಾಭೋಳಾ) ವಿ. "साळसूद" ನೋ.

साळी (ಸಾಳೀ) ಸ್ತ್ರೀ. ಹೆಣ್ಣುಕಾಡಹಂದಿ.

साळी (ಸಾಳೀ) ಪು. ನೇಕಾರವರ್ಗ, ನೇಕಾರ, ಹೆಂಡತಿಯ ತಂಗಿ–ಅಕ್ಕ.

साळीमाळी (ಸಾಳೀಮಾಳೀ) ಕೆಳಗಿನ ವರ್ಗಗಳು, ಕಾರ್ಮಿಕರು.

साळीव (ಸಾಳೀವ) ವಿ. ಕತ್ತರಿಸಿದ, ಬೋಳಿಸಿದ, ತುದಿಕತ್ತರಿಸಿದ, ಸವರಿದ, ಕಸಿಮಾಡಿದ.

साळुंकी (ಸಾಳುಂಕೀ) ಸ್ತ್ರೀ. ಒಂದು ಹಾಡುವ ಪಕ್ಷಿ, ಮೈನಾ.

साळू (ಸಾಳೂ) ಸ್ತ್ರೀ. ಕಾಡಹಂದಿ.

साळोत्तरी (ಸಾಳೋತ್ತರೀ) ಪು. "साळस्त्री" ನೋ.

साळ्या (ಸಾಳ್ಯಾ) ವಿ. ಬೇಸಿಗೆಯ ಎಳ್ಳಿನ ಬೆಳೆಯು.

साळेतीळ (ಸಾಳೇತೀಳ್) ಪು. ಎರಡು ಹಂಗಾಮಿನ ಎಳ್ಳಿನಬೆಳೆ.

साक्ष–क्षी (ಸಾಕ್ಷ–ಕ್ಷೀ) ಸ್ತ್ರೀ. ಪ್ರತ್ಯಕ್ಷಸಾಕ್ಷಿ, ಪುರಾವೆ, ಪ್ರಮಾಣ.

साक्ष घालणे (ಸಾಕ್ಷಘಾಲಣೇ) ಕ್ರಿ. ಸ. ಸಾಕ್ಷಿತುಂಬು, ಸಾಕ್ಷಿಗೆ ರುಜುಹಾಕು, ಸಾಕ್ಷಿಹೇಳು, ಪ್ರಮಾಣ ಮಾಡು.

साक्षभोज्याने (ಸಾಕ್ಷಮೋಜ್ಯಾನೆ) ಕ್ರಿ. ವಿ. } ಪುರಾವೆ
साक्षीनिशी (ಸಾಕ್ಷಿನಿಶೀ) } ಗನುಸರಿಸಿ, ಪುರಾವೆಗೆ ತಕ್ಕಂತೆ, ಪುರಾವೆಯುಸಹ, ಸಾಕ್ಷಿ ಸಹ ಪುರಾವೆನಿಶಿ, ಪುರಾವೆಸಹ, ಸಾಕ್ಷಿಸಹ, ಪ್ರಮಾಣ ಸಹ.

साक्षर (ಸಾಕ್ಷರ) ಪು. ಸಾಹಿತ್ಯಿಕ, ವಾಙ್ಮಯದ. ೨. ಓದಬಲ್ಲವ, ಒಳ್ಳೆಯ ಸಾಹಿತಿ. (ವ್ಯಂಗಾರ್ಥದಲ್ಲಿ) ವಿದ್ವಾಂಸ.

साक्षा (ಸಾಕ್ಷಾ) ವಿ. ಅನುಭವಕ್ಕನುಸಾರವಾದ.

साक्षात् (ಸಾಕ್ಷಾತ್) ಕ್ರಿ. ವಿ. ಪ್ರತ್ಯಕ್ಷವಾಗಿ, ಕಣ್ಮುಟ್ಟ, ಮೊದಲು, ಪ್ರತ್ಯಕ್ಷಕಂಡ.

साक्षात्कार (ಸಾಕ್ಷಾತ್ಕಾರ) ಪು. ಸಂ. ಅನುಭವಿಸುವಿಕೆ, ಈಶ್ವರನ ಪ್ರತ್ಯಕ್ಷದರ್ಶನ.

साक्षात्संबंध (ಸಾಕ್ಷಾತ್ಸಂಬಂಧ) ಪು. ಸಂ. ಪ್ರತ್ಯಕ್ಷ ಪರಿಚಯ, ವ್ಯಕ್ತಿಗತಸಂಬಂಧ, ಶರೀರಸಂಬಂಧ, ಸ್ವಂತ ಪರಿಚಯ.

साक्षीदार (ಸಾಕ್ಷೀದಾರ) ಪು. ಸಾಕ್ಷೀದಾರ. "साक्ष" ನೋ. ಸಾಕ್ಷಿಹೇಳುವವ.

साक्षीमोज्या (ಸಾಕ್ಷೀಮೋಜ್ಯಾ) ಪು. ಸಾಕ್ಷೀ. "साक्षी" ನೋ.

साक्षेप (ಸಾಕ್ಷೇಪ) ಪು. ಸ. ತಲ್ಲೀನತೆ, ನಿಮಗ್ನತೆ, ದಕ್ಷತೆ, ಶ್ರದ್ಧೆ, ಆಸಕ್ತಿ, ಸತತ ವ್ಯಾಸಂಗ, ದೀರ್ಘೋದ್ಯೋಗ.

साक्षेपाने (ಸಾಕ್ಷೇಪಾನೇ) ಕ್ರಿ. ವಿ. ದಕ್ಷತೆಯಿಂದ, ಆಸಕ್ತಿಯಿಂದ, ಅವಿಕ್ರಾಂತ ಪ್ರಯತ್ನದಿಂದ, ಎಚ್ಚರದಿಂದ.

साक्षेपी (ಸಾಕ್ಷೇಪೀ) ವಿ. ಸಂ. ನಿಮಗ್ನ, ತಲ್ಲೀನ, ಮನಸ್ಸುಕೊಡುವ.

साक्ष्य (ಸಾಕ್ಷ್ಯ) ನ. ಸಂ. ಪುರಾವೆ, ಸಾಕ್ಷಿ, ಪ್ರಮಾಣ, ಆಧಾರ.

सिकंजी (ಸಿಕಂಜೀ) ಸ್ತ್ರೀ. ಫಾ. ಶೀತಪೇಯ, ಸರಬತ್ತು, ಪಾನಕ, ಲಿಂಬೆಯಪಾನಕ.

सिकता (ಸಿಕತಾ) ಸ್ತ್ರೀ. ಸಂ. ಉಸುಕು, ಹರಳು, ೨. ಒಂದುರೋಗ, ಪಿತ್ತಾಶಯದಲ್ಲಿ ಹರಳಾಗುವ ರೋಗ.

सिकतातैल (ಸಿಕತಾತೈಲ) ನ. ಸಂ. ಉಸುಕಿನ ಎಣ್ಣೆ, ಅಶಕ್ಯತೆ, ಅಸಂಭವನೀಯತೆ.

सिकतामेह (ಸಿಕತಾಮೇಹ) ಪು. ಸಂ. ಮೂತ್ರಾಶಯದ ಹರಳು, ಮೂತ್ರದ ಹರಳು.

सिकल (ಸಿಕಲ) ಸ್ತ್ರೀ. ಫಾ. ನುಣುಪು ಮಾಡುವಿಕೆ, ತಿಕ್ಕುವಿಕೆ, ಸ್ವಚ್ಛಮಾಡುವಿಕೆ.

सिकलकर – गर, – गार (ಸಿಕಲಕರ –ಗರ್, –ಗಾರ್) ಪು. ಫಾ. ಆಯುಧ–ಶಸ್ತ್ರಗಳಿಗೆ ಸಾಣೆಹಿಡಿಯುವವ, ಚಿಕ್ಕಲಿಗಾರ.

सिक्त (ಸಿಕ್ತ) ವಿ. ಸಂ. ಸಿಂಪಡಿಸಿದ, ಪ್ರೋಕ್ಷಿಸಿದ, ಚಿಮುಕಿಸಿದ, ಹನಿಸಿದ.

सिंचणें (ಸಿಂಚಣೇ) ಕ್ರಿ. ಸ. ಸಿಂಪಡಿಸು, ಪ್ರೋಕ್ಷಿಸು, ಚಿಮುಕಿಸು, ಹನಿಸು.

सिंचन (ಸಿಂಚನ) ನ. ಸಂ. ಸಿಂಪಡಿಸುವಿಕೆ, ಪ್ರೋಕ್ಷಣ, ಚಿಮುಕುವಿಕೆ, ಹನಿಸುವಿಕೆ.

**सिडी–ढी** (ಸಿಡೀ–ಢೀ) ಸ್ತ್ರೀ. ನಿಚ್ಚಣಿಕೆ, ಏಣಿ, ಪಾವಟಣಿಗೆ. ೨. ಉತ್ಕರ್ಷದ ಸಾಧನೆ, ಮೇಲೇರುವ ಸಾಧನ, ಸೋಪಾನ–ಮಾರ್ಗ ಹಂತ.

**सित** (ಸಿತ) ವಿ. ಸಂ. ಬಿಳಿಯ, ಶ್ವೇತ, ಸ್ವಚ್ಛ, ಅನ್ನದ ಅಗಳು.

**सितकण** (ಸಿತಕಣ) ಪು. ಅಗಳು.

**सितधातु** (ಸಿತಧಾತು) ಪು. ಖಡು, ಬಿಳಿಯ ಖಡು, ಸೀಮೆಯ ಸುಣ್ಣ.

**सिंतोडणें** (ಸಿಂತೋಡಣೇ) ಕ್ರಿ. ನ. ಜುಬರವಳೆಸುರಿ, ಹನುಕು, ಹನಿಯು.

**सिंतोडा** (ಸಿಂತೋಡಾ) ಪು. ಜುಬರಮಳೆ, ಮಳೆಯ ಹನಿ, ನೀರಿನಹನಿ, ತುಂತುರಹನಿ, ಪ್ರೋಕ್ಷಣೆ, ಸಿಂಪಡಿಸುವಿಕೆ, ಚಿಮ್ಮಿಸುವಿಕೆ, ಸಿಂಚನ.

**सिंदूर** (ಸಿಂದೂರ್) ಪು. ಸಿಂದೂರಬಣ್ಣ.

**सिद्ध** (ಸಿದ್ಧ) ವಿ. ಸಂ. ಸಿದ್ಧವಾದ, ತಯಾರಾದ, ಪ್ರಾಪ್ತವಾದ, ಸಿಕ್ಕ, ಲಭಿಸಿದ, ಸಂಪೂರ್ಣವಾದ. ಪು. ಸಿದ್ಧಿಪಡೆದವ, ಸಿದ್ಧಪುರುಷ.

**सिद्धता** (ಸಿದ್ಧತಾ) ಸ್ತ್ರೀ. ಸಂಪೂರ್ಣತೆ, ತಯಾರಿ, ಸಿದ್ಧತೆ, ಏರ್ಪಾಟ, ಪೂರ್ಣಾವಸ್ಥೆ, ಪ್ರಾವಿಣ್ಯ, ಪೂರ್ಣಸ್ವರೂಪ.

**सिद्धपदार्थविज्ञान** (ಸಿದ್ಧಪದಾರ್ಥವಿಜ್ಞಾನ) ನ. ಸಂ. ಭೌತಿಕಶಾಸ್ತ್ರ, ಪದಾರ್ಥವಿಜ್ಞಾನ.

**सिद्धपुरुष** (ಸಿದ್ಧಪುರುಷ) ಪು. ನ. ಯೋಗಿ, ಯೋಗಿಪುರುಷ, ಯತಿ, ಸನ್ಯಾಸಿ, ಸಿದ್ಧಿಪಡೆದ ಯೋಗಿ.

**सिद्धवत्** (ಸಿದ್ಧವತ್) ಕ್ರಿ. ವಿ. ತಯಾರಾದಂತೆ, ಸಿದ್ಧಪಡಿಸಿದಂತೆ.

**सिद्धवत् गृहीत गोष्ट** (ಸಿದ್ಧವತ್ ಗೃಹೀತ್ ಗೋಷ್ಟ) ಸ್ತ್ರೀ. ಅಪ್ರಮಾಣಿತ ಸ್ವೀಕರಿಸಿದ ಪಕ್ಷ, ಪ್ರಮಾಣವಿಲ್ಲದೆ ಸ್ವೀಕರಿಸಿದ ಪಕ್ಷ, ಗೃಹೀತ ಸತ್ಯ.

**सिद्धसाधक** (ಸಿದ್ಧಸಾಧಕ) ಪು. ಸಂ. ಸಿದ್ಧಸಾಧಕರು, ಮೋಸಗಾರರಗುಂಪು, ಒಬ್ಬನು ಬಡೆದಂತೆ ಮಾಡುವವನು ಒಬ್ಬನು ಅತ್ತಂತೆ ಮಾಡುವವನು ಹೀಗೆ ಗೊತ್ತು ಪಡಿಸಿಕೊಂಡ ಕಳ್ಳರು!

**सिद्धान्त** (ಸಿದ್ಧಾಂತ) ಪು. ಸಂ. ಪ್ರಮೇಯ, ಶಾಸ್ತ್ರಗಳ ವಿವರ.

**सिद्धांती** (ಸಿದ್ಧಾಂತೀ) ಪು. ಸಂ. ಶಾಸ್ತ್ರಿ, ಶಾಸ್ತ್ರಗಳನ್ನು ಸಿದ್ಧಪಡಿಸುವವ, ಪ್ರಯೋಗವೀರ, ಶಾಸ್ತ್ರಜ್ಞ, ಶಾಸ್ತ್ರಬಲ್ಲವ.

**सिद्धान्न** (ಸಿದ್ಧಾನ್ನ) ನ. ಸ. ಬೇಯಿಸಿದ ಅನ್ನ, ಅಡುಗೆ, ಅಡಿಗೆ, ತಯಾರಿಸಿದ ತಿನ್ನುವ ಪದಾರ್ಥ.

**सिद्धि** (ಸಿದ್ಧಿ) ಪು. ಸಂ. ತಪಶ್ಚರ್ಯಫಲ, ಸಂಪೂರ್ಣತೆ, ಸಿದ್ಧಿಪಡೆದ ಸ್ಥಿತಿ.

**सिद्धीस नेणे** (ಸಿದ್ಧೀಸ ನೇಣೇ) ಕ್ರಿ. ಸ. ಕೊನೆಗಾಣಿಸು, ಕೊನೆಗೆ ಒಯ್ಯು, ಪೂರ್ಣಮಾಡು, ದೊರಕಿಸು, ಜಯಹೊಂದು.

**सिंधु** (ಸಿಂಧು) ಸ್ತ್ರೀ. ಸಂ. ಸಾಗರ, ಸಮುದ್ರ, ಕಡಲು, ಸಿಂಧುನದಿ, ಆನೆಯಗಂಡಸ್ಥಲದಮದರಸ.

**सिंधुक** (ಸಿಂಧುಕ) ವಿ. ಸಮುದ್ರ ಸಂಬಂಧದ, ಸಿಂಧಪ್ರದೇಶದ.

**सिंधुतट** (ಸಿಂಧುತಟ) ಪು. ಸಂ. ಸಾಗರದ ದಂಡೆ, ಸಿಂಧುತೀರ, ಕಡಲದಂಡೆ.

**सिंधुनद** (ಸಿಂಧುನದ) ಪು. ಸಂ. ಸಿಂಧುಹೊಳೆ, ಸಿಂಧುನದಿ.

**सिंधुपुष्प** (ಸಿಂಧುಪುಷ್ಪ) ನ. ಸಂ. ಶಂಖ, ಕಂಬು.

**सिंधुमग्न** (ಸಿಂಧುಮಗ್ನ) ವಿ. ಸಂ. ಸಮುದ್ರತಳದಲ್ಲಿದ್ದ, ಕಡಲ ಬುಡದಲ್ಲಿದ್ದ, ನೀರಿನಲ್ಲಿ ಮುಳುಗಿ ಚಲಿಸುವ ಡೋಣಿ, ಸಬಮರಿನ್.

**सिंधुलवण** (ಸಿಂಧುಲವಣ) ನ. ಸಂ. ಸೈಂಧವಲವಣ.

**सिधोरी** (ಸಿಧೋರೀ) ಸ್ತ್ರೀ. ಪಾಥೇಯ, ಕಟ್ಟಿದ ಬುತ್ತಿ, ಪ್ರವಾಸದ ತಿಂಡಿತಿನಿಸು.

**सिरका** (ಸಿರಕಾ) ಪು. ಫಾ. ಹುಳಿರಸ, ಸಿರ್ಕ, ವಿನಿಗರು. "**विनेगार**" ನೋ.

**सिंह** (ಸಿಂಹ) ಪು. ಸಂ. ಸಿಂಹ, ಕೇಸರಿ. ೨. ವಿ. ಮುಖ್ಯಸ್ಥ, ಶ್ರೇಷ್ಠ. ೩. ಸ್ತ್ರೀ. ಸಿಂಹರಾಶಿ.

**सिंहकटी** (ಸಿಂಹಕಟೀ) ಸ್ತ್ರೀ. ಸಿಂಹದ ನಡ, ಸುಂದರ ಸ್ತ್ರೀ, ಚೆಲುವೆ, ಸಿಂಹದಂತೆ ನಡುವಿದ್ದಾಕೆ.

**सिंहकेशर** (ಸಿಂಹಕೇಶರ) ಪು. ನ. ಸಿಂಹದ ಆಯಾಲು, ಸಿಂಹದ ಕುತ್ತಿಗೆಯ ಕೂದಲು.

**सिंहताल** (ಸಿಂಹತಾಲ) ನ. ಸಂ. ಕೈಜೋಡಿಸುವಿಕೆ, ನಮಸ್ಕಾರ.

**सिंहद्वार** (ಸಿಂಹದ್ವಾರ) ನ. ಸಂ. ಮುಖ್ಯಬಾಗಿಲು, ಹೆಬ್ಬಾಗಿಲು, ಪ್ರವೇಶದ್ವಾರ.

**सिंहनाद** (ಸಿಂಹನಾದ) ಪು. ಸಿಂಹಗರ್ಜನೆ, ಸಿಂಹದ ಗದ್ದರಿಕೆ, ದೊಡ್ಡಧ್ವನಿ, ಗಂಭೀರನಾದ.

**सिंहल** (ಸಿಂಹಲ) ನ. ಸಂ.
**सिंहलद्वीप** (ಸಿಂಹಲದ್ವೀಪ) ನ. ಸಂ.
} ಸಿಂಹಳ ದ್ವೀಪ, ಸಿಂಹಳ ನಡುಗಡ್ಡೆ ಲಂಕೆ, ಶ್ರೀಲಂಕಾ.

**सिंहस्थ** (ಸಿಂಹಸ್ಥ) ಪು. ಸಂ. ಸಿಂಹರಾಶಿಯಲ್ಲಿ ಗುರು ಗ್ರಹದ ಪ್ರವೇಶ, ಪರ್ವಕಾಲ.

**सिंहावलोकन** (ಸಿಂಹಾವಲೋಕನ) ನ. ಸಂ. ಸಾರಾಂಶ ರೂಪದಲ್ಲಿ ನಿರೂಪಣೆ, ಜಮಾಖರ್ಚಿನ ಅವ ಲೋಕನೆ, ಹಿಂದಿರುಗಿ ನೋಡುವಿಕೆ, ಪರೀಕ್ಷಿಸುವಿಕೆ.

**सिंहासन** (ಸಿಂಹಾಸನ) ನ. ಸಂ. ಪೀಠ, ಗದ್ದುಗೆ, ಸಿಂಹಾಸನ, ರಾಜಾಧಿಕಾರ, ರಾಜಪಟ್ಟ.

**सिंहीण,-सिंही** (ಸಿಂಹೀಣ-ಸಿಂಹೀ) ಸ್ತ್ರೀ. ಹೆಣ್ಣು ಸಿಂಹ.

**सीता** (ಸೀತಾ) ಸ್ತ್ರೀ. ಶ್ರೀರಾಮಚಂದ್ರನ ಪತ್ನಿ, ಸೀತಾದೇವಿ.

**सीताफळ** (ಸೀತಾಫಳ) ನ. ಸಂ. ಒಂದುಹಣ್ಣು, ಸೀತಾಫಲ, ಸೀತಾಫಲವೃಕ್ಷ.

**सीता की संग्राम** (ಸೀತಾ ಕೀ ಸಂಗ್ರಾಮ) ನಾಣ್ಣುಡಿ ಯುದ್ಧವೋ ಒಪ್ಪಂದವೋ? ಎರಡರಲ್ಲಿ ಯಾವುದು?

**सीमंत** (ಸೀಮಂತ) ಬೈತಲೆ, ಬೈತಲೆಮಣಿ, ಚೂಡಾ ಮಣಿ, ಚೂಡಾರತ್ನ, ಸೀಮಂತಮಣಿ.

**सीमंतोन्नयन** (ಸೀಮಂತೋನ್ನಯನ) ನ. ಸಂ. ಉಡಿ ತುಂಬುವ ಸಡಗರ, ಉಡಿತುಂಬುವ ವಿಧಿ, ಪುಂಗ ವನ ಸಂಸ್ಕಾರ.

**सीमा** (ಸೀಮಾ) ಸ್ತ್ರೀ. ಸೀಮೆ, ಹದ್ದು, ಗಡಿ, ಕೊನೆ, ಮರ್ಯಾದೆ, ಹೆಚ್ಚು, ಅತಿಶಯತೆ, ಅತಿರೇಕ, ಆಧಿಕ್ಯ, ಅಮಿತಭವ.

**सीमोल्लंघन** (ಸೀಮೋಲ್ಲಂಘನ) ನ. ಸ. ಗಡಿದಾಟು ವಿಕೆ, ಸೀಮೆಮೀರುವಿಕೆ ಮರ್ಯಾದೆಯ ಅತಿಕ್ರಮಣ, ದಸರೆಯ ಹಬ್ಬ.

**सींव** (ಸೀಂವ) ಸ್ತ್ರೀ. ಗಡಿ, ಮೇರೆ.

**सींवशेजारी** (ಸೀಂವಶೇಜಾರೀ) ಪು. ಸಂ. ಸೀಮೆಯ ನೆರೆಹೊರೆ, ಸೀಮೆಯಬದಿ, ಗಡಿಯ ಪಕ್ಕ.

**सीवन** (ಸೀವನ) ನ. ಹೊಲಿಗೆ, ಹೊಲೆಯುವಿಕೆ, ಹೊಲಿಗೆಯ ಕೂಲಿ. '**सिवण**' ನೋ.

**सु** (ಸು) ಪ್ರತ್ಯಯ. ಸಂ. ಒಳ್ಳೆಯ, ಸುಂದರ.

**सुई** (ಸುಈ) ಸ್ತ್ರೀ. ಸೂಜಿ, ಸೂಚಿಕಾ.

**सुईण** (ಸುಈಣ) ಸ್ತ್ರೀ. ಸೂಲಗಿತ್ತಿ, ಬಾಣಂತಿತನ ಮಾಡುವಾಕೆ.

**सुकट** (ಸುಕಟ್) ವಿ. ಸಂ. ಒಣಗಿದ. ಸ್ತ್ರೀ. ಸಂ. ಒಣ ಮೀನ.

**सुकटणे** (ಸುಕಟಣೇ) ಕ್ರಿ. ಅ. ಒಣಗು, ಸುಕ್ಕು, ತಾಜಾತನ ಕಳೆ.

**सुकटा-टचा** (ಸುಕಟಾ-ಟ್ಯಾ) ವಿ. ಸಂ. ಒಣಗಿದ, ಸುಕ್ಕಿದ. "**सुकट**" ನೋ. ಇಂಗಿದ, ಮುದುಡಿದ, ಸಂಕುಚಿತವಾದ.

**सुकड-डी** (ಸುಕಡ್-ಡೀ) ಸ್ತ್ರೀ. ತಯಾರಾದ ತೆಂಗಿನ ಕಾಯಿ, ಒಣಗಿದ ತೆಂಗಿನಕಾಯಿ.

**सुकणे** (ಸುಕಣೇ) ಕ್ರಿ. ಅ. ಒಣಗು, ಬತ್ತು, ಸುಕ್ಕು, ಸಂಕುಚಿತವಾಗು, ಮುದುಡು, ಮುದುಡಿಕೊಳ್ಳು, ಬಡಕನಾಗು, ಕೃಶಿಸು, ಸೊರಗಿಸು, ಬತ್ತಿಸು.

**सुकती** (ಸುಕತೀ) ಸ್ತ್ರೀ. ನೀರಿನ ಓಹಟ, ನೀರಿನ ಇಳಿಕೆ, ಕಿರಿ ನೀರು.

**सुकवण** (ಸುಕವಣ) ನ. ಒಣಗಿಸುವಿಕೆ, ಆರಿಸುವಿಕೆ, ಸುಕ್ಕಿಸುವಿಕೆ, ಮುದುಡಿಸುವಿಕೆ, ಇಂಗಿಸುವಿಕೆ, ಕೃಶಿಸುವಿಕೆ, ಕಾಳನ್ನು ಒಣಗಿಸಲು ಪಸರಿಸುವಿಕೆ.

**सुकर** (ಸುಕರ) ವಿ. ಸ. ಸುಲಭವಾದ, ಸಹಜವಾದ, ಒಳ್ಳೆಯದನ್ನು ಮಾಡುವ, ಹಗುರ, ಸುಗಮ, ಸಸಾರ.

**सुकर्म** (ಸುಕರ್ಮ) ನ. ಸಂ. ಒಳ್ಳೆಯ ಕೆಲಸ, ಪುಣ್ಯದ ಕೆಲಸ, ಸತ್ಕರ್ಮ, ಚಿಲೋಕೃತಿ.

**सुकले** (ಸುಕಲೇ) ನ. ಕಿವಿ ಇಲ್ಲವೆ ಮೂಗಿನ ಆಭರಣ.

**सुकवशी** (ಸುಕವಶೀ) ಸ್ತ್ರೀ. ಒಣಗುವಿಕೆ, ಸಂಕುಚಿತ ತನ, ಮುದುಡುವಿಕೆ, ಬಡಕನಾಗುವುದು, ಬತ್ತೋಣ, ಕೃಶಿಸುವಿಕೆ, ಅರಿಯುವಿಕೆ, ನೆನೆಹಾಕಿ ನೆತ್ತಗೆಮಾಡುವಿಕೆ.

**सुका** (ಸುಕಾ) ವಿ. ಒಣಗಿದ, ಬತ್ತಿದ, ಸೊರಗಿದ, ಬಡಕನಾದ, ನೆನೆಹಾಕಿದ, ಬಂಜೆ, ಬಂಜೆತನದ, ಕಪಟದ, ಸುಳ್ಳು, ಮೋಸದ, ಠಕ್ಕಿನ, ಠಕ್ಕುತನದ.

**सुकाणु-ण** (ಸುಕಾಣು-ಣ) ನ. ಚುಕ್ಕಾಣಿ, ಚುಂಕಾಣಿ, ಕರ್ಣ, ಆಡಳಿತಾಧಿಕಾರ.

**सुकाणदार** (ಸುಕಾಣದಾರ) ಪು. }
**सुकाण्या** (ಸುಕಾಣ್ಯಾ) } ಚುಕ್ಕಾಣಿಗ, ನಾವಿಕ, ಹಡಗು ನಡೆಯಿಸುವವನು, ಆಡಳಿತಾಧಿಕಾರಿ, ಹಡಗದ ಮುಖ್ಯಸ್ಥ, ಮುಂದಾಳು, ನೇತಾ,

**सुकाण्याची दांडी** (ಸುಕಾಣ್ಯಾಚೀ ದಾಂಡೀ) ಸ್ತ್ರೀ. ಚುಕ್ಕಾಣಿಯ ದಂಡಿಗೆ-ಹಿಡಿಕೆ.

**सुकाताव** (ಸುಕಾತಾವ್) ಪು. ಹಸಿದ ಹೊಟ್ಟೆಯ ಬೆಂಕಿ, ಹಸಿದ ಹೊಟ್ಟೆಯ ತಾಪ, ಹಸಿದ ಹೊಟ್ಟೆಯ ತಾಪ, ಹಸಿವೆಯ ಬಳಲಿಕೆ, ಇಲ್ಲವೆನ್ನುವಿಕೆ, ಸ್ಪಷ್ಟ ನಕಾರ, ಒಣಬಾಡಿಗೆ, ಸ್ಪಷ್ಟನಿರಾಕರಣೆ, ತಿರಸ್ಕಾರ ಅನಂಗೀಕಾರ.

**सुकादुकळ** (ಸುಕಾದುಕಳ್) ಪು. ಒಣ ಬರ, ಅನಾವೃಷ್ಟಿ ಕಾಲ, ಮಳೆಯಿಲ್ಲದ ಬರ, ದುಷ್ಕಾಳ.

**सुकाळ, सुकळ** (ಸುಕಾಳ್, ಸುಕಳ್) ಪು. ಸಂ. ಸುಕಾಲ, ಒಳ್ಳೆಯ ಕಾಲ, ಫಲಭರಿತ ಕಾಲ, ಉತ್ತಮ ಬೆಳೆಬಂದ ಕಾಲ.

**सुकाळ सौदा** (ಸುಕಾಳ್ ಸೌದಾ) ಪು. ಸಂ. ಅಗ್ಗ ವ್ಯಾಪಾರ, (ತಿರಸ್ಕಾರಾರ್ಥದಲ್ಲಿ).

**सुकाळ सौदा हगवणीस काळ (म्हण)** (ಸುಕಾಳ್‌ಸೌದಾ ಹಗವಣೀಸ್ ಕಾಳ್ (ಮ್ಹಣ್) ಗಾದೆಯಮಾತು. ಅಗ್ಗದೆಂದು ತಿಂದರೆ ಬಗ್ಗಲಾರದ ಹೊರಕಡೆಗೆ. ಅಗ್ಗವಿದ್ದಾಗ ತಿಂದು ಅಜೀರ್ಣದಿಂದ ಹೊರಕಡೆಗೆ ಮಾಡಿಕೊಳ್ಳು.

**सुकी खरूज** (ಸುಕೀ ಖರೂಜ್) ಸ್ತ್ರೀ. ಒಣ ಕಜ್ಜಿ, ಒಣ ತೀಟೆ, ಇಲ್ಲದ ಗೀಳು, ಒಣಹುರುಕು.

**सुकुमार** (ಸುಕುಮಾರ್) ವಿ. ನಾಜೂಕು, ಕೋಮಲ, ಮೆತ್ತಗೆ, ಒಳ್ಳೆಯ, ಸುಂದರ, ರಮಣೀಯ.

**सुकृत** (ಸುಕೃತ) ನ. } **"सुकर्म"** ನೋ. ಗುಣ,
**सुकृती** (ಸುಕೃತೀ) ಸ್ತ್ರೀ. ಸಂ. } ಪುಣ್ಯ.

**सुकेड** (ಸುಕೇಡ್) ಸ್ತ್ರೀ. ಒಣಪಕ್ಕ, ಒಣ ಪಕ್ಷ.

**सुकेळ–ळे** (ಸುಕೇಳ್–ಳೇ) ನ. ಒಣಗಿದ ಬಾಳೆಯ ಹಣ್ಣು, ಒಣ ಬಾಳೆಯ ಹಣ್ಣು, ಒಣಗಿಸಿದ ಬಾಳೆಯ ಹಣ್ಣು.

**सुक्तासुक्त** (ಸುಕ್ತಾಸುಕ್ತ) ವಿ. ಸಂ. ಯೋಗ್ಯಾಯೋಗ್ಯ, ದೋಷ ನಿರ್ದೋಷ, ಒಳ್ಳೆಯ – ಕೆಟ್ಟದ್ದಾದ (ಭಾಷಣ).

**सुख** (ಸುಖ) ನ. ಸಂ. ಸುಖ, ಸಮಾಧಾನ, ಶಾಂತಿ, ಸೌಕರ್ಯ, ಸಂಭವ, ಮನರಂಜನೆ, ಆನಂದ.

**सुखकर** (ಸುಖಕರ) ವಿ. ಸಂ. ಸುಖವನ್ನುಂಟು ಮಾಡುವ. **"सुकर"** ನೋ.

**सुखाचा शब्द** (ಸುಖಾಚಾ ಶಬ್ದ) ನ. ಸುಖದ ಮಾತು. ಸವಿಮಾತು, ಸಭ್ಯಮಾತು, ನಯಮಾತು.

**सुखाने–सुखे** (ಸುಖಾನೇ–ಸುಖೇ) ಸುಖದಿಂದ, ಸುಖವಾಗಿ, ತತ್ಪರತೆಯಿಂದ, ಅಂತಃಕರಣಪೂರ್ವಕ, ಸಹಜವಾಗಿ.

**सुखढाळ** (ಸುಖಢಾಳ್) ಪು. ಸಹಜ ಭೇದಿಯ ಔಷಧ, ಸಹಜ ಭೇದಿ, ಭೇದಿಯ ಸೌಮ್ಯ ಔಷಧಿ.

**सुखभाक** (ಸುಖಭಾಕ್) ವಿ. ಸಂ. ಸುದೈವಿ, ಸುಖಜೀವಿ, ಆನಂದಜೀವಿ.

**सुखरूप** (ಸುಖರೂಪ್) ಕ್ರಿ. ವಿ. ಕ್ಷೇಮದಿಂದ, ಸುಖಕರವಾಗಿ.

**सुखवस्तु** (ಸುಖವಸ್ತು) ಸ್ತ್ರೀ. ಸುಖದಿಂದಿರುವ, ಕೆಲಸ ಹೋರೆ ಮಾಡದವ.

**सुखवासी** (ಸುಖವಾಸೀ) ವಿ. ಸಂ. ಸುಖದಿಂದಿರುವ, **"सुखरूप"** ನೋ. ಅನುಕೂಲ ಪರಿಸ್ಥಿತಿಯಲ್ಲಿರುವ.

**सुखशयन** (ಸುಖಶಯನ) ನ.
**सुखशय्या** (ಸುಖಶಯ್ಯಾ) ಸ್ತ್ರೀ.
**सुखशेज** (ಸುಖಶೇಜ) ಸ್ತ್ರೀ.
} ಸುಖದ ಹಾಸಿಗೆ, ಸುಖದ ಸುಪ್ಪತ್ತಿಗೆ, ಪಲಂಗ, ಒಳ್ಳೆಯ ಹಾಸಿಗೆ, ಮಂಚಕ, ಮಂಚ.

**सुखसंतोष** (ಸುಖಸಂತೋಷ) ಪು. ಸಂ. ಆರಾಮ, ವಿಶ್ರಾಂತಿ, ಸುಖಾನಂದ, ವಿಲಾಸ.

**सुखसमाधान** (ಸುಖಸಮಾಧಾನ) ನ. ಸುಖ-ಶಾಂತಿ, ವಿಶ್ರಾಂತಿ, ಸುಸ್ಥಿತಿ, ನೆಮ್ಮದಿ, ಆರಾಮ, ಸೌಕರ್ಯ.

**सुखसोहळा** (ಸುಖಸೋಹಳಾ) ಪು. ಆನಂದದ ಸಮಾರಂಭ, ಆನಂದ ವಿಧಿ, ಸಂತೋಷದ ಬೆಡಗು.

**सुखांगणे** (ಸುಖಾಂಗಣೇ) ಕ್ರಿ. ಅ. ವಿಲಾಸಪಡು, ಸುಖಭೋಗಿಸು, ದುಂದುಮಾಡು, ಅತ್ಯಾನಂದ ಪಡು.

**सुखाचा प्राणी–जीव** (ಸುಖಾಚಾ ಪ್ರಾಣಿ–ಜೀವ) ಪು. ಸುಖಜೀವಿ, ಸುಖ ಉಣ್ಣುವವನು, ಆರಾಮದ ಮನುಷ್ಯನು.

**सुखाचा वारा** (ಸುಖಾಚಾ ವಾರಾ) ಪು. ಸುಖದ ಗಾಳಿ, ಸುಖಕರ ಗಾಳಿ, ಮೃದುಶಬ್ದ, ಕೋಮಲ ಭಾಷಣ, ಸಭ್ಯ ನುಡಿ.

**सुखाची घडी** (ಸುಖಾಚೀ ಘಡೀ) ಸ್ತ್ರೀ. ಸುಖದಗಳಿಗೆ, ಸುಖದ ಕ್ಷಣ, ಆನಂದದ ನಿಮಿಷ, ಆನಂದದ ಗಳಿಗೆ, ಸುಖಕಾಲ, ಚಲೋ ದಿನ.

**सुखाचे माहेर** (ಸುಖಾಚೇ ಮಾಹೇರ್) ನ. ಸುಖದ ತೌರುಮನೆ, ಸುಖದ ವಾಸಸ್ಥಾನ, ಸುಖದ ಮಂದಿರ, ಸುಖದ ಆಗರ, ಆನಂದದ ಭಂಡಾರ.

**सुखाडणे** (ಸುಖಾಡಣೇ) ಕ್ರಿ. ಅ. ಅಮಿತ ಆನಂದಿತನಾಗು, ಸಂತುಷ್ಟನಾಗು, ಸಂತುಷ್ಟವಾಗು.

**सुखाडी** (ಸುಖಾಡೀ) ಸ್ತ್ರೀ. ಒಣತನ, ಆರಿಕೆ, ಒಣಗಿದಸ್ಥಿತಿ. ೨. ಒಣಗಿಸಿದ ಅನ್ನ.

**सुखापा** (ಸುಖಾಪಾ) ಪು. ಸುಖತನ, ಸೌಕರ್ಯ, ಶಾಂತತೆ, ಸ್ವಾಸ್ಥ್ಯ, ಸಮಾಧಾನ.

**सुखारुखा** (ಸುಖಾರುಖಾ) ವಿ. ಆರಿದ, ಒಣಗಿದ, ಸಾದಾ, ಶುಷ್ಕ, ಬತ್ತಿದ, ಮಳೆಯಿಲ್ಲದ, ಬಾಯಾರಿದ, ನೀರಸವಾದ.

**सुखार्थी** (ಸುಖಾರ್ಥೀ) ವಿ. ಸಂ. ಸುಖಬಯಸುವವ, ಸೌಕರ್ಯ ಬೇಡುವವ, ಶಾಂತತೆ ಇಚ್ಛಿಸುವವ, ಸಮಾಧಾನ ತಾಳುವವ.

**सुखावणें** (ಸುಖಾವಣೇ) ಕ್ರಿ. ಅ. ಸುಖಬಯಸು, ಶಾಂತಿಇಚ್ಛಿಸು, ಸುಖದ ಚಟಹತ್ತು, ಶಾಂತಿಯ ರೂಢಿಯಾಗು.

**सुखावा** (ಸುಖಾವಾ) ಪು. ಸಮಾಧಾನ, ಸುಖವಾದತ್ವ, ಸುಖಾವಹತ್ವ.

**सुखासमाधानानें** (ಸುಖಾಸಮಾಧಾನಾನೇ) ಕ್ರಿ. ವಿ. ಸುಖ-ಸಮಾಧಾನಗಳಿಂದ, ಮನಃಪೂರ್ವಕವಾಗಿ.

**सुखासुखीं** (ಸುಖಾಸುಖೀ) ಕ್ರಿ. ವಿ. ಏನೂ ವಿಶೇಷ ಕಾರಣವಿಲ್ಲದೆ, ಸಹಜವಾಗಿ, ಸಂತೋಷದಿಂದ, ಆರಾಮವಾಗಿ, ಹಗುರಾಗಿ.

**सुखास्वाद** (ಸುಖಾಸ್ವಾದ್) ವಿ. ಸಂ. ರುಚಿಕರ, ರುಚಿಯುಳ್ಳ, ಸುವಾಸನೆಯುಳ್ಳ.

**सुखी** (ಸುಖೀ) ವಿ. ಸಂ. ಸುಖದಿಂದಿದ್ದ, ಸುಖವಾಗಿದ್ದ, ಸಂತೋಷವಾಗಿದ್ದ, ದುಃಖರಹಿತ ಸ್ಥಿತಿಯಲ್ಲಿರುವ.

**सुखेनैव** (ಸುಖೇನೈವ) ಕ್ರಿ. ವಿ. ಸುಖದಿಂದ.

**सुखोत्पत्ति** (ಸುಖೋತ್ಪತ್ತಿ) ಸ್ತ್ರೀ. ಸುಖದ ಹುಟ್ಟುವಿಕೆ, ಸುಖಸಾಧನೆ.

**सुंगणे** (ಸುಂಗಣೇ) ಕ್ರಿ. ಸ. ಮೂಸಿನೋಡು, ವಾಸನೆ ತಕ್ಕೊಳ್ಳು, ಮೂಸು, ಮೂಸನೆಹೊಡೆ, ಸಂಶಯ ಬರು, ಮೂಗಿನಿಂದ ಏರಿಸು.

**सुगति** (ಸುಗತಿ) ಸ್ತ್ರೀ. ಮೋಕ್ಷ, ಸದ್ಗತಿ, ಒಳ್ಳೆಯ ನಡೆ, ಸುಖಿಜೀವನ, ಒಳ್ಳೆಯಬಾಳ್ವೆ.

**सुगंध** (ಸುಗಂಧ) ಪು. ಸಂ. ಸುವಾಸನೆ, ಪರಿಮಳ, ಪರಿಮಳದ್ರವ್ಯ, ವಾಸನೆ, ಮಧುರವಾಸನೆ.

**सुगंधक-धिक** (ಸುಗಂಧಕ-ಧಿಕ) ವಿ. ಸಂ. ಸುವಾಸಿತ, ಪರಿಮಳದ, ಪರಿಮಳದ್ರವ್ಯವುಳ್ಳ, ವಾಸನೆಗೂಡಿದ, ಮಧುರವಾಸನೆಯುಳ್ಳ.

**सुगंधि** (ಸುಗಂಧಿ) ಪು. ಪರಿಮಳದ, ಸುವಾಸನೆಯುಳ್ಳ.

**सुगंधित** (ಸುಗಂಧಿತ) ವಿ. ಸಂ. ಒಳ್ಳೆಯವಾಸನೆಯ, ಮಧುರವಾಸನೆಯ, ಇನಿಗಂಪಿನ, ಆಹ್ಲಾದಕರ ಗಂಧದ.

**सुगंधी** (ಸುಗಂಧೀ) ಪು. ಸಂ. ಒಂದು ಸುವಾಸನೆಯ ಹೂವು, ಗಂಧದ್ರವ್ಯ ಮಾರುವವನು.

**सुगम** (ಸುಗಮ) ವಿ. ಸಂ. ಒಳ್ಳೆಯ ಸುಲಭ, ಸುಗಮ್ಯ, ಸಹಜತಿಳಿಯುವ, ಸಹಜಲಕ್ಷಕ್ಕೆ ಬರುವ, ಸುಲಭ.

**सुगर** (ಸುಗರ) ವಿ. ಕುಶಲ, ಪ್ರವೀಣ, ಬಲ್ಲವ, ನಿಪುಣ, ತಜ್ಞ, ಜಾಣ, ಹುಷಾರಿ.

**सुगरण, -ग्रण** (ಸುಗರಣ, ಗ್ರಣ) ಸ್ತ್ರೀ. ಮನೆಗೆಲಸದಲ್ಲಿ ನಿಪುಣ ಹೆಂಗಸು.

**सुगराई, सुग्राई** (ಸುಗರಾಈ, ಸುಗ್ರಾಈ) ಸ್ತ್ರೀ. ಕೌಶಲ್ಯ, ಪ್ರಾವೀಣ್ಯತೆ, ನೈಪುಣ್ಯ, ತಜ್ಞತೆ, ಜಾಣ್ಮೆ, ಹುಷಾರಿತನ.

**सुगरावा, सुग्रावा** (ಸುಗರಾವಾ, ಸುಗ್ರಾವಾ) ಪು. ಹಸ್ತಕೌಶಲ್ಯ, ಕೈಚಳಕ, ಚಾತುರ್ಯ, ದಕ್ಷತೆ, ಬುದ್ಧಿವಂತಿಕೆ, ಹುಷಾರಿ.

**सुगरीण, सुग्रीण** (ಸುಗರೀಣ, ಸುಗ್ರೀಣ) ಸ್ತ್ರೀ. ಗೃಹಿಣಿ, ಮನೆಯ ಯಜಮಾನತಿ, ಒಡತಿ, ಹಿರಿಯಳು, ಚೆಲೋ ಅಡಿಗೆ ಮಾಡುವವಳು, ಜಾಣಸಗಿತ್ತಿ.

**सुग्रास** (ಸುಗ್ರಾಸ) ವಿ. ಸಂ. ರುಚಿಕರ(ಅಡಿಗೆ), ಸವಿಯಾದ (ಊಟ.)

**सुगावा** (ಸುಗಾವಾ) ಪು. ಗುರುತು, ಚಿನ್ಹ. ೨. ಪತ್ತೇದಾರಿ ವಿಚಾರಣೆ, ಶೋಧನೆ, ಅನ್ವೇಷಣ, ಪಂಚಾಯತರ ತೀರ್ಪು, ತೀರ್ಮಾನ.

**सुगी** (ಸುಗೀ) ಸ್ತ್ರೀ. ಕ. ಸುಗ್ಗಿ, ಋತು, ವೇಳೆ, ಸಮಯ, ಹಂಗಾಮು.

**सुग्राह्य** (ಸುಗ್ರಾಹ್ಯ) ವಿ. ಸಹಜ ಗುಣಗ್ರಾಹ್ಯ, ಸುಲಭವಾಗಿ ಕೈಗೆಬರುವ, ಸಹಜಪ್ರಾಪ್ತ, ಸುಲಭ ಲಲಿತ.

**सुग्रीव** (ಸುಗ್ರೀವ) ಪು. ಮಂಗಗಳರಾಜ, ಕಪಿರಾಜ, ಶ್ರೀರಾಮಚಂದ್ರನ ಸ್ನೇಹಿತ, ಸುಂದರ. ೨. ನಗ್ನ, ಬತ್ತಲೆಯಾದ.

**सुघटित** (ಸುಘಟಿತ) ವಿ. ಸುವಿರಚಿತ, ಸುರಚಿತ, ಚೆನ್ನಾಗಿ ಮಾಡಿದ, ಸುಗಮ, ಸುವ್ಯವಸ್ಥಿತ, ಚೆನ್ನಾಗಿ ರಚಿಸಿಟ್ಟ.

**सुघड** (ಸುಘಡ್) ವಿ. ಕುಶಲ, ನಿಪುಣ, ತಜ್ಞ.

**सुचणे** (ಸುಚಣೇ) ಕ್ರಿ. ಅ. ತಿಳಿ, ಹೊಳೆ, ಮನಸ್ಸಿಗೆ ಬರು, ಸೂಚನೆಕೊಡು, ಸೂಚಿಸು, ಸುಳುವು ತಿಳಿಸು.

**सुचविणे** (ಸುಚವಿಣೇ) ಕ್ರಿ. ಅ. ತಿಳಿಸು, ಹೇಳು, ಸೂಚನೆಕೊಡು, ಸಂಕೇತತೋರಿಸು, ಸಂಕೇತ ಮಾಡು, ಬೋಧಿಸು.

**सुचित–सुचिंत** (ಸುಚಿತ–ಸುಚಿಂತ) ವಿ. ನೆಮ್ಮದಿಯ, ಶಾಂತ, ಸ್ವಸ್ಥ, ಸ್ವಸ್ಥಚಿತ್ತದ, ಸಾಧು.

**सुचित्त** (ಸುಚಿತ್ತ) ವಿ. ತತ್ಪರ, ನಮ್ರ, ಏಕಚಿತ್ತ, ಆದರಶೀಲ, ಆಸಕ್ತ, ಸುಮನದ.

**सुचिन्ह** (ಸುಚಿನ್ಹ) ನ. सुचिन्ह् ನೋ. ಶುಭಲಕ್ಷಣ, ಶಕುನ, ಶುಭ ಸೂಚನೆ, ಸನ್ನೆ, ಸಂಜ್ಞೆ, ಶುಭರಾಶಿ.

**सुजट, सुजीर, सुजमीर** (ಸುಜಟ್, ಸುಜೀರ್, ಸುಜಮೀರ್) ವಿ. ಬಾತ, ಊದಿದ, ಉಬ್ಬಿದ, ಬಾತುಕೊಂಡ.

**सुजणे** (ಸುಜಣೇ) ಕ್ರಿ. ಅ. ಬಾಯು, ಊದಿಕೊಳ್ಳು, ಉಬ್ಬು, ಏರು, ಆತುರನಾಗು.

**सुजले भूत कोडबुळचास राजी** (ಸುಜಲೇ ಭೂತ ಕೋಡಬುಳ್ಯಾಸ್ ರಾಜೀ) (ಗಾದೆಯಮಾತು) ಸೆಟಗೊಂಡ ದೆವ್ವ ಸೇವಿಗೆಗೆ ಮರುಳು.

**सुजन** (ಸುಜನ) ಪು. ಉತ್ತಮ ಮನುಷ್ಯ, ಸದ್ಗೃಹಸ್ಥ, ಸಜ್ಜನ, ಸಾಧುಪುರುಷ.

**सुजनता–त्व** (ಸುಜನತಾ–ತ್ವ) ನ. ಸಂ. ಸೌಜನ್ಯ, ಸಭ್ಯತೆ, ಒಳ್ಳೆಯ ಮನುಷ್ಯತ್ವ.

**सुजनी** (ಸುಜನೀ) ಸ್ತ್ರೀ. ರೇಶಿಮೆನೂಲಿನ ನೆಯ್ಗೆ, ಗರ್ಭ ನೂಲಿನ ನೆಯ್ಗೆ.

**सुजमरणे, –मिरणे** (ಸುಜಮರಣೇ) (ಸುಜಮಿರಣೇ) ಕ್ರಿ. ಸಂ. "सुजणे" ನೋ.

**सुजरा** (ಸುಜರಾ) ವಿ. ಸಂ. ಮೇಲಿಂದ ಮೇಲೆ ಸೆಟೆದುಕೊಳ್ಳುವ, ಮೇಲಿಂದ ಮೇಲೆ ಬಾಯುವ.

**सुजाण** (ಸುಜಾಣ) ವಿ. ಜಾಣ್ಮೆಯುಳ್ಳ, ಜಾಣನಾದ, ಸಹಜ ತಿಳುವಳಿಕೆಪಡುವ, ಸಹಜ ಸಮಾಧಾನ ಪಡುವ.

**सुटकन् –दिशी** (ಸುಟಕನ್–ದಿಶೀ) ಕ್ರಿ.ವಿ. ತೀವ್ರವಾಗಿ, ಕೂಡಲೆ, ಝಟ್ಟನೆ, ಚುರುಕಾಗಿ.

**सुटकणें** (ಸುಟಕಣೇ) ಕ್ರಿ. ಅ. ಅದೃಶ್ಯವಾಗು, ಕಾಣೆಯಾಗು, ಇಲ್ಲದಂತೆಯಾಗು.

**सुटका, सुटण्क** (ಸುಟಕಾ, ಸುಟಣೂಕ್) ಸ್ತ್ರೀ. ಬಿಡುಗಡೆ, ಖುಲಾಸು, ವಿಮೋಚನ, ಖುಲಾಸಾಪತ್ರ, ಮುಕ್ತಿ, ಪ್ರಸೂತಿ, ಹೆರಿಗೆ, ತೀರ್ಪು.

**सुटगांठ** (ಸುಟಗಾಂಠ್) ಸ್ತ್ರೀ. ಸಮಗಂಟು, ಸಹಜ ಬಿಚ್ಚುವ ಗಂಟು.

**सुटणे** (ಸುಟಣೇ) ಕ್ರಿ. ಅ. ಮುಕ್ತನಾಗು, ಸಡಿಲಾಗು, ಪಾರಾಗು.

**सुटसुटीत** (ಸುಟಸುಟೀತ) ವಿ. ಗಟ್ಟಿಯಾದ, ಸಾಂದ್ರವಾದ. ೨. ಅನುಕೂಲವಾದ.

**सुटा** (ಸುಟಾ) ವಿ. ಸಡಿಲು, ಶಿಥಿಲ, ಪ್ರತ್ಯೇಕ, ಬೇರೆ, ಎಲ್ಲಿಯೂ ತೊಡಕದ, ಒಬ್ಬಂಟಿಗ, ಸ್ವತಂತ್ರ.

**सुटावणे** (ಸುಟಾವಣೇ) ಕ್ರಿ. ಸಡಿಲಿಸು, ಶಿಥಿಲಗೊಳಿಸು, ಪ್ರತ್ಯೇಕಮಾಡು, ಬೇರೆಯಾಗಿರು, ಒಬ್ಬಂಟಿಗನಾಗಿರು.

**सुटी** (ಸುಟೀ) ಸ್ತ್ರೀ. ವಿಮೋಚನೆ, ಬಿಡುಗಡೆ, ಕ್ಷಮೆ, ಇಳಕಲಿಗೆ ಹತ್ತುವಿಕೆ. ೨. ಬಿಡುವು, ರಜೆ, ಪರವಾನಿಗೆ, ಅಪ್ಪಣೆ, ಅಗಲುವಿಕೆ.

**सुंठ** (ಸುಂಠ) ಸ್ತ್ರೀ. ಶುಂಠಿ, ಅಲ್ಲ, ಖಾರಗೆಣಸು, ಒಣಖಾರಗೆಣಸು.

**साठावर्षी सुंठ फुलणे** (ಸಾಠಾವರ್ಷೀ ಸುಂಠ ಫುಲಣೇ) (ನಾಣ್ಣುಡಿ) ಅಕಲ್ಪಿತತೊಂದರೆಬರು.

**सुंठ फुंकणें** (ಸುಂಠ ಫುಂಕಣೇ) ಕ್ರಿ. ಅ. ಕಿವಿಊದು, ಕಿವಿತುಂಬು, (ಚಾಡಿಹೇಳು ಎಂಬರ್ಥ.)

**सुंठवडा** (ಸುಂಠವಡಾ) ಶುಂಠಿಚೂರ್ಣ, ಸಕ್ಕರೆ ಪ್ರಸಾದ, ಜನ್ಮೋತ್ಸವದ ಪ್ರಸಾದ.

**सुंठवणी** (ಸುಂಠವಣೀ) ಸ್ತ್ರೀ. ಶುಂಠಿಯ ಅರ್ಕ, ಶುಂಠಿಯ ನೀರು, ಶುಂಠಿಯ ಕಷಾಯ.

**सुडका–के** (ಸುಡಕಾ–ಕೇ) ಪು. ನ. ಹಳೆಯ ಅರಿವೆಯ ತುಂಡು, ಚಿಂದಿ, ಹರಕು ಬಟ್ಟೆ, ಪೇಲಿಕೆ, ಪಟಕೆ.

**सुडबुड** (ಸುಡಬುಡ್) ಸ್ತ್ರೀ. 'लुडबुड' ನೋ. ಅತ್ತಿತ್ತ ಓಡಾಡು, ನಡುವೆ ಮಾತಾಡು, ನಡುವೆ ಬಾಯಿ ಹಾಕು.

**सुडावणे** (ಸುಡಾವಣೇ) ಕ್ರಿ. ಅ. ಧೈರ್ಯದಿಂದಮುನ್ನುಗ್ಗು, ವಿರೋಧ ಲೆಕ್ಕಿಸದೆ ಮುನ್ನುಗ್ಗು.

**सुडी** (ಸುಡೀ) ಸ್ತ್ರೀ. ಕ. ತೆನೆಯ ಸಿವುಡು, ಗಂಟು, ಮೂಟೆ.

**सुढाळ** (ಸುಢಾಳ್) ವಿ. ಡೌಲಿನ, ಒಪ್ಪುವ, ಬೆಡಗಿನ, ಚುರುಕಾದ, ಮಿಂಚುವ, ಪ್ರಕಾಶಿಸುವ, ಘನವಾದ, ಉತ್ತಮ:

**सुत** (ಸುತ) ಪು. ಸ. ಮಗು, ಪುತ್ರ, ರಾಜಪುತ್ರ.

**सुतक** (ಸುತಕ) ನ. ಮೈಲಿಗೆ, ಸತ್ತವರ ಬಗೆಗೆ ಬರುವ ಮೈಲಿಗೆ.

**सुतकी** (ಸುತಕೀ) ವಿ. ವೈಲಿಗೆಯ. ೨.ದುಃಖಗ್ರಸ್ತ.

**सुतराम्** (ಸುತರಾಮ್) ಕ್ರಿ. ವಿ. ಎಂದೆಂದೂ, ತೀರ.

**सुतविणे** (ಸುತವಿಣೇ) ಕ್ರಿ. ಸ. ದಾರದಿಂದ ಸುತ್ತು, ಸುತ್ತುವರಿ, ಆವರಿಸು.

**सुतळ, –ळी** (ಸುತಳ–ಳೀ) ಸ್ತ್ರೀ. ಹುರಿ, ಬಳ್ಳಿ, ದಾರ, ಸಣಬಿನ ದಾರ.

**सुता** (ಸುತಾ) ಸ್ತ್ರೀ. ಸಂ. ಕನ್ಯೆ, ಮಗಳು.

**सुंता** (ಸುಂತಾ) ಸ್ತ್ರೀ. ಅರ. ಸುನ್ನತ, ಸುಂತಿ, ಇಸ್ಲಾಂಧರ್ಮಿಗಳ ಒಂದು ಸಂಸ್ಕಾರ.

**सुताडा** (ಸುತಾಡಾ) ಪು. ದಪ್ಪಾದ ಗಟ್ಟಿನೂಲಿನ ಬಟ್ಟೆ, ಉರುಟು ಬಟ್ಟೆ.

**सुताडे** (ಸುತಾಡೇ) ನ. ನೆಂಟತನ ಕೂಡಿಸುವಿಕೆ, ಅದಲು ಬದಲು ಶರೀರ ಸಂಬಂಧ. ೨. ದಪ್ಪವಾದ ಬಟ್ಟೆ.

**सुतार** (ಸುತಾರ) ಪು. ಬಡಗಿ, ಬಡಿಗ, ಮರಗೆಲಸದವನು, ಕಟ್ಟಿಗೆಯ ಕೆಲಸ ಮಾಡುವವನು–ಬಡಿಗನ ಹಕ್ಕಿ,ಮರುಕುಟಿಲನ ಹಕ್ಕಿ, ಕಲ್ಕುಟ್ಟಿಗನಹಕ್ಕಿ.

**सुतारकी** (ಸುತಾರಕೀ) ಸ್ತ್ರೀ. ಬಡಿಗತನ, ಬಡಗೇರಿಕೆ, ಬಡಿಗನಕೆಲಸ, ಬಡಿಗನವಂಶ,ಪರಂಪರಉದ್ಯೋಗ.

**सुती** (ಸುತೀ) ವಿ. ನೂಲಿನ, ಹತ್ತಿಯ ನೂಲಿನ, ನೂಲಿನಿಂದಮಾಡಿದ, ನೂಲಿನ.

**सुतेरा** (ಸುತೇರಾ) ಪು. ಜೇಡ, ಜೇಡನ ಹುಳ, ಮಕ್ಷಿಕಾರಿ, ನೊಣಹುಲಿ.

**सुतोवाच,सूतउवाच** (ಸುತೋವಾಚ, ಸುತಉವಾಚ) ಸಂ. ಪ್ರಾರಂಭ, ಆರಂಭ,ಮಾತನಾಡಲು ಪ್ರಾರಂಭ.

**सुदणे** (ಸುದಣೇ) ಓಡು, ಒಳಹೋಗು, ತುಳಿ, ಒದೆ, ಮೆಟ್ಟು, ತಿರಸ್ಕರಿಸು.

**सुदम** (ಸುದಮ) ವಿ. ನಿಗ್ರಹಿಸಲು, ಸುಲಭ, ಗೆಲ್ಲಲು ಸುಲಭ, ಸ್ವಾಧೀನ ಪಡಿಸಲಿಕ್ಕೆ ತೊಂದರೆಯಿಲ್ಲದ.

**सुंदर** (ಸುಂದರ) ವಿ. ಚೆಲುವಾದ, ಉತ್ತಮ, ಸಿಂಗಾರಾದ, ಬೆಡಗಿನ, ಅಂದವಾದ, ಉದಾರ, ಶ್ರೇಷ್ಠ.

**सुंदरा,–री** (ಸುಂದರಾ–ರೀ) ಸ್ತ್ರೀ. ಚೆಲುವೆ, ಸುಂದರ ಸ್ತ್ರೀ, ಸಿಂಗಾರಿ, ಬೆಡಗಿನಾಕೆ.

**सुदर्शन** (ಸುದರ್ಶನ) ವಿ. ಸುಂದರ, ಸುಂದರ ಕಾಣಿಸುವ. ೨. ನ. ಸಂ. ವಿಷ್ಣುವಿನ ಶಸ್ತ್ರ, ವಿಷ್ಣುವಿನ ಕೈಯೊಳಗಿನ ಚಕ್ರ.

**सुदविणे** (ಸುದವಿಣೇ) ಕ್ರಿ. ಸ. ಒಳಸೇರಿಸು, ಒಳಹೊಗಿಸು,ಸೇರಿಸು,ತುರುಕು, ಸಮಾವೇಶಗೊಳಿಸು.

**सुदामत** (ಸುದಾಮತ) ಕ್ರಿ. ವಿ. ಉತ್ತಮತರವಾಗಿ, ಸುರಕ್ಷಿತವಾಗಿ.

**सुदामदरिद्री** (ಸುದಾಮ ದರಿದ್ರೀ) ವಿ. ತೀರಬಡವ, ಕಂಗಾಲ, ದರಿದ್ರ, ದೀನ.

**सुदामपोहे** (ಸುದಾಮ ಪೋಹೇ) } ಬಡವನ
**सुदाम्याचे पोहे** (ಸುದಾಮ್ಯಾಚೆ ಪೋಹೇ) } ಕಾಣಿಕೆ, ನಮ್ರತೆಯ ಕಾಣಿಕೆ, ಅತ್ಯಲ್ಪ ಕಾಣಿಕೆ.

**सुदावा** (ಸುದಾವಾ) ಗುರುತು, ಪತ್ತೆ.

**सुदिन,–दिवस** (ಸುದಿನ–ದಿವಸ) ನ. ಸಂ. ಶುಭದಿವಸ, ಮಂಗಲಕರ ದಿನ, ಶುಭದಿನ.

**सुदुर्लभ** (ಸುದುರ್ಲಭ) ವಿ. ಸಂ. ದುಷ್ಪ್ರಾಪ್ಯ, ದೊರಕಿಸಲು ಕಠಿಣ, ಅಪರೂಪ, ಉತ್ಕೃಷ್ಟ.

**सुदुश्चर** (ಸುದುಶ್ಚರ) ವಿ. ಸಂ. ಆಚರಿಸಲು ಕಠಿಣ.

**सुदुःसह** (ಸುದುಃಸಹ) ವಿ. ಸಂ. ಸಹಿಸಲು ಕಠಿಣವಾದ, ತಾಳ್ಮೆಗೆ ಕಠಿಣವಾದ, ಅಸಹನೀಯವಾದ.

**सुदुस्तर** (ಸುದುಸ್ತರ) ವಿ. ಸಂ. ಈಜಲು ಕಠಿಣವಾದ–ಈಸಿಹೋಗಲು ಕಠಿಣವಾದ, ಪ್ರಾಪ್ತ ಮಾಡಲು ಕಠಿಣ, ಉಲ್ಲಂಘಿಸಲು ಬಿಗಿಯಾದ.

**सुदृढ** (ಸುದೃಢ) ವಿ.ಸಂ. ಸಮರ್ಥ, ಗಟ್ಟಿ, ದಾಂಡಿಗ.

**सुद्धबुद्ध** (ಸುದ್ಧಬುದ್ಧ) ಸ್ತ್ರೀ. ವಿ. ಜಾಣ್ಮೆಯ ಅರಿವು, ಬುದ್ಧಿಯ ಅರಿಕೆ.

**सुद्धा** (ಸುದ್ಧಾ) ಅವ್ಯಯ. ಕೂಡ, ಸಹ, ಒಡನೆ, ಆದರೂ, ಅಷ್ಟೆ, ಹೆಚ್ಚು–ಕಡಿಮೆ ಇಲ್ಲದೆ.

**सुधर्ष** (ಸುಧರ್ಷ) ವಿ. ಸಂ. ಶಾಸನಮಾಡಲು ಹಗುರು, ಸಂಯಮ ಮಾಡಲಿಕ್ಕೆ ಸುಲಭ, ನಿರೋಧಕ್ಕೆ ಯೋಗ್ಯ, ಹಿಡಿತದಲ್ಲಿಡಬಹುದಾದ.

**सुधा** (ಸುಧಾ) ಸ್ತ್ರೀ. ಸಂ. ಅಮೃತ, ರಸ.

**सुधापाणि** (ಸುಧಾಪಾಣಿ) ಪು. ಸಂ. ದೇವರ ವೈದ್ಯ, ಧನ್ವಂತರಿ.

**सुधारक** (ಸುಧಾರಕ) ಪು. ಸಮಾಜ ಸುಧಾರಣೆ ಮಾಡುವ, ಧರ್ಮಪ್ರಸಾರಕ, ಧರ್ಮಪ್ರವರ್ತಕ.

**सुधारणा–णूक** (ಸುಧಾರಣಾ–ಣೂಕ) ಸ್ತ್ರೀ. ತಿದ್ದುಪಡೆ, ಸುಧಾರಣೆ, ಅಭಿವೃದ್ಧಿ, ಏಳ್ಗೆ, ಪ್ರಗತಿ, ಏರಿಕೆ, ಏರಾಟ, ಸರಿಪಡಿಸುವಿಕೆ, ಪರಿವರ್ತನೆ.

**सुधारणे** (ಸುಧಾರಣೇ) ಕ್ರಿ. ಅ. ತಿದ್ದುಪಡೆಹೊಂದು, ಸುಧಾರಿಸು, ಏಳ್ಗೆಹೊಂದು, ಪರಿವರ್ತಿಸು, ಪ್ರಗತಿಹೊಂದು. ೨. ಕ್ರಿ. ಸ. ನೆಟ್ಟಗೆಮಾಡು, ತಿದ್ದು.

**सुधारस** (ಸುಧಾರಸ) ಪು. ಲಿಂಬೆಹಣ್ಣಿನ ಪಾಕ, ಪಕ್ವಾನ್ನ.

**सुधी** (ಸುಧೀ) ಪು. ಸಂ. ಪಂಡಿತ, ವಿದ್ವಾಂಸ, ಪ್ರಕಾಂಡ ಪಂಡಿತ, ಒಳ್ಳೆಯ ಬುದ್ಧಿ. ೨. ವಿ. ಜಾಣ.

**सुधीर** (ಸುಧೀರೆ) ವಿ. ಸಂ. ಗಟ್ಟಿ, ನಿಶ್ಚಲ, ಅಲುಗಾಡದ, ಸ್ಥಿರ, ದೃಢ, ನಿರ್ಭಯ.

**सुनका, सुना** (ಸುನಕಾ, ಸುನಾ) ವಿ. ನಗ್ನ, ಖಾಲಿ, ಬರಿಯ, ಬರಿದಾದ, ರದ್ದು, ವ್ಯರ್ಥವಾದ.

**सुनत,–ता** (ಸುನತ್–ತಾ) ಸ್ತ್ರೀ. ಅರ. ಸುಂತಿ, ಇಸ್ಲಾಂ ಧರ್ಮದೀಕ್ಷೆ.

**सुनबहिरी** (ಸುನಬಹಿರೀ) ಸ್ತ್ರೀ. ಚರ್ಮದ ಬಧಿರತೆ, ಚರ್ಮದ ಕಪ್ಪು ಕಲೆ, ಒಂದು ಜಾತಿಯ ಚರ್ಮ ರೋಗ, ಮಹಾರೋಗದ ಒಂದು ಪ್ರಕಾರ.

**सुना** (ಸುನಾ) ವಿ. ಶೂನ್ಯ, ನಿರ್ಜನ.

**सुन्या घरी वाण** (ಸುನ್ಯಾ ಘರೀ ವಾಣ) ಬರಿಯ ಮನೆಗೆ ಬಾಗಿಣ, ನಿರರ್ಥಕ ದಾನ.

**सुनावणे, सुनाविणे** (ಸುನಾವಣೇ, ಸುನಾವಿಣೇ) ಕ್ರಿ. ಸ. ಹೇಳು, ಪ್ರಕಟಿಸು, ವಿವರಿಸು, ತಿಳಿಸು, ಪ್ರಸಿದ್ಧಿಸು, ಸಮಾಧಾನಪಡಿಸು. ೨. ಜಬರಿಸು, ಗದ್ದರಿಸು.

**सुनावणी** (ಸುನಾವಣೀ) ಸ್ತ್ರೀ. ಪ್ರಕಟಣೆ, ಹೇಳುವಿಕೆ, ವಿವರಣೆ, ಪ್ರಸಿದ್ಧಿಮಾಡುವಿಕೆ, ತಿಳಿಸಿಹೇಳುವಿಕೆ, ನ್ಯಾಯಾಲಯದ ಮುಂದೆ ವ್ಯಾಜ್ಯ ನಡೆಯುವಿಕೆ.

**सुनी–न्नी** (ಸುನೀ–ನ್ನೀ) ವಿ. ಅರ. (ಮುಸಲ್ಮಾನ ಧರ್ಮದ) ಸುನ್ನಿ, ಪಂಥ. ೨. ವಿ. ಸ್ತ್ರೀ. ಶೂನ್ಯ–ನಿರ್ಜನ.

**सुनीति** (ಸುನೀತಿ) ಸ್ತ್ರೀ. ನ್ಯಾಯ, ನೀತಿಮತ್ತೆ, ನ್ಯಾಯವಾದ ಕಾರ್ಯ.

**सुनील** (ಸುನೀಲ) ವಿ. ಸಂ. ತೀರ ನೀಲಿಯಾದ, ಆಕಾಶ ವರ್ಣದ.

**सुपक,–पक्व** (ಸುಪಕ–ಪಕ್ವ) ವಿ. ಸಂ. ಚೆನ್ನಾಗಿ ಕುದಿಸಿದ, ಹಣ್ಣಾದ, ಬಹಳ ಸ್ವಚ್ಛವಾದ.

**सुपडे** (ಸುಪಡೇ) ನ. ಒಂದು ಪ್ರಕಾರದ ಬೀಸಣಿಕೆ, ಚಿಕ್ಕ ಬೀಸಣಿಕೆ. ೨. ಸಣ್ಣ ಮೊರ.

**सुपथ** (ಸುಪಥ) ಪು. ಯೋಗ್ಯರೀತಿ, ಚೆಲೋಮಾರ್ಗ, ಚೆಲೋ ನಡವಳಿಕೆ.

**सुपली** (ಸುಪಲೀ) ಸ್ತ್ರೀ. ಚಿಕ್ಕ ಮೊರ, ಗಾಳಿಬೀಸುವ ಸಣ್ಣ ಬೀಸಣಿಕೆ.

**सुपात्र** (ಸುಪಾತ್ರ) ವಿ. ಸಂ. ದಾನಹೊಂದಲು ಯೋಗ್ಯ ಮನುಷ್ಯ, ಸತ್ಪಾತ್ರ.

**सुपानी** (ಸುಪಾನೀ) ಸ್ತ್ರೀ. ಮೂಗುತಿ, ಮೂಗಬಟ್ಟು, ನತ್ತು.

**सुपारी** (ಸುಪಾರೀ) ಸ್ತ್ರೀ. ಅಡಿಕೆ, ಅಡಿಕೆಬೆಟ್ಟ.

**सुपारी देणे** (ಸುಪಾರೀ ದೇಣೇ) ಸ್ತ್ರೀ. ನಿಶ್ಚಯಮಾಡು, ನೇಮಿಸು, ಮಾತುಕೊಡು, ಧಾರ್ಮಿಕ ವಿಧಿಗೆ ಆಮಂತ್ರಿಸು, ಧಾರ್ಮಿಕ ವಿಧಿಗೆ ಪುರೋಹಿತನನ್ನು ಗೊತ್ತುಮಾಡು.

**तारवांत अर्धी सुपारी** (ತಾರವಾಂತ್ ಅರ್ಧೀ ಸುಪಾರೀ) ಸ್ತ್ರೀ. ಗಾದೆಯುಮಾತು. ಇಲ್ಲದ ಹಕ್ಕು ಹೇಳು.

**सुपारीचे झाड** (ಸುಪಾರೀಚೇ ಝಾಡ್) ನ. ಅಡಿಕೆಯ ಗಿಡ, ಉದ್ದ ಮನುಷ್ಯ, (ವ್ಯಂಗ್ಯಾರ್ಥ).

**सुपारीघाट** (ಸುಪಾರೀಘಾಟ್) ಪು. ಮುತ್ತು–ರತ್ನಗಳ ಆಕಾರ, ಅಡಿಕೆಯ ಒಪ್ಪು, ಅಡಿಕೆಯ ಆಕಾರ.

**सुपिंड** (ಸುಪಿಂಡ) ವಿ. ಸಂ. ಬಲವಾದ, ದೃಢಕಾಯದ, ಕೆಚ್ಚಿನ, ಗಟ್ಟಿಮುಟ್ಟಾದ, ಬಲಿಷ್ಠ.

**सुपीक** (ಸುಪೀಕ್) ವಿ. ಉತ್ತಮ ಬೆಳೆಯ. ೨. ನ. ಚೆಲೋ ಬೆಳೆ, ವಿಪುಲ ಬೆಳೆ, ಸಾಕಷ್ಟು ಬೆಳೆ.

**सुपेती** (ಸುಪೇತೀ) ವಿ. ಸಂ. ಥಡಿ, ಗಾದಿ, ಸುಪ್ಪೊತ್ತಿಗೆ, ಮೆತ್ತನ್ನ ಹಾಸಿಗೆ.

**सुप्त** (ಸುಪ್ತ) ವಿ. ಸಂ. ಜೋಮು ಹಿಡಿದ, ಮಲಗಿದ, ಅಡಗಿದ, ಮರೆಯಲ್ಲಿದ್ದ, ಅಜಾಗ್ರತನಾದ, ನಿದ್ರಿತ, ಮರಗಟ್ಟಿದ, ಸುಂದಾಗಿಬಿದ್ದ.

**सुप्ति** (ಸುಪ್ತಿ) ಸ್ತ್ರೀ. ನಿದ್ರೆ, ತೂಕಡಿಸುವಿಕೆ, ಮಬ್ಬು, ಸುಂದು, ಜೋಮು.

**सुप्रभात** (ಸುಪ್ರಭಾತ್) ಸ್ತ್ರೀ. ಸ. ಬೆಳಗು, ನಸುಕು, ಪ್ರಭಾತ, ಬೆಳಗುಮುಂಜಾನೆ.

**सुप्रयुक्त** (ಸುಪ್ರಯುಕ್ತ) ವಿ. ಸಂ. ಒಳ್ಳೇನಿಯೋಜಿತ, ಒಳ್ಳೆಯ ನಿಯುಕ್ತವಾಗಿ.

**सुप्रयोग** (ಸುಪ್ರಯೋಗ) ಪು. ಒಳ್ಳೆಯ ಮನವಿ, ಒಳ್ಳೆಯ ಬಿನ್ನಹ, ವ್ಯಾಸಂಗ, ಪ್ರಯೋಗ.

**सुप्रसन्न** (ಸುಪ್ರಸನ್ನ) ವಿ. ಬಹಳ ಆನಂದಿತ.

**सुफराटे** (ಸುಫರಾಟೇ) ವಿ. ಯೋಗ್ಯಪಕ್ಷದ, ಯೋಗ್ಯಪಕ್ಕದ.

**सुफराटणे** (ಸುಫರಾಟಣೇ) ಕ್ರಿ. ಯೋಗ್ಯ ಮಾರ್ಗಕ್ಕೆ ಹತ್ತು, ವ್ಯವಸ್ಥೆಗೆ ಹತ್ತು.

**सुफराटा** (ಸುಫರಾಟಾ) ವಿ. ನ. ಶಿಸ್ತಿಗೆ ಒಳಪಟ್ಟು, ನಿಯಮಿತ, ಕ್ರಮಪ್ರಕಾರದ, ಓರಣದ, ಒಳ್ಳೆಯ ಪದ್ಧತಿಯ, ನಿತ್ಯಗಟ್ಲೆ ಯೋಗ್ಯ ವಿಚಾರದ.

**सुफल–ळ** (ಸುಫಲ–ಳ್) ನ. ಉತ್ತಮಫಲ, ಆನಂದಕರ ಪರಿಣಾಮ, ಕಾರ್ಯಸಾಧನೆ, ಗುಣಕರ, ಸಾರ್ಥಕ, ಫಲದಾಯಕ.

**सुंब,–भ** (ಸುಂಬ–ಭ) ನ. ಹುರಿ, ಕಾತಿ, ನುಲಿ, ತೆಂಗಿನನಾರು, ಕತ್ತ.

**सुंब जळे पण पीळ न जळे** (ಸುಂಭ ಜಳೇ ಪಣ ಪೀಳ್ ನ ಜಳೇ) (ಗಾದೆಯಮಾತು) ಹಗ್ಗಸುಟ್ಟರೂ ಹುರಿ ಸುಡಲಿಲ್ಲ, ಹುಣಸೆ ಮುಪ್ಪಾದರೂ ಹುಳಿ ಮುಪ್ಪಾಗಲಿಲ್ಲ.

**सुबक** (ಸುಬಕ) ವಿ. ಫಾ. (ಸಬುಕ್) ನುಣುಪಾದ ಚಂದಕಾಣುವ.

**सुबकणे** (ಸುಬಕಣೇ) ಕ್ರಿ. ಸ. ಬಟ್ಟೆಒಗೆ.

**सुंबणे** (ಸುಂಬಣೇ) ಕ್ರಿ. ನ. ಹೆಣೆ, ಹೊರಸು ಹೆಣೆ, ನುಲಿಯಿಂದ ಹೊರಸು ಹೆಣೆ.

**सुबत्ता** (ಸುಬತ್ತಾ) ಸ್ತ್ರೀ. ಸುಭಿಕ್ಷ, ವೈಪುಲ್ಯ, ಅಭಿವೃದ್ಧಿ.

**सुबत्ताकाळ** (ಸುಬತ್ತಾಕಾಳ್) ಪು. ಸಂ. ಶಾಂತತೆಯ ಕಾಲ, ವೈಪುಲ್ಯದ ಸಮಯ, ಸುಭಿಕ್ಷಾಪ್ರಸಂಗ.

**सुबद्ध** (ಸುಬದ್ಧ) ವಿ. ಸಂ. ಒಳ್ಳೆಯ ಗಟ್ಟಿಯಾದ, ಒಳ್ಳೆಯ ಬಿಗುವಿನ.

**सुंबा–भा** (ಸುಂಬಾ–ಭಾ) ಪು. ಉಳಿ, ಕಬ್ಬಿಣದಉಳಿ, ಉಪ್ಪಾರನಉಳಿ.

**सुबा–भा** (ಸುಬಾ–ಭಾ) ಪು. ಅರ. ಪ್ರಾಂತ, ರಾಜ್ಯ, ರಾಜ್ಯವಿಭಾಗ. ೨. ಪ್ರಾಂತಾಧಿಕಾರಿ.

**सुबुद्ध,–द्धि** (ಸುಬುದ್ಧ–ದ್ಧಿ) ವಿ.ಸಂ. ಒಳ್ಳೆಯಜಾಣ, ಬಹಳಜಾಣ, ಬುದ್ಧಿಬಲವುಳ್ಳ, ಬಲ್ಲ, ಜಾಣ.

**सुबे(भे)दार** (ಸುಬೇ(ಭೇ)ದಾರ್) ಪು. ನ. ಪ್ರಾಂತದ ಅಧಿಕಾರಿ, ಪ್ರಾಂತದ ಮುಖ್ಯಾಧಿಕಾರಿ.

**सुबोध** (ಸುಬೋಧ) ವಿ. ಸಂ. ಉತ್ತಮ ಉಪದೇಶ, ನೀತಿಯಮಾತು, ಸನ್ಮಾರ್ಗದರ್ಶನ, ೨. ವಿ. ಚೆನ್ನಾಗಿ ತಿಳಿಯುವ ಸುಲಭ, ಓದಲಿಕ್ಕೆ ಬರುವ.

**सुंभ** (ಸುಂಭ) ಪು. ಜೀನ. ೨. ತೆಂಗಿನ ಜುಟ್ಟು.

**सुभक्त** (ಸುಭಕ್ತ) ವಿ. ಸಂ. ಮಹಾಭಕ್ತ, ಒಳ್ಳೆಯ ಭಕ್ತ, ಭಕ್ತಿಯಮಾರ್ಗದ, ಭಕ್ತಿಗೆಅಂಟಿಕೊಂಡಿದ್ದ.

**सुभग** (ಸುಭಗ) ವಿ. ಸಂ. ಸುದೈವಿಯಾದ, ಅದೃಷ್ಟಶಾಲಿ.

**सुभट** (ಸುಭಟ) ವಿ. ಸಂ. ಬಹಳ ಶೂರನಾದ, ಪ್ರಚಂಡ ಬಲಶಾಲಿಯಾದ.

**सुभाषित** (ಸುಭಾಷಿತ) ನ. ಸಂ. ನೀತಿಯವಾಕ್ಯ, ನೀತಿಯಮಾತು, ಉತ್ತಮ ಭಾಷಣ.

**सुभिक्ष** (ಸುಭಿಕ್ಷ) ನ. ಸಂ. ವೈಪುಲ್ಯ, ವಿಪುಲತೆ, ಜೀವನಾವಶ್ಯಕ ವಸ್ತುಗಳ ಅಗ್ಗಳತೆ.

**सुमंत** (ಸುಮಂತ) ಪು. ಸಂ. ಅಷ್ಟಪ್ರಧಾನರವರೊಳಗಿನ ಪ್ರಧಾನ, ಸುಮಂತ.

**सुमन** (ಸುಮನ್) ನ. ಸ. ಹೂವು. ೨. ಪವಿತ್ರ ಮನಸ್ಸು. ೩. ಗೋದಿ. ೪. ಈಶ್ವರ, ದೇವರು.

**सुमनस्क** (ಸುಮನಸ್ಕ) ವಿ.} ಉತ್ತಮ ಭಾವನೆಯ,
**सुमना** (ಸುಮನಾ) ವಿ. } ಒಳ್ಳೆಯ ಮನಸ್ಸಿನ, ಗಟ್ಟಿಮನಸ್ಸಿನ.

**सुमार** (ಸುಮಾರ) ಪು. ಫಾ. ಸಂಖ್ಯೆ, ಅಂದಾಜು. ೨. ವಿ. ಕಾಡು, ಸುಮಾರು.

**सुमारमाफक** (ಸುಮಾರಮಾಫಕ್) (ಸುಮಾರಿನ
**सुमाराचा** (ಸುಮಾರಾಚಾ) ವಿ. (ಮಟ್ಟಿನ, ಸಾಧಾರಣ, ಮಧ್ಯಮ.

**सुमारी** (ಸುಮಾರೀ) ಸ್ತ್ರೀ. ಫಾ. ಸಂಖ್ಯೆಯಗುರ್ತಿನ, ಎಣಿಸುವಿಕೆ.

**सुमारे** (ಸುಮಾರೇ) ಕ್ರಿ. ವಿ. ಫಾ. ಅಂದಾಜಾಗಿ, ಸಮೀಪವಾಗಿ, ಸಾಧಾರಣವಾಗಿ, ಹೆಚ್ಚು–ಕೆಡಿಮೆ, ಅಜಮಾಸು.

**सुमार्ग** (ಸುಮಾರ್ಗ) ಪು. ಸಂ. ಒಳ್ಳೆಯ ಹಾದಿ, ಸುಪಥ, ಒಳ್ಳೆಯದಾರಿ, ಒಳ್ಳೆಯ ವಿಚಾರ.

**सुमुहूर्त** (ಸುಮುಹೂರ್ತ) ಪು. ನ. ಉತ್ತಮಕಾಲ, ಶುಭವೇಳೆ, ಶುಭಸಮಯ, ಯೋಗ್ಯಕಾಲ, ಸುಕಾಲ.

**सुमेधा** (ಸುಮೇಧಾ) ವಿ. ಸಂ. ಜಾಣನಾದ, ಪಂಡಿತನಾದ, ಸೂಜ್ಞತೆಯುಳ್ಳ ಬುದ್ಧಿವಂತ, ತಿಳುವಳಿಕೆಯ, ಸೂಕ್ಷ್ಮ, ನಾಜೂಕಾದ.

**सुयटा–रा** (ಸುಯಟಾ–ರಾ) ಪು. ( ಸಿಬಿರು, ಸಲಾಕೆ.
**सुयटी** (ಸುಯಟೀ) ಸ್ತ್ರೀ. (

**सुयंत्र** (ಸುಯಂತ್ರ) ವಿ. ಸಂ. ಉತ್ತಮ ಆಡಳಿತದ, ವ್ಯವಸ್ಥಿತ, ಚಲೋರಚನೆಯ.

**सुयुक्त** (ಸುಯುಕ್ತ) ವಿ. ಸಂ. ಚೆನ್ನಾಗಿ ಕೂಡಿಸಿದ, ಅನುಗುಣದ, ಸ್ಥಿರ, ಚಲೋಯೋಜನೆಯ, ಸನ್ನಿಯುಕ್ತ.

**सुयुक्ति** (ಸುಯುಕ್ತಿ) ಸ್ತ್ರೀ. ಉತ್ತಮ ಹಂಚಿಕೆ, ಒಳ್ಳೆಯ ಯೋಜನೆ, ಒಳ್ಳೆಯ ಸಾಧನೆ, ಉತ್ತಮ ತಂತ್ರ, ಯೋಗ್ಯ ಇಲಾಜು.

**सुर** (ಸುರ) ಪು. ಸಂ. ದೇವತೆ, ಈಶ್ವರ, ದೇವ.

**सुरई** (ಸುರಈ) ಸ್ತ್ರೀ. ಸುರಗಿ ಗಿಡ, ಬಾಗಿದ ಖಡ್ಗ, ಕುಡಗೋಲು, ಚೂರಿ.

**सुरकन्–दिशी** (ಸುರಕನ್–ದಿಶೀ) ಕ್ರಿ. ವಿ. ಸರಕ್ಕನೆ, ಸರಕ್ಕೆಂದು, ಝುರ್ರನೆ, ಝುರಕ್ಕನೆ.

**सुरकं(कां)डी-सुरकुडी** (ಸುರಕಂ(ಕಾಂ)ಡೀ-ಸುರಕುಡೀ) ಸ್ತ್ರೀ. ನೀರಿನಲ್ಲಿ ಜಿಗಿಯುವಿಕೆ, ನೀರಿನಲ್ಲಿ ಸುರಂಗಿ ಹೊಡೆಯುವಿಕೆ.

**सुरकणे** (ಸುರಕಣೇ) ಕ್ರಿ. ಸೀಳು, ಬಿರಿ, ಸಿಡಿಯು, ಬುಸ್ಎನ್ನು, ಭುಸಗುಟ್ಟು, ಅಸಹ್ಯವಾಗಿ ಇಸ್ ಅನ್ನು, ಗುಪ್ತತೆಯಿಂದ ಮರೆಯಾಗು, ಪಾರಾಗಿ ಹೋಗು.

**सुरकुडी** (ಸುರಕುಡೀ) ಸ್ತ್ರೀ. **सुरकंडी** ನೋ.

**सुरकुतणे** (ಸುರಕುತಣೇ) ಕ್ರಿ. ಅ. ಸಿಕ್ಕಿಕೊಳ್ಳು, ಸಡಿಲು ಚರ್ಮದ ನೀರಿಗೆಯಾಗು.

**सुरकुती** (ಸುರಕುತೀ) ಸ್ತ್ರೀ. ನೀರಿಗೆ, ಮಡಿಕೆ, ಸುಕ್ಕು, ಗಲಿಬಿಲಿ, ತೊಡಕು, ಕಳವಳ.

**सुरंग** (ಸುರಂಗ) ಪು. ಸಂ. ಸುರಂಗ, (ಕಲ್ಲು ಒಡೆಯಲಿಕ್ಕೆ ಹಚ್ಚಿದ–ಸುರಂಗ–ಬೊಗದೆ ತೆಗೆಯಲಿಕ್ಕೆ) ಒಂದು ಜಾತಿಯ ಗಿಡ, ಚಿಲೋ ಬಣ್ಣದ, ಒಡಕು ಹುಟ್ಟಿಸುವ.

**सुरगाठ** (ಸುರಗಾಠ್) ಸ್ತ್ರೀ. "**सुटगांठ**" ನೋ.

**सुरंगी** (ಸುರಂಗೀ) ಸ್ತ್ರೀ. ಸುರಂಗದ ಹಾರಿ, ಒಂದು ಜಾತಿಯ ಹೂ ಗಿಡ.

**सुरगुरु** (ಸುರಗುರು) ಪು. ದೇವರಗುರು, ಬೃಹಸ್ಪತಿ.

**सुरंज** (ಸುರಂಜ) ಪು. } ಒಂದು ಜಾತಿಯ ಗಿಡ.
**सुरंजी** (ಸುರಂಜೀ) ಸ್ತ್ರೀ. }

**सुरंट, सुरवंट सुरट** (ಸುರಂಟ, ಸುರವಂಟ್, ಸುರಟ್) ಪು. ಕೋರಿಹುಳ, ಕಂಬಳಿಹುಳ, ಕೀಟ.

**सुरण** (ಸುರಣ) ಪು. ಸೂರಣಗಡ್ಡೆ.

**सुरत** (ಸೂರತ) ಸ್ತ್ರೀ.ಸಂ.ಅರ. ಚರ್ಯೆ, ಮುಖ. ೨. ನ.ಸಂ. ಸಂಭೋಗ. ವಿ. ಚೆನ್ನಾಗಿ ಬೆರೆತ, ಅನುರಕ್ತ.

**सुरतपाक** (ಸುರತಪಾಕ) ವಿ. ಒಳ್ಳೆಯ ಅಡಿಗೆ ಮಾಡುವ (ನು, ಳು.)

**सुरनदी** (ಸುರನದೀ) ಸ್ತ್ರೀ. ದೇವನದಿ, ಭಾಗೀರಥಿ, ಆಕಾಶಗಂಗೆ, ಸುಂದರ ವಸ್ತು ಸಮುದಾಯ, ವಿದ್ವನ್ಮಂಡಲಿ.

**सुरपणे** (ಸುರಪಣೇ) ಕ್ರಿ. ಅ. ಹುಳಹತ್ತಿ ಪೊಳ್ಳಾಗು.

**सुरपाटी** (ಸುರಪಾಟೀ) ಸ್ತ್ರೀ. ಒಂದು ಪ್ರಕಾರದ ಆಟ, ತಿಳ್ಳಿಯ ಆಟದ ನಡುವಿನ ಉದ್ದಗೆರೆ.

**सुरभि** (ಸುರಭಿ) ವಿ. ಸಂ. ಮಧುರವಾಸನೆಯ, ಸುಗಂಧವುಳ್ಳ. ೨. ಸ್ತ್ರೀ. ಸುವಾಸನೆ.

**सुरभी** (ಸುರಭೀ) ಸ್ತ್ರೀ. ಸಂ. ಕಾಮಧೇನು, ಕಪಿಲೆ.

**सुरमा** (ಸುರಮಾ) ಪು. ಫಾ. ಕಣ್ಣಿನ ತಂಪು ಕಾಡಿಗೆ, ತವಕೀಲ, ಸುರಮಾಧಾತು.

**सुरमाड** (ಸುರಮಾಡ್) ಪು. ತೆಂಗಿನ ಜಾತಿ.

**सुरलोक** (ಸುರಲೋಕ) ಪು. ಸಂ. ದೇವಲೋಕ, ಸ್ವರ್ಗ.

**सुरवंट** (ಸುರವಂಟ್) ಪು. ಕೋರಿಹುಳ.

**सुरवा** (ಸುರವಾ) ಪು. ಕೋಮಲಸುಳಿ. "**सुएदा**" ನೋ. ಪಾತ್ರೆ, ನೀರಿನ ಪಾತ್ರೆ.

**सुरवात** (ಸುರವಾತ್) ಸ್ತ್ರೀ. ಅರ. ಪ್ರಾರಂಭ, ಆರಂಭ, ಶ್ರೀಗಣೇಶ.

**सुरवार** (ಸುರವಾರ್) ಸ್ತ್ರೀ. ಹಿಂ. ಬಿಗಿಚಣ್ಣ, ಮೊಳಕಾಲಬಿಗಿ ಚೆಲ್ಲಣ.

**सुरवारी हिरडा** (ಸುರವಾರೀ ಹಿರಡಾ) ಪು. ಅಳಲೆಯ ಕಾಯಿಯ ಜಾತಿ.

**सुरस** (ಸುರಸ) ವಿ. ಸಂ. ರುಚಿಕರ, ರುಚಿಯುಳ್ಳ, ಮಧುರ, ಸ್ವಾದಿಷ್ಟ.

**सुरसा** (ಸುರಸಾ) ಪು. ಎರಡೂ ತುದಿ ಚೂಪಾದ ಮೊಳೆ.

**सुरसुरणें** (ಸುರಸುರಣೇ) ಕ್ರಿ. ಅ. (ಕೈ, ಕಾಲು ಹರಿ) ಹರಿ. ೨. ತವಕಪಡು.

**सुरसुर** (ಸುರಸುರ) ಸ್ತ್ರೀ. ತವಕ, ಉತ್ಸಾಹ. ೨. ಸುರಸುರ ಶಬ್ದ.

**सुरळी** (ಸುರಳೀ) ಸ್ತ್ರೀ. ಸಂ. ಸುರಳಿ, ಸುತ್ತು, ಒಂದು ಪ್ರಕಾರದ ಉಡುಪು, ಸುರಳಿಹುಳ.

**सुरळीत** (ಸುರಳೀತ) ವಿ. ನೆಟ್ಟಗೆ, ವ್ಯವಸ್ಥಿತ, ಸುರಕ್ಷಿತ. ೨. ಕ್ರಿ. ವಿ. ನೆಟ್ಟಗೆ, ವ್ಯವಸ್ಥಿತವಾಗಿ, ಆತಂಕವಿಲ್ಲದ.

**सुरक्षण** (ಸುರಕ್ಷಣ) ನ. ಸಂ. ಬಲವಾದ ರಕ್ಷಣೆ, ಸುಸ್ಥಿತಿಯಲ್ಲಿರುವಿಕೆ.

**सुरक्षित** (ಸುರಕ್ಷಿತ) ವಿ. ಚೆನ್ನಾಗಿ ಕಾಪಾಡಿದ, ಸರಿಯಾದ, ಸರಿಯಾಗಿ ಕಾಯ್ದು, ಚೆನ್ನಾಗಿ ರಕ್ಷಿಸಿದ. ೨. ಕ್ರಿ. ವಿ. ಯಾವ ಆತಂಕವಿಲ್ಲದೆ.

**सुरा** (ಸುರಾ) ಪು. ಉದ್ದ ಚಾಕು, ಉದ್ದ ಚೂರಿ. ೨. ಸ್ತ್ರೀ. ಸಂ. ಮದ್ಯ, ಸೆರೆ, ಸೋಮ.

**सुरा–या–खार** (ಸುರಾ–ರ್ಯಾ–ಖಾರ್) ಪು. ಸುರಾಖಾರ, ಸೋರುಪ್ಪು, ಸೂರ್ಯಖಾರ.

**सुरांगना** (ಸುರಾಂಗನಾ) ಸ್ತ್ರೀ. ಅಪ್ಸರೆ, ಮೋಹಿನಿ.

**सुराचार्य** (ಸುರಾಚಾರ್ಯ) ಪು. ದೇವತೆಗಳ ಆಚಾರ್ಯ, ಬೃಹಸ್ಪತಿ.

**सुरापान** (ಸುರಾಪಾನ) ನ. ಸಂ. ಮಾದಕ ಪದಾರ್ಥ ಸೇವನೆ, ಸೋಮಪಾನ, ಸೆರೆ ಕುಡಿಯುವಿಕೆ.

**सुरामेह** (ಸುರಾಮೇಹ) ಪು. ಸಂ. ಮಧುಮೇಹ, ಸಕ್ಕರೆ ರೋಗ.

**सुरालय** (ಸುರಾಲಯ) ಪು. ಮೇರುಪರ್ವತ, ಸುಂದರವನ, ನಂದನವನ, ದೇವತಾಮಂದಿರ.

**सुराष्ट्र** (ಸುರಾಷ್ಟ್ರ) ನ. ಸಂ. ಸೌರಾಷ್ಟ್ರ.

**सुरी** (ಸುರೀ) ಸ್ತ್ರೀ. ಚೂರಿ, ಚಾಕು.

**सुरुंग** (ಸುರುಂಗ) ಪು. **सुरंग** ನೋ.

**सुरु** (ಸುರು) ವಿ. ಅರ. ಪ್ರಾರಂಭಿಸಲ್ಪಟ್ಟ, ನಡೆಯುತ್ತಿರುವ. ಷುರುವಾದ.

**सुरुवात** (ಸುರುವಾತ) ಸ್ತ್ರೀ. ಅರ. ಪ್ರಾರಂಭ.

**सुरूप** (ಸುರೂಪ) ನ. ಸಂ. ಸುಂದರವಾದ, ಚೆಂದ, ಸೌಂದರ್ಯವುಳ್ಳ, ಅಂದದ, ಚೆಂದದ, ಚೆಲುವಿನ.

**सुरेख** (ಸುರೇಖ್) ವಿ. ನೆಟ್ಟಗಿದ್ದ, ವ್ಯವಸ್ಥಿತ, ಸುಂದರ, ಶೋಭೆಯುಳ್ಳ.

**सुऱ्या** (ಸುರ್ಯಾ) ಪು. ಛಿದ್ರ ಹಾಕಿದ ಪಾತ್ರೆ, ಹಿಮ್ಮೇಳಕ್ಕೆ ಹಾಡುವವನು, ಧ್ವನಿಕೂಡಿಸುವವನು.

**सुलखणी** (ಸುಲಖಣೀ) ಸ್ತ್ರೀ. ಬಂಗಾರ ಒರೆಗೆ ಹಚ್ಚುವಿಕೆ, ಪರೀಕ್ಷೆ, ಶೋಧನೆ, ಒರೆಗಲ್ಲು.

**सुलखणे** (ಸುಲಖಣೇ) ಕ್ರಿ. ವಿ. ಒರೆಗೆಹಚ್ಚು, ಶೋಧಿಸು, ಪರೀಕ್ಷಿಸು.

**सुलज्ज** (ಸುಲಜ್ಜ) **सुलज** (ಸುಲಜ) ವಿ. ನಾಚುಬುರುಕ, ಮರ್ಯಾದೆಯ, ಗೌರವದ, ಒಪ್ಪಾದ, ಯೋಗ್ಯವಾದ, ಯೋಗ್ಯ, ಉಚಿತದ, ಶಿಷ್ಟ.

**सुलटणे** (ಸುಲಟಣೇ) ಕ್ರಿ. ಅ. ಯೋಗ್ಯಸ್ಥಾನಕ್ಕೆ ಇಡು, ಸರಿಯಾಗಿ ಇಡು, ಹೊರಳಿಸು.

**सुलटा** (ಸುಲಟಾ) ವಿ. **सुफराटा** ನೋ.

**सुलतानी** (ಸುಲತಾನೀ) ಸ್ತ್ರೀ. ಅರ. ದಬ್ಬಾಳಿಕೆ, ಬಲುಮೆ, ಬಲ್ಮೆ. ೨. ವಿ. ಅರಸನ.

**सुलतानी कोस** (ಸುಲತಾನೀ ಕೋಸ್) ಪು. ಐದು ಮೈಲಿನ ಹರದಾರಿ, ದೂರದ ಹಾದಿ.

**सुलभ** (ಸುಲಭ) ವಿ. ಸ. ಸಹಜ ಪ್ರಾಪ್ತ, ನೈಸರ್ಗಿಕ ಲಭ್ಯ, ಅನಾಯಾಸ ಸಾಧ್ಯವಾದ, ಸುಕರ.

**सुलक्षण** (ಸುಲಕ್ಷಣ) ವಿ. ಸ. ಶುಭಚಿಹ್ನೆ, ಸದ್ಗುಣ, ಸಲ್ಲಕ್ಷಣ, ಶುಭಶಕುನ.

**सुलक्षणिक, सुलक्षणी** (ಸುಲಕ್ಷಣಿಕ, ಸುಲಕ್ಷಣೀ) ವಿ. ಶುಭಚಿಹ್ನೆಯ, ಸದ್ಗುಣವುಳ್ಳ, ಶುಭಶಕುನದ.

**सुलाख** (ಸುಲಾಖ್) ಪು. ಸುವರ್ಣಾಲಂಕಾರಛಿದ್ರ, ಬಂಗಾರದ ಆಭರಣದಲ್ಲಿಯ ತೂತು, ಒರೆಗಾಗಿ ಬಂಗಾರದಲ್ಲಿ ತೆಗೆದ ತೂತು, ಸುವರ್ಣ ಪರೀಕ್ಷಾ–ಛಿದ್ರ.

**सुलाखणे** (ಸುಲಾಖಣೇ) ಕ್ರಿ. ಸ. ಧಾತುವಿನಲ್ಲಿ ಛಿದ್ರತೆಗೆ, ಬಂಗಾರದಲ್ಲಿ ಛಿದ್ರ ಹಾಕು, ಬಂಗಾರದಲ್ಲಿ ಅರಗು ತುಂಬು.

**सुलूख–क** (ಸುಲೂಖ್–ಕ್) ಪು. ಅರ. ಒಪ್ಪಿಗೆ, ಒಪ್ಪಂದ, ರಾಜೀ ಮಾಡಿಸುವಿಕೆ.

**सुंवरा** (ಸುವರಾ) ವಿ. ಕೋಮಲ.

**सुवर्ण** (ಸುವರ್ಣ) ನ. ಸಂ. ಕನಕ, ಬಂಗಾರ, ಚಿನ್ನ, ಬಂಗಾರದ, ಉತ್ತಮ ಬಣ್ಣದ, ಒಳ್ಳೆಯ ಜಾತಿಯ, ಕುಲೀನ ಜಾತಿಯ.

**सुवर्णलंकार** (ಸುವರ್ಣಾಲಂಕಾರ) ಪು. ಸಂ. ಬಂಗಾರದ ಆಭರಣ.

**सुवर्णकार** (ಸುವರ್ಣಕಾರ) ಪು. ಪತ್ತಾರ, ಪತ್ತಾರ ಜಾತಿ.

**सुवर्णपुष्प** (ಸುವರ್ಣಪುಷ್ಪ) ನ. ಸಂ. ಚಂಪಕಪುಷ್ಪ, ಸಂಪಿಗೆ, ಬಂಗಾರ ಹೂವು. ೨. ಹಣ (ದಕ್ಷಿಣೆ)

**सुवर्णमाक्षिक** (ಸುವರ್ಣಮಾಕ್ಷಿಕ) ನ. ಸಂ. **सुवर्ण मुखी** (ಸುವರ್ಣಮುಖೀ) ಸ್ತ್ರೀ. ಒಂದು ಔಷಧ, 'ಸುವರ್ಣಮಾಕ್ಷಿಕ' ಖನಿಜ ಪದಾರ್ಥ, ಕಚ್ಚಾ ಕಬ್ಬಿಣ, ಕಬ್ಬಿಣದ ಅದಿರು.

**सुवह** (ಸುವಹ) ವಿ. ಸಂ. ತಾಳ್ಮೆಯ, ಸಹನಶೀಲತೆಯುಳ್ಳ, ಶಾಂತ, ವ್ಯವಸ್ಥಿತ ನಡೆಯುವ– ಸಾಗಿಸುವ.

**सुवाच्य** (ಸುವಾಚ್ಯ) ವಿ. ಸಂ. ಓದಲಿಕ್ಕೆ ಸುಲಭವಾದ, ಸ್ಪಷ್ಟ, ಸರಳ, ಸಾದಾ.

**सुवारा** (ಸುವಾರಾ) ಪು. ಸುದ್ದಿ, ಸಂದೇಶ, ವಾರ್ತೆ, ಸುವಾರ್ತೆ.

**सुवार्ता** (ಸುವಾರ್ತಾ) ಸ್ತ್ರೀ. ಶುಭ ವರ್ತಮಾನ, ಸುದ್ದಿ, ಮಂಗಲ ಸಂದೇಶ.

**सुवास** (ಸುವಾಸ) ಪು. ಸುಗಂಧ.

**सुवासिक** (ಸುವಾಸಿಕ) / **सुवासित** (ಸುವಾಸಿತ) ವಿ. ಸುಗಂಧವುಳ್ಳ.

**सुवासिनी** (ಸುವಾಸಿನೀ) / **सुवाशीण** (ಸುವಾಶೀಣ) ಸ್ತ್ರೀ. ಮುತ್ತೈದೆ, ಸಧವೆ, ಸೌಭಾಗ್ಯವತಿ.

**सुविद्य** (ಸುವಿದ್ಯ) ವಿ. ಕಲಿತವ, ವಿದ್ಯೆ ಕಲಿತವ.

**सुवीण** (ಸುವೀಣ್) ಸ್ತ್ರೀ. ಸೂಲಗಿತ್ತಿ, ಬಾಣಂತಿತನ ಮಾಡುವವಳು.

**सुवेत** (ಸುವೇತ್) ನ. ಹೆರಿಗೆ, ಪ್ರಸವ, ಪ್ರಸೂತಿ. ಸಕಾಲಕ್ಕೆ ಸುಲಭವಾಗಿ ಹಡೆದ.

**सुवेर** (ಸುವೇರ) ಪು. ವೃದ್ಧಿ, ಪ್ರಸೂತಿ, ಅಶಾಂತ, **–सुतक** (–ಸುತಕ) ಪು. ಸಂಬಂಧ.

**सुवेळ** (ಸುವೇಳ್) ಸ್ತ್ರೀ. ಉತ್ತಮ ಕಾಲ, ಶುಭ ಶಕುನ, ಅನುಕೂಲ ಸಮಯ, ಉತ್ತಮ ಗ್ರಹದೆಸೆ.

**सुशिक्षा** (ಸುಶಿಕ್ಷಾ) ಸ್ತ್ರೀ. ಸಂ. ಉತ್ತಮ ಶಿಕ್ಷಣ. ಒಳ್ಳೆಯ ಮಾರ್ಗದರ್ಶನ, ಸದುಪದೇಶ, ಸಚ್ಛಿಕ್ಷಣ.

**सुशिक्षित** (ಸುಶಿಕ್ಷಿತ) ವಿ. ಸಂ. ಉತ್ತಮ ಶಿಕ್ಷಣ ಪಡೆದ, ಸನ್ಮಾರ್ಗದರ್ಶಿತ, ಜಾಣ, ವಿದ್ವಾಂಸ.

**सुशील** (ಸುಶೀಲ) ವಿ. ಸಂ. ಒಳ್ಳೆಯ ನಡತೆಯ, ಸದ್ವರ್ತನದ.

**सुशोभित** (ಸುಶೋಭಿತ) ವಿ. ಸಂ. ಸುಂದರವಾದ, ಚೆಂದ, ಸಿಂಗರಿಸಿದ.

**सुश्रांतणे** (ಸುಶ್ರಾಂತಣೇ) ಕ್ರಿ. ಅ. ಬಹಳ ದಣಿಸು, ಆಯಾಸಗೊಳಿಸು,

**सुश्राव्य** (ಸುಶ್ರಾವ್ಯ) ವಿ. ಸಂ. ಕೇಳತಕ್ಕ, ಕೇಳಲು ಯೋಗ್ಯ, ಮಧುರ, ಆನಂದದಾಯಕ.

**सुषुप्ति** (ಸುಷುಪ್ತಿ) ಸ್ತ್ರೀ. ಗಾಢನಿದ್ರೆ, ಗಡದ್ದು ನಿದ್ರೆ.

**सुष्ट,–ष्ठ** (ಸುಷ್ಟ–ಷ್ಠ) ವಿ. ಸಂ. ಚೆಲೋ, ಉತ್ತಮ, ಒಳ್ಳೆಯ.

**सुष्ठासुष्ठ** (ಸುಷ್ಠಾಸುಷ್ಠ) ಕ್ರಿ. ವಿ. ಚೆಲೋ ಕೆಟ್ಟ, ಪುಣ್ಯಾಪುಣ್ಯ.

**सुसकारा** (ಸುಸಕಾರಾ) **सुस्कारा** (ಸುಸ್ಕಾರಾ) ಪು. ಉಚ್ಛ್ವಾಸ, ನಿಶ್ವಾಸ, ನಿಟ್ಟುಸಿರು, ದೀರ್ಘಶ್ವಾಸ.

**सुसकारणे–सुस्कारणे** (ಸುಸಕಾರಣೇ–ಸುಸ್ಕಾರಣೇ) ಕ್ರಿ. ಅ. ದೀರ್ಘಶ್ವಾಸ ತಕ್ಕೊಳ್ಳು, ನಿಟ್ಟುಸಿರುಬಿಡು.

**सुसंग** (ಸುಸಂಗ) ಪು. **सुसंगति** (ಸುಸಂಗತಿ) ಸ್ತ್ರೀ. ಸಂ. ಒಳ್ಳೆಯ ಸಹವಾಸ, ಚೆಲೋ ಗೆಳೆತನ, ಒಳ್ಳೆಯ ಜೊತೆಗಾರಿಕೆ.

**सुसंबद्ध** (ಸುಸಂಬದ್ಧ) ವಿ. ಸಂ. ಉತ್ತಮವಾಗಿ ಜೋಡಿಸಿದ, ಅಚ್ಚುಕಟ್ಟಾದ.

**सुसर** (ಸುಸರ್) ಸ್ತ್ರೀ. ಮೊಸಳೆ, ಮಕರ.

**सुसह–ह्य** (ಸುಸಹ – ಸುಸಹ್ಯ) ವಿ. ಸಂ. ತಾಳ ಬಹುದಾದ.

**सुसा** (ಸುಸಾ) ಪು. ದನದ ಒಂದು ಬೇನೆ, ಪಶು ವ್ಯಾಧಿ, ಧಾತುವಿನ ಒಂದು ಪಾತ್ರೆ.

**सुसाट,–टा** (ಸುಸಾಟ –ಟಾ) ಪು. ರಭಸ.

**सुसाटणे** (ಸುಸಾಟಣೇ) ಕ್ರಿ. ಅ. ಗರ್ಜಿಸು, ಆರ್ಭಟಿಸು, ಒದರು, ಗಟ್ಟಿಯಾಗಿ ಕೂಗು, ವೇಗದಿಂದ ಸಾಗು, ರಭಸದಿಂದ ಸಾಗು, ಮುಗಿಬೀಳು, ಮೇಲ್ಬೀಳು.

**सुसाध्य** (ಸುಸಾಧ್ಯ) ವಿ. ಸಂ. ಸಹಜ ಪ್ರಾಪ್ಯ, ಸಹಜ ಲಭ್ಯ, ಅನಾಯಾಸ ಲಭಿಸುವ, ಸುಗಮ.

**सुसूत्र** (ಸುಸೂತ್ರ) ವಿ. ಸಂ. ಒಳ್ಳೆಯ ಸಂಬಂಧವಿರುವ, ಸುವ್ಯವಸ್ಥಿತ, ತೊಂದರೆಯಿಲ್ಲದ, ಸುಸೂತ್ರ.

**सुस्त** (ಸುಸ್ತ) ವಿ. ಫಾ. ಮಂದ, ಜಡ, ಧಡ್ಡ, ಸೋಮಾರಿ, ನಿಶ್ಚಿಂತವಾಗಿ.

**सुस्ताई** (ಸುಸ್ತಾಈ) ಸ್ತ್ರೀ. ಮಂದತನ, ಜಾಡ್ಯ, ಸೋಮಾರಿತನ.

**सुस्तावणें** (ಸುಸ್ತಾವಣೇ) ಕ್ರಿ. ಅ. ಫಾ. ಮಂದನಾಗು, ಜಡವಾಗು, ಜಾಡ್ಯಹೊಂದು, ಸೋಮಾರಿಯಾಗು.

**सुस्ती** (ಸುಸ್ತೀ) ಸ್ತ್ರೀ. ಫಾ. ಮಾಂದ್ಯ, ಜಡತ್ವ, "**सुस्ताई**" ನೋ.

**सुस्थ** (ಸುಸ್ಥ) ವಿ.ಸಂ. ಚೆನ್ನಾದ, ಉತ್ತಮಪರಿಸ್ಥಿಯ, ಆರೋಗ್ಯವುಳ್ಳ, ಗುಣಕರ, ಸಂತೋಷವುಳ್ಳ, ಅದೃಷ್ಟವುಳ್ಳ, ತೃಪ್ತ.

**सुस्थल** (ಸುಸ್ಥಲ) ನ. ಸಂ. ಉತ್ತಮ ಸ್ಥಳ, ಚೆಲೋ ಜಾಗ, ತಂಪು ಹವೆಯ ಸ್ಥಳ.

**सुस्थिति** (ಸುಸ್ಥಿತಿ) ಸ್ತ್ರೀ. ಸಂ. ಒಳ್ಳೆಯ ಸ್ಥಿತಿ, ಸೌಖ್ಯ.

**सुस्नात** (ಸುಸ್ನಾತ) ವಿ. ಸಂ. ಅಭ್ಯಂಗಸ್ನಾನ ಮಾಡಿದ, ಯಜ್ಞಪೂರ್ತಿನಂತರ ಸ್ನಾನಮಾಡಿದ.

**सुस्वभाव** (ಸುಸ್ವಭಾವ) ಪು. ಸಂ. ಉತ್ತಮಾಚರಣೆ, ಚೆಲೋನಡತೆ, ಸುಶೀಲತೆ.

**सुस्वर** (ಸುಸ್ವರ) ಪು. ಸಂ. ಮಧುರಧ್ವನಿ, ಇಂಪಾದ ಧ್ವನಿ, ಸಂಗೀತಸ್ವರ.

**सुहागी** (ಸುಹಾಗೀ) ಪು. ಬಳೆಗಾರ, ಕಾಸಾರ, ಟಂಕಣ, ಡಾಕು.

**सुहास्यवदन** (ಸುಹಾಸ್ಯವದನ) ವಿ.ಸಂ. ಮಂದಹಾಸ್ಯ ವದನದ, ನಗುಮೋರೆಯ, ಆನಂದಕರ ಮುಖದ.

**सुहृत्-द्** (ಸುಹೃತ್–ದ್) ಪು. ಗೆಳೆಯ, ಮಿತ್ರ, ಸ್ನೇಹಿತ, ಸಹಾಯಕ.

**सुहृदय** (ಸುಹೃದಯ) ವಿ. ಒಳ್ಳೆಯ ಭಾವನೆಯ, ಒಳ್ಳೆಯ ಅಂತಃಕರಣದ, ಸದಂತಃಕರಣದ.

**सुळकन्,-दिशी** (ಸುಳಕನ್-ದಿಶೀ) ಕ್ರಿ. ವಿ. ಸರಕ್ಕನೆ, ಝುರಕ್ಕನೆ, ಝುಟಕ್ಕನೆ.

**सुळका** (ಸುಳಕಾ) ಪು. ಶಿಖರ, ತುದಿ, ಬಾಗಿಲಕಂಬ.

**सुळकी** (ಸುಳಕೀ) ಸ್ತ್ರೀ. ತುದಿ, ಶಿಖರ, ಲೆಕ್ಕಣಿಕೆಯ ತುದಿ, ತುದಿಯಿದ್ದ ಬಂಡೆಗಲ್ಲು.

**सुळसुळणे** (ಸುಳಸುಳಣೇ) ಸುಳುಸುಳುಅನ್ನು, ವ್ಯೆತುರಿಸು. ೨. ತೀಟಿಬೀಳು, ಸುಳಿದಾಡುವಿಕೆ, ಉಪದ್ರವ.

**सुळसुळाट** (ಸುಳಸುಳಾಟ್) ಪು. ಸುಳಸುಳಾಟ. ೨. ಸುಳಿದಾಡು, ವ್ಯೆತುರಿ.

**सुळसुळीत** (ಸುಳಸುಳೀತ) ಕ್ರಿ. ವಿ. ಜಾರುವ ನುಣು ಪಾದ, ಚಂಚಲ, ಸ್ಥಿರವಲ್ಲದ, ಮೆದು, ನುಣ್ಣಗಿನ, ನವುರಾದ, ಸಪೂರಾದ.

**सुळा** (ಸುಳಾ) ಪು. ಸೂಲದಹಲ್ಲು, ಆನೆಯದಂತ, ಮಾಂಸಬೇಯಿಸುವ ಸಲಾಕೆ.

**सुज्ञ** (ಸುಜ್ಞ) ವಿ. ಸಂ. ತಿಳಿದವ, ಬಲ್ಲವ, ಅರಿತವ, ಎಲ್ಲ ಬಲ್ಲವ, ತಜ್ಞ.

**-सू** (-ಸೂ) ವಿ. ಸಂ.(ಪ್ರತ್ಯಯ) ಉತ್ಪನ್ನ ಮಾಡುವ, ಹುಟ್ಟಿಸುವ, ಹಡೆಯುವ.

**सूकर** (ಸೂಕರ) ಪು. ಹಂದಿ, ವರಾಹ, ಹೊಲಸು ತಿನ್ನುವ ಪಶು.

**सूक्त** (ಸೂಕ್ತ) ವಿ. ಸಂ. ಶಿಫಾರಸು ಮಾಡಿದ. ೨. ನ. ಮಂತ್ರ(ವೇದ).

**सूचक** (ಸೂಚಕ) ವಿ. ಸಂ. ಸೂಚನೆ ಕೊಡುವ, ಪರಿಚಯ ಮಾಡಿಕೊಡುವ, ಸೂಚಿಸುವವ, ಭೇದಿಸುವ, ತಿವಿಯುವ.

**सूचन** (ಸೂಚನ) ನ. ಸಂ. } ಸಂದೇಶ, ಸೂಚನೆ,
**सूचना** (ಸೂಚನಾ) ಸ್ತ್ರೀ. ಸಂ. } ಎಚ್ಚರಿಕೆ, ಸಂಕೇತ.

**सूचित** (ಸೂಚಿತ) ವಿ. ಸಂ. ಸೂಚಿಸಿದ, ಎಚ್ಚರಿಕೆ ಕೊಟ್ಟ, ಭೇದಿಸಿದ, ಸಾಂಕೇತಿಕ.

**सूची** (ಸೂಚೀ) ಸ್ತ್ರೀ. ಸೂಜಿ. ೨. ಸ್ತ್ರೀ. ಸಂ. ಸೂಚಿಪತ್ರ, ಯಾದಿ, ಪ್ರಸ್ತಾವನೆ, ಪೀಠಿಕೆ.

**सूच्यग्र, सूचिमुख** (ಸೂಚ್ಯಗ್ರ, ಸೂಚಿಮುಖ) ನ. ಸಂ. ಸೂಜಿಯ ತುದಿ, ಸೂಜಿಯಮುಖ. ೨. ವಿ. ಚೂಪಾದ, ಚೂಪುಳ್ಳ, ಶಂಕ್ವಾಕೃತಿಯ.

**सूज** (ಸೂಜ್) ಸ್ತ್ರೀ. ಬಾವು, ಬಾಯುವಿಕೆ, ಉಬ್ಬುವಿಕೆ.

**सूट** (ಸೂಟ್) ಸ್ತ್ರೀ. ಮಾಫಿ, ಮುಕ್ತಾಯ, ರಿಯಾಯಿತಿ.

**सूटपत्र** (ಸೂಟಪತ್ರ) ನ. ಬಿಡುಗಡೆಪತ್ರ, ವಿವಾಹ ಮುಗಿತಾಯದ ಪತ್ರ.

**सूड** (ಸೂಡ್) ಪು. ಸೇಡು, ಕುನಸು, ಪ್ರತಿಹಿಂಸೆ, ವ್ಯೆರಿಸಾಧನೆ.

**सूड घेणे, -उगवणे** (ಸೂಡ್‌ಘೇಣೇ-ಉಗವಣೇ) ಕ್ರಿ. ಸಂ. ಸೇಡುತೀರಿಸಿಕೊಳ್ಳು, ಪ್ರತಿಹಿಂಸೆಮಾಡು, ಪ್ರತಿಯಾಗಿ ಹಿಂಸಿಸು.

**सूत** (ಸೂತ್) ನ. ನೂಲು, ಎಳೆ. ೨. ಹಡೆದ. ೩. ಸಾರಥಿ.

**सुताने स्वर्गास-जाणे** (ಸುತಾನೇ ಸ್ವರ್ಗಾಸ್-ಜಾಣೇ) ಕ್ರಿ. ಅ. ನೂಲಿನಿಂದ ಸ್ವರ್ಗಕ್ಕೇರು, ಅಲ್ಪ ಸಾಧನದಿಂದ ದೊಡ್ಡ ಗುರಿಯನ್ನು ಸಾಧಿಸಲಿಕ್ಕೆ ಪ್ರಯತ್ನಪಡು.

**सूत जमणे** (ಸೂತ್ ಜಮಣೇ) ಕ್ರಿ. ಅ. ಗೆಳೆತನ ಕೂಡು, ಶರೀರ ಸಂಬಂಧವಾಗು, ಅಭಿಪ್ರಾಯ ಹೊಂದು, ಪ್ರೇಮಸಂಬಂಧ ಸಫಲವಾಗು, ಮನಸ್ಸುಕೂಡು.

**सूतीपाती लागणे** (ಸೂತೀಪಾತಿ ಲಾಗಣೇ) ಕ್ರಿ. ಅ. ವ್ಯವಸ್ಥೆಗೆ ಹತ್ತು, ಮಾರ್ಗಕ್ಕೆಹತ್ತು.

**सूतकाडी** (ಸೂತಕಾಡೀ) ಸ್ತ್ರೀ. ನೇಕಾರನ ನೂಲಿನ್ಯ ಕಡ್ಡಿ.

**सूतक** (ಸೂತಕ) ನ. ವ್ಯೆಲಿಗೆ.

**सूति** (ಸೂತಿ) ಸ್ತ್ರೀ. ಸಂ. ಜನ್ಮ, ಹುಟ್ಟುವಿಕೆ, ಹಡೆಯುವಿಕೆ, ವಿಮೋಚನೆ, ಹೆರಿಗೆ.

**सूतिका** (ಸೂತಿಕಾ) ಸ್ತ್ರೀ. ಬಾಣಂತಿ.

**-गृह** (-ಗೃಹ) ನ. ಸಂ. ಹೆರಿಗೆಯ ಆಸ್ಪತ್ರೆ.

**सूत्र** (ಸೂತ್ರ) ನ. ಸಂ. ನಿಯಮ, ಫಾರ್ಮ್ಯುಲಾ, ದಾರ. ೨. ಶಾಸನ, ಕಾಯ್ದೆ, ಕೀಲಿ, ಅರ್ಥಬೋಧೆ.

**सूत्रधार-सूत्रचालक** (ಸೂತ್ರಧಾರ-ಸೂತ್ರಚಾಲಕ) ಪು. ಸಂ. ನಾಟಕದ ಮುಂದಾಳು, ನಾಟಕ ನಡೆಯಿಸುವವನು. ೨. ಮುಖಂಡ.

**सूदणे** (ಸೂದಣೇ) ಕ್ರಿ. ಸ. ಕೊಲ್ಲು, ಖೂನಿಮಾಡು.

**सूदन** (ಸೂದನ) ಹ. ಸಂ. ಕೊಲೆ, ಖೂನಿ, ಹತ್ಯ, ಕ್ರಂದನ.

**सून** (ಸೂನ್) ಸ್ತ್ರೀ. ಸೊಸೆ, ಸ್ನುಷಾ.

**सूनृत** (ಸೂನೃತ) ನ. ಸಂ. ಸತ್ಯ, ನಿಜ, ಸತ ಸಂಗತಿ, ಸತ್ಯಮಾತು, ಪ್ರಿಯಮಾತು. ೨. ವಿ. ನಿಜವಾದ.

**सूप** (ಸೂಪ್) ನ. ಮೊರ, ಕೇರುವಮೊರ.
**–वाजणे** (–ವಾಜಣೇ) ಕ್ರಿ. ಅ. (ಸಮಾರಂಭ) ಮುಗಿ, ಕೊನೆಗಾಣು.

**सूपशास्त्र** (ಸೂಪಶಾಸ್ತ್ರ) ನ. ಸಂ. ಪಾಕಶಾಸ್ತ್ರ, ಅಡಿಗೆಯವಿಧಿ, ಅಡಿಗೆಯವಿಧಾನ.

**सुपाएवढे काळीज** (ಸುಪಾಏವಢೇ ಕಾಳೀಜ) ನ. ಮೊರದಷ್ಟು ಹೃದಯ, ಅತ್ಯಂತಾನಂದ, ಮಹದಾನಂದ.

**सूर** (ಸೂರ) ಪು. ಧ್ವನಿ, ಸ್ವರ, ದನಿ, ರಾಗ, ದಾಟಿ, ತಾಗ, ಸಂತೋಷ. ೨. ವಿಚಾರ, ತಿಳಕೊಳ್ಳುವಿಕೆ.

**सूरदेणे** (ಸೂರದೇಣೇ) ಕ್ರಿ. ಸಂ. ಸ್ವರಗೊಡು, ಹಿಮ್ಮೇಳದಲ್ಲಿ ಹಾಡು, ಸ್ವರಗೂಡಿಸು, ದನಿಗೂಡಿಸು.

**सूर धरणे** (ಸೂರ್ ಧರಣೇ) ಕ್ರಿ. ಸಂ. ಸ್ವರಹಿಡಿ, ಸ್ವರ ಹಚ್ಚು.

**सूर्य** (ಸೂರ್ಯ) ಪು. ಸಂ. ಸೂರ್ಯ, ರವಿ, ಭಾಸ್ಕರ, ಪ್ರಭಾಕರ.
**हा सूर्य हा जयद्रथ** (ಹಾ ಸೂರ್ಯ ಹಾ ಜಯದ್ರಥ) ಗಾದೆಯಮಾತು. 'ಇವನು ಸೂರ್ಯ ಇವನು ಜಯದ್ರಥ', ತನ್ನ ಹೊಣೆ ತೀರಿಸುವಿಕೆ.

**सूर्यकमल** (ಸೂರ್ಯಕಮಲ) ನ. ಸಂ. ಸೂರ್ಯ ಕಮಲ, (ಕೆಂಪು–ಇಲ್ಲವೆ ಬಿಳಿಯ ಕಮಲ)

**सूर्यकांत** (ಸೂರ್ಯಕಾಂತ) ಪು. ಸಂ. ಒಂದು ಪ್ರಕಾರದ ಹೂವು. ೨. ಸೂರ್ಯಕಾಂತಮಣಿ.

**सूर्यकांत भिंग** (ಸೂರ್ಯಕಾಂತ ಭಿಂಗ್) ನ. ಸೂರ್ಯ ಕಾಂತ ಸ್ಫಟಿಕ, ಸೂರ್ಯಕಾಂತ ಕನ್ನಡಿ.

**सूर्यखार** (ಸೂರ್ಯಖಾರ) ಪು. ಸೋರುಪ್ಪು **'सुराखार'** ನೋ.

**सूर्यग्रहण** (ಸೂರ್ಯಗ್ರಹಣ) ನ. ಸಂ. ಸೂರ್ಯ ಗ್ರಹಣ. ೨. ಕೇಡು.

**सूर्यतळी** (ಸೂರ್ಯತಳೀ) ಕ್ರಿ. ವಿ. ಬಿಸಿಲಿನಲ್ಲಿ, ಬಯಲಿನಲ್ಲಿ, ಪೂರ್ವದಿಕ್ಕಿನಲ್ಲಿ.

**सूर्यपर्व** (ಸೂರ್ಯಪರ್ವ) ಪು. ರಥಸಪ್ತಮಿ ಹಬ್ಬ. ಮಾಘಶುದ್ಧ ಸಪ್ತಮಿ.

**सूर्यपुट** (ಸೂರ್ಯಪುಟ) ನ. ,ಸಂ. ಸೂರ್ಯನ ಉಷ್ಣತೆ, ಸೂರ್ಯೋಷ್ಣತೆಯ ಕಾವುಕೊಡುವಿಕೆ.

**सूर्यापोटी शनेश्वर** (ಸೂರ್ಯಾಪೋಟೀ ಶನೇಶ್ವರ) ಗಾದೆ. ವಿದ್ವಾಂಸನ ಹೊಟ್ಟೆಯಲ್ಲಿ ಹುಚ್ಚ ಹುಡುಗ, ರಾಜ ಹಂಸನ ಹೊಟ್ಟೆಯಲ್ಲಿ ಕಾಕರಾಜ.

**सूर्यबिंब** (ಸೂರ್ಯಬಿಂಬ) ನ. ಸಂ. ಸೂರ್ಯನಬಿಂಬ, ಸೂರ್ಯನಬಿಲ್ಲೆ.

**सूर्यभक्त** (ಸೂರ್ಯಭಕ್ತ) ಪು. ಸಂ. ಸೂರ್ಯೋ ಪಾಸಕ, ಸೂರ್ಯನಭಕ್ತ, ದಿವಾಳಿ ತೆಗೆದವ, (ವಿನೋದದಲ್ಲಿ)

**सूर्यमंडल** (ಸೂರ್ಯಮಂಡಲ) ನ. ಸಂ. ಸೂರ್ಯ ಪ್ರಭಾವಳಿ.

**सूर्यमाला** (ಸೂರ್ಯಮಾಲಾ) ಸ್ತ್ರೀ. 'ಸೂರ್ಯ ಹಾಗೂ ಅವನ ಸುತ್ತು ತಿರುಗುವ ಗ್ರಹಗಳು', ಗ್ರಹಮಾಲೆ.

**सूर्यलोक** (ಸೂರ್ಯಲೋಕ) ಪು. ನ. ಸೂರ್ಯ ಜಗತ್ತು.

**सूर्यवंश** (ಸೂರ್ಯವಂಶ) ಪು. ಸಂ. ರಘುವಂಶ, ರಘುವಿನ ವಂಶ, ರಾಘವ ಕುಲ.

**सूर्यविकासी** (ಸೂರ್ಯವಿಕಾಸೀ) ವಿ. ಸಂ. ಸೂರ್ಯ ವಿಕಾಸಿ ಪುಷ್ಪ, ಹಗಲು ಅರಳಿ ರಾತ್ರಿ ಅಸ್ತವಾಗುವ (ಹೂವು).

**सूर्यास्त** (ಸೂರ್ಯಾಸ್ತ) ಪು. ಸಂ. ಸೂರ್ಯಮುಳುಗುವಿಕೆ.

**सूर्योदय** (ಸೂರ್ಯೋದಯ) ಪು. ಸಂ. ಸೂರ್ಯ ಉದಯವಾಗುವಿಕೆ.

**सूर्योपासक** (ಸೂರ್ಯೋಪಾಸಕ) ಪು. ಸಂ. ಸೂರ್ಯನಭಕ್ತ.

**सूर्योपासना** (ಸೂರ್ಯೋಪಾಸನಾ) ಸ್ತ್ರೀ. ಸಂ. ಸೂರ್ಯನ ಪೂಜೆ, ಸೂರ್ಯನ ಉಪಾಸನೆ.

**सूळ** (ಸೂಳ್) ಪು. ವಧಸ್ತಂಭ, ಗಲ್ಲುಗಂಬ, ದೇಹಾಂತ ಶಿಕ್ಷೆಯ ಕಂಬ, ಉರುಲು, ಏರಲು ಕಠಿಣವಾದ ಪರ್ವತ.

**सूळावरची पोळी** (ಸೂಳಾವರಚೀ ಪೋಳೀ) ಸ್ತ್ರೀ. ಬಹಳ ಶ್ರಮದ, ಅಲ್ಪಲಾಭದ ಕೆಲಸ.

**सूळीं द्यावयाची वेळ** (ಸೂಳೀ ದ್ಯಾವಯಾಚೀ ವೇಳ್) ಸ್ತ್ರೀ. ಶೂಲಕ್ಕೇರಿಸುವ ಹೊತ್ತು, (ಮಧ್ಯಾಹ್ನ.)

**सूक्ष्म** (ಸೂಕ್ಷ್ಮ) ವಿ. ಸಂ. ಸಣ್ಣ, ಚೂಪು, ಸುಂದರ, ತೀಕ್ಷ್ಣ, ಅತಿಸಣ್ಣ, ಭಾವನಾ ಪ್ರಧಾನ, ಪರಮಾಣು ಕಣ, (ಆಟಂ), ವೇದಾಂತದಲ್ಲಿ ಬ್ರಹ್ಮ ಸೂಕ್ಷ್ಮ, ಕಣ್ಣಿಗೆಕಾಣದ.

**सूक्ष्मदर्शक यंत्र** (ಸೂಕ್ಷ್ಮದರ್ಶಕ ಯಂತ್ರ) ನ. ಸಂ. ಸೂಕ್ಷ್ಮದರ್ಶಕ ಯಂತ್ರ, ಅತಿಸೂಕ್ಷ್ಮ ವಸ್ತುವನ್ನು ನೋಡುವ ಯಂತ್ರ.

**सूक्ष्मदर्शी** (ಸೂಕ್ಷ್ಮದರ್ಶೀ) ವಿ. ಸ.
**सूक्ष्मदृष्टि** (ಸೂಕ್ಷ್ಮದೃಷ್ಟಿ) ವಿ. ಸ.
} ಗುಟ್ಟುಬಲ್ಲವ, ರಹಸ್ಯಜ್ಞ, ತತ್ವಜ್ಞಾನಿ, ವೇದಾಂತ ಪರಿಣತ.

**सूक्ष्मदेह** (ಸೂಕ್ಷ್ಮದೇಹ) ಪು. ಸಂ. ಲಿಂಗ ಶರೀರ, (ವೇದಾಂತ ಶಾಸ್ತ್ರದಲ್ಲಿಯ) ಆತ್ಮ.

**सूक्ष्मबुद्धि** (ಸೂಕ್ಷ್ಮಬುದ್ಧಿ) ವಿ. ಸಂ. ತೀಕ್ಷ್ಣಬುದ್ಧಿ.

**सूक्ष्मवाद** (ಸೂಕ್ಷ್ಮವಾದ) ಪು. ಸಂ. ಆತ್ಮವಾದ.

**सृजणें** (ಸೃಜಣೇ) ಕ್ರಿ. ಸ. ಉತ್ಪನ್ನಮಾಡು, ಸೃಷ್ಟಿಸು.

**सृष्ट** (ಸೃಷ್ಟ) ವಿ. ಸಂ. ಹುಟ್ಟಿಸಿದ, ಕೂಡಿಸಿದ, ಉತ್ಪನ್ನಮಾಡಿದ.

**सृष्टि** (ಸೃಷ್ಟಿ) ಸ್ತ್ರೀ. ಸಂ. ಪ್ರಕೃತಿ, ಜಗತ್ತು, ಸಂಸಾರ, ನಿಸರ್ಗ, ಚೈತನ್ಯ.

**सृष्टिक्रम** (ಸೃಷ್ಟಿಕ್ರಮ) ಪು.
**सृष्टिमार्ग** (ಸೃಷ್ಟಿಮಾರ್ಗ) ಪು. ಸಂ. } (ಪ್ರಕೃತಿಧರ್ಮ, ಗುಣ ಧರ್ಮ, ನಿಸರ್ಗಕ್ರಮ, ಹುಟ್ಟುಗುಣ.

**सेक** (ಸೇಕ) ಪು. ಪ್ರಕೃತಿ, ಸ್ವಭಾವ.

**सेचन** (ಸೇಚನ) ನ. ಸಂ. ಸಿಂಪಡಿಸುವಿಕೆ, ಹನಿಸುವಿಕೆ, ನೀರುಗೊಜ್ಜುವಿಕೆ.

**सेतु** (ಸೇತು) ಪು. ಸಂ. ಸೇತುವೆ, ಪೂಲು, ಮೂಗಿನ ಎಲುಬು.

**सेना** (ಸೇನಾ) ಸ್ತ್ರೀ. ಸಂ. ಸೈನ್ಯ, ದಂಡು, ಚಮೂ ಸಿಪಾಯಿಗಳ ತಂಡ, ಲಷ್ಕರ.

**सेनांग** (ಸೇನಾಂಗ) ನ. ಸಂ. ಸೈನ್ಯದ ಭಾಗ, ಸೈನ್ಯ ವಿಭಾಗ.

**सेनाचर** (ಸೇನಾಚರ) ವಿ. ಸಂ. ಸೈನ್ಯದೊಡನಿರುವ ಪರಿವಾರ.

**सेनापति** (ಸೇನಾಪತಿ) ಪು. ಚಮೂಪತಿ, ಸೈನ್ಯದ ಒಡೆಯ.

**सेनाभार** (ಸೇನಾಭಾರ) ಪು. ಸೈನ್ಯ.

**सेवक** (ಸೇವಕ) ಪು. ಸಂ. ನೌಕರ, ಆಳು, ಸೇವಕ, ಪೂಜೆ ಮಾಡುವವ.

**सेवणे** (ಸೆವಣೇ) ವಿ. ಸ. ಸೇವೆಮಾಡು, ಉಪಯೋಗ ಮಾಡು, ದತ್ತಕ ತಕ್ಕೊಳ್ಳುವುದು, ಸ್ವೀಕರಿಸು, ಮಾತುಕೇಳು, ವಿಧೇಯನಾಗು, ವಶನಾಗು, ಪೂಜೆಮಾಡು.

**सेवन** (ಸೇವನ) ನ. ಸಂ. ಸೇವನೆ, ಗ್ರಹಿಸುವಿಕೆ. ೨. ತಿನ್ನುವಿಕೆ, ಕುಡಿಯುವಿಕೆ.

**सेवनीय** (ಸೇವನೀಯ) ವಿ. ಸಂ. } ಸೇವಿಸಲಿಕ್ಕೆ ಪಾತ್ರ,
**सेव्य** (ಸೇವ್ಯ) } ತಕ್ಕ, ಅರ್ಹ, ಯೋಗ್ಯ, ಉಪಯೋಗ ಮಾಡಲಿಕ್ಕೆ ತಕ್ಕ, ಉಚಿತ, ಸಮಂಜಸ, ತಿನ್ನತಕ್ಕ, ಕುಡಿಯತಕ್ಕ.

**सेवा** (ಸೇವಾ) ಸ್ತ್ರೀ. ಸಂ. ಚಾಕರಿ, ಸೇವೆ, ಪ್ರೇಮ ಭಕ್ತಿ, ಉಪಾಸನೆ, ಪ್ರೇಮ, ಪುರಸ್ಸರ ಭಕ್ತಿ.

**सेवाधर्म** (ಸೇವಾಧರ್ಮ) ಪು. ಸಂ. ಸೇವೆಮಾಡುವ ವಿಧಾನ, ಸೇವಾರೀತಿ, ಸೇವಾಕರ್ತವ್ಯ.

**सेविका** (ಸೇವಿಕಾ) ಸ್ತ್ರೀ. ಸಂ. ಸೇವೆಮಾಡುವವಳು, ಭಕ್ತೆ, ದಯಾಮೂರ್ತಿ, ದಾನಮೂರ್ತಿ.

**सेवित** (ಸೇವಿತ) ವಿ. ಸಂ. ಸೇವೆಮಾಡಿದ, ಮಾನ ನೀಡಿದ, ಶರಣುಹೋದ, ಪ್ರೇಮಭಕ್ತಿಮಾಡಿದ, ಸನ್ಮಾನ ಕೊಟ್ಟ.

**सेवेकरी** (ಸೇವೇಕರೀ) ಪು. ಸಂ. **सेवक** ನೋ.

**सैतान** (ಸೈತಾನ್) ಪು. ಅರ. ಪಿಶಾಚಿ, ದೆವ್ವ, ಅತ್ಯಂತ ಕುರೂಪಿ ಮನುಷ್ಯ, ಭಯಂಕರಮನುಷ್ಯ.

**सैद्धान्तिक** (ಸೈದ್ಧಾಂತಿಕ) ವಿ. ಸಂ. ಸಿದ್ಧಾಂತಕ್ಕೆ ಸಂಬಂಧಿಸಿದ.

**सैंधव** (ಸೈಂಧವ) ವಿ. ಸಂ. ಸಿಂಧು ದೇಶದ ಉಪ್ಪು, ಸೈಂಧವಲವಣ, ಕುದುರೆ, ಸಮುದ್ರ ಸಂಬಂಧದ.

**सैनिक** (ಸೈನಿಕ) ಪು. ಸಂ. ಸೈನ್ಯದಲ್ಲಿ ಇದ್ದವನು, ಸಿಪಾಯಿ, ದಂಡಿನಾಳು.

**सैन्य** (ಸೈನ್ಯ) ನ. ಸಂ. "**सेना**" ನೋ.

**सैपाक** (ಸೈಪಾಕ) ಪು. **स्वयंपाक** (ಸ್ವಯಂಪಾಕ) ಪು. ಅಡಿಗೆ, ಪಾಕ.

**सैपाकघर** (ಸೈಪಾಕಘರ) ನ. ಅಡಿಗೆಯ ಮನೆ, ಪಾಕಶಾಲೆ ಕುಶಿನಿ.

**सैपाकी** (ಸೈಪಾಕೀ) ಪು. ಅಡಿಗೆಯವನು.

**सैपाकीण** (ಸೈಪಾಕೀಣ) ಸ್ತ್ರೀ. ಅಡಿಗೆಯಾಕೆ.

**सैर** (ಸೈರ್) ಸ್ತ್ರೀ. ತಿರುಗಾಟ, ಚಿಕ್ಕಪ್ರಯಾಣ, ಹವೆ ತಿನ್ನುವಿಕೆ.

**सैर(रा)ट** (ಸೈರ(ರಾ)ಟ್) ವಿ. ಅಸಭ್ಯ, ಉದ್ಧತ, ದಾಂಡಿಗ, ಎಡವಟ್ಟ, ಅಶ್ಲೀಲ, ಪಾಮರ, ಉಗ್ರ, ಅಡನಾಡಿ, ಸ್ವೈರಾಚಾರಿ, ಸ್ವೇಚ್ಛಾಚಾರಿ, ಮನ ಬಂದಂತೆ ನಡೆಯುವವ.

**सैरंध्री** (ಸೈರಂಧ್ರೀ) ಸ್ತ್ರೀ. ಹೆಣ್ಣಾಳು, ಸೇವಿಕೆ. "**सेविका**" ನೋ. ೨. ದ್ರೌಪದಿ.

**सैरावैरा** (ಸೈರಾವೈರಾ) ಕ್ರಿ. ವಿ. ಮನಬಂದತ್ತಕಡೆಗೆ, ನಾಲ್ಕೂಕಡೆಗೆ, ಬೇಕಾದತ್ತ.

**सैल** (ಸೈಲ್) ವಿ. ಸಡಿಲು, ಮಂದ, ಗಟ್ಟಿಯಿಲ್ಲದ, ಟೊಳ್ಳು, ಮೆತ್ತಗಾದ. ಕ್ರಿ. ವಿ. ಸಡಿಲಾಗಿ.

**सैलावणे** (ಸೈಲಾವಣೇ) ಕ್ರಿ. ಸ. ಸಡಿಲುಮಾಡು, ಬಿಚ್ಚಿಬಿಡು, ಕ್ರಿ. ಅ. ಸಡಿಲಾಗು, ಶಿಥಿಲಾಗು, ಉದಾಸೀನನಾಗಿರು, ಮೈ ಅರಳು, ಕಡಿಮೆಮಾಡು, ಇಳಿ, ಕುಗ್ಗು, ಸಡಲಿಸು.

**सैंवर** (ಸೈವರ್) ನ. ಸ್ವಯಂವರ, ಪತಿಯನ್ನು ಆರಿಸುವಿಕೆ.

**सोइ(य)रा** (ಸೋಇ(ಯ)ರಾ) ಪು. ಗಂಡ.

**सोइरगत** (ಸೋಇರ್‌ಗತ್) ಸ್ತ್ರೀ.
**सोइरी** (ಸೋಇರೀ) ಸ್ತ್ರೀ.
**सोइ(य)रीक** (ಸೋಇ(ಯ)ರೀಕ್) ಸ್ತ್ರೀ.
} ಸಂಬಂಧ, ನೆಂಟತನ ಆಪ್ತತ್ವ, ಬೀಗತನ,

**सोई** (ಸೋಈ) ಸ್ತ್ರೀ. ಬಹು.ವ. ಅನುಕೂಲತೆಗಳು, ಸೌಲಭ್ಯ, ಉಪಯುಕ್ತತೆ, ಸೌಕರ್ಯ, ರಿಯಾಯತಿಗಳು.

**सोईवार –सोईसार** (ಸೋಈವಾರ್ –ಸೋಈಸಾರ್) ವಿ. ಅಚ್ಚುಕಟ್ಟಾದ, ಯೋಗ್ಯ, ಉಪಯುಕ್ತ, ಹಿತಕರ, ಪ್ರಶಸ್ತ.

**सोईनुसार** (ಸೋಈನುಸಾರ) ಕ್ರಿ. ವಿ. ಅನುಕೂಲತೆಯಂತೆ, ಹೇಗೆಕೂಡುವುದೇಹಾಗೆ.

**सोईसोईनें** (ಸೋಈಸೋಈನೇ) ಕ್ರಿ. ವಿ. ಸಾವಕಾಶ ಸಾವಕಾಶವಾಗಿ, ಅನುಕೂಲತೆಯಂತೆ.

**सोईस्कर** (ಸೋಈಸ್ಕರ) ಕ್ರಿ. ವಿ. (ತನಗೆ) ಅನುಕೂಲವಾಗುವಂತೆ.

**सोंक(ग)टी** (ಸೋಂಕ(ಗ)ಟೀ) ಸ್ತ್ರೀ. ಪಗಡಿ, ದ್ಯೂತದಾಟದ ಪಗಡಿ, ಚದುರಂಗದಾಟದ ಪಗಡಿ.

**सोंकणे** (ಸೋಂಕಣೇ) ಕ್ರಿ. ಅ.
**सोकावणें** (ಸೋಕಾವಣೇ) ಕ್ರಿ. ಅ.
} ಸವಿಹತ್ತು, ಸವಿತಿನ್ನುವ ಚಟಹತ್ತು.

**सोकरा** (ಸೋಕರಾ) ಪು. ಹಿಂ. ಹುಡುಗ, ಆಳು, ನೌಕರ, ಸೇವಕ.

**सोकरी** (ಸೋಕರೀ) ಸ್ತ್ರೀ. ಹಿಂ. ಹೆಣ್ಣಾಳು, ಸೇವಿಕಾ, ದಾಸಿ, ತೊತ್ತು, ಉಪಚಾರಿಕೆ.

**सोकरे** (ಸೋಕರೇ) ಸ. ನ. ಸಣ್ಣಕೂಸು, ಸಣ್ಣಹುಡುಗ.

**सोकळ** (ಸೋಕಳ್) ವಿ. ನ. ಉದ್ಧವಾದ, ಸಹಜ ಒಡೆಯುವ, ಟೊಳ್ಳಾದ.

**सोकील** (ಸೋಕೀಲ್)
**सोंकील** (ಸೋಂಕೀಲ್)
} ವಿ. ಚಟಬಿದ್ದ, ಚಟಹತ್ತಿದ.

**सोंग** (ಸೋಂಗ್) ನ. ಪಾತ್ರ, ನಾಟಕದಲ್ಲಿಯ ವೇಷಧಾರಿ, ಕೃತ್ರಿಮಸ್ವರೂಪ, ನಾಚಿಕೆ, ಲಜ್ಜೆ, ಹುಸಿತನ, ಕೃತ್ರಿಮಸ್ವರೂಪ.

**सोंगढोंग** (ಸೋಂಗ್‌ಢೋಂಗ್) ನ. ಯುಕ್ತಿ, ತಂತ್ರ, ಹಸ್ತಚಮತ್ಕಾರ, ವಂಚಿಸುವಿಕೆ.

**सोंगसंपादणी** (ಸೋಂಗಸಂಪಾದಣೀ) ಸ್ತ್ರೀ. ಡಂಭ ಮಾಡುವಿಕೆ, ಕೃತ್ರಿಮರೂಪಧರಿಸುವಿಕೆ, ಹಾಕಿದ ಸೋಗಿನಂತೆ ನಡೆಯುವಿಕೆ.

**सोगणें** (ಸೋಗಣೇ) ಸ್ತ್ರೀ. ಫಾ.
**सोगंद** (ಸೋಗಂದ) ಸ್ತ್ರೀ.
} ಆಣೆ, ಶಪಥ ಮಾಡುವಿಕೆ.

**सोंगळ** (ಸೋಂಗಳ್) ಸವಿ, ರುಚಿಕಟ್ಟು, ಇಂಪಾದ, ಮಧುರ, ಕೋಮಲ, ನಾಜೂಕು, ಸುಂದರ, ರಮಣೀಯ ಮರ್ಯಾದಶೀಲ, ಸಾಧು.

**सोंगाडी–डया, सोंगी, –ग्या, सोंगलाडया, सोंगाळया**, (ಸೋಂಗಾಡೀ – ಡ್ಯಾ) ಪು. (ಸೋಂಗೀ –ಗ್ಯಾ) (ಸೋಂಗಲಾಡ್ಯಾ–ಸೋಂಗಾಳ್ಯಾ) ವಿ. ಡಾಂಭಿಕ, ದಂಭದ.

**सोगा** (ಸೋಗಾ) ಪು. ಬಟ್ಟೆಯ ಚುಂಗು, ಉಡುಪಿನ ತುದಿ.

**सोजी** (ಸೋಜೀ) ಸ್ತ್ರೀ. ಕುದಿಸಿದಅನ್ನ, ಸಿದ್ಧಪಡಿಸಿದ ಅನ್ನ.

**सोज्वल–ळ** (ಸೋಜ್ವಲ–ಳ) ವಿ. ಪ್ರಕಾಶಮಾನ. ವಿ. ಒಳ್ಳೆಯ ನಡತೆಯ.

**सोट** (ಸೋಟ್) ವಿ. ಉದ್ದ, ನಿಲವಾದ ಕಟ್ಟಿಗೆಯ ಕಂಬ. ೨. ಉದ್ದಮನುಷ್ಯ. (ಲಾಕ್ಷಣಿಕ) ನೀತಿವಂತ ಮನುಷ್ಯ. ೩. ಒಬ್ಬೊಂಟಿಗ.

**सोटगा–गे** (ಸೋಟಗಾ–ಗೇ) ಪು. ನ. ಬಡಿಗೆ, ಕೋಲು.

**सोटशिंग** (ಸೋಟಶಿಂಗ್) ಪು. ಒಬ್ಬನೇ ಮನುಷ್ಯ, ಬ್ರಹ್ಮಚಾರಿ, ಅವಿವಾಹಿತ.

**सोटा** (ಸೋಟಾ) ಪು. ಬಡಿಗೆ.

**सोटादुपटा** (ಸೋಟಾದುಪಟಾ) ಪು. ಪ್ರಯಾಣದ ಸಿದ್ಧತೆ, ಚಿಕ್ಕಪ್ರಯಾಣದ ಸಿದ್ಧತೆ.

**सोटेबरदार** (ಸೋಟೇಬರದಾರ್) ಪು. ಬಡಿಗೆ ಹಿಡಿದವನು, ಗದಾಧಾರಿ, ಮುದ್ರೆಕೋಲು ಹಿಡಿದವನು.

**सोड** (ಸೋಡ್) 'सूट' ನೋ.

**सोडचिटी–ठी, सोडपत्र, सोडखत** (ಸೋಡಚಿಟೀ–ಠೀ) ಸ್ತ್ರೀ., (ಸೋಡಪತ್ರ ಸೋಡಖತ್) ನ. ಬಿಡುಗಡೆ ಕಾಗದ, ಬಿಡುಗಡೆ ಪತ್ರ, ತ್ಯಾಗಪತ್ರ.

**सोडण** (ಸೋಡಣ) ನ. ತೆಂಗಿನ ಜುಬ್ಬರ.

**सोडणे** (ಸೋಡಣೇ) ಕ್ರಿ. ಸ. ಬಿಡು, ತ್ಯಜಿಸು, ಕ್ಷಮಿಸು, ಬಿಟ್ಟುಬಿಡು.

**सोडत** (ಸೋಡತ್) ಸ್ತ್ರೀ. ತೆರೆಯುವಿಕೆ, ನಿರ್ಣಯ. (ಲ್ಹಾಟರಿ ಮುಂ)

**सोंड** (ಸೋಂಡ್) ಸ್ತ್ರೀ. ಆನೆಯ ಸೊಂಡೆ.

**सोंडदोर–रा** (ಸೋಂಡದೋರ್–ರಾ) ಪು. ಬಾವಿಯ ಹಗ್ಗ, ನೀರಿನ ಹಗ್ಗ.

**सोडबांध** (ಸೋಡಬಾಂಧ) ಸ್ತ್ರೀ. ಆಗಾಗ್ಗೆ ಬಿಚ್ಚು ವುದು ಕಟ್ಟುವುದು.

**सोडमुंज** (ಸೋಡಮುಂಜ್) ಸ್ತ್ರೀ. ಲಗ್ನಕ್ಕೆ ಮುಂಚಿತ ವಾಗಿ ಬ್ರಹ್ಮಚರ್ಯ ಸಮಾಪ್ತಿಯ ವಿಧಿ.

**सोडवण** (ಸೋಡವಣ) ಸ್ತ್ರೀ. ಮುಕ್ತಿ, ಮೋಕ್ಷ, ಬಿಡು ಗಡೆ, ವಿಮೋಚನೆ, ಕಂಡಿ, ಕಿಂಡಿ, ನೆವ, ಉಪಾಯ.

**सोडवणी** (ಸೋಡವಣೀ) ಸ್ತ್ರೀ. ತೋಟದಲ್ಲಿ ಕಾಲುವೆ ಯಿಂದ ಬಿಟ್ಟ ನೀರು, ಬಿಟ್ಟನೀರು.

**सोडवणूक** (ಸೋಡವಣೂಕ್) ಸ್ತ್ರೀ. ಬಿಡುಗಡೆ, ಮುಕ್ತಿ, ಪ್ರಸೂತಿ, ಹೆರಿಗೆ, ಮಹತ್ವದ ಭಾಷಣ.

**सोडवणें** (ಸೋಡವಣೇ) ಕ್ರಿ. ಅ. ಬಿಡುಗಡೆಮಾಡು, ಮುಕ್ತಿಹೊಂದು, ಬಿಟ್ಟುಬಿಡು, ಹೆರು, ಸುರುವು, ಬಿಡುಗಡೆ ಮಾಡಿಸು, ಪ್ರಕಟಿಸು, ಬಿಡಿಸು, ಮುಕ್ತಿ ನೀಡು.

**सोंडवादी** (ಸೋಂಡವಾದೀ) ಸೊಂಡಿಯ ಹಗ್ಗ, ಮೊಟ್ಟೆಯ ಸೊಂಡಿಯ ಚರ್ಮದ ಹಗ್ಗ.

**सोंडाळ** (ಸೋಂಡಾಳ್) ವಿ. ಸೊಂಡಿಲದ, ಉದ್ದ ಉದ್ದಸೊಂಡಿಯ.

**सोंड्या** (ಸೋಂಡ್ಯಾ) ವಿ. ಮೋತಿಮುಂದುಳ್ಳ, ಸೊಂಡಿಲುಳ್ಳ, ಮೋತಿಯುಳ್ಳ, ಮೊಸಡುಳ್ಳ.

**सोत्कंठ** (ಸೋತ್ಕಂಠ) ವಿ. ಸಂ. ಅತ್ಯಾತುರನಾದ, ಲವಲವಿಕೆಯುಳ್ಳ, ಅತಿ ಆಶೆಯುಳ್ಳ.

**सोदर** (ಸೋದರ) ವಿ. ಒಂದೇ ಹೊಟ್ಟೆಯಿಂದ ಹುಟ್ಟಿದ, ಸಹೋದರ.

**सोदा** (ಸೋದಾ) ವಿ. ಫಾ. ಮೋಸಗಾರ, ಠಕ್ಕ, ವಂಚಕ, ಜಂತಿಕುಂಟ, ಹಲ್ಲುಬಾಚಿ, ಸುಖವನ್ನು ಬಯಸು ವವ, ಪೋರಿಕ.

**सोदेगिरी** (ಸೋದೇಗಿರೀ) ಸ್ತ್ರೀ. }
**सोदेशाही** (ಸೋದೇಶಾಹೀ) ಸ್ತ್ರೀ. } ಮೋಸಗಾರಿಕೆ, ವಂಚಕತನ, ಸುಖಾಭಿಲಾಷಿ, ಲುಚ್ಛೀತನ, ಪೋಕರಿತನ.

**सोनओळख** (ಸೋನ್‌ಓಳಖ್) ಸ್ತ್ರೀ. ಕೇವಲ ಪರಿಚಯ.

**सोनकळी** (ಸೋನಕಳೀ) ಸ್ತ್ರೀ. ಕಂಠಾಭರಣ.

**सोनकाव** (ಸೋನ್‌ಕಾವ್) ಒಂದು (ಕೇವೆಯ) ಬಣ್ಣ.

**सोनकावळा** (ಸೋನ್‌ಕಾವಳಾ) ಪು. ಸಾಂಬಾರಕಾಗೆ, ಸಂಬರಗಾಗೆ.

**सोनकिडा** (ಸೋನ್‌ಕಿಡಾ) ಪು. ಮಿಂಚುವ ಹುಳ, ಹೊನ್ನೆಹುಳ, ಮಿಂಚುಹುಳ, ಮಿಣುಕುಹುಳ.

**सोनकुला–सोना** (ಸೋನಕುಲಾ–ಸೋನಾ) ಪು. **सोन्या** (ಸೋನ್ಯಾ) ಪು. (ನನ್ನ) ಬಂಗಾರ, (ತಾಯಿ ಕೂಸಿಗೆ ಪ್ರೇಮದಿಂದ ಕರೆಯುವಿಕೆ.)

**सोनकेळ** (ಸೋನಕೇಳ್) ಸುವರ್ಣ ಬಾಳೆ, ಸಣ್ಣಬಾಳೆ.

**सोनखत** (ಸೋನ್‌ಖತ್) ನ. ಮಲದ ಗೊಬ್ಬರ.

**सोनचिडी** (ಸೋನ್‌ಚಿಡೀ) **सोनचेडी** (ಸೋನ್‌ಚೇಡೀ) ಸ್ತ್ರೀ. ಹಗ್ಗದ ಮೇಲೆ ಕುಣಿಯುವ ಹೆಂಗಸು, ಹಗ್ಗದ ಮೇಲೆ ಕುಣಿಯುವಾಕೆ.

**सोनचापा–फा** (ಸೋನಚಾಪಾ–ಫಾ) ಪು. ಸುವರ್ಣ ಚಂಪಕ, ಸುವರ್ಣ ಸಂಪಿಗೆ, ಹಳದಿ ಸಂಪಿಗೆಹೂವು.

**सोनटका–क्का** (ಸೋನ್‌ಟಕಾ–ಕ್ಕಾ) ಪು. ಒಂದು ಪ್ರಕಾರದ ಹೂವಿನ ಗಿಡ, ಹಳೆಯ ಬಂಗಾರದ ನಾಣ್ಯ, ರೊಕ್ಕ, ಧನ.

**सोनताव** (ಸೋನತಾವ) ಪು. ಕುದುರೆಯ ನಾಗಾ ಲೋಟ, ನಾಗಾಲೋಟದಿಂದ ಹೋಗುವಿಕೆ, ಕುದು ರೆಯ ನಾಗಾಲೋಟ ನಡಿಗೆ.

**सोनपितळ** (ಸೋನಾಪಿತಳ್) ನ. ಒಂದು ಪ್ರಕಾರದ ಹೊಳೆಯುವ ಹಿತ್ತಾಳಿ, ಬಂಗಾರದಂತಹ ಹಿತ್ತಾಳಿ.

**सोनवणी** (ಸೋನವಣೀ) ಸ್ತ್ರೀ. ರೋಗಿಯ ಪೇಯ, ರೋಗಿಯ ಪಥ್ಯದ ಪೇಯ.

**सोनवेल** (ಸೋನವೇಲ್) ಸ್ತ್ರೀ. ಬತ್ತದ ಒಂದು ಪ್ರಕಾರ, ಒಂದು ಪ್ರಕಾರದ ಬಳ್ಳಿ.

**सोनसळा** (ಸೋನಸಳಾ) ವಿ. ಬಂಗಾರ ಬಣ್ಣದ, ಜರತಾ ರಿಯ ಪಟ್ಟೆಯ.

**सोना** (ಸೋನಾ) ವಿ. "**सोनचिडी**" ನೋ.

**सोनामुखी** (ಸೋನಾಮುಖೀ) ಸ್ತ್ರೀ. ಸೋನಾಮುಖಿ, ಒಂದು ಔಷಧಿ.

**सोनार** (ಸೋನಾರ್) ಪು. ಪತ್ತಾರ, ಒಂದು ಜಾತಿಯ ಪಕ್ಷಿ, ಒಂದು ಜಾತಿಯ ಹುಳ.

**सोनारकी** (ಸೋನಾರಕೀ) ಸ್ತ್ರೀ. ಪತ್ತಾರನ ಕೆಲಸ, ಪತ್ತಾರನ ಕುಶಲತೆ, ಅಕ್ಕಸಾಲಿಗನ ಕೌಶಲ್ಯ.

**सौ सोनारकी एक लोहारकी** (ಸೌ ಸೋನಾರಕೀ ಏಕ ಲೋಹಾರಕೀ)(ಹಿಂದೀ ಗಾದೆಯ ಮಾತು) ಪತ್ತಾರನ ನೂರು ಪೆಟ್ಟಾದರೆ ಕಮ್ಮಾರನ ಒಂದೇ ಪೆಟ್ಟು.

**सोनारी कावा** (ಸೋನಾರೀ ಕಾವಾ) ಪು. ಪತ್ತಾರನ ಕೈಚಳಕ.

**सोनारी मत** (ಸೋನಾರೀ ಮತ) ನ. ಪತ್ತಾರನ ಅಭಿ ಪ್ರಾಯ, ಸ್ವಂತಸ್ವಾರ್ಥ, ಆತ್ಮಸ್ವಾರ್ಥ, ನಗ್ನ ಸ್ವಾರ್ಥ, ಜಾಣತನದ ಸ್ವಾರ್ಥ.

**सोने** (ಸೋನೇ) ನ. ಬಂಗಾರ, ಚಿಹ್ನ, ಕನಕ.

**सोनेहोणे** (ಸೋನೇಹೊಣೇ) ಕ್ರಿ. ಅ. ಬಂಗಾರವಾಗು, ಒಳ್ಳೆಯದಾಗು.

**सोन्याहून पिवळा** (ಸೋನ್ಯಾಹೂನ್ ಪಿವಳಾ) ವಿ. ಬಂಗಾರಕ್ಕಿಂತಲೂ ಹಳದಿ, ಹೆಚ್ಚು ಉತ್ತಮ.

**सोन्याचा धूर निघणे, सोन्याने दात किसणे, सोन्याचा पाऊस पडणे** (ಸೋನ್ಯಾಚಾ ಧೂರ ನಿಘಣೇ, ಸೋನ್ಯಾನೇ ದಾತ ಕಿಸಣೇ,ಸೋನ್ಯಾಚಾ ಪಾಊಸ ಪಡಣೇ) ಕ್ರಿ. ಅ. ಸಿಗು, ಧನಲಾಭವಾಗು.

**सोनेरी** (ಸೋನೇರೀ) ವಿ. ಬಂಗಾರದ, ಸುವರ್ಣದ, ಕಾಂಚನದ.

**सोनेवाने** (ಸೋನೆವಾನೇ) ನ. ಬಂಗಾರ ಮತ್ತು ಬೆಲೆ ಬಾಳುವ ಒಡವೆಗಳು.

**सोन्याचा दिवस** (ಸೋನ್ಯಾಚಾ ದಿವಸ್) ಪು. ಅಭ್ಯು ದಯದ ಕಾಲ, ಬಂಗಾರದ ದಿನ.

**सोप** (ಸೋಪ್) ಪು. **सोपट–सोपाट** (ಸೋಪಟ್– ಸೋಪಾಟ್) ನ. ಬಾಳೆಯ ಹಣ್ಣಿನ ತೊಗಟೆ, ಬಾಳೆಯ ಹಣ್ಣಿನ ಸಿಪ್ಪೆ.

**सोपटणे** (ಸೋಪಟಣೇ) ಕ್ರಿ. ಅ. ಸೊರಗು, ಬಡಕಾಗು, ಕಡಿಮೆಯಾಗು, ಕುಗ್ಗು, ಬಡವನಾಗು.

**सोपटचा** (ಸೋಪಟ್ಯಾ) ವಿ. ಸಕ್ಕರೆ ಕಾರಖಾನೆಯಲ್ಲಿ ನೌಕರಿ ಮಾಡುವವ, ಸಿಪ್ಪೆ ಹೊರುವವ.

**सोपणे** (ಸೋಪಣೇ) ಕ್ರಿ. ಸ. ಸ್ವಾಧೀನ ಪಡಿಸು, ತಾಬೆಯಲ್ಲಿ ಕೊಡು, ವಶದಲ್ಲಿ ಕೊಡು, ಒಪ್ಪಿಸು.

**सोपविणे** (ಸೋಪವಿಣೇ) ಕ್ರಿ. ಸ. ಮುಗಿಸು, ತೀರಿಸು, ಸ್ವಾಧೀನಮಾಡು.

**सोपा** (ಸೋಪಾ) ವಿ. ಸುಲಭವಾದ, ಸುಸಾಧ್ಯ, ಸುಗಮ, ಸಹಜಪ್ರಾಪ್ತ, ಪಡಸಾಲೆ.

**सोपाधिक** (ಸೋಪಾಧಿಕ) ಸಂ. ಉಪಾಧಿ ಸಹಿತವಾದ, ಹೊಣೆಕೆಯಿದ್ದ, ರಕ್ಷಕ ಪತ್ರ ಸಹಿತ.

**सोपान** (ಸೋಪಾನ) ಪು. ಸಂ. ಪಾವಟಗೆ, ಪಾವಟ ಣಿಗೆ, ಜಿನೆ.

**सोपान मार्ग** (ಸೋಪಾನ ಮಾರ್ಗ) ಪು. ಸಂ. ವ್ಯವ ಹಾರ್ಯ ಮಾರ್ಗ, ಕಾರ್ಯ ಪದ್ಧತಿ, ಕೈಸಾಗುವ ದಾರಿ, ಸಾಧ್ಯವಾಗುವ ಮಾರ್ಗ, ಕೈಲಾಗುವ ರೀತಿ.

**सोपारा** (ಸೋಪಾರಾ) ವಿ. ಹಗುರು, ಸುಲಭ, ಸುಗಮ, ಕಠಿಣವಲ್ಲದ.

**सोबकणे** (ಸೋಬಕಣೇ) ಕ್ರಿ. ಅ. ಹೊಡೆ, ಬಡೆ,ಗುದ್ದು, ಗುಮ್ಮು, ಅಪ್ಪಳಿಸು, ತಿವಿ.

**सोबत** (ಸೋಬತ್) ಸ್ತ್ರೀ. ಜತೆ, ಸಂಗತಿ, ಸಹವಾಸ, ಗೆಳೆತನ, ಮಿತ್ರತ್ವ, ಸ್ನೇಹ, ಜತೆಗಾರಿಕೆ, ಕೂಟ.

**सोबतसंगत** (ಸೋಬತಸಂಗತ) ಸ್ತ್ರೀ. ಸಖ್ಯ,ಮಿತ್ರತ್ವ, ಸಾಹಚರ್ಯ.

**सोबती** (ಸೋಬತೀ) ಸ್ತ್ರೀ. ಜತೆಗಾರ, ಜತೆಯುವ, ಸಂಗಾತಿ, ಗೆಳೆಯ, ಒಡನಾಡಿ, ಸಹಚರ.

**सोबतीण** (ಸೋಬತೀಣ್) ಸ್ತ್ರೀ. ಜತೆಗಾರ್ತಿ, ಜತೆಗಾ ರತಿ, ಸಂಗಾತಿ, ಗೆಳತಿ, ಒಡನಾಡಿ, ಸಹಚರೆ.

**सोबती संगती** (ಸೊಬತೀ ಸಂಗತೀ) ಪು. ಬಹುವ. ಗೆಳೆಯರು, ಸಂಗಡಿಗರು.

**सोम** (ಸೋಮ) ಪು. ಸಂ. ಚಂದ್ರ, ತಾರಕಾಪತಿ, ಉಡುರಾಜ, ಶಿವನ ಹೆಸರು, ಶಶಾಂಕ.

**सोमकान्त** (ಸೋಮಕಾಂತ) ಪು. ಸೋಮಕಾಂತ ರತ್ನ, ಕಲ್ಪಿತರತ್ನ.

**सोमट–ळ** (ಸೋಮಟ್–ಳ) ವಿ. ಬೆಚ್ಚಗಾದ, ಉಗುರು ಬೆಚ್ಚಗಿನ, ತುಸು ಉಷ್ಣ.

**सोमयाग** (ಸೋಮಯಾಗ) ಪು. ಸಂ. ಒಂದುಯಾ ಗದ ಪ್ರಕಾರ, ಸೋಮಯಜ್ಞ.

**सोमल, सोमलखार** (ಸೋಮಲ, ಸೋಮಲಖಾರ್) ಪು. ಬಿಳಿಯ ಸೋಮಲ, ಶ್ವೇತಸೋಮ, ತಾಳಕ, ಅರೆದಾಳ.

**सोमलता, वल्ली** (ಸೋಮಲತಾ,ವಲ್ಲೀ) ಸ್ತ್ರೀ. ಸೋಮ ಲತೆ, ಸೋಮರಸ ಬಳ್ಳಿ, ಚಂದ್ರಬಳ್ಳಿ.

**सोमवंश** (ಸೋಮವಂಶ) ಪು. ಚಂದ್ರವಂಶ.

**सोमवार** (ಸೋಮವಾರ) ಪು. ವಾರದಲ್ಲಿಯ ಒಂದು ದಿನದ ಹೆಸರು, ಸೋಮವಾರ.

**सोमवेल** (ಸೋಮವೇಲ್) ಸ್ತ್ರೀ. "**सोमलता**" ನೋ.

**सोय** (ಸೋಯ) ಸ್ತ್ರೀ. ವ್ಯವಸ್ಥೆ, ಅವಕಾಶ, ಅನು ಕೂಲತೆ.

**सोयरीक** (ಸೋಯರೀಕ್) ಸ್ತ್ರೀ. ನೆಂಟತನ, ಬಳಗ, ಸಂಬಂಧ, ನೆಂಟಸ್ತಿಕೆ, ಬಂಧುತ್ವ.

**सोयरा** (ಸೋಯರಾ) ಪು. ಬೀಗ, ಆಪ್ತ, ನೆಂಟ, ಸಂಬಂಧಿಕ, ಮದುವೆಯ ಬಳಿಕ ಉಂಟಾದ ನೆಂಟ ತನ, ನೆಂಟ, ಆಪ್ತ.

**सोर** (ಸೋರ್) ಸ್ತ್ರೀ. ಮಣ್ಣಿನ ಪಾತ್ರೆ.

**सोरमीठ** (ಸೋರಮೀಠ್) ನ. } ಸೋರುಪ್ಪು, ಒಂದು
**सोरा** (ಸೋರಾ) ಪು. } ಪ್ರಕಾರದ ಕ್ಷಾರ.

**सोरट–ठ** (ಸೋರಟ–ಠ) ಪು. ಪೋಕರಿ, ಹುಡುಗಾಟಿಕೆ, ಮೋಸಗಾರಿಕೆ, ಠಕ್ಕ.

**सोरठाई** (ಸೊರಠಾಈ) ಸ್ತ್ರೀ. ಪೋಕರಿತನ, ಹುಡುಗಾಟಿಕೆ, ಮೋಸಗಾರಿಕೆ, ಠಕ್ಕತನ.

**सोल** (ಸೋಲ್) ನ. ಮಾವಿನ ಬಾಳಕ. ೨. ಆಮಸೋಲು, ಗಟ್ಟಿದಪ್ಪ ಹಗ್ಗ, ಏತದ ಹಗ್ಗ, ಮೊಟ್ಟೆಯ ಹಗ್ಗ.

**सोलखंड** (ಸೋಲಖಂಡ) ನ. ದಪ್ಪಹಗ್ಗ, ದೊಡ್ಡಹಗ್ಗ, ಗಟ್ಟಿಹಗ್ಗ.

**सोलणे** (ಸೋಲಣೇ) ಕ್ರಿ. ಸ. ಚಿಪ್ಪೆಸುಲಿ, ಸಿಪ್ಪೆಸುಲಿ, ಚರ್ಮಸುಲಿ, ಸಿಪ್ಪೆತೆಗೆ.

**नाकाने कांदे वांगी** (ನಾಕಾನೇ ಕಾಂದೇ ವಾಂಗೀ) ಕ್ರಿ. ಸ. ಬಡಿವಾರಮಾಡು.

**सोलवणी** (ಸೋಲವಣೀ) ಸ್ತ್ರೀ. ಆಮಸೋಲ ನೀರಿನಲ್ಲಿ ನೆನೆಸುವಿಕೆ.

**सोलीव** (ಸೋಲೀವ್) ವಿ. ಸುಲಿದ, ತೊಗಟೆ ತೆಗೆದ, ಸಿಪ್ಪೆಸುಲಿದ, ಚರ್ಮತೆಗೆದ, ಶುದ್ಧ, ತಿಳಲಿನ.

**सोव** (ಸೋವ) ಪು. ನೆವ, ನಿಮಿತ್ತ, ಠಕ್ಕು, ಹುಸಿಯ, ಕೃತ್ರಿಮ, ಖೊಟ್ಟಿ, ಡಾಂಭಿಕ.

**सोवळा** (ಸೋವಳಾ) ವಿ. ಮಡಿವಂತ, ಶುದ್ಧ, ಮಡಿಯಲ್ಲಿರುವ. ೨. ಮಡಿ ಮೈಲಿಗೆ ಪಾಲಿಸುವವ, ಸಾತ್ವಿಕ.

**सोवळे** (ಸೋವಳೇ) ನ. ಮಡಿ, ಮಡಿಯ ಬಟ್ಟೆ, ರೇಶ್ಮೆಯ ಬಟ್ಟೆ, ಮಡಿಯ ರೇಶ್ಮೆ ಬಟ್ಟೆ.

**सोशी** (ಸೋಶೀ) ವಿ. ಅರ. (ಷೋಕೀ) ಲೋಭಿ, ಸ್ವಾರ್ಥಿ, ಕೃಪಣ, ಜೀನ, ಕವಡಿಗಂಟುಕಟ್ಟುವ, ಧನಲೋಭಿ, ಆಶೆಬುರುಕ, ಅತ್ಯಾಶೆಯ, ಜಿಪುಣ.

**सोशीक** (ಸೋಶೀಕ) ವಿ. ತಾಳ್ಮೆಯ, ಸಹನೆಯುಳ್ಳ, ಸಹನಶೀಲ, ಶಾಂತ.

**सोस** (ಸೋಸ) ಪು. ಅರ. (ಷೋಕ್) ದೊಡ್ಡಆಕಾಂಕ್ಷೆ, ಇಚ್ಛೆ.

**–माउली** (–ಮಾಉಲೀ) ಪು. ಡೌಲುಮಾಡುವವ.

**सोसणे** (ಸೋಸಣೇ) ಕ್ರಿ. ಸ. ತಾಳು, ಸಹಿಸು, ತಡಕೊಳ್ಳು, ಬಾಳು, ಇರು, ಸೈರಿಸು, ಒಪ್ಪು, ಹೊಂದು.

**सोसा** (ಸೋಸಾ) ಪು. ಗಾಳಿಯ ರಭಸ, ಗಾಳಿಯ ಬಡಿತ.

**सोसाट–टा** (ಸೋಸಾಟ–ಟಾ) ಪು. ರಭಸ, ವೇಗ.

**सोहम्** (ಸೋಹಮ್) ಸಂ. (ವೇದಾಂತ) ಅವನೇ ನಾನು, ಸೋಹಮ್, ನಾನೇ ಈಶ್ವರನಿದ್ದೇನೆ.

**सोह(हा)ळा** (ಸೋಹ(ಹಾ)ಳಾ) ಪು. ಸಮಾರಂಭ, ಸಂಸ್ಕಾರ ಮಾಡುವ ವಿಧಿ, ಧಾರ್ಮಿಕ ವಿಧಿ.

**सोळकी** (ಸೋಳಕೀ) ಸ್ತ್ರೀ. ಹದಿನಾರರ ಮಗ್ಗಿ.

**सोळा** (ಸೋಳಾ) ವಿ. ಹದಿನಾರು. (೧೬)

**सोळा आणे** (ಸೋಳಾಆಣೇ) ವಿ. ನಿಗದಿಯಾಗಿ ಹದಿನಾರಾಣೆಯಾಗಿ, ಅತ್ಯುತ್ತಮವಾಗಿ.

**सोळ(ळो)ली** (ಸೋಳು (ಳೋ) ಲೀ) ಹದಿನಾರು ಹೇರಿನ ಅಳತೆಯ.

**सोक्षमोक्ष** (ಸೋಕ್ಷಮೋಕ್ಷ) ವಿ. ಖಂಡಿತತೀರ್ಪು, ಕೆಟ್ಟದ್ದು, ಚಲೋದು.

**सौकर्य** (ಸೌಕರ್ಯ) ನ. ಸಂ. ವ್ಯವಸ್ಥೆ, ಸೌಲಭ್ಯ, ಸುಗಮತನ, ಹಗುರುತನ, ಸಂಭಾವ್ಯತೆ, ಸಾಧ್ಯತೆ.

**सौकुमार्य** (ಸೌಕುಮಾರ್ಯ) ನ. ಸಂ. ಎಳೆತನ, ಬಾಲ್ಯ, ಚಿಕ್ಕತನ, ಕೋಮಲತೆ, ಕೋಮಲತನ, ಮೃದುತನ, ಅಶಕ್ತತೆ, ಮಮತ್ವ, ಕನಿಕರ.

**सौख्य** (ಸೌಖ್ಯ) ನ. ಸಂ. ಸೌಖ್ಯ, ಸುಖ, ಶಾಂತಿ, ಆರಾಮ, ಪರಮಾನಂದ, ಮಹದಾನಂದ.

**सौगंध्य** (ಸೌಗಂಧ್ಯ) ನ. ಸಂ. ಸುವಾಸನೆ, ಉತ್ತಮ ವಾಸನೆ, ಮಧುರ ವಾಸನೆ.

**सौगम्य** (ಸೌಗಮ್ಯ) ನ. ಸಂ. ಸುಗಮತೆ, ಸಹಜ, ಹಗುರುತನ, ಸುಲಭಪ್ರಾಪ್ತವಾಗುವಿಕೆ.

**सौजन्य** (ಸೌಜನ್ಯ) ನ. ಸಂ. ಸಜ್ಜನತ್ವ, ಸಜ್ಜನತೆ, ಸಭ್ಯತೆ, ಆದರ ಸತ್ಕಾರ, ವಿನಯ, ಮನುಷ್ಯತನ.

**सौते** (ಸೌತೇ) ಕ್ರಿ. ವಿ. ಸ್ವತಃ, ಸ್ವಂತ, ವೈಯಕ್ತಿಕವಾಗಿ.

**सौत्र** (ಸೌತ್ರ) ವಿ. ಸಂ. ಸೂತ್ರದ, ಸೂತ್ರೋಕ್ತ, ಸೂತ್ರದ ಪ್ರಕಾರದ, ನಿಯಮಾನುಸಾರವಾದ, ನಿಯಮಕ್ಕೊಳಪಟ್ಟ, ವಿಧಿಗನುಸಾರವಾದ.

**सौंदर्य** (ಸೌಂದರ್ಯ) ನ. ಸಂ. ಚೆಲುವು, ಬೆಡಗು, ಸೌಂದರ್ಯ, ಸೌರೂಪ್ಯ, ಅಂದತನ, ಚೆಲ್ವಿಕೆ, ಚೆಲುವುತನ.

**सौदा** (ಸೌದಾ) ಪು. ಸಂ. ಗುತ್ತಿಗೆ, ವ್ಯಾಪಾರ, ಉದ್ಯೋಗ, ಉದ್ದಿಮೆ, ಕಸಬು, ವ್ಯಾಪಾರದ ದಿನಸು, ಸರಕು.

**सौदागर** (ಸೌದಾಗರ್) ಪು. ಫಾ. ವ್ಯಾಪಾರಸ್ಥ, ವ್ಯವಹಾರಸ್ಥ, ಕಸಬುದಾರ.

**सौदागरी** (ಸೌದಾಗರೀ) ಸ್ತ್ರೀ. ವ್ಯಾಪಾರ, ಗುತ್ತಿಗೆಗಾರಿಕೆ, ಕಸಬುಗಾರಿಕೆ, ಧಂದೆ.

**सौदामिनी** (ಸೌದಾಮಿನೀ) ಸ್ತ್ರೀ. ಮಿಂಚು, ವಿದ್ಯುತ್ತು, ಮೇಖಲೆ. ೨. ಸುಂದರಸ್ತ್ರೀ.

**सौध** (ಸೌಧ) ಪು. ಸಂ. ಮಾಳಿಗೆ, ಅಟ್ಟ, ದೊಡ್ಡಮನೆ, ರಾಜಗೃಹ, ಅರಮನೆ, ಭವ್ಯಮಂದಿರ.

**सौभाग्य** (ಸೌಭಾಗ್ಯ) ನ. ಸಂ. ಶ್ರೀಮಂತತನ, ಸಿರಿವಂತಿಕೆ, ಸೌಭಾಗ್ಯ, ದೈವ, ಸುದೈವ, ಮಾಂಗಲ್ಯ. ಪತ್ನೀವ್ರತ ಜೀವನ.

**सौभाग्यचिन्ह** (ಸೌಭಾಗ್ಯಚಿನ್ಹ) ನ. ಸಂ. ಸೌಭಾಗ್ಯಲಕ್ಷಣ, ಮಂಗಲ ಚಿಹ್ನ, ಮುತ್ತೈದೆಯ ಚಿಹ್ನ, ಪಾತಿವ್ರತ್ಯದ ಚಿಹ್ನ.

**सौभाग्यद्रव्य** (ಸೌಭಾಗ್ಯದ್ರವ್ಯ) ನ. ಸಂ. ಅರಿಶಿಣ, ಕುಂಕುಮ ಇ. ವಿವಾಹಿತನಿಗೆ ಉಪಯೋಗಕರ ಮಂಗಲವಸ್ತು, ಶುದಭ್ರವ್ಯ.

**सौभाग्यवती** (ಸೌಭಾಗ್ಯವತೀ) ಸ್ತ್ರೀ. ಮುತ್ತೈದೆ, ಸೌಭಾಗ್ಯವತಿ, ಹೆಂಡತಿಯ ಒಕ್ಕಣಿಕೆ.

**सौमनस्य** (ಸೌಮನಸ್ಯ) ನ. ಪು. ಒಳ್ಳೆಯ ಮನಸ್ಸು, ಸರಲ ಮನಸ್ಸು, ಜ್ಞಾನಮಾರ್ಗದರ್ಶಕ ಮನಸ್ಸು.

**सौम्य** (ಸೌಮ್ಯ) ವಿ. ಸಂ. ಮಂದ, ಶಾಂತ, ದಡ್ಡ, ಮಂದಗತಿಯ ಚಂದ್ರನ ಸಂಬಂಧದ. ೨. ಪು. ಬುಧಗ್ರಹ.

**सौम्योपचार** (ಸೌಮ್ಯೋಪಚಾರ) ಪು. ಸಂ. ಶೀತೋಪಚಾರ, ಮೃದೂಪಚಾರ.

**सौर** (ಸೌರ) ವಿ. ಸೂರ್ಯಸಂಬಂಧದ, ರವಿಗೆ ಸಂಬಂಧಪಟ್ಟ, ಸೂರ್ಯನ.

**सौर वर्ष** (ಸೌರವರ್ಷ) ನ. ಸಂ. ಸೌರ್ಯಮಾನದ (ಇಂಗ್ಲಿಷ್ ಪದ್ಧತಿಯ ಅಥವಾ ರಾಷ್ಟ್ರೀಯ ಪಂಚಾಂಗದ) ವರ್ಷ.

**सौरभ** (ಸೌರಭ) ನ. ಸಂ. ಸುಗಂಧ ದ್ರವ್ಯ, ಸುವಾಸನೆ. "**सौगंध्य**" ನೋ.

**सौरस्य** (ಸೌರಸ್ಯ) ನ. ಸಂ. ಮಿತ್ರತ್ವ, ಗೆಳೆತನ, ರುಚಿ, ಸಿಹಿ, ಸವಿತನ, ಸ್ನೇಹ

**सौलत** (ಸೌಲತ್) ಸ್ತ್ರೀ. ಫಾ. ಅನುಕೂಲತೆ, ರಿಆಯತಿ.

**सौलभ्य** (ಸೌಲಭ್ಯ) ನ. ಸಂ. ಸುಲಭತನ, ಕೌಶಲ್ಯ, ಸೌಕರ್ಯ, ಅನುಕೂಲತೆ, ಸುಸಂಧಿ.

**सौष्टव** (ಸೌಷ್ಟವ) ನ. ಸಂ. ಅಂದ. ೨. ಅಂದವಾದ ಮೈಕಟ್ಟು.

**सौक्ष्म्य** (ಸೌಕ್ಷ್ಮ್ಯ) ನ. ಸಂ. ಸೂಕ್ಷ್ಮತನ, ಜಿನುಗು ಮಾತು.

**स्कंध** (ಸ್ಕಂಧ) ಪು. ಸಂ. ಹೆಗಲು, ಭುಜ, ಹೆಡಕು, ದೊಡ್ಡ ಟೊಂಗೆ, ಒಂದು ಪ್ರಕರಣ, ಅಧ್ಯಾಯ. ೨. ಕುಮಾರ, ಷಣ್ಮುಖ.

**स्खलित** (ಸ್ಖಲಿತ) ವಿ. ಸಂ. ಬಿದ್ದ, ಇಳಿದ.

**स्खलन** (ಸ್ಖಲನ) ನ. ಸಂ. ಬೀಳುವಿಕೆ, ಇಳಿಯುವಿಕೆ, ನೈತಿಕ ಅಧಃಪತನ, ಪ್ರತಿಜ್ಞಾಭಂಗ.

**स्तन** (ಸ್ತನ) ನ. ಸಂ. ಮೊಲೆ, ಕುಚ.

**स्तनाग्र** (ಸ್ತನಾಗ್ರ) ನ. ಮೊಲೆಯ ತೊಟ್ಟು, ಚೂಚುಕ.

**स्तन देणे** (ಸ್ತನದೇಣೇ) ಕ್ರಿ. ಸಂ. ಮೊಲೆ ಕುಡಿಸು, ಮೊಲೆಹಾಲುಣಿಸು.

**स्तनपान** (ಸ್ತನಪಾನ) ನ. ಸಂ. ಮೊಲೆ ಕುಡಿಸುವಿಕೆ, ಮೊಲೆಯುಣ್ಣಿಸುವಿಕೆ.

**स्तनमुक्त** (ಸ್ತನಮುಕ್ತ) ವಿ. ಸ. ಮೊಲೆ ಬಿಡಿಸಿದ.

**स्तन सोडणे–सोडवणे** (ಸ್ತನ ಸೋಡಣೇ–ಸೋಡವಣೇ) ಕ್ರಿ. ಸ. ಮೊಲೆ ಬಿಡು, ಮೊಲೆ ಬಿಡಿಸು, ಮೊಲೆ ನಿಲ್ಲಿಸು.

**स्तन्य** (ಸ್ತನ್ಯ) ನ. ಸಂ. ಮೊಲೆ ಹಾಲು.

**–पान** (–ಪಾನ) ನ. ಮೊಲೆ ಕುಡಿಸುವಿಕೆ.

**स्तंब–भ** (ಸ್ತಂಬ–ಭ) ಪು. ಸಂ. ಶಿಖೆ, ಜೆಂಡಿಕೆ, ಜುಟ್ಟು, ತುರಾಯಿ, ಗೊಂಡೆ, ಗಡ್ಡೆ.

**स्तबक** (ಸ್ತಬಕ್) ನ. ಸಂ. ಗೊಂಡೆಯ ಗೊಂಚಲ.

**स्तब्ध** (ಸ್ತಬ್ಧ) ವಿ. ಸಂ. ಸುಮ್ಮನಿದ್ದ, ನಿಲ್ಲಿಸಿದ, ನಿಂತ, ದೃಢಪಡಿಸಿದ, ಬಿಗಿಮಾಡಿದ, ಗಟ್ಟಿಮಾಡಿದ.

**स्तब्धणे** (ಸ್ತಬ್ಧಣೇ) ಕ್ರಿ. ಅ. ಸುಮ್ಮನಾಗು, ಸುಮ್ಮನಿರು, ದೃಢಪಡಿಸು, ಬಿಗಿಮಾಡು, ಗಟ್ಟಿಮಾಡು.

**स्तंभ** (ಸ್ತಂಭ) ಪು. ಕಂಬ, ಚುಕ್ಕೆ, ಕಲೆ, ಕುಂದು, ಕಲಂಕು, ನಿಲ್ಲುವಿಕೆ, ವಿಘ್ನ, ಆತಂಕ, ಅಡ್ಡಿ, ವಿರೋಧ.

**स्तंभन** (ಸ್ತಂಭನ) ನ. ಸಂ. ನಿಲ್ಲಿಸುವಿಕೆ, ಒತ್ತಿಡುವಿಕೆ, ಅಣಕಿಸುವಿಕೆ, ಕುಗ್ಗಿಸುವಿಕೆ, ಮುಚ್ಚಿಡುವಿಕೆ.

**स्तरीभूत** (ಸ್ತರೀಭೂತ) ವಿ. ಸಂ. ತರಗಳಿಂದ ಕೂಡಿದ, ಪದರುಗಳಾಗಿ ರಚಿಸಿದ (ಬಂಡೆಗಲ್ಲು)

**स्तव** (ಸ್ತವ) ಪು. ಸಂ. ಸ್ತೋತ್ರ, ಸ್ತುತಿ, ಪ್ರಾರ್ಥನೆ, ಕೊಂಡಾಡುವಿಕೆ, ಹೊಗಳುವಿಕೆ, ಕೊಂಡಾಟ.

**स्तवणे** (ಸ್ತವಣೇ) ಕ್ರಿ. ಅ. ಸ್ತುತಿಸು, ಪ್ರಾರ್ಥಿಸು, ಕೊಂಡಾಡು, ಹೊಗಳು.

**स्तवन** (ಸ್ತವನ) ನ. ಸಂ. **स्तव** ನೋ.

**स्तवनीय** (ಸ್ತವನೀಯ) ವಿ. ಸಂ. ಸ್ತುತ್ಯ, ಸ್ತುತಿ ಪಾತ್ರವಾದ, ಪ್ರಶಂಸನೀಯ, ಹೊಗಳತಕ್ಕ.

**स्तावक** (ಸ್ತಾವಕ) ಪು. ಸ್ತುತಿಮಾಡುವ, ಶಿಫಾರಸು ಮಾಡುವ, ಹೊಗಳುವ.

**स्तिमिताई** (ಸ್ತಿಮಿತಾಈ) ಸ್ತ್ರೀ. ಮಂದತನ, ಜಡತ್ವ, ನಿದಾನತೆ, ವಿಲಂಬತ್ವ.

**स्तुत** (ಸ್ತುತ) ವಿ. ಸಂ. ಹೊಗಳಿದ, ಕೊಂಡಾಡಿದ, ದೊಡ್ಡದು ಮಾಡಿದ.

**स्तुति** (ಸ್ತುತಿ) ಸ್ತ್ರೀ. ಹೊಗಳಿಕೆ "**स्तव**" ನೋ.

**स्तुतिपाठक** (ಸ್ತುತಿಪಾಠಕ) ಪು. ಸಂ. ಹೊಗಳುಭಟ್ಟ, ಭಟ್ಟಂಗಿ, ಕವಿ, ಮಾಗಧ, ಸ್ತುತಿಪಾಠಕ.

**स्तुतिप्रिय** (ಸ್ತುತಿಪ್ರಿಯ) ವಿ. ಸಂ. ಸ್ತುತಿಗೆಮೆಚ್ಚಿದ, ಸ್ತುತಿಗೆ ಅಂಟಿಕೊಂಡ, ಸ್ತುತಿಗೆ ಮರುಳಾಗುವ.

**स्तुतिवाद** (ಸ್ತುತಿವಾದ) ಪು. ಕೀರ್ತನೆ, ಸ್ತುತಿ, ಹೊಗಳಿಕೆ, ಪ್ರಶಂಸೆ.

**स्तुत्य** (ಸ್ತುತ್ಯ) ವಿ. ಸಂ. ಯೋಗ್ಯ, ತಕ್ಕ, ಸರಿಯಾದ, ಸ್ತುತಿಪಾತ್ರ, ಹೊಗಳತಕ್ಕ, ಶ್ಲಾಘ್ಯ, ಸ್ತೋತ್ರಾರ್ಹ.

**स्तेय** (ಸ್ತೇಯ) ನ. ಸಂ. ತುಡುಗತನ, ಕಳ್ಳತನ, ಚೋರತನ, ಕಳವು, ಚಾರ್ಯ, ತುಡುಗು.

**स्तोतव्य** (ಸ್ತೋತವ್ಯ) ವಿ. ಸಂ. ಸ್ತವನೀಯ.

**स्तोत्र** (ಸ್ತೋತ್ರ) ನ. ಸಂ. ಹೊಗಳಿಗೆ.

**स्तोम** (ಸ್ತೋಮ) ಪು. ನ. ಸಮೂಹ, ರಾಶಿ, ಸಂಘ, ವ್ಯರ್ಥಸ್ತುತಿ, ಸುಳ್ಳು ಹೊಗಳಿಕೆ, ನಿರರ್ಥಕ ಹೊಗಳಿಕೆ.

**स्त्री** (ಸ್ತ್ರೀ) ಹೆಂಗಸು, ಮಹಿಳೆ, ಪತ್ನಿ, ಕಲತ್ರ.

**स्त्री चरित्र** (ಸ್ತ್ರೀ ಚರಿತ್ರ) ನ. ಸಂ. ಸ್ತ್ರೀಚರಿತ್ರ, ಹೆಣ್ಣಿನ ಜೀವನ, ಹೆಣ್ಣಿನ ಬಾಳುವೆ, ಸ್ತ್ರೀಸಾಹಸ.

**स्त्रीदास** (ಸ್ತ್ರೀದಾಸ್) ಪು. ಸಂ. ಸ್ತ್ರೀ ಲಂಪಟ, ಹೆಣ್ಣುಗೊಂಬೆಯಾದವನು, ಹೆಣ್ಣಿನ ಆಳು.

**स्त्रीधन** (ಸ್ತ್ರೀಧನ) ನ. ಸಂ. ಹೆಣ್ಣಿನ ದುಡ್ಡು, ಹೆಂಗಸರ ಒಡೆತನದ ದುಡ್ಡು, ವಿವಾಹಿತಳಿಗೆಕೊಟ್ಟ ಧನ, ಆಭರಣ.

**स्त्री धर्म** (ಸ್ತ್ರೀ ಧರ್ಮ) ಪು. ಸಂ. ಸ್ತ್ರೀ ನೀತಿ, ಪತ್ನಿಯಧರ್ಮ, ಸ್ತ್ರೀಯರ ನಡತೆ.

**स्त्रीपुरुष** (ಸ್ತ್ರೀಪುರುಷ) ಹೆಂಗಸರು – ಗಂಡಸರು, ವಿವಾಹಿತ ಹೆಣ್ಣು–ಗಂಡು, ಪತಿ–ಪತ್ನಿ.

**स्त्रीपुरुषधर्म** (ಸ್ತ್ರೀಪುರುಷಧರ್ಮ) ಪು. ಸಂ. ಪತಿ–ಪತ್ನಿಯ ಆಚಾರ, ಸ್ತ್ರೀಪುರುಷರ ಪರಸ್ಪರ ಆಚಾರ ಧರ್ಮ.

**स्त्रीबुद्धि** (ಸ್ತ್ರೀಬುದ್ಧಿ) ಸ್ತ್ರೀ. ಸಂ. ಅಪಕ್ವವಿಚಾರ. ೨. ವಿ. ಹೆಣ್ಣಿನಂತಿರುವ, ದುರ್ಬಲ, ವಿಷಯಾಸಕ್ತ, ಹೆಂಡತಿಗೆ ಹೆದರುವ, ಸ್ತ್ರೀ ವಶನಾದ.

**स्त्रीरत्न** (ಸ್ತ್ರೀರತ್ನ) ನ. ಸಂ. ಉತ್ತಮಹೆಂಗಸು, ಶ್ರೇಷ್ಠಪತ್ನಿ, ರತ್ನದಂತಹ ಹೆಂಗಸು, ಸುಂದರ ಸ್ತ್ರೀ.

**स्त्रीलंपट** (ಸ್ತ್ರೀಲಂಪಟ) ವಿ. ಸಂ. ಹೆಣ್ಣಿಗೆ ಮನ ಸೋತ.

**स्त्रीलिंग** (ಸ್ತ್ರೀಲಿಂಗ) ನ. ಮೂರು ಲಿಂಗಗಳಲ್ಲಿ ಒಂದು (ವ್ಯಾಕರಣದಲ್ಲಿ)

**स्त्रीवश** (ಸ್ತ್ರೀ ವಶ) ವಿ. ಹೆಂಡತಿಯ ಆಜ್ಞೆಯ ಮೇರೆಗೆ ನಡೆಯುವವ.

**स्त्रैण** (ಸ್ತ್ರೈಣ) ವಿ. ಸಂ. ಹೆಣ್ಣುಸ್ವಭಾವದ, ಸ್ತ್ರೀ ವಶನಾದ, ಹೆಂಡತಿಯ ಕೈಯಲ್ಲಿರುವ.

**–स्थ** (–ಸ್ಥ) ಪ್ರತ್ಯಯ ಸಂ. ನಿಂತ, ಗಟ್ಟಿಯಾದ, ಸ್ಥಾಪಿಸಿದ, ಸ್ಥಾಪನೆಗೊಂಡ, ಊರಲ್ಪಟ್ಟ, ನಿಂತ, ನಿಲ್ಲುವ, ಉದಾ:

**ग्रामस्थ** (ಗ್ರಾಮಸ್ಥ) ಪು. ಊರವ.

**स्थंडिल** (ಸ್ಥಂಡಿಲ) ನ. ಸಂ. ಬಲಿಪೀಠ, ಯಜ್ಞ ವೇದಿಕೆ.

**स्थल** (ಸ್ಥಲ) ನ. ಸಂ. ಜಾಗೆ, ಅವಕಾಶ, ಸ್ಥಳ, ಸ್ಥಾನ, ಪ್ರಯೋಜನ, ಉಪಯೋಗ, ಸಹಾಯ.

**स्थलचर** (ಸ್ಥಲಚರ) ಪು. ಸಂ. ಭೂಮಿಯ, ಇಹ ಲೋಕದ, ಲೌಕಿಕ.

**स्थलदेवता** (ಸ್ಥಲದೇವತಾ) ಪು. ಗ್ರಾಮದೇವತೆ, ಊರದೇವರು, ಸ್ಥಾನಿಕದೇವತೆ, ಸಂರಕ್ಷಕದೇವತೆ. ರಕ್ಷಿಸುವದೇವತೆ.

**स्थलमार्ग** (ಸ್ಥಲಮಾರ್ಗ) ಪು. ಭೂಮಾರ್ಗ, ನೆಲ ದಾರಿ.

**स्थलांतर** (ಸ್ಥಲಾಂತರ) ನ. ಸಂ. ಸ್ಥಲಾಂತರ, ಸ್ಥಲ ಪರಿವರ್ತನ, ಜಾಗೆ ಬದಲಿಸುವಿಕೆ, ಪರಸ್ಥಲ, ಎರಡನೆಯ ಜಾಗೆ.

**स्थाणु** (ಸ್ಥಾಣು) ಪು. ಸಂ. ಶಿವ, ಕಂಬ, ಮೋಟ, ಮುಂಡ, ಬೊಡ್ಡೆ, ಗಟ್ಟಿಯಾದ, ನಿಶ್ಚಿತವಾದ, ಗೊತ್ತುಪಡಿಸಿದ.

**स्थातव्य** (ಸ್ಥಾತವ್ಯ) ವಿ. ಸಂ. ಇಡತಕ್ಕ, ಇಡಲು ಯೋಗ್ಯ, ನಿಯೋಜಿಸತಕ್ಕ.

**स्थान** (ಸ್ಥಾನ) ನ.ಸಂ. ಸ್ಥಳ, ಜಾಗೆ. ೨. ಯೋಗ್ಯತೆ, ಮಟ್ಟ.

**स्थानच्युत** (ಸ್ಥಾನಚ್ಯುತ) ವಿ, ಸಂ. ಸ್ಥಾನಕಳ ಕೊಂಡ, ಬಿದ್ದ, ಅವನತ, ನೈತಿಕ ಅವನತಿಹೊಂದಿದ.

**स्थानत्याग** (ಸ್ಥಾನತ್ಯಾಗ) ಪು. ಸಂ. ಜಾಗೆಕಳಕೊಳ್ಳು ವಿಕೆ, ಸ್ಥಳಬಿಡುವಿಕೆ, ಬರಿದುಮಾಡುವಿಕೆ, ಬಿಟ್ಟು ಬಿಡುವಿಕೆ.

**स्थानभ्रष्ट** (ಸ್ಥಾನಭ್ರಷ್ಟ) ವಿ. ಸಂ. ಸ್ಥಾನದಿಂದ ಹೊರಬಿದ್ದ. ೨. ನೌಕರಿಯಿಂದ ಹೊರಗೆ ಹಾಕಿದ.

**स्थानमाहात्म्य** (ಸ್ಥಾನಮಾಹಾತ್ಮ್ಯ) ನ. ಸಂ. ಸ್ಥಾನ ಗಾರವ, ಸ್ಥಲಮಹಿಮೆ, ಸ್ಥಳದಮಹತ್ವ, ತೀರ್ಥ ಮಹಾತ್ಮೆ.

**स्थानिक-स्थानीय** (ಸ್ಥಾನಿಕ-ಸ್ಥಾನೀಯ) ವಿ. ಸಂ. ಸ್ಥಳಕ್ಕೆ ಸಂಬಂಧಿಸಿದ, ಸ್ಥಳಿಕ, ಸ್ಥಳೀಯ, ಸ್ಥಳದ.

**स्थानिक स्वराज्य** (ಸ್ಥಾನಿಕ ಸ್ವರಾಜ್ಯ) ನ. ಸಂ. ಸ್ಥಾನಿಕಸ್ವರಾಜ್ಯ, ಸ್ಥಾನಿಕಸ್ವಯಂ ಆಡಳಿತೆ, (ನಗರಪಾಲಿಕೆ, ಗ್ರಾಮಪಂಚಾಯತಿ)

**स्थापक** (ಸ್ಥಾಪಕ) ವಿ. ಸಂ. ಸ್ಥಾಪಿಸಿದ, ಪ್ರತಿಷ್ಠಾಪಿ ಸಿದ, ಸಿದ್ಧಪಡಿಸಿದ, ವಾಸಿಸುವ.

**स्थापणे** (ಸ್ಥಾಪಣೇ) ಕ್ರಿ. ಸಂ. ಸ್ಥಾಪಿಸು, ಸಿದ್ಧ ಪಡಿಸು, ವಾಸಿಸು, ನಿಲ್ಲಿಸು.

**स्थापन** (ಸ್ಥಾಪನ) ಸ್ಥಾಪಿಸುವಿಕೆ, ಸ್ಥಾಪಿಸುವಿಕೆ, ವಾಸಿಸುವಿಕೆ, ನಿಲ್ಲಿಸುವುದು.

**स्थापनीय** (ಸ್ಥಾಪನೀಯ) ವಿ. ಸಂ. ಸ್ಥಾಪನೆಗೆ ಯೋಗ್ಯ, ಸ್ಥಾಪಿಸತಕ್ಕ.

**स्थापित** (ಸ್ಥಾಪಿತ) ವಿ. ಸಂ. ಸ್ಥಾಪಿಸಿದ, ಸ್ಥಾಪನೆ ಹೊಂದಿದ, ಊರಲ್ಪಟ್ಟ, ನಿಲ್ಲಿಸಲಾದ.

**स्थायिक-स्थायी** (ಸ್ಥಾಯಿಕ-ಸ್ಥಾಯೀ) ವಿ. ಸಂ. ಸ್ಥಿರವಾದ, ಗಟ್ಟಿಯಾದ, ಚಿರಕಾಲಿಕ, ಸ್ಥಿರವಾದ, ನೆಲೆಗೊಂಡ.

**स्थाली** (ಸ್ಥಾಲೀ) ಸ್ತ್ರೀ. ಸಂ. ಅಡಿಗೆಯ ಪಾತ್ರೆ, ಸಣ್ಣ ಪರಾತ, ಮುಚ್ಚಳಿಕೆ.

**स्थावर** (ಸ್ಥಾವರ) ವಿ. ಸಂ. ಸ್ಥಿರವಾದ, ಅಂಟಿ ಕೊಂಡ, ಅಚಲ, ನಿಶ್ಚಲ, ಸ್ಥಿರಮನಸ್ಸಿನ.

**स्थावरजंगम** (ಸ್ಥಾವರಜಂಗಮ) ವಿ. ಸಂ. ಸ್ಥಿರವಾದ- ಚಲಿಸುವ, ಗಟ್ಟಿಗೊಂಡ-ಅಲುಗಾಡುವ.

**स्थावरजिंदगी** (ಸ್ಥಾವರಜಿಂದಗೀ) ವಿ. ಸಂ. ಮನೆ, ಹೊಲ ಮುಂತಾದ ಆಸ್ತಿ, ಸ್ಥಾವರ ಬದುಕು.

**स्थित** (ಸ್ಥಿತ) ವಿ. ಸಂ. ನಿಂತ, ಗಟ್ಟಿಗೊಂಡ, ಸ್ಥಾಪಿಸಲ್ಪಟ್ಟ, ಇಡಲ್ಪಟ್ಟ, ಕಾಯಮುಗೊಳಿಸಿದ.

**स्थिति** (ಸ್ಥಿತಿ) ಸ್ತ್ರೀ. ಸಂ. ಇರುವಿಕೆ, ಬಾಳುವೆ, ಜೀವನ, ಅವಸ್ಥೆ, ಸ್ಥಳ, ಪರಿಸ್ಥಿತಿ, ವೈಭವ, ಸಿರಿವಂತಿಗೆ.

**स्थिति ओळखणे** (ಸ್ಥಿತಿ ಓಳಖಣೇ) ಕ್ರಿ. ಸ. ಇರುವಿಕೆ ಯನ್ನು ತಿಳಿ, ಪರಿಸ್ಥಿತಿಯನ್ನು ಅಭ್ಯಸಿಸು, ಜೀವನ ವನ್ನು ಅರಿತುಕೊಳ್ಳು.

**स्थितीवर येणे-असणे** (ಸ್ಥಿತೀವರ್ ಯೇಣೇ-ಅಸಣೇ) ಕ್ರಿ. ಅ. ಯೋಗ್ಯಸ್ಥಾನಕ್ಕೆ ಬರು.

**स्थिति रीति** (ಸ್ಥಿತಿ ರೀತಿ) ಸ್ತ್ರೀ. ಸಂ. ನಡತೆ, ಶೀಲ, ವರ್ತನೆ, ಚರ್ಯೆ, ವ್ಯವಸ್ಥೆ.

**स्थितिस्थापक** (ಸ್ಥಿತಿಸ್ಥಾಪಕ) ವಿ. ಸಂ. ಮೊದಲಿದ್ದ ಸ್ಥಿತಿಗೆ ಬರುವ, ಜಗ್ಗಿ ಮಣಿಸಿದ ಮೇಲೆ ಮುಂಚಿನ ಸ್ಥಿತಿಗೆ ಬರುವ.

**स्थितिस्थापकत्व** (ಸ್ಥಿತಿಸ್ಥಾಪಕತ್ವ) ನ. ಸಂ. ಹೊಂದಿ ಕೊಳ್ಳುವ ಗುಣ, ಮೊದಲಿನ ಸ್ಥಿತಿಗೆ ಬರುವ ಗುಣ, ಒತ್ತಿ ಜಗ್ಗಿ ಮಣಿಸಿದ ಮೇಲೆ ಮೊದಲಿನ ಸ್ಥಿತಿಗೆ ಬರುವ ಗುಣ.

**स्थिर** (ಸ್ಥಿರ) ವಿ. ಸಂ. ಗಟ್ಟಿಯಾದ, ಅಚಲ, ಸ್ಥಿರ ವಾದ, ನಿಶ್ಚಲ, ಏಕಪ್ರಕಾರವಾದ.

**स्थिरप्राय** (ಸ್ಥಿರಪ್ರಾಯ) ವಿ. ಸಂ. ಬಹಳ ದಿನ ಬಾಳುವ, ಚಿರಕಾಲ ಬದುಕುವ.

**स्थिरावणे** (ಸ್ಥಿರಾವಣೇ) ಕ್ರಿ. ಅ. ಸ್ಥಿರವಾಗು, ನಿಶ್ಚಲವಾಗು, ಗಟ್ಟಿಯಾಗು, ತಾಳು, ನಿಲ್ಲಿಸು, ಕಟ್ಟಾಗು.

**स्थित** (ಸ್ಥಿತ) ವಿ. ಸಂ. ನಿಂತ, ಕದಲದ.

**स्थूल** (ಸ್ಥೂಲ) ವಿ. ಸಂ. ದೊಡ್ಡ, ಅಸಡ್ಡಾಳ, ನಿಬಿಡ, ಮೊಬ್ಬು.

**स्थूलदेह** (ಸ್ಥೂಲದೇಹ) ವಿ. ದಪ್ಪ ಶರೀರ, ಅಸ ಡ್ಡಾಳ ಶರೀರ.

**स्थूलबुद्धि** (ಸ್ಥೂಲಬುದ್ಧಿ) ಸ್ತ್ರೀ. ಸಂ. ದಡ್ಡ, ಮಂದ ಬುದ್ಧಿಯ, ಅಜ್ಞಾನದ.

**स्थूलमान** (ಸ್ಥೂಲಮಾನ) ವಿ. ಸಂ. ಸಾಮಾನ್ಯ, ಅಂದಾಜು, ಆಕಾರ, ಪರಿಮಾಣ, ಸ್ಥೂಲಆಕಾರದ, ಸಾಮಾನ್ಯ ಪರಿಮಾಣದ.

**स्थैर्य** (ಸ್ಥೈರ್ಯ) ನ. ಸಂ. ಸ್ಥಿರತ್ವ, ಗಟ್ಟಿತನ, ಸಹನಶೀಲತೆ, ಶಾಂತತೆ, ಸಮಾಧಾನ.

**स्नात** (ಸ್ನಾತ) ವಿ. ಸಂ. ದೀಕ್ಷೆಹೊಂದಿದ. ೨. ಜಳಕ ಮಾಡಿದ, ಸ್ನಾನವುಗಿಸಿದ.

**स्नान** (ಸ್ನಾನ) ನ. ಸಂ. ಜಳಕ, ಸ್ನಾನ, ಮೈತೊಳ ಕೊಳ್ಳುವಿಕೆ, ಮೀಯುವುದು.

**स्नानविधि** (ಸ್ನಾನವಿಧಿ) ಸ್ತ್ರೀ. ಸಂ. ಜಳಕದ ರೀತಿ, ಧಾರ್ಮಿಕ ವಿಧಿಯ ಸ್ನಾನ.

**स्नानसंध्या** (ಸ್ನಾನಸಂಧ್ಯಾ) ಸ್ತ್ರೀ. ಸಂ. ಸ್ನಾನಸಂಧ್ಯೆ, ಧಾರ್ಮಿಕ ವಿಧಿ, ಪೂಜೆಅರ್ಚೆ.

**स्नायी** (ಸ್ನಾಯೀ) ಪು. ಸಂ. } ಜಳಕಮಾಡುವವ.
**स्नाता** (ಸ್ನಾತಾ) ಪು. }

**स्नायु** (ಸ್ನಾಯು) ಪು. ಸಂ. ನರ, ಬಲ, ಕಸುವು, ಸಿರ, ಧಮನಿ, ಬಿಳಲು, ಮಾಂಸ, ಪುಷ್ಟಿ.

**स्निग्ध** (ಸ್ನಿಗ್ಧ) ವಿ. ಸಂ. ಜಿಗುಟಾದ, ಎಣ್ಣೆಯ, ನೆಣ ವುಳ್ಳ, ಅಂಟಿಕೊಳ್ಳುವ ಗುಣದ, ಹೊಂದಿಕೊಳ್ಳುವ, ಮೃದುವಾದ. ೨. ಪ್ರೇಮವುಳ್ಳ, ಗೆಳೆತನದ.

**स्नुषा** (ಸ್ನುಷಾ) ಸ್ತ್ರೀ. ಸಂ. ಸೊಸೆ.

**स्नेह** (ಸ್ನೇಹ) ಪು. ಸಂ. ಗೆಳೆತನ, ಮಿತ್ರತ್ವ, ಪ್ರೇಮ. ೨. ಎಣ್ಣೆ.

**स्नेहभाव** (ಸ್ನೇಹಭಾವ) ಪು. ಸಂ. ಸ್ನೇಹ, ಮಿತ್ರತ್ವ, ಮಿತ್ರತ್ವದ ಭಾವನೆ, ಪ್ರೇಮಭಾವನೆ.

**स्नेहाकर्षण** (ಸ್ನೇಹಾಕರ್ಷಣ) ಪು. ಸಂ. ಪ್ರೇಮಾ ಕರ್ಷಣ, ಸ್ನೇಹದಿಂದ ಎಳಕೊಳ್ಳುವಿಕೆ.

**स्नेहांकित** (ಸ್ನೇಹಾಂಕಿತ) ವಿ. ಅತ್ಯಂತ ಪ್ರೀತಿಯ.

**स्नेहार्द्र** (ಸ್ನೇಹಾರ್ದ್ರ) ವಿ. ಪ್ರೀತಿಭಾವನೆಯಿಂದ ತುಂಬಿದ.

**स्नेहाळ** (ಸ್ನೇಹಾಳ) ವಿ. ಸಂ. ಎಣ್ಣೆಯುಳ್ಳ, ಪ್ರೀತಿಯ, ಪ್ರೇಮಭಾವನೆಯ.

**स्नेहाळू** (ಸ್ನೇಹಾಳೂ) ವಿ. ಸಂ. ಪ್ರೀತಿಯ, ಪ್ರೇಮದ, ದಯೆಯ, ಲೋಲ, ಪ್ರೀತಿಯುಳ್ಳ. ಸ್ನೇಹದ, ಮೂರ್ಖ.

**स्नेही** (ಸ್ನೇಹೀ) ಪು. ಸಂ. ಮಿತ್ರ, ಜತೆಗಾರ, ಗೆಳೆಯ, ಆಪ್ತ, ಉಪಕಾರಿ. '**स्निग्ध**' ನೋ.

**स्पर्धणे** (ಸ್ಪರ್ಧಣೇ) ಕ್ರಿ. ಅ. ಸ್ಪರ್ಧಿಸು, ಹೋರಾಡು, ಪ್ರಯತ್ನಿಸು, ಜಗಳಾಡು, ವಾದಿಸು, ಶತ್ರುತ್ವ ಮಾಡು, ಮೇಲಾಡು.

**स्पर्धा** (ಸ್ಪರ್ಧಾ) ಸ್ತ್ರೀ. ಸಂ. ಹೋರಾಟ, ಪ್ರಯತ್ನ, ಸ್ಪರ್ಧೆ, ಜಗಳಾಟ, ವಾದ, ಶತ್ರು, ಪೋಟಾಪೋಟಿ, ಮೇಲಾಟ.

**स्पर्धालु** (ಸ್ಪರ್ಧಾಲು) ವಿ. ಸಂ. ಹೋರಾಡುವ, ಪ್ರಯತ್ನಿಸುವ, ಜಗಳಾಡುವ, ವಾದಿಸುವ.

**स्पर्धी, स्पर्धक** (ಸ್ಪರ್ಧೀ, ಸ್ಪರ್ಧಕ) ವಿ. ಸಂ. ಎದು ರಾಳಿಯಾದವ, ಹಗೆಯಾದ, ಸ್ಪರ್ಧಿಸಲು ನಿಂತವ.

**स्पर्श** (ಸ್ಪರ್ಶ) ಪು. ಸಂ. ಮುಟ್ಟೋಣ, ಮುಟ್ಟು ವಿಕೆ, ಸ್ಪರ್ಶೇಂದ್ರಿಯ, ಕೈತಾಗಿರೋಣ.

**स्पर्शणे** (ಸ್ಪರ್ಶಣೇ) ಕ್ರಿ. ಅ. ಮುಟ್ಟು, ಕೈತಾಗಿಸು, ಸ್ಪರ್ಶಿಸು.

**स्पर्शनीय** (ಸ್ಪರ್ಶನೀಯ) ವಿ. ಸಂ. ಮುಟ್ಟತಕ್ಕ, ಮುಟ್ಟಲು ಯೋಗ್ಯ.

**स्पर्शबिंदु** (ಸ್ಪರ್ಶಬಿಂದು) ಪು. ಸಂ. ಸ್ಪರ್ಶವಾಗುವ ಬಿಂದು.

**स्पर्शरेषा** (ಸ್ಪರ್ಶರೇಷಾ) ಸ್ತ್ರೀ. ಸಂ. ಸ್ಪರ್ಶರೇಖೆ, ಸ್ಪರ್ಶರೇಷೆ, ವರ್ತುಲವನ್ನು ಸ್ಪರ್ಶಿಸುವ ರೇಷೆ.

**स्पर्शवेद्य** (ಸ್ಪರ್ಶವೇದ್ಯ) ವಿ. ಸಂ. ಸ್ಪರ್ಶಮಾಡಿ ತಿಳಿ ಯಬೇಕಾದ.

**स्पर्शास्पर्श** (ಸ್ಪರ್ಶಾಸ್ಪರ್ಶ) ಪು. ಸಂ. ಸ್ಪರ್ಶಾಸ್ಪರ್ಶತೆ, ಒಂದನ್ನೊಂದು ಮುಟ್ಟಲಾರದ ವಸ್ತು ಇಲ್ಲವೆ ಮನುಷ್ಯರ ಸಂಬಂಧ, ಮಿಲನ. "**स्पर्शनीय**" ನೋ.

**स्पष्ट** (ಸ್ಪಷ್ಟ) ವಿ. ಸಂ. ಸಂಶಯರಹಿತ, ಸ್ವಚ್ಛ, ಪ್ರತ್ಯಕ್ಷ, ರುಜುವಾದ, ಪರಿಸ್ಫುಟ.

**स्पष्टवक्ता** (ಸ್ಪಷ್ಟವಕ್ತಾ) ಪು. ಸಂ. ಸ್ಪಷ್ಟವಾಗಿ ಮಾತಾಡುವವನು, ನಿಷ್ಠುರ ಮನುಷ್ಯ, ಖಂಡಿತ ವ್ಯಕ್ತಿ.

**स्पष्टीकरण** (ಸ್ಪಷ್ಟೀಕರಣ) ನ. ಸಂ. ಸ್ಪಷ್ಟಮಾಡು ವಿಕೆ, ಖುಲಾಸೆ, ವಿವರಣೆ, ತಿಳಿಸಿ ಹೇಳುವಿಕೆ, ಸಮಾಧಾನ ಪಡೆಯುವಿಕೆ.

**स्पष्टीकृत** (ಸ್ಪಷ್ಟೀಕೃತ) ವಿ. ಸ್ಪಷ್ಟಮಾಡಿಸಿದ, ತಿಳಿಸಿ ಹೇಳಿದ, ವಿವರಿಸಿದ, ಸಮಾಧಾನ ಪಡೆಯಿಸಿದ.

**स्पृहा** (ಸ್ಪೃಹಾ) ಸ್ತ್ರೀ. ಬಯಕೆ, ಹವಣಿಕೆ. ಆಸೆ, ಅಪೇಕ್ಷೆ, ವಿನಂತಿ, ಇಷ್ಟಾರ್ಥ, ಇಚ್ಛೆ.

**स्पृहणीय** (ಸ್ಪೃಹಣೀಯ) ವಿ. ಸಂ. ಆಶಿಸತಕ್ಕ, ಅಪೇಕ್ಷೆಮಾಡುವ, ವಿನಂತಿಸುವ.

**स्फटिक** (ಸ್ಫಟಿಕ) ಪು. ಸಂ. ಪಳುಕು, ಸ್ಫಟಿಕ, ಬಿಲಾ ವರ, ಶುಭ್ರಗಾಜಿನಗುಂಡು, ಮಣಿ.

**स्फटी** (ಸ್ಫಟೀ) ಸ್ತ್ರೀ. ಸಂ. ಪಟಿಕ, ಪಟಿಗಾರ.

**स्फीत–ती** (ಸ್ಫೀತ–ತೀ) ಸ್ತ್ರೀ. ದೊಡ್ಡತನ, ಸ್ತುತಿ, ಗೌರವ, ಪ್ರಶಂಸೆ, ಹೊಗಳಿಕೆ, ಸ್ತೋತ್ರ, ಗರ್ವ, ಅಭಿಮಾನ.

**स्फुट** (ಸ್ಫುಟ) ವಿ. ಸ. ಒಡೆದ, ಸ್ಫೋಟವಾದ, ವಿವರಿಸಿದ, ಸಕಾರಣ ತಿಳಿಸಿ ಹೇಳಿದ, ಬಹಿರಂಗದ.

**स्फुटगति** (ಸ್ಫುಟಗತಿ) ಸ್ತ್ರೀ. ಬಹಿರಂಗ ವೇಗ, ಹೊರಗೆ ಕಾಣುವ ವೇಗ.

**स्फूत्कार** (ಸ್ಫೂತ್ಕಾರ) ಪು. ಸ. ಬುಸುಗುಟ್ಟುವಿಕೆ, ಬಿರುಕು ಬಿಡುವಿಕೆ, ಚಿಕ್ಕ ಚಿಕ್ಕ ಬಿರುಕು ಬಿಡುವಿಕೆ, ಚಟ್ಟನೆ ಹಾರುವಿಕೆ, ಹಾಡುವ ಧ್ವನಿ.

**स्फुंदणे** (ಸ್ಫುಂದಣೇ) ಕ್ರಿ. ವಿ. ಬಿಕ್ಕಿ ಬಿಕ್ಕಿ ಅಳು.

**स्फुंदन** (ಸ್ಫುಂದನ) ನ. ಸಂ. ಬಿಕ್ಕಿ ಬಿಕ್ಕಿ ಅಳುವಿಕೆ.

**स्फुरण** (ಸ್ಫುರಣ) ನ. ಸಂ. ಹಾರುವಿಕೆ, ನೆಗೆಯುವಿಕೆ, ಕಂಪನ, ತುಣೇರ, ಶ್ವಾಸಹತ್ತುವಿಕೆ, ಸ್ಫೂರ್ತಿ, ಸ್ನಾಯುಹಾರುವಿಕೆ, ಸೂಚಿಸುವಿಕೆ, ಹೊಳೆಯುವಿಕೆ.

**स्फुरणे** (ಸ್ಫುರಣೇ) ವಿ. ಹಾರು, ನೆಗೆ, ಜಿಗಿ, ಕಂಪಿಸು, ಶ್ವಾಸಹತ್ತು, ಸ್ಫೂರ್ತಿಬರು, ಸ್ನಾಯು ಹಾರು, ಸೂಚಿಸು, ಹೊಳೆ.

**स्फुलिंग** (ಸ್ಫುಲಿಂಗ) ಪು. ಸಂ. ಕಿಡಿ, ತುರಿಗಿಡಿ, ಕಣ, ಲೇಶಾಂಶ, ಬೆಡಗಿನವನು.

**स्फूर्त** (ಸ್ಫೂರ್ತ) ಸ್ತ್ರೀ. ಸಂ. ಉಬ್ಬುವಿಕೆ, "**स्फुरण**" ನೋ. ಸಿಡಿತ, ಹಾರಿಕೆ.

**स्फोट** (ಸ್ಫೋಟ) ವಿ. ಬಹಿರಂಗಸ್ಥಿತಿ, ಸ್ಫೂರ್ತಿ, ಕುರು, ಹುರುಪು, ಅತಿ ಉಷ್ಣತೆ.

**स्फोटक द्रव्य** (ಸ್ಫೋಟಕ ದ್ರವ್ಯ) ನ. ಸಂ. ಸಿಡಿಮದ್ದು, ಹಾರಲು ಸಹಾಯ ಮಾಡುವ ವಸ್ತು.

**स्फोटन** (ಸ್ಫೋಟನ) ನ. ಸಂ. ಸಿಡಿಯುವಿಕೆ, ಹಾರುವಿಕೆ, ಬಹಿರಂಗಕ್ಕೆ ಬರುವಿಕೆ.

**स्मरण** (ಸ್ಮರಣ) ನ. ಸಂ. ಸ್ಮೃತಿ, ನೆನಪು, ನೆಪ್ಪು, ನೆನಹು, ನೆನೆವರಿಕೆ, ಜ್ಞಾಪಕಶಕ್ತಿ, ಸ್ಮರಣೆ.

**स्मरणी** (ಸ್ಮರಣೀ) ಸ್ತ್ರೀ. ಜಪಮಾಲೆ, ನಾಮ ಮಂತ್ರ ಮಾಲೆ.

**स्मरणीय** (ಸ್ಮರಣೀಯ) ವಿ. ಸಂ. ನೆನಪಿನಲ್ಲಿಡಲು ಯೋಗ್ಯ.

**स्मरणे** (ಸ್ಮರಣೇ) ಕ್ರಿ. ನೆನೆಯಿಸು, ನೆನಪಿನಲ್ಲಿಡು, ನೆನಪು ಮಾಡಿಕೊಳ್ಳು, ಜ್ಞಾಪಕಕ್ಕೆ ತರು, ನೆನಪಿನಲ್ಲಿಟ್ಟುಕೊಳ್ಳು, ಜ್ಞಾಪಿಸು.

**स्मारक** (ಸ್ಮಾರಕ) ವಿ. ಸಂ. ಗುರುತಿನ, ನೆನಪು ತಗುವ, ಸ್ಮರಣಕ್ಕೆ ತರುವ, ಬಿನ್ನವತ್ತಳೆ.

**स्मार्त** (ಸ್ಮಾರ್ತ) ವಿ. ಸಂ. ಸ್ಮೃತಿಗನುಸರಿಸಿ ನಡೆಯುವ ಪಂಥದ, ಸ್ಮಾರ್ತ. ಸ್ಮಾರ್ತಸಂಪ್ರದಾಯದವನು.

**स्मित** (ಸ್ಮಿತ) ವಿ. ಸಂ. ನಗೆ, ಮುಗುಳು ನಗೆ, ಮುಗುಳು ನಗೆಯು, ಮಂದಹಾಸದ.

**स्मृत-ति** (ಸ್ಮೃತ–ತಿ) ಸ್ತ್ರೀ. ಸಂ. ನೆನಪಿಗೆ ಬಂದ, ನೆನಪಾದ, ಜ್ಞಾಪಕಕ್ಕೆ ಬಂದ. ೨. ನೆನಪು. ೩. ಮನುಸ್ಮೃತಿ, ಮನು ಮಾಡಿದ ಧಾರ್ಮಿಕ ಕಾಯ್ದೆ.

**स्मृतिशास्त्र** (ಸ್ಮೃತಿಶಾಸ್ತ್ರ) ನ. ಸಂ. ಕಾಯ್ದೆಶಾಸ್ತ್ರ, ಕಾಯ್ದೆ ಗ್ರಂಥ.

**स्यंदन** (ಸ್ಯಂದನ) ನ. ಸಂ. ಯುದ್ಧದ ರಥ, ಸಮರ ರಥ, ಕಾಳಗದ ತೇರು.

**स्रजणे** (ಸ್ರಜಣೇ) ವಿ. ಉತ್ಪನ್ನಮಾಡು, ಹುಟ್ಟಿಸು, ಉತ್ಪಾದಿಸು.

**स्रव** (ಸ್ರವ) ಪು. ಸಂ. ಸೋರುವಿಕೆ, ದ್ರವಿಸುವಿಕೆ, ರಾಡಿ, ಕೆಸರು, ಬಸಿಯುವಿಕೆ, ಸುರಿಯುವಿಕೆ.

**स्रवणे** (ಸ್ರವಣೇ) ಕ್ರಿ. ಅ. ಸೋರು, ದ್ರವಿಸು, ರಾಡಿಯಾಗು, ಕೆಸರಾಗು, ಬಸಿ, ಸ್ರವಿಸು.

**स्रष्टा** (ಸ್ರಷ್ಟಾ) ಪು. ಸಂ. ಹುಟ್ಟಿಸಿದವ, ಉತ್ಪನ್ನ ಮಾಡಿದವ, ಉತ್ಪಾದಿಸಿದವ.

**स्राव** (ಸ್ರಾವ) ಪು. ಸಂ. ಹರಿಯುವಿಕೆ, ಸ್ರವಣ.

**स्रावक** (ಸ್ರಾವಕ) ವಿ. ಸಂ. ಸೋರುವ, ದ್ರವಿಸುವ, ಬಸಿಯುವ, ಸ್ರವಿಸುವ.

**स्रोतोत्तर** (ಸ್ರೋತೋತ್ತರ) ನ. ಸಂ. ತ್ರಿಭುಜಭೂಮಿ, ನದಿ ಮುಖದ ಮುಮ್ಮೂಲೆ ಭೂಮಿ.

**स्व** (ಸ್ವ) ಸರ್ವನಾಮ ಪ್ರತ್ಯಯ. ತನ್ನ, ಸ್ವಂತ, ಯೋಗ್ಯ. ೨. ತಾನು, ಆತ್ಮ, ಆಸ್ತಿ.

**स्वक** (ಸ್ವಕ) ವಿ. ಸಂ. ಸ್ವಂತದ, ತನ್ನದೇ ಆದ.

**स्वकीय** (ಸ್ವಕೀಯ) ವಿ. ಸಂ. ತನ್ನ. ೨. ಆಪ್ತ.

**स्वकीया** (ಸ್ವಕೀಯಾ) ಸ್ತ್ರೀ. ಪತ್ನಿ, ತನ್ನವಳು.

**स्वकपोलकल्पित** (ಸ್ವಕಪೋಲಕಲ್ಪಿತ) ನ. ಸಂ. ತನ್ನ ವಿಚಾರದಿಂದ ಕಲ್ಪಿಸಿದ.

**स्वकर्म** (ಸ್ವಕರ್ಮ) ನ. ಸಂ. ಸ್ವಂತದ ಉದ್ಯೋಗ, ಸ್ವಂತದ ಧರ್ಮ.

**स्वकल्पित** (ಸ್ವಕಲ್ಪಿತ) ವಿ. ನ. ತನ್ನ ಕಲ್ಪನೆಯಿಂದ ಹುಟ್ಟಿಸಿದ.

**स्वकष्टसंपादित** (ಸ್ವಕಷ್ಟಸಂಪಾದಿತ) **स्वकष्टार्जित** (ಸ್ವಕಷ್ಟಾರ್ಜಿತ) ವಿ. ಸಂ. ತನ್ನ ದುಡಿಮೆಯಿಂದ ಗಳಿಸಿದ, ಸ್ವಂತ ಪರಿಶ್ರಮದಿಂದ ಪ್ರಾಪ್ತವಾದ.

**स्वकार्य** (ಸ್ವಕಾರ್ಯ) ನ. ಸಂ. "**स्वकर्म**" ನೋ.

**स्वगोत्री** (ಸ್ವಗೋತ್ರೀ) ವಿ. ಸಂ. ಒಂದೇ ಗೋತ್ರದ, ಒಂದೇವಂಶದ.

**स्वच्छ** (ಸ್ವಚ್ಛ) ವಿ. ಸಂ. ಅತ್ಯಂತ ಪವಿತ್ರ. **"स्पष्ट"** ನೋ.

**स्वच्छंद** (ಸ್ವಚ್ಛಂದ) ಪು. ಸಂ. ಸ್ವೇಚ್ಛೆ, ಸ್ವಂತದ ಆಕಾಂಕ್ಷೆ, ಸ್ವಚ್ಛಂದದಿಂದ ನಡೆಯುವಿಕೆ.

**स्वच्छंदी** (ಸ್ವಚ್ಛಂದೀ) ವಿ. ಸಂ. ತನ್ನ ಇಚ್ಛೆಯಂತೆ ನಡೆಯುವ, ಹಟಮಾರಿ, ತಲೆಬಿರುಸ.

**स्वज** (ಸ್ವಜ) ವಿ. ನ. ತನ್ನಿಂದ ಹುಟ್ಟಿದ, ತನ್ನ ಮಗ, ಸ್ವಂತಪುತ್ರ.

**स्वजन** (ಸ್ವಜನ) ತನ್ನವಂಶದವ್ಯಕ್ತಿ, ತನ್ನ ಮನೆತನದ ಮನುಷ್ಯ.

**स्वजाति** (ಸ್ವಜಾತಿ) ಸ್ತ್ರೀ. ಸಂ. ತನ್ನಜಾತಿ, ಸ್ವಂತದ ಜಾತಿ, ಸ್ವಕುಲ.

**स्वजातीय** (ಸ್ವಜಾತೀಯ) ವಿ. ಸಂ. ತನ್ನಜಾತಿಯ, ಸ್ವಂತವಂಶದ, ಸ್ವಂತಕುಲದ.

**स्वतः** (ಸ್ವತಃ) ಕ್ರಿ. ವಿ. ತಾನಾಗಿಯೇ, ತಾನಾಗಿ.

**स्वतःप्रमाण** (ಸ್ವತಃಪ್ರಮಾಣ) ವಿ. ನ. ತಾನೇ ಆಧಾರವಾದ, ಸ್ವಂತ ಸಿದ್ಧವಾದ, ಸ್ವಂತ ಸಿದ್ಧವಾಗಿದ್ದ.

**स्वतंत्र** (ಸ್ವಂತತ್ರ) ವಿ. ಸಂ. ಮುಕ್ತ, ಬಿಡುಗಡೆಯಾದ, ಅನಧೀನದ, ಕಟ್ಟುಇಲ್ಲದ, ಸರಳ, ಉದಾರ, ಬಳಕೆಯ ಆತ್ಮಾವಲಂಬಿ, ಆತ್ಮವಿಶ್ವಾಸ, ಸ್ವಾವಲಂಬಿ.

**स्वतःसिद्ध** (ಸ್ವತಃಸಿದ್ಧ) ವಿ. ಸಂ. ಆತ್ಮಸಿದ್ಧ, ತಾನೇ ಸಿದ್ಧವಾದ, ಸ್ವತಃಗಳಿಸಿದ, ಆಸ್ತಿತ್ವದಲ್ಲಿದ್ದ, ಸ್ವಯಂಭೂತ ಸ್ವತಸ್ಸಿದ್ಧವಾದ.

**स्वत्व** (ಸ್ವತ್ವ) ನ. ಸಂ. ತನ್ನತನ, ವ್ಯಕ್ತಿತ್ವ, ಮನುಷತ್ವ, ಒಡೆತನ.

**स्वत्वनिवृत्ति** (ಸ್ವತ್ವನಿವೃತ್ತಿ) ಸ್ತ್ರೀ. ಸಂ. ಆಸ್ತಿಯ ಪರಿತ್ಯಾಗ, ಮನಸ್ಸನ್ನು ತಿರುಗಿಸುವಿಕೆ.

**स्वत्वबोधन** (ಸ್ವತ್ವಬೋಧನ) ನ. ಸಂ. ಸ್ವಂತ ಹಕ್ಕು ಪ್ರಸ್ಥಾಪಿಸುವಿಕೆ, ಹಕ್ಕುಸ್ಥಾಪನೆ, ಒಡೆತನ ಗೊಳಿಸುವಿಕೆ.

**स्वदस्तूर** (ಸ್ವದಸ್ತೂರ) ವಿ. ಸಂ. ತನ್ನಸಹಿ, ಸ್ವಂತ ಹಸ್ತಾಕ್ಷರ, ಒಪ್ಪಿಗೆ, ಋಜು, ದಸ್ಕತ, ಸ್ವಂತದ ಕೈಬರಹ.

**स्वदेश** (ಸ್ವದೇಶ) ಪು. ಸಂ. ಜನ್ಮಭೂಮಿ, ತನ್ನ ದೇಶ, ತನ್ನನಾಡು, ಮಾತೃಭೂಮಿ, ಭೂಮಾತೆ.

**स्वदेशत्यागी** (ಸ್ವದೇಶತ್ಯಾಗೀ) ವಿ. ಸಂ. ತನ್ನದೇಶ ಬಿಟ್ಟವ, ಗುಳೇತೆಗೆದುಕೊಂಡು ಹೋಗುವ, ಪರದೇಶಕ್ಕೆ ವಲಸೆಹೋದವ, ಕುಡು ಒಕ್ಕಲಿಗ.

**स्वदेशाभिमान** (ಸ್ವದೇಶಾಭಿಮಾನ) ನ. ಸಂ. ತನ್ನ ದೇಶದ ಹೆಮ್ಮೆ, ತನ್ನದವೇಲಿನ ಪ್ರೀತಿ ದೇಶಭಕ್ತಿ.

**स्वदेशप्रीति** (ಸ್ವದೇಶಪ್ರೀತಿ) ಸ್ತ್ರೀ. ಸಂ. **स्वदेशाभिमान** ನೋ.

**स्वदेशाभिमानी** (ಸ್ವದೇಶಾಭಿಮಾನೀ) ಸ್ತ್ರೀ. ಸಂ.}
**स्वदेशभक्त** (ಸ್ವದೇಶಭಕ್ತ) ವಿ. ಸಂ. }
ದೇಶಾಭಿಮಾನಿ, ದೇಶಭಕ್ತಿಯ, ಸ್ವದೇಶಪ್ರೀತಿಯ.

**स्वधर्म** (ಸ್ವಧರ್ಮ) ಪು. ಸಂ. ತನ್ನ ಕರ್ತವ್ಯ, ತನ್ನ ಧರ್ಮ, ಹುಟ್ಟಿದಗುಣ, ಸ್ವಭಾವ.

**स्वनाम** (ಸ್ವನಾಮ) ನ. ಸಂ. ತನ್ನ ಹೆಸರು.

**स्वपरभाव** (ಸ್ವಪರಭಾವ) ಪು. ಸಂ. {ಸ್ವಪರಭಾವನೆ,
**स्वपरभेद** (ಸ್ವಪರಭೇದ) ಪು. ಸಂ. {ಸ್ವಪರಭೇದ,
ತನ್ನ ಹಾಗೂ ಪರರ ಎಂಬ ಭಾವನೆ.

**स्वप्न** (ಸ್ವಪ್ನ) ನ. ಸಂ. ಕನಸು, ಸ್ವಪ್ನ, ಕಲ್ಪನೆ, ಮನೋರಾಜ್ಯ.

**स्वप्नाचें भाकित सांगणे** (ಸ್ವಪ್ನಾಚೇ ಭಾಕಿತ ಸಾಂಗಣೇ) ಕ್ರಿ. ಸ. ಸ್ವಪ್ನದ ಅರ್ಥಹೇಳು, ಸ್ವಪ್ನದ ಅರ್ಥ ಹೊಂದಿಸು.

**स्वप्नवत्** (ಸ್ವಪ್ನವತ್) ಕ್ರಿ. ವಿ. ಸಂ. ಕನಸಿನಂತಹ, ಭ್ರಾಮಕ, ಮಾಯೆಯ, ಮೋಸದ.

**स्वप्नविचारी** (ಸ್ವಪ್ನವಿಚಾರೀ) ವಿ. ಸಂ. ಕನಸಿನ ಅರ್ಥ ಮಾಡುವವನು.

**स्वप्नसृष्टी** (ಸ್ವಪ್ನಸೃಷ್ಟೀ) ಸ್ತ್ರೀ. ಸಂ. ಕಲ್ಪನಾಸೃಷ್ಟಿ, ಸ್ವಪ್ನಜಗತ್ತು, ಕನಸಿಲ್ಲಿಯ ರಚನೆ, ಮಾಯೆ.

**स्वप्नावस्था** (ಸ್ವಪ್ನಾವಸ್ಥಾ) ಸ್ತ್ರೀ. ನ. ಸ್ವಪ್ನ ಬೀಳುವಸ್ಥಿತಿ, ಕನಸಿನಲ್ಲಿ ವೀರ್ಯಪತನವಾಗುವಿಕೆ.

**स्वभाव** (ಸ್ವಭಾವ) ಪು. ಸಂ. ವರ್ತನೆ, ನಡತೆ, ಹುಟ್ಟುಗುಣ, ಮನಸ್ಸಿನ ಹುಟ್ಟಾಬಲವು.

**स्वभावतः** (ಸ್ವಭಾವತಃ) } ಕ್ರಿ. ವಿ. ಸಂ. } ಸಹಜವಾಗಿ,
**स्वभावगत्या** (ಸ್ವಭಾವಗತ್ಯಾ) }
ಸ್ವಾಭಾವಿಕವಾಗಿ.

**स्वभावसिद्ध** (ಸ್ವಭಾವಸಿದ್ಧ) ವಿ. ಸಂ. ಮಹತ್ವದ, ಅತ್ಯಾವಶ್ಯಕವಾದ.

**स्वमताभिमानी** (ಸ್ವಮತಾಭಿಮಾನೀ) ವಿ. ಸಂ. ತನ್ನ ಮತದ ಅಭಿಮಾನವುಳ್ಳ, ಸ್ವಾಭಿಪ್ರಾಯದ ಹೆಮ್ಮೆಯುಳ್ಳ.

**स्वयं** (ಸ್ವಯಂ) ಅವ್ಯಯ. ಸಂ. ತಾನೆ, ಸ್ಫೂರ್ತಿಯಿಂದ, ಸ್ವಪ್ರೇರಣೆಯಿಂದ.

**स्वयंकृत** (ಸ್ವಯಂಕೃತ) ಪು. ತಾನೆಮಾಡಿದ, ಅಕೃತ್ರಿಮ.

**स्वयंज्योति** (ಸ್ವಯಂಜ್ಯೋತಿ) ವಿ. ಸ್ವಯಂಪ್ರಕಾಶದ, ಸ್ವಸಾಮರ್ಥದಿಂದ ಹೊಳೆಯುವ.

**स्वयंपाक** (ಸ್ವಯಂಪಾಕ) ಪು. ನ. ಸ್ವಂತಮಾಡಿದ ಅಡಿಗೆ, ಸಿದ್ಧವಾದ ಅಡಿಗೆ.

**स्वयंपाकघर** (ಸ್ವಯಂಪಾಕಘರ್) ನ. ಅಡುಗೆಮನೆ, ಅಡಿಗೆಮನೆ, ಪಾಕಶಾಲೆ, ಕುಶಿನಿ.

**स्वयंपाकी** (ಸ್ವಯಂಪಾಕೀ) ಪು. ಅಡಿಗೆಯವ, ಅಡಿಗೆ ಮಾಡುವವ, ಸ್ವತಃ ಅಡಿಗೆ ಮಾಡುವವ.

**स्वयंपाकीण** (ಸ್ವಯಂಪಾಕೀಣ) ಸ್ತ್ರೀ. ಅಡಿಗೆಯಾಕೆ, ಅಡಿಗೆಯ ಉದ್ಯೋಗದಾಕೆ, ಅಡಿಗೆಯ ಉದ್ಯೋಗದಿಂದ ಜೀವಿಸುವಾಕೆ.

**स्वयंप्रकाश** (ಸ್ವಯಂಪ್ರಕಾಶ) ವಿ. ಸಂ. ಸ್ವಂತ ಪ್ರಕಾಶವುಳ್ಳ, ಗಂಭೀರತೆಯುಳ್ಳ, ಬಾಹ್ಯಪ್ರಕಾಶ ಅವಶ್ಯವಿಲ್ಲದ.

**स्वयंभू** (ಸ್ವಯಂಭೂ) ವಿ. ಸಂ. ಆತ್ಮಸಿದ್ಧ, ಸ್ವಯಂಸಿದ್ಧ. "**स्वयंसिद्ध**" ನೋ.

**स्वयम्, स्वयमेव** (ಸ್ವಯಂ, ಸ್ವಯಮೇವ) ಕ್ರಿ. ವಿ. ತಾನು, ತಾನೇ, ತಾನಾಗಿಯೇ, ಸ್ವಂತ, ಬೇಕಂತೆ, ಉದ್ದೇಶಪೂರ್ವಕವಾಗಿ.

**स्वयंवर** (ಸ್ವಯಂವರ) ನ. ಸಂ. ವಿವಾಹದ ಒಂದು ಪ್ರಕಾರ, ತನ್ನ ಗಂಡನನ್ನು ತಾನೇ ಆರಿಸುವಿಕೆ, ಸ್ವಯಂವರ, ಪತಿಯನ್ನು ಆರಿಸುವ ಸಮಾರಂಭ.

**स्वयंवरा** (ಸ್ವಯಂವರಾ) ಸ್ತ್ರೀ. ವಿ. ತನ್ನ ಗಂಡನನ್ನು ತಾನೇ ಆರಿಸುವಾಕೆ, ತನ್ನ ಪತಿಯನ್ನು ತಾನೇ ಆರಿಸುವಾಕೆ.

**स्वयंसिद्ध** (ಸ್ವಯಂಸಿದ್ಧ) ವಿ. ಸಂ. ತನ್ನ ಪತಿಯನ್ನು ಆರಿಸುವ ವಧು, ಸ್ವಯಂಪ್ರಮಾಣಿತ.

**स्वयंसेवक** (ಸ್ವಯಂಸೇವಕ) ಪು. ಸಂ. ಉಮೇದವಾರ, ಆಳು, ಸ್ವಯಂಪ್ರೇರಣೆಯಿಂದ ಸೇವೆ ಮಾಡುವವನು, ನಿರಪೇಕ್ಷ ಬುದ್ಧಿಯಿಂದ ಸೇವೆ ಗೈಯುವವನು, ಸ್ವಯಂಸ್ಫೂರ್ತಿಯಿಂದ ಸೇವೆಮಾಡುವವನು, ತಾನಾಗಿಯೇ ಸೇವೆ ಸಲ್ಲಿಸುವವನು.

**स्वर** (ಸ್ವರ) ಪು. ಸಂ. ಧ್ವನಿ, ಸಂಗೀತಸ್ವರ, ಸಂಗೀತದಲ್ಲಿಯ ರಾಗ, ಸ್ವರಾಕ್ಷರ (ವ್ಯಾಕರಣದಲ್ಲಿ) ಉದಾತ್ತ–ಅನುದಾತ್ತವಾದಿಗಳು, ಸ್ವರಾಘಾತ.

**स्वर वाहणें** (ಸ್ವರ ವಾಹಣೇ) ಕ್ರಿ. ಸ. ಸ್ವರಹಿಡಿ, ಒಲಿ, ಒರಗು, ಬಾಗು, ಒಲಿಸು, ಮೆಚ್ಚಿಕೆ ಇರು.

**स्वरबद्ध** (ಸ್ವರಬದ್ಧ) ವಿ. ಸಂ. ಸ್ವರಬದ್ಧವಾದ, ಸ್ವರಶಾಸ್ತ್ರಕ್ಕನುಗುಣವಾದ, ಸಂಗೀತ ಶಾಸ್ತ್ರಕ್ಕನುಗುಣವಾದ.

**स्वरभंग** (ಸ್ವರಭಂಗ) ಪು. ಸಂ. ಸಂಗೀತ ಶಾಸ್ತ್ರವಿರುದ್ಧ, ಸಂಗೀತ ಶಾಸ್ತ್ರರಹಿತ, ಸ್ವರಭಂಗ.

**स्वरभेद** (ಸ್ವರಭೇದ) ಪು. ಸಂ. ಧ್ವನಿ ಬದಲಿಸುವಿಕೆ, ಸ್ವರಪರಿವರ್ತನ, ಸ್ವರಭೇದ.

**स्वरशास्त्र** (ಸ್ವರಶಾಸ್ತ್ರ) ನ. ಸಂ. ಸಂಗೀತಶಾಸ್ತ್ರ, ಗಾಯನಶಾಸ್ತ್ರ, ಸ್ವರರಚನಾಶಾಸ್ತ್ರ.

**स्वरज्ञान** (ಸ್ವರಜ್ಞಾನ) ನ. ಸಂ. ಸಂಗೀತಸ್ವರ ಪಾಂಡಿತ್ಯ, ಗಾಯನ ಶಾಸ್ತ್ರ ವಿದ್ವತ್ತೆ.

**स्वराज्य** (ಸ್ವರಾಜ್ಯ) ನ. ಸಂ. ರಾಜಕೀಯ ಸ್ವಾತಂತ್ರ್ಯ, ಜನರಿಂದ ಆರಿಸಲ್ಪಟ್ಟವರು ಜನರಿಗಾಗಿ ಜನರ ಆಡಳಿತೆ ನಡೆಸುವಿಕೆ.

**स्वरित** (ಸ್ವರಿತ) ವಿ. ಸಂ. ಸ್ವರಬದ್ಧವಾದ, ಸಂಗೀತಶಾಸ್ತ್ರಾನುಗುಣವಾದ, ಹಾಡಿಕೆಯ, ಶಾಸ್ತ್ರಕ್ಕೆ ಸರಿಯಾದ.

**स्वरूप** (ಸ್ವರೂಪ) ನ. ಸಂ. ಪ್ರಕೃತಿ, ತನ್ನರೂಪ, ಸ್ವರೂಪ, ಸ್ವಭಾವ, ಹುಟ್ಟುಗುಣ.

**स्वरूपवती** (ಸ್ವರೂಪವತೀ) ಸ್ತ್ರೀ. ಸಂ. ಸ್ವಯಂಸುಂದರಿ, ಹುಟ್ಟಾಚೆಲುವೆ.

**स्वरूपवान्** (ಸ್ವರೂಪವಾನ್) ಕ್ರಿ. ವಿ. ಸುಂದರನಾದ, ಚೆಲುವನಾದ, ಬೆಡಗಿನವ, ಅಂದವಾದ, ಸುಂದರನು, ಚೆಲುವನು.

**स्वरूपी** (ಸ್ವರೂಪೀ) ವಿ. ಸಂ. ಸ್ವರೂಪದ, ಸ್ವರೂಪವುಳ್ಳ.

**स्वर्ग** (ಸ್ವರ್ಗ) ಪು. ಸಂ. ಸ್ವರ್ಗ, ದೇವತೆಗಳ ಜಗತ್ತು, ಆಕಾಶ, ಕೈವಲ್ಯ, ಪರಲೋಕ, ಇಂದ್ರಲೋಕ, ಇಂದ್ರನ ವಾಸಸ್ಥಾನ.

**स्वर्गाची वाट** (ಸ್ವರ್ಗಾಚೀವಾಟ್) ಸ್ತ್ರೀ. ಸ್ವರ್ಗದ ದಾರಿ, ಸಾವು, ಮರಣ ಕೊಲೆ.

**स्वर्गी ध्वज लावणे** (ಸ್ವರ್ಗೀ ಧ್ವಜ ಲಾವಣೇ) ಕ್ರಿ. ಸ. ಶತಕೃತ್ಯಮಾಡು, ಬಂಟತನ ಮಾಡು, ಸ್ವರ್ಗದಲ್ಲಿ ನಿಶಾನಿ ಹಚ್ಚು, ದೊಡ್ಡ ಪರಾಕ್ರಮ ಮಾಡು.

**स्वतः मेल्यावाचून स्वर्ग दिसत नाहीं** (ಸ್ವತಃ ಮೇಲ್ಯಾವಾಚೂನ್ ಸ್ವರ್ಗ ದಿಸತ ನಾಹೀ) ಗಾದೆಯ ಮಾತು. ತಾನು ಸಾಯದ ಹೊರತು ಸ್ವರ್ಗ ಕಾಣಲಾರದು. (ತಾನು ಮಾಡಿದ ಹೊರತು ಯಾವುದೂ ನಿಜವಲ್ಲ).

**स्वर्गवास** (ಸ್ವರ್ಗವಾಸ) ಪು. ಸಂ. ಸ್ವರ್ಗವಾಸ, ಸ್ವರ್ಗದಲ್ಲಿ ಇರುವಿಕೆ, ಇಂದ್ರಲೋಕಕ್ಕೆ ಹೋಗುವಿಕೆ.

**स्वर्गीय** (ಸ್ವರ್ಗೀಯ) ವಿ. ಸಂ. } ಸತ್ತುಪರ ಸಂಬಂಧದ,
**स्वर्ग** (ಸ್ವರ್ಗ) ಪು. ಸಂ. } ಸ್ವರ್ಗ ಸಂಬಂಧದ.

**स्वर्दरी** (ಸ್ವರ್ದರೀ) ಕ್ರಿ. ಸ. ತೇಜಸ್ವಿಗಳ ಸಮೂಹ, ಸ್ವಯಂಪಂಡಿತರ ಸಂಘ, ಆಕಾಶಗಂಗಾಪುಂಜ.

**स्वल्प** (ಸ್ವಲ್ಪ) ವಿ. ಸಂ. ಅಲ್ಪವಾದ, ತುಸು.

**स्वल्पाहार** (ಸ್ವಲ್ಪಾಹಾರ) ಪು. ಸಂ. ತುಸು ಆಹಾರ, ಅಲ್ಪ ಊಟ, ತುಸು ಊಟ, ನ್ಯಾಹರಿ.

**स्ववश** (ಸ್ವವಶ) ವಿ. ಸಂ. ಸ್ವತಂತ್ರ, ಮುಕ್ತ, ಬಿಡುಗಡೆಯಾದ, ನಿರಂಕುಶ, ಮಿತಿಯಿಲ್ಲದ.

**स्ववृत्ती** (ಸ್ವವೃತ್ತೀ) ಸ್ತ್ರೀ. ಕರ್ತವ್ಯ ಕರ್ಮ, ಸ್ವಧರ್ಮ, ಕರ್ತವ್ಯ.

**स्वसंतोषानें** (ಸ್ವಸಂತೋಷಾನೇ) ಕ್ರಿ. ವಿ. ಸ್ವಂತ ಕಬೂಲಿಯಿಂದ, ತಿಳಿದೂ ತಿಳಿದು, ಒತ್ತಾಯವಿಲ್ಲದೆ, ತಾನಾಗಿಯೇ.

**स्वसंतोष** (ಸ್ವಸಂತೋಷ) ಪು. ಸಂ. ಆತ್ಮಸಂತೋಷ, ಆತ್ಮಾನಂದ, ಸ್ವಸಂತೋಷ, ಸ್ವಂತ ಕಬೂಲಿ, ತನ್ನ ಒಪ್ಪಿಗೆ.

**स्वसंतोषें** (ಸ್ವಸಂತೋಷೆ) ಕ್ರಿ. ವಿ. "**स्वसंतोषानें**" ನೋ.

**स्वसत्ता** (ಸ್ವಸತ್ತಾ) ಸ್ತ್ರೀ. ಸಂ. ತನ್ನ ಹಕ್ಕುಬಾಧ್ಯತೆಗಳು, ತನ್ನ ರಾಜ್ಯದಾಡಳಿತ. "**स्वराज्य**" ನೋ.

**स्वसा** (ಸ್ವಸಾ) ಸ್ತ್ರೀ. ಸಂ. ತಂಗಿ, ಅಕ್ಕ, ಸಹೋದರಿ.

**स्वस्त** (ಸ್ವಸ್ತ) ವಿ. ಸಂ. ಅಗ್ಗವಾದ, ಬೆಲೆ ಕಡಿಮೆಯಾದ, ಸುಲಭ ಬೆಲೆಯ, ಸಾಮಾನ್ಯ ಬೆಲೆಯ, ಸುಲಭವಾಗಿ ದೊರಕುವ.

**स्वस्तावणें** (ಸ್ವಸ್ತಾವಣೇ) ಕ್ರಿ. ಸ. ಅಗ್ಗವಾಗು, ಕಡಿಮೆ ಬೆಲೆಯಾಗು, ಸುಲಭ ಬೆಲೆಗೆ ಸಿಗು.

**स्वस्तावणे** (ಸ್ವಸ್ತಾವಣೇ) ಕ್ರಿ. ಅ. ಬೆಲೆ ಕಡಿಮೆಯಾಗು, ಅಗ್ಗವಾಗು.

**स्वस्ति** (ಸ್ವಸ್ತಿ) ಕ್ರಿ. ವಿ. ಕಲ್ಯಾಣವಾಗಲಿ, ಮಂಗಲವಾಗಲಿ, ಒಳ್ಳೆಯದಾಗಲಿ. ಸ್ತ್ರೀ. ಸಂ. ಸುಖ, ಕ್ಷೇಮ.

**स्वस्तिक** (ಸ್ವಸ್ತಿಕ) ವಿ. ಸಂ. ಸ್ವಸ್ತಿಕದ ಆಕೃತಿ, ಸ್ವಸ್ತಿಕ ಚಿಹ್ನ, ಮಂಗಲ ಆಕೃತಿ, ಶುಭಸೂಚಕ ಚಿಹ್ನ.

**स्वस्तिक्षेम** (ಸ್ವಸ್ತಿಕ್ಷೇಮ) ಪು. ಸಂ. ಕಲ್ಯಾಣಕರವಾಗಿ, ಸುಖವಾಗಿ, ದೃಢತೆಯಿಂದ.

**स्वस्त–स्थ** (ಸ್ವಸ್ತ–ಸ್ಥ) ವಿ. ಸಂ. ಸುಮ್ಮನಿದ್ದ, ಚಲಿಸದ, ಅಚಲವಾದ, ಸುಖಕೊಡುವ, ಅಗ್ಗವಾದ.

**स्वस्ता–स्था** (ಸ್ವಸ್ತಾ–ಸ್ಥಾ) ಸ್ತ್ರೀ. ಸಂ. ಸುಖಾವಹ, ಸಮಾಧಾನಕರ.

**स्वस्ताई, स्वस्थाई** (ಸ್ವಸ್ತಾಈ, ಸ್ವಸ್ಥಾಈ) ಸ್ತ್ರೀ. ಸಂ. ಅಗ್ಗಳತೆ, ಬೆಲೆ ಇಳಿಯುವಿಕೆ, ಸುಲಭ ಬೆಲೆಗೆ ದೊರೆಯುವಿಕೆ.

**स्वहित** (ಸ್ವಹಿತ) ನ. ವಿ. ತನ್ನ ಕಲ್ಯಾಣ, ಆತ್ಮಸುಖ, ಸ್ವಲ್ಪಲಾಭ, ಸ್ವಂತದ ಕಲ್ಯಾಣ.

**स्वागत** (ಸ್ವಾಗತ) ನ. ಸಂ. ಸಂಭಾವನೆಯ ಸ್ವೀಕಾರ, ಶುಭಾಗಮನ.

**स्वागी** (ಸ್ವಾಗೀ) ಸ್ತ್ರೀ. ಬಳೆಗಾ(ಕಾ)ರ, ಟಂಕಣಖಾರ.

**स्वाड** (ಸ್ವಾಡ್) ವಿ. ಸಂ. ಉತ್ತಮವಾದ, ಚೆಲೋ.

**स्वाडद्वाड** (ಸ್ವಾಡದ್ವಾಡ್) ವಿ. ಸಂ. ಚೆಲೋ–ಕೆಡಕು, ಹಿತ–ಅಹಿತ, ಸುಖ–ದುಃಖ, ಒಳಿತು–ಕೆಡಕು.

**स्वातंत्र्य** (ಸ್ವಾತಂತ್ರ್ಯ) ನ. ಸಂ. ಸ್ವಾತಂತ್ರ್ಯ, ಬಿಡುಗಡೆ, ಮುಕ್ತಿ, ವಿಮೋಚನೆ, ಸ್ವತಂತ್ರತೆ, ಸ್ವಾವಲಂಬನ, ಸ್ವೇಚ್ಛಾಚರಣೆ.

**स्वाती** (ಸ್ವಾತೀ) ಸ್ತ್ರೀ. ಸಂ. ಇಪ್ಪತ್ತೇಳು ನಕ್ಷತ್ರಗಳಲ್ಲಿ ಒಂದು, 'ಸ್ವಾತಿ' ನಕ್ಷತ್ರ.

**स्वात्मानुभव** (ಸ್ವಾತ್ಮಾನುಭವ) ಪು. ಸಂ. ಸ್ವಂತದ ಅನುಭವ, ತನ್ನದೇ ತಿಳುವಳಿಕೆ, ಅನುಭೂತಿ.

**स्वाद** (ಸ್ವಾದ) ಪು. ಸಂ. ರುಚಿ, ರಸ, ರಸಿಕತೆ, ತಿಂದುನೋಡುವಿಕೆ, ವಾಸನೆ, ಮೂಗಾಳಿ, ಪರಿಮಳ.

**स्वादन** (ಸ್ವಾದನ) ನ. ಸಂ. ರುಚಿನೋಡುವಿಕೆ, ರುಚಿ ತಿಳಿಯುವಿಕೆ.

**स्वादिष्ट** (ಸ್ವಾದಿಷ್ಟ) ವಿ. ಸಂ. ರುಚಿಕರವಾದ, ಸ್ವಾದಿಷ್ಟವಾದ, ಸಿಹಿಯಾದ, ಸವಿಯಾದ, ರುಚಿಯುಳ್ಳ.

**स्वादु** (ಸ್ವಾದು) ವಿ. ಸಂ. ಸಿಹಿ.

**स्वाधीन** (ಸ್ವಾಧೀನ) ವಿ. ಸಂ. ಸ್ವಂತದ ಅಧಿಕಾರದ, ಸ್ವಂತದ ವಶದ, ತನ್ನ ಕೈಯಲ್ಲಿಯ.

**स्वाध्याय** (ಸ್ವಾಧ್ಯಾಯ) ಪು. ಸಂ. ವೇದಾಧ್ಯಯನ.

**स्वाध्यायी** (ಸ್ವಾಧ್ಯಾಯೀ) ವಿ. ಸಂ. ವೇದದ ಅಭ್ಯಾಸಕ, ವರ್ಗಬಂಧು, ವೇದ ಸಹಾಧ್ಯಾಯಿ.

**स्वानंद** (ಸ್ವಾನಂದ) ವಿ. ಸಂ. ಮಾನಸಿಕ, ಆನಂದ, ತಾನಾಗಿಯೇ ಆನಂದಪಡುವಿಕೆ, ತನ್ನ ಆನಂದ, ವೈಯಕ್ತಿಕ ಆನಂದ.

**स्वानुभव** (ಸ್ವಾನುಭವ) ಪು. ಸಂ. } **स्वात्मानुभव**
**स्वानुभूति** (ಸ್ವಾನುಭೂತಿ) ಸ್ತ್ರೀ. ಸಂ.} ನೋ.

**स्वाभाविक** (ಸ್ವಾಭಾವಿಕ) ವಿ. ಸಂ. ನೈಸರ್ಗಿಕ, ಹುಟ್ಟಾ, ಅಕೃತ್ರಿಮವಾದ, ಕೃತ್ರಿಮವಲ್ಲದ, ಸಹಜವಾಗಿ, ನಿರಾತಂಕವಾಗಿ, ಸರಳವಾಗಿ, ಸುಮ್ಮನೆ.

**स्वाभिमान** (ಸ್ವಾಭಿಮಾನ) ಪು. ಸಂ. ಸ್ವಂತದ ಹೆಮ್ಮೆ, ಆತ್ಮಾಭಿಮಾನ.

**स्वामित्व** (ಸ್ವಾಮಿತ್ವ) ನ. ಸಂ. ಒಡೆತನ, ಹಕ್ಕುದಾರಿಕೆ, ಮಾಲಕಿ, ಆಧಿಪತ್ಯ, ಪ್ರಭುತ್ವ, ಪ್ರಾವೀಣ್ಯ, ನೈಪುಣ್ಯ.

**स्वामिनी** (ಸ್ವಾಮಿನೀ) ಸ್ತ್ರೀ. ಸಂ. ಒಡತಿ, ಒಡೆತಿ, ಒಡೆಯಳು, ದೇವತೆ, ಅರ್ಧಾಂಗಿ, ಮುತ್ತೈದೆ.

**स्वामिभाग** (ಸ್ವಾಮಿಭಾಗ) ಪು. ಸಂ. ರಾಜತ್ವ, ಅರಸುತನ, ಗ್ರಂಥ.

**स्वामी** (ಸ್ವಾಮೀ) ಪು. ಸಂ. ಒಡೆಯ, ದೇವರು, ಈಶ್ವರ, ಪರಮಾತ್ಮ.

**स्वार** (ಸ್ವಾರ) ಪು. ಫಾ. ಸವಾರ, ಕುದುರೆಯ ಸೈನಿಕ, ಕುದುರೆಯ ಮೇಲೆ ಕೂಡ್ರುವವನು. ವಿ. ಕುದುರೆ ಏರಿದ.

**स्वारसिक** (ಸ್ವಾರಸಿಕ) ವಿ. ಸಂ. ಸ್ವಂತ ರುಚಿಯ, ವೈಯಕ್ತಿಕ ಅನುಭವದ, ತನ್ನಲ್ಲಿಯೇ ಇದ್ದ ಸಿಹಿತನ.

**स्वारस्य** (ಸ್ವಾರಸ್ಯ) ನ. ಸಂ. ಅರ್ಥ. ೧. ಬೆಲೆ. ೨. ರುಚಿ.

**स्वारी** (ಸ್ವಾರೀ) ಸ್ತ್ರೀ. ಫಾ. ಸವಾರಿ.೧.ದಾಳಿ, ಬಂಡು, ಏರಾಟ, ಕುದುರೆಯೇರಿದ ಅರಸು, ಕುದುರೆಯೇರಿದವನು, ಸೈನ್ಯದ ವಿಭಾಗ. ೨. ಬಹುಮಾನಾರ್ಥ ಒಡೆಯ, ಅರಸು, ಪತಿ, ತಾವು.

**स्वारी करणें** (ಸ್ವಾರೀ ಕರಣೇ) ಕ್ರಿ. ಸಂ. ಮೈಮೇಲೆ ಹೋಗು, ಏರಿಹೋಗು, ದಾಳಿಮಾಡು.

**स्वारी भरणें** (ಸ್ವಾರೀ ಭರಣೇ) ಕ್ರಿ. ಸವಾರಿ ಪೇಜು ಹಾಕುವಿಕೆ.

**स्वार्थ** (ಸ್ವಾರ್ಥ) ಪು. ಸಂ. ಸ್ವಂತಲಾಭ, ವೈಯಕ್ತಿಕ ಲಾಭ, ತನ್ನ ಧನ, ಒಂದು ಅರ್ಥ (ವ್ಯಾಕರಣದಲ್ಲಿ)

**स्वार्थत्याग** (ಸ್ವಾರ್ಥತ್ಯಾಗ) ಪು. ಸಂ. ಆತ್ಮಾರ್ಪಣೆ, ಆತ್ಮಯಜ್ಞ, ಆತ್ಮನಿವೇದನೆ.

**स्वार्थत्यागी** (ಸ್ವಾರ್ಥತ್ಯಾಗೀ) ಪು. ಸಂ. ಆತ್ಮಾರ್ಪಣ ಮಾಡಿದ, ಆತ್ಮಯಜ್ಞಗೈದ, ಆತ್ಮನಿವೇದಿತ.

**स्वार्थपर** (ಸ್ವಾರ್ಥಪರ, ವಿ. } ಸ್ವಹಿತದ,
**स्वार्थपरायण** (ಸ್ವಾರ್ಥಪರಾಯಣ) ಪು. } ತನ್ನ
**स्वार्थी** (ಸ್ವಾರ್ಥೀ) ವಿ. ಸಂ. } ಕಲ್ಯಾಣ ಬಯಸುವ, ಆತ್ಮ ಸುಖಚಿಂತಕ, ತನ್ನಹಿತದ್ದೇ ವಿಚಾರ, ತನ್ನ ಸುಖಕ್ಕಾಗಿ ವಿಚಾರ, ಸ್ವಹಿತಕ್ಕಾಗಿ ವಿಚಾರ, ಸ್ವಹಿತಚಿಂತನೆ.

**स्वावलंबन** (ಸ್ವಾವಲಂಬನ) ನ. ಸಂ. ಸ್ವಂತ ಪ್ರಯತ್ನ, ಸ್ವಾಧಾರ, ಸ್ವಆಶ್ರಯ, ಆತ್ಮಾವಲಂಬನ, ಆತ್ಮವಿಶ್ವಾಸ.

**स्वास्थ्य** (ಸ್ವಾಸ್ಥ್ಯ) ನ. ಸಂ. ಕ್ಷೇಮ, ಸುಖ, ತಿಳುವಳಿಕೆ, ಆನಂದ, ಶಿಥಿಲತನ, ಶೈಥಿಲ್ಯ, ಸ್ವಾಸ್ಥ್ಯ, ಸುಲಭತ್ವ, ಶಾಂತಿ, ಸ್ವಸ್ಥತೆ.

**स्वाहा करणे** (ಸ್ವಾಹಾ ಕರಣೇ) ಕ್ರಿ. ಸ. ನುಂಗು, ಅಪಹರಿಸು, ಅತಿಕ್ರಮಣಮಾಡು, ಕಸಿದುಕೊಳ್ಳು, ತಗಲುಮಾಡು, ದುರುಪಯೋಗಪಡಿಸು.

**स्वीकरण** (ಸ್ವೀಕರಣ) ನ. ಸಂ. } ಸ್ವೀಕರಿಸುವಿಕೆ,
**स्वीकार** (ಸ್ವೀಕಾರ) ಪು. ಸಂ. } ಒಪ್ಪುವಿಕೆ, ಸ್ವೀಕಾರಮಾಡುವಿಕೆ, ಅಂಗೀಕರಿಸುವಿಕೆ, ಹಕ್ಕು ಹೇಳುವಿಕೆ, ಹಕ್ಕು ಸಾಧಿಸುವಿಕೆ, ಪ್ರತಿಪಾದಿಸುವಿಕೆ,

**स्वीकारणे** (ಸ್ವೀಕಾರಣೇ) ಕ್ರಿ. ಸ. ಸ್ವೀಕರಿಸು, ಹಕ್ಕುಹೇಳು, ಪ್ರತಿಪಾದಿಸು, ಅಂಗೀಕರಿಸು, ಒಪ್ಪು, ವಾಚಾದತ್ತಮಾಡು, ಮದುವೆಯಾಗು, ಬೆಂಬಲ ಕೊಡು, ಆದರಿಸು, ಸ್ವಾಗತಿಸು.

**स्वीकृत** (ಸ್ವೀಕೃತ) ವಿ. ಸಂ. ಅಂಗೀಕರಿಸಿದ, ಹಕ್ಕು, ಹೇಳಿದ, ಪ್ರತಿಪಾದಿಸಲ್ಪಟ್ಟ, ಮದುವೆಯಾದ, ಆದರಿಸಿದ, ಒಪ್ಪಿದ, ಕೈಯಲ್ಲಿ ತಕ್ಕೊಂಡ.

**स्वीय** (ಸ್ವೀಯ) ವಿ. ಸಂ. ತನ್ನ ಸ್ವಂತದ, ಹಕ್ಕಿನ, ಒಡೆತನದ, ಪ್ರಭುತ್ವಕ್ಕೆ ಸೇರಿದ.

**स्वेच्छ** (ಸ್ವೇಚ್ಛ) ವಿ. ಸಂ. ಸ್ವಂತ ಇಚ್ಛೆಯ, ಸ್ವತಂತ್ರವಾದ, ಸ್ವೈರವೃತ್ತಿಯ, ಅಂಕೆಯಿಲ್ಲದ, ಸೊಕ್ಕಿ ಬೆಳೆದ, ವ್ಯಸನಾಸಕ್ತ.

**स्वेच्छा** (ಸ್ವೇಚ್ಛಾ) ಸ್ತ್ರೀ. ತನ್ನ ಇಚ್ಛೆ, ಸ್ವಯಂ ಇಚ್ಛೆ, ಸ್ವೈರವೃತ್ತಿ, ಒಪ್ಪುವಿಕೆ, ಸ್ವೀಕರಿಸುವಿಕೆ.

**स्वेच्छाचार** (ಸ್ವೇಚ್ಛಾಚಾರ) ಪು. ಸಂ. ಸ್ವೈರವೃತ್ತಿ, ಸೊಕ್ಕು, ವ್ಯಸನಾಸಕ್ತತೆ, ಕಾಮುಕತೆ.

**स्वेच्छाचारी, स्वेच्छागामी** (ಸ್ವೇಚ್ಛಾಚಾರೀ, ಸ್ವೇಚ್ಛಾಗಾಮೀ) ವಿ. ಸಂ. ಸೊಕ್ಕಿನ, ಸ್ವೈರವೃತ್ತಿಯ, ವ್ಯಸನಾಸಕ್ತ, ಮನಬಂದಂತೆ ನಡೆಯುವ.

**स्वेद** (ಸ್ವೇದ) ಪು. ಸಂ. ಬೆವರು, ದಣಿವು, ಶ್ರಮ, ಮೆಹನತು, ಹಬೆ, ಆವಿ, ಉಗೆ, ಭಾಷ್ಪ.

**स्वेदज** (ಸ್ವೇದಜ) ವಿ. ಸಂ. ಬೆವರಿನಿಂದ ಹುಟ್ಟಿದ, ಹೊಗೆಯಿಂದ ಹುಟ್ಟಿದ.

**स्वैपाक** (ಸ್ವೈಪಾಕ್) ಪು. ಅಡಿಗೆ.

**स्वैर–री** (ಸ್ವೈರ್–ರೀ) ವಿ. ಸಂ. ನಿರಂಕುಶವಾದ, ಮರ್ಯಾದೆ ಇಲ್ಲದ.

**स्वैरगति, स्वैरिणी** (ಸ್ವೈರಗತಿ, ಸ್ವೈರಿಣೀ) ಸ್ತ್ರೀ. ಸಂ. ತನ್ನ ಒಲವಿನ ಪ್ರಕಾರ ನಡೆಯುವವಳು.

**स्वोपार्जित** (ಸ್ವೋಪಾರ್ಜಿತ) ವಿ. ಸಂ. ಸ್ವಂತಗಳಿಸಿದ, ಸ್ವಸಂಪಾದಿತ, ಸ್ವಕಷ್ಟಾರ್ಜಿತ, ಬೆವರು ಸುರಿಸಿ ಗಳಿಸಿದ.

## ह ಹ

**ह** (ಹ) ಅವರ್ಗೀಯ ಎಂಟನೆಯ ವ್ಯಂಜನ. ಮೂವತ್ತು ಮೂರನೆಯ ವ್ಯಂಜನ.

**हं** (ಹಂ) ಅಪ್ಪಣೆ, ಒಪ್ಪಿಗೆ, ಒಳ್ಳೆಯದು, ಆಗಲಿ'ಹೂಂ'

**हकाटणें** (ಹಕಾಟಣೇ) ಕ್ರಿ. ಸ. "**हाकांटणें**" ನೋ.

**हकाटा** (ಹಕಾಟಾ) ಪು. "**हाकाटा**" ನೋ.

**हकाटी** (ಹಕಾಟೀ) "**हाकाटी**" ನೋ.

**हकारणी** (ಹಕಾರಣೀ) ಸ್ತ್ರೀ. ಮುಂದೂಡುವಿಕೆ, ಮುನ್ನುಗ್ಗುವಿಕೆ.

**हकारणे** (ಹಕಾರಣೇ) ಕ್ರಿ. ಸ. ಮುಂದೂಡು, ಮುಂದೆಹಾಕು.

**हकालणें** (ಹಕಾಲಣೇ) ಕ್ರಿ. ಸ. ಹಿಂ. ಹೊರಗೆಹಾಕು, ತಳ್ಳು.

**हकाहाक** (ಹಕಾಹಾಕ) ಸ್ತ್ರೀ. ಬೊಬ್ಬಾಟ, ಚೀರಾಟ.

**हकीकत, –गत** (ಹಕೀಕತ್–ಗತ್) ಸ್ತ್ರೀ. ಅರ. ಸಂಗತಿ, ಸತ್ಯ, ಘಟನೆ.

**हकीकतनामा** (ಹಕೀಕತನಾಮಾ) ಪು. ಅರ+ಫಾ. ವೃತ್ತಾಂತ, ವರದಿ.

**हकीम** (ಹಕೀಮ) ಪು. ಅರ. ವೈದ್ಯ. ೨. ಮುಖ್ಯಸ್ಥ, ಅಧಿಕಾರಿ. ೩. ಜಾಣ.

**हक्क** (ಹಕ್ಕ) ಪು. ಅರ. ಹಕ್ಕು, ನ್ಯಾಯ, ಅಧಿಕಾರ. ೨. ಸತ್ಯ, ದೇವರು.

**हक्क सांगणें** (ಹಕ್ಕ ಸಾಂಗಣೇ) ಕ್ರಿ. ಸ. ಹಕ್ಕು ಪಡೆಯಲು ಜಗಳಾಡು.

**हक्कदार** (ಹಕ್ಕದಾರ) ವಿ. ಅರ. ಬಾಧ್ಯಸ್ಥ, ಹಕ್ಕುದಾರ.

**हक्कदारी** (ಹಕ್ಕದಾರೀ) ಸ್ತ್ರೀ. ಅರ. ಬಾಧ್ಯತೆ, ಪಾಲುಗಾರಿಕೆ.

**हक्कनाहक** (ಹಕ್ಕನಾಹಕ್) ವಿ. ಅರ. } ವ್ಯರ್ಥ, ವೃಥಾ
**हक्कनाक** (ಹಕ್ಕನಾಕ್) ವಿ. ಅರ. } ವಿನಾಕಾರಣ.

**हक्कमाल** (ಹಕ್ಕಮಾಲ) ಪು. ಅರ. ನ್ಯಾಯದಹಕ್ಕು, ಹಕ್ಕಿನಮಾಲ, ಒಡೆತನ, ಅಧಿಕಾರದ ಒಡೆತನ.

**हक्कहलाल** (ಹಕ್ಕಹಲಾಲ) ಪು. ಅರ. ಹಕ್ಕಿನ ಮತ್ತು ನ್ಯಾಯದ.

**हक्कहवाल** (ಹಕ್ಕಹವಾಲ್) ಪು. ಕ್ಷೇಮ, ಕಲ್ಯಾಣ ಕಾರಕ ಅವಸ್ಥೆ.

**हग ओक** (ಹಗ್ ಓಕ್) ಸ್ತ್ರೀ. ಮಲ–ಓಕರಿಕೆ, ಮಾರೀಬೇನೆ.

**हगणें** (ಹಗಣೇ) ಕ್ರಿ. ಸ. ಹೇಲು, ಮಲವಿಸರ್ಜನೆ ಮಾಡು.

**हगंदरी, –दारी** (ಹಂಗದರೀ–ದಾರೀ) ಸಾರ್ವಜನಿಕ ಪಾಯಖಾನೆ.

**हगरी** (ಹಗರೀ) ಸ್ತ್ರೀ. ಶೌಚಕೂಪ.

**हगले मुतलें** (ಹಗಲೇ ಮುತಲೇ) ಕ್ರಿ. ವಿ. ಕ್ಷುಲ್ಲಕ ಕಾರಣದಿಂದ.

**हगवण** (ಹಗವಣ) ಸ್ತ್ರೀ. ಹೊರಕಡಿಗೆ ಹತ್ತುವಿಕೆ, ಹೇಲಾಟ.

**हगेरे–लें** (ಹಗರೇ–ಲೇ) ವಿ. ಹೊರಕಡಿಗೆ ಹತ್ತಿದ, ಮಕ್ಕಳು ಹೇತ (ಬಟ್ಟೆ.)

**हंगाम** (ಹಂಗಾಮ) ಪು. ಫಾ. ಕಾಲ, ಋತು, ಸಕಾಲ, ಸರಿಯಾದ ಕಾಲ, ಸುಗ್ಗಿ.

**हंगामशीर** (ಹಂಗಾಮಶೀರ್) ವಿ. ಫಾ. ಕಾಲಕ್ಕೆ ಸರಿಯಾಗಿ, ಸಕಾಲಿತವಾಗಿ, ಸುಗ್ಗಿಗೆ ಅನುಸಾರವಾಗಿ.

**हंगामा** (ಹಂಗಾಮಾ) ಪು. ಫಾ. ಗಲಭೆ, ಕೋಲಾಹಲ, ಹಾವಳಿ.

**हजबी** (ಹಜಬೀ) ಸ್ತ್ರೀ. ಅರ. ಉದ್ದವಾದ ರೊಕ್ಕದ ಚೀಲ, ಹಮ್ಮಿಣಿ, ಹಸಿವೆ.

**हजर–हजीर** (ಹಜರ್–ಹಜೀರ್) ವಿ. ಅರ. "हांजर" ನೋ.

**हजर जबाब** (ಹಜರ್ ಜಬಾಬ್) ವಿ. ಅರ. "हाशीर जबाब" ನೋ. ತಟ್ಟನೆ ಯೋಗ್ಯ ಉತ್ತರ ಕೊಡುವವನು.

**हजर जामीन** (ಹಜರ ಜಾಮೀನ್) "हाजीरजामीन" ನೋ.

**हजिरी** (ಹಜಿರೀ) ಸ್ತ್ರೀ. "हजेरी" ನೋ.

**हजाम** (ಹಜಾಮ) ಪು. ಅರ. ನಾವಲಿಗ, ಕಸ್ಪದವ, ಕೆಲಸಿಗ.

**हजामत** (ಹಜಾಮತ) ಸ್ತ್ರೀ. ಅರ. ಕ್ಷೌರ, ಕಸ್ಪ, ಬೈಯುವಿಕೆ.

**हजार** (ಹಜಾರ) ವಿ. ಫಾ. ಸಾವಿರ, ಸಹಸ್ರ.

**हजारों** (ಹಜಾರೋ) ಕ್ರಿ.ವಿ. ಸಾವಿರಾರು, ಸಹಸ್ರಾರು.

**हजिमा** (ಹಜಿಮಾ) ಪು.ಅರ. ಗೊಂದಲ, ಜನಸಂದಣಿ, ಜನದಟ್ಟಣೆ, ದುಂದುಗಾರಿಕೆ.

**हंजी** (ಹಂಜೀ) ಹೌದೆನ್ನುವಿಕೆ, ತಲೆದೂಗುವಿಕೆ.

**हट** (ಹಟ) ಪು. ಹಟಮಾರಿತನ, ಹಗೆತನ, ಛಲ.

**हट जिरणे** (ಹಟ ಜಿರಣೇ) ಕ್ರಿ. ಸ. ಸೊಕ್ಕುಇಳಿ, ಹಟ ಹೊರಟು ಹೋಗು, ಹಟಇಳಿ.

**हटास पेटणे** (ಹಟಾಸ್ ಪೇಟಣೇ) ಹಟಕ್ಕೆ ಬೀಳು, ಹಟಹಿಡಿ.

**हटबाजार** (ಹಟ ಬಾಜಾರ) ಪು. ಸಂತೆ ಮಾಡುವಿಕೆ, ಜೀನಸು ಕೊಳ್ಳುವಿಕೆ.

**हटक** (ಹಟಕ್) ಸ್ತ್ರೀ ಕರೆಯುವಿಕೆ, ಒದರುವಿಕೆ, ಎದುರಿಸುವಿಕೆ. ೨. ಒಕ್ಕಣಿಕೆ, ಅಡ್ಡಹೆಸರು.

**हटकणे** (ಹಟಕಣೇ) ಕ್ರಿ. ನಿಲ್ಲಿಸು, ಕರೆ, ಒದರು, ಕೇಳು, ಮನ್ನಿಸದಿರು, ಎದುರಿಸು, ತೊಂದರೆಯನ್ನೊಡ್ಡು, ವಂದಿಸು.

**हटकरी** (ಹಟಕರೀ) ಪು. ಪೇಟೆಯಕೂಲಿ, ಮಟ್ಟಿಗಾರಿಕೆ.

**हटकरीण** (ಹಟಕರೀಣ) ಸ್ತ್ರೀ. ಮೊಟ್ಟೆಗಾರ್ತಿ.

**हटकाहटक** (ಹಟಕಾಹಟಕ್) ಸ್ತ್ರೀ. ವಾಗ್ವಾದ, ಮಾತಿನ ಬಡೆದಾಟ.

**हटकून** (ಹಟಕೂನ್) ಕ್ರಿ. ಸಂ. ಬೇಕಂತಲೇ, ಅಗತ್ಯವಾಗಿ, ಪರಿವೆಯಿಲ್ಲದೆ.

**हटखोर** (ಹಟಖೋರ್) ವಿ. ಸಂ. ಹಟಮಾರಿ, ತನ್ನ ಮಾತನ್ನೇ ನಡೆಯಿಸುವವ, ಮೊಂಡ.

**हटणे** (ಹಟಣೇ) ಕ್ರಿ. ಸಂ. ಹಿಂಜರಿ, ಹಟಹಿಡಿ, ಹಿಂದೆಸರಿ, ಜಜ್ಜು.

**हटयोग** (ಹಟಯೋಗ) ಪು. ಸಂ. ಹಟಯೋಗ, ಯೋಗದ ಒಂದು ಪ್ರಕಾರ.

**हटवाद** (ಹಟವಾದ) ಪು. ಹಟಮಾರಿತನ, ಛಲ.

**हटवादी** (ಹಟವಾದೀ) ವಿ. ಹಟಮಾರಿ, ಛಲದ.

**हटविणे** (ಹಟವಿಣೇ) ಕ್ರಿ. ಸಂ. ಹಿಂದಕ್ಕೆಸರಿಸು, ನಿರುತ್ತರ ಮಾಡಿಸು, ಪರಾಜಯಗೊಳಿಸು.

**हटाऊ** (ಹಟಾಊ) ವಿ. ಸಂತೆಯ ಸಂಬಂಧದ, ಕಡಿಮೆಬೆಲೆಯ, ಸುಮಾರಾದ, ಕಡಿಮೆತರಗತಿಯ.

**हटी** (ಹಟೀ) ಸ್ತ್ರೀ. ವಿ. ಹಟಮಾರಿ. ೨. ಸ್ತ್ರೀ. ಸಂತೆ.

**हटेंच** (ಹಟೇಚ್) "हटकून" ನೋ.

**हटेला** (ಹಟೇಲಾ) ವಿ. "हटवादी" ನೋ.

**हट्ट** (ಹಟ್ಟ) ಪು. ಹಟ, ಛಲ.

**हट्टी** (ಹಟ್ಟೀ) ವಿ. "हटी" ನೋ.

**हट्टवाद** (ಹಟ್ಟವಾದ್) ಪು. "हटवाद" ನೋ.

**हट्टवादी** (ಹಟವಾದೀ) "हटवादी" ನೋ.

**हड** (ಹಡ್) ಉದ್ಗಾರ ಥೂ, ಛೀ.

**हडकणे** (ಹಡಕಣೇ) ಕ್ರಿ.ಸಂ. ಒಣಗು, ಬೆಸೆ, ಬೆಸಿಗೆ ಹಾಕು.

**हडकी** (ಹಡಕೀ) ಸ್ತ್ರೀ. ಸಣ್ಣ ಎಲುಬು.

**हडक्या** (ಹಡಕ್ಯಾ) ವಿ. ಬಡಕಾದ.

**हडक्या ऊस** (ಹಡಕ್ಯಾ ಊಸ್) ಸಣ್ಣ, ಉದ್ದ ಕಬ್ಬು.

**हडप** (ಹಡಪ್) ನ. ಸಂ. ಪ್ರತಿಜ್ಞೆ, ಒತ್ತೆ ಇಟ್ಟ ಜೀನಸು, ಅಡವು.

**हडपणे** (ಹಡಪಣೇ) ಕ್ರಿ. ಸಂ. ಗಾಳಿಹಾಕು, ಬೆಂಕಿ ಹೊತ್ತಿಸಲು ಗಾಳಿ ಬೀಸು, ಮೊರಗಾಳಿಹಾಕು.

**हडपा** (ಹಡಪಾ) ಪು. ಒಂದು ಪ್ರಕಾರದ ಕಪಾಟ, ಕವಾಡ, ಹಣದ ಪೆಟ್ಟಿಗೆ, ಸಂದುಕ, ಖಜಾನ. ೨. ಹಡಪ, ನಾಪಿತನ ಪೆಟ್ಟಿಗೆ.

**हडबड** (ಹಡಬಡ್) ಸ್ತ್ರೀ. ಗೊಂದಲ, ಗದ್ದಲ.

**हडबडणे** (ಹಡಬಡಣೇ) ಕ್ರಿ. ಅ. ಗೊಂದಲವೇಳು, ಗೊಂದಲೆಬ್ಬಿಸು, ಗದ್ದಲಹಾಕು.

**हडबडाट** (ಹಡಬಡಾಟ್) ಪು. ಗೊಂದಲ, ಗದ್ದಲ, ತೊಂದರೆ, ತೊಡಕು, ಜನಸಂದಣಿ, ಸಂಘರ್ಷಣೆ, ಗೋಳಾಟ, ಕಂಗೆಡಿಕೆ, ಗಾಬರಿ, ಪರಾಜಯ, ನಿರಾಶೆ.

**हडबडावणे** (ಹಡಬಡಾವಣೇ) ಕ್ರಿ. ಗೊಂದಲವೇಳು, ಗೊಂದಲವೆಬ್ಬಿಸು, ತುಚ್ಛೀಕರಿಸಿ ತ್ಯಾಗಿಸು, ತ್ಯಜಿಸು, ಹೀಗಳೆ.

**हडबडीत** (ಹಡಬಡೀತ್) ವಿ. ಸಂ. ಹುರಬುರಕ, ತರಕಲ, ಕಾಡ, ದೊರಗು, ಒರಟಾದ, ಕರ್ಕಶ.

**हंडरीमडकी** (ಹಂಡರೀಮಡಕೀ) ಸ್ತ್ರೀ. ಮಣ್ಣಿನಪಾತ್ರೆ, ಮಣ್ಣಿನ ಗಡಿಗೆ-ಮಡಿಕೆ.

**हडरे(न) हंडरा** (ಹಂಡರೇ)-(ನ) (ಹಂಡರಾ) ಪು. ಅಡ್ಡಿ, ಭಾರ, ಆತಂಕ, ಗುದ್ದಿ, ಕೊರಡು, ಕೊರಳ ಗುದ್ದಿ, ಸಂಕೋಲೆ, ಬೇಡಿ, ಬಂಧನ, ಸೆರೆ, ನಿರ್ಬಂಧ.

**हंडवांगणे** (ಹಂಡವಾಂಗಣೇ) ಕ್ರಿ. ಅ. ಸೊರಗು, ಕ್ಷೀಣವಾಗು, ಬಡಕಾಗು, ಸವೆ, ನವೆ, ಹಾಳು ಮಾಡು, ಸವೆಯಿಸು, ನಾಶಮಾಡು, ಬಡವಾಗು, ಕ್ಷಯಿಸು, ಕೃಶವಾಗಿಸು, ಒಣಗಿಸು, ಒತ್ತಿಸು.

**हंडवंगी** (ಹಂಡವಂಗೀ) ವಿ. ಸಂ. ಹಟಮಾರಿ, ತನ್ನದೇ ಮುಂದುಮಾಡುವವ, ತನ್ನದೇ ಕುದುರೆ ಮುಂದು ಎನ್ನುವ.

**ह(हा)डवैर** (ಹ(ಹಾ)ಡ್‌ವೈರ್) ನ.ಸಂ. ಅತಿದ್ವೇಷ, ಬದ್ಧದ್ವೇಷ, ಕಡುವೈರ.

**हडस** (ಹಡಸ್) ವಿ. ಗಟ್ಟಿಎಲುಬಿನ, ಗಟ್ಟಿಮುಟ್ಟ, ಜೋಡೆಲುಬಿನ.

**हडसणे** (ಹಡಸಣೇ) ಕ್ರಿ. ಸಂ. ಗಟ್ಟಿಯಾಗಿ ಎಳೆ, ಒಮ್ಮೆಲೆಜಗ್ಗು, ಕಿವಿಹಿಂಡು, ಬುದ್ಧಿಹೇಳು, ಮಾರ್ಗ ದೋರು.

**हडसून खडसून** (ಹಡಸೂನ್ ಖಡಸೂನ್) ಕ್ರಿ. ವಿ. ಬಲುಮೆಯಿಂದ, ಒತ್ತಾಯದಿಂದ, ಅಸಂಧಿಗ್ಧತೆ ಯಿಂದ, ಅನುಮಾನಕ್ಕೆಡೆ ಇಲ್ಲದೆ.

**हडसून खडसून सांगणे** (ಹಡಸೂನ್ ಖಡಸೂನ್ ಸಾಂಗಣೇ) ಕ್ರಿ. ಅ. ನಿಷ್ಠುರವಾಗಿಹೇಳು, ಖಂಡಿತ ವಾಗಿಹೇಳು.

**हडहड** (ಹಡಹಡ್) ಸ್ತ್ರೀ. ತಿರಸ್ಕಾರ, ತಡೆ, ಮುಖ ಭಂಗ, ನಿಂದೆ, ವಿಲಂಬ, ಬಿರುನುಡಿ, ಅವಮಾನ, ಅಗೌರವ.

**हडहडणे** (ಹಡಹಡಣೇ) ಕ್ರಿ. ಸಂ. ತಿರಸ್ಕರಿಸು '**हंडवांगणे**' ನೋ.

**हडहडावणे** (ಹಡಹಡಾವಣೇ) ಕ್ರಿ. ಸಂ. '**हडबडावणें**' ನೋ.

**हडळ-ळी** (ಹಡಳ್-ಳೀ) ಸ್ತ್ರೀ. ಭೂತ, ಪಿಶಾಚಿ, ತುಂಟೆ, ಉಡಾಳ, ಡಾಕಿನಿ, ಶಾಕಿನಿ.

**हंडा** (ಹಂಡಾ) ಪು. ಹಂಡೆ, ದೊಡ್ಡಪಾತ್ರೆ, ಅಗಲ ಬಾಯಿಯ ದೊಡ್ಡ ಪಾತ್ರೆ.

**हंडी** (ಹಂಡೀ) ಸ್ತ್ರೀ. ಅಡಿಗೆಯ ಸಣ್ಣ ಪಾತ್ರೆ, ತೂಗು ದೀವಿಗೆ.

**हंडीबाग** (ಹಂಡೀಬಾಗ್) ಪು. ಗೊಡ್ಡಿ, ಚೇಷ್ಟೆಗಾರ, ನಗೆಗಾರ, ವಿನೋದಿ.

**हंडीमडकी** (ಹಂಡೀಮಡಕೀ) ಸ್ತ್ರೀ. ಗಡಿಗೆ-ಮಡಿಕೆ, ಮಣ್ಣಿನಪಾತ್ರೆ "**हंडरी-मडकी**" ನೋ.

**हडूक** (ಹಡೂಕ್) ನ. ಸಂ. ಸಣ್ಣ ಎಲುಬು, ನಿಂದಾ ವ್ಯಂಜಕ ಶಬ್ದ.

**हडचावर्ण** (ಹಡ್ಯಾವರ್ಣ) ಪು. ಎಲುಬು ಗಾಯ.

**हणणे** (ಹಣಣೇ) ಕ್ರಿ. ಸ. ಹೊಡೆ, ಬಡೆ, ಗುದ್ದು, ಅಪ್ಪಳಿಸು, ತಿವಿ, ಕೊಲ್ಲು,ಕತ್ತಿಯಿಂದ ತುಂಡರಿಸು, ಕತ್ತರಿಸು.

**हत** (ಹತ) ವಿ. ಸಂ. ಹೊಡೆದ, ಗುದ್ದಿದ, ಕತ್ತರಿಸಿದ, ಕೊಂದ, ತಿವಿದ.

**हतदैव** (ಹತದೈವ) ವಿ. ಸಂ. }
**हतभाग्य** (ಹತಭಾಗ್ಯ) ವಿ. ಸಂ. } ಹತಭಾಗಿ, ದುರ್ದೈವಿ,ಅಭಾಗಿ, ದುಷ್ಟಗ್ರಹ ಪೀಡಿತ, ಗ್ರಹಬಾಧಿತ.

**हतवीर्य** (ಹತವೀರ್ಯ) ಸೋತ, ಪರಾಜಿತ, ನಷ್ಟ ಶೌರ್ಯದ, ಕಂಗೆಟ್ಟ.

**हतोडा** (ಹತೋಡಾ) ಪು. ಸುತ್ತಿಗೆ, ಕೈಸುತ್ತಿಗೆ ದೊಡ್ಡ ಸುತ್ತಿಗೆ.

**हतोडी** (ಹತೋಡೀ) ಸ್ತ್ರೀ. ಸಣ್ಣ ಸುತ್ತಿಗೆ.

**हत्** (ಹತ್) ಉದ್ಗಾರ. ಛೀ, ಹತ್, (ತಿರಸ್ಕಾರಕ್ಕೆ) ಹಚ್ಯಾ!

**हत्ता** (ಹತ್ತಾ) ಪು. ವ್ಯಾಯಾಮ ಸಾಧನೆ, ಗರಡಿಯ ಸಾಧನೆ, ಕೇದಗೆಯ ಮುಂಭಾಗ.

**हत्ती** (ಹತ್ತೀ) ಪು. ಆನೆ, ಗಜ.

**दारांत हत्ती झुलणे** (ದಾರಾಂತ್ ಹತ್ತೀ ಝುಲಣೇ) ಮನೆಯ ಮುಂದೆ ಆನೆ ಮೆರೆ, ಶ್ರೀಮಂತನಾಗು.

**हत्ती गेला आणि शेंपटाशी अडकला** (ಹತ್ತೀ ಗೇಲಾ ಆಣಿ ಶೆಪಟಾಶೀ ಅಡಕಲಾ) (ಗಾದೆಯ ಮಾತು) ಆನೆ ಪಾರಾಗಿ ಬಾಲ ತೊಡಕಿತು, ದೊಡ್ಡ ಕೆಲಸ ಸಾಧಿಸಿದ್ದರೂ ಸಾಮಾನ್ಯ ಮಾತಿನಲ್ಲಿ ಸೋಲುವಿಕೆ.

**हत्ती चालतो आणि कुत्रे भुंकतात** (ಹತ್ತೀ ಚಾಲತೋ ಅಣಿ ಕುತ್ರೆ ಭುಂಕತಾತ) (ಗಾದೆಯ ಮಾತು) ಆನೆ ನಡೆಯುತ್ತಿದೆ ಶ್ವಾನ ಬೊಗಳುತ್ತಿದೆ.

**हत्तीवर बसणे** (ಹತ್ತೀವರ ಬಸಣೇ) ಕ್ರಿ.ಅ. ಆನೆಯ ಮೇಲೆ ಕೂಡು, ಸಿರಿಯ ಅಮಲಿನಿಂದ ಒದ್ದಾಡು.

**हत्ती होऊन लाकूड खाणे आणि मुंगी होऊन साखर खाणे** (ಹತ್ತೀ ಹೋಊನ ಲಾಕೂಡ ಖಾಣೇ ಅಣಿ ಮುಂಗಿ ಹೋಊನ ಸಾಖರ ಖಾಣೇ) (ಗಾದೆಯ ಮಾತು) ಆನೆಯಾಗಿ ಗಿಡಮುರಿ, ಇರುವೆಯಾಗಿ ಸಕ್ಕರೆತಿನ್ನು.

**हत्तीच्या गंडस्थळीं बसणे** (ಹತ್ತೀಚ್ಯಾ ಗಂಡಸ್ಥಳೀ ಬಸಣೇ) ಕ್ರಿ. ವೈಭವಕ್ಕೇರು, ಆನೆಯ ಗಂಡಸ್ಥಲಕ್ಕೇರು.

**हत्तीसारखे दात असणे** (ಹತ್ತಿಸಾರಖೆ ದಾತ ಅಸಣೇ) ಕ್ರಿ. ಆನೆಯಂತೆ ಹಲ್ಲಿರು, ಒಳಗೊಂದು ಹೊರಗೊಂದು ಇರು.

**हत्तीचें मढें** (ಹತ್ತೀಚೇ ಮಢೇ) ನ. ದೊಡ್ಡ ಬೇಸರಿಕೆಯ ಕೆಲಸ, ಆನೆಯ ಹೆಣ.

**हत्तीण** (ಹತ್ತೀಣ) ಸ್ತ್ರೀ. ಹೆಣ್ಣಾನೆ.

**हत्तीबार** (ಹತ್ತೀಬಾರ) ಪು. ಹಸ್ತ ನಕ್ಷತ್ರದಲ್ಲಿ ಮಾಗಿದ ಫಲದ ಸುಗ್ಗಿ, ಹಸ್ತಫಲ.

**हत्तीमहाल** (ಹತ್ತೀಮಹಲ್) ಪು. ಆನೆಕಟ್ಟುವ ಮನೆ.

**हत्तीखाना** (ಹತ್ತೀಖಾನಾ) ಪು. ಗಜಸಾಲೆ.

**हत्या** (ಹತ್ಯಾ) ಸ್ತ್ರೀ. ಸಂ. ಕೊಲೆ, ಕೊಲ್ಲುವಿಕೆ. ೨. ಒಂದು ಪ್ರಕಾರದ ಮಗ್ಗ, ಯಂತ್ರದ ಗಾಲಿ.

**हत्यार** (ಹತ್ಯಾರ) ಪು. ಹಿಂ. ಸಾಧನ, ಸಾಮುಗ್ರಿ, ಶಸ್ತ್ರ, ಆಯುಧ, ಹಿಡಿಕೆ, ಉಪಕರಣ.

**हत्यारबंद** (ಹತ್ಯಾರಬಂದ್) ವಿ. ಹಿಂ. }
**हत्यारी** (ಹತ್ಯಾರೀ) ವಿ. ಹಿಂ. } ಶಸ್ತ್ರಸಜ್ಜ, ಶಸ್ತ್ರಸನ್ನದ್ಧ

**हदगा** (ಹದಗಾ) ಪು. ಹೆಣ್ಣುಮಕ್ಕಳ ಒಂದು ಆಟ.

**हदन** (ಹದನ) ನ. ಅನುಪಾತ, ಪಾಲು, ಪ್ರಮಾಣ, ಆಧಾರ, ಯೋಗ್ಯ ಪದ್ಧತಿ, ರೀತಿ, ತಕ್ಕಮಾರ್ಗ, ಯೋಗ್ಯವಿಧಾನ.

**हदरणे** (ಹದರಣೇ) ಕ್ರಿ. ಅ. ಅಂಜು, ನಡಗು, ಗಾಬರಿಯಾಗು, ಜೋತಾಡು, ಗಟ್ಟನೆ ಕುಲುಕು.

**हदाल** (ಹದಾಲ್) ವಿ. ದೊಡ್ಡ, ಮೊಟ್ಟೆ, ಬಿರುಸು, ಭೀಕರ.

**हद–द्द** (ಹದ್–ದ್ದ) ಸ್ತ್ರೀ. ಮರ್ಯಾದೆ, ಸೀಮೆ, ಕೊನೆ, ತೀರ, ದಂಡೆ, ಅತ್ಯಧಿಕ, ಅಧಿಕಾಧಿಕ.

**हद्दपार** (ಹದ್ದಪಾರ) ವಿ. ಸೀಮಾ ಪಾರಾದ, ಹೊರಗಟ್ಟಿದ.

**हद्दपारी** (ಹದ್ದಪಾರೀ) ಸ್ತ್ರೀ. ಸೀಮೆ ದಾಟಿಸುವಿಕೆ, ಹೊರಗಿಡುವಿಕೆ, ಗಡಿಪಾರು ಮಾಡುವಿಕೆ.

**हनन** (ಹನನ) ನ. ಸಂ. ಕೊಲ್ಲುವಿಕೆ, ಹೊಡೆಯುವಿಕೆ. 'हत्या' ನೋ.

**हननीय** (ಹನನೀಯ) ವಿ. ಸಂ. ಕೊಲ್ಲಲಿಕ್ಕೆ ಅರ್ಹ, ಕೊಲ್ಲಲುಯೋಗ್ಯ, ಹೊಡೆಯಲು ಯೋಗ್ಯ.

**हनवटी** (ಹನವಟೀ) ಸ್ತ್ರೀ. }
**हनु** (ಹನು) ಸ್ತ್ರೀ. } ಗದ್ದ, ಚುಬುಕ.
**हनुवटी** (ಹನುವಟೀ) ಸ್ತ್ರೀ. }

**हनुग्रह** (ಹನುಗ್ರಹ) ಪು. ಬಿಗಿದ ಬಾಯಿ, ಒತ್ತಿ ಹಿಡಿದ ಬಾಯಿ.

**हनुमान्,–मंत** (ಹನುಮಾನ–ಮಂತ) ಪು. ಸಂ. ಹಣಮಂತ, ಮಾರುತಿ, ಹನುಮಂತ.

**गाव जळाला तरी हनुमंत निराळा** (ಗಾಂವ ಜಳಾಲಾ ತರೀ ಹನುಮಂತ್ ನಿರಾಳಾ) (ಗಾದೆಯುಮಾತು) ಊರುಸುಟ್ಟರೆ ಹನುಮಪ್ಪ ಹೊರಗೆ.

**हनुस्तंभ** (ಹನುಸ್ತಂಭ) ಪು. ಒತ್ತಿ ಹಿಡಿದಬಾಯಿಯುವ.

**सूर्यपुढें दिवटी हनुमंता पुढें कोल्हाटी** (ಸೂರ್ಯಾ ಪುಢೇ ದಿವಟೀ ಹನುಮಂತಾ ಪುಢೇ ಕೋಲ್ಹಾಟೀ) (ಗಾದೆಯ ಮಾತು) ಸೂರ್ಯನ ಮುಂದೆ ದೀವಟಿಗೆ ಹನುಮಪ್ಪನ ಮುಂದೆ ಹಾರುವ ಗುಬ್ಬಿ. (ದೊಡ್ಡವರ ಮುಂದೆ ಸಾಮಾನ್ಯನ ಜಂಭ.)

**हपका** (ಹಪಕಾ) ಪು. ನೀರು ಗೊಜ್ಜುವಿಕೆ, ಕೈಯಿಂದ ನೀರು ಹೊಡೆಯುವಿಕೆ, ಕೈನೀರ ಬಡೆತ.

**हबशी** (ಹಬಶೀ) ಪು. ಅಬಿಸೀನಿಯವ ಮನುಷ್ಯ, ನಿಗ್ರೋ.

**हपाप** (ಹಪಾಪ) ಪು. ಬಡವನ ಸುಲಿಗೆ. ೨. ಅತ್ಯಾಸೆ.

**हपापाचा माल गपापा** (ಹಪಾಪಾಚಾ ಮಾಲ ಗಪಾಪಾ) ಪು. ಅ. (ಗಾದೆಯ ಮಾತು) ಸುಲಿಗೆಯ ಸುವರ್ಣ ಸೂಳೆಯ ಪಾಲು.

**हपापी** (ಹಪಾಪೀ) ಸ್ತ್ರೀ. ಭಯ, ಭೀತಿ, ಅಂಜಿಕೆ, ಗ್ರಹಣಶಕ್ತಿ, ಆಕಲನ ಶಕ್ತಿ.

**हप्ता,–हफता** (ಹಪ್ತಾ–ಹಫತಾ) ಪು. ಫಾ. ಕಂತು, ಹಪ್ತೆ.

**हप्तेबंदी** (ಹಪ್ತೇಬಂದೀ) ಸ್ತ್ರೀ. ಫಾ. ಕಂತು, ಕಂತಿನಿಂದ ತೀರಿಸುವಿಕೆ, ಕಂತಗೊತ್ತುವಳಿ.

**हबकणे** (ಹಬಕಣೇ) ಕ್ರಿ. ಸ. ಅಪ್ಪಳಿಸು, ಬಡೆ, ನೆಲಕ್ಕೆ ಚೆಲ್ಲು, ಹೊಡೆ, ಅಸಹ್ಯಪಡಿಸು, ಭಯಪಡಿಸು.

**हबका** (ಹಬಕಾ) ಪು. ಅಪ್ಪಳಿಕೆ, ಬಡೆತ, ನೆಲಕ್ಕೆ ಚೆಲ್ಲು ವಿಕೆ, ಉದ್ಯೋಗದಲ್ಲಿ ಹಾನಿ, ಭಯ.

**हंबरडा—हंबारडा** (ಹಂಬರಡಾ – ಹಂಬಾರಡಾ) ಪು. ಎತ್ತಿನ ಡುರಕಿ, ಆಕ್ರೋಶ.

**—फोडणे** (ಫೋಡಣೇ) ಕ್ರಿ. ಸಂ. ಮೊರೆಯಿಡು, ದೈನ್ಯತೋರು.

**हंबरणे** (ಹಂಬರಣೇ) ಕ್ರಿ. ಸ.
**हंबारणे** (ಹಂಬಾರಣೇ) ಕ್ರಿ. ಸ. } ಡುರಿಕಿಹಾಕು, ಒದರು. (ಆಕಳು ಎತ್ತು)

**हबशीपट्टी** (ಹಬಶೀಪಟ್ಟೀ) ಅನ್ಯಾಯದ ತೆರಿಗೆ, ಮಿತಿ ಮೀರಿದ ಸುಂಕ.

**हबेलंडी** (ಹಬೇಲಂಡೀ) ಸ್ತ್ರೀ. ಹಿಂ. (ಅಬೇಲಾಂಡೀ) ಗಾಬರಿ, ಗಾಬರಿಯಾಗುವಿಕೆ, ನೀಚಾವಸ್ಥೆ, ಅಂಜು ಬುರುಕತನ, ಅಂಜುಗೂಳಿತನ.

**हमखास** (ಹಮಖಾಸ) ವಿ. ಫಾ. ಖಂಡಿತವಾಗಿ, ನಿಶ್ಚಯ ಪೂರ್ವಕವಾಗಿ.

**हमजात** (ಹಮಜಾತ್) ಸ್ತ್ರೀ. ಸಾಮಾನ್ಯ ಜನ ಸಮೂಹ, ಅವ್ಯವಸ್ಥಿತ ಜನಸಮೂಹ, ಸಮ್ಮಿಶ್ರಜನ.

**हमरस्ता** (ಹಮರಸ್ತಾ) ಪು. ದೊಡ್ಡರಸ್ತೆ, ಸಾರ್ವ ಜನಿಕದಾರಿ—ಮಾರ್ಗ, ಮುಖ್ಯಮಾರ್ಗ.

**हमरी तुमरी** (ಹಮರೀ ತುಮರೀ) ಸ್ತ್ರೀ. ಜಗಳ, ಕದನ, ನಾ, ನೀ, ಯಾಕೋ-ಏನೋ (ತಿಕ್ಕಾಟದಲ್ಲಿ).

**हमशा** (ಹಮಶಾ) ಪು.
**हमशाधुमशा** (ಹಮಶಾಧುಮಶಾ) ಪು. } ದಂಗೆ, ಗದ್ದಲ, ಬಡೆದಾಟ, ತೊಡಕು.

**हमामखाना** (ಹಮಾಮ್‌ಖಾನಾ) ಪು. ಅರ. ಸ್ನಾನ ಗೃಹ, ಬಚ್ಚಲಮನೆ, ಸ್ನಾನ.

**हमामा** (ಹಮಾಮಾ) ಪು. ಗೊಲ್ಲಮಕ್ಕಳಾಟ, ಗೌಳಿ ಗರ ಮಕ್ಕಳಾಟ.

**हमाल** (ಹಮಾಲ್) ಪು. ಅರ. ಮೊಟ್ಟೆಗಾರ, ಕೂಲಿ, ನೌಕರ.

**हमाली** (ಹಮಾಲೀ) ಸ್ತ್ರೀ. ಅರ. ಮೊಟ್ಟೆಗಾರಿಕೆ, ಮೊಟ್ಟೆಗಾರನ ದುಡಿಮೆ, ಮೊಟ್ಟೆಗಾರನ ಮಜೂರಿ.

**हमिणी** (ಹಮಿಣೀ) ಸ್ತ್ರೀ. ಅರ. ರೊಕ್ಕದ ಚೀಲ. "**हजबी**" ನೋ.

**हमी** (ಹಮೀ) ಸ್ತ್ರೀ. ಅರ. (ಹಾಮೀ) ಹೊಣೆ, ಹೊಣೆ ಗಾರಿಕೆ, ನಿಶ್ಚಯ, ಭರವಸೆ, ಧೈರ್ಯ, ಖಾತ್ರಿ, ಜೀವ ವಿಮೆ.

**हमीपत्र** (ಹಮೀಪತ್ರ) ನ. ಹೊಣೆಕಾಗದ, ನಿಶ್ಚಯ ಪತ್ರ, ಭರವಸೆಯ ಕಾಗದ, ಜೀವವಿಮಾಪತ್ರ, ಜಾಮೀನಪತ್ರ.

**हमीदार** (ಹಮೀದಾರ್) ವಿ. ಫಾ. ಜಾಮೀನಾದವ, ಹೊಣೆಗಾರ.

**हमीश** (ಹಮೀಶ್) ಕ್ರಿ. ವಿ.
**हमेश—शा** (ಹಮೇಶ—ಶಾ) ಕ್ರಿ. ವಿ. } (ಯಾವಾಗಲೂ, ಸದೈವ, ಬೇಕಾದಾಗ.

**हय** (ಹಯ) ಪು. ಸಂ. ಕುದುರೆ, ತುರಗ.

**हयमेध** (ಹಯಮೇಧ) ಪು. ಸಂ. ಅಶ್ವಮೇಧ.

**हयगय** (ಹಯಗಯ) ಸ್ತ್ರೀ. ಉದಾಸೀನತೆ, ಔದಾ ಸೀನ್ಯ, ಅಜಾಗರೂಕತೆ, ಉಪೇಕ್ಷೆ, ತಾತ್ಸಾರ.

**हया** (ಹಯಾ) ಸ್ತ್ರೀ. ಅರ. ವಿನಯ, ನಾಚಿಕೆ, ಲಜ್ಜೆ. **(बे—)** ಬೇ—) ವಿ. ನಾಚಿಕೆಗೇಡಿ.

**हयात** (ಹಯಾತ್) ಸ್ತ್ರೀ. ಅರ. ಜೀವನ, ಇಡಿಯ ಆಯುಷ್ಯ. ೨. ಬದುಕಿರುವ, ಜೀವಿತ.

**हयासा** (ಹಯಾಸಾ) ಪು. ಕುದುರೆಯ ಜೀನಿನ ತೊಗಲ ಪಟ್ಟಿ, ಜೀನಪಟ್ಟಿ.

**हर** (ಹರ್) ಅವ್ಯಯ. ಫಾ. ಪ್ರತಿಯೊಂದು, ಅಪಹರಣ ಮಾಡುವವ. ೨. ಪು. ಸಂ. ಶಿವ, ಹರ. ೩. ಪ್ರತ್ಯಯ. ಸಂ. ಹರಣಮಾಡುವವ.

**हरउपाय** (ಹರಉಪಾಯ) ಪು. ಪ್ರತಿಯೊಂದು ಉಪಾಯ.

**हरएक** (ಹರ್‌ಏಕ) ಸರ್ವ. ಪ್ರತಿಯೊಂದು, ಪ್ರತಿ ಯೊಬ್ಬ.

**हरक** (ಹರಕ) ನ. ಪು. ಮಾಂಜರಪಾಟನ (ಲಾಂಗಕ್ಲಾಥ್) ಅರಿವೆ.

**हरकत** (ಹರಕತ್) ಸ್ತ್ರೀ. ಅರ. ಅಡ್ಡಿ, ಆತಂಕ, ವಿರೋಧ, ತಡೆ.

**हरकती** (ಹರಕತೀ) ಸ್ತ್ರೀ.
**हरकतखोर** (ಹರಕತ್‌ಖೋರ್) ವಿ. ಅರ. } (ಆತಂಕ ಮಾಡುವವ, ವಿರೋಧಿ, ತಡೆಹಾಕುವವ.

**हरकसबी** (ಹರಕಸಬೀ) ವಿ. ಫಾ. ಅತಿಕುಶಲ, ಎಲ್ಲಕಲೆ ಬಲ್ಲವ.

**हरकाम** (ಹರಕಾಮ್) ನ. ಫಾ. ಪ್ರತಿಕೆಲಸ, ಬೇಕಾದ ಉದ್ಯೋಗ, ಬೇಕಾದಕಲೆ.

**हरकामी—म्या** (ಹರಕಾಮೀ—ಮ್ಯಾ) ವಿ. ಪ್ರತಿಕೆಲಸ ಮಾಡುವವ, ಪ್ರತಿಕೆಲಸಕ್ಕೆ ಸಮರ್ಥ.

**हरकारा** (ಹರಕಾರಾ) ಪು. ನ. ದೂತ, ಹೇಳಿದಂತೆ ಕೇಳುವವ. ೨. ಸುದ್ದಿ ಒಯ್ಯುವವ, ವಾರ್ತಾವಾಹಕ, ಚಾರ, ಗುಪ್ತಚಾರ.

**हरकी** (ಹರಕೀ) ಸ್ತ್ರೀ.ಕ. (ಹರಕೆ) ಮೆಚ್ಚು, ಮೆಚ್ಚುಗೆ, ಖುಶಾಲಿ.

**हरकेण** (ಹರಕೇಣ)
**हरक्याण** ಹರಕ್ಯಾಣ) } ನ. ಹರೀಕದ ಹುಲ್ಲು.

**हरकोणी** (ಹರಕೋಣೀ) ಸರ್ವ. ಪ್ರತಿಯೊಬ್ಬ, ಯಾವನಾದರೂ.

**हरघडी** (ಹರಘಡೀ) ಕ್ರಿ. ವಿ. ಪ್ರತಿಗಳಿಗೆಯಲ್ಲಿ, ಪ್ರತಿಕ್ಷಣಕ್ಕೆ, ಒಂದೇಸವನೆ.

**हरजिनसी** (ಹರಜಿನಸೀ) ವಿ. ಫಾ. ಎಲ್ಲ ಜಾತಿಯ, ಪ್ರತಿಮಾದರಿಯ.

**हरडा** (ಹರಡಾ) ಪು. ಅಳಲೇಕಾಯಿ.

**हरण** (ಹರಣ) ನ.ಸಂ. ಅಪಹರಿಸುವಿಕೆ, ಸ್ಥಲಾಂತರ ಮಾಡುವಿಕೆ. ೨. ನ. ಚಿಗರೆ, ಎರಳೆ.

**हरण पाशात पडणें** (ಹರಣ ಪಾಶಾತ್ ಪಡಣೇ) ಕ್ರಿ. ವಿ. ಎರಳೆ ಬಲೆಗೆ ಬೀಳು, ಬಲೆಯಲ್ಲಿ ಸಿಗಬೀಳು, ಅಡಚಣಿಯಲ್ಲಿ ಸಿಗಬೀಳು.

**हरणी** (ಹರಣೀ) ಸ್ತ್ರೀ. ಹೆಣ್ಣು ಜಿಂಕೆ.

**हरणीय** (ಹರಣೀಯ) ವಿ. ಸ. ಅಪಹರಿಸಲು ತಕ್ಕ, ಅಪಹರಣೀಯ.

**हरणे** (ಹರಣೇ) ಕ್ರಿ.ಸ. ಅಪಹರಿಸು, ಕಳೆದುಹೋಗು.

**हरतऱ्हा** (ಹರತರ್‍ಹಾ) ಸ್ತ್ರೀ. ಪ್ರತಿಯೊಂದು ಪ್ರಕಾರ, ನಾನಾಬಗೆ.

**हरताळ** (ಹರತಾಳ) ಪು. ಗಂಧಕ. ೨. ಪು. ಹಿಂ. ಕೆಲಸ ನಿಲ್ಲಿಸುವಿಕೆ.

**हरताळ पडणे** (ಹರತಾಳ ಪಡಣೇ) ಕ್ರಿ. ಅ. ಪೇಟೆ ಮುಚ್ಚು.

**हरताळ फासणे** (ಹರತಾಳ ಫಾಸಣೇ) ಕ್ರಿ. ಸ. ಕೆಲಸ ಕೆಡಿಸು.

**हरताळका** (ಹರತಾಳಕಾ) ಸ್ತ್ರೀ. ಭಾದ್ರಪದ, ತೃತೀಯಾ, ದೇವಿಯ ಪೂಜೆ.

**हरदम** (ಹರದಮ್) ಕ್ರಿ. ವಿ. ಯಾವಾಗಲೂ.

**हरदास** (ಹರದಾಸ್) ಪು. ಕೀರ್ತನಕಾರ.

**हरदासाची कथा मूळ पदावर** (ಹರದಾಸಾಚೀ ಕಥಾ ಮೂಳ್ ಪದಾವರ್) ಗಾದೆ. ಸುತ್ತಾಡಿ ತನ್ನ ಮಾತನ್ನು ಮತ್ತೆಮತ್ತೆ ಹೇಳುವಿಕೆ.

**हरदासी घोडा,–तट्टू** (ಹರದಾಸೀ ಘೋಡಾ,–ತಟ್ಟೂ) ೧. ಪು. ೨. ನ. ತಟ್ಟುಕುದುರೆ, ಸಣ್ಣಕುದುರೆ, ಬಡಮನುಷ್ಯ, ನಿಷ್ಪ್ರಯೋಜಕ.

**हरपणे** (ಹರಪಣೇ) ಕ್ರಿ. ಅ. ಕಳೆ, ಹೋಗು, ನಷ್ಟ ಹೊಂದು, ಕಳವಾಗಿ ಹೋಗು, ವ್ಯರ್ಥವಾಗಿ ಕಳೆ, ಸೋಲು.

**हरप्रयत्न** (ಹರಪ್ರಯತ್ನ) ಪು. ಸರ್ವ ಪ್ರಯತ್ನ, ಎಲ್ಲ ಪ್ರಯತ್ನ, ಪ್ರತಿಯೊಂದು ಪ್ರಯತ್ನ.

**हरफ** (ಹರಫ್) ಪು. ಅರ. ಮೂಲಾಕ್ಷರ, ದೋಷ ಹಚ್ಚುವಿಕೆ.

**हरबयाज, हरबयाद** (ಹರಬಯಾಜ್, ಹರಬಯಾದ್) ಪು.ಫಾ. ಪ್ರತಿಯೊಂದರಲ್ಲಿ ನಿಮಿತ್ತ, ಪ್ರತಿಯೊಂದರ ವಿವರಣೆ, ಪ್ರತಿನಿಮಿತ್ತ, ಪ್ರತಿಯೊಂದರ ಸ್ಪಷ್ಟೀಕರಣ.

**हरबरा, हरभरा** (ಹರಬರಾ, ಹರಭರಾ) ಪು. ಕಡಲೆ, ಕಡಲೆಗಿಡ, ಕಡಲೆಕಾಳು.

**हरभऱ्याचे झाडावर चढवणे** (ಹರಭರ್‍ಯಾಚೇ ಝಾಡಾವರ ಚಢವಣೇ) ಕ್ರಿ. ಸ. ಕಡಲೆಗಿಡ ಹತ್ತಿಸು, ಸ್ತುತಿಯಿಂದ ಮೋಸಗೊಳಿಸು, ಉಬ್ಬಿಸಿ ಸ್ವಾರ್ಥ ಸಾಧಿಸು.

**हरमळणे** (ಹರಮಳಣೇ) ಕ್ರಿ.ಸ. ಮೇಲಕ್ಕೆಸೆ, ಚಿಮ್ಮು, ಹೊಯ್ದಾಡಿಸು.

**हरयुक्ति** (ಹರಯುಕ್ತಿ) ಸ್ತ್ರೀ. ಪ್ರತಿಯೊಂದು ಉಪಾಯ, ಪ್ರತಿಯುಕ್ತಿ, ಪ್ರತಿಯೊಂದು ಶೋಧನೆ.

**हरएक** (ಹರಏಕ್) ವಿ. ಫಾ. ಪ್ರತಿಯೊಬ್ಬ, ಎಲ್ಲರೂ.

**हरला** (ಹರಲಾ) ಪು. ನೀರಿನ ಪ್ರವಾಹ, ನೀರಿನ ಕಾಲುವೆ.

**हरवख्त** (ಹರವಖ್ತ್) ಕ್ರಿ.ವಿ.ಫಾ.+ಅರ. ಪ್ರತಿಯೊಂದು ವೇಳೆಯಲ್ಲಿ, ಯಾವಾಗಲೂ.

**हरवणे, हरविणे** (ಹರವಣೇ, ಹರವಿಣೇ) ಕ್ರಿ. ಅ. ಕಳಕೊಳ್ಳು, ಕಳೆದುಹೋಗು.

**हरहमेश,–शा** (ಹರಹಮೇಶ–ಶಾ) ಕ್ರಿ.ವಿ.ಫಾ. ಯಾವಾಗಲೂ, ಸದೈವ, ಹಗಲೂ ರಾತ್ರಿ, ಎಡೆ ಬಿಡದೆ.

**हरहुन्नर** (ಹರಹುನ್ನರ) ವಿ. ಫಾ. ಸರ್ವಕಲೆ, ಸರ್ವ ವಿದ್ಯೆ.

**हरहुन्नरी** (ಹರಹುನ್ನರೀ) ವಿ.ಫಾ. ಚುರುಕು, ಜಾಣ, ಬುದ್ಧಿವಂತಿಕೆ, ಅನೇಕ ವಿದ್ಯೆಬಲ್ಲವ.

**हरळ** (ಹರಳ್) ಸ್ತ್ರೀ. ಕರಿಕೆ. ೨. ಬೇನೆ ಕೊಳಕ ಮುದಿಕೆ. ೩. ಹಳೆಯ ಬೇನೆ.

**हरळी** (ಹರಳೀ) ಸ್ತ್ರೀ. हरळ ನೋ.

हरा (ಹರಾ) ಪು. ಹೆಡಿಗೆ.

हराम (ಹರಾವ್ಮ್) ವಿ. ಅರ. ನಿಷಿದ್ಧ. ೨. ನೀಚ.
आराम हराम है (ಆರಾಮ ಹರಾಮ ಹೈ) ನಿರುದ್ಯೋಗದ ಧಿಕ್ಕಾರ.

हरामाचा (ಹರಾಮಾಚಾ) ವಿ. ಅನೈತಿಕ ಮಾರ್ಗದಿಂದ ಗಳಿಸಿದ, ಪುಕ್ಕಟೆಯಾದ.

हरामखोर (ಹರಾಮಖೋರ್) ವಿ. ಫಾ. ನೀಚ, ಉಪಕಾರಗೇಡಿ, ಕುಕರ್ಮಿ.

हरामखोरी (ಹರಾಮಖೋರೀ) ಸ್ತ್ರೀ. ಫಾ. ಉಪಕಾರಗೇಡಿತನ, ಕುಕರ್ಮ, ಕೃತಘ್ನತೆ.

हरामी (ಹರಾಮೀ) ವಿ. ಅರ. ಧೂರ್ತ, ಮೋಸಗಾರ, ಕಪಟ, ಠಕ್ಕ, ನೀಚ, ಕೆಟ್ಟ, ದುಷ್ಟ.

हराष, –स (ಹರಾಷ–ಸ) ಪು. ಅರ. ಹಾರಾಜು, ಲಿಲಾವು. ೨. ಮಾರಾಟ.

हरि (ಹರಿ) ಪು. ಸಂ. ವಿಷ್ಣುವಿನ ಹೆಸರು, ಸಿಂಹ, ಕುದುರೆ, ಮಂಗ, ಚಂದ್ರ, ಇಂದ್ರ, ಸೂರ್ಯ, ಕಪ್ಪೆ.

हरिण (ಹರಿಣ) ನ. ಚಿಗರೆ, ಎರಳೆ, ಜಿಂಕೆ, ಕೃಷ್ಣಮೃಗ.

हरिणी (ಹರಿಣೀ) ಸ್ತ್ರೀ. ಹೆಣ್ಣು ಚಿಗರೆ.

हरित (ಹರಿತ) ವಿ. ಸಂ. ಹಸುರು, ಹಸಿರು.

हरिदास (ಹರಿದಾಸ) "हरदास" ನೋ.

हरिद्र (ಹರಿದ್ರ) ವಿ. ಸಂ. ಹಳದಿ ಬಣ್ಣದ.

हरिद्रा (ಹರಿದ್ರಾ) ಸ್ತ್ರೀ. ಸಂ. ಅರಿಸಿಣ, ಅರಿಸಿಣ ಬೇರು, ಅರಿಸಿಣ ಸಸಿ.

हरिपी,–फी (ಹರಿಪೀ–ಫೀ) ಸ್ತ್ರೀ. ಅರ. } ಸ್ಪರ್ಧೆ,
हरिफाई (ಹರಿಫಾಈ) ಸ್ತ್ರೀ. ಅರ. } ಪ್ರತಿಸ್ಪರ್ಧಿ
ವಿರೋಧ, ಧಿಟ್ಟತನ, ಧೈರ್ಯ, ಶತ್ರುತ್ವ, ವೈರತ್ವ. ೨. ಪಂದ್ಯಾಟ.

हरिविठ्ठल (ಹರಿವಿಠ್ಠಲ) ಉದ್ಗಾರ. ಸಂಪೂರ್ಣನಾಶ, ಉಧ್ವಸ್ಥತೆ.

हरीतक (ಹರೀತಕ) ಪು. { ಕಾಳು, ಧಾನ್ಯ, ಬೀಜ,
हरीतकी (ಹರೀತಕೀ) ಸ್ತ್ರೀ. { ಕಣ, ಗುಂಜಿ,
ಗುಂಜಿಯ ತೂಕ, ಅಳಲೆಕಾಯಿ.

हरीप (ಹರೀಪ) ಪು. ಅ. ಪತಿಸ್ಪರ್ಧಿ.

हर्तकी (ಹರ್ತಕೀ) ಸ್ತ್ರೀ. "हरतकी" ನೋ.

हर्ता (ಹರ್ತಾ) ಪು. ಕಸಿದು ಕೊಳ್ಳುವ, ಅಪಹಾರ ಮಾಡುವವ.

हर्ष (ಹರ್ಷ) ಪು. ಸಂ. ಆನಂದ, ಸೊಗಸು, ಸುಖ, ಅತ್ಯಾನಂದ, ಸಂತೋಷ.

हर्षणें (ಹರ್ಷಣೇ) ಕ್ರಿ. ಅ. ಆನಂದಬಡು, ಸಂತೋಷಪಡು.

हर्षवायु (ಹರ್ಷವಾಯು) ಪು. ಸಂ. ಆನಂದದಭ್ರಮೆ, ಅತ್ಯಾನಂದದಭ್ರಮೆ, ಹರ್ಷವಾಯು.

हर्षामर्ष (ಹರ್ಷಾಮರ್ಷ) ಪು. ಸಂ. ತಕಾರರ ಮಾಡುವಿಕೆ, ಆನಂದ, ಸಂತೋಷ, ಕ್ರೋಧ.

हर्षित (ಹರ್ಷಿತ) ವಿ. ಸಂ. ಆನಂದಿತ, ಸಂತೋಷ ಸಂತೋಷಗೊಂಡ, ಸಂತೋಷಪಟ್ಟ, ಉತ್ಸಾಹಿತ.

हल (ಹಲ) ಪು. ಸಂ. ನೇಗಿಲು, ನೇಗಿಲ.

हलकट (ಹಲಕಟ್) ವಿ. ನೀಚ, ಕೆಳತರಗತಿಯ, ಅಸಭ್ಯ.
–पणा (–ಪಣಾ) ಪು. ನೀಚತನ.

हलकडी (ಹಲಕಡೀ) ಸ್ತ್ರೀ. ಕಬ್ಬಿಣದ ದುಂಡು ಸಲಾಕಿ, ವರ್ತುಳ, ಗಾಲಿ.

हलकल्लोळ (ಹಲಕಲ್ಲೋಳ್) ಪು. ಗೊಂದಲ, ಗಡಬಿಡಿ, ಒದರುವಿಕೆ, ಆಕ್ರೋಶ.

हलका (ಹಲಕಾ) ವಿ. ಹಗುರು, ಸಣ್ಣ, ಅಶಕ್ತ, ಕೆಳಮಟ್ಟದ, ತುಚ್ಛ, ಕಡಿಮೆ ಬೆಲೆಯ, ನೀಚ.

हलक्या कानाचा (ಹಲಕ್ಯಾ ಕಾನಾಚಾ) ವಿ. ಚಾಡಿಯನ್ನು ನಂಬುವವ.

हलकाफूल (ಹಲಕಾಫೂಲ) ವಿ. ಬಹಳೇ ಹಗುರು, ಅತ್ಯಂತ ಹಗುರ, ತೀರ ಹಗರು.

हलकावणे (ಹಲಕಾವಣೇ) ಕ್ರಿ. ಅ. ಹಗುರಾಗು, ಕಡಿಮೆಯಾಗು, ಭಾರ ಕಡಿಮೆಯಾಗು, ಭಾರ ಕಡಿಮೆಮಾಡು.

हलकी–गी (ಹಲಕೀ–ಗೀ) ಸ್ತ್ರೀ. ಅರ. ಹಲಗೆ, ಸಣ್ಣ ಡೋಲು.

हलक्याने (ಹಲಕ್ಯಾನೇ) ಕ್ರಿ. ವಿ. ಸಾವಕಾಶವಾಗಿ, ಹಗುರಾಗಿ, ಸಹಜವಾಗಿ, ಮೆಲ್ಲನೆ.

हलगीमलगी (ಹಲಗೀ ಮಲಗೀ) ಸ್ತ್ರೀ. ಅನುಮಾನಿಸುವಿಕೆ, ಮಾಡಲ್ಯೋ ಬೇಡೋ ಅನ್ನುವಿಕೆ, ಮಾಡಲಿಬ್ಯಾಡೋ ಅನ್ನುತ್ತ.

हलणे (ಹಲಣೇ) "हालणे" ನೋ.

हलचाल (ಹಲಚಾಲ್) ಸ್ತ್ರೀ. "हालचाल" ನೋ.

हलवई–वाई (ಹಲವಈ–ವಾಈ) ಪು. ಅರ. ಮಿಠಾಯಿಗಾರ.

**हलवा** (ಹಲವಾ) ಪು. ಅರ. ಒಂದು ಸಿಹಿತಿಂಡಿ, ಎಳ್ಳು ಸಕ್ಕರೆ, ಒಂದು ಜಾತಿಯ ಮೀನ.

**हलवायाच्या घरावेर तुळशीपत्र** (ಹಲವಾಯಾಚ್ಯಾ ಘರಾವರ ತುಳಶೀ ಪತ್ರ) (ಗಾದೆಯ ಮಾತು) ಮಿಠಾಯಿಗಾರನ ಮನೆಯ ಮೇಲೆ ತುಳಸೀ ಪತ್ರ, ಎರಡನೆಯವರ ಖರ್ಚಿನಿಂದಾದ ನೈವೇದ್ಯ.

**हलवान** (ಹಲವಾನ) ನ. ಅ. ಕಡಿಮೆ ಬೆಲೆಯ ಬಟ್ಟೆ.

**हलाक** (ಹಲಾಕ್) ವಿ. ಅರ. ಬಳಲುವ, ವ್ಯಥಿತ.

**हलाकी-खी** (ಹಲಾಕೀ-ಖೀ) ಸ್ತ್ರೀ. ಸಂ. ಕಡಿಮೆ ತನ, ದಾರಿದ್ರ್ಯ, ದುಃಖ, ಅಷ್ಟದಾರಿದ್ರ್ಯ, ಪೂರ್ತಿ ಯಾಗಿ ಉಪಯೋಗಿಸುವಿಕೆ, ಆಯಾಸ, ದಣಿವು, ಬಡತನದ ದುಃಖ, ನಿರ್ಗತಿಯ ತಾಪ.

**हलाल** (ಹಲಾಲ) ವಿ. ಕಾಯದೆಗೊಳಗಾದ, ಪ್ರಾಮಾ ಣಿಕ.

**हलाल करणे** (ಹಲಾಲ ಕರಣೇ) ಕ್ರಿ. ಸ. ಇಸ್ಲಾಮ ಧರ್ಮಾನುಸಾರ ಕೊಲ್ಲು.

**हलालाचा** (ಹಲಾಲಾಚಾ) ವಿ. ಇಸ್ಲಾಮಧರ್ಮದಂತೆ ಗಳಿಸಿದ.

**हलालखोर** (ಹಲಾಲಖೋರ) ಪು. ಸಂ. ಭಂಗಿ,ಮಲ ಗುಡಿಸುವವ, ಕಕ್ಕಸ ಬಳಿಕ.

**हलाहल** (ಹಲಾಹಲ) ನ. ಸಂ. ಹಲಾಹಲ, ಭಯಂಕರ ವಿಷ.

**हल्या** (ಹಲ್ಯಾ) ಉದ್ಗಾರ-ನಡೆ.

**हल्लक -ख** (ಹಲ್ಲಕ-ಖ) ವಿ. "**हलका**" ನೋ.

**हल्लाकी-खी** (ಹಲ್ಲಾಕೀ-ಖೀ) ವಿ. "**हलकी**" ನೋ.

**हल्लर** (ಹಲ್ಲರ) ಪು. ಸಂ. ಲಾಲಿ ಹಾಡು, ಜೋಗುಳ.

**हल्ला** (ಹಲ್ಲಾ) ಪು. ಹಿಂ. ಅರ. (ಹಮಾಲ) ದಾಳಿ, ಏರಾಟ, ಏರಿಹೋಗುವಿಕೆ, ಅಡರು. **-करणे** (ಕರಣೇ) ಮೇಲೆಬೀಳು, ಕಾಯಿಲೆಯಿಂದ ಮಲಗು.

**हल्लाहरकत** (ಹಲ್ಲಾಹರಕತ) ಸ್ತ್ರೀ. ಅರ. ವಿರೋಧ, ಕೈಹಾಕುವಿಕೆ ಹರಕತ್ತು ಮಾಡುವಿಕೆ.

**हल्लीं** (ಹಲ್ಲೀ) ಕ್ರಿ. ವಿ. ಅರ. (ಹಾಲೀ) ಸದ್ಯಕ್ಕೆ, ಇತ್ತೀಚೆಗೆ.

**हल्संधि** (ಹಲ್ಸಂಧಿ) ಸ್ತ್ರೀ. ಸಂ. ಒಡಂಬಡಿಕೆ, ಕುಳ ಗಳ ಕೂಡುವಿಕೆ.

**हवन** (ಹವನ) ನ. ದೇವತೆಗಳಿಗೆ ತೋರಿಸಿದ ನೈವೇದ್ಯ.

**हव(वा)लदील** (ಹವ(ವಾ)ಲದೀಲ) ವಿ. ಧೈರ್ಯ ಗೆಟ್ಟ, ಎದೆಗೆಟ್ಟ, ಎದೆಯೊಡೆದ.

**हवळा** (ಹವಳಾ) ಪು. ಸಂ. ಪುಠಾಣಿ, ಹುರಿಗಡಲೆ.

**हवा** (ಹವಾ) ಸ್ತ್ರೀ. ಸಂ. ಹವೆ, ಗಾಳಿ, ವಾಯು, ಸುಗ್ಗಿ, ಪರಿಸ್ಥಿತಿ.

**हवा खाणे** (ಹವಾಖಾಣೇ) ಕ್ರಿ. ಬೈಲಿನಲ್ಲಿ ತಿರುಗಾಡು, ಹೊರಹವೆಯಲ್ಲಿ ಅಡ್ಡಾಡು.

**हवाल** (ಹವಾಲ್) ಸ್ತ್ರೀ. ಅರ. ಸದ್ಯಸ್ಥಿತಿ, ಪರಿಸ್ಥಿತಿ, ನಡೆಯುವ ಸಂಗತಿ, ಇಂದಿನ ವಾತಾವರಣ.

**हवालदार** (ಹವಾಲ್‌ದಾರ್) ಪು. ಅರ. ಸುಭೇದಾರನ ಕೈಕೆಳಗಿನ ಅಧಿಕಾರಿ, ಹವಾಲದಾರ.

**हवालदील** (ಹವಾಲ್‌ದೀಲ್) ವಿ. ಫಾ. ಸಂಕಟ ಪಡುವ.

**हवाला** (ಹವಾಲಾ) ಪು. ಅರ. ಸ್ವಾಧೀನತೆ, ಭಾರ, ಹೊಣೆ, ಆಧೀನತೆ. ೨. ಸಾಕ್ಷಿ.

**हवाला-लीं-लें** (ಹವಾಲಾ-ಲೀ-ಲೇ) ಕ್ರಿ. ವಿ. ಕೈಯಲ್ಲಿ, ಅಧಿಕಾರದಲ್ಲಿ, ವಶದಲ್ಲಿ.

**हवाशीर** (ಹವಾಶೀರ್) ವಿ. ಶುದ್ಧಹವೆಯ ಗಾಳಿ ಯಾಡುವ, ತಂಪಾದ, ಉಲ್ಲಾಸದ, ತಂಗಾಳಿಯ, ಮಂದಮಾರುತದ.

**हवेली** (ಹವೇಲೀ) ಸ್ತ್ರೀ. ದೊಡ್ಡಮನೆ, ಮಾಳಿಗೆ ಮನೆ, ವಾಡೆ.

**हवि** (ಹವಿ) ಪು. ಆಹುತಿ, ದೇವತೆಗೆ ಕೊಟ್ಟ ಅಗ್ನಿ ಆಹುತಿ.

**हविष्य** (ಹವಿಷ್ಯ) ನ. ಆಹುತಿಯ ವಸ್ತು, ಪವಿತ್ರಾನ್ನ, ಧಾರ್ಮಿಕ ರೂಢಿಯ ಪಾಲನೆ.

**हव्य** (ಹವ್ಯ) ವಿ. ದೇವತೆಗಳ ಆಹುತಿ.

**हव्यकव्य** (ಹವ್ಯಕವ್ಯ) ನ. ಆಹುತಿ ಮುಂತಾದವು.

**हव्याशी-सी** (ಹವ್ಯಾಶೀ-ಸೀ) ವಿ. ಅರ. (ಹವಸೀ) ಲೋಭಿ, ದುರಾಸೆಯುಳ್ಳ, ಲಾಲಸೆಯ, ಆಶೆ ಬುರುಕ, ಲಾಲಸೆಯ.

**हव्यास** (ಹವ್ಯಾಸ್) ಪು. ಅರ. (ಹವಸ್) ಲಾಲಸೆ, ದುರಾಸೆ, ನೀರಡಿಕೆ, ದುರಾಸೆ.

**हशा** (ಹಶಾ) ಪು. ನಗೆ, ಹಾಸ್ಯ. ೨. ಅಪಹಾಸ್ಯ, ಪರಿಹಾಸ.

**हशी** (ಹಶೀ) ಸ್ತ್ರೀ. ಹಿಂ. ಗೇಲಿಮಾಡುವಿಕೆ, ಅಣಕಿಸು ವಿಕೆ, ಗೇಲಿ, ಅಪಹಾಸ್ಯ, ಅಣಕ.

**हशीखुशी** (ಹಶೀಖುಶೀ) ಸ್ತ್ರೀ. ಹಿಂ. ವಿನೋದ, ಚೇಷ್ಟೆ, ಆನಂದ, ಹರ್ಷ.

**हशील** (ಹಶೀಲ್) ವಿ. ಅರ. "**हाशील**" ನೋ.

**हंस** (ಹಂಸ) ಪು. ಸಂ. ಹಂಸಪಕ್ಷಿ.

**हंसगति** (ಹಂಸಗತಿ) ಸ್ತ್ರೀ. ಸಂ. **हंसगामिनी** (ಹಂಸಗಾಮಿನೀ) ಸ್ತ್ರೀ. ಮಂದಗತಿ, ಚೆಲುವಿನ ನಡಿಗೆ, ಹಂಸಗಾಮಿನಿ, ಹಂಸನಂತೆ ನಡೆಯುವವಳು.

**हसडणे** (ಹಸಡಣೇ) ಕ್ರಿ. ಬೈಯ್ಯು, ಕಿವಿ ಹಿಂಡು, ರೇಗಿಗೇಳು, ಬುದ್ಧಿಕಲಿಸು.

**हसडा** (ಹಸಡಾ) ಪು. ರಭಸದ ಜಗ್ಗುವಿಕೆ, ಜೋಲಿ ಹೊಡೆಯುವಿಕೆ.

**हसणे** (ಹಸಣೇ) ಕ್ರಿ. ಅ. ನಗು, ಆನಂದಬಡು, ಗೇಲಿಮಾಡು, ನಿಂದೆಮಾಡು, ಅಣಕಿಸು.

**हसत हसत दांत पाडणे** (ಹಸತ್ ಹಸತ್ ದಾತ್ ಪಾಡಣೇ) ಕ್ರಿ. ಸ. ನಗುನಗುತ್ತ ಸೊಕ್ಕಿಳಿಸು, ನಗನಗುತ್ತ ಬೈಯ್ಯು.

**हसून गोड करणे** (ಹಸೂನ್ ಗೋಡ್ ಕರಣೆ) ಕ್ರಿ. ಸ. ನಕ್ಕು ಅಪಮಾನ ಸಹಿಸು.

**हसायचे दात वेगळे–चावायचे वेगळे** (ಹಸಾಯಚೀ ದಾತ್‌ವೇಗಳೇ–ಚಾವಾಯಚೀ ವೇಗಳೇ)(ಗಾದೆಯ ಮಾತು) ಆನಂದದ, ಮತ್ತು ಕೋಪ ಬಗೆ ಬೇರೆ ಬೇರೆ.

**हसायला आहेत पोसायला नाहीत** (ಹಸಾಯಲಾ ಆಹೇತ್ ಪೋಸಾಯಲಾ ನಾಹೀತ್) ಬರಿ ಒಳ್ಳೆಯ ಮಾತು ಸಹಾಯ ಏನೂಇಲ್ಲ.

**हसायाजोगा** (ಹಸಾಯಾಜೋಗಾ) ವಿ. ಚೇಷ್ಟೆಗೆ ಕಾರಣ, ನಿಂದೆಗೆ ನಿಮಿತ್ತ.

**हसतमुख** (ಹಸತ್‌ಮುಖ) ವಿ. ನಗುಮೋರೆಯ, ನಗುಮೋರೆಯವನು.

**हसता** (ಹಸತಾ) ವಿ. ನಗುವವ, ವಿನೋದಿ, ಆನಂದಿತ, ಬೆಡಗುಗಾರ.

**हसबी** (ಹಸಬೀ) ಸ್ತ್ರೀ. ಅರ. ಚೀಲ.

**हसरा** (ಹಸರಾ) ವಿ. ನಗೆಮೊಗದವ. "**हसता**" ನೋ.

**हस(सो)ळी** (ಹಸ(ಸೋ)ಳೀ) ಸ್ತ್ರೀ. ಸರಿಗೆ, ಕೂಸಿನ ಕೊರಳ ಸರಿಗೆ.

**हसित** (ಹಸಿತ) ವಿ. ನಕ್ಕ, ವಿನೋದಿತ, ಸಂತುಷ್ಟ, ಆನಂದಿತ. ೨. ನ. ನಗೆ.

**हसू,–से** (ಹಸೂ–ಸೇ) ನ. ನಗುವಿಕೆ, ನಕ್ಕಾಟ, ನಿಂದೆ, ಬೈಗಳು.

**हंसी** (ಹಂಸೀ) ಸ್ತ್ರೀ.ಹಿಂ. ನಗುವಿಕೆ, ನಕ್ಕಾಟ, ನಿಂದೆ, ಹೆಣ್ಣುಹಂಸ, ಹಂಸಿನಿ.

**हंसात्मा** (ಹಂಸಾತ್ಮಾ) ಪು. ಜೀವಾತ್ಮಾ, ಪವಿತ್ರಾತ್ಮಾ.

**हस्त** (ಹಸ್ತ) ಪು. ಸಂ. ಕೈ, ಕೆರ, ಹಸ್ತ, ಪಾಣಿ, ೨. ಹಸ್ತನಕ್ಷತ್ರ. ೩. ಆನೆಯಸೊಂಡೆ.

**हस्तक** (ಹಸ್ತಕ) ಪು. ಸಂ. ದೂತ, ಸೇವಕ, ಆಳು, (ಅಪರಾಧದಲ್ಲಿ) ಸಹಾಯಕ, ಜೊತೆಗಾರ, ಕೆಳಗಿನ ಅಧಿಕಾರಿ, ಉಪಾಧಿಕಾರಿ.

**हस्तकौशल्य** (ಹಸ್ತಕೌಶಲ್ಯ) ನ.ಸಂ. ಹಸ್ತಕೌಶಲ್ಯ, ಕೈಕೆಲಸದ ಜಾಣ್ಮೆ, ಕೈಚಳಕ, ಕೈಚಾತುರ್ಯ.

**हस्तगत** (ಹಸ್ತಗತ) ವಿ. ಸಂ. ಸ್ವಾಧೀನವಾದ, ಕೈಯಲ್ಲಿಸಿಕ್ಕ, ತಾಬೆಯಲ್ಲಿಬಂದ.

**हस्तगुण** (ಹಸ್ತಗುಣ) ಪು. ಸಂ. ಕೈಗುಣ, ಸ್ವಭಾವ ಗುಣ. ೨. ದೈವ, ಭಾಗ್ಯ.

**हस्तचापल्य** (ಹಸ್ತಚಾಪಲ್ಯ) ನ. ಸಂ. ಕೈಚಳಕ, ಕುಶಲತೆ, ಕೌಶಲ್ಯ.

**हस्तदोष** (ಹಸ್ತದೋಷ) ಪು.ಸಂ. ಕೈಯ ಕೆಟ್ಟಗುಣ, ಹಸ್ತಾಪರಾಧ, ಕೈಯಿಂದಾದ ತಪ್ಪು.

**हस्तपत्र** (ಹಸ್ತಪತ್ರ) ನ. ಸಂ. ಬರಕೊಟ್ಟಪತ್ರ.

**हस्तपरीक्षा** (ಹಸ್ತಪರೀಕ್ಷಾ) ಸ್ತ್ರೀ. ಸಂ. ಸಾಮುದ್ರಿಕ ಶಾಸ್ತ್ರ, ಭಾಗ್ಯಶಾಸ್ತ್ರ.

**हस्तलाघव** (ಹಸ್ತಲಾಘವ) ಪು. ಸಂ. ಕೈಚಳಕ. ೨. ಕೌಶಲ್ಯ.

**हस्तसंकोच** (ಹಸ್ತಸಂಕೋಚ) ಪು. ನ. ಜಿಪುಣತನ, ಕಾರ್ಪಣ್ಯ, ಮಿತವ್ಯಯ.

**हस्ताक्षर** (ಹಸ್ತಾಕ್ಷರ) ನ. ಸಂ. ಕೈಬರೆಹ, ಹಸ್ತಾಕ್ಷರ. ೨. ಹಿಂ. ರುಜು, ಸಹಿ.

**हस्तिदंत** (ಹಸ್ತಿದಂತ) ಪು. ಸಂ. ಆನೆಯ ಕೋರೆ ಹಲ್ಲು, ಹಸ್ತಿದಂತ.

**हस्तिनापूर** (ಹಸ್ತಿನಾಪೂರ) ನ. ಸಂ. ಹಸ್ತಿನಾಪುರ, ಪ್ರಾಚೀನ ದಿಲ್ಲಿ, ದಿಲ್ಲಿಯ ಮೂಲಗ್ರಾಮ.

**हस्तिनी** (ಹಸ್ತಿನೀ) ಸ್ತ್ರೀ. ಹೆಣ್ಣಿನ ಒಂದುಪ್ರಕಾರ, ಹೆಣ್ಣಾನೆ.

**हस्ती** (ಹಸ್ತೀ) ಪು. ಸಂ. ಆನೆ.

**हस्ते** (ಹಸ್ತೇ) ಕ್ರಿ. ವಿ. ಕೈಯಿಂದ, ಸ್ವಂತ, ವಿದ್ಯಮಾನವಾಗಿ, ಪರವಾಗಿ.

**हस्तेपरहस्ते** (ಹಸ್ತೇಪರಹಸ್ತೇ) ಕ್ರಿ. ವಿ. ಸ್ವತಂತ್ರವಾಗಿ ಪರರಿಂದಾಗಿ, ತಾನಾಗಿ ಪರರಿಂದಾಗಿ.

**हस्तोदक** (ಹಸ್ತೋದಕ) ನ. ಸಂ. ಸನ್ಯಾಸಿಯ ಕೈಗೆ ಹಾಕಿದನೀರು, ಹಸ್ತೋದಕ, ಹಸ್ತನಕ್ಷತ್ರ ಮಳೆ.

**हं हं** (ಹಂ ಹಂ) ಹೌದು, ಹೌದು, ಹಂ, ಹಂ. (ಒಪ್ಪುವಿಕೆಯಲ್ಲಿ)

**ह ह ह** (ಹ ಹ ಹೆ) ಹಹಹ! (ನಗೆಯಉದ್ಗಾರ)

**हळ** (ಹಳ್) ಸ್ತ್ರೀ. ಬಿಸಿಗಾಳಿ. ೨. ಪು. ದೊಡ್ಡ ಕಾಲುವೆ, ನೇಗಿಲು.

**हळकुंड** (ಹಳಕುಂಡ್) ನ. ಅರಿಸಿಣಬೇರು. (ಗಾದೆಯ ಮಾತು)

**अर्ध्या हळकुंडानें पिवळा होणे** (ಅರ್ಧ್ಯಾ ಹಳಕುಂಡಾನೇ ಪಿವಳಾಹೋಣೇ) ಕ್ರಿ. ಸ್ತ್ರೀ. ಅಲ್ಪವಿದ್ಯಾ ಮಹಾಗರ್ವಿ, ಮೊಳಕಾಲಿಗೆ ಮುಂಡಾಸ ಸುತ್ತುವವರು.

**हळकुंडासाठीं लग्न मोडणे** (ಹಳಕುಂಡಾಸಾಠೀ ಲಗ್ನ ಮೋಡಣೇ) ಅಲ್ಪಅರಿಸಿಣದಿಂದ ಮದುಮಗನಾದ, ಅರಿಸಿಣಕ್ಕಾಗಿ ಮದುವೆ ಮುಗಿಯಿತು.

**हळद** (ಹಳದ್) ಸ್ತ್ರೀ. ಅರಿಸಿಣ.

**हळद लागणे** (ಹಳದ್‌ಲಾಗಣೇ) ಕ್ರಿ.ಅ. ಅರಿಸಿಣಹತ್ತು, ಮದುವೆಗಾರಂಭವಾಗು, ಲಗ್ನವಿಧಿ ಪ್ರಾರಂಭವಾಗು ಪ್ರತಿಷ್ಠೆಗೆಬರು, (ಶುಭಗಳಿಗೆಯಲ್ಲಿ).

**हळदीचा डाग लागणे** (ಹಳದೀಚಾ ಡಾಗ್ ಲಾಗಣೇ) (ಗಾದೆಯಮಾತು) ಕ್ರಿ. ಅ. ಲಗ್ನವಾದ ಮೇಲೆ ಮದುಮಗ/ಮದುಮಗಳು ಸಾಯು.

**हळदीचा गाभा** (ಹಳದೀಚಾಗಾಭಾ) ಪು. ಅತ್ಯಂತ ಸೌಂದರ್ಯ, ಅರಿಸಿಣ ಉಂಡೆಯ ಬಣ್ಣ.

**हळदकुंकू,–हळदीकुंकू** (ಹಳದಕುಂಕೂ–ಹಳದೀಕುಂಕೂ) ನ. ಅರಿಸಿಣ–ಕುಂಕುಮ, ಚೈತ್ರ–ನವರಾತ್ರಿಯಲ್ಲಿ ಆಚರಿಸುವ ಅರಿಸಿಣ–ಕುಂಕುಮ ಸಮಾರಂಭ.

**हळदी, हळदुवा** (ಹಳದೀ ಹಳದುವಾ) ವಿ. ಹಳದೀ ಬಣ್ಣದ.

**हळद्या** (ಹಳದ್ಯಾ) ಪು. ಕಾಮಿಣಿರೋಗ.

**हळबळा** (ಹಳಬಳಾ) ವಿ. ವಿನಯವುಳ್ಳವ, ಒಳ್ಳೆಯ ಸ್ವಭಾವದವ, ಸಮಾಜಪ್ರಿಯ, ಸಂಘಜೀವಿ.

**हळवट** (ಹಳವಟ್) ವಿ. ಮೆತ್ತಗಿನ, ಸಭ್ಯ ಬೇಗ ಹಣ್ಣಾಗುವ, ಲಘುವಿಚಾರದ, ಅಲ್ಪವಿಚಾರದ, ಫಲವಾಗದ, ಕ್ರಿಮಿಸಿದ್ಧವಾದ, ಅಲ್ಪಜ್ಞಾನದ, ಬಂಜೆ. (ಭೂಮಿ)

**भुकेचाहळवट** (ಭುಕೇಚಾಹಳವಟ್) ಹಸಿವೆ ತಡೆಯದವ.

**हळवार** (ಹಳವಾರ್) ವಿ. ಹಗುರು, ಮೆತ್ತಗಿನ, ನಾಜೂಕು.

**हळवे** (ಹಳವೇ) ನ. ಆಳವಿ, ಬತ್ತದ ಮೊದಲನೆಯ ಬೆಳೆ, ನವಲಿಬೆಳೆ.

**हळस** (ಹಳಸ್) ಪು. ನೇಗಿಲಹಿಡಿಕೆ.

**हळहळ हळहाळ** (ಹಳಹಳ್ ಹಳ್‌ಹಾಳ್) ಸ್ತ್ರೀ. ಹಳಹಳಿ, ಹಳಹಳಸುವಿಕೆ.

**हळहळणे** (ಹಳಹಳಣೇ) ಚಡಪಡಿಸು, ಅಶಾಂತಿ ಹೊಂದು, ಅಸಹ್ಯಪಡು, ಹಳಹಳಿಸು.

**हळहळीत** (ಹಳಹಳೀತ್) ವಿ. ಪಶ್ಚಾತ್ತಾಪಪಟ್ಟ, ದುಃಖಿತ.

**हळू** (ಹಳೂ) ಕ್ರಿ.ವಿ. ಹಗುರಾಗಿ, ಮಂದವಾಗಿ.

**हळू हळू, हळूच** (ಹಳೂ ಹಳೂ, ಹಳೂಚ್) ಕ್ರಿ. ವಿ. ಸಾವಕಾಶವಾಗಿ, ಹಗುರಾಗಿ. ೨. ತಿಳಿಯದಂತೆ, ತಪ್ಪಿಸಿ.

**हा** (ಹಾ) ಸರ್ವ. ಇವನು, ಈತನು.

**हा** (ಹಾ) ಉದ್ಗಾರ. ಹಾ! ಅಯ್ಯೋ! ತಡೆ! (ಆತಂಕದ ಉದ್ಗಾರ).

**हां** (ಹಾಂ) ಒಳ್ಳೆಯದು, (ಅನುಮತಿಸೂಚಕ ಅವ್ಯಯ).

**हाक** (ಹಾಕ್) ಸ್ತ್ರೀ. ಕರೆಯುವಿಕೆ, ಆವಾಹನ, ಕರೆ.

**हाक देणे** (ಹಾಕ್ ದೇಣೇ) ಕ್ರಿ. ಸಂ. ಕೂಗು, ಕೂಗಿಕೊಳ್ಳು, ಒದರಾಡು.

**हाक मारणे** (ಹಾಕ್ ಮಾರಣೇ) ಕ್ರಿ. ಸ. ಒದರಿ ಕರೆ, ಕೂಗಿ ಕರೆ.

**हाक मारणे** (ಹಾಕ್ ಮಾರಣೇ) ಕ್ರಿ. ಸ. ನಿಂದಿಸು, ದೂರಿಕೊಳ್ಳು.

**हाक कमी होणे** (ಹಾಕ್ ಕಮೀ ಹೋಣೇ) ಕ್ರಿ. ಸ. ಹೊಯ್‌ದುಕೊಳ್ಳು, ಕಡಿಮೆಯಾಗು, ಒದರು ನಿಲ್ಲು.

**हाकणे** (ಹಾಕಣೇ) ಕ್ರಿ. ಸ. (ಬಂಡಿ ಮುಂ.) ಹೊಡೆ, ನಡೆಸು. ೨. ನುಗಿಸು, ಮುಂದುವರೆಸು, ಸಾಗಿಸು, ದೂರದೂಡು.

**हाकरणे** (ಹಾಕರಣೇ) ಕ್ರಿ. "**हंकारणे**" ನೋ.

**हाकलणे** (ಹಾಕಲಣೇ) ಕ್ರಿ. ಸ. "**हकालणे**" ನೋ. ಹೊರಗೆಹಾಕು.

**हाकविणे** (ಹಾಕವಿಣೇ) ಕ್ರಿ. ಸ. "**हकालणे**" ನೋ.

**हाकहूल** (ಹಾಕ್‌ಹೂಲ್) ಸ್ತ್ರೀ. "**हाक**" ನೋ.

**हाकटणे** (ಹಾಕಟಣೇ) ಕ್ರಿ. ಸ. ಕರೆ, ಕೂಗು. ೨. ದೂರಿಕೊ.

**हाकाटी–टि** (ಹಾಕಾಟೀ –ಟಿ) ಸ್ತ್ರೀ. ದೂರಿಕೊ, ಬೊಬ್ಬೆ.

**हाकिमी** (ಹಾಕಿಮೀ) ಸ್ತ್ರೀ. ಅರ. ರಾಜಧರ್ಮ, "हकिमाई" ನೋ.

**हाकिमाई** (ಹಾಕಿಮಾಈ) ಸ್ತ್ರೀ. ಅರಸನ ಕರ್ತವ್ಯ.

**हाकीम** (ಹಾಕೀಮ್) ಪು. ಅಧಿಕಾರ ನಡೆಯಿಸುವವನು, ರಾಜ, ಅರಸು.

**हाजिरी, हाजिरीपट** (ಹಾಜಿರೀ, ಹಾಜಿರೀಪಟ್) ಸ್ತ್ರೀ. ಪು. ಅರ. ಹಾಜರಿ, ಹಾಜರಿಪಟ, ಉಪಸ್ಥಿತಿ, ಆಸ್ತಿತ್ವ.

**हांजी** (ಹಾಂಜೀ) ಅವ್ಯಯ. ದೈನ್ಯ, ದೀನತನದಿಂದ.

**–हाजी करणे** (ಹಾಜೀ ಕರಣೇ) ಕ್ರಿ. ಸ. ಮುಖಸ್ತುತಿಮಾಡು, ದೈನ್ಯತೋರು.

**हाजीर** (ಹಾಜೀರ್) ವಿ. ಸಂ. ಹಾಜರಿದ್ದ, ಉಪಸ್ಥಿತ.

**हाजीर तो वजीर** (ಹಾಜೀರ್ ತೋ ವಜೀರ್) ಗಾದೆ. ಮುಂದೆ ನಿಂತವನೇ ಮುಂದಾಳು, ಎದುರಿಗೆ ಇದ್ದವನು ಲಾಭಹೊಂದುವನು.

**हाजीर जबाब–जाब** (ಹಾಜೀರ್ ಜಬಾಬ್-ಜಾಬ್) ಪು. ತಡೆಯದೆ ಉತ್ತರಕೊಡುವವನು, ಕಟ್ಟುತ್ತರ ಕೊಡುವವನು, ವಿನೋದಾತ್ಮಕ ಪ್ರತ್ಯುತ್ತರ ನೀಡುವವನು.

**हाजीरजाबी–जबाबी** (ಹಾಜೀರ್‌ಜಾಬೀ–ಜಬಾಬೀ) ಸ್ತ್ರೀ. ತಟ್ಟನೆ ಉತ್ತರಕೊಡುವ, ಕಟ್ಟುತ್ತರ ಕೊಡುವ.

**हाजीर जामीन** (ಹಾಜೀರ ಜಾಮೀನ್) ಪು. ಅರ. ಹೊಣೆಗಾರಿಕೆ, ಜಾಮೀನ ಮೇಲೆ ಬಿಡಿಸುವಿಕೆ, ಜಾಮೀನದಾರ, ಹೊಣೆಗಾರ.

**हाट** (ಹಾಟ್) ಪು.ಕ. (ಹಟ್ಟಿ) ಸಂತೆ, ಪೇಟೆ.

**हाटबाजार** (ಹಾಟ್‌ಬಾಜಾರ್) ಪು. ಸಂತೆಮಾಡುವಿಕೆ.

**हाटक** (ಹಾಟಕ) ನ. ಬಂಗಾರ.

**हाटणें** (ಹಾಟಣೇ) ಕ್ರಿ. ಸಂ. ಜಜ್ಜಿ ಗಾಯಗೊಳಿಸು, ಬಡೆ, ಕುಟ್ಟು.

**हाड** (ಹಾಡ್) ನ. ಎಲುವು, ಎಲುಬು, ಭಂಡಾರ, ಉಗಮ, ಚೌಕಟ್ಟು.

**–हाडाचा** (–ಹಾಡಾಚಾ) ವಿ. ಅನುಭವಿ, ನಿಜವಾದ, ಮೂಲಸ್ವಭಾವದ.

**एका हाडाचा** (ಏಕಾ ಹಾಡಾಚಾ) ವಿ. ಒಂಟೆಲುಬಿನ, ಬಡಕ, ಅದೇ ಗುಂಪಿನವ.

**हाडाचा खंबीर,–बळकट** (ಹಾಡಾಚಾ ಖಂಬೀರ್–ಬಳಕಟ್) ವಿ. ಉತ್ತಮ ಮೈಕಟ್ಟಿನ, ಗಟ್ಟಿ ಮೈಕಟ್ಟಿನ.

**हाडाच्या काडचा करणे** (ಹಾಡಾಚ್ಯಾ ಕಾಡ್ಯಾ ಕರಣೇ) ದೇಹ ಸವಿಸು, ರಕ್ತ ಸುರಿಸು, ಎಲುವಿನ ಎಣ್ಣೆ ತೆಗೆ, ಎಲುವಿನ ನೀರುತೆಗೆ.

**हाडाला खिळणे** (ಹಾಡಾಲಾ ಖಿಳಣೇ) ಕ್ರಿ. ಅ. ರೋಗ ಗಂಟುಬೀಳು, ರೋಗ ಮನೆಮಾಡು.

**हाडी घाव घालणे** (ಹಾಡೀ ಘಾವ್ ಘಾಲಣೇ) ಕ್ರಿ. ಅ. ಮರ್ಮ ಭೇದಿಸು, ಚುಚ್ಚುಮಾತು ಆಡು.

**हाडी विसावणे** (ಹಾಡೀ ವಿಸಾವಣೇ) ಕ್ರಿ. ಅ. ದ್ವೇಷ ಹಿಡಿ, ಪಶ್ಚಾತ್ತಾಪಪಡು.

**हाडे उजवणे–शेकणे** (ಹಾಡೇ ಉಜವಣೇ – ಶೇಕಣೇ) ವಿವಾಹಿತನಾಗು, ಮದುವೆಯಾಗು.

**हाडे घुसळणे–मोडणे** (ಹಾಡೇ ಘುಸಳಣೇ–ಮೋಡಣೇ) ಕ್ರಿ. ಸ. ದೇಹ ಸವಿಸು, ರಕ್ತ ಸುರಿಸು.

**हाडे निघणे** (ಹಾಡೇ ನಿಘಣೇ) ಕ್ರಿ. ನ. ಸೊರಗು, ಎಲುವು ಹೊರಬೀಳು.

**हाडकपाळचा** (ಹಾಡ್‌ಕಪಾಳ್ಯಾ) ವಿ. ದುರ್ದೈವಿ.

**हाडकपाळी** (ಹಾಡ್‌ಕಪಾಳೀ) ವಿ. ಹಟಮಾರಿ, ಛಲಕ್ಕೆ ಬೀಳುವ.

**हाडकी** (ಹಾಡಕೀ) ಸ್ತ್ರೀ. ಸಣ್ಣ ಎಲುಬು.

**हाडकुळी** (ಹಾಡಕುಳೀ) ವಿ. ಬಡಕ, ಸೊರಗಿದ, ಸವೆದ.

**हाडकुरकटी** (ಹಾಡಕುರಕಟೀ) ಸ್ತ್ರೀ.
**हाडजर** (ಹಾಡಜರ್) ಪು.
**हाडीज्वर** (ಹಾಡೀಜ್ವರ) ಪು.
} ಜೀರ್ಣ ಜ್ವರ, ಎಲುಬಿನಲ್ಲಿ ಯಜ್ವರ, ಎಲುಬಿನ ಜ್ವರ.

**हाडखाऊ** (ಹಾಡಖಾಊ) ವಿ. ಕೂಳಬಕ್ಕ, ಅಸ್ಥಿಭಕ್ಷಕ.

**हाडगळ** (ಹಾಡಗಳ್) ವಿ. ತಿಳುವಾದ, ತೆಳ್ಳಗಾದ, ಬಡಕಲು, ಎಲುಬಿನಹಂದರವಾದ, ಸೊರಗಿದ, ಕೃಶವಾದ, ಕೃಶ, ಕಂಗೆಟ್ಟ, ವಿಷಣ್ಣ, ಚಿಂತೆಯಿಂದ ಸೊರಗಿದ.

**हाडगात** (ಹಾಡಗಾತ್) ನ. ಶರೀರಪ್ರಕೃತಿ, ಮೈಕಟ್ಟು, ದೇಹರಚನೆ, ಶರೀರದ ಆಕಾರ.

**हाडपेर** (ಹಾಡಪೇರ್) ನ. ಎಲುವು ಮತ್ತು ಕೀಲು, ಸಾಮಾನ್ಯ ಮೈಕಟ್ಟು.

**हाडळ–ळी** (ಹಾಡಳ್–ಳೀ) ಸ್ತ್ರೀ. ಭೂತ, ಪಿಶಾಚಿ, ಹೆಣ್ಣು ದೆವ್ವ.

**हाडळ** (ಹಾಡಳ್) ವಿ. "हाडगळ" ನೋ.

**हाडवैर** (ಹಾಡವೈರ) ನ. ಕಟ್ಟಾವೈರತ್ವ, ಬದ್ಧದ್ವೇಷ.

**हाडांचासापळा,–पंजर**(ಹಾಡಾಂಚಾ ಸಾಪಳಾ–ಪಂಜರ) ಪು. ಎಲುಬಿನಹಂದರ, ಎಲುವಿನಹಂದರ, ಅಸ್ಥಿ ಪಂಜರ, ಎಲಃಬಿನಗೂಡು, ತೀರಬಡಕ ಮನುಷ್ಯ.

**हांडा** (ಹಾಂಡಾ) ಪು. ಹಂಡೆ, ನೀರಿನ ದೊಡ್ಡ ಪಾತ್ರೆ.

**हांडी** (ಹಾಂಡೀ) "**हुंडी**" ನೋ. ಹಂಡೆ. ೨. ಹುಗಿದಿಟ್ಟ ಧನ.

**हांडीबाग** (ಹಾಂಡೀಬಾಗ್) ಪು. ಮಾಟಮಾಡುವವ. ೨. ಚತುರ.

**हांडीमडकी** (ಹಾಂಡೀಮಡಕೀ) ನ. ಬಹು. ಮಣ್ಣಿನ ಪಾತ್ರೆಗಳು.

**हाडुक** (ಹಾಡೂಕ್) ಸಣ್ಣಎಲುಬು, ಮೂಳೆಯ ತುಂಡು.

**हाडुक बांधणे,–रोवणे** (ಹಾಡೂಕ್ ಬಾಂಧಣೇ–ರೋವಣೇ) ಕ್ರಿ. ಸಂ. ಹೆಂಗಸರ ಸಹವಾಸದಲ್ಲಿ ಬೀಳು, ಹೊಣೆಗಾರಿಕೆಹೊರು. ೨. ಕ್ರಿ. ಅ. ಕುಲಗೆಡು.

**हाडोहाड** (ಹಾಡೋಹಾಡ್) ಕ್ರಿ. ವಿ. ಎಲುಬು ಎಲುಬಿನಲ್ಲಿ, ಪ್ರತಿ ಎಲುಬಿನಲ್ಲಿ.

**हाडचा** (ಹಾಡ್ಯಾ) ವಿ. ಒತ್ತಾಯದ, ಅಗತ್ಯದ, ಬಲುಮೆಯ, ಜುಲುಮೆಯ, ಸೊರಗಿದ, ಬಡಕಾದ, ಕೃಶವಾದ.

**हाडचाव्रण** (ಹಾಡ್ಯಾವ್ರಣ) ಪು. ಎಲುಬುಹುಣ್ಣು.

**हाण** (ಹಾಣ) ಸ್ತ್ರೀ. ಹೊಡೆತ, ಕೇಡು, ನಷ್ಟ.

**हाणणे** (ಹಾಣಣೇ) ಕ್ರಿ. ಹೊಡೆ, ಬಡೆ, ಗಾಯಮಾಡು. ೨. ತಿನ್ನು.

**हाणामारी** (ಹಾಣಾಮಾರೀ) ಸ್ತ್ರೀ. } ಹೊಡೆದಾಟ,
**हाणाहाणी** (ಹಾಣಾಹಾಣೀ) ಸ್ತ್ರೀ. } ಬಡೆದಾಟ.

**हात** (ಹಾತ) ಪು. ಕೈ, ಬಾಜು, ಅಧಿಕಾರ, ಕೌಶಲ್ಯ, ಸಹಾಯ, ಕೈಹಚ್ಚುವಿಕೆ.

**हात आटोपणे–आवरणे** (ಹಾತ್ ಆಟೋಪಣೇ–ಆವರಣೇ) ಕ್ರಿ. ಸ. ಕೈತಕ್ಕೊಳ್ಳು, ಹಿಂಜರಿ, ಪಕ್ಷಬಿಡು.

**हात ओढवणे** (ಹಾತ್ ಓಢವಣೇ) ಕ್ರಿ. ಸ. ಹಿಡಿಯಲಿಕ್ಕೆ ಧಾವಿಸು, ಕೈಚಾಚು.

**हात ओला तर मैत्र भला, नाहीतर पडला अबोला** (ಹಾತ್ ಓಲಾ ತರ ಮೈತ್ರ ಭಲಾ, ನಾಹೀತರ ಪಡಲಾ ಅಬೋಲಾ) (ಗಾದೆಯಮಾತು) ಕೈಯಲ್ಲಿ ಬೆಲ್ಲವಿದ್ದರೆ ಜನರೆಲ್ಲ ಗೆಳೆಯರು ಇಲ್ಲದಿದ್ದರೆ ಎಲ್ಲರೂ ಮೂಕರು.

**हात करणे** (ಹಾತಕರಣೇ) ಕ್ರಿ. ಸಂ. ಹೊಡೆ, ಬಡೆ.

**हात कापून देणे** (ಹಾತ್ ಕಾಪೂನ್ ದೇಣೇ) ಕ್ರಿ. ಅ. ಬರಕೊಟ್ಟು ಕೈಕಟ್ಟಿಕೊಳ್ಳುವಿಕೆ.

**हात गुंतणे** (ಹಾತ್ ಗುಂತಣೇ) ಕ್ರಿ. ಅ. ಕೈಸಿಕ್ಕು ಬೀಳು, ಕೈಸಿಗು, ಕೈ ಬಂಧಿತವಾಗು.

**हात घालणे** (ಹಾತ್ ಘಾಲಣೇ) ಕ್ರಿ. ಸಂ. ಕೈಹಾಕು, ಭಾಗವಹಿಸು, ಪ್ರಾರಂಭಿಸು, ಆರಂಭಿಸು.

**हात चालणे** (ಹಾತ್ ಚಾಲಣೇ) ಕ್ರಿ. ಸಂ. ಅಧಿಕಾರ ನಡೆಯಿಸು, ವರ್ಚಸ್ಸು ನಡೆಯಿಸು.

**हात चेपणे** (ಹಾತ್ ಚೇಪಣೇ) ಕ್ರಿ. ಸ. ಆಸೆತೋರಿಸು, ಕೈ ಲಂಚಕೊಡು, ಕಳ್ಳತನದಿಂದ ಲಂಚಕೊಡು.

**हात जोडणे** (ಹಾತ್ ಜೋಡಣೇ) ಕ್ರಿ. ಸ. ಕೈಜೋಡಿಸು, ನಮಸ್ಕಾರಮಾಡು, ಶರಣುಬರು, ವಶವಾಗು, ಅಧೀನನಾಗು.

**हात झाडणे** (ಹಾತ್ ಝಾಡಣೇ) ಕ್ರಿ. ಸ. ಅಲ್ಲಗಳೆ, ದಿವಾಳಿತೆಗೆ, ಕೈಝಾಡಿಸು, ತಿರಸ್ಕರಿಸು, ತಳ್ಳಿಹಾಕು.

**हात टाकणे** (ಹಾತ್ ಟಾಕಣೇ) ಕ್ರಿ. ಸಂ. ಹೊಡೆ, ಬಡೆ, ಏಟುಹಾಕು.

**हात टेकणे** (ಹಾತ್ ಟೇಕಣೇ) ಕ್ರಿ. ಅ. ಸಾಕುಸಾಕಾಗು, ಕೈಯೂರು, ಸೋಲನ್ನು ಒಪ್ಪಿಕೊ, ಅಶಕ್ತನಾಗು.

**हात तोडणे** (ಹಾತ್ ತೋಡಣೇ) ಕ್ರಿ. ಸಂ. ಕೈಕತ್ತರಿಸು, ಕೈಕಡಿ, ಬರೆದುಕೊಟ್ಟು ಕೈಕಟ್ಟಿಕೊ.

**हात दाखविणे** (ಹಾತ್ ದಾಖವಿಣೇ) ಕ್ರಿ. ಸ. ಕೈತೋರಿಸು, ಶಿಕ್ಷಿಸು, ಸೇಡುತೀರಿಸು, ಶಿಕ್ಷೆಕೊಡು, ದಂಡಿಸು.

**हात दाबणे** (ಹಾತ್ ದಾಬಣೇ) ಕ್ರಿ. ಸ. ಕೈಒತ್ತು, ಕೈಯ್ಯೊತ್ತು, ಲಂಚಕೊಡು.

**हात देणे** (ಹಾತ್ ದೇಣೇ) ಕ್ರಿ. ಅ. ಸಹಾಯಮಾಡು, ಅನುಕೂಲನಾಗು.

**हात धरून जाणे** (ಹಾತ್ ಧರೂನ್ ಜಾಣೇ) ಕ್ರಿ. ಅ. ಕೈಹಿಡಕೊಂಡು ನಡೆ, ರಕ್ಷಿಸು, ಸಹಾಯದಿಂದ ಸಾಗು.

**हात धुवून पाठीस लागणे** (ಹಾತ್ ಧುಊನ್ ಪಾಠೀಸ್ ಜಾಣೇ) ಕ್ರಿ. ಅ. ಕೈತೊಳೆದು ಬೆನ್ನುಹತ್ತು, ಬೆನ್ನಟ್ಟು.

**हात नाचविणे** (ಹಾತ್ ನಾಚವಿಣೇ) ಕ್ರಿ. ಸ. ಕೈಕುಣಿಸು, ಕೈಮಾಡು, ಚೇಷ್ಟೆಮಾಡು, ಎದುರಿಸು, ತೊಂದರೆಯನ್ನೊಡ್ಡು.

**हात पाय गाळणे** (ಹಾತ್ ಪಾಯ್ ಗಾಳಣೇ) ಕ್ರಿ. ಅ. ಕೈಕಾಲುಸೋಲು, ಧೈರ್ಯಬಿಡು, ಅಂಜು, ಗಾತ್ರ ಶಿಥಿಲವಾಗು.

**हात पाय गुंडाळणे** (ಹಾತ್ ಪಾಯ್‌ಗುಂಡಾಳಣೇ) ಕ್ರಿ. ಸ. ಕೈಕಾಲು ಜಗ್ಗಿಬರು, ಶಕ್ತಿಹೀನನಾಗು, ಅಂತ್ಯ ಯಾತನೆ ಭೋಗಿಸು.

**हातपाय चोळणे** (ಹಾತ್‌ಪಾಯ್ ಚೋಳಣೇ) ಕ್ರಿ. ಸ. ಸೇಡುತೀರಿಸು, ಗಾಯಗೊಳಿಸು, ಶಾಪಕೊಡು.

**हातपाय झाडणे** (ಹಾತ್‌ಪಾಯ್ ಝಾಡಣೇ) ಕ್ರಿ. ಸ. ಕೈಕಾಲು ಝಾಡಿಸು, ಸಾಯು, ಅಂತ್ಯ ಪ್ರಯತ್ನಮಾಡು, ಕೊನೆಯ ಪ್ರಯತ್ನಮಾಡು.

**हातपाय ताणणे** (ಹಾತ್‌ಪಾಯ್ ತಾಣಣೇ) ಕ್ರಿ. ಸ. ಕೈಕಾಲು ಉದ್ದಮಾಡು, ಕೈಕಾಲು ಚಾಚು.

**हातपाय पसरणे** (ಹಾತ್‌ಪಾಯ್ ಪಸರಣೇ) ಕ್ರಿ. ಸಂ. ಕೈಕಾಲು ವಿಸ್ತರಿಸು, ಮರ್ಯಾದೆ ಮೀರಿಹೋಗು, ಕೈಕಾಲು ಚಾಚು, ಅತಿಕ್ರಮಣಮಾಡು.

**हातपाय पाखडणे** (ಹಾತ್‌ಪಾಯ್ ಪಾಖಡಣೇ) ಕ್ರಿ. ಸ. ಕೈಕಾಲು ಬಡೆ, ವಿಕಾರವಶನಾಗು, ಸಾಯು.

**हातपाय फुटणे** (ಹಾತ್‌ಪಾಯ್ ಫುಟಣೇ) ಕ್ರಿ. ಸ. ಕೈಕಾಲುನಡೆ, ಕೈಕಾಲುಬರು, ರೆಕ್ಕೆಬರು, ದೊಡ್ಡವನಾಗು, ಗಳಿಸುವವನಾಗು.

**हातपाय मोडणे** (ಹಾತ್‌ಪಾಯ್ ಮೋಡಣೇ) ಕ್ರಿ. ಸ. ಕೈಕಾಲು ಮುರಿ, ಅಡ್ಡಿಮಾಡು, ವಿರೋಧಿಸು, ನಿರೋಧಿಸು, ತಡೆಯಿಸು.

**हातपाय मोडून येणे** (ಹಾತ್‌ಪಾಯ್ ಮೋಡೂನ್ ಯೇಣೇ) ಕ್ರಿ. ಸಂ. ಜ್ವರದ ಲಕ್ಷಣ ತೋರು.

**हातपाय हलविणे** (ಹಾತ್‌ಪಾಯ್ ಹಲವಿಣೇ) ಕ್ರಿ. ಸ. ಕೆಲಸ ಪ್ರಾರಂಭಿಸು, ಕೈಕಾಲು ಅಲುಗಾಡಿಸು, ಕೃತಿಮಾಡು, ಚಳುವಳಿಮಾಡು.

**हातबोट–भार–लावणे** (ಹಾತ್‌ಬೋಟ್ – ಭಾರ್ – ಲಾವಣೇ) ಕ್ರಿ. ಸ. ಸಹಾಯಮಾಡು, ಕೈನೀಡು, ಮೇಲೆಕ್ಕೆಬ್ಬಿಸು.

**हात मारणे** (ಹಾತ ಮಾರಣೇ) ಕ್ರಿ. ಸ. ತಿನ್ನು, ಅಪಹರಿಸು, ಸ್ವಾರ್ಥತೋರು.

**हात मोडणे** (ಹಾತ ಮೋಡಣೇ) ಕ್ರಿ. ಸ. ಕೈನಿಲ್ಲು, ಅಸಹಾಯನಾಗು, ವ್ಯವಹಾರ :ನಿಲ್ಲು, ದೀನ–ಹೀನನಾಗು, ಕಾಣಿಕೆ ಒಲ್ಲೆನ್ನು, ಬೇಡವೆನ್ನು, ಒಪ್ಪದಿರು.

**हात राखणे** (ಹಾತ ರಾಖಣೇ) ಕೈಬಿಗಿಹಿಡಿ, ಮಿತವ್ಯಯದಿಂದಿರು, ಕೈಕಾಯು.

**हातचा** (ಹಾತಚಾ) ವಿ. ತನ್ನ, ತನ್ನ ಸ್ವಾಧೀನದ.

**हातचा राखणे** (ಹಾತಚಾ ರಾಖಣೇ) ಕ್ರಿ. ಸ. ಕೈಕಾದುಕೊಂಡಿರು, ಕೂಡಿಡು.

**हात राखून** (ಹಾತ ರಾಖೂನ) ಕ್ರಿ. ವಿ. ಕೈಬಿಗಿಹಿಡಿದು, ಕೈಕಾದು.

**हात लावणे** (ಹಾತ ಲಾವಣೇ) ಸಹಾಯಮಾಡು, ಕೈಹಚ್ಚು, ಕೆಲಸ ಪ್ರಾರಂಭಿಸು. ೨. ಮುಟ್ಟು, ಪೀಡಿಸು.

**हात बसणे** (ಹಾತ ಬಸಣೇ) ಕ್ರಿ. ಅ. ಕೈತರಬೇತಿ ಹೊಂದು, ರೂಢಿಯಿಂದ ಕೈತರಬೇತಾಗು.

**हाताखाली घालणे** (ಹಾತಾಖಾಲೀ ಘಾಲಣೇ) ಕ್ರಿ. ಅ. ಅಧಿಕಾರದಲ್ಲಿ ತಕ್ಕೊಳ್ಳು, ಅಧಿಕಾರ ನಡೆಯಿಸು, ತನ್ನ ಸಂರಕ್ಷಣೆಯಲ್ಲಿ ತಕ್ಕೊಳ್ಳು.

**हातांत कंकण बांधणे** (ಹಾತಾತ್ ಕಂಕಣ ಬಾಂಧಣೇ) ಕ್ರಿ. ಸ. ಪ್ರತಿಜ್ಞೆಮಾಡು, ಕೈಯಲ್ಲಿ ಕಂಕಣಕಟ್ಟು.

**हातातोंडांस येणे** (ಹಾತಾತೋಂಡಾಸ್‌ಯೇಣೆ) ಕೈಬಾಯಿಗೆಬರು, ಗಳಿಸುವವನಾಗು, ದೊಡ್ಡವನಾಗು.

**हातापायाचा चौरंग होणे** (ಹಾತಾಪಾಯಾಚಾ ಚೌರಂಗ ಹೋಣೇ) ಕ್ರಿ. ಅ. ಅಶಕ್ತತೆಯಿಂದ ಮುದ್ದೆಯಾಗು, ಕೈಕಾಲು ಇಲ್ಲದಾಗು, ವಾತದಿಂದ ಮೈಮುದ್ದೆಯಾಗು.

**हातापाया पडणे** (ಹಾತಾಪಾಯಾಪಡಣೇ) ಕ್ರಿ. ಅ. ಕೈಕಾಲುಬೀಳು, ದೀನನಾಗು, ಅಣ್ಣಾ, ಅಪ್ಪಾ ಅನ್ನು ಶರಣುಬಾ.

**हातावर तुरी देणे** (ಹಾತಾವರ ತುರೀ ದೇಣೇ) ಕ್ರಿ. ಸ. ಓಡಿಹೋಗು, ಪಾರಾಗು, ಕೈಕೊಡು.

**हातावर मिळवणे** (ಹಾತಾವರ್‌ಮಿಳವಣೇ) ಕ್ರಿ. ಸ. ದುಡಿದುಉಣ್ಣು, ದೊರಕಿಸಿತಿನ್ನು.

**हातावर हात देणे–मारणे** (ಹಾತಾವರ್ ಹಾತ್ ದೇಣೇ –ಮಾರಣೇ) ಕ್ರಿ. ಸ. ಕೈಮೇಲೆ ಕೈಹಾಕು. ಒಪ್ಪುವಚನಕೊಡು.

**हाती देणे** (ಹಾತೀದೇಣೇ) ಕ್ರಿ. ಸ. ಕೈಯಲ್ಲಿಕೊಡು, ಒಪ್ಪಿಸು, ಸ್ವಾಧೀನಪಡಿಸು.

**हातीपायी उतरणे** (ಹಾತೀಪಾಯೀ ಉತರಣೇ) ಕ್ರಿ. ಅ. ಸಂಕಟದಿಂದ ಪಾರಾಗು, ಮುಕ್ತನಾಗು.

**हातीपायीं सुटणे** (ಹಾತೀಪಾಯೀ ಸುಟಣೇ) ಕ್ರಿ. ಸ. ಸಂಪೂರ್ಣ ಮುಕ್ತನಾಗು.

**हातींपायीं लागणे,–पडणे** (ಹಾತೀಪಾಯೀ ಲಾಗಣೇ–ಪಡಣೇ) ಕ್ರಿ. ಸ. ಕೈಕಾಲುಬೀಳು, ಶರಣುಬಾ, ದೀನನಾಗು, ಕಾಲಿಗೆಬೀಳು.

**हातीपायी येणे** (ಹಾತೀಪಾಯೀ ಯೇಣೇ) ಕ್ರಿ. ಅ. ಹೊಣೆಗಾರಿಕೆಯಿಂದ ಹಣ್ಣಾಗು, ಲೀನವಾಗು.

**हाती भोपळा घेणे** (ಹಾತೀ ಭೋಪಳಾ ಘೇಣೇ) ಕ್ರಿ. ಸ. ದಿವಾಳಿಖೋರನಾಗು, ಹಾನಿಹೊಂದು, ಕೈಯಲ್ಲಿ ಬದನೆಕಾಯಿಬರು, ಕುಂಬಳಕಾಯಿಬರು.

**दोनाचे चार हात होणे** (ದೋನಾಚೇ ಚಾರ ಹಾತ್ ಹೋಣೇ) ಕ್ರಿ. ಅ. ಎರಡುಕೈ ನಾಲ್ಕುಕೈಆಗು, ವಿವಾಹಿತನಾಗು.

**चारहात करणे** (ಚಾರಹಾತ್ ಕರಣೇ) ಕ್ರಿ. ಸ. ಜಗಳವಾಡು, ಹೊಡೆದಾಡು, ವಿರೋಧಮಾಡು.

**रिकाम्या हाताने** (ರಿಕಾಮ್ಯಾ ಹಾತಾನೇ) ಕ್ರಿ. ವಿ. ಬರಿಗೈಯಿಂದ, ಒಣಕೈಯಿಂದ, ಸಾಧನವಿಲ್ಲದೆ.

**हातचे सोडून पळत्याच्या पाठीस लागणे** (ಹಾತಚೇ ಸೋಡೂನ್ ಪಳತ್ಯಾಚಾ ಪಾಠೀಸ್ ಲಾಗಣೇ) ಕೈಯಲ್ಲಿದ್ದುದನ್ನು ಬಿಟ್ಟು ಓಡುವದನ್ನು ಹಿಡಿ.

**हातच्या काकणाला आरसा कशाला?** (ಹಾತಚ್ಯಾ ಕಾಕಣಾಲಾ ಆರಸಾ ಕಶಾಲಾ?) ಗಾದೆಯ ಮಾತು. ಅಂಗೈಹುಣ್ಣಿಗೆ ಕನ್ನಡಿ ಏಕೆ? ಸೂರ್ಯನನ್ನು ನೋಡು, ದೀವಟಿಗೆ ಏಕೆ?

**हातउगावा** (ಹಾತ್‌ಉಗಾವಾ) ಪು. ಸೇಡು ತೀರಿಸುವಿಕೆ, ಆಡಚಣೆಯಿಂದ ಪಾರಾಗುವಿಕೆ.

**हातउचल** (ಹಾತ್‌ಉಚಲ್) ಸ್ತ್ರೀ. ಮೂಲಧನ ಸವೆಯುವಿಕೆ, ಬಂಡವಲು ಕಳೆಯುವಿಕೆ.

**हातउसना** (ಹಾತಉಸನಾ) ವಿ. ಕೈಗಡ, ಸಾಲ.

**हातकरीण** (ಹಾತಕರೀಣ) ಸ್ತ್ರೀ. ಆಕಳು, ಹಸು, ಎಮ್ಮೆ, ಹಿಂಡುವದನ, ಹೈನದ ದನ.

**हातकाम** (ಹಾತ್‌ಕಾಮ್) ನ. ಕೈಕೆಲಸ, ಸ್ವಂತ ಕೆಲಸ, ಆತ್ಮೀಯಕಾರ್ಯ, ಹೆಣೆಯುವಿಕೆ, ಕೈಹೆಣಿಕೆ.

**हातखंडा** (ಹಾತಖಂಡಾ) ಪು. ಭರವಸೆಯ, ನಂಬಿಗೆಯ, ದೃಢವಾದ, ನಿಶ್ಚಿತ, ವಿಶ್ವಾಸಪಾತ್ರವಾದ. ೨. ಕುಶಲತೆ.

**हातगुंडा** (ಹಾತಗುಂಡಾ) ಪು. ಕೈಕಲ್ಲಿನಳತೆ, ಕೈಹೆಂಡೆಯಳತೆ. (ಅಂತರತೋರಿಸುವ)

**हातगुण** (ಹಾತ್‌ಗುಣ) ಪು. ದೈವ, ಸುದೈವ, ಕೈಗೆಲುವು.

**हातघाई** (ಹಾತ್‌ಘಾಈ) ಸ್ತ್ರೀ. ಅತಿಅವಸರದ, ವ್ಯರ್ಥ ಗಡಿಬಿಡಿ, ಪ್ರತ್ಯಕ್ಷ ಬಡೆದಾಟ.

**हातघाईस (–वर) येणे** (ಹಾತ್‌ಘಾಈಸ್ (–ವರ್) ಯೇಣೇ) ಕ್ರಿ. ಅ. ಗುದ್ದಾಟಕ್ಕೆಬರು, ಹೊಡೆದಾಟಕ್ಕೆನಿಲ್ಲು.

**हातचलाखी** (ಹಾತ್‌ಚಲಾಖೀ) ಸ್ತ್ರೀ. ಕೈಚಳಕ, ಮಾಟಗಾರಿಕೆ, ಜಾದೂಗಾರಿಕೆ.

**हातचाळा** (ಹಾತ್‌ಚಾಳಾ) ಪು. ಚಡಪಡಿಕೆ, ಒದ್ದಾಡುವಿಕೆ, ಅಸ್ವಸ್ಥತೆ, ಚಡಪಡಿಸುವಿಕೆ, ಒದ್ದಾಟ, ಗೋಳಾಟ.

**हातचे हाती-हातच्या हाती** (ಹಾತಚೇಹಾತೀ-ಹಾತಚ್ಯಾ ಹಾತೀ) ಕ್ರಿ. ವಿ. ಆಗಿಂದಾಗ್ಗೆ, ಒಳ್ಳೆಯದಾಗಿ.

**हातचोखणे** (ಹಾತ್‌ಚೋಖಣೇ) ಕ್ರಿ. ಅ. ಕೈಸೀಪು, ಕೈಚೀಪು. (ವಸ್ತುವಾಚಕ)

**हातझाडणी** (ಹಾತ್‌ಝಾಡಣೀ) ಸ್ತ್ರೀ. ಕೈಝಾಡಿಸುವಿಕೆ, ಅಸ್ವೀಕಾರ, ಚೆಲ್ಲುವಿಕೆ, ಇಲ್ಲೆನ್ನುವಿಕೆ, ಒಲ್ಲೆನ್ನುವಿಕೆ.

**हातझोंबी** (ಹಾತ್‌ಝೋಂಬೀ) ಸ್ತ್ರೀ. ಕೈನುಗ್ಗಾಟ, ಕೈಯಿಂದ ನೂಕುವಿಕೆ, ಹಿಂದೂಡುವಿಕೆ.

**हातणी–नी** (ಹಾತಣೀ–ನೀ) ಸ್ತ್ರೀ. ಕುದುರೆ ಖರಾರೆಯಚೀಲ, ಖರಾರೆಯ ಕೈಚೀಲ, ಖರಾರೆಯ ಮೇಲುಚೀಲ, ಕಲ್ಲುಕಟ್ಟಡ. (ಯಂತ್ರವನ್ನಿಡುವ) ಕಟ್ಟಡ.

**हातनळा** (ಹಾತ್‌ನಳಾ) ಪು. ಬಾಣಬಿರುಸು, ತಾರಾಮಂಡಲಾದಿ ಬಾಣಗಳು, ಮೋಜಿನಮದ್ದು, ಪಟಾಕಿ, ಪಟಾಸು ಸುಡುನಳಿ. ೨. ಚುಚ್ಚುಮಾತು, ಬಿರುಸುನುಡಿ.

**हातपाटीलकी** (ಹಾತ್‌ಪಾಟೀಲಕೀ) ಸ್ತ್ರೀ. ಕೈಗಾಡಿಕೆ, ಕೈಹೊಡೆತ, ಮಾತಿನಬದಲು ಕೊಡುವಹೊಡೆತ, ಬಡೆದಾಟದ ಜಾಣತನ, ಕಳ್ಳತನ, ಕೈಚಳಕ ತೋರಿಸುವಿಕೆ.

**हातपाणी** (ಹಾತ್‌ಪಾಣೀ) ಸ್ತ್ರೀ. ವೈವಾಹಿಕ ವಿಧಿ, ಲಗ್ನಕಾರ್ಯದಲ್ಲಿ ವಿಧಿ.

**हातबेडी** (ಹಾತ್‌ಬೇಡೀ) ಸ್ತ್ರೀ. ಕೈಬೇಡಿ, ಕೈಸಂಕೋಲೆ, ಕೈಕೊಳ.

**हातभट्टी** (ಹಾತ್‌ಭಟ್ಟೀ) ಸ್ತ್ರೀ. ಕೈಬಟ್ಟಿ, ಅಕ್ರಮ ಸರಾಯಿ ತಯಾರಿಸುವ ಭಟ್ಟಿ.

**हातभाता** (ಹಾತ್‌ಭಾತಾ) ಪು. ಕೈತಿದಿ, ಕೈಚರ್ಮ ತಿದಿ, ಕೈಯಿಂದ ಜಗ್ಗುವ ತಿದಿ.

**हातभार** (ಹಾತ್‌ಭಾರ್) ಪು. ಕೈನೆರವು, ಧನ ಸಹಾಯ, ವಿಶೇಷ ಹಣದ ಸಹಾಯ, ಘನವಾದ ಸಹಾಯ, ವಾಸ್ತವಿಕಸಹಾಯ.

**हातर** (ಹಾತರ್) ಪು. ಗಳದ ದೊಡ್ಡತಟ್ಟೆ, ಹಾಸು ತಟ್ಟೆ.

**हातरणे** (ಹಾತರಣೇ) ಕ್ರಿ. ಸ. ಹಾಸು. "**अंथरणें**" ನೋ.

**हातरणी** (ಹಾತರಣೀ) ಕ್ರಿ. ಸ. "**अंथरणी**" ನೋ.

**हातरूण** (ಹಾತರೂಣ್) ನ. ಸ. ಹಾಸಿಗೆ. '**अंथरूण**' ನೋ.

**हातरवी** (ಹಾತರವೀ) ಸ್ತ್ರೀ. ಕೈಕಡಗೋಲು.

**हातरहाट** (ಹಾತ್‌ರಹಾಟ್) ಪು. ಕೈರಾಟೆ. (ನೀರಿನ)

**हातरुमाल** (ಹಾತ್‌ರುಮಾಲ್) ಕೈವಸ್ತ್ರ, ಕರವಸ್ತ್ರ, ಮೊಗಬಟ್ಟೆ.

**हातलाग** (ಹಾತ್‌ಲಾಗ್) ಪು. ಕೈನಿಲುಕುವಿಕೆ, ಕೈಮುಟ್ಟುವಿಕೆ, ಕೈತಾಗುವಿಕೆ.

**हात लागीं येणे** (ಹಾತ್ ಲಾಗೀ ಯೇಣೇ) ಕ್ರಿ. ಅ. ಕೈಗೆಬರು, ವಯಸ್ಸಿಗೆಬರು, ಅಳುವಿನಲ್ಲಿಬರು, ಆಟೋಪಿನಲ್ಲಿಬರು.

**हातलाव्या** (ಹಾತ್‌ಲಾವ್ಯಾ) ಪು. ಕಳ್ಳ, ಚಿಕ್ಕ ಒಡವೆ ಗಳ ಸದಾಕಳ್ಳ.

**हातवटी** (ಹಾತವಟೀ) ಸ್ತ್ರೀ. ಹಸ್ತನೈಪುಣ್ಯ, ಪದ್ಧತಿ, ಕೈಕೌಶಲ್ಯ, ಹಸ್ತಕೌಶಲ್ಯ, ಕೈಚಳಕ, ಶೈಲಿ. ೨. ಹತೋಟಿ. **हतोटी** ನೋ.

**हातवडा** (ಹಾತವಡಾ) ಪು. ದೊಡ್ಡಸುತ್ತಿಗೆ. "**हातोडा**" ನೋ.

**हातवडी** (ಹಾತವಡೀ) ಸ್ತ್ರೀ. ಕೈಸುತ್ತಿಗೆ, ಸಣ್ಣ ಸುತ್ತಿಗೆ.

**हातवळा** (ಹಾತವಳಾ) ಪು. "**हातवटी**" ನೋ.

**हातवा** (ಹಾತವಾ) ಪು. ವಿವಾಹದಲ್ಲಿ ಕುಂಕುಮ ಬೊಟ್ಟಿಡುವಿಕೆ, ಮಂಗಲಕುಂಕುಮಬೊಟ್ಟು, ಲಗ್ನ ವಿಧಿಕುಂಕುಮ.

**हातसर** (ಹಾತಸರ್) ಪು. ಸಂ. ಕೈಕಟ್ಟು, ಒಂದು ಆಭರಣ, ಹಸ್ತಾಲಂಕಾರ.

**हातळणे** (ಹಾತಳಣೇ) ಕ್ರಿ. ಸ. ಕೈತೋರಿಸು, ಬಡೆ, ನೂಕುನುಗ್ಗಾಟಮಾಡು, ನೂಕಾಡು.

**हातळी** (ಹಾತಳೀ) ಸ್ತ್ರೀ. "**हातणी**" ನೋ.

**हाताखालचा** (ಹಾತಾಖಾಲಾಚಾ) ವಿ. ಕೈಕೆಳಗಿನ, ಸಹಾಯಕ, ಉಪಾಧಿಕಾರಿ, ಸೇವಕ, ಆಳು.

**हाताखालीं** (ಹಾತಾಖಾಲೀ) ಕ್ರಿ. ವಿ. ಕೈಕೆಳಗೆ ಸಹಾಯಕ್ಕಾಗಿ.

**हाताचा सढळ** (ಹಾತಾಚಾ ಸಢಳ್) ವಿ. ಕೈಸಡಿಲಿದ್ದ, ದೊಡ್ಡಮನಸ್ಸಿನ, ವಿಶಾಲಹೃದಯದ, ಕೊಡುಗೈಯ.

**हाताचा कुशळ** (ಹಾತಾಚಾ ಕುಶಳ್) ವಿ. ನಿಪುಣ, ತಜ್ಞ, ಕೈಕೆಲಸದಲ್ಲಿ ಜಾಣನಾದ, ಜಾಣ, ಚುರುಕು, ಚತುರ.

**हाताचा जड** (ಹಾತಾಚಾ ಜಡ್) ವಿ. ಜಿಪುಣ, ಜೀನ, ಕೈಜಡವಿದ್ದ, ಕೈಬರೆಹ ಜಡವಿದ್ದ, ಜಡಗೈಯ.

**हाताचा जलद** (ಹಾತಾಚಾ ಜಲದ್) ವಿ. ಶೀಘ್ರ ಲಿಪಿ ಗಾರ, ಕೈಚುರುಕಾದ, ಬೇಗ ಬರೆಯುವ, ಉದಾರ.

**हाताचा थंड** (ಹಾತಾಚಾ ಥಂಡ) ವಿ. ಜೀನ, ಕೊಡ ಲೊಲ್ಲದ, ಮಂದ, ಜಡಗೈಯ.

**हाताचा बळकट** (ಹಾತಾಚಾ ಬಳಕಟ್) ವಿ. ಗಟ್ಟಿ ಮುಟ್ಟಿಗೆಯ, ಬಲಿಷ್ಠ ಮುಟ್ಟಿಗೆಯ.

**हाताजोगता** (ಹಾತಾಜೋಗತಾ) ವಿ. ಕೈಗೆ ಬರು ವಂತಹ, ಪ್ರಾಪ್ತವಾಗುವಂತಹ, ದೊರಕುವ, ಸಿಗುವ.

**हाताचा मोकळा** (ಹಾತಾಚಾ ಮೋಕಳಾ) ವಿ. ಉದಾರ.

**हाताची करंगळी** (ಹಾತಾಚೀ ಕರಂಗಳೀ) ಸ್ತ್ರೀ. ಕೈ ಕಿರಿ ಬೆರಳು, ಕೈಯ ಕಡೆಯ ಬೆರಳು.

**हाताची थट्टा** (ಹಾತಾಚೀ ಥಟ್ಟಾ) ಪ್ರತ್ಯಕ್ಷ ವಿನೋದ, ಕೈಚೇಷ್ಟೆ, ಮುಟ್ಟುಹರಿಸ.

**हाता निराळा, –वेगळा** (ಹಾತಾ ನಿರಾಳಾ,–ವೇಗಳಾ) ವಿ. ಕೈಮುಟ್ಟದ, ಕೈಹಚ್ಚದ, ಕೈಬಿಟ್ಟ, ೨. ಪೂರ್ಣ ವಾದ.

**हातावरचा संसार** (ಹಾತಾವರಚಾ ಸಂಸಾರ) ಪು. ಕೈಮೇಲಿನ ಬಾಳ್ವೆ, ಚಿಕ್ಕ ಸಂಸಾರ, ಗಳಿಕೆ ಬಳಿ ಕೆಯ ಸಮಸಂಸಾರ.

**हातासरसा** (ಹಾತಾಸರಸಾ) ವಿ. ಕೈನಿಲುಕಿದೊಡನೆ, ಆಗಿಂದಾಗ್ಗೆ.

**हाताळी,–ळे** (ಹಾತಾಳೀ) ನ. ಖರಾರಿಯ ಚೀಲ, ಕುದುರೆಯನ್ನು ತಿಕ್ಕುವ ಖರಾರಿ.

**हाताळू** (ಹಾತಾಳೂ) ವಿ. ಸಂ. ಕೈಕುಶಲನಾದ, ಹಸ್ತಕೌಶಲ್ಯವುಳ್ಳ, ಕರಕುಶಲತೆಯುಳ್ಳ.

**हातोटी** (ಹಾತೋಟೀ) ಸ್ತ್ರೀ. ಕೈಕುಶಲತೆ, ಹಸ್ತ ನೈಪುಣ್ಯ, ಕೈಚಳುಕತನ, ಹತೋಟಿ.

**हातोडा** (ಹಾತೋಡಾ) ಪು. ಸಂ. '**हातवडा**' ನೋ.

**हातोडी** (ಹಾತೋಡೀ) ಸ್ತ್ರೀ. "**हातवडी**" ನೋ.

**हातोपा** (ಹಾತೋಪಾ) ಪು. ಕೈತೋಳು, ಅಂಗಿಯ ತೋಳು.

**हातोहात, हातोपात** (ಹಾತೋಹಾತ್, ಹಾತೋಪಾತ್) ಕ್ರಿ. ವಿ. ಆಗಿಂದಾಗ್ಗೆ, ನೋಡನೋಡುತ್ತ, ಕೈ ಕೈಯಲ್ಲಿ.

**हातोफळी** (ಹಾತೋಫಳೀ) ಸ್ತ್ರೀ. ಕೈಬಡೆದಾಟ, ಗುದ್ದುವಿಕೆ.

**हातोळा** (ಹಾತೋಳಾ) ಪು. ಕೈಕೌಶಲ್ಯ, ಕೈಚಳಕ, ಹಸ್ತನೈಪುಣ್ಯ.

**हात्या** (ಹಾತ್ಯಾ) ಪು. ಪಾನಚಕ್ಕಿಯ ಹಿಡಿಕೆ, ಕೈಹಿಡಿಕೆ.

**हांदा** (ಹಾಂದಾ) ಪು. ರೈತರ ಪರಸ್ಪರ ಸಹಾಯ, ಕೂಡೊಕ್ಕಲುತನ, ಸಹಾಯಕ ಕೃಷಿ.

**हांतुळणे** (ಹಾತುಳಣೇ) ಕ್ರಿ.ಸ. **हांद(ड्र)ळणे** (ಹಾಂದ(ದು)ಳಣೇ) ಕ್ರಿ.ಅ. ಅಲುಗಾಡಿಸು, ಆಂದೋಲನ ಹೂಡು, ಜೋಲಿ ಹೊಡೆ, ತೂಗಿಕೊಳ್ಳು. ಜೀಕಿಕೊಳ್ಳು.

**हानी** (ಹಾನೀ) ಸ್ತ್ರೀ. ಸಂ. ನಷ್ಟ, ನಾಶ, ಹಾನಿ. ಕೇಡು, ವಿನಾಶ, ಅಪಕಾರ.

**हापटणे** (ಹಾಪಟಣೇ) ಕ್ರಿ.ಸ.ಕ. ಅಪ್ಪಳಿಸು, ಚೆಲ್ಲು, ಕೆಳಗೆಬೀಳು.

**हापा** (ಹಾಪಾ) ಪು. ತೇಗುವಿಕೆ, ಶ್ವಾಸಹತ್ತುವಿಕೆ.

**हाबकणे** (ಹಾಬಕಣೇ) ಕ್ರಿ. ಸ. ತಲ್ಲಣಗೊಳಿಸು, ಹೇವಪಡಿಸು, ಧಕ್ಕೆಗೊಡು, ತಟ್ಟನೆ ಕುಲುಕು.

**हाबका** (ಹಾಬಕಾ) ಪು. ತಲ್ಲಣ, ಹೇವ, ಧಕ್ಕೆ, ಚಪ್ಪರಿಕೆ.

**हांबरडा** (ಹಾಂಬರಡಾ) ಪು. ಕೂಗುವಿಕೆ, ಕೂಗು ೨. ದೈನ್ಯದ ಕರೆ, ದನದ ಕೂಗುವಿಕೆ, ಮೊರೆ ಇಡುವಿಕೆ.

**हांबारणें–हांबरणे** (ಹಾಂಬಾರಣೇ–ಹಾಂಬರಣೇ) ಕ್ರಿ. ವಿ. "**हंबरणे**" ನೋ.

**हाय** (ಹಾಯ್) ಸ್ತ್ರೀ. ಜೀವನ, ಜನ್ಮ, ದುಃಖೋದ್ಗಾರ.

**हाय खाणे–घेणे** (ಹಾಯ ಖಾಣೇ–ಘೇಣೇ) ಕ್ರಿ. ಅ. ಅಂಜು, ಧಕ್ಕೆಗೊಳ್ಳು, ಜೀವಕ್ಕೆ ಹತ್ತು, ಮನಸ್ಸಿಗೆ ಹತ್ತು.

**हाय घालणे** (ಹಾಯ್ ಘಾಲಣೇ) ಕ್ರಿ. ಅ. ದುಃಖಪಡು, ನಿಟ್ಟುಸಿರು ಬಿಡು, ಹಾಯ್ ಅನ್ನು, ಬೆನ್ನು ಹತ್ತು, ಇಚ್ಛಿಸು.

**हाय मोकलणे** (ಹಾಯ್ ಮೋಕಲಣೇ) ಕ್ರಿ. ಅ. ಅಪರಾಧ ಒಪ್ಪು, ದುಃಖವ್ಯಕ್ತಮಾಡು.

**हायास आणणे** (ಹಾಯಾಸ್ ಆಣಣೇ) ಕ್ರಿ.ಸ. ತಟ್ಟು ಹೊಡೆ, ಡಿಕ್ಕಿ ಹೊಡೆ, ಧಕ್ಕೆಗೊಡು.

**हाय(या)त** (ಹಾಯ(ಯಾ)ತ್) ಸ್ತ್ರೀ. ಅರ. ಜೀವಮಾನ, ಬದುಕಿಕೊಂಡಿರುವಿಕೆ, ಜೀವನ, ಜೀವಿತ. ೨. ವಿ. ಬದುಕಿ ಇದ್ದ.

**हायहाय** (ಹಾಯ್‌ಹಾಯ್) ಉದ್ಗಾರ. ದುಃಖ, ದುಃಖೋದ್ಗಾರ, ಪಶ್ಚಾತ್ತಾಪ.

**हायहुय** (ಹಾಯ್‌ಹುಯ್) ಸ್ತ್ರೀ. ಹೊಡೆತದಿಂದ ನೆರಳುವಿಕೆ, ಕರುಣೆಯ ನೆರಳುವಿಕೆ.

**हार** (ಹಾರ) ಪು. ಸಂ. ಮಾಲೆ, ಸರ, ಹಾರ, ಕಂಠಸರ, ಕೊರಳಮಾಲೆ, ಪಂಕ್ತಿ, ಸಾಲು. ೨. ಸ್ತ್ರೀ. ಪರಾಜಯ, ಅಪಜಯ, ಲೂಟಿ.

**हार घेणे, मानणे** (ಹಾರ ಘೇಣೇ, ಮಾನಣೇ) ಕ್ರಿ. ಅ. ಸೋಲನ್ನೊಪ್ಪು ಪರಾಜಯ ಒಪ್ಪು.

**हार जाणे–खाणे** (ಹಾರ ಜಾಣೇ–ಖಾಣೇ) ಕ್ರಿ. ಸ. ಸೋಲು, ಪರಾಜಯಹೊಂದು, ಶರಣಹೋಗು, ಮೊರೆಹೋಗು.

**हारी जाणे** (ಹಾರೀ ಜಾಣೇ) ಕ್ರಿ. ಸ. ಅಧೀನವಾಗು, ಅಧಿಕಾರದಲ್ಲಿ ಸಿಕ್ಕಿಬೀಳು, ವಶವಾಗು, ಒಳಗಾಗು, ಒಳಪಡು, ಸೋಲು, ಕುಸಿ.

**हारक,–हारी** (ಹಾರಕ್,–ಹಾರೀ) ವಿ. ಲೂಟಿಮಾಡುವವ, ನಾಶಮಾಡುವವ.

**हारजीत** (ಹಾರ್‌ಜೀತ್) ಸ್ತ್ರೀ. ಜಯಾಪಜಯ, ಸೋಲುಗೆಲುವು, ಲಾಭ–ನಷ್ಟ.

**हारणे** (ಹಾರಣೇ) ಕ್ರಿ. ಅ. ಸೋಲು, ಪರಾಜಯ ಹೊಂದು.

**हारपणे** (ಹಾರಪಣೇ) ಕ್ರಿ. ಸ. ಕಳೆ, ಹಾನಿಹೊಂದು.

**हारविणे** (ಹಾರವಿಣೇ) ಕ್ರಿ. ಸ. ಕಳೆದುಕೊ. "**हारविणे**" ನೋ.

**हारा** (ಹಾರಾ) ಪು. ದೊಡ್ಡ ಬುಟ್ಟಿ, ಝುಲ್ಲೆ, ಜಲ್ಲೆ, ಹೆಡಿಗೆ.

**हारेमोहरे, हारेमोहरेस** (ಹಾರೇಮೋಹರೇ, ಹಾರೇಮೋಹರೇಸ್) ಕ್ರಿ. ವಿ. ಒಂದೇ ಸಾಲಿನಲ್ಲಿ, ಉಪಸ್ಥಿತಿಯಲ್ಲಿ, ಹಾಜರಿಯಲ್ಲಿ ಪ್ರತ್ಯಕ್ಷವಾಗಿ, ಕಣ್ಮುಟ್ಟ.

**हारोहर** (ಹಾರೋಹರ್) ಕ್ರಿ. ವಿ. ಒಂದೇ ಸಾಲಿನಲ್ಲಿ, ಒಂದೇ ಪಂಕ್ತಿಯಲ್ಲಿ ಸ್ಥಳಬಿಡದೆ, ಅವಕಾಶವಿಲ್ಲದೆ.

हार्द (ಹಾರ್ದ) ನ. ಅರ್ಥ, ಅಭಿಪ್ರಾಯ, ಉದ್ದೇಶ, ತತ್ವ, ರಹಸ್ಯ, ಅವಕಾಶ, ಇಂಬು, ಗುರಿ, ತಾತ್ಪರ್ಯ, ಸಾರಾಂಶ, ಒಟ್ಟು ಮಾತು.

हार्य (ಹಾರ್ಯ) ವಿ. ಸಂ. ಅಪಹರಿಸತಕ್ಕ, ಶಕ್ಯ, ಕೈಕೊಡಲು ತಕ್ಕ.

हाल (ಹಾಲ) ಪು. ಅರ. ಕಷ್ಟ, ತಳಮಳಿಕೆ, ದುಃಖ ಸ್ಥಿತಿ, ಕೆಟ್ಟ ಪರಿಸ್ಥಿತಿ. ೨. ಕ್ರಿ. ವಿ. ಈಗ, ಸಧ್ಯಕ್ಕೆ.

हाल अपेष्टा (ಹಾಲ್ ಅಪೇಷ್ಟಾ) ಪು. ಬಹುವ. ಕೆಟ್ಟ ಪರಿಸ್ಥಿತಿ, ದುಃಖದ ಸ್ಥಿತಿ, ದಯನೀಯ ಸ್ಥಿತಿ, ಕರುಣಾಜನಕ ಸ್ಥಿತಿ, ಸ್ಥಿತಿಗತಿ.

हालकडी (ಹಾಲಕಡೀ) ಸ್ತ್ರೀ. ಜೋತಾಡುವ ಪದಕ, ಮುತ್ತಿನ ಆಭರಣ.

हालचाल (ಹಾಲ್‌ಚಾಲ್) ಸ್ತ್ರೀ. ಕೆಲಸ, ಚಟು ವಟಿಕೆ, ಚಳುವಳಿ, ಪ್ರಾರಂಭ, ಅಲುಗಾಡುವಿಕೆ, ಪ್ರಕ್ಷೋಭ.

हालणे (ಹಾಲಣೇ) ಕ್ರಿ. ಅ. ಅಲುಗಾಡು, ಚಟುವಟಿಕೆ ಗೊಳ್ಳು–ಮಾಡು, ಪ್ರಾರಂಭಿಸು, ಪ್ರಕ್ಷೋಭಿಸು.

हालबोंदरा–बोंद्रा (ಹಾಲ್‌ಬೋಂದರಾ–ಬೋಂದ್ರಾ) ವಿ. ಹೊಲಸು, ರೊಜ್ಜು, ಓರಣವಿಲ್ಲದ, ಶೋಭೆ ಯಿಲ್ಲದ, ಅವ್ಯವಸ್ಥಿತ, ಹರಕು, ಹರಕುಮುರು ಕಾದ, ಚಿಂದಿಯನ್ನುಟ್ಟ. ೨. ಪು. ತರಕಲು, ಕೊರಕಲು.

हालमस्त (ಹಾಲ್‌ಮಸ್ತ್) ವಿ. ಅರ. ಸಂಕಟದಲ್ಲಿಯೂ ಸಂತುಷ್ಟನಾದ, ದುಃಖಾನಂದಿ, ದುಃಖದಲ್ಲಿಯೂ ಆನಂದಿತನಾದ.

हालविणे (ಹಾಲವಿಣೇ) ಕ್ರಿ. ಸ. ಅಲುಗಾಡಿಸು, ಅಗಳಾಡಿಸು, ಪ್ರಕ್ಷೋಭಿಸು. ೨. ಎಬ್ಬಿಸು. ೩. ಎತ್ತಿ ಬೇರೆ ಕಡೆಗೆ ಇಡು.

मुक्काम– (ಮುಕ್ಕಾಮ್–) ಗಂಟುಕಟ್ಟು, ಹೊರಟು ಹೋಗು.

हालहवाल (ಹಾಲ್‌ಹವಾಲ್) ಪು. ಸಮಾಚಾರ.

हालहूल (ಹಾಲ್‌ಹೂಲ್) ಸ್ತ್ರೀ. ಗೊಂದಲ, ಪ್ರಕ್ಷೋಭ, ಗುಲ್ಲು, ಕಲಹ, ಬಡಿದಾಟ, ಗದ್ದಲ, ಗಾಜ, ಗಲಾಟೆ, ಗುಬಾಡು, ಕೂಗಾಟ, ಒದರಾಟ, ಚಿಲ್ಲಾಟ, ಚೀರಾಟ, ಗಾಬರಿ.

हालाहल (ಹಾಲಾಹಲ್) ನ. ನ. ಹಾಲಾಹಲ, ವಿಷ, ಹಾಲಾಹಲ ವಿಷ.

हाली–ल्लीं (ಹಾಲೀ–ಲ್ಲೀ) ಕ್ರಿ. ವಿ. ಈಗ, ಸಧ್ಯಕ್ಕೆ, ಸಧ್ಯಸ್ಥಿತಿಯಲ್ಲಿ.

हालीमाजी (ಹಾಲೀಮಾಜೀ) ವಿ. ಅರ. ಹಸ್ತಾಂತರ (ರಾಜ್ಯಭಾರದಲ್ಲಿ), ಅಧಿಕಾರ ಪರಿವರ್ತನ.

हालोहाल (ಹಾಲೋಹಾಲ್) ಕ್ರಿ. ವಿ. ಸಧ್ಯಕ್ಕೆ, ಈಗಿಂದೀಗ, ತತ್‌ಕ್ಷಣ.

हाव (ಹಾವ್) ಪು. ಸಂ. ಸೀಮಾತು, ಮಧುರ ಭಾಷಣ, ಲಾಲನೆ, ಮರುಳುಮಾಡುವಿಕೆ, ನೋಟ ಬೇಟೆ.

हाव (ಹಾವ್) ಸ್ತ್ರೀ. ಆಸೆ, ಅಭಿಲಾಷೆ.

हाव घालणे (ಹಾವ್ ಘಾಲಣೇ) ಕ್ರಿ. ಸ. ಅತ್ಯಾಸೆ ಪಡು, ಮಹತ್ವಾಕಾಂಕ್ಷಿಯಾಗು.

हाव करणे–धरणे (ಹಾವ್‌ಕರಣೇ–ಧರಣೇ) ಕ್ರಿ. ಸ. ಪ್ರಾಪ್ತಿಯ ಲವಲವಿಕೆಯಾಗು, ಉಂಟಾಗು, ಆಶಾ ಬದ್ಧನಾಗು.

हावभरी (ಹಾವಭರೀ) ವಿ. ಅತ್ಯಾಸೆಯುಳ್ಳ, ಅತ್ಯಾಸೆ ತುಂಬಿದ.

हावभाव (ಹಾವಭಾವ್) ಪು. ನಟನೆ, ಅಭಿನಯ, ಭಾವನೆ ವ್ಯಕ್ತಮಾಡುವಿಕೆ, ಹಾವಭಾವ ತೋರಿ ಸುವಿಕೆ, ಕೈಸನ್ನೆ, ಕೈಸನ್ನೆಮಾಡುವಿಕೆ, ನಟಿ ಸುವಿಕೆ.

–करणे (–ಕರಣೇ) ಕ್ರಿ. ಸ. ನಟಿಸು.

हावर (ಹಾವರ್) ಪು. } "हाव" ನೋ.
हावरे (ಹಾವರೇ) ನ. }

हावरा (ಹಾವರಾ) ವಿ. ಸಂ. ಕೃಪಣ, ಕವಡಿ ಚುಂಬಕ, ಹೊಟ್ಟೆಬಾಕ, ಆಸೆಬುರುಕ, ಜಿಪುಣ, ತಾಳ್ಮೆಯಿಲ್ಲದ, ದುಡುಕುವ, ಆತುರ.

हाशा (ಹಾಶಾ) ಪು. ಅರ. (ಹಾಶಿಯಾ) ವಸ್ತ್ರದ ಅಂಚು, ಸೆರಗು, ಅಂಚು, ಲಾಭ.

हासडणे (ಹಾಸಡಣೇ) ಕ್ರಿ. ಸ. ಕೀರು, ಕಸಹೊರ ತೆಗೆ, "हसडणे" ನೋ. ಹೊಡೆ.

हासडा (ಹಾಸಡಾ) ಪು. ನಗೆಗಾರ.

हासणे (ಹಾಸಣೇ) ಕ್ರಿ. ಅ. ನಗು, ಆನಂದಪಡು "हसणें" ನೋ.

हासू (ಹಾಸೂ) ನ. "हसू" ನೋ.

हासें (ಹಾಸೇ) ನ. "हसे" ನೋ.

हास्य (ಹಾಸ್ಯ) ನ. ಸಂ. ವಿನೋದ, ಚೇಷ್ಟೆ, ನಗು ವಿಕೆ, ನಗೆ, ನಗು.

हास्यमुख–वदन (ಹಾಸ್ಯಮುಖ–ವದನ್) ವಿ. ನಗು ಮೋರೆಯ, ಆನಂದವದನದ.

**हास्यरस** (ಹಾಸ್ಯರಸ) ಹಾಸ್ಯರಸ, ಸಾಹಿತ್ಯದಲ್ಲಿಯ ಒಂದು ರಸ, ನವರಸಗಳಲ್ಲಿ ಒಂದು.

**हास्यरस प्रधान** (ಹಾಸ್ಯರಸ ಪ್ರಧಾನ) ವಿ. ಹಾಸ್ಯರಸ ಪ್ರಮುಖವಾದ, ಹಾಸ್ಯರಸವುಳ್ಳ.

**हास्यास्पद** (ಹಾಸ್ಯಾಸ್ಪದ) ವಿ. ಸಂ. ನಗೆಬರುವ, ಹಾಸ್ಯಾಸ್ಪದ.

**हां हां** (ಹಾಂ! ಹಾಂ!) ಉದ್ಗಾರ. ದುಃಖೋದ್ಗಾರ.

**हा हा** (ಹಾ! ಹಾ!) ಉದ್ಗಾರ. ಆನಂದೋದ್ಗಾರ.

**हाहाकार** (ಹಾಹಾಕಾರ್) ಪು. ಎದೆಬಡಕೊಳ್ಳುವಿಕೆ, ಕಷ್ಟಪಡುವಿಕೆ.

**हाहा म्हणता** (ಹಾಹಾ ಮ್ಹಣತಾ) ಕ್ರಿ. ವಿ. ಆಡುತ್ತಾಡುತ್ತ, ನೋಡನೋಡುತ್ತ, ಹಾ, ಹಾ ಅನ್ನುವಷ್ಟರಲ್ಲಿ.

**हाहू** (ಹಾಹೂ) ಸ್ತ್ರೀ. ನರಳುವಿಕೆ, ಕುತ್ತರಿಸುವಿಕೆ, ಕುತ್ತುಬಿಡುವಿಕೆ, ಮುಲುಗುವಿಕೆ.

**हाळ** (ಹಾಳ್) ಸ್ತ್ರೀ. ಬಾನಿ. ೨. ಪು. ದನದ ನೀರಿನ ಪಾತ್ರೆ, ಮುಸುರೆ ಪಾತ್ರೆ, ದೊಡ್ಡಬುಟ್ಟಿ. ೩. ಪು. ಕ. ಹಾಳು, ನಾಶ.

**करणें** (–ಕರಣೇ) ಕ್ರಿ. ಸ. ಹಾಳುಮಾಡು.

**हिकडचा, हिकडला, हिकडली** (ಹಿಕಡಚಾ, ಹಿಕಡಲಾ, ಹಿಕಡಲೀ) ವಿ. '**इकडचा**' ನೋ.

**हिकडला, –डील** (ಹಿಕಡಲಾ–ಡೀಲ್) '**इकडला, इकडली**' ನೋ.

**हिकडून** (ಹಿಕಡೂನ್) ಕ್ರಿ. ವಿ. '**इकडून**' ನೋ.

**हिकडे** (ಹಿಕಡೇ) ಕ್ರಿ. ವಿ. '**इकडे**' ನೋ.

**हिकमत** (ಹಿಕಮತ್) ಸ್ತ್ರೀ. ಅರ. ಯುಕ್ತಿ, ಕೌಶಲ್ಯ, ಗೂಢ, ಕೈಚಲಾಕೆ, ಯುಕ್ತಿಪ್ರಯುಕ್ತಿ, ಜಾದೂಗಾರಿಕೆ.

**हिकमत्या, हिकमती** (ಹಿಕಮತ್ಯಾ, ಹಿಕಮತೀ) ಪು. ಯುಕ್ತಿವಂತ, ಕೈಚಳಕದವ.

**हिंग** (ಹಿಂಗ) ಪು. ಇಂಗು.

**हिंगडा** (ಹಿಂಗಡಾ) ಪು. ಸುಮಾರು ಇಂಗು.

**हिंगरूड, हिंगरडू–हिंगुरडें** (ಹಿಂಗರೂಡ್, ಹಿಂಗರಡೂ-ಹಿಂಗುರಡೇ) ನ. ಗುಳ್ಳೆ, ಹಿಂಗಿನಗುಳ್ಳೆ, ಹಿಂಗಿನ ಪರಿಣಾಮದಿಂದ ಎದ್ದಗುಳ್ಳೆ.

**हिंग लावणे** (ಹಿಂಗ ಲಾವಣೇ) ಕ್ರಿ. ಸ. ಕೈಕೊಡು, ಮೋಸಮಾಡು, ಆಸೆತೋರಿಸು, ತನ್ನವನಂತೆ ತೋರಿಸು.

**हिंगवणी** (ಹಿಂಗವಣೀ) ಸ್ತ್ರೀ. ಇಂಗಿನ ನೀರು, ಇಂಗು ಕಲೆಸಿದ ನೀರು.

**हिंगाचा खडा** (ಹಿಂಗಾಚಾ ಖಡಾ) ಪು. ಇಂಗಿನ ಹರಳು. ೨. ಕೆಟ್ಟ ಮನುಷ್ಯ.

**हिंगाचा वास** (ಹಿಂಗಾಚಾ ವಾಸ್) ಪು. ಇಂಗಿನ ವಾಸನೆ. ೨. ನಿರ್ಧನಿಕನ ಆಡಂಬರ.

**हिंगाष्टक** (ಹಿಂಗಾಷ್ಟಕ) ನ. ಸಂ. ಇಂಗು ಹಾಕಿದ ಪಾಚಕ ಔಷಧಿ.

**हिंगूळ, हिंगोळ** (ಹಿಂಗೂಳ–ಹಿಂಗೋಳ್) ಪು. ಇಂಗಳೀಕ, ಕಡುಗೆಂಪು ಬಣ್ಣ.

**हिंचुटा** (ಹಿಂಚುಟಾ) ವಿ. ಜೀನ, ಲೋಭಿ, ಕೃಪಣ.

**हिजडा** (ಹಿಜಡಾ) ಪು. ಹಿಂ. ಹೆಂಗಸಿನ ಸ್ವಭಾವದವ, ನಪುಂಸಕ. ೨. ಕೈಲಾಗದವ, ಹೇಡಿ.

**हिजडी** (ಹಿಜಡೀ) ಸ್ತ್ರೀ. ಉಭಯಲಿಂಗಿ ಸ್ತ್ರೀ, ಗಂಡುಬೀರಿ, ಗಯ್ಯಾಳಿ.

**हिजरा–री** (ಹಿಜರಾ–ರೀ) ವಿ. ಅರ. ಹಿಜರೀಶಕ, ಇಸ್ಲಾಮೀಧರ್ಮಶಕ.

**हिजरी साल** (ಹಿಜರೀ ಸಾಲ್) ನ. ಹಿಜರೀ ವರ್ಷ.

**हिडगा** (ಹಿಡಗಾ) ವಿ. ಸಂ. ಚಪಲಚಿತ್ತದ, ಚಂಚಲ ಮನಸ್ಸಿನ, ಗಳಿಗೊಂದುಬುದ್ಧಿಯ, ಸಡಿಲ, ಸಿಥಿಲ, ಅಸ್ಪಷ್ಟ, ಕಾಡಮನುಷ್ಯ.

**हिंडणे** (ಹಿಂಡಣೇ) ಕ್ರಿ. ಅ. ತಿರುಗಾಡು, ಅಡ್ಡಾಡು, ಸಂಚರಿಸು, ತಿರುಗು, ದಾರಿತಪ್ಪಿಹೋಗು, ಬಡಬಡಿಸು, ಅಲೆದಾಡು, ಭ್ರಮಿಸು, ತೊಳಲು.

**हिंडन** (ಹಿಂಡನ್) ನ. ತಿರುಗಾಡುವಿಕೆ, ಅಡ್ಡಾಡುವಿಕೆ, ಸಂಚಾರ, ತಿರುಗಾಟ, ಬಡಬಡಿಸುವಿಕೆ, ತೊಳಲಾಟ.

**हिडशा–शी–सी** (ಹಿಡಶಾ–ಶೀ–ಸೀ) ವಿ. ಹೊಲಸಾದ, ಅಶುದ್ಧ, ಅನ್ಯಾಯದ, ಅಶ್ಲೀಲದ.

**हिडसणे** (ಹಿಡಸಣೇ) ಕ್ರಿ. ಸಂ. ತಿರಸ್ಕರಿಸು, ಅಣಿಕಿಸು, ಹಂಗಿಸು.

**हिडसावणे** (ಹಿಡಸಾವಣೇ) ಕ್ರಿ. ಸ. ತಿರಸ್ಕರಿಸು, ಅಣಕಿಸು, ಅವಮಾನಿಸು, ಹಾರಿಸಿಬಗೆ.

**हिडीस, हिडूस** (ಹಿಡೀಸ್, ಹಿಡೂಸ್) ವಿ. ಹೊಲಸಾದ, ಅಶ್ಲೀಲ, ಅಸ್ವಚ್ಛ, ತುಚ್ಛ, ಕೊಳೆಯಾದ.

**हिणगे** (ಹಿಣಗೇ) ನ. ಕ. ಕಣಜ, ಕಾಳಿನಕಣಜ, ದೊಡ್ಡಹೆಡಿಗೆ.

**हिणवणी, हिणावणी** (ಹಿಣವಣೀ, ಹಿಣಾವಣೀ) ಸ್ತ್ರೀ. ಅವಮಾನಿಸುವಿಕೆ, ಕೀಳೆಣಿಸುವಿಕೆ, ಅಣಕಿಸುವಿಕೆ, ಹಂಗಿಸುವಿಕೆ.

**हिणविणें–हिणावणे** (ಹಿಣವಿಣೇ) (ಹಿಣಾವಣೇ) ಕ್ರಿ. ಸ. ಅವಮಾನಿಸು, ಕೀಳೆಣಿಸು, ಅಣಕಿಸು.

**हित** (ಹಿತ) ನ. ಸಂ. ಹಿತ, ಕಲ್ಯಾಣ, ಪ್ರಯೋಜನ, ಸೌಕರ್ಯ, ಮೇಲ್ಮೆ–ಲಾಭ, ಲಾಭಕಾರಕ, ಯೋಗ್ಯ, ಕಲ್ಯಾಣಕರ.

**हित शोधणे** (ಹಿತ ಶೋಧಣೇ) ಕ್ರಿ. ಸಂ. ಕಲ್ಯಾಣ ಚಿಂತಿಸು, ಕಲ್ಯಾಣಶೋಧಿಸು, ಲಾಭದೊರಕಿಸು.

**हितगुज** (ಹಿತಗುಜ್) ನ. ಗುಪ್ತಮಾತು, ಯೋಗ್ಯ ಸಲ್ಲೆ, ಕಲ್ಯಾಣಕಾರಕ ಉಪದೇಶ.

**हितबुद्धि** (ಹಿತಬುದ್ಧಿ) ಸ್ತ್ರೀ. ಸಂ. ಆಶೀರ್ವಾದ, ಕಲ್ಯಾಣ ಇಚ್ಛಿಸುವ ಬುದ್ಧಿ.

**हितवादी** (ಹಿತವಾದೀ) ಪು. ಸಂ. ಕಲ್ಯಾಣಕರ, ಕಲ್ಯಾಣಬಯಸುವವ, ಕಲ್ಯಾಣ ಮಾರ್ಗ ತೋರಿಸುವವ.

**हितशत्रु** (ಹಿತಶತ್ರೂ) ಪು. ಸಂ. ಹಿತಶತ್ರು, ಕಲ್ಯಾಣ ಶತ್ರು. ಮೇಲ್ಮೆಗೆ ಅಡ್ಡ ಬರುವವ.

**हितान्वेषी** (ಹಿತಾನ್ವೇಷೀ) ವಿ. ಸಂ. ಹಿತಶೋಧಕ, ಹಿತ ಬಯಸುವವ.

**हितैषी** (ಹಿತೈಷೀ) ಪು. ಸಂ. ಹಿತಚಿಂತಕ, ಕಲ್ಯಾಣೇಚ್ಛು, ಹಿತದ ಇಚ್ಛೆ ಮಾಡುವ.

**हितोपदेश** (ಹಿತೋಪದೇಶ) ಪು. ಸಂ. ಒಳ್ಳೆಯ ಮಾರ್ಗದರ್ಶನ, ಕಲ್ಯಾಣಮಾರ್ಗ, ಹಿತೋಪದೇಶ, ನೀತಿಮಾರ್ಗ,

**हिंदळणे** (ಹಿಂದಳಣೇ) ಕ್ರಿ. ಸ. ಸ್ವಲ್ಪ ಅಲುಗಿಸು, ಸ್ವಲ್ಪಸ್ವಲ್ಪಾಗಿ ಅಲುಗಾಡಿಸು, ಆದರಿಸು, ಆದರು, ಪುಟ, ಕುಲುಕು, ತೂಗು.

**हिदहिदणे** (ಹಿದಹಿದಣೇ) ಕ್ರಿ. ಸಂ. ಮೆತ್ತಗಾಗು, ಜೋಲುಬೀಳು, ಮುದ್ದಿಯಾಗು, ಸಡಿಲಾಗು. ೨. ಕ್ರಿ. ಅ. ತೂಗಾಡು.

**हिंदुस्थान** (ಹಿಂದುಸ್ಥಾನ) ಪು. ಉತ್ತರ ಹಿಂದುಸ್ಥಾನ, ಭಾರತ, ಹಿಂದುಸ್ಥಾನ, ಭಾರತಮಾತೆ.

**हिंदुस्थानी** (ಹಿಂದುಸ್ಥಾನೀ) ವಿ. ಉತ್ತರ ಹಿಂದುಸ್ಥಾನದ, ಊರ್ದು ಭಾಷೆಯ, ಭಾರತ ವಿಷಯದ.

**हिंदु(दो)ळा** (ಹಿಂದು(ದೋ)ಳಾ) ಪು. ಜೋಕಾಲಿ, ಮಂಚದ ಜೋಕಾಲಿ, ತೊಟ್ಟಿಲು, ತೂಗಾಟ, ತೂಗಿಕೊಳ್ಳುವಿಕೆ.

**हिंदू** (ಹಿಂದೂ) ಪು. ಹಿಂದೂಧರ್ಮದ ವ್ಯಕ್ತಿ, ಸನಾತನ ಧರ್ಮವ್ಯಕ್ತಿ.

**हिपुटा–टी** (ಹಿಂಪುಟಾ–ಟೀ) ವಿ. ಮುಚ್ಚಿದ ಬಾಯಿಯ, ಕೆಟ್ಟಮೋರೆಯ, ಉದಾಸೀನ/ ಮಬ್ಬಾದ, ಖಿನ್ನ, ವಿಷಣ್ಣ.

**हिम** (ಹಿಮ) ನ. ಸಂ. ಹಿಮ, ಮಂಜು. ೨. ಪು. ಚಂದ್ರ, ಕರ್ಪುರ.

**हिमज्वर** (ಹಿಮಜ್ವರ) ಪು. ಸಂ. ಚಳಿಜ್ವರ, 'ಇನ್‌ಫ್ಲೂ ಎಂಜಾ' 'ನ್ಯೂಮೋನಿಯಾ'.

**हिमट, हिमटतोंडचा** (ಹಿಮಟ, ಹಿಮಟತೋಂಡ್ಯಾ) ವಿ. "हिपुटा" ನೋ.

**हिमटा** (ಹಿಮಟಾ) ವಿ. ಜಿಪುಣ, ಲೋಭಿ, ಕೃಪಣ.

**हिंमत** (ಹಿಂಮತ್) ಸ್ತ್ರೀ. ಅರ. ಧೈರ್ಯ, ದಿಟ್ಟತನ, ತೇಜಸ್ಸು, ಪ್ರತಿಜ್ಞೆ.

**हिंमतदार** (ಹಿಂಮತ್‌ದಾರ್) / **हिंमती** (ಹಿಂಮತೀ) ವಿ. ಅರ. ಧೈರ್ಯಶೀಲ, ಶೂರ, ತೇಜಸ್ವಿ.

**हिमतीचा** (ಹಿಂಮತೀಚಾ) ವಿ. "हिंमती" ನೋ.

**हिमवंत** (ಹಿಮವಂತ) ಪು. ಸಂ. ಹಿಮಾಲಯ, ಹಿಮಾಲಯ, ಪರ್ವತ.

**हिमवृत्त** (ಹಿಮವೃತ್ತ) ನ. ಸಂ. ಹಿಮರೇಷೆ, ಯಾವಾಗಲೂ ಹಿಮ ಬೀಳುವ ರೇಷೆ (ಗುರ್ತಿಸಿದ್ದು.)

**हिमळ** (ಹಿಮಳ್) ವಿ. ಸಂ. ನಿಸ್ಸಾರ, ಸಪ್ಪಗಿನ, ಸಪ್ಪೆಯಾದ, ರುಚಿಹೀನ, ನೀರಸಾದ, ಬೆಚ್ಚಗಿನ, ಮಂದೋಷ್ಣವಾದ, ಉಗುರುಬೆಚ್ಚಗಾದ, ಉದಾಸೀನ.

**हिमाचल** (ಹಿಮಾಚಲ) / **हिमालय** (ಹಿಮಾಲಯ) ಪು. ಹಿಮಾಚಲ, ಹಿಮಾಲಯ.

**हिमाईत** (ಹಿಮಾಇತ್) ಸ್ತ್ರೀ. ಸಂರಕ್ಷಣೆ, ಪುಷ್ಟಿ, ಆಶ್ರಯ, ಆಧಾರ, ಪಾಲನೆ.

**हिय्या** (ಹಿಯ್ಯಾ) ಪು. ಹಿಂ. ಕಳಕಳಿ, ಧೈರ್ಯ, ಧಾರಿಷ್ಟ್ಯ, ಎದೆ.

**हिरकणी** (ಹಿರಕಣೀ) ಸ್ತ್ರೀ. ವಜ್ರದಕಣ, ವಜ್ರದ ತುಂಡು.

**हिरडा** (ಹಿರಡಾ) ಪು. ಅಳಲೆಕಾಯಿ. ೨. ಒಸಡೆ.

**हिरडी** (ಹಿರಡೀ) ಸ್ತ್ರೀ. ಒಸಡೆ, ಹಲ್ಲಿನ ಮೇಲ್ಭಾಗದ ಸ್ನಾಯುಗಳು.

**हिरडीचे पिकणे** (ಹಿರಡೀಚೇ ಪಿಕಣೆ) ಕ್ರಿ. ಅ. ಒಸಡೆ ಬಾಯುವಿಕೆ.

**हिरणें** (ಹಿರಣೇ) ಕ್ರಿ. ಸಂ. ಕಸಿದುಕೊಳ್ಳು, ಜಗ್ಗಿಕೊ, ಒತ್ತಾಯದಿಂದ ತೆಗೆದುಕೊ.

**हिरण्मय** (ಹಿರಣ್ಮಯ) ವಿ. ಸಂ. ಬಂಗಾರದ, ಬಂಗಾರದಿಂದ ತುಂಬಿದ.

**हिरण्य** (ಹಿರಣ್ಯ) ನ. ಸಂ. ಬಂಗಾರ, ಸುವರ್ಣ, ಚಿನ್ನ.

**हिरमुशी** (ಹಿರಮುಶೀ) ವಿ. ನಿರುತ್ಸಾಹವುಳ್ಳ, ನಿರುತ್ಸಾಹಿ, ಮೋರೆ ಕಿವುಚಿದ, ಸ್ಫೂರ್ತಿಯಿಲ್ಲದ, ಗರ್ಭಗಲಿತ, ಧೈರ್ಯವಿಲ್ಲದ.

**हिरमुसणें** (ಹಿರಮುಸಣೇ) ಕ್ರಿ. ಅ. ನಿರುತ್ಸಾಹಿತನಾಗು, ಮೋರೆ ಕಿವುಚು, ಸ್ಫೂರ್ತಿಯಿಲ್ಲದಿರು, ಗರ್ಭಗಲಿತನಾಗು, ಧೈರ್ಯಬಿಡು.

**हिरमुस** (ಹಿರಮುಸ್) ಸ್ತ್ರೀ. "**हिरमुशी**" ನೋ.

**हिरमोड** (ಹಿರಮೋಡ್) ಪು. ನಿರಾಶೆ.

**हिरमोडी** (ಹಿರಮೋಡೀ) ವಿ. ನಿರಾಶೆಗೊಂಡ, ನಿರುತ್ಸಾಹಿತನಾದ, ಅಧೈರ್ಯದ.

**हिरवट** (ಹಿರವಟ್) ವಿ. ಹಸಿರುಬಣ್ಣದ, ಅಪಕ್ವವಾದ, ಸಿಟ್ಟಿನ ಸ್ವಭಾವದ, ಅವಿವೇಕಿಯಾದ, ತಿಳಿಗೇಡಿ, ಅವಿಚಾರಿ.

**हिरवळ** (ಹಿರವಳ್) ಸ್ತ್ರೀ. ಹಸಿರು ಅಂಕುರ. ಹಸಿರು ಹಲ್ಲು.

**हिरवा** (ಹಿರವಾ) ಹಸಿರು, ಹಸಿರಾದ, ಅಪಕ್ವ, ಜಗಳಗಂಟಿ.

**हिरवा भाजला खाणे** (ಹಿರವಾ ಭಾಜಲಾ ಖಾಣೇ) ಕ್ರಿ. ಸ. ಪೀಡಿಸು.

**हिरवा कचचा** (ಹಿರವಾ ಕಚ್ಚಾ) ವಿ. "**हिरवा**" ನೋ.

**हिरवागार** (ಹಿರವಾಗಾರ್) ವಿ. ಬಹಳ ಹಸಿರು.

**हिरवापिवळा** (ಹಿರವಾಪಿವಳಾ) ವಿ. ವಿವರ್ಣ, ಬಾಡಿದ, ಕಳೆಗುಂದಿದ.

**हिरवी जमीन** (ಹಿರವೀಜಮೀನ್) ಸ್ತ್ರೀ. ಸುಡದೆ ಬಿತ್ತಿದ ಭೂಮಿ.

**हिरवी तमाखु** (ಹಿರವೀ ತಮಾಖು) ಸ್ತ್ರೀ. ಗಾಂಜೆ.

**हिरवे** (ಹಿರವೇ) ನ. ಹಸಿರು ಸಸ್ಯ.

**हिरसा** (ಹಿರಸಾ) ವಿ. ಅರ. ಈರ್ಷ್ಯೆ, ಅಸೂಯೆಯುಳ್ಳ.

**हिरहिरी, –हिरीरी** (ಹಿರಹಿರೀ–ಹಿರೀರೀ) ಹುರುಪು, ಉತ್ಸಾಹ.

**हिरा** (ಹಿರಾ) ಪು. ಹಿಂ. ವಜ್ರ.

**हिराकस–शी** (ಹಿರಾಕಸ–ಶೀ) ಸ್ತ್ರೀ. ಹಸಿರು ತುತ್ಯ.

**हिरादिवा** (ಹಿರಾದಿವಾ) ವಿ. ದಡ್ಡ.

**हिरावणें** (ಹಿರಾವಣೇ) ಕ್ರಿ. ಸ ಅಪಹರಿಸು, ಎತ್ತಿಹಾಕು.

**हिलग(ड)णे** (ಹಿಲಗ(ಡ)ಣೇ) ಕ್ರಿ. ಅ. ವಿಜಿವಿಜಿ ಮಾಡು. ೨. ಜೋತಾಡು, ಹೊಯ್ದಾಡು.

**हिलाल** (ಹಿಲಾಲ್) ಪು. ಅರ. ಹಿಲಾಲ, ದೀವಟಿಗೆ.

**हिलाली–ल्या** (ಹಿಲಾಲೀ–ಲ್ಯಾ) ಪು. ದೀವಟಿಗೆಯವ. ಹಿಲಾಲು ಹಿಡಿಯುವವ.

**हिल्ला** (ಹಿಲ್ಲಾ) ಪು. ಅರ. ನೆಪ, ನೆವ, ನಟನೆ, ಆಡಂಬರ, ಉದರ ಸಾಧನ, ಬಾಳ್ವೆಯ ಸಾಧನ.

**हिल्ला हरकत** (ಹಿಲ್ಲಾ ಹರಕತ್) ಸ್ತ್ರೀ. ಅರ. ತಪ್ಪಿಸುವಿಕೆ, ನೆವಹೇಳುವಿಕೆ, ನೆವಮಾಡುವಿಕೆ.

**हिंव** (ಹಿಂವ್) ನ. ಚಳಿಗಾಲ, ಚಳಿ, ನಡುಗುಹತ್ತುವಿಕೆ, ಚಳಿಜ್ವರ.

**हिंवज्वर, हिंवताप** (ಹಿಂವಜ್ವರ, ಹಿಂವತಾಪ್) ಪು. ಚಳಿಜ್ವರ.

**हिंवसणे** (ಹಿಂವಸಣೇ) ಕ್ರಿ. ಅ. ಚಳಿಯಾಗು, ಚಳಿಜ್ವರ ಹತ್ತು, ನೆಗಡಿಯಾಗು.

**हिंवसा** (ಹಿಂವಸಾ) ವಿ. ಹಿವಜ್ವರದ, ಚಳಿಯ.

**हिवत जमीन** (ಹಿವತ್ ಜಮೀನ್) ಚಳಿಗಾಲದ ಸಾಗುವಳಿಮಾಡಿ ಬೇಸಿಗೆಯಲ್ಲಿ ಬಿತ್ತುವ ಭೂಮಿ, ಖುಶ್ಕಿ ಜಮೀನ.

**हिंवसाण** (ಹಿಂವಸಾಣ) ಸ್ತ್ರೀ. ತೇವಿನ ದುರ್ಗಂಧ.

**हिंवळणे** (ಹಿವಳಣೇ) ಕ್ರಿ. ಅ. ಗೋಳಾಡು, ಅಳು, ತೊಳಲಾಡು, ನೆರಳು, ಮುಳುಗು.

**हिवाळा** (ಹಿವಾಳಾ) ಪು. ಚಳಿಗಾಲ, ಶೀತಕಾಲ.

**हिशेब** (ಹಿಶೇಬ್) ಪು. ಅರ. ಲೆಕ್ಕ, ಅಂದಾಜ, ತಪಶೀಲು, ಗಮನ, ಲಕ್ಷ್ಯ.

**हिशेबी** (ಹಿಶೇಬೀ) ವಿ. ಅರ. ಲೆಕ್ಕದ, ಅಂದಾಜಿನ, ವಿವರಣೆಯುಳ್ಳ, ಗಮನಸೆಳೆಯುವ, ಲೆಕ್ಕದಲ್ಲಿ ಜಾಣ, ಕ್ರಮಬದ್ಧ, ವ್ಯವಸ್ಥೆಯ.

**हिशोब** (ಹಿಶೋಬ್) ಪು. ಅರ. '**हिशेब**' ನೋ.

**हिसकणे** (ಹಿಸಕಣೇ) ಕ್ರಿ. ಸ. ಗಟ್ಟನೆ ಎಳೆ, ತಿವಿ, ಹಿಚುಕು, ಜಗ್ಗಿಕೊಳ್ಳು, ತುಡಿ, ಕಿತ್ತುಕೋ.

**हिसका** (ಹಿಸಕಾ) ಪು. ಸೆಳೆತ, ತಿವಿಯುವಿಕೆ, ಜಗ್ಗುವಿಕೆ, ಕಿಸೆಕತ್ತರಿಸುವಿಕೆ, ಗಟ್ಟನೆ ಎಳೆತ.

**हिसकावणी** (ಹಿಸಕಾವಣೀ) ಸ್ತ್ರೀ. ಅಪಹರಿಸುವಿಕೆ, ಸೆಳೆದುಕೊಳ್ಳುವಿಕೆ.

